




ನೆಮ್ಮದಿಯ ನಾಳೆ ನಮ್ಮದು

# ಹೊಸತು

ವಿಶೇಷ ಸಂಚಿಕೆ

ಹೊಸ ವರ್ಷದ ಶುಭಾಶಯಗಳು

ಜನವರಿ ೨೦೦೮
ಬೆಲೆ : ರೂ. ೩೦



ಪ್ರೀತಿಪಾತ್ರರಿಗಾಗಿ ಬದಲಾಗುವುದು ಬಹು ಸುಲಭ
ಕೆನರಾ ಬ್ಯಾಂಕ್‌ನಲ್ಲಿ ನಾವು ಮಾಡುತ್ತಿರುವುದು ಅದನ್ನೇ.
ಅದು ಕೇವಲ ಹೊಸ ಗುರುತು ಹೊಂದುವುದಲ್ಲ, ಅದು ಬ್ಯಾಂಕ್
ವ್ಯವಹಾರಗಳನ್ನು ಸರಳವಾಗಿಸಲು ತಂತ್ರಜ್ಞಾನವನ್ನು ಬಳಸುವುದರಲ್ಲಿದೆ.

ನಮ್ಮ ಅಮೂಲ್ಯ ಗ್ರಾಹಕರಾದ ನಿಮ್ಮನ್ನು ಸಬಲಗೊಳಿಸುವುದರಲ್ಲಿದೆ.

# ನಿಮಗಾಗಿ ನಾವು ಬದಲಾಗುತ್ತಿದ್ದೇವೆ.

ನಮ್ಮ ಹೊಸ ಸೇವೆಗಳು, ವ್ಯವಹಾರಗಳ ವೇಗ ಮತ್ತು ಸುರಕ್ಷತೆ ನಿಮ್ಮ
ಜೀವನವನ್ನು ಅತ್ಯಂತ ಸರಳವಾಗಿಸುತ್ತದೆ. ಜೊತೆಗೆ ಪ್ರತಿ ದಿನವೂ ಅದು
ಉತ್ತಮಗೊಳ್ಳುತ್ತ ಸಾಗುತ್ತದೆ. ಕೆನರಾ ಬ್ಯಾಂಕ್‌ನಲ್ಲಿ ಈ ಬದಲಾವಣೆ ಅತ್ಯಂತ
ಪ್ರೀತಿಪಾತ್ರರಿಗಾಗಿ ಮಾತ್ರ – ಅದುವೇ ನೀವು.

ಕೆನರಾ ಬ್ಯಾಂಕ್
Canara Bank
ಒಟ್ಟಾಗಿ ಸಾಧಿಸೋಣ



www.canarabank.com

O&M 1625 KAN





# ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ೨೦೦೬



## ನವಕರ್ನಾಟಕ

ಪುಸ್ತಕಗಳ ಮೂಲಕ ಮನುಕುಲದ ಸೇವೆ



ಶ್ರೀ ಮಾಡಗಾನಹಟ್ಟಿ ದಾಸಪ್ಪ



ಶ್ರೀ ಆರ್. ಎಸ್. ರಾಜಾರಾಮ್

ಕನ್ನಡ ಪುಸ್ತಕ ಪ್ರಾಧಿಕಾರದ ೨೦೦೬ನೇ ಸಾಲಿನ 'ಅತ್ಯುತ್ತಮ ಪ್ರಕಾಶನ ಪ್ರಶಸ್ತಿ'ಯು ನವಕರ್ನಾಟಕ ಪ್ರಕಾಶನ ಸಂಸ್ಥೆಗೆ ಸಂದಿದ್ದು, ೧೯ ಡಿಸೆಂಬರ್ ೨೦೦೭ರಂದು ಬೆಂಗಳೂರಿನ ಕನ್ನಡ ಭವನದ ನಯನ ಸಭಾಂಗಣದಲ್ಲಿ ಪ್ರಶಸ್ತಿ ಪ್ರದಾನ ಸಮಾರಂಭ ನಡೆಯಿತು.

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದ ಕುಲಪತಿ ಪ್ರೊ|| ಬಿ. ಎ. ವಿವೇಕ ರೈ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ನವಕರ್ನಾಟಕ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಆರ್. ಎಸ್. ರಾಜಾರಾಮ್, ಜುಂಜಪ್ಪನ ಕಾವ್ಯಗಾಯಕ ಶ್ರೀ ಮಾಡಗಾನಹಟ್ಟಿ ದಾಸಪ್ಪನವರಿಂದ ಪ್ರಶಸ್ತಿ ಸ್ವೀಕರಿಸಿದರು. ಅದೇ ಸಮಾರಂಭದಲ್ಲಿ 'ಪುಸ್ತಕ ಸೊಗಸು' ಬಹುಮಾನಿತ ಲೇಖಕರು, ಪ್ರಕಾಶಕರು ಭಾಗವಹಿಸಿ ಪುರಸ್ಕಾರ ಸ್ವೀಕರಿಸಿದರು. ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ|| ಎಸ್. ಜಿ. ಸಿದ್ಧರಾಮಯ್ಯನವರು ಪ್ರಾಸ್ತಾವಿಕ ಮಾತುಗಳನ್ನಾಡಿದರು. ಪ್ರೊ|| ಲಿಂಗದೇವರು ಹಳೆಮನೆಯವರು ನವಕರ್ನಾಟಕ ಪ್ರಕಾಶನ ಕುರಿತು, ಪ್ರೊ|| ಎಂ. ಎ. ಜಯಚಂದ್ರ ಅವರು 'ಪುಸ್ತಕ ಸೊಗಸು' ಬಹುಮಾನಿತ ಕೃತಿಗಳ ಕುರಿತು ಮಾತನಾಡಿದರು.

ಹೆಚ್ಚಿನ ಸಂಖ್ಯೆಯ ಸಾಹಿತ್ಯಾಸಕ್ತರು ಭಾಗವಹಿಸಿದ್ದರು.

— ಕೆ. ಪಿ. ಎಸ್.








ಸಂಪುಟ-೯ ಸಂಚಿಕೆ-೬ ಜನವರಿ ೨೦೦೮

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@dataone.in**
**website : www.navakarnatakabooks.com**

# ಸಂಪಾದಕೀಯ

ಇದು 'ಹೊಸತು' ಮಾಸಪತ್ರಿಕೆಯ ಎಂಟನೆಯ ವಿಶೇಷ ಸಂಚಿಕೆ. ಒಂಭತ್ತು ವರ್ಷಗಳಿಂದ ನಮ್ಮ ಓದುಗರು, ಲೇಖಕರು ಮತ್ತು ಜಾಹಿರಾತುದಾರರು ಪತ್ರಿಕೆಯನ್ನು ಪೋಷಿಸಿಕೊಂಡು ಬರುತ್ತಿದ್ದಾರೆ. ಅವರಿಗೆಲ್ಲಾ ನಾವು ಕೃತಜ್ಞರು. ನವಕರ್ನಾಟಕ ಪ್ರಕಾಶನದ ಸಿಬ್ಬಂದಿ ಸ್ನೇಹಿತರ ಸಹಕಾರವನ್ನು ನೆನೆಯುವುದು ಸಹ ಒಂದು ಕರ್ತವ್ಯ. ಪತ್ರಿಕೆಯನ್ನು ಇನ್ನೂ ಉತ್ತಮಗೊಳಿಸಲು ೨೦೦೮ರಲ್ಲಿ ಸಹಕಾರ, ಸಲಹೆ, ಸೂಚನೆಗಳು ಹರಿದು ಬರಲೆಂದು, ಅಂತೆಯೇ ೨೦೦೮ ಪ್ರಗತಿದಾಯಕ ವರ್ಷವಾಗಲೆಂದು ಆಶಿಸುತ್ತೇವೆ.

'ಹೊಸತು' ಪತ್ರಿಕೆಯ ಧೋರಣೆಯು ವಿಶಾಲವಾದದ್ದೆಂದು ಓದುಗರು ಈ ವೇಳೆಗಾಗಲೆ ತಿಳಿದುಕೊಂಡಿದ್ದಾರೆ. ಪ್ರಜಾಪ್ರಭುತ್ವದ ನೀತಿ-ನಿಯಮಗಳು, ವೈಜ್ಞಾನಿಕ ಸಮಾಜವಾದಿ ಚಿಂತನೆ ಹಾಗೂ ಕ್ರಿಯೆ, ಮತಧರ್ಮಗಳ ಚೌಕಟ್ಟು ಸಾರ್ವಜನಿಕ ಜೀವನ ಮತ್ತು ಸಂಸ್ಥೆಗಳನ್ನು ಆವರಿಸದಂತೆ ವ್ಯವಸ್ಥೆಗೊಳಿಸುವುದು, ರಾಷ್ಟ್ರದ ಸ್ವಾವಲಂಬನೆಗಾಗಿ ಆರ್ಥಿಕ ನೀತಿಗಳ ನಿರೂಪಣೆ, ದೇಶದ ಸಾರ್ವಭೌಮತ್ವದ ರಕ್ಷಣೆ, ಅಂಚಿಗೆ ತಳ್ಳಲ್ಪಟ್ಟಿರುವವರನ್ನು ಸಮಾಜವು ಒಳಗೊಳ್ಳುವಂತೆ ಮಾಡುವುದು, ಮಹಿಳೆಯರಿಗೆ ಸಮಾನತೆ, ಸಾಂಸ್ಕೃತಿಕ ಸಾಮರಸ್ಯ ಮುಂತಾದ ಮೌಲ್ಯಗಳು 'ಹೊಸತು' ಪತ್ರಿಕೆಯ ಆಧಾರಸ್ತಂಭಗಳು. ಯಾವುದೇ ಒಂದು ಪಕ್ಷದ ಸಮರ್ಥನೆಯು ಪತ್ರಿಕೆಗೆ ಹೊರತಾದದ್ದು, ಆದರೆ ಸೈದ್ಧಾಂತಿಕ ನಿಲುವುಗಳ ಬಗ್ಗೆ ರಾಜಿ ಮಾಡಿಕೊಳ್ಳುವ ಪ್ರಮೇಯವಿಲ್ಲ. ಸಹಜವಾಗಿಯೇ ಪತ್ರಿಕೆಯ ಮುಕ್ತ ಧೋರಣೆಯನ್ನು ಸ್ವತಂತ್ರವಾಗಿ ಮಾಪನ ಮಾಡಬೇಕೆಂಬ ಆಗ್ರಹ ನಮ್ಮದು. ನಮ್ಮ ಓದುಗರು, ಲೇಖಕರು, ಸಂಪಾದಕರು ಮತ್ತು ಸಮಾಲೋಚಕ ಮಂಡಲಿಯ ಸದಸ್ಯರು ಸಾರ್ವಜನಿಕವಾಗಿ ಹಲವು ಬಹಿರಂಗ ಚಟುವಟಿಕೆಗಳಲ್ಲಿ ತೊಡಗಿರುತ್ತಾರೆ. ಅಂತಹ ಸಂದರ್ಭಗಳಲ್ಲಿ ವೈಯಕ್ತಿಕವಾಗಿ ಅವರು ಪ್ರಕಟಿಸುವ ಅಭಿಪ್ರಾಯಗಳು ಪತ್ರಿಕೆಯ ಅಭಿಪ್ರಾಯಗಳೂ ಆಗಿರುತ್ತವೆಂದು ಹೇಳಲಾಗದು. ಅಂತಹ ಪೂರ್ವಗ್ರಹವನ್ನು ಬದಿಗಿಟ್ಟು, ಸಮಾಜವು ಪ್ರಗತಿಯ ಹಾದಿಯಲ್ಲಿ ವಿಕಾಸಗೊಳ್ಳಲು ಈ ಪತ್ರಿಕೆಯನ್ನು ಒಂದು ಸಾಧನವನ್ನಾಗಿ ಮಾಡಲು ನಮ್ಮ ಓದುಗರು ಮತ್ತು ಲೇಖಕರು ಮಾರ್ಗದರ್ಶಿಗಳಾಗಬೇಕೆಂಬುದು ನಮ್ಮ ವಿನಂತಿ. ಅಭಿಪ್ರಾಯ ಭೇದವಿದ್ದಾಗಲೂ ಪತ್ರಿಕೆಯನ್ನು ಉಪೇಕ್ಷಿಸುವುದು ಬೇಡ, ದೂರೀಕರಿಸುವುದು ಬೇಡ.

ಡಿಸೆಂಬರ್ ೨೦೦೭ರ ಉಡುಪಿ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ''ಕಡೆಗೋಲು'' ಎಂಬ ಲೇಖನ ಸಂಕಲನವನ್ನು ಹೊರತರಲಾಗಿದೆ. ಅದರಲ್ಲಿ 'ಹೊಸತು'ವಿನಿಂದ ಆಯ್ದ ಹಲವು ಲೇಖನಗಳಿರುವುದು ಸಂತಸದ ಸಂಗತಿಯೇ ಹೌದು. ಪತ್ರಿಕೆಯು ಸಂಕೀರ್ಣ ವಿಷಯಗಳನ್ನು ಹಲವು ಮಗ್ಗುಲುಗಳಿಂದ ವಿಶ್ಲೇಷಿಸುತ್ತದೆ ಮತ್ತು ಕನ್ನಡ - ಕರ್ನಾಟಕಗಳ ಬಗ್ಗೆ ಅದರ ಕಾಳಜಿ ವಿಶಿಷ್ಟವಾದದ್ದು ಎಂಬುದು ಯಾವಾಗಲೂ ಹೆಚ್ಚು ಪ್ರಮುಖವಾದ ವಿಷಯ. ಬೇರೆ ಕೆಲವು ಗ್ರಂಥಗಳಲ್ಲಿಯೂ 'ಹೊಸತು' ಬರಹಗಳು ಸೇರ್ಪಡೆಗೊಳ್ಳುತ್ತವೆ. ಇದಕ್ಕೆಲ್ಲಾ ನಮ್ಮ ವಿಸ್ತೃತ ಲೇಖಕ ಬಳಗವೇ ಕಾರಣ. ಕನ್ನಡದ ಬಳಕೆ ಮತ್ತು ಬೆಳವಣಿಗೆಯು ಕೇವಲ ಸೃಜನಶೀಲ ಸಾಹಿತ್ಯದಿಂದ ಸಾಧಿತವಾಗುವುದಿಲ್ಲ. ಸೃಜನಶೀಲ ಸಾಹಿತ್ಯವನ್ನು ಗೌಣವಾಗಿಸಬೇಕೆಂದು ಇದರರ್ಥವಲ್ಲ; ಆದರೆ ಕನ್ನಡದ ಬರಹಗಳ ವ್ಯಾಪ್ತಿಯನ್ನು ಕುಬ್ಜಗೊಳಿಸಬಾರದೆಂಬುದು ಮುಖ್ಯ. ಎಲ್ಲ ಜ್ಞಾನ ಶಿಸ್ತುಗಳ ಗ್ರಂಥಗಳೂ ಕನ್ನಡದಲ್ಲಿ ಬರುವಂತಾದಾಗಲೇ

**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಿಶೇಷ ಸಂಚಿಕೆ | ರೂ. ೩೦/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨



## ಸಂಪಾದಕೀಯ

ಕನ್ನಡ ಗಟ್ಟಿಗೊಳ್ಳಲು ಸಾಧ್ಯ. ಈ ದೃಷ್ಟಿಯಿಂದ ನೋಡಿದರೆ 'ಹೊಸತು' ತನ್ನ ಕೊಡುಗೆಯನ್ನು ಯಥಾಶಕ್ತಿ ನೀಡುತ್ತಿದೆಯೆಂಬುದಕ್ಕೆ ಪ್ರಸ್ತುತ ಸಂಚಿಕೆಯು ಕೂಡ ಒಂದು ನಿದರ್ಶನ. ಸೃಜನಶೀಲ ಸಾಹಿತ್ಯದ ವಿವಿಧ ಪ್ರಕಾರಗಳು, ಸಮಾಜ ಶಾಸ್ತ್ರೀಯ ಅಧ್ಯಯನಗಳು, ವಿಜ್ಞಾನ - ತಂತ್ರಜ್ಞಾನ ಕುರಿತ ಚರ್ಚೆ ಮತ್ತು ವಿವರಣಾತ್ಮಕ ಲೇಖನಗಳು, ಸಾಂಸ್ಕೃತಿಕ ವಲಯಗಳ ಪರಿಚಯ, ಚರಿತ್ರೆಯ ಅರಿವು, ಸಮಕಾಲೀನ ಆರ್ಥಿಕ-ರಾಜಕೀಯ ಸನ್ನಿವೇಶ, ಇವೆಲ್ಲವನ್ನೂ ಈ ಸಂಚಿಕೆಯಲ್ಲಿ ಕಾಣಬಹುದು. 'ಹೊಸತು' ಈ ಸ್ವರೂಪವನ್ನು ಪಡೆಯಲು ಲೇಖಕರ ಮತ್ತು ಓದುಗರ ಸಹಭಾಗಿತ್ವವೇ ಕಾರಣವೆಂದು ಮತ್ತೆ ಒತ್ತಿಹೇಳಬಹುದು. ಇಲ್ಲಿ ಅಡಕಗೊಂಡಿರುವ ಬರಹಗಳನ್ನು ಪ್ರತ್ಯೇಕವಾಗಿ ಉಲ್ಲೇಖಿಸಿ ಅವುಗಳ ವೈಶಿಷ್ಟ್ಯವನ್ನು ವಿವರಿಸುವ ಅಗತ್ಯವಿಲ್ಲ. ಇಡೀ ಸಂಚಿಕೆಯು ಓದುಗರ ಮುಂದಿರುವಾಗ ಅದರ ಅವಶ್ಯಕತೆಯಾದರೂ ಏನು!

*   *   *

ಕೋಲ್ಕತಾದಿಂದ ಹೊರಹಾಕಲ್ಪಟ್ಟಿದ್ದ ತಸ್ಲೀಮಾ ನಸ್ರೀನ್ ಆ ನಗರಕ್ಕೆ ಹಿಂದಿರುಗಬಹುದೆಂದು ಹಿರಿಯ ನಾಯಕ ಜ್ಯೋತಿ ಬಸು ಹೇಳಿರುವುದು ಸಮಾಧಾನ ತರುವಂತಿದೆ. ಆಕೆಯ ರಕ್ಷಣೆಯ ಜವಾಬ್ದಾರಿಯು ಮಾತ್ರ ಕೇಂದ್ರ ಸರ್ಕಾರದ್ದು ಎಂದು ಅವರು ಹೇಳಿರುವುದು ಆಶ್ಚರ್ಯ ತರುತ್ತದೆ. ಕಾನೂನು ಮತ್ತು ರಕ್ಷಣಾ ವ್ಯವಸ್ಥೆಯು ಆಯಾ ರಾಜ್ಯ ಸರ್ಕಾರಗಳದ್ದೆಂದು ಆಗಾಗ್ಗೆ ಹೇಳಲಾಗುತ್ತಿರುತ್ತದೆ. ಹೀಗಿರುವಾಗ ಕೋಲ್ಕತಾದಲ್ಲಿ ಆಕೆಗೆ ಕೇಂದ್ರ ಸರ್ಕಾರವೇಕೆ ರಕ್ಷಣೆ ನೀಡಬೇಕು? ಮೊದಲಿಗೆ, ಜಡ್ಡು ಮತಾಂಧರ ಒತ್ತಾಯಕ್ಕೆ ಮಣಿದು ಆಕೆಯನ್ನು ರಾಜಸ್ಥಾನಕ್ಕೆ ಸಾಗಿಹಾಕಿದ್ದೇ ತಪ್ಪು. ಎಡರಂಗ ಸರ್ಕಾರವು ಮತಾಂಧರನ್ನು ಎದುರಿಸಬೇಕಿತ್ತೇ ವಿನಾ ಅವರಿಗೆ ಹುರುಪು ನೀಡುವಂತೆ ಕೆಟ್ಟ ತೀರ್ಮಾನ ಕೈಗೊಳ್ಳಬಾರದಿತ್ತು. ಮತಾಂಧರ ಒಂದೊಂದು ಗೆಲುವು ಸಹ ಅವರನ್ನು ಬೆಳೆಸುತ್ತಾ ಹೋಗುತ್ತದೆ; ಆಮೇಲೆ ಅದು ಕಾನೂನನ್ನು ಮೀರಿನಿಲ್ಲುವ ದುಷ್ಟಶಕ್ತಿಯಾಗುತ್ತದೆ. ಯಾವ ಮತಧರ್ಮದ ಕಾಲಾಳುಗಳೇ ಆಗಲಿ, ಅವರು ಬೆಳೆಯುವುದೇ ಹಾಗೆ. ಪಶ್ಚಿಮ ಬಂಗಾಳದಲ್ಲಿ ಇಂತಹ ಮತಾಂಧ ಶಕ್ತಿಗಳಿಗೆ ಈವರೆಗೆ ಅವಕಾಶವಿರಲಿಲ್ಲವೆಂಬುದನ್ನು ಗಮನಿಸಿದರೆ ಈಗಿನ ಕ್ರಮವು ನಿರಾಶೆಯನ್ನುಂಟುಮಾಡುವಂಥದಾಗಿದೆ. ಲೋಕಸಭಾಧ್ಯಕ್ಷ ಸೋಮನಾಥ ಚಟರ್ಜಿ ಮತ್ತು ಎಡಪಕ್ಷಗಳ ಕೆಲವು ನಾಯಕರು ತಸ್ಲೀಮಾಳ ಒಂದು ತೀರ್ಮಾನವನ್ನು ಸ್ವಾಗತಿಸಿದ್ದಾರೆ. ಅದು ಅವರಿಗೆ ಶೋಭೆ ತರುವಂಥದಲ್ಲ. ಆಕೆಯ ಪುಸ್ತಕದಲ್ಲಿ ಎರಡು ಪುಟಗಳನ್ನು ಹರಿದುಹಾಕಲು ಆಕೆ ಒಪ್ಪಬೇಕಾಯಿತೆಂಬುದು ಮತ್ತೆ ಧರ್ಮಾಂಧರ ವಿಜಯವೇ ಆಗುತ್ತದೆ. ಮತಧರ್ಮಗಳನ್ನು ವಿಮರ್ಶಾತ್ಮಕವಾಗಿ ನೋಡಕೂಡದೆಂಬ ಸಂದೇಶ ಇದರಿಂದ ಹೊಮ್ಮುತ್ತದೆ. ಶ್ರೀರಾಮ ಸೇನೆಯವರು ಯಾವುದೋ ಸಿನಿಮಾ ಹಾಡಿನ ವಿರುದ್ಧ ದಾಂಧಲೆ ನಡೆಸುವುದಕ್ಕೆ ಸಮರ್ಥನೆ ನೀಡಲು ತಸ್ಲೀಮಾ ಪ್ರಕರಣವನ್ನು ಉದ್ಧರಿಸಬಹುದಲ್ಲವೆ? ''ರಾಮ ಸುಳ್ಳು, ಸೀತೆ ಸುಳ್ಳು, ರಾವಣ ಸುಳ್ಳು'' ಎಂದು ಹಾಡಿದರೆ ರೊಚ್ಚಿಗೇಳುವ ಜನರಿಗೂ ತಸ್ಲೀಮಾಳನ್ನು ಕೋಲ್ಕತಾದಿಂದ ಹೊರಹೋಗಬೇಕೆಂದು ಆಗ್ರಹಿಸಿದ ಇಸ್ಲಾಂ ಜಡ್ಡು ಮತಾಂಧರಿಗೂ ಇರುವುದು ಒಂದೇ ಪ್ರಣಾಲಿಕೆ; ಅದು ಮೌಢ್ಯವನ್ನು ರಾಜಕಾರಣದ ಸರಕನ್ನಾಗಿಸುತ್ತದೆ. ಇಂತಹ ಪ್ರೇರಣೆ ಇಲ್ಲದಿದ್ದರೆ ಒರಿಸ್ಸಾದಲ್ಲಿ ಹಿಂದು ಮತಾಂಧರು ಚರ್ಚುಗಳನ್ನು ಧ್ವಂಸಮಾಡಿ ಕ್ರಿಸ್‌ಮಸ್ ಆಚರಣೆಯನ್ನು ಹಾಳುಗೆಡಹುತ್ತಿರಲಿಲ್ಲ ಮತ್ತು ದೆಹಲಿಯ ಇಂಡಿಯ ಇಂಟರ್‌ನ್ಯಾಷನಲ್ ಸೆಂಟರ್‌ನ ಸುಭದ್ರ ಕೋಟೆಯನ್ನು ಅತಿಕ್ರಮಿಸಿ ಎಂ.ಎಫ್. ಹುಸೇನ್‌ರ ಉತ್ತಮ ಕಲಾಚಿತ್ರಗಳ ಪ್ರದರ್ಶನವನ್ನು ಭಗ್ನಗೊಳಿಸುತ್ತಿರಲಿಲ್ಲ. ಗಾಳಿಯನ್ನು ಬಿತ್ತಿದರೆ ಬಿರುಗಾಳಿಯ ಫಸಲನ್ನು ಪಡೆಯ ಬೇಕಾಗುತ್ತದೆಯೆಂಬ ಮಾತಿಗೆ ಇವೆಲ್ಲ ನಿದರ್ಶನಗಳು.

ಸೂಡಾನ್‌ನಲ್ಲಿ ಜರುಗಿದ ಘಟನೆಯೊಂದನ್ನು ಇಲ್ಲಿ ನೆನಪಿಸಿಕೊಳ್ಳಬಹುದು: ಬ್ರಿಟನ್ನಿನ ಒಬ್ಬ ಮಹಿಳೆ ಅಲ್ಲಿ ಯಾವುದೋ ಸಂಸ್ಥೆಯ ಸ್ವಯಂಸೇವಕಳಾಗಿದ್ದಳು. ಅನಾಥ ಮಕ್ಕಳಿಗೆ ಆಸರೆ ನೀಡುವ ಒಂದು ಸಂಸ್ಥೆ ಅದು. ಒಂದು ಆಟದ ಬೊಂಬೆಗೆ ಮೊಹಮ್ಮದ್ ಎಂಬ ಹೆಸರನ್ನಿಟ್ಟಿದ್ದಳೆಂಬುದು ಆಕೆಯ ಅಪರಾಧ! ಅದಕ್ಕೆ ಅವಳಿಗೆ ಹದಿನೈದು ದಿನಗಳ ಕಾರಾಗೃಹ ಶಿಕ್ಷೆ!! ಬ್ರಿಟನ್ನಿನ ಸರ್ಕಾರವು ಮಧ್ಯಪ್ರವೇಶಿಸಿ ಆಕೆಯನ್ನು ಸ್ವದೇಶಕ್ಕೆ ಕರೆದೊಯ್ಯಬೇಕಾಯಿತು. ಇದು ಜಡ್ಡು ಮತಾಂಧತೆಯ ಪರಿಣಾಮ. ಯಾವನೋ ಕೊಲೆಗಾರ ಅಥವಾ ಹೀನ ಅಪರಾಧಿ ಮೊಹಮ್ಮದ್ ಎಂಬ ಹೆಸರನ್ನಿಟ್ಟುಕೊಂಡಿದ್ದರೆ ಮತಾಂಧರು ಏನು ಹೇಳುತ್ತಾರೆ? ರಾಮ ಅಥವಾ ಸೀತೆಯೆಂಬ ಹೆಸರಿನವರು ಏನಾದರೂ ದುಷ್ಕೃತ್ಯವೆಸಗಿದರೆ ನಮ್ಮ ದೇಶದ ಮತಾಂಧರು ಏನು ಮಾಡಬೇಕು? ಹೆಜ್ಜೆಹೆಜ್ಜೆಗೂ ಇಲ್ಲಿ ಸಂಘರ್ಷವಿದೆ. ಆದ್ದರಿಂದ ಮೊದಲ ಹೆಜ್ಜೆಯಲ್ಲೇ ಮತಾಂಧರಿಗೆ ಸೋಲುಣಿಸಬೇಕು. ಹಾಗೆ ಮಾಡದೆ ಅವರನ್ನು ಬೆಳೆಯಬಿಟ್ಟರೆ ರಾವಲ್ಪಿಂಡಿಯಲ್ಲಿ ಅವರು ಬೇನ್‌ಜ್ಹೀರ್ ಭುಟ್ಟೋ ಅಂಥವರ ಹತ್ಯೆಗೆ ಮುಂದಾಗುತ್ತಾರೆ. ಆಕೆಯ ರಾಜಕೀಯಕ್ಕಿಂತಲೂ ಆಕೆ ಮಹಿಳೆಯೆಂಬುದು ಪಾಕಿಸ್ತಾನದ ಜಡ್ಡು ಮತಾಂಧರಿಗೆ ರೋಷ ಉಕ್ಕಿಸುತ್ತದೆ. ಅವರು ಮಾನವ ಸಹಜವಾದ ಬುದ್ಧಿಗೆ ಬುರ್ಖಾ ಹಾಕಿಕೊಂಡಿರುವುದರಿಂದ ಬೇನ್‌ಜ್ಹೀರ್ ಬುರ್ಖಾ ಹಾಕಿಕೊಳ್ಳದಿರುವುದು ಪ್ರಮಾದವಾಗಿ ಕಾಣುತ್ತದೆ. ಮತಾಂಧತೆಯು ಭಯೋತ್ಪಾದಕ ಕೃತ್ಯಗಳಿಗೆ ಇಂಬು ನೀಡುತ್ತದೆ. ತನ್ನ ಅಂತರರಾಷ್ಟ್ರೀಯ ರಾಜಕೀಯದ ಉತ್ಸಾಹದಲ್ಲಿ ಅಮೆರಿಕಾ ಸರ್ಕಾರವು ತಾಲಿಬಾನರನ್ನು ಬೆಳೆಸಿತು, ಅವರಿಗೆ ಶಸ್ತ್ರಾಸ್ತ್ರ ಸರಬರಾಜು ಮಾಡಿತು, ಅವರನ್ನು ಸ್ವಾತಂತ್ರ್ಯ ಪ್ರೇಮಿಗಳೆಂದು ಬಿಂಬಿಸಿತು, ಮರ್ಯಾದೆಯ ಶಿಖರಕ್ಕೇರಿಸಿತು. ಮತಾಂಧತೆಯೆಂಬ ಉರಿಯುವ ಬೆಂಕಿಗೆ ತುಪ್ಪ ಸುರಿಯುವ ಕೆಟ್ಟ ಸಂಪ್ರದಾಯಕ್ಕೆ ಇದೊಂದು ಘೋರ ಉದಾಹರಣೆ. ಪಾಕಿಸ್ತಾನದ ಈಗಿನ ಕ್ರೂರ ಬೆಳವಣಿಗೆಯಿಂದಾಗಿ ಅಂತರ್ಯುದ್ಧ ಉಲ್ಬಣಗೊಂಡರೆ ಆಶ್ಚರ್ಯವಿಲ್ಲ. ಕ್ರಮೇಣ ಅಮೆರಿಕಾ ಸೈನ್ಯ ತುಕಡಿಗಳು ಪಾಕಿಸ್ತಾನವನ್ನು ಪ್ರವೇಶಿಸುವುದರಲ್ಲಿ ಇದು ಅಂತ್ಯವಾಗದಿರಲೆಂದು ಆಶಿಸಬೇಕಾಗಿದೆ. ಮಿಲಿಟರಿ ಆಡಳಿತ ಕೊನೆಗೊಂಡು ಪ್ರಜಾಪ್ರಭುತ್ವ ಕ್ರಮದಲ್ಲಿ ಜನರಿಂದ ಆಯ್ಕೆಯಾದ ಸರ್ಕಾರವೊಂದು ಪಾಕಿಸ್ತಾನದಲ್ಲಿ ಅಸ್ತಿತ್ವಕ್ಕೆ ಬರಬಹುದೆಂಬ ನಿರೀಕ್ಷೆಗೆ ಪೆಟ್ಟುಬಿದ್ದಿದೆ. ಭಾರತ-ಪಾಕಿಸ್ತಾನ ಸಂಬಂಧಗಳಿಗೂ ಇದು ಮಾರಕವಾಗಿದೆ. ಅಲ್ಲಿಯ ಪರಿಣಾಮಗಳೇನೇ ಇರಲಿ, ಜನಮರ್ದನ ಮುಂದುವರಿದು ಪ್ರಜಾಪ್ರಭುತ್ವ ಬೇರೂರಲು ತಕ್ಷಣದಲ್ಲಂತೂ ಸಾಧ್ಯವಿಲ್ಲವಾಗಿದೆ ಮತ್ತು ಆ ಬೆಂಕಿಯ ಕಾವನ್ನು ಭಾರತ ಅನುಭವಿಸಬೇಕಾಗುತ್ತದೆ. ಯಾವುದೇ ಮತಧರ್ಮದಲ್ಲಿ ಮೌಢ್ಯ, ಅನ್ಯಾಕ್ರಮಣಶೀಲತೆ, ಗೊಡ್ಡುತನ, ಹಿಂಸಾಪ್ರವೃತ್ತಿ, ಇವೆಲ್ಲಾ ಅನಿವಾರ್ಯವೆಂದು ಎಣಿಸಬೇಕಾಗಿಲ್ಲ. ಆದರೆ ಮತಧರ್ಮವನ್ನು ಹಾಗೆ ಪರಿವರ್ತಿಸುವ ಒಂದು ವರ್ಗವಿರುತ್ತದೆ. ಅದಕ್ಕೆ ಇದೇ ರಾಜಕೀಯ ಆಸರೆಯೂ ಆಗಿರುತ್ತದೆ. ಇಸ್ರೇಲ್ ಮತ್ತು ತಾಲಿಬಾನ್ ಎರಡೂ ಇದನ್ನೇ ಎತ್ತಿ ತೋರಿಸುತ್ತವೆ. ಎರಡಕ್ಕೂ ಅಮೆರಿಕಾದ ಪೋಷಣೆಯೇ ಮೂಲಧಾತು! ಸದ್ಯದಲ್ಲಿ ಬೇನ್‌ಜ್ಹೀರ್‌ರ ಹತ್ಯೆಯ ದುರಂತವು ಪಾಕಿಸ್ತಾನವನ್ನು ಅಲುಗಾಡಿಸಿದೆ, ಮುಷರಫ್‌ಗೆ ಎಚ್ಚರಿಕೆಯ ಗಂಟೆ ಬಾರಿಸಿದೆ; ನಾಳೆ ಅದರ ಪ್ರಭಾವವು ಕಾಶ್ಮೀರದಲ್ಲಿ ಹಾಗೂ ಭಾರತದ ಬೇರೆಡೆಗಳಲ್ಲಿ ಹಬ್ಬದಂತೆ ನೋಡಿಕೊಳ್ಳುವ ಜವಾಬ್ದಾರಿ ನಮ್ಮ ಜನರ ಮೇಲಿದೆ.



ಮತಾಂಧತೆಯ ದೈತ್ಯ ಸ್ವರೂಪ ಮತ್ತು ಉದ್ದೇಶಗಳನ್ನು ವಿವೇಚಿಸಿಕೊಂಡರೆ ಗುಜರಾತಿನ ಚುನಾವಣೆ ಫಲಿತಾಂಶವು ಅನಿರೀಕ್ಷಿತವಲ್ಲ

ಎಂಬುದು ಸ್ಪಷ್ಟವಾಗುತ್ತದೆ. ಯಾವ ಅಲೆಯು ನರೇಂದ್ರ ಮೋದಿಯವರನ್ನು ಶಿಖರಕ್ಕೇರಿಸಿತೆಂಬುದನ್ನು ಗಮನಿಸಿದರೆ ಅವರ ಸಾಧನೆಯು ಆತಂಕವನ್ನುಂಟುಮಾಡುತ್ತದೆ. ಚುನಾವಣೆಯಲ್ಲಿ ಗೆಲ್ಲುವುದು ಅವರ ಹಕ್ಕು, ಆದರೆ ಅವರು ಗೆದ್ದುದರ ಹಿನ್ನೆಲೆ ತೀರಾ ಅನಾರೋಗ್ಯಕರವಾದ್ದು. ಸುಮಾರು ೪೫ ಸ್ಥಾನಗಳಲ್ಲಿ ಮೋದಿಯವರ ಪಕ್ಷದ ಅಭ್ಯರ್ಥಿಗಳು ೫೦೦೦ಕ್ಕೂ ಕಡಿಮೆ ಅಂತರದಿಂದ ಗೆದ್ದಿದ್ದಾರೆಂಬುದು ಗಮನಾರ್ಹ. ಅಂದರೆ, ಮತಾಂಧತೆಯು ನಮ್ಮ ದೇಶವನ್ನು ಸಂಪೂರ್ಣವಾಗಿ ಆವರಿಸಿಲ್ಲ ಎಂದರ್ಥ. ಮತಧರ್ಮವನ್ನು ತನ್ನ ಕಕ್ಷೆಯಲ್ಲಿ ಸ್ವತಂತ್ರವಾಗಿರಲು ಬಿಟ್ಟು, ಅದಕ್ಕೆ ರಾಜಕೀಯ ಲೇಪ ನೀಡಲು ಬಯಸದ ಜನ ನಮ್ಮಲ್ಲಿ ಅಧಿಕವಾಗಿದ್ದಾರೆ. ಅವರು ಒಟ್ಟಾಗಲು ಸಿದ್ಧರಾಗಿದ್ದಾರೆಯೇ ಎಂಬುದಷ್ಟೇ ಪ್ರಶ್ನೆ. ನಮ್ಮ ಪ್ರಜಾಪ್ರಭುತ್ವದ ಮುನ್ನಡೆಗೆ ಇದು ಆದ್ಯತೆಯ ವಿಷಯವೆಂಬುದನ್ನು ಎಲ್ಲರೂ ಒಪ್ಪುತ್ತಾರೆ, ಆದರೆ ಅವರೆಲ್ಲಾ ಜೊತೆಯಾಗಲು ಹತ್ತುಹಲವು ಮುಗ್ಗಟ್ಟುಗಳಿವೆ. ಅವನ್ನು ನಿವಾರಿಸಿಕೊಳ್ಳುವುದು ತುರ್ತಿನ ಅಗತ್ಯವಾಗಿದೆ.

*　　　*　　　*

ಗುಜರಾತ್ ಚುನಾವಣೆಗೆ ನೇರವಾಗಿ ಸಂಬಂಧಿಸಿಯೂ ಸಂಬಂಧಿಸದಂತಿರುವುದು ಬೇರೊಂದು ಗಹನವಾದ ವಿಷಯವಿದೆ: ಅದನ್ನು ತತ್ತ್ವಶಾಸ್ತ್ರಜ್ಞರು, ಇತಿಹಾಸಕಾರರು, ಸಮಾಜ ಶಾಸ್ತ್ರಜ್ಞರು ಆಳವಾಗಿ ವಿಶ್ಲೇಷಿಸಿ ತಿಳುವಳಿಕೆ ನೀಡಬೇಕು. ಗೋಧ್ರಾ ಮತ್ತು ನಂತರದ ಹತ್ಯೆಗಳ ವಿದ್ಯಮಾನಗಳಿಂದ ಬೇರ್ಪಡಿಸಿ ಸಹ ಇದನ್ನು ನೋಡಬಹುದು. ಭಾರತದ ಚಿಂತನಾ ಪ್ರಪಂಚದಲ್ಲಿ ''ಧರ್ಮರಕ್ಷಣೆ'' ಎಂಬುದಕ್ಕೆ ವಿಶೇಷವಾದ ಸ್ಥಾನವಿದೆ. ರಾಮಾಯಣ - ಮಹಾಭಾರತಗಳಂತಹ ಮಹಾಕಾವ್ಯಗಳಾಗಲಿ, ಭಗವದ್ಗೀತೆ ಮುಂತಾದ ತತ್ತ್ವಶಾಸ್ತ್ರ ಗ್ರಂಥಗಳಾಗಲಿ, ತ್ರಿಪಿಟಕ ಮುಂತಾದ ಬೌದ್ಧಮತದ ಸಾಹಿತ್ಯ ಸಂಪತ್ತಾಗಲಿ, ಎಲ್ಲವೂ ಸಮಾಜದಲ್ಲಿ ಶಾಂತಿ ಮತ್ತು ಸೌಹಾರ್ದತೆಯ ಸ್ಥಾಪನೆಗಾಗಿ ತುಡಿಯುತ್ತವೆ. ಆದರೆ ಧರ್ಮರಕ್ಷಣೆಯು ಅಗಾಧ ಸಾವು-ನೋವುಗಳಿಲ್ಲದೆ ಸಾಧ್ಯವಾಗುವುದಿಲ್ಲ. ಸಾವು-ನೋವುಗಳನ್ನು ಕೇಂದ್ರೀಕರಿಸಿ ಚಿಂತನೆ ನಡೆಸಿದ್ದು ಬುದ್ಧ; ದುಃಖಕ್ಕೆ ಕಾರಣಗಳಿವೆ, ಅವನ್ನು ಗುರುತಿಸಿ ತೊಡೆದುಹಾಕುವುದು ಸುಖಕ್ಕೆ ಹಾದಿ, ಅದೇ ಧರ್ಮಸ್ಥಾಪನೆ ಎಂಬುದು ಅವನ ದಾರ್ಶನಿಕ ದೃಷ್ಟಿ. ಮಹಾಭಾರತ - ಗೀತೆ - ರಾಮಾಯಣ, ಇವುಗಳಲ್ಲಿ ದೊರೆಯುವ ಚಿತ್ರಣ ಬೇರೆ ರೀತಿಯದು. ಅಧರ್ಮವನ್ನು ಸೋಲಿಸಲು ಅಧರ್ಮಿಗಳನ್ನು ಕೊಲ್ಲಬೇಕಾಗುತ್ತದೆಯೆಂದು ಅವು ಸೂಚಿಸುತ್ತವೆಯೇ ಎಂಬುದನ್ನು ವಿಚಾರ ಮಾಡಬೇಕು. ಅವರ ಪರಿವರ್ತನೆಗೆ ಆದ್ಯತೆ ನೀಡಲಾಗಿಲ್ಲ, ಬದಲಾಗಿ ಅವರನ್ನು ಹತ ಮಾಡುವುದು ಅನಿವಾರ್ಯವೆಂಬಂತೆ ಚಿತ್ರಿಸಲಾಗಿದೆ. ಒಳಿತು ಮತ್ತು ಹೊಲತುಗಳ ತಾಕಲಾಟದಲ್ಲಿ ಒಳಿತಿನ ಜಯವು ಅಧರ್ಮಿಗಳನ್ನು ನಿರ್ನಾಮ ಮಾಡುವುದರಿಂದ ಮಾತ್ರವೇ ಸಾಧ್ಯವಾಗುತ್ತದೆಂಬ ಸೂಚನೆ ದಟ್ಟವಾಗಿದೆ. ವಿಶ್ವದ ಇತಿಹಾಸದಲ್ಲಿ ಯುದ್ಧ ಮಾಡಿ ವಿಜಯಿಗಳಾದವರೆಲ್ಲ ಬಹುಶಃ ಒಳಿತಿನ ರಕ್ಷಣೆಗಾಗಿಯೇ ಯುದ್ಧ ಮಾಡಿದ್ದೆಂದು ಭಾವಿಸಿದ್ದಿರಬಹುದು. ಗ್ರೀಸಿನ ಪ್ರಾಚೀನ ಸಾಹಿತ್ಯದಲ್ಲೂ ಸಾವುಗಳ ಸರಮಾಲೆಯ ಚಿತ್ರಣವಿದೆ. ಅಲ್ಲಿ ಒಳಿತಿನ ಕಾರಣಕ್ಕಾಗಿ ಸಾವುಗಳು ಸಂಭವಿಸಿಲ್ಲ; ಬದಲಾಗಿ ದೇವತೆಗಳ ಪರಸ್ಪರ ವೈಮನಸ್ಯಗಳ ಪರಿಹಾರಕ್ಕಾಗಿ ಜರುಗಿವೆ. ಅದು ಹೇಗೇ ಇರಲಿ, ಧರ್ಮದ ಸಂಸ್ಥಾಪನೆಗಾಗಿ ಹಿಂಸೆಯ ಪ್ರಯೋಗವನ್ನು ಮಾನ್ಯ ಮಾಡಿರುವುದು ಎಲ್ಲೋ ನಮ್ಮ ಸಮುದಾಯದ ಮನದಾಳದಲ್ಲಿ ಸಾಂದ್ರವಾಗಿ ನೆಲೆಸಿದೆಯೆ ? ಅದರಿಂದಾಗಿ ನಾಗಾಲ್ಯಾಂಡ್, ಮಣಿಪುರ, ಮೇಘಾಲಯ, ಕಾಶ್ಮೀರ, ಗುಜರಾತು, ಹೀಗೆ ಎಲ್ಲೆಲ್ಲಿ ಕೊಲೆಗಳಾದರೂ ಗಾಢವಾಗಿ ಅವು ನಮ್ಮನ್ನು ತಟ್ಟುತ್ತಿಲ್ಲವೆ ? ಪ್ರಜಾಪ್ರಭುತ್ವದ ರಕ್ಷಣೆಗೆ ಇಂತಹ ಕೊಲೆಗಳು ಅನಿವಾರ್ಯವೆ ? ಬಾಬಾಬುಡನ್‌ಗಿರಿ ಮತ್ತು ಒರಿಸ್ಸಾದ ಪ್ರಚೋದನೆಗಳೂ ಈ ಸಾಲಿಗೆ ಸೇರುತ್ತವೆಯೆ ? ಅಂತಹ ಕ್ರಮಗಳೇ ಚುನಾವಣೆಗಳನ್ನು ಗೆಲ್ಲಲು ಉತ್ಕೃಷ್ಟ ಸಾಮಗ್ರಿಯೆ ? ನಮ್ಮ ತತ್ತ್ವಶಾಸ್ತ್ರಜ್ಞರು ಇದರ ಬಗ್ಗೆ ಬೆಳಕು ಹರಿಸಬೇಕು.

*　　　*　　　*

ಪ್ರತಿವರ್ಷ ಕನ್ನಡ ಸಾಹಿತ್ಯ ಸಮ್ಮೇಳನ ನಡೆದಾಗಲೂ ಏನಾದರೊಂದು ಆಕ್ಷೇಪ, ಸಂಶಯ, ಇತ್ಯಾದಿ ವ್ಯಕ್ತವಾಗುತ್ತವೆ. ಇಂತಹ ಅದ್ದೂರಿ ಸಮಾರಂಭಗಳು ಪ್ರತಿವರ್ಷವೂ ಬೇಕೆ, ಅಲ್ಲಿನ ಗೋಷ್ಠಿಗಳ ಸ್ವರೂಪ ಏನಿರಬೇಕು, ನಿರಂತರವಾಗಿ ನಿರ್ಣಯಗಳನ್ನು ಅಂಗೀಕರಿಸುತ್ತಿರುವುದರಿಂದ ಏನು ಪ್ರಯೋಜನ, ಇತ್ಯಾದಿ ಪ್ರಶ್ನೆಗಳು ಅಪ್ರಸ್ತುತವಲ್ಲ. ಈ ಬಾರಿ ಉಡುಪಿ ಸಮ್ಮೇಳನಕ್ಕೆ ಪೂರ್ವಭಾವಿಯಾಗಿ ಸೌಹಾರ್ದ ಸಾಹಿತ್ಯ ಸಮ್ಮೇಳನವನ್ನು ಉಡುಪಿಯಲ್ಲೇ ಆಯೋಜಿಸಲಾಗಿದ್ದುದು ಮಾತ್ರ ವಿಶೇಷ. ೧೯೭೯ರ ಬಂಡಾಯ ಸಾಹಿತ್ಯ ಸಮ್ಮೇಳನಕ್ಕಿಂತಲೂ ಭಿನ್ನವಾದದ್ದು ಈ 'ಪರ್ಯಾಯ' ಅಥವಾ 'ಪೂರಕ' ಸಮ್ಮೇಳನ. ಬಂಡಾಯ ಸಮ್ಮೇಳನವು ಸೈದ್ಧಾಂತಿಕವಾಗಿ ಭಿನ್ನ ನೆಲೆಯನ್ನು ಗುರುತಿಸಿಕೊಂಡು, ಸಂಘಟನಾತ್ಮಕವಾಗಿ ಈಗಲೂ ಕಾರ್ಯಪ್ರವೃತ್ತವಾಗಿದೆ. ಸೌಹಾರ್ದ ಸಾಹಿತ್ಯ ಸಮ್ಮೇಳನವು ಪರಿಷತ್ತಿನ ಆಶ್ರಯದಲ್ಲಿ ನಡೆದ ಸಮ್ಮೇಳನದ ಲೋಪಗಳನ್ನು ಸರಿಪಡಿಸುವುದು ಮತ್ತು ಸ್ವಾಗತ ಸಮಿತಿಯ ರಚನೆಯಲ್ಲಿ ಒಂದೇ ಬಣದವರು ತುಂಬಿಕೊಂಡಿದ್ದುದರ ವಿರುದ್ಧ ಪ್ರತಿಭಟಿಸುವುದು, ಇವನ್ನು ಮುಖ್ಯ ಉದ್ದೇಶಗಳನ್ನಾಗಿಸಿಕೊಂಡಿತ್ತು. ಅಧ್ಯಕ್ಷರಾಗಿ ಆಯ್ಕೆಯಾಗಿದ್ದ ಪ್ರೊ॥ ಎಲ್. ಎಸ್. ಶೇಷಗಿರಿರಾಯರ ವಿರುದ್ಧವೂ ದನಿಯೆತ್ತಿದವರು ಇಲ್ಲಿದ್ದರು. ಆದರೆ ಸಮ್ಮೇಳನಾಧ್ಯಕ್ಷರು ಅದನ್ನು ಬೆಂಬಲಿಸಲಿಲ್ಲ, ಸಮರ್ಥಿಸಲಿಲ್ಲ. ಅವರ ಆಯ್ಕೆಯಲ್ಲಿ ಸಂಘ ಪರಿವಾರದ ಕೈವಾಡವಿದ್ದಿತೆ ಅಥವಾ ಪರಿಷತ್ತಿನ ಪದಾಧಿಕಾರಿಗಳು ಹಸ್ತಕ್ಷೇಪ ಮಾಡಿದರೆ, ಎಂಬುದರ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಮಾನ್ಯ ವ್ಯಾಸರಾಯ ಬಲ್ಲಾಳರು ಔಪಚಾರಿಕವಾಗಿ ಆಯ್ಕೆಯಾಗಿದ್ದರೂ ಅವರನ್ನು ದೂರವಿರಿಸಿದ್ದು ಮಾತ್ರ ನಿಜ ಮತ್ತು ಖಂಡನೀಯ. ಜೊತೆಗೆ, ಪರಿಷತ್ತಿನ ಸಮ್ಮೇಳನದಲ್ಲಿ ಕರಾವಳಿಯ ಅತಿಮುಖ್ಯ ಸಮಕಾಲೀನ ಸಮಸ್ಯೆಗಳ ಚರ್ಚೆಯನ್ನು ಯೋಚಿಸಿಯೂ ಇರಲಿಲ್ಲ. ಕಳೆದ ಕೆಲವು ವರ್ಷಗಳಿಂದ ಕರಾವಳಿ ಪ್ರದೇಶದಲ್ಲಿ ಹೊತ್ತಿ ಉರಿಯುತ್ತಿರುವ ಕೋಮುದ್ವೇಷವನ್ನು ಸಾಹಿತ್ಯಾಸಕ್ತರು ಸಂಪೂರ್ಣವಾಗಿ ಚಾಪೆ ಕೆಳಗೆ ತೂರಿಸುವುದು ಸರ್ವಥಾ ಸರಿಯಲ್ಲ. ಅಂತೆಯೇ ಜಾಗತೀಕರಣದ ಪಿಡುಗನ್ನು ಸಹ ತಿಪ್ಪೆ ಸಾರಿಸುವ ರೀತಿಯಲ್ಲಿ ಚರ್ಚಿಸುವುದು ಯೋಗ್ಯವಲ್ಲ. ಈ ಲೋಪಗಳನ್ನು ತಿದ್ದಲು ಸೌಹಾರ್ದ ಸಾಹಿತ್ಯ ಸಮ್ಮೇಳನ ನಡೆದದ್ದು ಉಚಿತವಾಗಿದೆ. ಪರಿಷತ್ತು ಸಹ ಇಂತಹ ಜ್ವಲಂತ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳಬೇಕು. ಕನ್ನಡ ಸಾಹಿತ್ಯ ಪರಿಷತ್ತು ಸಾರ್ವಜನಿಕ ಸಂಸ್ಥೆ. ಅದಕ್ಕೆ ಸರ್ಕಾರದ ಆರ್ಥಿಕ ನೆರವು ಹೇರಳವಾಗಿದೆ. ಅಂತಹ ಸಂಸ್ಥೆಯ ಕಾರ್ಯಶೈಲಿಯು ಯಾವುದೋ ಒಂದು ಕುತ್ಸಿತ ರಾಜಕೀಯ ಬಣದಿಂದ ನಿರ್ಧಾರವಾಗುವಂತೆ ಇರಕೂಡದು. ಇಡೀ ಕನ್ನಡ ಜನತೆ ಇದರ ಬಗ್ಗೆ ಎಚ್ಚರದಿಂದಿರಬೇಕೆಂಬ ಸಂದೇಶ ನೀಡಲು ಸಹ ಸೌಹಾರ್ದ ಸಾಹಿತ್ಯ ಸಮ್ಮೇಳನದ ಅಗತ್ಯವಿತ್ತು. ಇನ್ನುಳಿದಿರುವುದು ಸಾರ್ವಜನಿಕರ ತಿಳುವಳಿಕೆ ಮತ್ತು ಭಾಗವಹಿಸುವಿಕೆಗೆ ಸಂಬಂಧಿಸಿದ್ದು.

*　　　*　　　*

ಸಂಪಾದಕೀಯ



ಉಡುಪಿ ಬೇರೊಂದು ಕಾರಣಕ್ಕೂ ಪತ್ರಿಕೆಗಳಲ್ಲಿ ಪದೇ ಪದೇ ಕಾಣಿಸಿಕೊಳ್ಳುತ್ತಿದೆ. ಅಲ್ಲಿಯೂ ಪರ್ಯಾಯದ್ದೇ ತಕರಾರು. ಶ್ರೀಕೃಷ್ಣನನ್ನು ಪೂಜಿಸಲು ಅರ್ಹತೆಯ ತೀರ್ಮಾನವಾಗಬೇಕೆಂಬುದು ಸೋಜಿಗದ ವಿಷಯ. ಅಷ್ಟಮಠಗಳ ಸ್ವಾಮಿ ಗ್ರಹಗಳು ಇನ್ನೂ ಯಾವ ಶತಮಾನದಲ್ಲಿ ಮತ್ತು ಯಾವ ಅಧೋಲೋಕದ ಕಕ್ಷೆಯಲ್ಲಿ ಸುತ್ತುತ್ತಿವೆ ಯೆಂಬುದನ್ನು ಕರ್ನಾಟಕದ ಸಂಶೋಧನಾ ಚತುರರು ತಿಳಿಸಿಕೊಡಬೇಕು. ಇತ್ತೀಚಿನ ವರದಿಯಂತೆ ಪೇಜಾವರ ಸ್ವಾಮಿಗಳು ತಮ್ಮ ದಿವ್ಯ ಚಕ್ಷುಸ್ಸಿನಿಂದ ಹೊಸ ಹೊಳಹನ್ನು ಪಡೆದುಕೊಂಡಿದ್ದಾರೆ. ಅದೇನೆಂದರೆ, ಸ್ವಾಮಿಗಳೆಲ್ಲಾ ಸಮುದ್ರವನ್ನು ಲಂಘಿಸಿ ಹೋದರೆ ಅಡ್ಡಿಯಿಲ್ಲ; ಅಲ್ಲಿಯ ಆಮಿಷಗಳಿಗೆ ಬಲಿಯಾಗಬಾರದು, ಅಷ್ಟೇ. ಅಂದರೆ, ಸ್ವಾಮಿಗಳೇ ಅಲ್ಲಿಗೆ ಹೋದರೂ ಆಮಿಷಗಳ ಸೆಳೆತದಿಂದ ತಪ್ಪಿಸಿ ಕೊಳ್ಳಲಾರರು ಮತ್ತು ಸ್ವದೇಶದಲ್ಲಿ ಆಮಿಷಗಳ ದಾಸರಾದರೆ ಚಿಂತೆಯಿಲ್ಲ ಎಂದರ್ಥ. ಒಂದೇ ದಾರ್ಶನಿಕ ತತ್ತ್ವದ ಬೋಧನೆಗೆ ಎಂಟು ಮಠಗಳೇಕೆ ಬೇಕೆಂಬುದು ನಿಗೂಢವಾದ ವಿಚಾರ. ಅವನ್ನೆಲ್ಲಾ ಒಂದುಮಾಡಲಾಗುವುದಿಲ್ಲವೆ? ಇಲ್ಲವಾದರೆ ಅವನ್ನು ಸಾರ್ವಜನಿಕರಿಗೆ ಹಸ್ತಾಂತರಿಸಿ ಶ್ರೀಕೃಷ್ಣನಿಗೆ ದಿನನಿತ್ಯ ಯಥಾವತ್ತಾಗಿ ಪೂಜೆ ಸಲ್ಲುವಂತೆ ಮಾಡಿಬಿಡಬೇಕು. ಕಳೆದ ಒಂದು ದಶಕದಲ್ಲಿ ಮತಧಾರ್ಮಿಕ ಭಾವನೆಗಳನ್ನು ಅನುಭವಿಸುವುದಕ್ಕಿಂತಲೂ ಅದರ ಪ್ರದರ್ಶನವು ಉಗ್ರರೂಪ ತಾಳುತ್ತಿದೆ. ಅದನ್ನು ಭಕ್ತಿಭಾವವನ್ನಾಗಿ ಮಾರ್ಪಡಿಸುವುದೂ ಇದರಿಂದ ಸಾಧ್ಯವಾದೀತು.

*     *     *

ಕೇಂದ್ರದ ಅರ್ಥಸಚಿವ ಪಿ. ಚಿದಂಬರಂ ಡಿಸೆಂಬರ್ ಕೊನೆಯ ವಾರದಲ್ಲಿ ದೇಶದ ಉದ್ಯಮಿಗಳ ಸಭೆಯೊಂದರಲ್ಲಿ ಮಾತನಾಡುತ್ತಾ ಆರ್ಥಿಕ ನೀತಿಯ ಬಗ್ಗೆ ಎಡಪಕ್ಷಗಳ ಧೋರಣೆಯನ್ನು ಕಟುವಾಗಿ ಟೀಕಿಸಿದ್ದಾರೆ. ನೇರವಾಗಿ ಎಡಪಕ್ಷಗಳನ್ನು ಅವರು ಹೆಸರಿಸಲಿಲ್ಲ. ಆದರೆ ದೇಶದಲ್ಲಿ ಆರ್ಥಿಕ ಸುಧಾರಣೆಗಳು ಸ್ಥಗಿತಗೊಂಡಿರುವುದು, ಕೇಂದ್ರದ ನೀತಿಗಳನ್ನು ತೀವ್ರವಾಗಿ ವಿರೋಧಿಸುವವರಿಂದ ಎಂದು ನುಡಿದಿದ್ದಾರೆ. ಅಂತಹ ನೀತಿಗಳು ಯಾವುವೆಂಬುದನ್ನೂ ಅವರು ತಿಳಿಸಿದ್ದಾರೆ: ನಿವೃತ್ತಿ ವೇತನದ ಮೊಬಲಗನ್ನು ಖಾಸಗಿ ರಂಗದಲ್ಲಿ ತೊಡಗಿಸುವುದು, ಬ್ಯಾಂಕು ಮತ್ತು ಜೀವವಿಮಾ ಕ್ಷೇತ್ರಗಳಲ್ಲಿ ವಿದೇಶಿ ಬಂಡವಾಳವನ್ನು ಸ್ವಾಗತಿಸುವುದು, ಇತ್ಯಾದಿ. ಎಡಪಕ್ಷಗಳು ಇವನ್ನು ವಿರೋಧಿಸಿರುವುದು ಹೆಮ್ಮೆಯ ಸಂಗತಿ. ಅಂತೆಯೇ ಅದು ಜನಸಾಮಾನ್ಯರ ಪರವಾದ್ದು, ದೇಶದ ಸ್ವಾವಲಂಬನೆಗೆ ಪೂರಕವಾದ್ದು. ವಿದೇಶಗಳಲ್ಲೇ ತಮ್ಮ ಸಕಲ ಸೌಭಾಗ್ಯಗಳನ್ನು ಕಂಡುಕೊಳ್ಳುವ ಚಿದಂಬರಂ ಅವರಿಗೆ ಇದು ಅಪಥ್ಯವಾದರೆ ಜನತೆ ಏನು ಮಾಡಬೇಕು? ತಮ್ಮ ಹಿತವನ್ನು ಬಲಿಕೊಟ್ಟು ಖಾಸಗಿ ಬಂಡವಾಳಿಗರನ್ನು ಕೊಬ್ಬಿಸಬೇಕೆ?

ಅದೇ ಭಾಷಣದಲ್ಲಿ ಚಿದಂಬರಂ ನಮ್ಮ ದೇಶದ ಉನ್ನತ ಶಿಕ್ಷಣದ ಬಗ್ಗೆ ಪ್ರಸ್ತಾಪಿಸಿ ಇನ್ನೊಂದು ಬಾಣ ಬಿಟ್ಟಿದ್ದಾರೆ: ಈ ಕ್ಷೇತ್ರಕ್ಕೆ ಆಯವ್ಯಯ ಪತ್ರದಲ್ಲಿ ಹೆಚ್ಚಿನ ಹಣವನ್ನು ತೆಗೆದಿರಿಸಿದ್ದಾಗ್ಯೂ ಪ್ರಯೋಜನವಾಗಿಲ್ಲ, ಶಿಕ್ಷಣ ಮಟ್ಟವು ಉತ್ತಮ ಗೊಂಡಿಲ್ಲ; ಆದ್ದರಿಂದ ಈ ಕ್ಷೇತ್ರದಲ್ಲಿ ವಿದೇಶಿ ಬಂಡವಾಳದ ಹೂಡಿಕೆಯನ್ನು ಸ್ವಾಗತಿಸ ಬೇಕಾದ್ದು ಅನಿವಾರ್ಯ ಎಂಬುದು ಅವರ ಇಂಗಿತ. ಇಂತಹ ಅನರ್ಥ ಮಂತ್ರಿಯನ್ನು ವಿಜೃಂಭಿಸುವುದು ಬೇಡ, ಅವರ ಸ್ಥಾನದಿಂದ ನಿರ್ಗಮಿಸುವಂತೆ ಅವರಿಗೆ ಆದೇಶಿಸಬೇಕು.

ಉನ್ನತ ಶಿಕ್ಷಣ ಕ್ಷೇತ್ರದ ಪರಿಚಯವಿರುವವರಿಗೆಲ್ಲಾ ತಿಳಿದಿರುವಂತೆ ಕರ್ನಾಟಕದಲ್ಲಿ ಕಳೆದ ೨೦ ವರ್ಷಗಳಿಂದ ಅಧ್ಯಾಪಕರ ನೇಮಕಾತಿ ನಡೆದಿಲ್ಲ. ಪಾಠ ಪ್ರವಚನಗಳ ಗೊಡವೆ ಬೇಡ, ಶೈಕ್ಷಣಿಕ ವಾತಾವರಣದ ಕಾಳಜಿ ಬೇಡ; ಆದರೆ ಶಿಕ್ಷಣ ಮಟ್ಟ ಉತ್ತಮಗೊಳ್ಳಬೇಕು! ಖಾಸಗಿ ಶಿಕ್ಷಣ ಸಂಸ್ಥೆಗಳು ಈ ಬಗ್ಗೆ ಚಕಾರವೆತ್ತಿಲ್ಲ. ಎಲ್ಲವೂ ಅಧ್ಯಾಪಕ ಸಂಘಗಳ ಜವಾಬ್ದಾರಿಯೆಂಬಂತೆ ವರ್ತಿಸುವ ಸರ್ಕಾರ ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ದೇಶದ ಭವಿಷ್ಯದ ಬಗ್ಗೆ ಆಸಕ್ತಿ ಇದ್ದಂತೆ ತೋರುವುದಿಲ್ಲ. ಕರ್ನಾಟಕದ ಹಲವು ಕಾಲೇಜುಗಳ ಅಧ್ಯಾಪಕರಿಗೆ ಸಂಬಳ ನೀಡುವುದನ್ನು ಸರ್ಕಾರ ನಿಲ್ಲಿಸಿದೆ. ಕಾರಣ : ಅವು ನ್ಯಾಕ್ ಎಂಬ ಮಾಪನ ಸಮಿತಿಯ ದೃಷ್ಟಿಯಲ್ಲಿ ಕಳಪೆಯವು. ಕಳಪೆತನವನ್ನು ನಿವಾರಿಸಬೇಕೋ ಅಥವಾ ಅಧ್ಯಾಪಕರಿಗೆ ಸಂಬಳ ನಿಲ್ಲಿಸಬೇಕೋ ಎಂಬುದರ ವಿವೇಚನೆಯೂ ನಮ್ಮ ಸರ್ಕಾರಕ್ಕಿಲ್ಲ. ಅಧಿಕಾರಿಗಳು ಅಂತಹ ಬೃಹಸ್ಪತಿಗಳು. ಅಧ್ಯಾಪಕರಿಗೆ ಸಂಬಳ ಕೊಡದಿದ್ದರೆ ಶಿಕ್ಷಣ ಮಟ್ಟ ಮತ್ತು ಕಾಲೇಜುಗಳ ಸೌಲಭ್ಯಗಳು ಹೆಚ್ಚುತ್ತವೆಯೆ? ಸೌಲಭ್ಯಗಳಿಲ್ಲದ ಕಾಲೇಜುಗಳಿಗೆ ಮಾನ್ಯತೆ ನೀಡಿದ್ದು ಸರ್ಕಾರವೊ, ಅಧ್ಯಾಪಕರೊ? ಮಾನ್ಯ ಚಿದಂಬರಂ ಅವರು ಇಂತಹ ಪ್ರಶ್ನೆಗಳನ್ನು ಕುರಿತು ಚಿಂತಿಸುವುದು ಆರೋಗ್ಯಕರ. ಅವರು ತಮ್ಮ ಭಾಷಣದಲ್ಲಿ ''ಎಲ್ಲರನ್ನೂ ಒಳಗೊಳ್ಳುವ ಅಭಿವೃದ್ಧಿ'' ನಮ್ಮ ದೇಶದ ಆಶಯವೆಂದು ಘೋಷಿಸಿದ್ದಾರೆ. ''ಅಂತಹ ಅಭಿವೃದ್ಧಿ ಎಲ್ಲಿದೆ'' ಎಂದು ರಾಜ್ಯಸಭೆಯಲ್ಲಿ ಡಿ. ರಾಜ ಕೇಳಿದ್ದರು. ನಿಜಕ್ಕೂ ಎಲ್ಲರನ್ನೂ ಒಳಗೊಳ್ಳುವ ಅಭಿವೃದ್ಧಿಯು ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಆಗಿಹೋಗದ ಮಾತೆಂದು ಚಿದಂಬರಂ ಅವರು ತಿಳಿಯಬೇಕು.

*     *     *

ನಮ್ಮ ರಾಜ್ಯದಲ್ಲಿ ದೇವೇಗೌಡರ ಮತ್ತು ಯಡಿಯೂರಪ್ಪನವರ ಪಕ್ಷಗಳ ನಡುವೆ ಸಂಬಂಧಗಳು ಹಳಸಿದ್ದು, ಯಾರು, ಎಷ್ಟು ಬೇಗ, ಶ್ರೀಮಂತರಾಗಬೇಕೆಂಬ ಪ್ರಶ್ನೆಯ ಹಿನ್ನೆಲೆಯಲ್ಲಿ. ಪರಸ್ಪರ ನಿಂದನೆಯ ಜೊತೆ ಗಂಭೀರ ಆರೋಪಗಳನ್ನೂ ಪರಸ್ಪರರು ಮಾಡಿಕೊಂಡಿದ್ದಾರೆ. ಎಲ್ಲಾ ಕೋಟಿಗಟ್ಟಲೆ ವ್ಯವಹಾರಗಳು. ಅಷ್ಟೂ ಸಾರ್ವಜನಿಕ ಬೊಕ್ಕಸದ ಲೂಟಿಯೇ. ಸಮಗ್ರ ತನಿಖೆ ನಡೆಸಿ ಭ್ರಷ್ಟಾಚಾರದಲ್ಲಿ ತೊಡಗಿದ್ದವರನ್ನು ಶಿಕ್ಷಿಸಬೇಕು, ಲೂಟಿಯಾಗಿರುವ ಸಂಪತ್ತನ್ನು ಬೊಕ್ಕಸಕ್ಕೆ ಹಿಂದಿರುಗಿಸಬೇಕು ಮತ್ತು ರಾಜ್ಯದ ರಾಜಕೀಯ ವಾತಾವರಣವನ್ನು ಸ್ವಚ್ಛಗೊಳಿಸಬೇಕು. ಇದಕ್ಕೆ ಸಂಬಂಧಿಸಿದಂತೆ 'ಹೊಸತು' ರಾಜ್ಯಪಾಲರಿಗೆ ಒಂದು ಮನವಿಯನ್ನು ಸಲ್ಲಿಸಿದೆ. ಇತರರೂ ದನಿಗೂಡಿಸುವುದು ಅವಶ್ಯಕ.

*     *     *

ಹಣದ ಲೂಟಿಯು ಒಂದು ಭ್ರಷ್ಟಾಚಾರವಾದರೆ, ನಮ್ಮ ರಾಜ್ಯದ ಹಲವು ರಾಜಕೀಯ ಧುರೀಣರು ಪಕ್ಷಗಳನ್ನು ಬಿಟ್ಟು ಬೇರೆ ಪಕ್ಷಗಳಿಗೆ ಸೇರಿ ಕೊಳ್ಳುವುದು ಅಸಹ್ಯವಾದ ಪ್ರಹಸನವಾಗಿಬಿಟ್ಟಿದೆ. ಅದೂ ಭ್ರಷ್ಟಾಚಾರದ ಒಂದು ಭಾಗವಾಗಿದೆ. ಸಿದ್ಧಾಂತ ಮತ್ತು ನಂಬಿಕೆ ಈ ಪಕ್ಷಾಂತರಿಗಳಿಗೆ ತೀರಾ ಅಪ್ರಸ್ತುತ; ಎಲ್ಲಿದ್ದರೆ ಸ್ವಯಂವರ್ಧನೆ ಸಾಧ್ಯವೆಂಬುದೊಂದೇ ಅವರಿಗೆ ನಿರ್ಧಾರಕ ಸೂತ್ರವಾಗಿದೆ. ಹೀಗೆ ಪಕ್ಷಗಳಿಗೆ ಸೇರಿಕೊಳ್ಳುವುದಕ್ಕೆ ದೊಡ್ಡ ಸಮಾರಂಭಗಳು ಬೇರೆ! ಭ್ರಷ್ಟತೆಯನ್ನು ಹೀಗೆ ಬಹಿರಂಗವಾಗಿ ಒಪ್ಪಿಕೊಳ್ಳುತ್ತಿರುವ ರಾಜಕಾರಣಿಗಳ ಪ್ರಾಮಾಣಿಕತೆಗೆ ಅಭಿನಂದನೆಗಳು





## ಮುಖಪುಟ

ಈ ವರ್ಷದ 'ಹೊಸತು' ವಿಶೇಷ ಸಂಚಿಕೆಯ ಮುಖಪುಟವನ್ನು ಅಲಂಕರಿಸಿರುವ ವರ್ಣಚಿತ್ರಗಳು ಕಲಾವಿದ ದಂಪತಿ ಶಾಂತಕುಮಾರ್ ಹತ್ತರ್ಕಿ ಮತ್ತು ಜ್ಯೋತಿ ಹತ್ತರ್ಕಿಯವರ ಕೃತಿಗಳು.

ಮುಂಬೈನ ಜಹಾಂಗೀರ್ ಆರ್ಟ್ ಗ್ಯಾಲರಿಯಲ್ಲಿ ಇವರ ಕಲಾಕೃತಿಗಳ ಪ್ರದರ್ಶನ ನಡೆದು ಕಲಾಸಕ್ತರ ಮೆಚ್ಚುಗೆ ಗಳಿಸಿದವು.

ಜಿ. ಡಿ. ಆರ್ಟ್ ಪದವಿ ಪಡೆದಿರುವ ಶಾಂತಕುಮಾರ್ ಗುಲ್ಬರ್ಗಾ ಜಿಲ್ಲೆಯ ತಂಬಾಕ್‌ವಾಡಿಯಲ್ಲಿ ಜನಿಸಿದವರು. ಜನಪದ ಸಂಗೀತ ಕಲಾವಿದರು ಇವರ ಚಿತ್ರಗಳ ವಸ್ತು.

ಜ್ಯೋತಿ ಹತ್ತರ್ಕಿಯವರು ಗುಲ್ಬರ್ಗಾ ವಿಶ್ವವಿದ್ಯಾನಿಲಯದಿಂದ ಫೈನ್ ಆರ್ಟ್ಸ್‌ನಲ್ಲಿ ಎಂ.ಎ. ಪದವಿ, ಚಿನ್ನದ ಪದಕ ಸಹಿತ, ಪಡೆದವರು. ನಿಷ್ಕಳಂಕ ಪ್ರೀತಿ ತುಂಬಿದ ಸ್ತ್ರೀ-ಪುರುಷರು ಇವರ ಚಿತ್ರಗಳ ವಸ್ತು.

ತೊಂಬತ್ತರ ದಶಕದಿಂದ ಮುಂಬೈ ವಾಸಿಗಳಾಗಿರುವ ದಂಪತಿಗಳು ಹಲವು ಕಡೆ ತಮ್ಮ ಕೃತಿಗಳನ್ನು ಪ್ರದರ್ಶಿಸಿದ್ದಾರೆ. ಇಬ್ಬರದೂ ತಮ್ಮದೇ ಆದ ವಿಶಿಷ್ಟ ಶೈಲಿ.

– ಶ್ರೀನಿವಾಸ ಜೋಕಟ್ಟೆ




ಗೆಲ್ಲುವ ಕ್ರೂರ ವ್ಯಂಗ್ಯ ನಮ್ಮಲ್ಲಿದೆ.

ಈ ಕೆಳಮಟ್ಟದ ಅಕ್ರಮವು "ಅಕ್ರಮವನ್ನು ಸಕ್ರಮಗೊಳಿಸುವ ಯೋಜನೆ" ಯಲ್ಲಿ ಅಂತರ್ಗತವಾಗಿದೆ. ಇದರಲ್ಲಿ ಅತಿಹೆಚ್ಚಿನ ಲಾಭವಿರುವುದು ಸಾವಿರಾರು ಎಕರೆ ಭೂಮಿಯನ್ನು ಅಕ್ರಮವಾಗಿ ತಮ್ಮದನ್ನಾಗಿಸಿಕೊಂಡವರಿಗೆ ಎಂಬುದು ಮುಖ್ಯ ವಿಷಯ. ಈಗಾಗಲೇ ಅರ್ಜಿಗಳನ್ನು ನೀಡಿರುವ ಮಹನೀಯರು ಬಹುಮಟ್ಟಿಗೆ ಅಂತಹವರೇ ಆಗಿದ್ದಾರೆ. ಇತರರು ಹಾಕುತ್ತಿರುವ ಪ್ರಶ್ನೆ ಇದು: ಮೊದಲನೆಯದಾಗಿ, ಅಕ್ರಮಗಳನ್ನು ಆಗಗೊಟ್ಟಿದ್ದು ಏಕೆ ಮತ್ತು ಹೇಗೆ? ಆ ಪ್ರಸಂಗಗಳಲ್ಲಿ ಹಣವನ್ನು ನುಂಗಿದ ಅಧಿಕಾರಿಗಳು ಯಾರು, ಅವರೆಲ್ಲಿಗೆ ಹೋದರು, ಅವರ ಮೇಲೆ ಕಾನೂನು ಕ್ರಮ ಜರುಗಿಸುತ್ತಾರೆಯೆ? ಎರಡನೆಯದಾಗಿ, ಒಂದಷ್ಟು ಹಣ ಸುರಿದರೆ ಎಂತಹ ಅಕ್ರಮವೂ ಸಕ್ರಮವಾಗುವಂತಹ ವ್ಯವಸ್ಥೆಯನ್ನು ನಾವು ಬೆಳೆಸಬೇಕೆ?

ಒಟ್ಟಿನಲ್ಲಿ ನಮ್ಮ ರಾಜ್ಯವು ಭ್ರಷ್ಟತೆಯ ಕೂಪದಲ್ಲಿ ಮುಳುಗಿ ಹೋಗಿದೆ, ನಾಚಿಕೆಯಿಲ್ಲದ ನುಂಗಣ್ಣಗಳಿಗೆ ಆವಾಸಸ್ಥಾನವಾಗಿದೆ. ಚುನಾವಣೆಗಳಲ್ಲಿ ಮಾತ್ರವಲ್ಲದೆ ಸಾರ್ವಜನಿಕ ಪ್ರತಿಭಟನೆಗಳಲ್ಲಿಯೂ ಇಂತಹ ಅಧಃಪತನದ ವಿರುದ್ಧದ ಭಾವನೆಗಳು ಪ್ರಕಟವಾಗಬೇಕು. ರಾಜ್ಯದಲ್ಲಿ ನಾಗರಿಕರ ಯಾವ ತುರ್ತು ಅವಶ್ಯಕತೆಗಳ ಈಡೇರಿಕೆಯ ಭರವಸೆ ನೀಡಿ ಚುನಾವಣೆಗಳನ್ನು ಗೆಲ್ಲಬೇಕೆಂಬುದನ್ನು ಜನರೇ ನಿರ್ಮಾನಿಸಬೇಕು.

* * *

ನಮ್ಮ ದೇಶದಿಂದ ಅಷ್ಟೇನೂ ದೂರವಿಲ್ಲದ ಮಲಯೇಷ್ಯಾದಲ್ಲಿ ಅಶಾಂತಿಯ ವಾತಾವರಣ ಹಬ್ಬುತ್ತಿದೆ. ಅದಕ್ಕೆ ಸಲ್ಲದ ವಿವರಣೆ ನೀಡಿ ಹಿಂದು ಮತ ಧರ್ಮೀಯರನ್ನು ನಿಂದಿಸುವ ಪ್ರವೃತ್ತಿ ಕಂಡುಬರುತ್ತಿದೆ. ಬೇರೆಷ್ಟೋ ಇಸ್ಲಾಮಿ ದೇಶಗಳಂತೆ ಮಲಯೇಷ್ಯವು ಮೊಂಡು ಮತಧಾರ್ಮಿಕ ಕಟ್ಟಳೆಗಳನ್ನು ಪುರಸ್ಕರಿಸುವುದಿಲ್ಲ. ಆರ್ಥಿಕತೆ, ಶಿಕ್ಷಣ, ಸಾರಿಗೆ, ಆರೋಗ್ಯ ಹೀಗೆ ಎಲ್ಲ ಕ್ಷೇತ್ರಗಳಲ್ಲೂ ಸಾಕಷ್ಟು ಪ್ರಗತಿ ಸಾಧಿಸಿರುವ ದೇಶ ಅದು. ಬ್ರಿಟಿಷರ ವಸಾಹತಾಗಿದ್ದಾಗ ಮಲಯಕ್ಕೆ ಅನೇಕ ಭಾರತೀಯರು ಕೂಲಿಯಾಳುಗಳಾಗಿ ಹೋದರು. ಬ್ರಿಟನ್ನಿನ ನಿರ್ಬಂಧದಿಂದ ಹೋದವರೇ ಹೆಚ್ಚು. ಕೆಲವರು ಸ್ವಯಂ ಇಚ್ಛೆಯಿಂದಲೂ ಹೋಗಿರಬಹುದು. ಹೀಗೆ ಹೋಗಿ ಅಲ್ಲಿ ನೆಲೆಸಿದವರ ಎರಡು ಮತ್ತು ಮೂರನೆಯ ಪೀಳಿಗೆಯವರು ಬೇರೆ ಬೇರೆ ವರ್ಗಗಳಿಗೆ ಸೇರಿದ್ದಾರೆ. ಶ್ರೀಮಂತ ಉದ್ಯಮಿಗಳು, ವ್ಯಾಪಾರಗಾರರು ಇತ್ಯಾದಿ ಕೆಲವರಿದ್ದಾರೆ; ಆದರೆ ಹಲವರು ಈಗಲೂ ಹಳೆಯ ಗುಡಿಸಲುಗಳಲ್ಲಿ ವಾಸಿಸುತ್ತಿದ್ದಾರೆ, ಕನಿಷ್ಠ ಕೂಲಿ ಪಡೆಯುತ್ತಿದ್ದಾರೆ. "ಭೂಮಿಪುತ್ರ" ಎಂಬ ಕಲ್ಪನೆಯು ಮಲಯೇಷ್ಯಾದಲ್ಲಿ ಈಗ ಪ್ರಚಾರ ದಲ್ಲಿದೆ. ಅದರ ಪ್ರಕಾರ, ಎಂದೋ ಹೊರಗಿನಿಂದ ಬಂದು ನೆಲೆಸಿದವರು ದೇಶದ ಪ್ರಜೆಗಳಾದರೂ ಅವರಿಗೆ ಸಮಾನ ಹಕ್ಕುಗಳಿಲ್ಲ, ಅವಕಾಶಗಳಿಲ್ಲ. ಇದು ಅಲ್ಪಸಂಖ್ಯಾತರ ಅಥವಾ ಮತಧಾರ್ಮಿಕ ಅಸ್ಮಿತೆಯ ಪ್ರಶ್ನೆಯಲ್ಲ; ಅದು ಅವಕಾಶಗಳಿಂದ ವಂಚಿತರಾಗುವ ಪ್ರಶ್ನೆ. ಇದಕ್ಕೆ ಪ್ರತಿಭಟನೆಗಳು, ಸಭೆಗಳು, ಮೆರವಣಿಗೆಗಳು ಎಲ್ಲಾ ಜರುಗುತ್ತವೆ. ಅಂತರರಾಷ್ಟ್ರೀಯ ಮಾನವ ಹಕ್ಕುಗಳ ನೆಲೆಯಲ್ಲಿ ಇವೆಲ್ಲಾ ಪ್ರಜಾ ಪ್ರಭುತ್ವವಾದಿ ಕ್ರಮಗಳು. ಮಲಯೇಷ್ಯಾ ಸರ್ಕಾರಕ್ಕೆ ಇದರ ಅರಿವನ್ನು ಮೂಡಿಸುವುದು ಭಾರತ ದೇಶವೊಂದರ ಜವಾಬ್ದಾರಿಯಲ್ಲ. ಭಾರತ ಸರ್ಕಾರವು ಇದನ್ನು ವಿಶ್ವಸಂಸ್ಥೆಯ ಮಹಾ ಕಾರ್ಯದರ್ಶಿಯವರಿಗೆ ಸ್ಪಷ್ಟವಾಗಿ ಮನದಟ್ಟು ಮಾಡಿಸಬೇಕು.

* * *

ಗುಜರಾತ್, ಮತ್ತು ಹಿಮಾಚಲ ಪ್ರದೇಶಗಳ ಚುನಾವಣಾ ಫಲಿತಾಂಶ ಹೊರ ಬಿದ್ದು ತಾನು ಸಂಪೂರ್ಣವಾಗಿ ಸೋತಿದ್ದರೂ ಕಾಂಗ್ರೆಸ್ ಪಕ್ಷವು ಆತ್ಮಾವಲೋಕನ ಮಾಡಿಕೊಂಡಿಲ್ಲ, ಅದು ಆ ಪಕ್ಷದ ಸಂಪ್ರದಾಯಕ್ಕೆ ಹೊಂದಿಕೊಂಡಿದೆ. ಸೋತ ಪಕ್ಷಗಳು ಕೆಲವೊಮ್ಮೆ ಸಮಿತಿಗಳನ್ನು ರಚಿಸಿಕೊಂಡು ಸೋಲಿಗೆ ಕಾರಣಗಳನ್ನು ಸಂಶೋಧಿಸಿಕೊಳ್ಳುತ್ತವೆ. ಜನರು ಇವರ ನೀತಿಗಳಿಂದ ರೋಸಿಹೋಗಿದ್ದಾರೆ, ಅವರಿಗೆ ಅತೃಪ್ತಿ ಇದೆ, ಅವರ ಮನಸ್ಸು ಗೆಲ್ಲಲು ಸಂಶೋಧನೆಗಳು ಬೇಕಿಲ್ಲ – ಬೇಕಿರುವುದು ಸಾಮಾಜಿಕ - ಆರ್ಥಿಕ - ಸಾಂಸ್ಕೃತಿಕ ನೀತಿಗಳ ಮಾಪನ ಮತ್ತು ಕಾರ್ಯಕ್ರಮಗಳ ಅಚ್ಚುಕಟ್ಟಾದ ಅನುಷ್ಠಾನ ಎಂಬ ಪ್ರಾಥಮಿಕ ಗ್ರಹಿಕೆ ಇಲ್ಲ. ಐದು ವರ್ಷಗಳ ಆಡಳಿತ ನಡೆಸುವಾಗ ಜನವಿರೋಧಿ ನೀತಿಗಳನ್ನು ಜಾರಿಗೆ ತರುವ ಕಾಂಗ್ರೆಸ್ ಪಕ್ಷವು ವಿರೋಧ ಪಕ್ಷವಾಗಿದ್ದಾಗ ಸ್ವಪ್ನಾವಸ್ಥೆಯಲ್ಲಿರುತ್ತದೆ. ಜನಸಾಮಾನ್ಯರ ಬೇಕು-ಬೇಡಗಳನ್ನು ತಿಳಿದು, ಸಂಘಟನಾತ್ಮಕವಾಗಿ ಅವರ ಸನ್ನಿವೇಶಕ್ಕೆ ಪ್ರತಿಕ್ರಿಯಿಸುವ ಹವ್ಯಾಸವನ್ನು ಈ ಪಕ್ಷ ಬೆಳೆಸಿಕೊಂಡಿಲ್ಲ. ಉದಾಹರಣೆಗೆ, ಭಾರತೀಯ ಜನತಾ ಪಕ್ಷ ಅಥವಾ ಅದರ ಬೆಂಬಲಿಗರು ದೂರದರ್ಶನ - ಆಕಾಶವಾಣಿಯಂತಹ ಮಾಧ್ಯಮಗಳನ್ನು ಬೌದ್ಧಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಹೇಗೆ ದುರ್ಬಳಕೆ ಮಾಡಿಕೊಳ್ಳುತ್ತಿರಬಹುದೆಂಬುದನ್ನು ಕಾಂಗ್ರೆಸ್ ಧುರೀಣರು ಎಂದೂ ಪರೀಕ್ಷಿಸಿಲ್ಲ. ಹಾಗಾಗುತ್ತಿದ್ದರೆ ತಮ್ಮ ಜವಾಬ್ದಾರಿಯೇನೆಂಬ ಪ್ರಶ್ನೆಯೂ ಇಲ್ಲ. ಹೋಗಲಿ, ರೈತರ ಸಂಕಷ್ಟಗಳಿಗೆ ಸಕ್ರಿಯವಾಗಿ ಸ್ಪಂದಿಸುವ ಪಕ್ಷವಾಗಿಯೂ ಕಾಂಗ್ರೆಸ್ ಬೆಳೆದಿಲ್ಲ. ಯಾವುದೋ ನಾಯಕನ ಹುಟ್ಟುಹಬ್ಬದ ಸಂಭ್ರಮ, ರಾಹುಲ ಗಾಂಧಿಯ ಅಷ್ಟೋತ್ತರ ಶತನಾಮಾವಳಿ, ಇಂಥವೇ ಆ ಪಕ್ಷದ ಕಾರ್ಯಕ್ರಮಗಳು. ಪಕ್ಷದಲ್ಲಿ ಸದಸ್ಯರು ದೇಶದ ಆರ್ಥಿಕ, ವಿದೇಶಾಂಗ, ಶಿಕ್ಷಣ ನೀತಿಗಳಂತಹ ಪ್ರಮುಖ ವಿಷಯಗಳನ್ನು ಚರ್ಚಿಸಿ ದಶಕಗಳೇ ಕಳೆದುಹೋಗಿವೆ. ಸಹಜವಾಗಿಯೇ ಜನ ಆ ಪಕ್ಷದಿಂದ ವಿಮುಖರಾಗುತ್ತಾರೆ, ಕಾರ್ಯಕರ್ತರು ಅಹಂಕಾರದಿಂದ ಮೆರೆಯುತ್ತಾರೆ, ವಶೀಲಿ ಕೆಲಸಗಳಲ್ಲಿ ನಿರತರಾಗುತ್ತಾರೆ. ಮನಮೋಹನ ಸಿಂಗರ ಸಚಿವ ಸಂಪುಟದ ಅನೇಕರು ಜನರಿಂದ ದೂರವಿರುವ ಶಿಸ್ತನ್ನು ಚೆನ್ನಾಗಿ ಪರಿಪಾಲಿಸುತ್ತಾರೆ. ಕೋಮುವಾದಿ ಸಂಘರ್ಷಗಳಾದಾಗಲೂ ಇವರು ವಿಚಲಿತರಾಗುವುದಿಲ್ಲ. ಚುನಾವಣೆಗಳಲ್ಲಿ ಗೆಲ್ಲುವುದೆಂದರೆ ಜನರ ಹತ್ತಿರ ಹೋಗಿ ಅವರ ಮನಸ್ಸನ್ನು ಮೊದಲು ಗೆಲ್ಲಬೇಕೆಂಬುದನ್ನು ಕಾಂಗ್ರೆಸ್ ಪಕ್ಷ ಈಗಲಾದರೂ ತಿಳಿದುಕೊಳ್ಳಬೇಕು.

[signature]

# ಪರಿವಿಡಿ

## ಪರಿವಿಡಿ




ಮುಖಚಿತ್ರ : ಜ್ಯೋತಿ ಹತ್ತರ್ಕಿ, ಶಾಂತಕುಮಾರ್ ಹತ್ತರ್ಕಿ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಈ ಸಂಚಿಕೆಯ ಚಿತ್ರಗಾರರು : ಸೃಜನ್, ಮೋನಪ್ಪ, ಶ್ರೀಹರಿ ಹರಿಣ, ಕೆದಿಲಾಯ, ರಾಂಚಂದ್ರ ಕೊಪ್ಪಲು ವಿವೇಕಾನಂದ, ಬಿ. ವಿಲ್ಸನ್, ಗುಜ್ಜಾರ್ ಕಮಲಂ ಅರಸು, ಅಜ್ಜೀಪುರ, ಜಿ. ಎಂ. ಬೊಮ್ನಳ್ಳಿ
ಕಚೇರಿ ಸಹಕಾರ : ಜಿ. ವಿ. ತೇಜೋವತಿ
















## ಡಿಸೆಂಬರ್ ಸಂಚಿಕೆ

ಅವ್ಯವಸ್ಥೆಯಲ್ಲೊಂದು ವ್ಯವಸ್ಥೆ, ಪೇಟೆಯ ಸಂತೆ, ಬಣ್ಣಗಳ ಸಂತೆ, ತರಕಾರಿ - ಧಾನ್ಯ ಸಂತೆ, ಮುಖಗಳ ಸಂತೆ, – ಹೀಗೆ ಕೆ. ಪಿ. ಸ್ವಾಮಿಯವರ 'ವರ್ಣಚಿತ್ರ' 'ಹೊಸತು' ಮುಖಪುಟ ನೋಡಿ ಹಲವು ಸಂತೆಗಳು ಬಂದುಹೋದುವು. ಸಂತೋಷವಾಯಿತು. ಅದನ್ನು ಕೊಟ್ಟುದಕ್ಕೆ ಅಭಿನಂದನೆಗಳು.

ಮೈಸೂರು **ಅಡ್ಡನಡ್ಕ ಕೃಷ್ಣಭಟ್ಟ**

ಡಿಸೆಂಬರ್ ೦೭ರ ಸಂಚಿಕೆಯಲ್ಲಿ ಹಾಲಾಡಿ ಮಾರುತಿ ರಾವ್‌ರ 'ಸಂತೆಗಳು ಏನಾಗುತ್ತಿವೆ ?' ಎಂಬ ಕಳಕಳಿಯ ಬರಹಕ್ಕೆ ಉತ್ತಮವೆಂಬಂತೆ 'ಸಂತೆಯ ಸಡಗರ' ಲವಲವಿಕೆಯ ಮುಖಪುಟ ಹಾಕಿರುವುದು ಯೋಗಾಯೋಗವೇ. ಮತ್ತೆ, 'ಈ ತಿಂಗಳು'ವಿನಲ್ಲಿ, ಅಧಿಕಾರ ದಾಹ ಮತ್ತು ಕುರ್ಚಿಯ ಮೋಹದ ಕುರಿತು ಮಾಡಿರುವ ಟಿಪ್ಪಣಿಯಲ್ಲಿ ನಮ್ಮ ಪುಢಾರಿಗಳು ಮಾಡುವ ಬಾಲಿಶತನ, ಫೂಲಿಷ್‌ತನವನ್ನು ಸ್ವಲ್ಪದರಲ್ಲಿಯೇ ಜಾಲಾಡಿಸುತ್ತ ನಾಮಾಂತರದ ಪ್ರಹಸನದಲ್ಲಿ ಮಾತ್ರೆಗಳನ್ನು 'ಯಡ್ಡಿ- ಚೆಡ್ಡಿ' ಎಂಬುದಾಗಿ ಆರಕ್ಕೆ ಇಳಿಸಿದರೆ ಸೂಕ್ತವಾಗಬಹುದೇನೋ ಎಂದು ಸೂಚಿಸಿದ್ದು ಯೋಗ್ಯವೇ. ಪರಂತು, ನಿರ್ಲಜ್ಜತೆಯಿಂದ ಎಲ್ಲರೂ ಚೆಡ್ಡಿ ಕಳಚಿ ನಿಂತಂತೇ ಆಗಿದೆಯಲ್ಲ; ಎಲ್ಲರೂ ಬತ್ತಲಾಗಿಬಿಟ್ಟರು. ಯೋಗಾಯೋಗವೆಂದರೆ ಇದೇ ಸಂಚಿಕೆಯಲ್ಲಿ 'ಬತ್ತಲಾಗಿ ಬಾ ನೀನು ನನ್ನಲ್ಲಿಗೆ' ಎಂಬ ಹೆಡ್ಡಿಂಗ್‌ನ ಕವನವೂ ಇರಬೇಕೇ !!

ಬೆಳಗಾವಿ **ಅನಂತ ಕಲ್ಲೋಳ**

''ಕನಸು ಅರಳದೆ ಪಯಣ ಮುಗಿಸಿದ ಪ್ರೇಮಾ'' ಎನ್. ಮಂಗಳಾರವರ ಲೇಖನಿಯಿಂದ ವಾಸ್ತವಿಕ ಪ್ರಸ್ತಾವನೆಯಾಗಿ ಸೂಕ್ತ ಶ್ರದ್ಧಾಂಜಲಿಯಾಗಿ ಮೂಡಿಬಂದಿದೆ.

ರಂಗಾಯಣದ ಗುರುಪತ್ನಿಯೆಂದು ಲೇಖಕಿ ಅವರಿಗೆ ಸಲ್ಲಿಸಿರುವ ನಮನ, ಅವರು ನಿಜಕ್ಕೂ ಅರಳಬೇಕಾಗಿದ್ದ 'ಪ್ರೇಮ-ಕುಸುಮ', ತಮ್ಮ ಕನಸುಗಳನ್ನು ತಮ್ಮೊಟ್ಟಿಗೆ ಹೊತ್ತೊಯ್ದಿದ್ದಾರೆನ್ನುವ ವಿಷಯವನ್ನು ಲೇಖಕಿ ತೆರೆದಿಟ್ಟಿದ್ದಾರೆ.

ಬೆಂಗಳೂರು ನೆ. ಲ. ರಾಂ.

ವಂದನೆಗಳು. ಡಿಸೆಂಬರ್ ತಿಂಗಳ 'ಹೊಸತು' ತುಂಬಾ ಚೆನ್ನಾಗಿದೆ (ಪ್ರತಿ ಬಾರಿಯಂತೆ!), ಅಭಿನಂದನೆಗಳು. 'ತಿಳಿವು' ವಿಭಾಗದಲ್ಲಿ ಬೆಳಕು ಕಂಡ 'ಮಾನವೀಯತೆಯ ಮುಂದೆ ಧರ್ಮ ನಿಲ್ಲುವುದೇ?' ಲೇಖನ ತುಂಬಾ ವಿಚಾರಪ್ರದವಾಗಿತ್ತು. ನಿಜ, ಮಾನವೀಯತೆಯ ಮುಂದೆ ಧರ್ಮ ಗೌಣವಾಗಲೇ ಬೇಕು. ಆಗ ಮಾತ್ರ ಬದುಕು ಸಹನೀಯ : ನಮಗೂ, ಪರರಿಗೂ. ನಮ್ಮ ಅನುಭವವೊಂದು ಹೀಗಿದೆ :

ಅಂದು ವರ್ಷಗಳ ಹಿಂದೆ ಅಯೋಧ್ಯೆ-ಬಾಬ್ರಿ ಮಸ್ಜಿದ್ ಗಲಾಟೆ ನಡೆದಾಗ, ಎಲ್ಲೆಡೆ ಕೋಮುಗಲಭೆ ನಡೆದಿತ್ತು. ಜೊತೆಗೇ ಅದೆಷ್ಟೋ ಕಡೆ, ಕೋಮು ಸಾಮರಸ್ಯ, ಮಾನವೀಯತೆಯೂ ಮೆರೆದಿತ್ತು! ಅಂದು, ಸರಕಾರೀ ವೈದ್ಯರಾಗಿದ್ದ ನನ್ನ ಪತಿ (ಇಂದು ನಿವೃತ್ತರು)



ಬೆಳಿಗ್ಗೆ ಆರೋಗ್ಯಕೇಂದ್ರಕ್ಕೆ ಹೊರಟಿದ್ದರು. ಅರ್ಧ ದಾರಿ ಕ್ರಮಿಸಿದ್ದರಷ್ಟೇ. ಅಷ್ಟರಲ್ಲಿ ಉದ್ರಿಕ್ತ ಯುವಕರ ಗುಂಪೊಂದು ಅವರ ಕಾರನ್ನು ತಡೆಗಟ್ಟಿ ಹಿಂದೆ ಹೋಗುವಂತೆ ಆಜ್ಞಾಪಿಸಿತು. ಅವರು ಕಾರಿಗೆ ಬೆಂಕಿ ಹಾಕುತ್ತೇವೆಂದು ಬೆದರಿಸಿದರು. ಚಾಲಕ ಹಾಗೂ ನನ್ನ ಪತಿಯನ್ನು ಸುತ್ತುವರೆದು ನಿಂದಿಸತೊಡಗಿದರು. ಪರಿಸ್ಥಿತಿ ಬಿಗಡಾಯಿಸತೊಡಗಿತು. ಅಷ್ಟರಲ್ಲಿ, ಅಲ್ಲಿಯೇ ಸಮೀಪ ವಾಸವಾಗಿದ್ದ ಸಜ್ಜನರೊಬ್ಬರು ಕಾರನ್ನು ಅವರ ಗ್ಯಾರೇಜಿನಲ್ಲಿರಿಸಿ ಭದ್ರವಾಗಿ ಬೀಗ ಹಾಕಿಟ್ಟರು. ಇವರಿಬ್ಬರೂ ಕಾಲ್ನಡಿಗೆಯಲ್ಲಿ ಗೃಹಾಭಿಮುಖವಾಗಿ ಹೊರಟರು. ಮೈಲೊಂದು ನಡೆಯುವಷ್ಟರಲ್ಲಿ ಇಬ್ಬರೂ ಸುಸ್ತೋ ಸುಸ್ತು. ಮತ್ತೂ ಅದೆಷ್ಟೋ ಮೈಲುಗಳು ಬಾಕಿ ಇದ್ದವು. ಆಗ, ಮಾರ್ಗದ ಬದಿಯ ಮನೆಯೊಂದರ ಒಡೆಯರು ಇಬ್ಬರನ್ನೂ ಮನೆಗೆ ಕರೆದುಕೊಂಡು ಹೋಗಿ ಕುಳ್ಳಿರಿಸಿದರು. ಮರದಿಂದ ಸೀಯಾಳ ಕೊಯ್ಯಿಸಿ, ತಂಪಾದ ಸಿಹಿನೀರನ್ನು ಕುಡಿಸಿದರು. ರಸ್ತೆ ನಿರ್ಜನವಾಗಿತ್ತು. ಒಂದೇ ಒಂದು ವಾಹನ ಓಡುತ್ತಿರಲಿಲ್ಲ. ಸ್ವಲ್ಪ ಹೊತ್ತು ಸುಧಾರಿಸಿಕೊಂಡ ನಂತರ ಪಾದಚಾರಿಗಳಿಬ್ಬರೂ ಹೊರಟರು. ಆಗ ಆ ಸಜ್ಜನ ಮನೆ ಒಡೆಯರು ತಮ್ಮ ದ್ವಿಚಕ್ರವಾಹನದ ಬೀಗದ ಕೈಯನ್ನು ಅವರ ಕೈಯಲ್ಲಿರಿಸಿ, ಅದರಲ್ಲಿ ಹೋಗುವಂತೆ ಕೇಳಿಕೊಂಡರು. ಗಲಾಟೆ ಮುಗಿದ ನಂತರ ಹಿಂದಿರುಗಿಸಿದ[...] ಸಾಕೆಂದು ಹೇಳಿದರು. ಅವರಿಗೆ ಧನ್ಯವಾದಗಳನ್ನರ್ಪಿ[...] ನನ್ನ ಪತಿ ಹಾಗೂ ಚಾಲಕ ಸುತ್ತು ಬಳಸು ದಾರಿಯ[...] ಮನೆ ಸೇರಿದಾಗ ಮಧ್ಯಾಹ್ನ ಮೂರು ಘಂಟೆ ! ಅಂತ[...] ಇಬ್ಬರು ಸಜ್ಜನರು ತೋರಿದ ಮಾನವೀಯತೆಯಿಂ[...] ಅಂದು ನಮ್ಮವರ ಕಷ್ಟ ದೂರವಾಗಿತ್ತು ! ವಿಶೇ[...]ವೆಂದರೆ, ಆ ಇಬ್ಬರೂ ಸಜ್ಜನರು ನನ್ನ ಕೋಮಿನವರ[...] ಅಂದು ಅವರ ಅಭಯ ಹಸ್ತ ದೊರೆಯದಿರುತ್ತಿದ್ದ[...] ನಮ್ಮ ಅವಸ್ಥೆ ಏನಾಗುತ್ತಿತ್ತೋ ! ಮಾನವೀಯತೆ[...] ಮುಂದೆ ಧರ್ಮ ಹಿಂದೆ ಸರಿದಿತ್ತು.

ಹೊಸ ವರ್ಷ ಎಲ್ಲರಲ್ಲೂ ಮಾನವೀಯತೆಯ[...] ಹೆಚ್ಚಿಸಲಿ.

ಕಳನಾಡು, ಕಾಸರಗೋಡು ಜಿಲ್ಲೆ **ಮಾಲತಿ ಕಮಲ[...]**

### ಎಲ್ಲಿ ಕನ್ನಡ ?

ಕರ್ನಾಟಕದ ಭಾಷೆ – ಕನ್ನಡವಾದರೂ ಇ[...] ಜನರು ಯಾರೂ ಕನ್ನಡವನ್ನು ಭಾಷೆಯಾಗಿ ಬಳಸುತ್ತಿ[...] ಉದಾ : ಚಿಕ್ಕೋಡಿ, ನಿಪ್ಪಾಣಿ. ಈ ಪ್ರದೇಶದಲ್ಲಿ ಕನ್ನ[...]ವನ್ನು ಹೆಚ್ಚು ಜನ ಮಾತನಾಡುತ್ತಿಲ್ಲ. ಅವರು ಮರಾ[...] ಭಾಷೆಯನ್ನು ಮಾತ್ರ ಮಾತನಾಡುತ್ತಾರೆ. ನೀವು ಕನ್ನ[...] ಕಾರ್ಯಕ್ರಮಗಳನ್ನು - ಈ ಪ್ರದೇಶಗಳಲ್ಲಿ ಹಮ್ಮಿಕೊಳ್ಳಿ[...] ಬರೀ ಬೆಂಗಳೂರಿನಲ್ಲಿ ಮಾತ್ರ ಕಾರ್ಯಕ್ರಮಗಳನ[...] ಹಮ್ಮಿಕೊಳ್ಳುವುದರಿಂದ ಏನೂ ಪ್ರಯೋಜನವಿಲ್ಲ[...] ಇಂತಹ ಪ್ರದೇಶಗಳಲ್ಲಿ ಹಮ್ಮಿಕೊಂಡರೆ ಮುಂದಾದರೂ ಏನಾದರೂ ಪ್ರಯೋಜನವಾಗಬಹುದು ಎಂದು ಭಾವಿಸುತ್ತೇನೆ.

ಚಿತ್ರದುರ್ಗ **ಎಚ್. ಆರ್. ಮುಕುಂದ[...]**

---

**ಕವನಗಳಿಗೆ ಆಹ್ವಾನ**

ಜನಪ್ರಿಯ ಪ್ರಕಾಶನವು ರಾಜ್ಯ ಮಟ್ಟದ ಕವನ ಸಂಕಲನವೊಂದನ್ನು ಹೊರತರುತ್ತಿದೆ. ಲೇಖಕ/ ಲೇಖಕಿಯರಿಂದ ಕವನಗಳನ್ನು ಆಹ್ವಾನಿಸಲಾಗಿದೆ. ಚುಟುಕು-ಹನಿಗವನಗಳಿಗೂ ಸ್ವಾಗತವಿದೆ.

ಕವನಗಳು ಸ್ವರಚಿತವಾಗಿದ್ದು ಸ್ಪಷ್ಟ ಅಕ್ಷರಗಳಿಂದ ಬರೆದಿರಬೇಕು, ಅಥವಾ ಟೈಪ್ ಮಾಡಿರಬೇಕು. ಆಯ್ಕೆಯಾದ ಕವನಗಳನ್ನು ಕವಿಗಳ ಭಾವಚಿತ್ರದೊಂದಿಗೆ ಸಂಕಲನದಲ್ಲಿ ಪ್ರಕಟಿಸಲಾಗುವುದು. ಅತ್ಯುತ್ತಮವಾದ ಎರಡು ಕವನಗಳಿಗೆ ಪ್ರಥಮ ಹಾಗೂ ದ್ವಿತೀಯ ಬಹುಮಾನವಿರುತ್ತದೆ. ಮಹಿಳಾ ವಿಭಾಗದಲ್ಲಿ ಪ್ರತ್ಯೇಕ ಬಹುಮಾನವಿರುತ್ತದೆ.

ಆಸಕ್ತರು ತಮ್ಮ ಕವನಗಳ ಜೊತೆಗೆ ಇತ್ತೀಚಿನ ಭಾವಚಿತ್ರ ಲಗತ್ತಿಸಿ ೨೦/-ರೂ. ಪ್ರವೇಶ ಶುಲ್ಕದೊಂದಿಗೆ ೩೦-೧-೨೦೦೮ರೊಳಗಾಗಿ **ಸಂಪಾದಕರು/ ಪ್ರಕಾಶಕರು ಪೋಸ್ಟ್ ಬಾಕ್ಸ್ ನಂ. ೬೪, ಮ. ನಂ. ೬-೪-೩೪, ತೇಲಿ ಗಲ್ಲಿ, ಗವಾನ ಚೌಕ್, ಬೀದರ - ೫೮೫ ೪೦೧** ಇವರಿಗೆ ಕಳುಹಿಸಬಹುದಾಗಿದೆ.

# ಕನ್ನಡ ಕೈಲಾಸ ನಿರ್ಮಿಸುವ ಕನಸು ಕಂಡ ಶರಣ



ಚಿತ್ರ ಸೌಜನ್ಯ : ಶ್ರೀ ಕೆ. ಜಿ. ಸೋಮಶೇಖರ್ ; ''ಅಂತರಜಾಲ''ದಿಂದ.

(೨೮.೧೧.೧೯೪೨ – ೨೮.೧೨.೨೦೦೭)

**ಕ**ನ್ನಡನಾಡಿನ ಅಪಾರ ಶಿಷ್ಯಕೋಟಿಗೆ 'ರಾಜು ಮೇಷ್ಟ್ರು' ಎಂದೇ ಪರಿಚಿತರಾದ ಆದರ್ಶ ಶಿಕ್ಷಕ ಪ್ರೊ|| ಚಿ. ಶ್ರೀನಿವಾಸರಾಜು ಇನ್ನಿಲ್ಲ. ಈ ಆದರ್ಶ ಅಧ್ಯಾಪಕ ಅದೆಷ್ಟು ಶಿಷ್ಯಂದಿರ ಪ್ರತಿಭೆಗೆ ಲಗ್ಗೆ ಹಾಕಿ ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸುವ ಕಾಯಕದಲ್ಲಿ ನಿರತರಾಗಿದ್ದರೊ ! ಡಾ|| ಎಚ್. ಎಸ್. ವೆಂಕಟೇಶಮೂರ್ತಿಯವರು 'ಕನ್ನಡ ಶಬ್ದ ಜಗತ್ತಿನ ನಿಶ್ಶಬ್ದ ಆರಾಧಕ' ಎಂದು ದಿ|| ಶ್ರೀನಿವಾಸರಾಜುರವರನ್ನು ಅನ್ವರ್ಥವಾಗಿ ಕರೆದಿದ್ದಾರೆ. ಕನ್ನಡ ಸಂಸ್ಕೃತಿ ದೇವತೆಯ ಈ ನಿಶ್ಶಬ್ದ ಆರಾಧಕ ಇಂದು ಸಂಪೂರ್ಣವಾಗಿ ನಿಶ್ಶಬ್ದವಾಗಿದ್ದಾರೆ. ಬೆಂಗಳೂರಿನಲ್ಲಿ ವಾಸಮಾಡುತ್ತಲೆ ನಾಡಿನ ಮೂಲೆ ಮೂಲೆಯ ಎಳೆಯ ಕವಿ ಮನಸ್ಸುಗಳಿಗೆ ಪ್ರೋತ್ಸಾಹದ ನೀರನ್ನೆರೆಯುತ್ತಾ ಕಾವ್ಯೋದ್ಯಾನದ ಕನಸು ಕಂಡ ಆದರ್ಶ ಸಾಹಿತ್ಯ ಕೃಷಿಕ, ರಾಜರತ್ನಂರವರ ವ್ಯಕ್ತಿತ್ವದಿಂದ ಆಕರ್ಷಿತರಾಗಿ ಸಾಹಿತ್ಯ ಪರಿಚಾರಿಕೆಯ ಪರಂಪರೆಯನ್ನು ತಮ್ಮದೇ ವಿಶಿಷ್ಟ ರೀತಿಯಲ್ಲಿ ಮುಂದುವರೆಸಿದವರು. ಕವಿ, ನಾಟಕಕಾರ, ಸಾಹಿತ್ಯ ವಿಮರ್ಶಕ – ಎಲ್ಲವೂ ಆದ ಈ ಸಾಹಿತಿಯ ಸಾಹಿತ್ಯ ಪ್ರತಿಭೆ ಪ್ರಕಾಶಗೊಂಡದ್ದು ಅವರು ನೀರೆರೆದು ಪೋಷಿಸಿದ ಎಳೆಯ ಬರಹಗಾರರ ಪ್ರತಿಭೆಯ ಮೂಲಕವೇ. ಕ್ರೈಸ್ಟ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರಾದರೂ ಅವರ ಗುರು ಪರಂಪರೆಯ ಬಿಳಿಲುಗಳು ನಾಡಿನಲ್ಲೆಲ್ಲಾ ವಿಶಾಲವಾಗಿ ವ್ಯಾಪಿಸಿದ್ದುವು.

ಕನ್ನಡದಲ್ಲಿ ಕಿರುಪತ್ರಿಕೆಗಳು, ಸಾಹಿತ್ಯ ಪತ್ರಿಕೆಗಳಿಗೆಲ್ಲಾ ಚಿರಂಜೀವಿಯಾಗಿದ್ದ ಶ್ರೀನಿವಾಸರಾಜುರವರು ನಮ್ಮ 'ಹೊಸತು' ಪತ್ರಿಕೆಯ ಸಂಪಾದಕ ಮಂಡಳಿಯ ಸಕ್ರಿಯ ಸದಸ್ಯರು. ಪತ್ರಿಕೆ ಆರಂಭವಾದ ಕಳೆದ ಒಂಭತ್ತು ವರ್ಷಗಳಿಂದಲೂ ನಮ್ಮ ಪತ್ರಿಕೆಗೆ ಹಲವಾರು ರೀತಿಯಲ್ಲಿ ಕೆಲಸ ಮಾಡಿದ್ದಾರೆ. ನಾಡಿನ ಹಲವಾರು ಹೊಸ ಬರಹಗಾರರನ್ನು ಪತ್ರಿಕೆಗೆ ಪರಿಚಯಿಸಿರುವುದಲ್ಲದೆ ಪತ್ರಿಕೆಯ ಮೌಲಿಕತೆ ಮತ್ತು ಅರ್ಥವ್ಯಾಪ್ತಿಯನ್ನು ಹಿಗ್ಗಿಸಲು ಹಲವು, ಹತ್ತು ರೀತಿಯಲ್ಲಿ ಶ್ರಮಿಸಿದ್ದಾರೆ. ಪ್ರತಿ ವಿಶೇಷ ಸಂಚಿಕೆಗೂ ವಿಶೇಷ ಆಸಕ್ತಿ ವಹಿಸಿ ಪತ್ರಿಕೆಯನ್ನು ವಿನೂತನವಾಗಿ ತರಲು ಶ್ರಮಿಸುತ್ತಿದ್ದರು. ಈ ಬಾರಿಯ ವಿಶೇಷ ಸಂಚಿಕೆಯಲ್ಲಿ ಅವರು ಮತ್ತು ಅವರ ಧರ್ಮಪತ್ನಿಯವರೂ ಸೇರಿ ತಮ್ಮ ಅನುಭವವನ್ನು ಒಟ್ಟಾಗಿ ಹಂಚಿಕೊಂಡ ಅಪರೂಪದ ಲೇಖನವೊಂದಿದೆ. ಅದೇ ಅವರ ಕೊನೆಯ ಲೇಖನವೇನೋ! ೨೦೦೫ರ 'ಹೊಸತು' ವಾಚಿಕೆ ಮಾಲೆಯಲ್ಲಿ 'ಪರಿಮಳದ ಸುಗ್ಗಿ' ಎಂಬ ಶೀರ್ಷಿಕೆಯಲ್ಲಿ ಕವನಗಳ ಸಂಗ್ರಹವನ್ನು ಸಂಪಾದಿಸಿಕೊಟ್ಟಿದ್ದ ಶ್ರೀನಿವಾಸರಾಜು ನವಕರ್ನಾಟಕ ಪ್ರಕಾಶನದೊಂದಿಗೆ ಹಲವು ವರ್ಷಗಳ ಸಂಪರ್ಕ ಹೊಂದಿದ್ದವರು. ಸದ್ಯದಲ್ಲೇ ಪ್ರಕಟವಾಗಲಿರುವ 'ಕಲಾದರ್ಶನ' ಎಂಬ ಸಂಪುಟದ ಸಂಪಾದಕರಲ್ಲೊಬ್ಬರಾಗಿ ಸಹ ಶ್ರೀಯುತರು ನಮಗೆ ಸಹಕಾರ ನೀಡಿದ್ದಾರೆ.

ಕನ್ನಡದ ಕೈಲಾಸ ನಿರ್ಮಿಸಲು ಹೊರಟ ಈ ಕನ್ನಡ ಶರಣನಿಗೆ 'ಹೊಸತು' ತನ್ನ ಪ್ರೀತಿಪೂರ್ವಕ 'ಅಕ್ಷರ ನಮನ'ವನ್ನು ಅರ್ಪಿಸುತ್ತದೆ.

## ಚಿತ್ರಿಸಿದ ಕನಸು

ಹರಿದು ಬಿದ್ದ ಬಾಡಿಹೋದ ಹುಲ್ಲುಕಡ್ಡಿ ಹೂಗಳು
ಉದುರಿ ಬಿದ್ದ ಬಾಳೆದಿಂಡು ಕಿತ್ತು ಎಸೆದ ಎಲೆಗಳು
ಕೋರೈಸುವ ಕುರುಡು ಬೆಳಕು ಸುತ್ತಮುತ್ತ ಎತ್ತಲು
ಬಾಗಿ ಕುಸಿದ ಕೊರಳುಗಳಿಗೆ ಉಕ್ಕೇರುವ [illegible]

ಗಿಡಗಳಿಂದ, ಮರಗಳಿಂದ ಜಾರಿ ಕನಸು ಕಂಬನಿ
ಮಾಗಿ ಮಂಜು ಬೆಳ್ಳಿತೆರದೆ ಒಡೆದ ಮನಸು ಇಬ್ಬನಿ
ಒದ್ದೆಯಾದ ಸ್ವಪ್ನ ಪಕ್ಷಿ [illegible] [illegible]
[illegible] ರಾತ್ರಿಯಲ್ಲಿ ಬೋರಲಾದ ನಿದಿರೆ

ಹರಿದ ಗುಡಿಯ [illegible] [illegible]
[illegible] ಅವರೆ ಕಾಲದಲ್ಲಿ ಕುಡಿದ ರಾತ್ರಿ ಜಾತ್ರೆ
ನುಡಿ ಜಯಂತಿ ಮೋಜಿನಲ್ಲಿ ಮೌನವಾದ [illegible]
ಅಳಿದ ಉಳಿದ ಗುಂಡಿನಲ್ಲಿ [illegible] [illegible]

ಮೂಡದ ಮತಿಗತಿಯಲ್ಲಿ ಬರದ ಹಗಲುಗನಸು
[illegible] [illegible] [illegible] ಕನಸು.

ಆತ್ಮೀಯರಾದ ಪ್ರೊ|| ಚಿ. ಶ್ರೀನಿವಾಸರಾಜು ಅವರಿಗೆ 'ಹೊಸತು' ವಿನ ಗೌರವಾರ್ಪಣೆಯ ಸಂಕೇತ ಈ ಸಂಚಿಕೆ.

# ಡಿಸೆಂಬರ್ ಸಂಪಾದಕೀಯಕ್ಕೆ ಪ್ರತಿಕ್ರಿಯೆ

ನಂದಗುಡಿಯ ಕುರಿತು ಆರಂಭವಾಗುವ ಸಂಪಾದಕೀಯವು ವಿಶೇಷ ಆರ್ಥಿಕ ವಲಯಗಳ ಕುರಿತು ವ್ಯಕ್ತಪಡಿಸಿರುವ ವಿರೋಧವು ಸ್ವಾಗತಾರ್ಹ. ವಿಶೇಷ ಆರ್ಥಿಕ ವಲಯದ ಯೋಜನೆಯನ್ನು ಸೋಲಿಸಿದ ನಂದಿಗ್ರಾಮದ ಜನತೆ ಅಭಿನಂದನಾರ್ಹರು ನಿಜ. ಆದರೆ ಯೋಜನೆ ಕೈಬಿಟ್ಟೆವೆಂದು ಘೋಷಿಸುವ ಎಡರಂಗ ಸರ್ಕಾರ ಅಭಿನಂದನಾರ್ಹವೆ? ಹಲವು ಎಡವಾದಿಗಳು, ಪ್ರಗತಿಶೀಲರು ವಿರೋಧಿಸುವ ಎಸ್‌ಇಜೆಡ್‌ಗಳನ್ನು ಎಡರಂಗ ಏಕೆ ಸಂಪೂರ್ಣವಾಗಿ ಕೈ ಬಿಡುವುದಿಲ್ಲ? ಬಲವಂತವಾಗಿ ರೈತರ ಭೂಮಿಯನ್ನು ವಶಪಡಿಸಿಕೊಳ್ಳುವುದನ್ನು ಉಳಿದ ರಾಜ್ಯಗಳಲ್ಲಿ ವಿರೋಧಿಸುವ ಸಿಪಿಎಂ ನಂದಿಗ್ರಾಮದಲ್ಲಿ ಅದೇ ಕ್ರಮಕ್ಕೆ ಕೈ ಇಟ್ಟಿದ್ದು ಅದರ ಇಬ್ಬಂದಿ ನಿಲುವಿಗೆ ಸಾಕ್ಷಿಯಲ್ಲವೆ? ಪಾತಕಿಗಳಾದ ಸಲೀಂ ಗುಂಪು, ನಾಪಾಮ್ ಬಾಂಬ್ ಮಾಡಿದ ಡವ್ ಕೆಮಿಕಲ್ಸ್‌ಗಳಂಥ ಸಂಸ್ಥೆಗಳನ್ನು ಏಕೆ ದೂರವಿಡುವುದಿಲ್ಲ? ಮುಚ್ಚಿರುವ ಕಾರ್ಖಾನೆಗಳಿಂದಾಗಿ ಸರ್ಕಾರದ ವಶದಲ್ಲಿರುವ ಸಾವಿರಾರು ಎಕರೆ ಭೂಮಿಯನ್ನು, ರಾಜ್ಯದಲ್ಲಿ ಲಭ್ಯವಿರುವ ಲಕ್ಷಾಂತರ ಎಕರೆ ಬಂಜರು ಭೂಮಿಯನ್ನು ಹೊಸ ಕೈಗಾರಿಕಾ ಸಮುಚ್ಚಯಗಳಿಗೆ ನೀಡದೆ, ಸರ್ಕಾರವು ಏಕೆ ಫಲವತ್ತಾದ ಭೂಮಿಗೆ ಕೈ ಇಡುತ್ತದೆ? ಭೂಸ್ವಾಧೀನ, ರೈತರ ಒಪ್ಪಿಗೆ, ಪರಿಹಾರ ವಿತರಣೆ ಎಲ್ಲೆಡೆ ಸುಳ್ಳು ಅಂಕಿಅಂಶಗಳನ್ನು ನೀಡಿ ಸಿಕ್ಕಿಹಾಕಿಕೊಂಡಿರುವುದೇಕೆ? ಹೀಗೆ ಪ್ರಶ್ನೆಗಳ ಪಟ್ಟಿ ತುಂಬಾ ದೊಡ್ಡದು. ಸರ್ಕಾರದ ನಿಲುವುಗಳನ್ನು ಬಯಲಿಗೆಳೆಯಲು ಈಗ ಯಥೇಚ್ಛ ಮಾಹಿತಿಗಳು, ಪುರಾವೆಗಳು ಲಭ್ಯವಿವೆ. ಭೂಸ್ವಾಧೀನ ಪ್ರಕ್ರಿಯೆಯನ್ನು ನಿಲ್ಲಿಸಿದ್ದೇವೆಂದು ಸರ್ಕಾರ ಹೇಳಿದ ನಂತರವೂ ಹೋರಾಟ ಏಕೆ ಮುಂದುವರೆದಿದೆ ಎಂಬುದು ಒಂದು ಮುಖ್ಯ ಪ್ರಶ್ನೆ. ಮೊದಲನೆಯದಾಗಿ ನಂದಿಗ್ರಾಮದಲ್ಲಿ ಭೂಸ್ವಾಧೀನಕ್ಕೆ ಹಾಲ್ದಿಯಾ ಡೆವಲಪ್‌ಮೆಂಟ್ ಅಥಾರಿಟಿ ಕೈ ಇಟ್ಟಿತು. ಇದರ ಅಧ್ಯಕ್ಷರು ಸಿಪಿಎಂನ ಸಂಸತ್ ಸದಸ್ಯರಾದ ಲಕ್ಷ್ಮಣ ಸೇಠ್. ೨೦೦೬ರ ಡಿಸೆಂಬರ್ ೨೮ರಂದು ಅಧಿಕೃತ ನೋಟಿಸ್ ಹೊರಡಿಸಲಾಯಿತು. ಲಕ್ಷ್ಮಣ ಸೇಠ್ ಭೂಮಿಯನ್ನು ವಶಪಡಿಸಿಕೊಳ್ಳುತ್ತೇವೆಂದರು. ಇನ್ನೊಂದೆಡೆ ಫೆಬ್ರವರಿ ೧೨ರಂದು ಮುಖ್ಯಮಂತ್ರಿಗಳು ಭೂವಶಮಾಡಿಕೊಳ್ಳುವ ಪ್ರಯತ್ನವೇ ಇಲ್ಲ ಎಂದರು. ಮಾರನೆಯ ದಿನವೇ ಲಕ್ಷ್ಮಣ್ ಸೇಠ್ ಭೂವಶ ಮಾಡಿಕೊಳ್ಳದೇ ಬಿಡುವುದಿಲ್ಲ ಎಂದರು! ಪ್ರಾಧಿಕಾರದ ನೋಟಿಸನ್ನು ಮಾಧ್ಯಮಗಳು ಜಗಜ್ಜಾಹೀರು ಮಾಡಿದ ಮೇಲೆ ಸರ್ಕಾರ ಅದು ತನ್ನ ಆಜ್ಞೆಯಲ್ಲ ಎಂದು ನುಣುಚಿಕೊಳ್ಳಲು ಯತ್ನಿಸಿತು. ವಾಸ್ತವವಾಗಿ ಡಿಸೆಂಬರ್ ಅಂತ್ಯದಿಂದ ದುರಂತಮಯ ಮಾರ್ಚ್ ೧೪ರವರೆಗೆ ಸಿಪಿಎಂ ನಾಯಕರು ವಿವಿಧ ದನಿಗಳಲ್ಲಿ ಮಾತನಾಡಿದರು. ಸ್ಪಷ್ಟೀಕರಣ ಕೇಳಲು ಹೊರಟ ಜನತೆಯ ಮೇಲೆ ಗೋಲಿಬಾರ್ ನಡೆಯಿತು.

ಇಲ್ಲಿಂದಾಚೆ ''ತನ್ನ ಪಕ್ಷದ ಮೂರು ಸಾವಿರದ ಐನೂರು ಬೆಂಬಲಿಗರನ್ನು ನಂದಿಗ್ರಾಮದಿಂದ ಬಲಾತ್ಕಾರವಾಗಿ ಹೊರದಬ್ಬಲಾಗಿದೆ, ಆ ಪ್ರದೇಶಕ್ಕೆ ರಾಜ್ಯ ಸರ್ಕಾರ ಪ್ರವೇಶಿಸಲಾಗುತ್ತಿಲ್ಲ. ಅದೊಂದು ವಿಮೋಚಿತ ಪ್ರದೇಶವಾಗಿಬಿಟ್ಟಿದೆ, ಅಲ್ಲಿ ಮಾವೊವಾದಿಗಳು ಸೇರಿದ್ದಾರೆ'' ಎಂಬ ಬಲವಾದ ಸಿಪಿಎಂ ಪ್ರಚಾರ ಆರಂಭವಾಯಿತು. ಇದರ ಪರವಾದ ವಾದಗಳು ಸಿಪಿಎಂನ ಮುಖಪತ್ರಿಕೆಯಲ್ಲಿ ಯಥೇಚ್ಛವಾಗಿ ಸಿಗುತ್ತವೆ. ಆದರೆ ಇದಕ್ಕೆ ಉಳಿದ ಮಾಧ್ಯಮಗಳಲ್ಲಿ, ತನಿಖಾ ವರದಿಗಳಲ್ಲಿ ಕಿವುಡುಕಾಸಿನ ಕಿಮ್ಮತ್ತೂ ಇಲ್ಲ. ಏಕೆ? ಜನವರಿಯಿಂದ ಮಾರ್ಚ್ ೧೪ರವರೆಗೆ ಮಹಿಳೆಯರ ಮೇಲಿನ ಗುಂಪು ಅತ್ಯಾಚಾರ, ಕೊಲೆ, ಲೂಟಿ, ಮನೆಗಳಿಗೆ ಬೆಂಕಿ ಇಡುವುದು ಮುಂತಾದ ಕುಕೃತ್ಯಗಳಲ್ಲಿ ತೊಡಗಿದವರ ಮೇಲೆ ಸರ್ಕಾರ ಕ್ರಮ ಜರುಗಿಸಲಿಲ್ಲ. ವಿವಿಧ ಗ್ರಾಮಗಳಲ್ಲಿ ಜನತೆ ಗುರುತಿಸಿದ್ದ ಇಂಥ ಮೂವತ್ತೆರಡು ಮಂದಿ ಖಂಡಿತ ಗ್ರಾಮಗಳಿಗೆ ಮರಳಬಾರದು ಎಂಬುದು ಗ್ರಾಮಗಳಲ್ಲಿ ಹೋರಾಟಗಾರರ ನಿಲುವಾಗಿತ್ತು. ಇವರೆಲ್ಲಾ ಜನಹೋರಾಟ ತೀವ್ರವಾದ ಮೇಲೆ ಊರುಬಿಟ್ಟು ಹೋದವರು. ಸೋಷಲಿಸ್ಟ್ ಯೂನಿಟಿ ಸೆಂಟರ್ ಆಫ್ ಇಂಡಿಯಾದ ಪಶ್ಚಿಮ ಬಂಗಾಳ ರಾಜ್ಯದ ಕಾರ್ಯದರ್ಶಿಗಳಾದ ಪ್ರವಾಶ್ ಘೋಷ್ ಇವರ ಪಟ್ಟಿಯನ್ನು ಪತ್ರಿಕಾಗೋಷ್ಠಿಯಲ್ಲಿ ಬಿಡುಗಡೆ ಮಾಡಿ, ಇವರನ್ನುಳಿದು ಇನ್ಯಾರು ತಮ್ಮ ಊರುಗಳಿಗೆ ವಾಪಸಾದರೂ ಸಮಿತಿಯ ವಿರೋಧವಿಲ್ಲ ಎಂದು ಸ್ಪಷ್ಟಪಡಿಸಿದರು. ಇವರನ್ನುಳಿದು ಸುಮಾರು ಇನ್ನೂರು ಮಂದಿ ಸಿಪಿಎಂನ ಬೆಂಬಲಿಗರು ಊರು ಬಿಟ್ಟು ಹೋಗಿದ್ದು, ಅವರಲ್ಲಿ ಸಹ ಅನೇಕರು ಕೃಷಿ ಚಟುವಟಿಕೆಗಳಿಗಾಗಿ ವಾಪಸಾಗಿದ್ದಾರೆ ಎಂಬುದನ್ನು ಅವರು ಪ್ರಕಟಿಸಿದ್ದಾರೆ. ಸಿಪಿಎಂನ ತಥಾಕಥಿತ ನಿರಾಶ್ರಿತರನ್ನು ಪರೀಕ್ಷಿಸಲು ಹಾಗೂ ಖೆಜೂರಿ ಶಿಬಿರದಲ್ಲಿನ ಪಕ್ಷದ ಬೆಂಬಲಿಗರನ್ನು ಸಂದರ್ಶಿಸಲು ಅವಕಾಶ ಮಾಡಿಕೊಡಬೇಕೆಂದು ಕೇಳಿದ್ದಕ್ಕೂ ಪ್ರತಿಕ್ರಿಯೆ ಬರಲಿಲ್ಲ! 'ನಂದಿಗ್ರಾಮದಲ್ಲಿ ರಾಜ್ಯ ಸರ್ಕಾರಕ್ಕೆ ಪ್ರವೇಶ ಇರಲಿಲ್ಲ, ಅಲ್ಲಿ ಅಭಿವೃದ್ಧಿ ಕಾರ್ಯಗಳು ನಡೆಯಲಿಲ್ಲ, ಪೋಲಿಯೋ ಲಸಿಕೆ ಹಾಕಲಾಗಲಿಲ್ಲ' ಎಂಬುದೆಲ್ಲಾ ಸತ್ಯಕ್ಕೆ ದೂರವಾದ ಮಾತುಗಳು. ಮಾರ್ಚ್ ಹದಿನಾಲ್ಕರಿಂದ ನವೆಂಬರ್ ತಿಂಗಳಿನವರೆಗೂ ಅಲ್ಲಿ ಶಾಲಾ ಕಾಲೇಜುಗಳು ನಡೆದಿವೆ, ಕಛೇರಿಗಳು ನಡೆದಿವೆ, ಬ್ಯಾಂಕುಗಳು ವ್ಯವಹಾರ ನಡೆಸಿವೆ. ಇಲ್ಲವೆಂದಾದರೆ ಸರ್ಕಾರ ದಾಖಲೆಗಳನ್ನು ಮುಂದಿಡಬೇಕು.

ಹೋರಾಟ ಸಮಿತಿಯ ಐವರು ಕಾರ್ಯದರ್ಶಿಗಳು ಹಾಗೂ ಒಬ್ಬ ಸಂಚಾಲಕರಲ್ಲಿ ಇಬ್ಬರು ಎಸ್‌ಯುಸಿಐಗೂ, ಇಬ್ಬರು ತೃಣಮೂಲ ಕಾಂಗ್ರೆಸ್‌ಗೂ, ಒಬ್ಬರು ಜಮಾತೆ ಎ ಹಿಂದ್ ಸಂಘಟನೆಗೂ ಸೇರಿದ್ದು ಇನ್ನೊಬ್ಬರು ಪಕ್ಷೇತರ ಸಮೂಹ ನಾಯಕರು. ಸಮಿತಿಯ ಯಾವ ಹಂತದಲ್ಲೂ, ಯಾವ ಚಟುವಟಿಕೆಗಳಲ್ಲೂ ಮಾವೋವಾದಿಗಳಿರಲಿಲ್ಲ. ಪೊಲೀಸ್ ದೌರ್ಜನ್ಯ ಹಾಗೂ ಗೂಂಡಾಗಳ ಕ್ರೂರ ಆಕ್ರಮಣದ ನಂತರ ಅವರು ಹಳ್ಳಿಗಳಿಗೆ ಪ್ರವೇಶಿಸದಂತೆ ತಡೆಯೊಡ್ಡಿದವರು ಜನಸಾಮಾನ್ಯರೇ. ಜೀವನ್ಮರಣ ಹೋರಾಟದಲ್ಲಿ ಜನತೆ ಇಂಥ ಆತ್ಮ ರಕ್ಷಣಾ ವಿಧಾನಗಳಿಗೆ ಮೊರೆ ಹೊಕ್ಕಿದ್ದುದನ್ನು ಗಾಂಧಿವಾದಿಗಳೂ ಈ ಬಾರಿ ಖಂಡಿಸಿಲ್ಲ! ಬಂಗಾಳದ ಗೃಹ ಕಾರ್ಯದರ್ಶಿಗಳಾದ ಶ್ರೀಯುತ ಪ್ರಸಾದ್‌ರಂಜನ ರೇ ಮಾವೊವಾದಿಗಳ ಇರವನ್ನು ಅಲ್ಲಗಳೆದಿದ್ದಾರೆ. ಸಿಆರ್‌ಪಿಎಫ್ ಸಹ ಮಾವೊವಾದಿಗಳ ಅಸ್ತಿತ್ವದ ನೆಪವನ್ನು ಪುರಸ್ಕರಿಸಿಲ್ಲ. ಹೀಗಾಗಿಯೇ ಬಂಗಾಳದ ಖ್ಯಾತ ಬುದ್ಧಿಜೀವಿಗಳು 'ನಂದಿಗ್ರಾಮದಲ್ಲಿ ಮಾವೊವಾದಿಗಳ ಇರುವಿಕೆ ಎಂಬುದು ಬುಷ್ ಹೇಳುವ (ಇರಾಕ್‌ನಲ್ಲಿ ಇದೆ ಎನ್ನಲಾದ) ಸಮೂಹನಾಶಕ ಅಸ್ತ್ರಗಳಂತೆಯೇ ಆಳುವ ಪಕ್ಷದ ಅನುಕೂಲಕ್ಕಾಗಿ ಸೃಷ್ಟಿಸಿಕೊಂಡ ನೆಪ' ಎಂದಿದ್ದಾರೆ! ಇದು ಕೆಲವರು ಎಡರಂಗದ ವಿರೋಧಿಗಳು ಹೇಳುತ್ತಿರುವ ಮಾತಲ್ಲ. ದೇಶದ ಮಾನವ ಹಕ್ಕುಗಳ ಆಯೋಗವು ನಂದಿಗ್ರಾಮದಲ್ಲಿ ಸರ್ಕಾರ ಮತ್ತು ಸಿಪಿಎಂ ಕಾರ್ಯಕರ್ತರು ನಡೆಸಿದ ದಾಳಿಗಳನ್ನು ಖಂಡನಾರ್ಹ ಎಂದಿದೆ. ರಾಷ್ಟ್ರೀಯ ಅಲ್ಪಸಂಖ್ಯಾತರ ಆಯೋಗ ವೇದನೆಯನ್ನು ವ್ಯಕ್ತಪಡಿಸಿದೆ. ಮೊದಲು ನಂದಿಗ್ರಾಮದ ಹತ್ಯಾಕಾಂಡವನ್ನು ವಿರೋಧಿಸಿ ನಂತರ ಸಿಪಿಎಂ ಬೆಂಬಲಿಗರ ಪ್ರಚೋದನೆಯಿಂದಾಗಿ 'ಏನೇ ಆಗಲಿ ಎಡಪಂಥೀಯರು ಒಂದಾಗಿ' ಎಂದಿದ್ದ ನೋಮ್ ಚಾಮ್‌ಸ್ಕಿ ಮತ್ತಿತರ ಬುದ್ಧಿಜೀವಿಗಳು ಇದೀಗ ಮೂರನೆಯ ಹೇಳಿಕೆ ನೀಡಿದ್ದಾರೆ. ಅದರಲ್ಲಿ ಅವರು, ಸಿಪಿಎಂನ ಆರ್ಥಿಕ ನೀತಿಗಳಿಗಾಗಲೀ, ಆ ಪಕ್ಷ ನಂದಿಗ್ರಾಮದಲ್ಲಿ ಎಸಗಿರುವ ಕೃತ್ಯಕ್ಕಾಗಲೀ ತಮ್ಮ ಬೆಂಬಲವಿಲ್ಲ ಎಂಬ ಸ್ಪಷ್ಟೀಕರಣ ನೀಡಿದ್ದಾರೆ. ಕಟ್ಟಾ ಎಡವಾದಿಗಳಾಗಿದ್ದು ಸಿಪಿಎಂನೊಂದಿಗೆ ಸಂಬಂಧ ಹೊಂದಿದ್ದ ತರುಣ್ ಸನ್ಯಾಲ್, ಸುಮಿತ್ ಸರ್ಕಾರ್, ತನಿಕಾ ಸರ್ಕಾರ್ ಇನ್ನೂ ಅನೇಕರು ಪ್ರಶಸ್ತಿಗಳನ್ನು ಹಿಂದಿರುಗಿಸಿದ್ದಾರೆ, ಸಾಹಿತ್ಯ ನಾಟಕ ಅಕಾಡೆಮಿಗಳಿಗೆ ರಾಜಿನಾಮೆ ನೀಡಿದ್ದಾರೆ. ಎಡರಂಗದ ಮಾಜಿ ಹಣಕಾಸು ಮಂತ್ರಿ ಅಶೋಕ್ ಮಿತ್ರ ಸಿಪಿಎಂಅನ್ನು ಉಗ್ರವಾಗಿ ಟೀಕಿಸಿದ್ದಾರೆ. ಬುದ್ಧಿಜೀವಿಗಳ ಪ್ರತಿಭಟನೆಯ ಮೇಲಾದ ದೌರ್ಜನ್ಯವನ್ನು ವಿರೋಧಿಸಿ ನಡೆದ ಅನೇಕ ಹೋರಾಟಗಳಿವೆ. ಬುದ್ಧಿಜೀವಿಗಳ ಕರೆಯ ಮೇರೆಗೆ ಒಂದು ಲಕ್ಷಕ್ಕೂ ಹೆಚ್ಚು ಜನ ಕಲ್ಕತ್ತಾದಲ್ಲಿ ಮೌನ ಮೆರವಣಿಗೆ ನಡೆಸಿದ್ದನ್ನು ಎಲ್ಲ ಮಾಧ್ಯಮಗಳೂ ವರದಿ ಮಾಡಿವೆ. ಇದು ಕಳೆದ ಕೆಲವು ದಶಕಗಳಲ್ಲೇ ಅನನ್ಯವಾದದ್ದು. ಇವರ್ಯಾರೂ ಮಾವೊವಾದಿಗಳೂ ಅಲ್ಲ ಮಮತಾ ಬ್ಯಾನರ್ಜಿಯನ್ನು ಬೆಂಬಲಿಸುವವರೂ ಅಲ್ಲ. ವಾಸ್ತವವಾಗಿ ಹೇಳಬೇಕೆಂದರೆ ಇವರಲ್ಲನೇಕರು ನಿನ್ನೆ ಮೊನ್ನೆಯವರೆಗೂ ಸಿಪಿಎಂ ಶಿಬಿರದಲ್ಲಿದ್ದವರು.

೨೦೦೭ರ ನವೆಂಬರ್ ಆರರಿಂದ ಹನ್ನೆರಡರವರೆಗೂ ನಂದಿಗ್ರಾಮದಲ್ಲಿ ನಡೆದದ್ದೇನು? ರಾಜ್ಯ ಸರ್ಕಾರ ಮತ್ತು ಪೊಲೀಸ್ ವಶಪಡಿಸಿಕೊಳ್ಳಲು ಸಾಧ್ಯವಾಗದಿದ್ದ ಪ್ರದೇಶವನ್ನು ಸಿಪಿಎಂನ ಸಶಸ್ತ್ರ ಪಡೆಗಳು ವಶಪಡಿಸಿಕೊಂಡಿದ್ದು ಹೇಗೆ? ಆರು ದಿನಗಳ ಕಾಲ ಅಲ್ಲಿಗೆ ಯಾವ ಪತ್ರಕರ್ತರನ್ನೂ ಬಿಡದೆ ಇದ್ದದ್ದು ಏಕೆ? ಮೇಧಾ ಪಾಟ್ಕರ್, ತರುಣ್ ಸನ್ಯಾಲ್, ಎಸ್‌ಯುಸಿಐನ ಶಾಸಕರಾದ

ದೇಬ್‌ಪ್ರಸಾದ್ ಸರ್ಕಾರ್ ಮುಂತಾದವರು ಪರಿಹಾರ ಸಾಮಗ್ರಿಗಳೊಂದಿಗೆ ನಂದಿಗ್ರಾಮ ತಲುಪದಂತೆ ಪದೇ ಪದೇ ತಡೆದದ್ದೇಕೆ? ರಾಜ್ಯಪಾಲರಾದ ಗೋಪಾಲಕೃಷ್ಣ ಗಾಂಧಿಯವರು ಸಾರ್ವಜನಿಕವಾಗಿ ಸರ್ಕಾರವನ್ನು ಟೀಕಿಸುತ್ತಾ ಹೋಗಿದ್ದಾರೆ. ಇವರು ಸಿಪಿಎಂನ ಕೇಂದ್ರ ನಾಯಕತ್ವ ಬಯಸಿ, ಆರಿಸಿ ಆಹ್ವಾನಿಸಿಕೊಂಡ ರಾಜ್ಯಪಾಲರು! ಇವರಲ್ಲದೆ ಸಿಪಿಐ, ಆರ್‌ಎಸ್‌ಪಿ, ಫಾರ್ವರ್ಡ್ ಬ್ಲಾಕ್‌ಗಳು ಸಹ ಇಡೀ ಘಟನೆಗೆ ಸಂಬಂಧಿಸಿದಂತೆ ತಮ್ಮನ್ನು ಗಣನೆಗೇ ತೆಗೆದುಕೊಳ್ಳದೆ ವರ್ತಿಸಿದ ಸಿಪಿಎಂ ಇಡೀ ದುರಂತದ ಹೊಣೆ ಹೊರಬೇಕು ಎಂದು ಸ್ಪಷ್ಟಪಡಿಸಿವೆ. ಹೀಗಾಗಿ 'ಒಂದು ಪಕ್ಷ ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳಲು ಅನಿವಾರ್ಯವಾಗಿ ಮಾಡಿದ ತಂತ್ರ' ಎಂದು 'ಹೊಸತು' ಸಂಪಾದಕೀಯವು ಸಮರ್ಥಿಸಿಕೊಳ್ಳುವುದು ಎಷ್ಟು ಮಾತ್ರಕ್ಕೂ ಸರಿಯಾಗದು. ಬದಲಿಗೆ ಬೃಂದಾ ಕಾರಟ್‌ರು ಮುಖ್ಯಮಂತ್ರಿಗಳ ಸಮ್ಮುಖದಲ್ಲಿಯೇ ನಂದಿಗ್ರಾಮದ ಹೋರಾಟಗಾರರಿಗೆ 'ಡಮ್‌ಡಮ್ ದವಾಯಿ' ತಿನ್ನಿಸಬೇಕು ಎಂದು ನೀಡಿದ ಕದನ ಪ್ರಚೋದನೆಯನ್ನು ಟೀಕಿಸಬೇಕು.

'ಎಲ್ಲ ಎಡಪಂಥೀಯ ಶಕ್ತಿಗಳೂ ಒಂದಾಗಬೇಕು', 'ಎಲ್ಲರೂ ಆತ್ಮವಿಮರ್ಶೆಗೆ ಸಿದ್ಧರಿರಬೇಕು', 'ಕೂದಲು ಸೀಳುವ ತರ್ಕಗಳಲ್ಲಿ ತೊಡಗಬಾರದು' ಎಂಬುದು ಸದಾಶಯದ ಮಾತೇ ಸರಿ. ಆದರೆ ಎಡವಾದಿಗಳೆನಿಸಿಕೊಂಡವರು ಎಡಪಂಥೀಯ ಧೋರಣೆಗಳನ್ನೂ, ಸಿದ್ಧಾಂತವನ್ನೂ ಬಿಟ್ಟು ದೂರ ಸರಿಯುತ್ತಾ ಹೋದಾಗಲೂ ನಾವು ಅದನ್ನು ಖಂಡಿಸದೆ ಒಗ್ಗಟ್ಟಿಗೆ ಯತ್ನಿಸಿದರೆ ಅದರಿಂದ ಬಲಪಂಥೀಯ ಶಕ್ತಿಗಳು ಬಲವಾಗುತ್ತವೆ ಅಷ್ಟೇ. ಜಾಗತೀಕರಣ ಹಾಗೂ ನವ ಉದಾರೀಕರಣವನ್ನು ಅನುಷ್ಠಾನಗೊಳಿಸುವಲ್ಲಿ ಎಡಪಕ್ಷಗಳು, ಕಾಂಗ್ರೆಸ್ - ಪ್ರಾದೇಶಿಕ ಪಕ್ಷಗಳು ಹಾಗೂ ಬಿಜೆಪಿಗಿಂತ ಉತ್ತಮವೇನಲ್ಲ ಎಂಬ ಪರಿಸ್ಥಿತಿ ಸೃಷ್ಟಿಯಾಗಬಾರದಿತ್ತಲ್ಲವೆ? ನಮ್ಮ ಅನೇಕ ಕಾಮ್ರೇಡರ ಕೊಲೆಗಳ ನಂತರವೂ ನಾವು ಸಮೂಹ ಸಂಘಟನೆಗಳ ಮಟ್ಟದಲ್ಲಿ ಐಕ್ಯ ಹೋರಾಟಗಳಲ್ಲಿ ದೇಶಾದ್ಯಂತ ಭಾಗವಹಿಸುತ್ತಾ ಬಂದಿದ್ದೇವೆ, ರಾಜ್ಯಸಭಾ ಚುನಾವಣೆಗಳಲ್ಲಿ ನಮ್ಮ ಶಾಸಕರು ಸಿಪಿಎಂಗೆ ಮತ ಹಾಕುತ್ತಲೇ ಬಂದಿದ್ದಾರೆ. ಆದರೆ ಸಿಪಿಎಂಗೆ ನಮ್ಮೊಂದಿಗೆ ಪಕ್ಷದ ಮಟ್ಟದಲ್ಲಿ ಐಕ್ಯ ಹೋರಾಟ ಬೇಕಿಲ್ಲ. ಇಂದು ಸಿಪಿಎಂ ತಳೆದಿರುವ ನಿಲುವಿನ ಹಿನ್ನೆಲೆಯಲ್ಲಿ ಎಡರಂಗ ಸರ್ಕಾರದ ಭಾಗವಾಗುವುದಕ್ಕೆ ನಮ್ಮ ಸಮ್ಮತಿ ಇಲ್ಲ.

ಒಂದು ಕ್ರಾಂತಿಕಾರಿ ಪಕ್ಷ ಸಂಸತ್ ವ್ಯವಸ್ಥೆಯಲ್ಲಿ ಅಧಿಕಾರಕ್ಕೆ ಬಂದರೆ ಏನು ಮಾಡಬೇಕು? ಅದು ತನ್ನನ್ನು ಕೇವಲ ಅಧಿಕಾರಶಾಹಿ ಆಧಾರಿತ ಸುಧಾರಣೆಗಳಿಗೆ ಸೀಮಿತಗೊಳಿಸಿಕೊಳ್ಳಬಾರದು. ಅದು ಅಧಿಕಾರದಲ್ಲಿದ್ದೂ ಸಹ ತನ್ನ ಎಲ್ಲ ಶಕ್ತಿಯನ್ನೂ ಕ್ರೋಡೀಕರಿಸಿ ಜನ ಹೋರಾಟವನ್ನು ಮುನ್ನಡೆಸಬೇಕು. ಅದರ ಆಧಾರದಲ್ಲಿ ಸುಧಾರಣೆಗಳು ಬರಲಿ. ಅದು ಇಡೀ ದೇಶಕ್ಕೆ ಮಾದರಿಯಾಗುತ್ತದೆ. ಇಲ್ಲದಿದ್ದರೆ ಹೋರಾಟವನ್ನು ತೊರೆದು ಸುಧಾರಣಾವಾದಿ ದೃಷ್ಟಿಕೋನದಿಂದ ಅಧಿಕಾರಕ್ಕಂಟಿಕೊಂಡರೆ ಅಧಿಕಾರಗ್ರಹಣದಿಂದ ಉಂಟಾಗುವ ಕೊಳೆತವು ಎಡಪಕ್ಷಗಳನ್ನೂ ಕಾಡುತ್ತದೆ. ಇದಕ್ಕೆ ಬೇಕಾದಷ್ಟು ಉದಾಹರಣೆಗಳು ಇಂದು ಬಂಗಾಳ-ಕೇರಳಗಳಲ್ಲಿ ಲಭ್ಯವಾಗಿವೆ. ನಮ್ಮ ಪಕ್ಷ ೧೯೬೭-೬೯ರ ಸರ್ಕಾರದಲ್ಲಿ ಸಿಪಿಎಂನೊಂದಿಗೆ ಸಹಭಾಗಿಯಾಗಿತ್ತು. ಆಗ ನಮ್ಮ ಪಕ್ಷದ ಸುಬೋಧ್ ಬ್ಯಾನರ್ಜಿ ಕಾರ್ಮಿಕ ಸಚಿವರಾಗಿದ್ದರು. ಅವರು 'ಕಾರ್ಮಿಕರ ನ್ಯಾಯಯುತ ಹೋರಾಟದಲ್ಲಿ ಪೊಲೀಸರು ಹಸ್ತಕ್ಷೇಪ ನಡೆಸಬಾರದು' ಎಂಬ ನೀತಿಯನ್ನು ರೂಪಿಸಿದರು. ಅಲ್ಲಿಂದ ಉಜ್ವಲ ಹೋರಾಟಗಳು ಬೆಳೆದವು. 'ಘೇರಾವ್' ಮಾದರಿಯ ಚಳುವಳಿ ಜಗತ್ತಿನ ಗಮನ ಸೆಳೆಯಿತು. ನಾವು ಇಂದೂ ಈ ನೀತಿಗೆ ಬದ್ಧರಾಗಿದ್ದೇವೆ. ಉಳಿದವರಿಗೆ ಇದು ಪಥ್ಯವಾಗದು. ಅವರು "ಬಂಗಾಳ ಮತ್ತು ಕೇರಳ ಭಾರತದ ಅವಿಭಾಜ್ಯ ಅಂಗಗಳು. ಅಲ್ಲಿ ಸಮಾಜವಾದ ಬಂದಿಲ್ಲ. ಅಲ್ಲಿ ನಾವೂ ಕೇಂದ್ರ ರೂಪಿಸಿದ ನೀತಿಗಳನ್ನು ಅನುಸರಿಸಬೇಕಾಗುತ್ತದೆ" ಎಂಬ ಧೋರಣೆ ತಾಳಿದರೆ ಅದು ಮಾರ್ಕ್ಸ್‌ವಾದಕ್ಕೆ ಮಾಡುವ ಅಪಚಾರವಾಗುತ್ತದೆ. ಇದು ಮೂಲಭೂತ ಭಿನ್ನಾಭಿಪ್ರಾಯ. ಕೇಶವಿಭಜಕ ಕಸರತ್ತಲ್ಲ.

ಎಡವಾದಿಗಳ ಮಧ್ಯೆ ಸೈದ್ಧಾಂತಿಕ ಹೋರಾಟ ಅನಿವಾರ್ಯ. ಆದ್ದರಿಂದಲೇ ಲೆನಿನ್‌ರವರು ಬೋಲ್ಶೆವಿಕ್ - ಮೆನ್ಶೆವಿಕ್ ಮಧ್ಯದ ತೀವ್ರ ಸೈದ್ಧಾಂತಿಕ ಚರ್ಚೆಗಳ ಸಂದರ್ಭದಲ್ಲಿ ಪ್ಲೆಖನೋವ್ ಪ್ರಾಮಾಣಿಕವಾಗಿಯೇ ಮಂಡಿಸಿದ 'ರಾಜಿಯ ಮಧ್ಯದ ದಾರಿಗಳನ್ನು' ಒಪ್ಪಲಿಲ್ಲ. ಲೆನಿನ್‌ರ ನಲವತ್ತೆರಡು ಸಂಪುಟಗಳನ್ನು ಆವರಿಸುವ ಸೈದ್ಧಾಂತಿಕ ಹೋರಾಟದಲ್ಲಿ ಅವರು ಜಾರ್ ಚಕ್ರವರ್ತಿಗೂ, ಕೆರೆನ್‌ಸ್ಕಿಗೂ ಮೀಸಲಿಟ್ಟ ಪುಟಗಳು ನಗಣ್ಯ. ಬಹುತೇಕ ಅವರ ಹೋರಾಟ ಮೆನ್ಶೆವಿಕರ, ಸೋಷಲಿಸ್ಟ್ ರೆವಲ್ಯೂಶನರಿಗಳ ವಿರುದ್ಧ, ಟ್ರಾಟ್‌ಸ್ಕಿ, ಮ್ಯಾಕ್ ಮುಂತಾದವರ ವಿರುದ್ಧ!

ಇನ್ನೊಂದು ಅಂಶವಿದೆ: ಎಡರಂಗ ಸರ್ಕಾರ ಮೂವತ್ತು ವರ್ಷ ಅಧಿಕಾರದಲ್ಲಿದೆ ಎಂಬುದೇ ಅದರ ನೀತಿಗಳು ಜನಪರ ಎನ್ನುವುದಕ್ಕೆ ಸಾಕ್ಷಿಯಾಗುವುದಿಲ್ಲ. ಐವತ್ತು ವರ್ಷ ದೇಶವನ್ನಾಳಿದ ಕಾಂಗ್ರೆಸ್ ಆಗಲಿ, ಇದೀಗ ಇಪ್ಪತ್ತು ವರ್ಷ ಆಳಲು ಸಿದ್ಧರಾಗಿರುವ ನರೇಂದ್ರ ಮೋದಿಯವರ ಬಿಜೆಪಿಯಾಗಲಿ ಅವರೆಷ್ಟೇ ಚುನಾವಣೆ ಗೆದ್ದರೂ ಅವರು 'ಜನಪರ' ಎಂದು ನಾವು ಒಪ್ಪುವುದಿಲ್ಲವಷ್ಟೆ! ಎಡವಾದಿಗಳು ಅಧಿಕಾರ ಹಿಡಿದಾಗ ಜನ ಹೋರಾಟಗಳ ಮೂಲಕ ಕ್ರಾಂತಿಯ ಹಾದಿಯಲ್ಲಿ ನಾವೆಷ್ಟು ಮುನ್ನಡೆದಿದ್ದೇವೆ ಎಂಬುದೇ ನಮಗೆ ಮುಖ್ಯ ಮಾನದಂಡವಾಗಬೇಕು. ಇಂದು ದೊಡ್ಡ ಎಡಪಕ್ಷಗಳು ಹಿಡಿಯುತ್ತಿರುವ ಹಾದಿ ದೇಶೀಯ ಹಾಗೂ ಅಂತರರಾಷ್ಟ್ರೀಯ ಬಂಡವಾಳದ ಪರವಾಗಿದೆ, ಇದು ಎಡಚಳುವಳಿಗೆ ದೊಡ್ಡ ಪೆಟ್ಟು ನೀಡುತ್ತದೆ. ಇದರ ಬಗ್ಗೆ ವ್ಯಾಪಕ ಚರ್ಚೆ ನಡೆದು, ಸರಿಯಾದ ಆತ್ಮಶೋಧನೆ ನಡೆದರೆ ಈಗಲೂ ಬಂದೊದಗಲಿರುವ ವಿಪತ್ತನ್ನು ತಪ್ಪಿಸಬಹುದು. ನಮಗಿದರಲ್ಲಿ ಎಳ್ಳಷ್ಟೂ ಪ್ರತಿಷ್ಠೆಯ ಪ್ರಶ್ನೆ ಇಲ್ಲ. ಸಿಪಿಎಂನಂಥ ಎಡಪಕ್ಷಗಳು ವೈರಿಗಳ ಟೀಕೆ ಮತ್ತು ನಮ್ಮ ಪಕ್ಷದಂಥ ಸೋದರ ಎಡಪಕ್ಷಗಳು ಮಾಡುವ ಟೀಕೆಯ ನಡುವಿನ ವ್ಯತ್ಯಾಸವನ್ನು ಗ್ರಹಿಸದೇ ಹೋದಲ್ಲಿ ಅನಾಹುತ ತಪ್ಪಿದ್ದಲ್ಲ. ಎಸ್‌ಯುಸಿಐ ಪಕ್ಷವು ಸಿಪಿಎಂನ ಕುರಿತು ಎಷ್ಟೇ ವ್ಯಾಪಕ ಟೀಕೆ ನಡೆಸಿದರೂ ಎಡರಂಗ ಸರ್ಕಾರವನ್ನು ಉರುಳಿಸುವ ಬೂರ್ಜ್ವಾ ಪಕ್ಷಗಳ ಯತ್ನಕ್ಕೆ ಸೊಪ್ಪುಹಾಕಿಲ್ಲ ಎಂಬುದು ದಾಖಲಾಗಿರುವ ಸತ್ಯ.

ಅದೇನೇ ಇರಲಿ, 'ಹೊಸತು' ಎಡವಾದಿಗಳ ನಡುವೆ ಒಂದು ಉತ್ತಮ ಚರ್ಚೆಯನ್ನು ಪ್ರಚೋದಿಸಿದೆ. ಯಾವುದೇ ರೀತಿಯ ತಾತ್ವಿಕ ಅಸಹನೆ, ಮಾನಸಿಕ ಕಹಿ ಇಲ್ಲದೆ ಇದು ನೈಜ ಎಡಪಂಥೀಯ ಒಗ್ಗಟ್ಟು ಮೂಡುವವರೆಗೂ ಮುಂದುವರೆಯುತ್ತಲೇ ಇರಲಿ ಎಂಬುದು ನಮ್ಮ ಆಶಯ.

**ಡಾ|| ಬಿ. ಆರ್. ಮಂಜುನಾಥ್**
ಸದಸ್ಯರು, ಕರ್ನಾಟಕ ರಾಜ್ಯಸಮಿತಿ, ಎಸ್‌ಯುಸಿಐ, ಬೆಂಗಳೂರು

## ದಿ|| ಯು. ಸಾಕಮ್ಮನವರ ನೆನಪಿನ ಪುರಸ್ಕಾರ - ೨೦೦೭

'ಹೊಸತು' ಆರಂಭವಾದಾಗಿನಿಂದಲೂ ಅದರ ಓದುಗರಾಗಿ ಮತ್ತು ವಿಮರ್ಶಕರಾಗಿ ಪ್ರೋತ್ಸಾಹ ನೀಡುತ್ತಿದ್ದ ದಿ|| ಯು. ಸಾಕಮ್ಮನವರ (ಜನನ: ೧೩-೦೪-೧೯೦೭ – ಮರಣ: ೨೦೦೨ರ ಆಗಸ್ಟ್ ೧೮) ನೆನಪಿಗಾಗಿ ಅವರ ಮಗಳು ಶ್ರೀಮತಿ ಯು. ಎಸ್. ಪಾರ್ವತಿ ಅವರು ಒಂದು ವರುಷದ ಅವಧಿಯಲ್ಲಿ 'ಹೊಸತು'ವಿನಲ್ಲಿ ಪ್ರಕಟವಾಗುವ ಮಹಿಳೆಯರ ಕುರಿತ ಲೇಖನಗಳನ್ನು ಗಮನಿಸಿ, ಪ್ರತಿವರ್ಷವೂ ಎರಡು ಉತ್ತಮ ಲೇಖನಗಳಿಗೆ ತಲಾ ಐನೂರು ರೂಪಾಯಿಗಳ ಪುರಸ್ಕಾರ ನೀಡಲು ಆಶಿಸಿದ್ದಾರೆ. ಕಳೆದ ವರ್ಷದಂತೆಯೇ ಅಕ್ಟೋಬರ್ ೨೦೦೬ರಿಂದ ಸೆಪ್ಟೆಂಬರ್ ೨೦೦೭ರವರೆಗೆ, ಹನ್ನೆರಡು ಸಂಚಿಕೆಗಳಲ್ಲಿ ಪ್ರಕಟವಾಗಿರುವ ಲೇಖನಗಳನ್ನು ಅವಲೋಕಿಸಿ, ಬಹುಮಾನಿತರನ್ನು ಆಯ್ಕೆ ಮಾಡಲಾಗಿದೆ. ಬಹುಮಾನಿತರಿಗೆ 'ಹೊಸತು' ಬಳಗದ ಅಭಿನಂದನೆಗಳು.

**ಬಹುಮಾನಿತರು**

೧. ಡಾ|| ಸಬಿಹಾ ಭೂಮೀಗೌಡ, ಕನ್ನಡ ಅಧ್ಯಯನ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳ ಗಂಗೋತ್ರಿ - ೫೭೪ ೧೯೯
(ಲೇಖನ: "ದಾಸಸಾಹಿತ್ಯದಲ್ಲಿ ಮಹಿಳಾಪರ ಕಾಳಜಿಗಳು" – ಮಾರ್ಚ್ ೨೦೦೭ರ ಸಂಚಿಕೆ)

೨. "ಚಿತ್ರಲೇಖಾ", (ಸಣ್ಣಕಥೆ: "ಅರುಣನ ಗೊಂದಲ" – ನವೆಂಬರ್ ೨೦೦೬ರ ಸಂಚಿಕೆ)

# ರಂಗ ಸಂಸ್ಕೃತಿಗೊಂದು ಕೈಪಿಡಿ

**ಎ**ನ್. ಎಸ್. ವೆಂಕಟರಾಮ್ ಅವರ 'ನವಕರ್ನಾಟಕ ಕೈಪಿಡಿ – ರಂಗಭೂಮಿ' ಪ್ರಾಯೋಗಿಕ ಮಾರ್ಗದರ್ಶಿಯನ್ನು ನವಕರ್ನಾಟಕ ಪ್ರಕಾಶನ ೨೦೦೧ರಲ್ಲಿ ಪ್ರಕಟಿಸುವ ವೇಳೆಗೆ ಅದರ ಕರ್ತೃ ನಿಧನರಾಗಿದ್ದರು. ಅವರ ಸಾವು ಕನ್ನಡ ರಂಗಭೂಮಿಗೆ ನಿಜವಾದ ಅರ್ಥದಲ್ಲಿ ತುಂಬಲಾರದ ನಷ್ಟವೇ. ರಂಗಕರ್ಮಿಯಾಗಿದ್ದ ವೆಂಕಟರಾಮ್ ಎನ್.ಎಸ್.ಡಿ. ಪದವೀಧರರು. ನಿರ್ದೇಶನ ಇವರ ವಿಶೇಷ ಅಧ್ಯಯನ. ವಿದ್ಯಾರ್ಥಿ ಪ್ರಶಸ್ತಿಯಾದ 'ಭಾರತ್ ಪುರಸ್ಕಾರ್' ವಿಜೇತರಾಗಿದ್ದರು.

ಸ್ವಂತ ಅನುಭವ, ಜೊತೆಗೆ ವಿಶೇಷ ಅಧ್ಯಯನ ಮತ್ತು ಶೋಧಕ ಮನಸ್ಸನ್ನು ಈ ಕೃತಿಯಲ್ಲಿ ಕಾಣಬಹುದು : ಹಿನ್ನೋಟದಲ್ಲಿ ಮೂರು ಭಾಗಗಳು : (೧) ರಂಗವಿಕಾಸ (ಪಾಶ್ಚಾತ್ಯ ಮತ್ತಿತರ ದೇಶಗಳು, ಭಾರತೀಯ, ಕನ್ನಡ ರಂಗಭೂಮಿ). (೨) ಪಾಶ್ಚಾತ್ಯ ರಂಗಪರಂಪರೆ ಹಾಗೂ ವಾಸ್ತವೋತ್ತರ ರಂಗಶೈಲಿ. (೩) ಭಾರತೀಯ ರಂಗಪರಂಪರೆ. ಒಳನೋಟದಲ್ಲಿ ಪ್ರಯೋಗಾಂಗಗಳು ಒಳಗೊಂಡಿವೆ. ಮುನ್ನೋಟ ವಿಭಾಗಗಳಲ್ಲಿ: ನಾಟಕ ಕೃತಿ, ಪೂರ್ವಸಿದ್ಧತೆ, ಸಂಯೋಜನೆ ಮತ್ತು ರಂಗಚಿತ್ರಣ ಮತ್ತು ರಂಗಕೃತಿ ನಿರ್ಮಾಣ ಎಂಬುದಾಗಿ, ನಾಟಕದ ಪ್ರದರ್ಶನಕ್ಕೆ ಸಂಬಂಧಿಸಿದಂತೆ ಬೇಕಾದ ಮಾಹಿತಿ ಇದೆ. ಅನುಭವದ ಸಂದರ್ಭ ವಿಶೇಷಗಳು ನಿರೂಪಿತವಾಗಿವೆ. ರಂಗಕರ್ಮಿಯ ಅನುಭವ ಕಥನದಂತಿರುವ ಈ ಭಾಗ, ಪರಿಶ್ರಮ ಪರಿಣಾಮಗಳ ಭಾಷ್ಯದಂತಿದೆ. ಚರಿತ್ರೆ ಮತ್ತು ಪ್ರಯೋಗಕ್ಕೆ ಸಂಬಂಧಿಸಿದಂತೆ ಕಪ್ಪುಬಿಳುಪಿನ ಫೋಟೋಗಳು, ರೇಖಾಚಿತ್ರಗಳು ತುಂಬಿರುವ ಕೃತಿ. ಓದುಗನಿಗೆ ರಂಗಮಂಚ, ಪ್ರೇಕ್ಷಕಾಂಗಣ, ರಂಗಪಠ್ಯ (ನಾಟಕ), ರಂಗಶಾಸ್ತ್ರ, ರಂಗಚರಿತ್ರೆ ಮತ್ತು ಪ್ರಯೋಗ ಪ್ರದರ್ಶನಗಳ ಪ್ರಯೋಗಾಲಯದಂತೆ ಭಾಸವಾಗುತ್ತದೆ. ಈ ಎಲ್ಲ ಪರಿಶ್ರಮದ ಉದ್ದೇಶ ರಂಗಕರ್ಮಿಗಳಿಗೆ 'ಕೈಪಿಡಿ'ಯಾಗ ಬೇಕೆಂಬುದು. ಈ ನಿಟ್ಟಿನಲ್ಲಿ ಬಹು ಉಪಯುಕ್ತ 'ಕೈಪಿಡಿ'ಯಾಗಿದೆ ಎಂಬುದು ನಿಚ್ಚಳವಾಗಿ ಗೋಚರಿಸುತ್ತದೆ.

ಪ್ರಸ್ತಾವನೆಯಲ್ಲಿ ಬಿ. ವಿ. ಕಾರಂತರು : ''ಸಂಕ್ಷಿಪ್ತವಾಗಿ ಹೇಳುವುದಾದರೆ ರಂಗ ಭೂಮಿಯ ಮುಂದಿರುವ ಸವಾಲುಗಳು ಅನಾದಿ-ಉತ್ತರವು ಅನಂತ. ಅದರಂತೆ ಈ ಹೊತ್ತಿಗೆಯೂ ಅನಾದಿ – ಅನಂತಗಳ ನಡುವೆ ನಡೆಯುವ ಒಂದು ಹುಡುಕಾಟ; ಇಲ್ಲಿಯವರೆಗಿನ ಕಂಡ-ಕೇಳಿದ-ಓದಿದ ಅನುಭವಗಳ ಸಂಗ್ರಹ ಪ್ರಯತ್ನ. ಅದಕ್ಕೇ ಇಂತಹ ಕೃತಿಗಳಿಗೆ ಎಂದೆಂದೂ ಸ್ವಾಗತವಿರುತ್ತದೆ'' ಎಂಬ ಮಾತಿನ ಮಹತ್ವ ಈ ಕೃತಿಯನ್ನು ಓದುವ ರಂಗಕರ್ಮಿಗಳಿಗೂ, ರಂಗಾಸಕ್ತರಿಗೂ ಅರಿವಾಗುತ್ತದೆ.

ಆದಿಮಾನವರಿಂದ ಆರಂಭವಾದ ಪ್ರಕೃತಿ ಪೂಜೆಯ 'ಮಾಂತ್ರಿಕ ನೃತ್ಯ'ಗಳಿಂದ ಇಂದಿನವರೆಗಿನ ಅಭಿನಯ ಕಲೆಗೆ ಪೂರಕವಾದ ರಂಗಮಂಚ, ಪ್ರೇಕ್ಷಕ ಗೃಹ, ನಾಟಕ ರಚನೆ, ಅಭಿನಯ, ಸಂಗೀತ, ನೃತ್ಯ, ರಂಗಸಜ್ಜಿಕೆ, ಕಾಸ್ಟ್ಯೂಮ್ಸ್, ಮೇಕಪ್, ಬೆಳಕು, ತಾಲೀಮು ಮತ್ತು ಪ್ರಚಾರದವರೆಗಿನ ರಂಗಪ್ರದರ್ಶನದ ಸರ್ವಾಂಗವನ್ನೂ ಸಮಗ್ರವಾಗಿ ಪರಿಚಯಿಸುವ ಕೃತಿ ಇದಾಗಿದೆ.

ಚಾರಿತ್ರಿಕ ಸಂಗತಿಗಳು, ಬೆಳವಣಿಗೆಯ ಹಂತಗಳು, ಏಳು-ಬೀಳುಗಳನ್ನು ಒಳಗೊಂಡಿರುವ ಈ ಕೃತಿ ಲೇಖಕರ ಅಧ್ಯಯನ, ಅಧ್ಯಾಪನ ಮತ್ತು ಪ್ರಯೋಗಶೀಲತೆಯ ಕೈಗನ್ನಡಿಯಂತಿದೆ. ಆದಿವಾಸಿಗಳು, ಗ್ರೀಕ್ ರಂಗಭೂಮಿ – ನಾಟಕಗಳು, ಶೇಕ್ಸ್‌ಪಿಯರ್, ಇಟಲಿ, ಗ್ರೀಕ್, ರಷ್ಯಾ, ಜರ್ಮನ್ ದೇಶಗಳ ನಾಟಕಗಳು ಮತ್ತು ಎಪಿಕ್ ಥೇಟರ್‌ವರೆಗಿನ ರಂಗಭೂಮಿಯನ್ನೂ, ಭಾರತೀಯ ರಂಗಭೂಮಿಗೆ ಸಂಬಂಧಿಸಿದಂತೆ ವೈದಿಕ, ಸಂಸ್ಕೃತ ನಾಟಕ ಪರಂಪರೆಯನ್ನು, ಭರತನ ನಾಟ್ಯಶಾಸ್ತ್ರ, ಭಾರತೀಯ ಭಾಷಾ ಪ್ರಭೇದಗಳ ಜನಪದ ರಂಗ ವಿಧಾನಗಳು: ಕರ್ನಾಟಕದ ಯಕ್ಷಗಾನ ಬಯಲಾಟ ಮತ್ತಿತರ ರಂಗ ಪ್ರಯೋಗಗಳನ್ನು ಮತ್ತು ಆಧುನಿಕ ಪ್ರಯೋಗಶೀಲತೆಯವರೆಗಿನ ರಂಗಭಾಷೆಯ ಎಲ್ಲ ವೈವಿಧ್ಯತೆಗಳನ್ನು ಸಂಗ್ರಹಿಸಿ ನಿರೂಪಿಸಿರುವ ಈ ಕೃತಿಯ ಓದು ರಂಗಭೂಮಿಯ ರಸಯಾತ್ರೆಯ ಅನುಭವವನ್ನು ತಂದುಕೊಡುತ್ತದೆ.

ಪರದೆಯ ಪರದಾಟ, ಪರದೆ ಬಿಟ್ಟದ್ದು, ಬಯಲುರಂಗ, ಬೆಳಕಿನ ಸಂಯೋಜನೆಯ ವಿಸ್ಮಯ ಅಭಿನಯ ಲೋಕವೊಂದು ಪ್ರೇಕ್ಷಕರ ಎದುರಿಗೆ ತೆರೆದುಕೊಳ್ಳುವ ವಿಧಿ ವಿಧಾನಗಳನ್ನು ಬೀದಿ ನಾಟಕಗಳ ತಂತ್ರ, ಪ್ರದರ್ಶನಗಳನ್ನು ಒಳಗೊಂಡು ಅನುಭವ ಕಥನವಾಗಿಸಿರುವ ವೆಂಕಟರಾಮ್ ಅವರ ಬರವಣಿಗೆ ಸೃಜನಾತ್ಮಕವೂ ಆಗಿದೆ. ಜಗತ್ತಿನ, ಇಂಡಿಯಾದ, ಕರ್ನಾಟಕದ; ಪ್ರಾದೇಶಿಕ-ಜಾನಪದ ಅತ್ಯುತ್ತಮ ರಂಗಕೃತಿ ಮತ್ತು ಪ್ರದರ್ಶನಗಳನ್ನು ವಿಶ್ಲೇಷಿಸುವ ವೆಂಕಟರಾಮ್ ಅವರ ಅಧ್ಯಯನದ ವ್ಯಾಪ್ತಿ ಬಹು ವಿಸ್ತಾರವಾದುದು ಎಂಬುದನ್ನು ಕೃತಿಯ ಓದುಗರು ಮನಗಾಣಬಹುದು.

ಈ ಕೃತಿ ಕೇವಲ ರಂಗ ಥಿಯರಿಯನ್ನು ಹೇಳುವುದಿಲ್ಲ. ಅದು ಪ್ರಾಯೋಗಿಕ ಪ್ರಾತ್ಯಕ್ಷಿಕೆಗಳನ್ನು ದಾಖಲಿಸುತ್ತಾ ಅಧ್ಯಯನ ಮತ್ತು ಅನುಭವವನ್ನು ಕಟ್ಟಿಕೊಡುತ್ತದೆ. ಪ್ರಯೋಗಕ್ಕೆ ನಾಟಕ ಕೃತಿಯ ಆಯ್ಕೆಯ ನಂತರ ರಂಗಕೃತಿ ನಿರ್ಮಾಣದಲ್ಲಿ: ನಟನಟಿಯರ ಆಯ್ಕೆ, ಪ್ರಯೋಗ-ಪ್ರದರ್ಶನ ವ್ಯವಸ್ಥೆ, ಪೂರ್ವಾಭ್ಯಾಸ ಮತ್ತು ಪ್ರದರ್ಶನ ಸಿದ್ಧತೆಯವರೆಗಿನ ವಾರವಾರದ ವೇಳಾಪಟ್ಟಿಯನ್ನು, ಅದರ ಪರಿಷ್ಕರಣವನ್ನು, ಪಾತ್ರ ವಿಂಗಡನೆ, ನಿರ್ದೇಶನದ ರೀತಿ ರಿವಾಜುಗಳನ್ನು, ನಿರ್ದೇಶಕನ ಕಾರ್ಯಭಾರದ ತಾಂತ್ರಿಕತೆಯನ್ನು ನಿರೂಪಿಸುತ್ತಾ: ''ಒಂದೊಂದು ಪ್ರದರ್ಶನವೂ ನಿರ್ದೇಶಕನ ಸೃಜನಶೀಲತೆಯನ್ನು ಒರೆಗೆ ಹಚ್ಚುವ ಒಂದೊಂದು ಸವಾಲು. ಆತ್ಮವಿಮರ್ಶೆಗೆ ಸಿದ್ಧನಾಗಿರುವ ನಿರ್ದೇಶಕ ಒಂದು ಪ್ರಯೋಗದ ನಂತರ ಮತ್ತೊಂದು ಪ್ರಯೋಗದ ಗುಣಮಟ್ಟವನ್ನು ಉತ್ತಮಪಡಿಸಬಲ್ಲನೆಂಬ ಛಲ, ಭರವಸೆ, ಆತ್ಮವಿಶ್ವಾಸ ಹೆಚ್ಚಿಸಿಕೊಳ್ಳುತ್ತಾ ಹೋಗುತ್ತಾನೆ'' ಎನ್ನುತ್ತಾರೆ ವೆಂಕಟರಾಮ್. ''ಅನುಭವವೇ ಎಲ್ಲವನ್ನೂ ಕಲಿಸುವ ಅತ್ಯುತ್ತಮ ಶಾಲೆ; ಆದರೆ ಅನುಭವಶಾಲೆಯಲ್ಲಿ ಕಲಿಯಲು ತೆರಬೇಕಾದ ಫೀಸು ಮಾತ್ರ ದುಬಾರಿ'' ಎಂಬ ನಾಣ್ನುಡಿಯನ್ನು ವೆಂಕಟರಾಮ್ ಉಲ್ಲೇಖಿಸುತ್ತಾರೆ.

ಕನ್ನಡದಲ್ಲಿ ಇಂಥ ಕೃತಿಯೊಂದು ಈವರೆಗೆ ಇದ್ದಿಲ್ಲ. ಆದರೆ ನಟನೆಗೆ ಸಂಬಂಧಿಸಿದಂತೆ ಪ್ರಕಟಗೊಂಡಿರುವ ಪ್ರಸನ್ನರ 'ನಟನೆಯ ಪಾಠಗಳು' ಒಂದು ಉಪಯುಕ್ತ ಕೃತಿ. ಅಕ್ಷರ ಅವರ 'ರಂಗಭೂಮಿ' ಕೃತಿ ರಂಗಭೂಮಿಗೆ ಸಂಬಂಧಿಸಿದ ವಿಸ್ತೃತ ಕೃತಿಯಾಗಿದೆ. ಇನ್ನೂ ತುಂಬ ಹಿಂದಕ್ಕೆ ಹೋದರೆ 'ಕನ್ನಡ ರಂಗಭೂಮಿ ನಡೆದುಬಂದ ದಾರಿ' ಎಂಬ ಶ್ರೀರಂಗರು ಸಂಪಾದಿಸಿದ ಕೃತಿಯಲ್ಲಿ 'ನಾಟ್ಯಶಾಸ್ತ್ರ – ತಂತ್ರ ಮತ್ತು ತರಬೇತಿ' ಎಂಬ ಅಧ್ಯಾಯದಲ್ಲಿ 'ಪ್ರಯೋಗ' ಕೈಪಿಡಿಯನ್ನು ತಮ್ಮ ಮಿತಿಯಲ್ಲಿ ಕೊಡಲು ಪ್ರಯತ್ನಿಸಿದ್ದಾರೆ ಎನ್ನಬಹುದು ಎಂದು ಬಿ. ವಿ. ಕಾರಂತರು ಈ ಕೃತಿಯ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿದ್ದಾರೆ.

ಇಂದಿನ ರಂಗ ಚಟುವಟಿಕೆಗಳ ಸಂದರ್ಭಕ್ಕೆ, ರಂಗಭೂಮಿಯನ್ನು ಕುರಿತಾದ ಸಮಗ್ರ 'ಕೈಪಿಡಿ' ವೆಂಕಟರಾಮ್ ಅವರ ಕೃತಿಯಾಗಿದೆ. ರಂಗಭೂಮಿ ಒಂದು ಸಂಕೀರ್ಣ ಪ್ರದರ್ಶನ ಕಲೆಯ ಭೂಮಿಕೆ. ಅದರ ಎಲ್ಲ ಸಂಕೀರ್ಣ ಅಂಗಗಳನ್ನೂ ಚಾರಿತ್ರಿಕವಾಗಿ ವಿಶ್ಲೇಷಣೆಗೆ ಒಳಪಡಿಸಿರುವ ವೆಂಕಟರಾಮ್ ರಂಗಕರ್ಮಿಗಳಿಗೆ ಉಪಯುಕ್ತವಾದ ಸಲಹೆ ಸೂಚನೆಗಳನ್ನು ನೀಡಿದ್ದಾರೆ. ಅವರ ಅನುಭವಜನ್ಯ ಸಲಹೆ ಸೂಚನೆಗಳು ಇಂದಿನ ರಂಗಕರ್ಮಿಗಳಿಗೆ ಬಹೂಪಯುಕ್ತವಾದುವು ಎಂಬುದು ಗಮನಾರ್ಹ ಸಂಗತಿ.

ಪ್ರಸ್ತಾವನೆಯಲ್ಲಿ ಬಿ. ವಿ. ಕಾರಂತರು ಒಂದು ಪ್ರಶ್ನೆಯನ್ನು ಎತ್ತಿದ್ದಾರೆ: ''ನಮ್ಮ ರಂಗಭೂಮಿ ಇಂದಿನ ಜಾಗತೀಕರಣದ ಭರಾಟೆಯಲ್ಲಿ – ಸುರಕ್ಷಿತವಾಗಿ ಬದುಕಲು ಸಾಧ್ಯವೇ ?'' ಉತ್ತರರೂಪವಾಗಿ 'ಪ್ರಾದೇಶೀಕರಣ ಹೆಚ್ಚು ಅರ್ಥಪೂರ್ಣವಾಗಿದೆ' ಎಂದು ಸೂಚಿಸಿದ್ದಾರೆ. 'ರಂಗ ಸಂಸ್ಕೃತಿ'ಯ ಈ ಕೃತಿಯ ಕಥನದಲ್ಲಿ ಪ್ರಾದೇಶಿಕ ರಂಗಭೂಮಿಯ ಚರಿತ್ರೆ ಇದೆ. ಭಾರತೀಯ ವಿವಿಧ ಭಾಷೆಗಳ ಜಾನಪದ ರಂಗಭೂಮಿಯ ವಿಶ್ಲೇಷಣೆ ಇದೆ. ಅನುಭವದ ಅವಲೋಕನವಿದೆ; ಮಾರ್ಗಸೂಚಿಗಳಿವೆ. ಆದ್ದರಿಂದಲೇ, ಇಂದಿನ ಸಂದರ್ಭಕ್ಕೆ ದೇಶೀಯ ಸಶಕ್ತ ರಂಗಭೂಮಿ ಪರ್ಯಾಯವಾದುದು. ಆದ್ದರಿಂದ ಈ ಜನಮಾಧ್ಯಮವನ್ನು ಕಟ್ಟುವ ಕಾಯಕದಲ್ಲಿ ತೊಡಗಿರುವವರೆಲ್ಲರಿಗೂ ಈ ಕೃತಿ ನಿಜವಾದ 'ಕೈಪಿಡಿ'. ವೆಂಕಟರಾಮ್ ಅವರ ಜೀವಿತ ಸಾಧನೆಯ ಈ ಕೃತಿಯನ್ನು ಪ್ರಕಟಿಸಿರುವ 'ನವಕರ್ನಾಟಕ ಪ್ರಕಾಶನ' ಮತ್ತು ಪ್ರಕಾಶಕ ರಾಜಾರಾಮ್ ಅವರ ಪರಿಶ್ರಮವನ್ನು ಅಭಿನಂದಿಸಲೇಬೇಕು.

**ಸತ್ಯನಾರಾಯಣರಾವ್ ಅಣತಿ**, ರಚನ, ಶರಾವತಿ ನಗರ, ಶಿವಮೊಗ್ಗ - ೫೭೭ ೨೦೧

## ಭಾರತ–ಅಮೆರಿಕಾ :

# ಸಂಬಂಧ ಇರಲಿ, ಸಾಹಚರ್ಯೆ ಬೇಡ

• ಎಂ. ಸಿ. ನರಸಿಂಹನ್
• ಸೀಯಾರ್ಕೆ

**ಭಾ**ರತ-ಅಮೆರಿಕಾ ಸಂಬಂಧಗಳ ವ್ಯಾಪ್ತಿ ಈಗ ಚರ್ಚೆಗೆ ಗುರಿಯಾಗಿರುವ ಷಯ. ಅಮೆರಿಕಾದೊಂದಿಗೆ ನ್ಯೂಕ್ಲಿಯರ್ ಕ್ಷೇತ್ರದಲ್ಲಿ ಸಹಕಾರ ಕುರಿತು ಅಧ್ಯಕ್ಷ ಾರ್ಜ್ ಬುಷ್ ಮತ್ತು ಪ್ರಧಾನಿ ಮನಮೋಹನ್ ಸಿಂಗ್ ನಡುವೆ ಒಪ್ಪಂದ ಾದಾಗಿನಿಂದ ನಿರಂತರವಾಗಿ ಚರ್ಚೆ ನಡೆಯುತ್ತಿದೆ. ಅದು ನಮ್ಮ ದೇಶದ ಸ್ವತಂತ್ರ ದೇಶಾಂಗ ನೀತಿ, ಸ್ವಾತಂತ್ರ್ಯ, ಸಾರ್ವಭೌಮತ್ವ, ನ್ಯೂಕ್ಲಿಯರ್ ಕ್ಷೇತ್ರದಲ್ಲಿ ಮುನ್ನಡೆ, ಪ್ಪಂದಗಳ ವಿಷಯದಲ್ಲಿ ಸರಕಾರದ ಕ್ರಮದ ಬಗ್ಗೆ ಪಾರ್ಲಿಮೆಂಟಿನ ಅಧಿಕಾರ ೂದಲಾದ ಪ್ರಶ್ನೆಗಳನ್ನು ಮುಂದೆ ತಂದಿದೆ. ೨೦೦೬ರ ಡಿಸೆಂಬರ್ ತಿಂಗಳಿನಲ್ಲಿ ಮೆರಿಕಾದ ಶಾಸಕಾಂಗದ ಉಭಯ ಸದನಗಳು ನ್ಯೂಕ್ಲಿಯರ್ ಒಪ್ಪಂದ ಕುರಿತು ರ್ಚಿಸಿ ಅನುಮೋದಿಸಿದ ಹೈಡ್ ಕಾಯಿದೆಯು ವಿವಾದವನ್ನು ಮತ್ತಷ್ಟು ಹೆಚ್ಚಿಸಿದೆ. ಕಾಯಿದೆಯ ಆಧಾರದ ಮೇಲೆ ೧೨೩ ಒಪ್ಪಂದ ಎಂದು ಕರೆಯಲಾಗುತ್ತಿರುವ ಸ್ತಾವೇಜನ್ನು ಭಾರತದ ಮೇಲೆ ಹೇರಿ, ಚಾಲ್ತಿಗೆ ತರಲು ಪ್ರಯತ್ನಿಸುತ್ತಿರುವುದು ಎಲ್ಲ ನವಿಭಾಗಗಳ ತೀವ್ರ ವಿರೋಧಕ್ಕೆ ಗುರಿಯಾಗಿದೆ.

ಕಾಂಗ್ರೆಸ್ ನೇತೃತ್ವದಲ್ಲಿರುವ ಯು.ಪಿ.ಎ. ಸರಕಾರಕ್ಕೆ ಬಾಹ್ಯ ಬೆಂಬಲ ೀಡುತ್ತಿರುವ ಎಡಪಕ್ಷಗಳು ತಾತ್ವಿಕ ನೆಲೆಯಿಂದ ಹಾಗೂ ್ಯವಹಾರಿಕ ದೃಷ್ಟಿಯಿಂದ ಒಪ್ಪಂದವನ್ನು ವಿರೋಧಿಸುತ್ತಿವೆ; ಾವುದೇ ಕಾರಣಕ್ಕೂ ಅದನ್ನು ಕಾರ್ಯರೂಪದಲ್ಲಿ ತರ ಿಡದು ಎಂಬ ಸ್ಪಷ್ಟ ನಿಲುವು ತಳೆದಿವೆ. ಒಪ್ಪಂದವು ನ್ಯೂಕ್ಲಿಯರ್ ತ್ರದಲ್ಲಿ ಸ್ವತಂತ್ರ ಬೆಳವಣಿಗೆಗೆ ಅಡ್ಡಿಯಾಗುವುದಷ್ಟೇ ಅಲ್ಲದೆ, ಾರತದ ವಿದೇಶಾಂಗ ನೀತಿಯನ್ನು ಅಮೆರಿಕಾದ ನೀತಿಗೆ ಲಗತ್ತಿಸುತ್ತದೆ ಮತ್ತು ೀಶವನ್ನು ಅಮೆರಿಕಾದ ವ್ಯೂಹರಚನೆಯಲ್ಲಿ ಸೆಳೆದುಕೊಳ್ಳುತ್ತದೆ, ಸಾಹಚರ್ಯೆಯಲ್ಲಿ ೊಡಗಿಸುತ್ತದೆ, ಎನ್ನುವುದು ಈ ಪಕ್ಷಗಳ ಮುಖ್ಯ ಆರೋಪ. ಒಪ್ಪಂದಕ್ಕೆ ಎಡಪಕ್ಷಗಳ ಸಮ್ಮತಿ ಸರಕಾರದ ಉಳಿವು ಅಳಿವಿನ ಪ್ರಶ್ನೆಯಾಗಿ ಪರಿಗಣಿಸಲಾಗಿದೆ. ಪ್ರಧಾನ ರೋಧ ಪಕ್ಷವಾಗಿರುವ ಭಾಜಪ ಹಾಗೂ ಅದರ ಮಿತ್ರ ಪಕ್ಷಗಳು ತಾತ್ವಿಕವಾಗಿ ಪ್ಪಂದಕ್ಕೆ ವಿರೋಧವಿಲ್ಲದಿದ್ದರೂ, ಒಪ್ಪಂದವು ನ್ಯೂಕ್ಲಿಯರ್ ಕ್ಷೇತ್ರದಲ್ಲಿ ಪ್ರಗತಿಗೆ ಡ್ಡಿಯಾಗುತ್ತದೆ, ರಕ್ಷಣಾಕ್ಷೇತ್ರದಲ್ಲಿ ನ್ಯೂಕ್ಲಿಯರ್ ಪ್ರಯೋಗಗಳನ್ನು ನಿರ್ಬಂಧಿ ತ್ತದೆ ಎಂದು ಅಭಿಪ್ರಾಯಪಟ್ಟಿವೆ. ಸರಕಾರ ಮತ್ತು ಕಾಂಗ್ರೆಸ್ ಪಕ್ಷದ ಮಟ್ಟಿಗೆ ್ಯೂಕ್ಲಿಯರ್ ಒಪ್ಪಂದ ದೇಶದ ಪ್ರಗತಿಗೆ ಹೆಬ್ಬಾಗಿಲು; ವಿದ್ಯುತ್ ಕ್ಷೇತ್ರದಲ್ಲಿ ಅಭಿವೃದ್ಧಿಗೆ ಂಧನವನ್ನೂ ಒದಗಿಸುವ ಭರವಸೆಯ ಜೊತೆಗೆ ಅಮೆರಿಕಾದ ಬಂಡವಾಳದ ರಿವಿಗೆ, ಸರ್ವಾಂಗೀಣ ಬೆಳವಣಿಗೆಗೆ ದಾರಿ ಸುಗಮವಾಗುತ್ತದೆ. ಹೀಗೆ ರಾಜಕೀಯ ಕ್ಷಗಳು ಮಾತ್ರವೇ ಅಲ್ಲದೆ, ವಿಜ್ಞಾನಿಗಳು, ವಿಶೇಷವಾಗಿ ನ್ಯೂಕ್ಲಿಯರ್ ಕ್ಷೇತ್ರದಲ್ಲಿ ಕಾರ್ಯನಿರತರಾಗಿರುವವರು, ಬುದ್ಧಿಜೀವಿಗಳು ಒಪ್ಪಂದವನ್ನು ವಿರೋಧಿಸಿದ್ದಾರೆ. ಪರಸ್ಪರ ವಿರುದ್ಧವಾದ ಅಭಿಪ್ರಾಯ ತಲೆದೋರಿರುವಾಗ ಒಮ್ಮತ ಮೂಡುವುದು ಸಾಧ್ಯವಾಗದ ವಿಚಾರ. ಅದೇ ಸಮಯದಲ್ಲಿ ಈ ವಾದವಿವಾದಗಳು ಕೆಲವು ಮೂಲಭೂತ ಪ್ರಶ್ನೆಗಳನ್ನು ಎತ್ತಿವೆ. ಅವನ್ನು ಚರ್ಚಿಸುವುದಕ್ಕೆ ಮುನ್ನ ಕೆಲವು ವಿಚಾರಗಳನ್ನು ಗಮನಕ್ಕೆ ತಂದುಕೊಳ್ಳುವುದು ಅಗತ್ಯ.

೨೦೦೫ರಲ್ಲಿ ಭಾರತ-ಅಮೆರಿಕಾ ಜಂಟಿ ಪ್ರಕಟಣೆಯ ನಂತರದ ಎರಡು ವರ್ಷಗಳಲ್ಲಿ ನ್ಯೂಕ್ಲಿಯರ್ ಒಪ್ಪಂದವನ್ನು ಕುರಿತು ಪತ್ರಿಕೆಗಳಲ್ಲಿ ಪರ ಹಾಗೂ ವಿರೋಧವಾಗಿ ಬೇಕಾದಷ್ಟು ಲೇಖನಗಳು, ಸಂದರ್ಶನಗಳು, ಹೇಳಿಕೆಗಳು ಪ್ರಕಟಗೊಂಡಿವೆ. ಮಾಧ್ಯಮಗಳಲ್ಲಿ ಚರ್ಚೆಗಳೂ, ಸಂದರ್ಶನಗಳೂ ಪ್ರಸಾರ ಗೊಂಡಿವೆ. ಹಾಗಾಗಿ ಈ ನ್ಯೂಕ್ಲಿಯರ್ ಒಪ್ಪಂದದ ವಿಷಯದಲ್ಲಿ ಆಗಿರುವ ವಿದ್ಯಮಾನಗಳನ್ನು, ಒಪ್ಪಂದದ ವಿಶ್ಲೇಷಣೆಯನ್ನು, ಇಲ್ಲಿ ಮತ್ತೆ ಕೈಗೆತ್ತಿಕೊಳ್ಳುವುದು ಅಗತ್ಯವಿಲ್ಲ. ಆದರೆ ಈ ಇಡೀ ಚರ್ಚೆಯಲ್ಲಿ ಮೂಲ ವಿಷಯ ಹಿಂದಕ್ಕೆ ಸರಿದು, ಅದು ಯು.ಪಿ.ಎ. ಸರಕಾರ ಮತ್ತು ಎಡಪಕ್ಷಗಳ ನಡುವಣ ಸಮರ ಎನ್ನುವ ರೀತಿಯಲ್ಲಿ ಬಣ್ಣಿತವಾಗಿದೆ. ಪದೇ ಪದೇ ಅದು ಸಮ್ಮಿಶ್ರ ಸರಕಾರದ ಮುಂದುವರಿಕೆಯ ಪ್ರಶ್ನೆಯಾಗಿದೆ ಎಂದು ಚಿತ್ರಿಸಲಾಗಿದೆ. ಎಡಪಕ್ಷಗಳ ನಿಲುವು ಸೈದ್ಧಾಂತಿಕವಾಗಿ ಅಂಧವಾದ ಅಮೆರಿಕಾ ವಿರೋಧ ನೀತಿ, ಅಮೆರಿಕಾದಿಂದ ಏನೇ ಬಂದರೂ ಅನುಮಾನದಿಂದ ನೋಡುವ ಪ್ರವೃತ್ತಿ; ಇದನ್ನೇ ಮುಂದುಮಾಡಿಕೊಂಡು ಎಡಪಕ್ಷಗಳು ಸರಕಾರವನ್ನು ಬ್ಲ್ಯಾಕ್‌ಮೇಲ್ ಮಾಡುತ್ತಿವೆ ಎನ್ನುವ ಮಟ್ಟಿಗೂ ಪ್ರಚಾರ ಸಾಗಿದೆ. ಆದರೆ ಇದೆಲ್ಲ ಸತ್ಯಕ್ಕೆ ದೂರವಾದುದು. ಎಡಪಕ್ಷಗಳು ಅಮೆರಿಕಾದೊಂದಿಗೆ ಸಮಾನ ಸಂಬಂಧಗಳಿಗೆ ವಿರೋಧವಿಲ್ಲ. ಆದರೆ ಅದರೊಂದಿಗೆ ವ್ಯೂಹಾತ್ಮಕವಾಗಿ ವ್ಯವಹರಿಸುವುದನ್ನು ಬಯಸುವುದಿಲ್ಲ.

ವಿದೇಶಾಂಗ ನೀತಿಯ ಕ್ಷೇತ್ರದಲ್ಲಿ ಈಗ ಎದ್ದಿರುವಂಥ ವಾದ ವಿವಾದಗಳು ಹಿಂದೆಂದೂ ಇರಲಿಲ್ಲ. ನ್ಯೂಕ್ಲಿಯರ್ ಒಪ್ಪಂದ ಕುರಿತು ದೇಶದ ವಿಜ್ಞಾನಿಗಳ ಸಮುದಾಯದಲ್ಲಿ ಏಕಾಭಿಪ್ರಾಯವಿಲ್ಲ. ೨೦೦೫ರಲ್ಲಿ ನ್ಯೂಕ್ಲಿಯರ್ ಕ್ಷೇತ್ರದಲ್ಲಿ ಸಹಕಾರ ಕುರಿತು ಭಾರತ-ಅಮೆರಿಕಾ ಜಂಟಿ ಪ್ರಕಟಣೆಯಲ್ಲಿ ಪ್ರಸ್ತಾಪವಾದಾಗಲೇ ವಿಜ್ಞಾನಿಗಳು, ಮುಖ್ಯವಾಗಿ ನ್ಯೂಕ್ಲಿಯರ್ ವಿಜ್ಞಾನಿಗಳು, ಅದನ್ನು ಬಲವಾಗಿ ವಿರೋಧಿಸಿದರಲ್ಲದೆ ನ್ಯೂಕ್ಲಿಯರ್ ಕ್ಷೇತ್ರದಲ್ಲಿ ಸ್ವತಂತ್ರವಾದ ಮುನ್ನಡೆಗೆ ಅದು ಅಡ್ಡಿಯಾಗುವುದೆಂದು ತಿಳಿಸಿದ್ದರು. ಒಪ್ಪಂದದಲ್ಲಿನ ಆಕ್ಷೇಪಾರ್ಹ ಅಂಶಗಳನ್ನು ಎತ್ತಿತೋರಿಸಿದ್ದರು. ಪ್ರಧಾನ ಮಂತ್ರಿ ಹಾಗೂ ವಿದೇಶಾಂಗ ಸಚಿವರು ಎಲ್ಲ








ಅಭಿಪ್ರಾಯಗಳನ್ನು ಗಮನಕ್ಕೆ ತೆಗೆದುಕೊಂಡು ಯಾವುದೇ ಕಾರಣಕ್ಕೂ ಭಾರತದ ಸ್ವತಂತ್ರ ನಡವಳಿಕೆಗೆ ಭಂಗಬಾರದಂತೆ ನೋಡಿಕೊಳ್ಳುವುದಾಗಿ ಭರವಸೆ ನೀಡಿದರು. ಆದರೆ ಆ ಭರವಸೆ ಈಡೇರಿಲ್ಲ, ಅಷ್ಟೆ. ಈಗಿರುವ ರೂಪದಲ್ಲಿ ಒಪ್ಪಂದದಿಂದ ಪ್ರಯೋಜನಕ್ಕಿಂತ ಹಾನಿಯೇ ಹೆಚ್ಚು. ಅಬ್ಬರದ ಪ್ರಚಾರಕ್ಕೆ ಮಾರುಹೋಗದೆ ಇಡೀ ವಿಷಯವನ್ನು ಪರಿಶೀಲಿಸಿದರೆ ನಿಜಸ್ಥಿತಿ ಅರಿವಾಗುತ್ತದೆ. ಒಪ್ಪಂದವನ್ನು ಕಾರ್ಯ ರೂಪಕ್ಕೆ ತರದಿದ್ದರೆ, ಕೈಬಿಟ್ಟರೆ ನಷ್ಟವೇನಾಗದು. ಕಾಂಗ್ರೆಸ್ ನಾಯಕರು ಮತ್ತು ಸರಕಾರದ ಪ್ರಮುಖರು ಹೇಳುವ ಹಾಗೆ ವಿದ್ಯುಚ್ಛಕ್ತಿ ಕ್ಷೇತ್ರದಲ್ಲಿ ಮಹತ್ತರವಾದ ಬದಲಾವಣೆ ಯೇನಾಗುವುದಿಲ್ಲ. ಏಕೆಂದರೆ, ದೇಶದ ಒಟ್ಟು ವಿದ್ಯುಚ್ಛಕ್ತಿ ಉತ್ಪಾದನೆಯಲ್ಲಿ ನ್ಯೂಕ್ಲಿಯರ್ ವಿದ್ಯುಚ್ಛಕ್ತಿಯ ಪಾಲು ಶೇಕಡ ೩ರಷ್ಟು ಮಾತ್ರ. ಅಮೆರಿಕಾದ ಜೊತೆಗಿನ ಒಪ್ಪಂದದಿಂದ ಅದು ೨೦೨೦ರ ವೇಳೆಗೆ ಶೇಕಡ ೭ರಷ್ಟಕ್ಕೆ ಏರುವುದೆಂದು ಅಂದಾಜು. ಇದಕ್ಕೆ ಬೇಕಾಗುವ ಬಂಡವಾಳವೂ ದೊಡ್ಡ ಪ್ರಮಾಣದ್ದು. ಇದು ದೇಶವನ್ನು ಇನ್ನಷ್ಟು ಸಾಲದ ಮಡುವಿನಲ್ಲಿ ಮುಳುಗಿಸುವುದು ಖಚಿತ. ಅಷ್ಟೇ ಅಲ್ಲದೆ, ರಿಯಾಕ್ಟರುಗಳನ್ನು ಬಳಸಿ ಕೊಳ್ಳುವುದಕ್ಕೆ ಬೇಕಾಗುವ ಇಂಧನಕ್ಕೆ ಅಮೆರಿಕಾದ ಮೇಲೆ ಅವಲಂಬನೆ ಹೆಚ್ಚಾಗುತ್ತದೆ. ಏನಾದರೂ ಹೆಚ್ಚುಕಡಿಮೆಯಾದರೆ ಅಮೆರಿಕಾ ಇಂಧನ ಸರಬರಾಜು ನಿಲ್ಲಿಸಿಬಿಡುವ ಭೀತಿಯಲ್ಲೇ ಇರಬೇಕಾಗುತ್ತದೆ. ಭಾರತಕ್ಕಿಂತ ಅಮೆರಿಕಾಗೆ ಒಪ್ಪಂದವನ್ನು ಜಾರಿ ಗೊಳಿಸಲು ಹೆಚ್ಚು ಆಸಕ್ತಿ, ಆತುರ. ಬುಷ್ ಅಧಿಕಾರಾವಧಿಯಲ್ಲೇ ಆಗಬೇಕೆಂಬ ಹಠ. ಅದಕ್ಕಾಗಿಯೇ ಅಮೆರಿಕಾದ ಅಧಿಕಾರಿಗಳು, ರಾಯಭಾರಿಗಳು ರಾಜಕಾರಣಿಗಳನ್ನು, ವಿವಿಧ ಕ್ಷೇತ್ರಗಳ ಪ್ರಮುಖರನ್ನು ಭೇಟಿಯಾಗಿ ಮನವೊಲಿಸಲು ಸರದಿಯಾಗಿ ಭಾರತಕ್ಕೆ ಬಂದು ಹೋಗುತ್ತಿದ್ದಾರೆ.

ಈ ಒಪ್ಪಂದವನ್ನು ಏಕಶಕ್ತಿ ಕೇಂದ್ರವಾಗಿರುವ ಅಮೆರಿಕಾದ ಹಿತಾಸಕ್ತಿಗಳ ಹಿನ್ನೆಲೆಯಲ್ಲಿ, ಜಾಗತೀಕರಣ, ಉದಾರೀಕರಣ, ಅನಿರ್ಬಂಧವಾದ ವಿದೇಶೀ ಬಂಡವಾಳದ ಪ್ರವೇಶ, ಇವುಗಳ ಮೇಲಾಟದ ಪರಿಸ್ಥಿತಿಯಲ್ಲಿ ಪರಿಶೀಲಿಸಬೇಕು. ಅಮೆರಿಕಾದಿಂದ ಏನೇ ಹೊಸ ಸೂಚನೆ ಬಂದರೂ ಅದರ ಹಿಂದೆ ಆ ರಾಷ್ಟ್ರದ ಸ್ವಾರ್ಥವಿರುತ್ತದೆ, ಅದರ ಹಿತಸಾಧನೆಗಾಗಿರುತ್ತದೆ. ಅದನ್ನು ಸಾಧಿಸಿಕೊಳ್ಳಲು ಅದು ಬಗೆಬಗೆಯ ಆಮಿಷಗಳನ್ನು ಒಡ್ಡುತ್ತದೆ, ಒತ್ತಡಗಳನ್ನೂ ತರುತ್ತದೆ. ಇದು ಅನುಭವದ ಸಂಗತಿ. ಇತರ ದೇಶಗಳೊಂದಿಗೆ ಅಮೆರಿಕಾ ನಡೆದುಕೊಂಡಿರುವ ರೀತಿ ಅದನ್ನು ನೋಡಿದ್ದೇವೆ. ಮುಂದೆ ಇದನ್ನು ವಿವರವಾಗಿ ನೋಡೋಣ.

ವಿವಾದಾಸ್ಪದವಾದ ನ್ಯೂಕ್ಲಿಯರ್ ಒಪ್ಪಂದವನ್ನು ಕುರಿತು ನಮ್ಮ ಪಾರ್ಲಿಮೆಂ ಚರ್ಚೆಯಾಗಿದ್ದು ತೀರಾ ಈಚೆಗೆ. ಅದೂ ಕೂಡ ಒಂದೇ ಒಂದು ದಿನ. ವಿ ಪಕ್ಷಗಳ ನಾಯಕರು, ಸದಸ್ಯರು ಒಪ್ಪಂದದ ಬಗ್ಗೆ ತಮ್ಮ ನಿಲುವನ್ನು ಪ್ರಕಟಿಸಿದ ಏಕಾಭಿಪ್ರಾಯ ಮೂಡಲಿಲ್ಲ, ಭಿನ್ನಾಭಿಪ್ರಾಯ ಹಾಗೇ ಉಳಿಯಿತು. ಪ್ರ ಮಂತ್ರಿಗಳು ಮತ್ತು ವಿದೇಶಾಂಗ ಸಚಿವರು ಹಿಂದೆ ನೀಡಿದಂತೆಯೇ ಭರವಸೆಗ ನೀಡಿದರು. ದೇಶದ ಹಿತಾಸಕ್ತಿಗೆ ಬಾಧಕವಾಗದಂತೆ ಸರಕಾರ ನೋಡಿಕೊಳ್ಳ ಎಂದು ಒಣ ಭರವಸೆ ನೀಡಿದರು. ಅಮೆರಿಕಾದೊಂದಿಗೆ ಒಪ್ಪಂದದ ಅ ಅದರಿಂದಾಗುವ ಪ್ರಯೋಜನ ಕುರಿತು ಬಗೆಬಗೆಯಾಗಿ ಬಣ್ಣಿಸಿದರು. ಏಕಾಭಿಪ್ರಾ ಮೂಡಿಸುವ ಗೋಜಿಗೆ ಹೋಗಲಿಲ್ಲ, ಪಾರ್ಲಿಮೆಂಟಿನ ಅನುಮೋದನೆ ಪಡೆಯ ಸಾಹಸ ಮಾಡಲಿಲ್ಲ. ಪ್ರಶ್ನೆ ಹಾಗೆಯೇ ಉಳಿದಿದೆ. ನಮ್ಮ ಸಂವಿಧಾನದಲ್ಲಿ ವಿದೇಶಾ ವ್ಯವಹಾರಗಳ ವಿಚಾರದಲ್ಲಿ, ಸರಕಾರ ಅನ್ಯದೇಶಗಳೊಂದಿಗೆ ಮಾಡಿಕೊ ದ್ವಿಪಕ್ಷೀಯ ಹಾಗೂ ಬಹುಪಕ್ಷೀಯ ಒಪ್ಪಂದಗಳು ಮತ್ತು ಕರಾರುಗಳಿಗೆ, ಕೌಲುಗ ಅಂತರರಾಷ್ಟ್ರೀಯ ಒಡಂಬಡಿಕೆಗೆ ಪಾರ್ಲಿಮೆಂಟಿನ ಅಂಗೀಕಾರ ಪಡೆದುಕೊ ಬೇಕೆಂಬ ನಿಯಮವಿಲ್ಲ. ಸದಸ್ಯರು ಅಪೇಕ್ಷೆ ಪಟ್ಟರೆ ಅವನ್ನು ಚರ್ಚಿಸಬಹು ಸರಕಾರದಿಂದ ಬೇಕಾದ ಸ್ಪಷ್ಟೀಕರಣ ಪಡೆದುಕೊಳ್ಳಬಹುದು, ಅಷ್ಟೆ. ಕಳೆದ ಅರ ವರ್ಷಗಳಲ್ಲಿ ವಿದೇಶಾಂಗ ನೀತಿಯ ಕ್ಷೇತ್ರದಲ್ಲಿ ಸಾಮಾನ್ಯವಾಗಿ ಏಕಾಭಿಪ್ರಾ ಇದ್ದುದರಿಂದ ಪಾರ್ಲಿಮೆಂಟಿನ ಸಮ್ಮತಿ ಪಡೆಯುವ ಪ್ರಶ್ನೆ ಉದ್ಭವಿಸಿರಲಿಲ್ಲ. ಸಣ್ಣ ಭಿನ್ನಾಭಿಪ್ರಾಯಗಳಿದ್ದರೂ ಅದು ಒಟ್ಟಾರೆ ನೀತಿಗೆ ಬಾಧಕವಾಗಿರಲಿಲ್ಲ. ಆದರೆ ತೀವ್ರವಾದ ಭಿನ್ನಾಭಿಪ್ರಾಯಗಳಿವೆ ಮತ್ತು ವಿರೋಧವಿದೆ. ಅಧಿಕಾರದಲ್ಲಿರುವ ಪ ಸರಕಾರವೊಂದು ದೇಶವನ್ನು ದೀರ್ಘಾವಧಿಯವರೆಗೆ ಕಟ್ಟಿಹಾಕುವಂಥ ಅಂ ರಾಷ್ಟ್ರೀಯ ಮುಖ್ಯತ್ವವುಳ್ಳ ಒಪ್ಪಂದ ಅಥವಾ ಕರಾರಿಗೆ ಸಹಿಹಾಕುವಾಗ ಪಾರ್ಲಿಮೆಂ ಅಭಿಪ್ರಾಯ, ಅಂಗೀಕಾರ ಪಡೆಯುವುದು ಸೂಕ್ತವಲ್ಲವೆ ಎನ್ನುವ ಪ್ರಶ್ನೆ ಉದ್ಭವಿಸಿ ಹಾಗೆಂದಮಾತ್ರಕ್ಕೆ ಸರಕಾರ ಬೇರೆ ದೇಶಗಳ ಜೊತೆ ಮಾಡಿಕೊಳ್ಳುವ


C. Jayantilal & Co.

*Manufacturers :*

**PAPER BAGS, PLASTIC BAGS IN MULTICOLOUR PRINTING**

**59/11, S. S. I. Area**
**5th Block, Rajajinagar**
**Bangalore - 560 010**
**✆ : 23153614**

*With Best Compliments From*



**Arihant Paper Packs**

*Manufacturers & Dealers :* Paper Bags, Plastic Bags, Carton Boxes for Cakes & Sweets, Paper Plate, Napkins & Cups, Foil, Plastic, Thermocol Disposable Containers, Fancy Straws, Hotel & Housekeeping Items, Etc.

**432, Avenue Road, Bangalore - 560 002**
**✆ : 41243738, 22872580**

ಂದಕ್ಕೂ ಪಾರ್ಲಿಮೆಂಟಿನ ಅನುಮತಿ ಪಡೆಯ ಕೆಂದೇನಿಲ್ಲ. ದೀರ್ಘಾವಧಿಯ ಒಪ್ಪಂದಗಳನ್ನು ಮಾಡಿ ಳ್ಳುವಾಗ ಪಾರ್ಲಿಮೆಂಟಿನ ಒಪ್ಪಿಗೆ ಪಡೆಯುವುದು ಕ್ತ. ಏಕೆಂದರೆ, ಮುಂದೆ ಅಧಿಕಾರಕ್ಕೆ ಬರುವ ಕಾರ ಅವುಗಳಿಗೆ ಬದ್ಧವಾಗಿರಬೇಕಾಗುತ್ತದೆ. ರರಿಂದ ಹೊರಗೆ ಬರಲಾಗುವುದಿಲ್ಲ. ಆದ್ದರಿಂದ, ವಿಧಾನಕ್ಕೆ ಅಗತ್ಯವಾದ ತಿದ್ದುಪಡಿ ತಂದು ಅಂಥ ಪ್ಪಂದಗಳಿಗೆ ಸಂಬಂಧಪಟ್ಟಂತೆ ಪಾರ್ಲಿಮೆಂಟಿಗೆ ಮಾಧಿಕಾರ ಕೊಡುವುದು ಅಗತ್ಯ. ಇಲ್ಲವೆ, ರುವ ನಿಯಮಾವಳಿಗಳ ಚೌಕಟ್ಟಿನೊಳಗೇ ರ್ಲಿಮೆಂಟಿನ ಸಮ್ಮತಿ ಪಡೆಯುವ ಸತ್ಸಂಪ್ರದಾಯವನ್ನು ಢಿಗೆ ತರಬಹುದು. ಒಟ್ಟಿನಲ್ಲಿ ಸರಕಾರ ಏಕ

ರಾಜತಂತ್ರದಲ್ಲಿ ಅಮೆರಿಕಾದ್ದು ಪಳಗಿದ ಕೈ. ಈ ಬಲಾಢ್ಯ ದೇಶದೊಂದಿಗೆ ಸಮಾನ ಸಂಬಂಧಗಳು ಸಹಜವಾಗಿರುವುದು ಸಾಧ್ಯವಿಲ್ಲ. ಭಾರತದ ಸ್ವಾತಂತ್ರ್ಯ, ಸಾರ್ವಭೌಮತ್ವಗಳನ್ನು ಮೊಟಕುಗೊಳಿಸುವಂಥ ಯಾವುದೇ ಒಪ್ಪಂದ ದೇಶದ ಹಿತಾಸಕ್ತಿಗೆ ಮಾರಕ. ಸ್ವತಂತ್ರ ವಿದೇಶಾಂಗ ನೀತಿಯನ್ನು ಬಲಿ ಕೊಡುವಂಥ ಯಾವುದೇ ಕ್ರಮಕ್ಕೂ ಜನತೆಯ ವಿರೋಧವಿದೆ.

ೀಯವಾಗಿ ತೀರ್ಮಾನಗಳನ್ನು ಕೈಗೊಳ್ಳುವುದಕ್ಕೆ ಕಡಿವಾಣ ಇರಬೇಕು. ೭೧ರಲ್ಲಿ ಇಂದಿರಾ ಗಾಂಧಿ ಸರಕಾರ ಅಧಿಕಾರದಲ್ಲಿದ್ದಾಗ ಸೋವಿಯತ್ ್ಕೂಟದೊಂದಿಗೆ ಮಾಡಿಕೊಂಡ ಇಪ್ಪತ್ತು ವರ್ಷಗಳ ಸಹಕಾರ, ಸಹಯೋಗ ಪ್ಪಂದವನ್ನು ಪಾರ್ಲಿಮೆಂಟಿನ ಎರಡೂ ಸದನಗಳಲ್ಲಿ ಮಂಡಿಸಲಾಯಿತು. ಅದಕ್ಕೆ ರ್ಸಮ್ಮತ ಅಂಗೀಕಾರವೂ ದೊರೆಯಿತು. ಆಗ ಆಡಳಿತದಲ್ಲಿದ್ದ ಕಾಂಗ್ರೆಸ್ ಪಕ್ಷ ಮತದಲ್ಲಿತ್ತು. ಈಗಿನ ಸಂದರ್ಭವೇ ಬೇರೆ. ಸಮ್ಮಿಶ್ರ ಸರಕಾರ ಅಸ್ತಿತ್ವದಲ್ಲಿದೆ. ಾಗಿ ದೀರ್ಘಾವಧಿ ಒಪ್ಪಂದಗಳಿಗೆ ಪಾರ್ಲಿಮೆಂಟಿನ ಅಂಗೀಕಾರ ಪಡೆದು ಳ್ಳುವುದು ಮುಖ್ಯವೆನಿಸುತ್ತದೆ. ಕನಿಷ್ಠ ಕಾರ್ಯಕ್ರಮವೊಂದರ ಆಧಾರದ ಮೇಲೆ ಪಕ್ಷಗಳ ಬಾಹ್ಯ ಬೆಂಬಲದಿಂದ ಸರಕಾರ ನಡೆಸುತ್ತಿರುವ ಯು.ಪಿ.ಎ. ಹಲವು ಗಳನ್ನೊಳಗೊಂಡಿದೆ. ಇದರಲ್ಲಿ ಕಾಂಗ್ರೆಸ್ ಪ್ರಮುಖ ಪಕ್ಷ. ಹಾಗಾಗಿ, ದೇಶದ ತಿಗೆ ಸಂಬಂಧಿಸಿದಂತೆ ಪ್ರಧಾನವಾದ ತೀರ್ಮಾನಗಳನ್ನು ಕೈಗೊಳ್ಳುವಾಗ ಸಂಬಂಧ ರಾಜಕೀಯ ಪಕ್ಷಗಳ ಪೂರ್ಣ ಬೆಂಬಲ ಪಡೆದುಕೊಳ್ಳುವುದು ಅಗತ್ಯ. ಏಕ ೀಯವಾಗಿ ಸರಕಾರ ಪ್ರಮುಖ ತೀರ್ಮಾನಗಳನ್ನು ಕೈಗೊಳ್ಳುವುದು ಸೂಕ್ತವಲ್ಲ. ಗ್ರೆಸ್ ನೇತೃತ್ವದಲ್ಲಿರುವ ಮನಮೋಹನ ಸಿಂಗ್ ಸರಕಾರ ನ್ಯೂಕ್ಲಿಯರ್ ಸಹಕಾರ ತಂತೆ ಅಮೆರಿಕಾದೊಂದಿಗೆ ಒಪ್ಪಂದಕ್ಕೆ ಸಹಿಹಾಕಿ ಸಮ್ಮಿಶ್ರ ಸರಕಾರದ ಎಲ್ಲ ಕೀಯ ಸೂತ್ರಗಳನ್ನು ಗಾಳಿಗೆ ತೂರಿದೆ. ಸರಕಾರವನ್ನು ಸುಸೂತ್ರವಾಗಿ ನಡೆಸಿ ಂಡು ಹೋಗಲು ಯು.ಪಿ.ಎ. ಅಧ್ಯಕ್ಷೆ ಸೋನಿಯಾ ಗಾಂಧಿ ನೇತೃತ್ವದಲ್ಲಿ ರಚನೆ ಗಿರುವ ಸಮನ್ವಯ ಸಮಿತಿಯ ಮುಂದೆ ಒಪ್ಪಂದದ ವಿಷಯವನ್ನು ತರುವ ಜನ್ಯವನ್ನೂ ಸರಕಾರ ತೋರಲಿಲ್ಲ. ಸಾಕಷ್ಟು ವಾದವಿವಾದಗಳ ನಂತರ ಕೊನೆ ಗೆಯಲ್ಲಿ ಸರಕಾರ ಎಡಪಕ್ಷಗಳ ಪ್ರತಿನಿಧಿಗಳು ಹಾಗೂ ಸರಕಾರದ ಪ್ರತಿನಿಧಿ ನ್ನೊಳಗೊಂಡ ಸಮಿತಿಯೊಂದನ್ನು ರಚಿಸಿದೆ. ಈ ಸಮಿತಿ ಒಪ್ಪಂದದ ವಿವಾದಾತ್ಮಕ ಶಗಳನ್ನು ಪರಿಶೀಲಿಸುತ್ತಿದೆ. ಇನ್ನೊಂದು ಗಮನಿಸಬೇಕಾದ ಅಂಶವೆಂದರೆ, .ಪಿ.ಎ. ಸರಕಾರ ಸ್ಥಾಪನೆ ಮಾಡಿದಾಗ ಅಂಗೀಕರಿಸಿದ ಕನಿಷ್ಠ ಕಾರ್ಯಕ್ರಮದಲ್ಲಿ ಕಾರ ಅನುಸರಿಸಬೇಕಾಗಿರುವ ವಿದೇಶೀ ನೀತಿಯ ಬಗ್ಗೆ ಸ್ಪಷ್ಟ ಸೂಚನೆಗಳನ್ನು ತಲಾಗಿದೆ. ಸರಕಾರ ದೇಶದ ಸ್ವಾತಂತ್ರ್ಯ ಮತ್ತು ಸಾರ್ವಭೌಮತ್ವವನ್ನು ಎತ್ತಿ ಯುವಂಥ, ಅಲಿಪ್ತ ಚಳವಳಿಯನ್ನು ಪುನಶ್ಚೇತನಗೊಳಿಸುವಂಥ, ಎಲ್ಲ ಶಗಳೊಂದಿಗೂ ಸಮಾನ ಸಂಬಂಧ ಬೆಳೆಸುವಂಥ ನೀತಿಯನ್ನು ಅನುಸರಿಸ ಕೆಂದು ಸ್ಪಷ್ಟವಾದ ನಿರ್ದೇಶನ ನೀಡಿದೆ. ಮನಮೋಹನ ಸಿಂಗ್ ಸರಕಾರ ಇದಕ್ಕೆ ರಿಕ್ತವಾಗಿ ನಡೆದುಕೊಂಡಿದೆ.

ಭಾರತ-ಅಮೆರಿಕಾ ಸಂಬಂಧಗಳನ್ನು ಹೊಸ ಮಜಲಿಗೆ ಒಯ್ಯುತ್ತದೆ ಎಂದು ಚುತ್ತಿರುವ ಈ ಒಪ್ಪಂದ ಭಾರತದ ವಿದೇಶಾಂಗ ನೀತಿಯ ಮೇಲೆ ಯಾವ ಣಾಮ ಉಂಟುಮಾಡುತ್ತದೆ, ಮಾಡಿದೆ ಎನ್ನುವುದನ್ನು ಗಮನಿಸೋಣ. ಅಂತರ ಷ್ಟ್ರೀಯ ಪರಮಾಣುಶಕ್ತಿ ಆಯೋಗದ ಸಭೆಯಲ್ಲಿ ಭಾರತವು ಅಮೆರಿಕಾದ ವಾಗಿ ನಿಂತು ಇರಾನಿನ ವಿರುದ್ಧ ಮತಹಾಕಿದ್ದು ಮೊದಲ ಅನಾಹುತ. ಅಮೆರಿಕಾದ ಡಕ್ಕೆ ಮಣಿದುದಕ್ಕೆ ಇದು ಸಾಕ್ಷಿ. ಅಲಿಪ್ತ ಚಳವಳಿಯ ಸದಸ್ಯರಾಷ್ಟ್ರವಾಗಿ, ರತದ ಮಿತ್ರನಾಗಿರುವ ಇರಾನ್ ಎಸಗಿದ ಅಪರಾಧವಾದರೂ ಏನು? ರಿಕಾವನ್ನು ಓಲೈಸಲು ಮನಮೋಹನ ಸಿಂಗ್ ಸರಕಾರ ಇರಾನಿನ ವಿರುದ್ಧ ಮತ ತು, ಅಷ್ಟೆ. ಇದರ ಪರಿಣಾಮವಾಗಿ ಇಂಧನಾನಿಲ ಸರಬರಾಜು ಕೊಳವೆ ಮಾರ್ಗ ಹಾಕುವ ವಿಚಾರದಲ್ಲಿ ಇರಾನಿನೊಂದಿಗೆ ಮಾತುಕತೆ ಮುರಿದುಬಿತ್ತು. ಅಷ್ಟೇ ಅಲ್ಲ, ನ್ಯೂಕ್ಲಿಯರ್ ಒಪ್ಪಂದ ಜಾರಿಗೆ ಬರುವ ಮೊದಲೇ ರಷ್ಯಾದೊಂದಿಗೆ ನ್ಯೂಕ್ಲಿಯರ್ ಸ್ಥಾವರದ ಸ್ಥಾಪನೆ ಕುರಿತು ಮಾಡಿಕೊಂಡಿರುವ ಒಪ್ಪಂದ ಕೂಡ ಮುರಿದುಬೀಳುವ ಸ್ಥಿತಿ ತಲುಪಿದೆ. ಇರಾನಿನ ವಿರುದ್ಧ ಅಮೆರಿಕಾ ವಿಧಿಸಿರುವ ಆರ್ಥಿಕ ದಿಗ್ಬಂಧನದಲ್ಲೂ ಭಾರತ ಭಾಗಿಯಾಗ ತೊಡಗಿದೆ. ಇನ್ನು ಮಿಲಿಟರಿ ಕ್ಷೇತ್ರದಲ್ಲಿ ಅಮೆರಿಕಾದ ಪ್ರವೇಶ ಅಧಿಕಗೊಳ್ಳುತ್ತಿದೆ. ಅಮೆರಿಕಾದ ಯುದ್ಧನೌಕೆ, ನ್ಯೂಕ್ಲಿಯರ್ ಅಸ್ತ್ರಸಜ್ಜಿತ 'ನಿಮಿಟ್ಜ್' ಚೆನ್ನೈನ ಬಂದರಿನಲ್ಲಿ ಬೀಡುಬಿಟ್ಟದ್ದು ಆಕಸ್ಮಿಕವೇನಲ್ಲ. ತೀವ್ರ ವಿರೋಧ ಹಾಗೂ ಪ್ರತಿಭಟನೆ ಇದ್ದರೂ ಈ ನೌಕೆ ನಾಲ್ಕು ದಿನ ಇತ್ತು. ಈ ನೌಕೆ ೧೯೭೧ರಲ್ಲಿ ಬಾಂಗ್ಲಾ ವಿಮೋಚನೆಯ ಸಮಯದಲ್ಲಿ, ಭಾರತ-ಪಾಕಿಸ್ತಾನ ಯುದ್ಧದ ಸಂದರ್ಭದಲ್ಲಿ, ಭಾರತಕ್ಕೆ ಬೆದರಿಕೆ ಹಾಕಲು ಬಂಗಾಳಕೊಲ್ಲಿಯಲ್ಲಿ ಗಸ್ತು ತಿರುಗುತ್ತಿದ್ದುದನ್ನು ನೆನಪಿಸಿಕೊಳ್ಳಬೇಕು. ಈಗಲೇ ಹೀಗಿರುವಾಗ, ಒಪ್ಪಂದ ಕಾರ್ಯರೂಪಕ್ಕೆ ಬಂದರೆ ಏನಾಗುವುದೆಂದು ಊಹಿಸಿಕೊಳ್ಳಬಹುದು. ಭಾರತದ ವಿದೇಶಾಂಗ ನೀತಿ ಸಂಪೂರ್ಣವಾಗಿ ಸ್ವಾತಂತ್ರ್ಯ ಕಳೆದುಕೊಂಡು ಅಮೆರಿಕಾದ ಹಿಂಬಾಲಕನಾಗುವುದರಲ್ಲಿ ಸಂಶಯವಿಲ್ಲ. ಅಮೆರಿಕಾ ಇತರ ದೇಶಗಳ ಜೊತೆ ವ್ಯವಹರಿಸುವಾಗ ತನಗೆ ಹೆಚ್ಚು ಅನುಕೂಲವಾಗುವುದನ್ನು ನೋಡಿಕೊಳ್ಳುತ್ತದೆ. ಕಳೆದ ಅರವತ್ತು ವರ್ಷಗಳಲ್ಲಿ ಭಾರತ-ಅಮೆರಿಕಾ ಸಂಬಂಧಗಳ ಇತಿಹಾಸವೇ ಅದಕ್ಕೆ ಉದಾಹರಣೆ.

ಇನ್ನೂರು ವರ್ಷಗಳಿಗೂ ಹೆಚ್ಚು ಕಾಲದ ಹಿಂದೆ ಅಸ್ತಿತ್ವಕ್ಕೆ ಬಂದ ಸ್ವತಂತ್ರ ರಾಷ್ಟ್ರ ಅಮೆರಿಕಾ ತನ್ನ ಆರ್ಥಿಕ ಹಾಗೂ ಮಿಲಿಟರಿ ಪ್ರಾಬಲ್ಯದಿಂದ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಅಧಿನಾಯಕತ್ವದ ಪಾತ್ರ ವಹಿಸತೊಡಗಿದೆ. ಅತ್ಯಂತ ಹಳೆಯ ಪ್ರಜಾಪ್ರಭುತ್ವ ವ್ಯವಸ್ಥೆಯ ಹರಿಕಾರ ಎಂದು ಕರೆದುಕೊಳ್ಳುವ ಅಮೆರಿಕಾ ಪ್ರಜಾಪ್ರಭುತ್ವಕ್ಕೆ ತೋರಿರುವ ಮನ್ನಣೆ ಸಂಶಯಾಸ್ಪದ. ಏಕೆಂದರೆ, ಅಮೆರಿಕಾದ ಆಡಳಿತೆಯ ಕೃಪಾಶ್ರಯದಲ್ಲಿ ಪ್ರಪಂಚದ ವಿವಿಧ ದೇಶಗಳಲ್ಲಿ ಸರ್ವಾಧಿಕಾರಿ ಆಡಳಿತಗಳು ವಿಜೃಂಭಿಸುತ್ತಿವೆ. ನಮ್ಮ ನೆರೆ ರಾಷ್ಟ್ರ ಪಾಕಿಸ್ತಾನ ಅದಕ್ಕೊಂದು ಉದಾಹರಣೆ. ಇತರ ಐರೋಪ್ಯ ದೇಶಗಳಂತೆ ವಸಾಹತುಗಳನ್ನು ಸ್ಥಾಪಿಸಿ, ಸಾಮ್ರಾಜ್ಯಶಾಹಿಪಟ್ಟ ಪಡೆದುಕೊಳ್ಳುವ ಗೋಜಿಗೆ ಅಮೆರಿಕಾ ಹೋಗಲಿಲ್ಲ ಎನ್ನುವುದು ನಿಜ. ಆದರೆ ಅದು ವಸಾಹತು ದೇಶಗಳಿಗಿಂತಲೂ ಹೆಚ್ಚು ಅಪಾಯಕಾರಿ. ಸಾಮ್ರಾಜ್ಯಶಾಹಿ ಅಧಿನಾಯಕತ್ವದ ಹೆಬ್ಬಯಕೆಯನ್ನು ಹೊಂದಿರುವ ಅಮೆರಿಕಾ, ವ್ಯವಹಾರದಲ್ಲಿ ಚತುರ ರಾಷ್ಟ್ರ. ದಕ್ಷಿಣ ಅಮೆರಿಕಾದ ದೇಶಗಳ ಶೋಷಣೆ ಅದಕ್ಕೆ ಒಂದು ನಿದರ್ಶನ. ಇತರ ದೇಶಗಳನ್ನು ತನ್ನ ನಿಯಂತ್ರಣದಲ್ಲಿರಿಸಿಕೊಂಡು, ಆರ್ಥಿಕವಾಗಿ ಅಧೀನವಾಗಿಸುವ ಕರಾಮತ್ತು ಅದಕ್ಕೆ ಕರಗತವಾಗಿದೆ. ಹಣಬಲ ಹಾಗೂ ಭುಜಬಲ ಉಪಯೋಗಿಸಿಕೊಂಡು ತನ್ನ ಉದ್ದೇಶ ಸಾಧಿಸಿಕೊಳ್ಳುವ ಅಮೆರಿಕಾ ಎಲ್ಲ ಸಾಮ್ರಾಜ್ಯಶಾಹಿಗಳಿಗಿಂತ ಹೆಚ್ಚು ಅಪಾಯಕಾರಿ. ಅದರ ಬೆಳವಣಿಗೆಯೇ ಇತರರ ಅವನತಿಯ ಮೇಲೆ, ಹಿಂಸಾಚಾರದಿಂದಲೇ ರೂಪುಗೊಂಡಿರುವುದು ಐತಿಹಾಸಿಕ ಸತ್ಯ. ಸ್ಥಳೀಯ ಮೂಲ ನಿವಾಸಿ ರೆಡ್ ಇಂಡಿಯನ್ನರನ್ನು ನಿರ್ನಾಮಗೊಳಿಸಿದ ರೀತಿಯಲ್ಲೇ ಇತರ ಜನರ ಸ್ವಾತಂತ್ರ್ಯವನ್ನು ಹರಣ ಮಾಡುವ ಪ್ರವೃತ್ತಿಯನ್ನು ಅದು ಬೆಳೆಸಿಕೊಂಡಿದೆ. ಅಪಾರವಾದ ನೈಸರ್ಗಿಕ ಸಂಪತ್ತನ್ನು ಹೊಂದಿರುವ ಅಮೆರಿಕಾ ಬಹುಬೇಗ ಆರ್ಥಿಕವಾಗಿ ಅಭಿವೃದ್ಧಿ ಹೊಂದಿತು. ಹತ್ತೊಂಬತ್ತನೇ ಶತಮಾನದಲ್ಲಿ ಯೂರೋಪಿನ ರಾಷ್ಟ್ರಗಳು ಮಾರುಕಟ್ಟೆಯ ವಿಸ್ತರಣೆಗೆ ಪೈಪೋಟಿ ನಡೆಸುತ್ತಿದ್ದು, ವಸಾಹತೀಕರಣವನ್ನು ಸುಭದ್ರಗೊಳಿಸಲು ನೋಡುತ್ತಿರುವಾಗ, ಅಮೆರಿಕಾ ನಿಧಾನವಾಗಿ ತನ್ನ ಬಂಡವಾಳ ಹೂಡಿಕೆಯ ಮೂಲಕ ಮಾರುಕಟ್ಟೆಯನ್ನು ವಿಸ್ತರಿಸಿಕೊಳ್ಳುತ್ತಿತ್ತು. ಅಮೆರಿಕಾದ ಬಂಡವಾಳಗಾರರು ಬಹುರಾಷ್ಟ್ರೀಯ ಕಂಪನಿಗಳನ್ನು ಹುಟ್ಟುಹಾಕುತ್ತಿದ್ದರು. ಮೊದಲನೇ ಮಹಾಯುದ್ಧ ಸಂಭವಿಸಿದಾಗ ಅಮೆರಿಕಾ ಅದರಿಂದ ದೂರ ಉಳಿಯಿತು. ಕಚ್ಚಾಡುತ್ತಿದ್ದ ಯೂರೋಪಿನ ರಾಷ್ಟ್ರಗಳಿಗೆ ಬೇಕಾದ ಯುದ್ಧ ಸಾಮಗ್ರಿಗಳನ್ನೂ, ಸಾಲವನ್ನೂ ಒದಗಿಸಿ ಅಪಾರವಾದ ಲಾಭವನ್ನು ಗಳಿಸಿತು. ಅಷ್ಟೇ ಅಲ್ಲದೆ, ಈ ಯುದ್ಧದಿಂದ ಯೂರೋಪಿನ ರಾಷ್ಟ್ರಗಳು ದುರ್ಬಲಗೊಂಡು, ಪರಸ್ಪರ ಸಂಶಯ, ಹಗೆತನ ಹೆಚ್ಚಾಗಿ, ದ್ವೇಷ ಬುಸುಗುಟ್ಟುತ್ತಿದ್ದುದರಿಂದ ಅಮೆರಿಕಾಗೆ ಹೆಚ್ಚು ಅನುಕೂಲವಾಯಿತು. ಜರ್ಮನಿಯಲ್ಲಿ ಹಿಟ್ಲರ್ ಅಧಿಕಾರಕ್ಕೆ ಬಂದು, ಫ್ಯಾಸಿಸಂನ

ಅಟ್ಟಹಾಸ ಮೆರೆಯುತ್ತಿದ್ದರೂ ಅಮೆರಿಕಾ ಯಾವ ರೀತಿಯಲ್ಲೂ ತಲೆಕೆಡಿಸಿಕೊಳ್ಳಲಿಲ್ಲ. ಬದಲು ತನ್ನ ಲಾಭ ಎಲ್ಲಿದೆ ಎಂದು ಲೆಕ್ಕಾಚಾರದಲ್ಲಿ ತೊಡಗಿತ್ತು. ಪರೋಕ್ಷವಾಗಿ ಜರ್ಮನಿಯ ಮಿಲಿಟರೀಕರಣಕ್ಕೆ ಕುಮ್ಮಕ್ಕು ನೀಡುತ್ತಿತ್ತು. ಎರಡನೇ ಮಹಾಯುದ್ಧ ಅಮೆರಿಕಾವನ್ನು ಪ್ರಪಂಚದಲ್ಲಿ ಅತ್ಯಂತ ಪ್ರಬಲ ರಾಷ್ಟ್ರವನ್ನಾಗಿಸಿತು. ಈ ಯುದ್ಧದಲ್ಲಿ ಅಮೆರಿಕಾ ನೇರವಾಗಿ ಪ್ರವೇಶಿಸಿದ್ದು ಹಿಟ್ಲರ್ ಯೂರೋಪ್‌ಅನ್ನು ಹೆಚ್ಚು ಕಡಿಮೆ ಪೂರ್ಣವಾಗಿ ಆಕ್ರಮಿಸಿಕೊಂಡ ನಂತರವೇ. ಫ್ಯಾಸಿಸ್ಟ್ ಸೇನೆ ಸೋವಿಯತ್ ಒಕ್ಕೂಟವನ್ನು ಪ್ರವೇಶಿಸಿದ್ದು ಅಮೆರಿಕಾಗೆ ತನ್ನ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತಾಯಿತು. ಒಂದೇ ಏಟಿನಲ್ಲಿ ಎರಡು ಹಕ್ಕಿಗಳು ಪತನಗೊಳ್ಳುವ ಕನಸು ಕಂಡಿತು. ಸೋವಿಯತ್ ಒಕ್ಕೂಟದ ಪತನ ಹಾಗೂ ಜರ್ಮನಿಯ ಸೋಲನ್ನು ಅದು ಲೆಕ್ಕಹಾಕಿತ್ತು. ಅದಕ್ಕಾಗಿಯೇ ಫ್ಯಾಸಿಸಂ ವಿರುದ್ಧ ಜಂಟಿ ಕಾರ್ಯಾಚರಣೆಗೆ ಮೂರು ರಾಷ್ಟ್ರಗಳ – ಅಮೆರಿಕಾ, ಸೋವಿಯತ್ ಒಕ್ಕೂಟ ಮತ್ತು ಬ್ರಿಟನ್‌ಗಳ – ಸಂಯುಕ್ತ ರಂಗ ಸ್ಥಾಪನೆಯಾಗಿದ್ದರೂ, ಯೂರೋಪಿನಲ್ಲಿ ಎರಡನೇ ಯುದ್ಧರಂಗವನ್ನು ತೆರೆಯಲು ಅಮೆರಿಕಾ ತಡ ಮಾಡಿತು. ಈ ಎರಡನೇ ಯುದ್ಧರಂಗ ಪ್ರಾರಂಭ ಮಾಡಿದ್ದೂ ಕೂಡ ಸೋವಿಯತ್ ಸೇನೆ ಫ್ಯಾಸಿಸ್ಟ್ ಸೇನೆಯನ್ನು ಹಿಮ್ಮೆಟ್ಟಿಸಿ, ಅದಕ್ಕೆ ಸೋಲಿನ ರುಚಿ ಕಾಣಿಸಿದ ನಂತರವೇ.

ಅಮೆರಿಕಾಗೆ ಈ ಮಹಾಯುದ್ಧದಿಂದ ಎಲ್ಲ ರೀತಿಯಲ್ಲೂ ಸಾಕಷ್ಟು ಲಾಭವಾಯಿತು. ಆರ್ಥಿಕವಾಗಿ ಲಾಭ ಸಂಪಾದಿಸಿದ್ದು ಒಂದು ಕಡೆಯಾದರೆ, ದುರ್ಬಲ ಪಶ್ಚಿಮ ಯೂರೋಪಿನ ಮೇಲೆ ಹಿಡಿತ ಸಾಧಿಸಿದ್ದು ಇನ್ನೊಂದು. ಯುದ್ಧದ ಕೊನೆಯ ದಿನಗಳಲ್ಲಿ, ಜಪಾನ್ ಸೋಲಿನ ಅಂಚಿನಲ್ಲಿದ್ದಾಗ, ಹಿರೋಷಿಮ – ನಾಗಸಾಕಿ ನಗರಗಳ ಮೇಲೆ ಪ್ರಯೋಗಾರ್ಥವಾಗಿ ಪರಮಾಣು ಬಾಂಬು ಹಾಕಿ ಅಮೆರಿಕಾ ತನ್ನ ಬಲ ಪ್ರದರ್ಶಿಸಿತು. ವಿನಾಶಕಾರಿ ಪರಮಾಣು ಬಾಂಬನ್ನು ಹೊಂದಿರುವ ಏಕೈಕ ರಾಷ್ಟ್ರವಾಗಿದ್ದ ಅಮೆರಿಕಾ ಪ್ರಪಂಚದ ಮೇಲೆ ಏಕಸ್ವಾಮ್ಯ ಸ್ಥಾಪಿಸುವ ಕನಸು ಕಾಣುತ್ತಿತ್ತು. ಅಮೆರಿಕಾದ ಹೆಬ್ಬಯಕೆಗಳಿಗೆ ಆಗ ಅಡ್ಡಗೋಡೆಯಾಗಿದ್ದುದು ಸೋವಿಯತ್ ಒಕ್ಕೂಟ ಮತ್ತು ಪೂರ್ವ ಯೂರೋಪಿನ ರಾಷ್ಟ್ರಗಳು. ಅಮೆರಿಕಾದ ಪರಮಾಣು ಶಕ್ತಿಗೆ ಸವಾಲು ಹಾಕಿದ್ದು ಸೋವಿಯತ್ ಒಕ್ಕೂಟವೆ. ಇದಲ್ಲದೆ, ವಸಾಹತುಶಾಹಿಯ ಕುಸಿತದಿಂದ ಹೊಸದಾಗಿ ಸ್ವತಂತ್ರಗೊ ದೇಶಗಳನ್ನು ತನ್ನ ಪ್ರಭಾವ ವಲಯದಲ್ಲಿ ಸೆಳೆದುಕೊಳ್ಳಲು ಅಮೆರಿಕಾದ ಪ್ರಯತ್ನಗ ಅಡ್ಡವಾಗಿದ್ದುದೂ ವಿಸ್ತಾರಗೊಳ್ಳುತ್ತಿದ್ದ ಕಮ್ಯುನಿಸ್ಟ್ ರಾಷ್ಟ್ರಗಳೆ. ಇದರಿಂದ ಅಮೆರಿಕಾದ ವಿದೇಶಾಂಗ ನೀತಿಯ ಗುರಿ ಕಮ್ಯುನಿಸಂಅನ್ನು ವಿರೋಧಿಸುವುದ ಅದು ಹರಡದಂತೆ ತಡೆಯುವುದು, ಈ ನೆಪದಿಂದ ರಾಷ್ಟ್ರೀಯ ವಿಮೋಚ ಚಳವಳಿಗಳನ್ನು ಹತ್ತಿಕ್ಕುವುದು, ಹೊಸದಾಗಿ ಸ್ವತಂತ್ರಗೊಂಡಿರುವ ದೇಶಗಳ ನಾನಾ ವಿಧದ ಆಮಿಷಗಳನ್ನು ತೋರಿ ಒಲಿಸಿಕೊಳ್ಳುವುದೂ ಆಯಿತು. ಉದ್ದೇಶಗಳ ಸಾಧನೆಗಾಗಿ ಅದು ಮಿಲಿಟರಿ ಕೂಟಗಳನ್ನು ಹೊಸೆಯುವ ಕಾರ್ಯದ ತೊಡಗಿತು. ಏಷಿಯಾದ ದೇಶಗಳನ್ನು ಕಲಿಹಾಕಲು ಸ್ಥಾಪಿಸಿದ 'ಸಿಯಾಟೊ 'ಸೆಂಟೋ'ಗಳು ಅಲ್ಪಾಯುಗಳಾಗಿ ಕ್ಷಯಿಸಿದುವು. ಉಳಿದುಕೊಂಡಿರುವು ಐರೋಪ್ಯ ರಾಷ್ಟ್ರಗಳನ್ನೊಳಗೊಂಡ 'ನ್ಯಾಟೋ' ಕೂಟ. ಅಮೆರಿಕಾ ರಾಜತಂತ್ರದ 'ಅಮೆರಿಕಾದ ಹಿತಾಸಕ್ತಿಯ ರಕ್ಷಣೆ' ಎನ್ನುವ ವಿಚಾರ ಪ್ರಕಟವಾದ್ದೂ ಕೂಡ ಆಗಲೆ ಇದನ್ನೇ ಮುಂದುಮಾಡಿಕೊಂಡು ಅಮೆರಿಕಾ ಇತರ ದೇಶಗಳಲ್ಲಿ ಹಸ್ತಕ್ಷೇ ಮಾಡತೊಡಗಿತು. ಏಷಿಯ, ಆಫ್ರಿಕಾದ ಸ್ವತಂತ್ರರಾಷ್ಟ್ರಗಳು ಅಮೆರಿಕಾ ಮ ಸೋವಿಯತ್ ಒಕ್ಕೂಟ ಈ ಎರಡೂ ಬಣಗಳಿಂದ ದೂರ ಉಳಿದು ಅಲಿಪ್ತನೀತಿಯ ಅನುಸರಿಸಿದವು. ಇದು ಒಂದು ಚಳವಳಿಯ ರೂಪ ಪಡೆದು ಏಷಿಯ, ಆಫ್ರಿಕಾ ಮ ಲ್ಯಾಟಿನ್ ಅಮೆರಿಕಾಗಳ ನೂರಕ್ಕೂ ಹೆಚ್ಚು ಸದಸ್ಯಬಲವನ್ನು ಹೊಂ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಶಾಂತಿ, ಸ್ವಾತಂತ್ರ್ಯಗಳನ್ನು ಎತ್ತಿಹಿಡಿಯುವುದರ ಪ್ರಾಮುಖ್ಯವಾದ ಪಾತ್ರ ನಿರ್ವಹಿಸಿದುವು. ಅಮೆರಿಕಾ ಎಂದೂ ಈ ಚಳವಳಿಯ ಸಹಾನುಭೂತಿಯಿಂದ ಪರಿಗಣಿಸಲಿಲ್ಲ. ಅಲಿಪ್ತನೀತಿ ಎನ್ನುವುದು ಒಂದು ನೀತಿಯೆ ಅಲ್ಲ, ಅದು ಅನೀತಿ ಎಂದು ಮೂದಲಿಸುತ್ತಿತ್ತು.

ಯುದ್ಧಾನಂತರದ ಅರ್ಧ ಶತಮಾನ ಕಾಲದಲ್ಲಿ ಅಮೆರಿಕಾ ಕಮ್ಯುನಿಸಂಅ ತಡೆಯುವ, ಹಿಮ್ಮೆಟ್ಟಿಸುವ ಹೆಸರಿನಲ್ಲಿ, ಪ್ರಜಾಪ್ರಭುತ್ವ ಮತ್ತು ಮಾನವ ಹಕ್ಕುಗಳ ಕಾಪಾಡುವ ನೆಪದಲ್ಲಿ, ನಡೆಸಿದ ಕುತಂತ್ರಗಳನ್ನು, ಪ್ರತ್ಯಕ್ಷ ಪರೋಕ್ಷ ಯುದ್ಧಗಳ


REACH US TO REACH THEM

THE PROFESSIONAL COURIERS

DOMESTIC & INTERNATIONAL - COURIER & CARGO

No. 175/1-6, 1st Main Road
Seshadripuram
Bangalore - 560 020
Ph : 23316673/23560820
Mobile : 98450 59959
98444 24912

No. 153, 2nd Cross
Milk Colony
Malleshwaram West
Bangalore - 560 055
Ph : 23377519
Mobile : 98444 24907

ೂರಿಯಾ ಯುದ್ಧದಿಂದ ವಿಯೆಟ್ನಾಮ್, ಇರಾಕ್ ಯುದ್ಧದವರೆಗೆ), ವಿಧ್ವಂಸಕಾರರಿಗೆ ತ್ತು ವಿದ್ರೋಹಿಗಳಿಗೆ ನೀಡಿದ ಬೆಂಬಲವನ್ನು, ಸರ್ವಾಧಿಕಾರಿಗಳಿಗೆ ನೀಡಿದ ಯವನ್ನು ಇಲ್ಲಿ ಪಟ್ಟಿಮಾಡುವುದು ಅಗತ್ಯವಿಲ್ಲ. ಆದರೆ ಅವೆಲ್ಲವೂ ಅಮೆರಿಕಾ ತನ್ನ ಾಸಕ್ತಿ ಕಾಯ್ದುಕೊಳ್ಳಲು ಎಷ್ಟು ಕೀಳುಮಟ್ಟಕ್ಕೆ ಇಳಿಯಬಲ್ಲದು ಎನ್ನುವುದನ್ನು ಥಗೊಳಿಸುತ್ತದೆ. ಹಣಬಲ ಮತ್ತು ಶಸ್ತ್ರಾಸ್ತ್ರ ಬಲದಿಂದ ಏನು ಬೇಕಾದರೂ ಧಿಸಬಹುದು ಎಂದು ಅಮೆರಿಕಾ ಬೀಗುತ್ತಿತ್ತು. ಈಗಲೂ ಬೀಗುತ್ತಿದೆ. ಬಲಾಢ್ಯ ಮೆರಿಕಾ ಬೀಸಿದ ಶಸ್ತ್ರಾಸ್ತ್ರ ಪೈಪೋಟಿ, ವಿಧ್ವಂಸ ಚರ್ಯೆ, ಇತ್ಯಾದಿ ಆಮಿಷಗಳ ಲೆಗೆ ಬಿದ್ದ ಸೋವಿಯತ್ ಒಕ್ಕೂಟದ ವಿಘಟನೆಯು ಅಮೆರಿಕಾದ ಪ್ರತಿಷ್ಠೆಯನ್ನು ಚ್ಚಿಸಿತಲ್ಲದೆ, ಅಧಿನಾಯಕತ್ವದ ಹೆಬ್ಬಯಕೆಯನ್ನು ತೀವ್ರಗೊಳಿಸಿತು. ಮುಕ್ತಮಾರುಕಟ್ಟೆ ರ್ಥ ವ್ಯವಸ್ಥೆಯನ್ನು ಜಗತ್ತಿನ ಮೇಲೆ ಹೊರಿಸುವ ದೃಷ್ಟಿಯಿಂದ ರೂಪುಗೊಳಿಸಿದ ಗತೀಕರಣದ ನೀತಿ ಮತ್ತು ಅದಕ್ಕಾಗಿಯೇ ಸೃಷ್ಟಿಸಿದ ವ್ಯವಸ್ಥೆಯ ಹೊಂದಿಕೆ, ದಾರೀಕರಣ, ಮುಕ್ತವಾಣಿಜ್ಯ ಮೊದಲಾದ ಘೋಷಣೆಗಳು ನಿಜಕ್ಕೂ ವಿಪತ್ಕಾರಿ. ಗುರಿಯನ್ನು ತಲುಪಲು ಅಮೆರಿಕಾ ಡಬ್ಲ್ಯು.ಟಿ.ಒ., ಐ.ಎಂ.ಎಫ್., ವರ್ಲ್ಡ್ ಬ್ಯಾಂಕ್ ೊದಲಾದ ಸಂಸ್ಥೆಗಳನ್ನು ಬಳಸಿಕೊಳ್ಳುತ್ತಿದೆ. ಏಕಶಕ್ತಿ ಕೇಂದ್ರವಾಗಿ ಹೊಮ್ಮಿರುವ ಮೆರಿಕಾ ಈಗ ತನ್ನ ಇಚ್ಛೆಗೆ ವಿರೋಧವಾಗಿರುವವರನ್ನು ಬಗ್ಗು ಬಡಿಯಲು ನೇರ ರಾಕ್ರಮಣ ಚರ್ಯೆಯಲ್ಲಿ ತೊಡಗುತ್ತಿದೆ. ಯುಗೋಸ್ಲಾವಿಯ, ಆಫ್ಘಾನಿಸ್ತಾನ, ಾಕ್ ಅದಕ್ಕೆ ಉದಾಹರಣೆ. ಭಯೋತ್ಪಾದನೆಯ ವಿರುದ್ಧ ಸಮರ ಸಾರಿರುವ ಮೆರಿಕಾ ತನಗೆ ವಿರೋಧವಾಗಿರುವಂಥ ದೇಶಗಳ ಮೇಲೆ ಕಿಡಿ ಕಾರುತ್ತಿದೆ, ಬೆದರಿಕೆ ಕುತ್ತಿದೆ. ಅಮೆರಿಕಾದ ವಿದೇಶಾಂಗ ನೀತಿಯನ್ನು ಅವಲೋಕಿಸಿದರೆ ಅದರ ತಿಯೊಂದು ರಾಜತಾಂತ್ರಿಕ ಚರ್ಯೆಯ ಹಿಂದೆ ಒಂದು ಸ್ಪಷ್ಟವಾದ ಗುರಿ ಇರುವುದನ್ನು ಣಬಹುದು. ದೂರಗಾಮಿ ಉದ್ದೇಶವನ್ನು ಇರಿಸಿಕೊಂಡೇ ಮುಂದಿನ ಹೆಜ್ಜೆ ಿಸುತ್ತದೆ, ಇತರ ದೇಶಗಳೊಂದಿಗೆ ಸಂಬಂಧ ಬೆಳೆಸುತ್ತದೆ. ತನ್ನ ಉದ್ದೇಶ ಫಲಿಸಿದ ಂತರ, ಸಂಬಂಧಪಟ್ಟ ದೇಶದಿಂದ ಇನ್ನು ಹೆಚ್ಚು ಪ್ರಯೋಜನವಿಲ್ಲ ಎಂದು ಡುಬಂದಾಗ ಅದು ಆ ದೇಶವನ್ನು ಕಡೆಗಣಿಸುತ್ತದೆ, ಕೈಬಿಡುತ್ತದೆ. ರಷ್ಯಾ ಹಾಗೂ ತರ ದೇಶಗಳು ಅದಕ್ಕೆ ಉದಾಹರಣೆ. ಅಮೆರಿಕಾದ ಹಿತದೃಷ್ಟಿಯಿಂದ ಅದು ಸರಿ. ಗಾಗಿ, ಅಮೆರಿಕಾದ ಜೊತೆ ಸಂಬಂಧ ಬೆಳೆಸುವಾಗ, ಅದು ಒಡ್ಡುವ ಆಮಿಷಗಳಿಗೆ ಲಿಯಾಗದೆ, ಅದು ಬೀಸುವ ಬಲೆಗೆ ಬೀಳದೆ ಎಚ್ಚರವಹಿಸುವುದು ಅಗತ್ಯ. ಂಗ್ರೆಸ್ ಸಾಕಷ್ಟು ದೀರ್ಘಕಾಲ ಅಧಿಕಾರದಲ್ಲಿದ್ದು, ಅನುಭವ ಪಡೆದಿದ್ದರೂ ಮೆರಿಕಾದೊಂದಿಗಿನ ಸಂಬಂಧದ ವಿಚಾರದಲ್ಲಿ ವಿವೇಚನೆ ಇಲ್ಲದೆ ವರ್ತಿಸುತ್ತಿದೆ.

ಅಮೆರಿಕಾದ ವಿದೇಶಾಂಗ ನೀತಿಯ ಈ ಪ್ರಮುಖ ಘಟ್ಟಗಳನ್ನು, ವಿವಿಧ ಜಲುಗಳನ್ನು ಗಮನದಲ್ಲಿರಿಸಿಕೊಂಡು ಭಾರತ-ಅಮೆರಿಕಾ ಸಂಬಂಧಗಳನ್ನು ಶ್ಲೇಷಣೆ ಮಾಡುವ ಅಗತ್ಯವಿದೆ. ಅಮೆರಿಕಾದೊಂದಿಗಿನ ನ್ಯೂಕ್ಲಿಯರ್ ಒಪ್ಪಂದ ರಿಗೆ ಬಂದರೆ ಭಾರತದ ಅಭಿವೃದ್ಧಿಗೆ ಭಾಗ್ಯದ ಬಾಗಿಲು ತೆರೆಯುತ್ತದೆ ಎಂದು ಇಂದು ನಮೋಹನ ಸಿಂಗ್ ಮತ್ತು ಸೋನಿಯಾ ಗಾಂಧಿ ಕನಸು ಕಾಣುತ್ತಿರುವಂತೆಯೇ ತಂತ್ರ ಭಾರತದ ನಾಯಕರಾದ ಜವಾಹರಲಾಲ್ ನೆಹರೂ ಹಾಗೂ ಇತರ ಕಾಂಗ್ರೆಸ್ ಯಕರೂ ಈ ಹಿಂದೆ ಕನಸುಕಂಡಿದ್ದರು. ಆ ಕನಸನ್ನು ನನಸಾಗಿಸಲು ಸಾಕಷ್ಟು ಯತ್ನಪಟ್ಟಿದ್ದರು. ಸ್ವತಂತ್ರ ಭಾರತದ ನಾಯಕರು ದೇಶದ ಪ್ರಗತಿಗೆ ಅಮೆರಿಕಾದಿಂದ ೊಡ್ಡ ಪ್ರಮಾಣದಲ್ಲಿ ಬಂಡವಾಳ ಹೂಡಿಕೆಯನ್ನು, ಅಭಿವೃದ್ಧಿ ಕಾರ್ಯಗಳಿಗೆ ರವನ್ನು ನಿರೀಕ್ಷಿಸಿದ್ದರು. ಭಾರತೀಯ ಬಂಡವಾಳಗಾರರು, ಉದ್ಯಮಿಗಳು, ಅಧಿಕಾರಿ ು, ಪ್ರಭಾವಿ ರಾಜಕಾರಣಿಗಳು ಅಮೆರಿಕಾದೊಂದಿಗೆ ನಿಕಟವಾದ ಸಂಬಂಧಗಳನ್ನು ೆಯುವುದರಲ್ಲಿ ಆಸಕ್ತರಾಗಿದ್ದರು. ಅಮೆರಿಕಾದ ಆರ್ಥಿಕ ನೆರವು, ಬಂಡವಾಳ, ಣಿಜ್ಯ ಭಾರತಕ್ಕೆ ಅಗತ್ಯವೂ ಇತ್ತು. ಆದರೆ ಅಮೆರಿಕಾದ ಲೆಕ್ಕಾಚಾರವೇ ೇರೆಯಾಗಿತ್ತು. ಭಾರತದ ಜೊತೆ ಅದು ಬಯಸಿದ್ದ ಸಂಬಂಧ ಅಮೆರಿಕಾಗೆ ಡಿಯಾಳಾಗಿರುವುದು, ನಿಷ್ಠೆಯಿಂದಿರುವುದು ಆಗಿತ್ತು. ಸ್ವತಂತ್ರ ವಿದೇಶಾಂಗ ೀತಿಯನ್ನು ರೂಪಿಸಿಕೊಂಡು ಎಲ್ಲ ದೇಶಗಳೊಡನೆ ಸಮಾನ ಮೈತ್ರಿ ಸಂಬಂಧಗಳನ್ನು ಳೆಸಬಯಸಿದ್ದ ಭಾರತವನ್ನಲ್ಲ. ಆದರಿಂದಲೇ ಈ ಭೂಭಾಗದಲ್ಲಿ ಅಮೆರಿಕಾದ ಜ್ಞಾನುವರ್ತಿಯಾಗಿರಲು ಸಿದ್ಧವಾಗಿದ್ದ ಪಾಕಿಸ್ತಾನದೊಂದಿಗೆ ಸಖ್ಯ ಅಮೆರಿಕಾಗೆ ುಖ್ಯವಾಯಿತು. ವಿಶ್ವಸಂಸ್ಥೆಯಲ್ಲಿ ಕಾಶ್ಮೀರದ ಪ್ರಸ್ತಾಪ ಬಂದಾಗ ಅಮೆರಿಕಾ ತಳೆದ ೋರಣೆಯು ಅದು ಭಾರತಕ್ಕೆ ನೀಡಿದ್ದ ಸ್ಥಾನವೇನು ಎಂಬುದನ್ನು ಸ್ಪಷ್ಟಪಡಿಸಿತು. ಈ ಂದರ್ಭದಲ್ಲಿ ಭದ್ರತಾಮಂಡಲಿಯ ಸಭೆಯಲ್ಲಿ ಭಾರತದ ಸಹಾಯಕ್ಕೆ ನಿಂತದ್ದು ಸೋವಿಯತ್ ಒಕ್ಕೂಟ. ಕಾಶ್ಮೀರ ವಿಷಯದಲ್ಲಿ ಅಮೆರಿಕಾದ ಕುಟಿಲತೆಯನ್ನು ವಿರೋಧಿಸಿ ಸೋವಿಯತ್ ಒಕ್ಕೂಟ ಚಲಾಯಿಸಿದ ವೀಟೋ ಹಕ್ಕು ಭಾರತಕ್ಕೆ ವರದಾನವಾಯಿತು. ಇಲ್ಲದೇ ಹೋಗಿದ್ದಲ್ಲಿ ಕಾಶ್ಮೀರದಲ್ಲಿ ಅಮೆರಿಕಾದ ಸೇನೆ ಬಂದಿಳಿದು ಭದ್ರವಾಗಿ ಬೇರೂರುತ್ತಿತ್ತು. ಸೋವಿಯತ್ ಒಕ್ಕೂಟದೊಂದಿಗೆ ಭಾರತದ ಸಂಬಂಧಗಳು ಬೆಳೆದಂತೆ ಅಮೆರಿಕಾ ಭಾರತದಿಂದ ದೂರ ಸರಿಯಿತು. ಶೀತಲ ಯುದ್ಧದ ದಶಕಗಳಲ್ಲಿ ಅಮೆರಿಕಾ ರಾಜಕೀಯವಾಗಿ ಅಂತಾರಾಷ್ಟ್ರೀಯ ಕ್ಷೇತ್ರದಲ್ಲಿ ಭಾರತ ವಿರೋಧಿ ಧೋರಣೆಯನ್ನೇ ಅನುಸರಿಸಿತು. ಅಲಿಪ್ತ ಚಳವಳಿಯಲ್ಲಿ ಪ್ರಮುಖಪಾತ್ರ ವಹಿಸುತ್ತಿದ್ದ ಭಾರತದ ಧೋರಣೆಗಳು ಅದಕ್ಕೆ ಅಪಥ್ಯವಾಗಿತ್ತು. ಈ ಅವಧಿಯಲ್ಲಿ ಅಮೆರಿಕಾ ಭಾರತವನ್ನು ತನ್ನ ಸರಕುಗಳಿಗೆ ಮಾರುಕಟ್ಟೆಯಾಗಿ ಪರಿಗಣಿಸಿ ವ್ಯವಹಾರವನ್ನು ನಡೆಸಿತು. ಕಮ್ಯುನಿಸಂ ವಿರೋಧದ ಹೆಸರಿನಲ್ಲಿ ಪಾಕಿಸ್ತಾನಕ್ಕೆ ಹೇರಳವಾಗಿ ಶಸ್ತ್ರಾಸ್ತ್ರಗಳನ್ನು ಒದಗಿಸಿತು. ಭಾರತದ ಪ್ರತಿಭಟನೆಯನ್ನು, ಆಕ್ಷೇಪವನ್ನು ಕಡೆಗಣಿಸಿ, ಪಾಕಿಸ್ತಾನವನ್ನು ಎತ್ತಿಕಟ್ಟುವ ಅಮೆರಿಕಾದ ಧೋರಣೆಯು ಉಪಖಂಡದಲ್ಲಿ ಶಸ್ತ್ರಾಸ್ತ್ರ ಪೈಪೋಟಿಯನ್ನು ಹುಟ್ಟುಹಾಕಿತು. ಪಾಕಿಸ್ತಾನ-ಭಾರತಗಳ ನಡುವೆ ಜರುಗಿದ ಮೂರೂ ಯುದ್ಧಗಳಲ್ಲಿ ಅಮೆರಿಕಾ ಪಾಕಿಸ್ತಾನದ ಪಕ್ಷ ವಹಿಸಿತ್ತು. ಇನ್ನು ಗೋವಾ ವಿಮೋಚನೆಯ ವಿಷಯದಲ್ಲಿ, ಪೂರ್ವ ಬಂಗಾಳದ ವಿಮೋಚನೆಯ ಸಂದರ್ಭದಲ್ಲಿ ಅಮೆರಿಕಾ ಭಾರತದ ವಿರೋಧಿ ಧೋರಣೆಗಳನ್ನು ತಳೆದದ್ದನ್ನು ನೆನಪಿಸಿಕೊಳ್ಳಬೇಕು. ಪಾಕಿಸ್ತಾನದಲ್ಲಿ ಸರ್ವಾಧಿಕಾರಿ ಆಡಳಿತಗಳು ದರ್ಬಾರು ನಡೆಸುತ್ತಿದ್ದುದು ಅಮೆರಿಕಾಗೆ ಅಹಿತವಾಗೇನೂ ಕಾಣಲಿಲ್ಲ. ಸಂದರ್ಭಕ್ಕನುಸಾರವಾಗಿ ಭಾರತದ ಮೇಲೆ ಒತ್ತಡ ಹೇರಲು ಪಾಕಿಸ್ತಾನವನ್ನು ಅಮೆರಿಕಾ ಬಳಸಿಕೊಳ್ಳುತ್ತಿತ್ತು. ಭಾರತವನ್ನು ಸದಾ ಸಂಶಯ ದೃಷ್ಟಿಯಿಂದ ಕಾಣುತ್ತಿದ್ದ ಅಮೆರಿಕಾ, ಪಾಕಿಸ್ತಾನದ ಜೊತೆ ಬಾಂಧವ್ಯ ಬೆಳೆಸಿದ್ದು ತನ್ನ ಸ್ವಾರ್ಥಕ್ಕಾಗಿ, ಸ್ವಹಿತ ಸಾಧನೆಗಾಗಿ; ಈಗಲೂ ಅದು ಮುಂದುವರಿದಿದೆ.

ಇಷ್ಟಾದರೂ ಭಾರತ ಅಮೆರಿಕಾದೊಂದಿಗೆ ಸಂಬಂಧಗಳನ್ನು ಉತ್ತಮಗೊಳಿಸುವ ಪ್ರಯತ್ನಗಳನ್ನು ಕೈಬಿಡಲಿಲ್ಲ. ಕಾಶ್ಮೀರದ ಪ್ರಶ್ನೆಯಾಗಲಿ, ಗೋವಾ ಅಥವಾ ಬಾಂಗ್ಲಾ ವಿಮೋಚನೆಯ ಪ್ರಶ್ನೆಯಾಗಲಿ, ಅಮೆರಿಕಾದ ಸಹಕಾರ ಪಡೆಯಲು ಭಾರತ ಎಲ್ಲ ಪ್ರಯತ್ನಗಳನ್ನೂ ಮಾಡಿತು. ಅದು ಫಲಕಾರಿಯಾಗದಿದ್ದಾಗ ಅನ್ಯಮಾರ್ಗ ಅನುಸರಿಸಿತು. ಹಾಗೆಯೇ, ಆರ್ಥಿಕಾಭಿವೃದ್ಧಿಗಾಗಿ ಪಂಚವಾರ್ಷಿಕ ಯೋಜನೆಯನ್ನು ಪ್ರಾರಂಭಿಸಿದಾಗ ಭಾರತ ಮೊದಲು ಅಪೇಕ್ಷಿಸಿದ್ದು ಅಮೆರಿಕಾದ ಸಹಾಯವನ್ನು. ಕೈಗಾರಿಕಾಭಿವೃದ್ಧಿಗೆ ಸಕಾರಾತ್ಮಕವಾಗಿ ಪ್ರತಿಕ್ರಿಯಿಸದಿದ್ದ ಅಮೆರಿಕಾ ಕೃಷಿಕ್ಷೇತ್ರಕ್ಕೆ ನೆರವು ನೀಡಲು ಮುಂದಾಯಿತು. ಆರ್ಥಿಕ ಸ್ವಾವಲಂಬನೆಯ ಗುರಿ ಇರಿಸಿಕೊಂಡು ಕೈಗಾರಿಕಾಭಿವೃದ್ಧಿಗೆ ಪ್ರಾಧಾನ್ಯತೆ ನೀಡಿದ ಎರಡನೇ ಪಂಚವಾರ್ಷಿಕ ಯೋಜನೆಗೆ ಅಮೆರಿಕಾದಿಂದ ದೊರೆತದ್ದು ನೀರಸ ಪ್ರತಿಕ್ರಿಯೆ: ಮುಕ್ತ ಮಾರುಕಟ್ಟೆಯ ಆರ್ಥಿಕ ವ್ಯವಸ್ಥೆ, ಖಾಸಗೀ ಬಂಡವಾಳದ ಮುಖ್ಯತ್ವ ಕುರಿತು ಉಪದೇಶ, ಸರಕಾರಿ ಕ್ಷೇತ್ರದಲ್ಲಿ ಬೃಹತ್ ಉದ್ಯಮಗಳ ಸ್ಥಾಪನೆಗೆ ವಿರೋಧ. ಭಾರತದ ಯೋಜನೆಗಳಿಗೆ ಅಮೆರಿಕಾದ ಆಡಳಿತಗಾರರು ತಿರಸ್ಕಾರ ಭಾವ ತಳೆದಿದ್ದರೂ ಪ್ರಧಾನಿ ನೆಹರೂ ಸಹಕಾರ ಬಯಸಿ ಮೊದಲು ಹೋದದ್ದು ಅಮೆರಿಕಾಗೆ. ಪ್ರಭುತ್ವ ಕ್ಷೇತ್ರದಲ್ಲಿ ಉಕ್ಕಿನ ಕಾರ್ಖಾನೆ ಸ್ಥಾಪನೆಗೆ ಅಮೆರಿಕಾದ ನೆರವು ಕೇಳಿದಾಗ ದೊರೆತದ್ದು ನಕಾರ. ಭಾರತವು ಸೋವಿಯತ್ ಒಕ್ಕೂಟದ ನೆರವು ಪಡೆದದ್ದು ಆ ನಂತರವೆ. ಇನ್ನು ಉಳಿದದ್ದೆಲ್ಲ ಇತಿಹಾಸ. ಪ್ರತಿಯೊಂದು ಹಂತದಲ್ಲೂ ಅಮೆರಿಕಾ ಒಂದಲ್ಲ ಒಂದು ಬಗೆಯಲ್ಲಿ ಭಾರತವನ್ನು ಮಣಿಸಲು, ಅನುಕೂಲಸಿಂಧುವಾಗಿ ಬಳಸಿಕೊಳ್ಳಲು ಪ್ರಯತ್ನಿಸಿದೆ. ಕೆಲವೊಮ್ಮೆ ಸರಕಾರ ಒತ್ತಡಗಳಿಗೆ ಮಣಿದದ್ದು ಇದೆ. ಆದರೆ ಭಾರತ ಎಂದೂ ಸ್ವಾತಂತ್ರ್ಯ – ಸಾರ್ವಭೌಮತ್ವಗಳನ್ನು, ಸ್ವತಂತ್ರ ನೀತಿಯನ್ನು ಬಿಟ್ಟುಕೊಡುವ ಮಾರ್ಗ ಅನುಸರಿಸಲಿಲ್ಲ. ಅಮೆರಿಕಾ ಭಾರತಕ್ಕೆ ವಿರೋಧವಾಗಿ, ಆತಂಕ ಉಂಟುಮಾಡುವ ರೀತಿಯಲ್ಲಿ ನಡೆದುಕೊಂಡರೂ ಭಾರತದ ಪ್ರತಿಕ್ರಿಯೆ ಮಾತ್ರ ಮೃದುವಾಗಿರುತ್ತಿತ್ತು. ಎಂದೂ ಅದು ಅಮೆರಿಕಾವನ್ನು ಎದುರುಹಾಕಿಕೊಳ್ಳಲಿಲ್ಲ. ಅಮೆರಿಕಾದ ನೀತಿಯನ್ನು ಟೀಕಿಸುವಾಗಲೂ, ಅದು ದಕ್ಷಿಣ ಆಫ್ರಿಕಾ, ವಿಯೆಟ್ನಾಮ್, ಕ್ಯೂಬಾ, ಇರಾಕ್ ಏನೇ ಆಗಿರಲಿ ಅದು ತುಂಬಾ ದಾಕ್ಷಿಣ್ಯ ಸ್ವರೂಪದ್ದಾಗಿರುತ್ತಿತ್ತು. ಇರಾಕ್ ದುರಾಕ್ರಮಣದ ಬಗ್ಗೆ ಭಾರತ ಸರಕಾರದ ನಿಲುವು ಅದಕ್ಕೆ ನಿದರ್ಶನ. ಬದಲಾದ ಅಂತರರಾಷ್ಟ್ರೀಯ ಪರಿಸ್ಥಿತಿಯಲ್ಲಿ ಈಗ ಅಮೆರಿಕಾ ಭಾರತವನ್ನು ತನ್ನ ವ್ಯೂಹರಚನೆಯಲ್ಲಿ ಸೆಳೆದುಕೊಳ್ಳಲು ನಾನಾವಿಧಾನಗಳನ್ನು ಅನುಸರಿಸುತ್ತಿದೆ. ನ್ಯೂಕ್ಲಿಯರ್ ಕ್ಷೇತ್ರದಲ್ಲಿ ಸಹಕಾರ ಒಪ್ಪಂದ ಅಂಥವುಗಳಲ್ಲಿ ಒಂದು. ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಎಂಥ ಚಾರಿತ್ರ್ಯವುಳ್ಳವ

...ಎಂಬುದನ್ನು ತಿಳಿದಿದ್ದರೂ ಪ್ರಧಾನಿ ಮನಮೋಹನ ಸಿಂಗ್ ಮತ್ತವರ ಕಂಪನಿ ಅತ ಬೀಸಿದ ಬಲೆಗೆ ಬಿದ್ದಿದ್ದಾರೆ. ಭಾರತದ ಸ್ವತಂತ್ರ ನೀತಿಯನ್ನು ಬಲಿಕೊಡುತ್ತಿದ್ದಾರೆ.

ಈ ಮೊದಲೇ ಹೇಳಿರುವಂತೆ ಸೋವಿಯತ್ ಒಕ್ಕೂಟದ ವಿಘಟನೆಯ ನಂತರ ಅಮೆರಿಕಾದ ವಿದೇಶಾಂಗ ನೀತಿ ಹೆಚ್ಚು ಆಕ್ರಮಣಶೀಲವಾಗಿದೆ. ಈಗ ಅದರ ಗುರಿ ಅಧಿನಾಯಕತ್ವದ ಸ್ಥಾಪನೆ. ಅದಕ್ಕೆ ಮೊದಲ ಹೆಜ್ಜೆಯಾಗಿ ಜಗತ್ತಿನ ತೈಲ ಸಂಪತ್ತಿನ ಮೇಲೆ ಏಕಸ್ವಾಮ್ಯ ಸ್ಥಾಪಿಸುವುದು ಮುಖ್ಯ. ಮಧ್ಯಪ್ರಾಚ್ಯದ ತೈಲ ಸಂಪತ್ತಿನ ಮೇಲೆ ನಿಯಂತ್ರಣ ಸ್ಥಾಪಿಸಲು. ಆ ಪ್ರದೇಶವನ್ನು ತನ್ನ ಅಂಕಿತದಲ್ಲಿರಿಸಿಕೊಳ್ಳಲು ಅದು ಹೊರಟಿದೆ. ಅಲ್ಲಿನ ಬಹುತೇಕ ರಾಷ್ಟ್ರಗಳಲ್ಲಿ ಅಮೆರಿಕಾ ಹೇಳಿದಂತೆ ನಡೆದುಕೊಳ್ಳುವ ಸರಕಾರಗಳು ಅಸ್ತಿತ್ವದಲ್ಲಿವೆ. ಅಮೆರಿಕಾವನ್ನು ವಿರೋಧಿಸುತ್ತಿದ್ದ ಸದ್ದಾಮ್ ಹುಸೇನ್ ಸರಕಾರ ಕಿತ್ತುಹಾಕಿ ಇರಾಕನ್ನು ಆಕ್ರಮಿಸಿಕೊಂಡಿರುವ ಅಮೆರಿಕಾ ಅಲ್ಲಿ ಕೈಗೊಂಬೆ ಸರಕಾರ ಸ್ಥಾಪಿಸಿದೆ. ಎದುರಾಳಿಯಾಗಿರುವ ಇರಾನಿನ ಮೇಲೆ ಅಮೆರಿಕಾ ಕಿಡಿ ಕಾರುತ್ತಿದೆ. ಆಕ್ರಮಣ ನಡೆಸಲು ಸನ್ನದ್ಧವಾಗುತ್ತಿದೆ. ಅದು ಮುಗಿದರೆ ಮಧ್ಯಪ್ರಾಚ್ಯದಲ್ಲಿ ಅಮೆರಿಕಾದ ಅಧಿನಾಯಕತ್ವ ಸ್ಥಾಪನೆ ಪೂರ್ಣಗೊಂಡಂತೆ. ಇನ್ನು ಅಮೆರಿಕಾದ ಜಾಗತಿಕ ಹಂಚಿಕೆಗೆ ಅಡ್ಡಿಯಾಗಿರುವ ಉತ್ತರ ಕೊರಿಯ, ಕ್ಯೂಬಾ, ವೆನಿಜುವೇಲ ಮೊದಲಾದವೆಲ್ಲ ಅಮೆರಿಕಾದ ಪರಿಭಾಷೆಯಲ್ಲಿ 'ದುಷ್ಟ ರಾಷ್ಟ್ರಗಳು'. ಆರ್ಥಿಕವಾಗಿ ಚೇತರಿಸಿಕೊಂಡು ಸುಭದ್ರಗೊಳ್ಳುತ್ತಿರುವ ರಷ್ಯಾ, ಪ್ರಬಲ ರಾಷ್ಟ್ರವಾಗಿರುವ ಚೀಣಾ ಈಗ ಅಮೆರಿಕಾಗೆ ತಲೆನೋವು ತಂದಿವೆ. ಈ ಪರಿಸ್ಥಿತಿಯಲ್ಲಿ ಅಮೆರಿಕಾಗೆ ತನ್ನ ಹಂಚಿಕೆಗಳನ್ನು ಕಾರ್ಯಗತಮಾಡಲು ಭಾರತದಂಥ ದೊಡ್ಡ ರಾಷ್ಟ್ರದ ಸಹಕಾರ, ಸಹಯೋಗ ಅಗತ್ಯವಾಗಿ ಪರಿಣಮಿಸಿದೆ. ಭಯೋತ್ಪಾದನೆಯ ವಿರುದ್ಧ ಸಮರದ ಹೆಸರಿನಲ್ಲಿ ನಡೆಸುತ್ತಿರುವ ಎಲ್ಲ ಅನಾಚಾರಗಳಿಗೆ ಭಾರತದ ಬೆಂಬಲ ಬೇಕಾಗಿದೆ. ಇನ್ನೊಂದು, ಭಾರತ, ಚೀಣಾ, ರಷ್ಯಾಗಳು ಒಂದಾಗಬಹುದಾದ ಭೀತಿಯೂ ಅಮೆರಿಕಾವನ್ನು ಕಾಡುತ್ತಿದೆ. 'ಷಾಂಘಾಯ್ ತಂಡ' ಎಂದು ಕರೆಯುತ್ತಿರುವ ಈ ಮೂರು ರಾಷ್ಟ್ರಗಳು ಸೇರಿ ಸಮಾಲೋಚನೆ ನಡೆಸಿರುವುದು ಅಮೆರಿಕಾಗೆ ಗಾಬರಿ ಉಂಟುಮಾಡಿದೆ. ಒಂದು ವೇಳೆ ಈ ಮೂರು ರಾಷ್ಟ್ರಗಳು ಒಟ್ಟಾದರೆ ಅಮೆರಿಕಾದ ಅಧಿನಾಯಕತ್ವದ ಹಂಚಿಕೆ ನುಚ್ಚುನೂರಾಗುವುದು ಖಂಡಿತ. ದುರಾಕ್ರಮಣ ಚಟು... ಗಳಿಗೆ ಕಡಿವಾಣ ಹಾಕುವುದು ಸಾಧ್ಯ. ಹಾಗಾಗದ ಹಾಗೆ ನೋಡಿಕೊಳ್ಳುವುದಕ್ಕಾಗಿ... ಅಮೆರಿಕಾ ಭಾರತವನ್ನು ತನ್ನೆಡೆಗೆ ಸೆಳೆದುಕೊಳ್ಳಲು ಪ್ರಯತ್ನಿಸುತ್ತಿರುವುದು. ಅದ... ಅದು ನ್ಯೂಕ್ಲಿಯರ್ ಸಹಕಾರದ ಬಲೆ ಬೀಸಿದೆ. ಅದರಿಂದಲೇ ಅದನ್ನು ತಿರಸ್ಕರಿಸಬೇ...

ಈ ಹಿನ್ನೆಲೆಯನ್ನು ಪರಿಗಣಿಸದೆ, ಅಮೆರಿಕಾದ ಹಂಚಿಕೆಗಳನ್ನು ಅರ್ಥಮ... ಕೊಳ್ಳದೆ ತತ್ಕಾಲಕ್ಕೆ ಒದಗುವ ಅನುಕೂಲಗಳಿಗೆ ಬಲಿಬಿದ್ದು ಅಮೆರಿಕಾದ ಜೊ... ವ್ಯೂಹಾತ್ಮಕ ಸಂಬಂಧ ಬೆಳೆಸುವುದು ಮೂರ್ಖತನವಾಗುತ್ತದೆ. ಸುಮಾರು ಮೂ... ವರ್ಷಗಳಿಂದ, ಅಂದರೆ ಪೋಖ್ರಾನ್‌ನಲ್ಲಿ ಪರಮಾಣು ಆಸ್ಫೋಟನೆಯ ನಂ... ನ್ಯೂಕ್ಲಿಯರ್ ರಿಯಾಕ್ಟರ್‌ಗಳಿಗೆ ಇಂಧನ ಸರಬರಾಜನ್ನು ಸ್ಥಗಿತಗೊಳಿಸಿ, ಈ ಕ್ಷೇತ್ರದ... ಎಲ್ಲ ಸಹಕಾರ ಸಂಬಂಧಗಳನ್ನೂ ನಿಲ್ಲಿಸಿದ ಅಮೆರಿಕಾ ಈಗ ಏಕಾಏಕಿಯಾಗಿ ಸಹಕಾ... ಒಪ್ಪಂದಕ್ಕಾಗಿ ಹಾತೊರೆಯುತ್ತಿರುವುದೇಕೆ ? ಇದಕ್ಕೆ ಉತ್ತರವನ್ನು ನಾವು ಅಮೆರಿಕಾ... ನೀತಿಗಳಲ್ಲೇ ಕಾಣಬಹುದು.

ರಾಜತಂತ್ರದಲ್ಲಿ ಅಮೆರಿಕಾದ್ದು ಪಳಗಿದ ಕೈ. ಈ ಬಲಾಢ್ಯ ದೇಶದೊಂ... ಸಮಾನ ಸಂಬಂಧಗಳು ಸಹಜವಾಗಿರುವುದು ಸಾಧ್ಯವಿಲ್ಲ. ಭಾರತದ ಸ್ವಾತಂ... ಸಾರ್ವಭೌಮತ್ವಗಳನ್ನು ಮೊಟಕುಗೊಳಿಸುವಂಥ ಯಾವುದೇ ಒಪ್ಪಂದ ದೇಶ... ಹಿತಾಸಕ್ತಿಗೆ ಮಾರಕ. ಸ್ವತಂತ್ರ ವಿದೇಶಾಂಗ ನೀತಿಯನ್ನು ಬಲಿಕೊಡುವ... ಯಾವುದೇ ಕ್ರಮಕ್ಕೂ ಜನತೆಯ ವಿರೋಧವಿದೆ. ಹಾಗಾಗಿ, ಭಾರತದ ಜನ... ಒಂದುಗೂಡಿ ಭಾರತದ ಸ್ವಾತಂತ್ರ್ಯ, ಸಾರ್ವಭೌಮತ್ವಗಳಿಗೆ ಚ್ಯುತಿಯಾಗದ... ನೋಡಿಕೊಳ್ಳಲು ಎಚ್ಚರವಹಿಸಬೇಕಾಗಿದೆ.

---

ಎಂ. ಸಿ. ನರಸಿಂಹನ್
ಸಂ. ೨೭, ೬ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩
ಸೀಯಾರ್ಕೆ
'ಜೌಬೀನ್', ೮೪೯, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

With Best Compliments from



VINAYAKA BOOK DISTRIBUTORS

Wholesalers of Best Selling Fiction,
Non-fiction, Furniture, Cookery, Comics,
Fashion, Children's & General Books

# 49, 1st Floor, St. John's Road, Bangalore - 560 042 ✆ 25574184 Fax : 25574420

ಡಾ॥ ಟಿ. ಆರ್. ಚಂದ್ರಶೇಖರ

ಜನರನ್ನು ಒಳಗೊಳ್ಳುವ ಅಭಿವೃದ್ಧಿಯನ್ನು ಸಾಧಿಸಿಕೊಳ್ಳಬೇಕಾದರೆ ಸಾಮಾಜಿಕ ಅಸಮಾನತೆಯನ್ನು ಮೊದಲು ತೊಡೆದುಹಾಕಬೇಕಾಗುತ್ತದೆ. ಈಗ ಜನರನ್ನು ಒಳಗೊಳ್ಳುವ ಅಭಿವೃದ್ಧಿಗೆ ಅಡ್ಡಿಯಾಗಿರುವ ಮತ್ತೊಂದು ಅಸಮಾನತೆಯನ್ನು ಕುರಿತಂತೆ ಚರ್ಚಿಸಬಹುದಾಗಿದೆ. ಅದು ಮಹಿಳೆಯರು ಮತ್ತು ಪುರುಷರ ನಡುವಿನ ಅಸಮಾನತೆ. ಅಮರ್ತ್ಯ ಸೆನ್ ತಮ್ಮ ಬರಹಗಳಲ್ಲಿ ಮತ್ತೆ ಮತ್ತೆ ಪ್ರತಿಪಾದಿಸುತ್ತಿರುವಂತೆ ಸಮಾಜದಲ್ಲಿ ಅವಕಾಶಗಳು ಸಮಾನವಿದ್ದ ಪಕ್ಷದಲ್ಲಿ ಲಿಂಗ ಅನುಪಾತವು ಒಂದಕ್ಕಿಂತ ಅಧಿಕವಾಗಿರಬೇಕು. ಆದರೆ ನಮ್ಮ ದೇಶದಲ್ಲಿ ಕೇರಳದಲ್ಲಿ ಮಾತ್ರ ಅಂತಹ ಸ್ಥಿತಿಯಿದೆ. ಕರ್ನಾಟಕದಲ್ಲಿ ದಕ್ಷಿಣ ಕನ್ನಡ, ಉಡುಪಿ ಮತ್ತು ಹಾಸನ ಜಿಲ್ಲೆಗಳಲ್ಲಿ ಮಾತ್ರ ಲಿಂಗ ಅನುಪಾತವು ಏಕಾಂಕಕ್ಕಿಂತ ಅಧಿಕವಿದೆ. ಲಿಂಗ ಅನುಪಾತವು ಒಟ್ಟು ಜನಸಂಖ್ಯೆಗೆ ಸಂಬಂಧಿಸಿದಂತೆ ಒಂದು ಸಾವಿರಕ್ಕಿಂತ ಕಡಿಮೆಯಿದೆ ಮತ್ತು ೦-೬ ವಯೋಮಾನದ ಮಕ್ಕಳಿಗೆ ಸಂಬಂಧಿಸಿದಂತೆ ಅದು ಕಡಿಮೆಯಾಗುತ್ತಿದೆ. ಇದನ್ನು ಲಿಂಗ ತಾರತಮ್ಯದ ಸೂಚಿಯನ್ನಾಗಿ ಸೆನ್ ಬಳಸುತ್ತಾರೆ. ಅಭಿವೃದ್ಧಿ ಸೂಚಿಗಳಿಗೆ ಸಂಬಂಧಿಸಿದಂತೆ ಮಹಿಳೆಯರು ಎಲ್ಲ ವಿಷಯಗಳಲ್ಲೂ ತಾರತಮ್ಯ ಎದುರಿಸುತ್ತಿದ್ದಾರೆ.



# ಜನರನ್ನು ಒಳಗೊಳ್ಳುವ ಅಭಿವೃದ್ಧಿ

# ಕರ್ನಾಟಕದ ಅನುಭವಗಳು

## ೧. ಪ್ರಸ್ತಾವನೆ

ಭೌಗೋಳಿಕವಾಗಿ ವಿಶಾಲವಾದ, ಸಾಮಾಜಿಕವಾಗಿ ಬಹುಳತೆಯಿಂದ ಕೂಡಿರುವ ಮತ್ತು ರಾಜಕೀಯವಾಗಿ ಒಕ್ಕೂಟ ವ್ಯವಸ್ಥೆಯನ್ನು ಅಳವಡಿಸಿಕೊಂಡಿರುವ ಭಾರತದಲ್ಲಿ ಅಭಿವೃದ್ಧಿ ಪ್ರಕ್ರಿಯೆ ಏಕರೂಪಿಯಾಗಿರಲು ಸಾಧ್ಯವಿಲ್ಲ. ಒಂದೊಂದು ರಾಜ್ಯದ ಅಭಿವೃದ್ಧಿ ಮಾದರಿ ಒಂದೊಂದು ಬಗೆಯದ್ದಾಗಿದೆ. ರಾಜ್ಯದೊಳಗೆ ಅನೇಕ ಭಿನ್ನತೆಗಳು ಸಾಧ್ಯ. ಸ್ಥೂಲವಾಗಿ ನೋಡಿದರೂ ನಮಗೆ ಪಂಜಾಬ್-ಹರಿಯಣ ಮಾದರಿ, ಪಶ್ಚಿಮ ಬಂಗಾಳ - ತ್ರಿಪುರ ಮಾದರಿ, ಹಿಮಾಚಲ ಪ್ರದೇಶ - ಮಧ್ಯಪ್ರದೇಶ ಮಾದರಿ, ಗುಜರಾತ್–ಮಹಾರಾಷ್ಟ್ರ ಮಾದರಿ, ಕೇರಳ-ಗೋವಾ-ತಮಿಳುನಾಡು ಮಾದರಿ ಮುಂತಾದ ವಿಭಿನ್ನ ಅಭಿವೃದ್ಧಿ ಪ್ರಕಾರಗಳು ತಪ್ಪದೆ ಕಂಡುಬರುತ್ತವೆ. ಈ ಎಲ್ಲ ಬಗೆಯ ಅಭಿವೃದ್ಧಿ ಮಾದರಿಗಳ ನಡುವೆ ಕರ್ನಾಟಕವು ತನ್ನದೇ ಆದ ವಿಶಿಷ್ಟತೆ-ವಿಭಿನ್ನತೆಯಿಂದ ಕೂಡಿರುವ ಅಭಿವೃದ್ಧಿಯನ್ನು ಸಾಧಿಸಿಕೊಂಡಿರುವುದನ್ನು ಅನೇಕ ಸಮಾಜ ವಿಜ್ಞಾನಿಗಳು ಗುರುತಿಸಿದ್ದಾರೆ. ಮಧ್ಯಮ ಗತಿಯ - ಮಧ್ಯಮ ಸ್ಥಿತಿಯ ಅಭಿವೃದ್ಧಿ ಮಾದರಿಯೊಂದನ್ನು ಕರ್ನಾಟಕಕ್ಕೆ ಸಂಬಂಧಿಸಿದಂತೆ ಗುರುತಿಸಬಹುದಾಗಿದೆ. ಕಳೆದ ೩೦ ವರ್ಷಗಳಿಂದಲೂ ಅದು ತನ್ನ ಮಧ್ಯಮತನವನ್ನು ಉಳಿಸಿಕೊಂಡುಬಂದಿದೆ.

ಆದರೆ ಮಧ್ಯಮತನವು ಅಭಿವೃದ್ಧಿಗೆ ಮಾತ್ರ ಸಂಬಂಧಿಸಿದ ಸಂಗತಿಯೇನಲ್ಲ. ಸಾಮಾಜಿಕವಾಗಿ ಕರ್ನಾಟಕವು ಯಥಾಸ್ಥಿತಿವಾದಿ ರಾಜ್ಯವಲ್ಲ. ಆದರೆ ಅಲ್ಲಿ ಉಗ್ರವೆನ್ನಬಹುದಾದ ಬದಲಾವಣೆಯೂ ಸಂಭವಿಸುತ್ತಿಲ್ಲ. ಮಂದಗತಿಯಲ್ಲಿ ಬದಲಾವಣೆ ಅಲ್ಲಿ ನಡೆಯುತ್ತಿರುವಂತೆ ಭಾಸವಾಗುತ್ತದೆ. ರಾಜಕೀಯವಾಗಿ ಇದು ಪ್ರತಿಗಾಮಿ ರಾಜ್ಯವಲ್ಲ. ಆದರೆ ತೀವ್ರಗಾಮಿತನಕ್ಕೂ ಅಲ್ಲಿ ಅವಕಾಶವಿಲ್ಲ. ಈ ಬಗೆಯ ಮಧ್ಯಮಗತಿ ರಾಜಕಾರಣವನ್ನು ಕರ್ನಾಟಕ ನಡೆಸಿಕೊಂಡು ಬಂದಿದೆ. ಅಧಿಕಾರಕ್ಕಾಗಿ ಜಾತ್ಯತೀತತೆಯ ಬಗ್ಗೆ ರಾಜಿ ಮಾಡಿಕೊಳ್ಳಲು ಅಲ್ಲಿನ ರಾಜಕಾರಣ ಸಿದ್ಧ. ಆದರೆ ತನ್ನ ಪ್ರಗತಿಗಾಮಿತನಕ್ಕೆ ಎಲ್ಲಿ ಚ್ಯುತಿ ಬಂದುಬಿಡುತ್ತದೋ ಎಂದು ಭಾವಿಸಿ ಕೋಮುವಾದಿ ಶಕ್ತಿಗೆ ಅಧಿಕಾರವನ್ನು ತಪ್ಪಿಸಲು ಇಲ್ಲಿಯ ರಾಜಕಾರಣ ಸಿದ್ಧ. ರಾಜಕೀಯವಾಗಿ ಖಚಿತವಾದ ಹಾಗೂ ನಿರ್ದಿಷ್ಟವಾದ ಸೈದ್ಧಾಂತಿಕ ಬದ್ಧತೆಯು ಕರ್ನಾಟಕದಲ್ಲಿ ಕಂಡುಬರುತ್ತಿಲ್ಲ.

ಅಧಿಕಾರವು ಉಳ್ಳವರಿಂದ ಕೂಡಿದ ಜಾತಿಗಳ ವಶದಲ್ಲೇ ಇದೆ. ಆದರೆ ಈ ಉಳ್ಳವರ ಜಾತಿಯ ಅಧಿಕಾರ ಉಳಿದವರ – ಅಂದರೆ ಹಿಂದುಳಿದ ವರ್ಗಗಳ, ದಲಿತರ – ಹಿತಾಸಕ್ತಿಗಳನ್ನು ಕಡೆಗಣಿಸಿ ಮುಂದುವರಿಯುವುದು ಸಾಧ್ಯವಿಲ್ಲದಂತಹ ಸ್ಥಿತಿ ಇಲ್ಲಿ ನಿರ್ಮಾಣವಾಗಿದೆ. ಹಿಂದುಳಿದ ವರ್ಗ ಹಾಗೂ ದಲಿತ ಸಮುದಾಯಗಳು ಇಲ್ಲಿ ರಾಜಕೀಯವಾಗಿ ನಿರ್ಣಾಯಕ ಶಕ್ತಿಯಾಗಿ ರೂಪಗೊಂಡಿದ್ದಾವೆ. ಇದು ಮಧ್ಯಮಗತಿ ರಾಜಕಾರಣ.

ಜೇಮ್ಸ್ ಮೇನರ್ (೨೦೦೭) ಹೇಳುತ್ತಿರುವ ಜಾತಿಯು ಇಂದು ಕರ್ನಾಟಕದಲ್ಲಿ ಸಾಮಾಜಿಕ ಶ್ರೇಣೀಕರಣದ ಸೂಚಿಯಾಗಿ ಉಳಿದಿಲ್ಲವೆಂಬ ವಾದವನ್ನು ಪೂರ್ಣವಾಗಿ ಒಪ್ಪಿಕೊಳ್ಳುವುದು ಕಷ್ಟ. ಅವನ ಪ್ರಕಾರ ಅದು ಕೇವಲ ಭಿನ್ನತೆಯ- ಅನನ್ಯತೆಯ ಸಂಗತಿಯಾಗಿದೆ. ಇದು ನಿಜವೆಂದು ತಿಳಿದರೂ ರಾಜ್ಯದ ಹಿಂದುಳಿದ ಜಿಲ್ಲೆಗಳಾದ ವಿಜಾಪುರ, ಗುಲ್ಬರ್ಗಾ, ರಾಯಚೂರು ಮತ್ತು ಕೊಪ್ಪಳ ಮುಂತಾದವುಗಳಲ್ಲಿ ಅದು ಇಂದಿಗೂ ತಾರತಮ್ಯದ–ಶ್ರೇಣೀಕರಣದ ಆಕರವಾಗಿರುವ ಸಂಗತಿಯನ್ನು ಒಪ್ಪಿಕೊಳ್ಳದಿರಲು ಸಾಧ್ಯವಿಲ್ಲ. ಜಾತಿ ಮತ್ತು ಕಸುಬುಗಳ ನಡುವೆ ಸಂಬಂಧ ಕಡಿದು



ಹೋಗಿರುವುದೇ ಭಾರತವು ಇಪ್ಪತ್ತನೆಯ ಶತಮಾನದಲ್ಲಿ ಕಂಡ ಅತಿ ದೊಡ್ಡ ಸಾಮಾಜಿಕ ಬದಲಾವಣೆಯೆಂದು ಎಂ. ಎನ್. ಶ್ರೀನಿವಾಸ್ ಪ್ರತಿಪಾದಿಸಿದ್ದಾರೆ (೨೦೦೬). ಇದನ್ನು ಪೂರ್ಣವಾಗಿ ಒಪ್ಪಿಕೊಳ್ಳುವುದು ಕಷ್ಟಸಾಧ್ಯ. ಏಕೆಂದರೆ ಅದು ಇನ್ನೂ ಜೀವಂತವಾಗಿರುವ – ತೀವ್ರವಾಗಿರುವ ಪ್ರದೇಶಗಳೂ ಇವೆ. ಇದನ್ನೇ ನಾವು ಮಧ್ಯಮಗತಿ ಸಮಾಜವೆಂದು ಕರೆಯುತ್ತಿದ್ದೇವೆ.

ಕರ್ನಾಟಕವು ಆರ್ಥಿಕವಾಗಿ ವೇಗವಾಗಿ ಬೆಳೆಯುತ್ತಿದೆ. ಅದರ ಅಭಿವೃದ್ಧಿಯ ವಾರ್ಷಿಕ ಗತಿ ಶೇ. ೮ರ ಗಡಿ ದಾಟಿದೆ. ಬೆಂಗಳೂರು ಕರ್ನಾಟಕಕ್ಕೆ ಅಭಿಮುಖವಾಗಿಲ್ಲ ದಿದ್ದರೂ ವಿಶ್ವಕ್ಕೆ ಅಭಿಮುಖವಾಗಿ ಬೆಳೆಯುತ್ತಿದೆ. 'ಬೆಂಗಳೂರು' ಎಂಬುದು ನಾಮ ಪದಕ್ಕೆ ಪ್ರತಿಯಾಗಿ ಕರ್ತೃಪದವಾಗಿ ಬಳಕೆಯಾಗುತ್ತಿದೆ. 'ಬೆಂಗಳೂರಾಗುವುದು' ಎಂಬ ಪದಗುಚ್ಛ ಚಲಾವಣೆಗೆ ಬರುತ್ತಿದೆ. ಈ ಅಭಿವೃದ್ಧಿಯು ಉಳ್ಳವರ ತಿಜೋರಿಯನ್ನು ಭರ್ತಿ ಮಾಡುತ್ತಿದೆಯೇ ವಿನಾ ಉಳಿದವರ ಹೊಟ್ಟೆಯನ್ನು ತುಂಬುತ್ತಿಲ್ಲ. ಸಂಪತ್ತು ಗುಡ್ಡ ದೋಪಾದಿಯಲ್ಲಿ ರಾಶಿ ಬೀಳುತ್ತಿದೆ. ಆದರೆ ಅದು ಜನರ ಬದುಕಾಗಿ ಪರಿವರ್ತನೆ ಯಾಗುತ್ತಿಲ್ಲ. ಇದನ್ನು ಮಧ್ಯಮಗತಿ ಆರ್ಥಿಕತೆಯೆಂದು ಕರೆಯಲಾಗಿದೆ. ಖ್ಯಾತ ಅರ್ಥಶಾಸ್ತ್ರಜ್ಞ, ದೀಪಕ್ ನಯ್ಯರ್ (೨೦೦೬) ಹೇಳಿದಂತೆ ಅಭಿವೃದ್ಧಿಯನ್ನು ಜನರ ಬದುಕಾಗಿ ಪರಿವರ್ತಿಸಿಕೊಳ್ಳಲು ಸಾಧ್ಯವಾಗದಿರುವುದೇ ಸ್ವಾತಂತ್ರ್ಯೋತ್ತರ ಭಾರತದ ಬಹುದೊಡ್ಡ ವೈಫಲ್ಯವಾಗಿದೆ. ಅವರ ಮಾತು ಕರ್ನಾಟಕಕ್ಕೂ ಅನ್ವಯವಾಗುತ್ತದೆ.

ಜನರನ್ನು ಒಳಗೊಳ್ಳುವ ಅಭಿವೃದ್ಧಿ ಎಂದರೇನು? ಜನರನ್ನು ಅಭಿವೃದ್ಧಿಯು ಒಳಗೊಳ್ಳದಿದ್ದರೆ ಅದರ ಕಾರಣ ಮೀಮಾಂಸೆ ಯಾವುದು? 'ಜನರು' ಎಂದರೆ ಯಾರು? ಅಭಿವೃದ್ಧಿ ಜನರನ್ನು ಒಳಗೊಳ್ಳುವಂತೆ ಮಾಡುವುದು ಹೇಗೆ? ಈ ದಿಶೆಯಲ್ಲಿ ಕರ್ನಾಟಕದ ಅನುಭವಗಳೇನು? ಈ ಬಗೆಯ ಪ್ರಶ್ನೆಗಳನ್ನು ಹಾಕಿಕೊಂಡು ಅವುಗಳಿಗೆ ಉತ್ತರ ಕಂಡುಕೊಳ್ಳುವ ಪ್ರಯತ್ನವನ್ನು ಪ್ರಸ್ತುತ ಲೇಖನದಲ್ಲಿ ಮಾಡಲಾಗಿದೆ.

-೧-

**೨. ಜನರನ್ನು ಒಳಗೊಳ್ಳುವುದು ಎಂದರೇನು ?**

ಇದು ಬಹಳ ಕುತೂಹಲದ ಸಂಗತಿಯಾಗಿದೆ. ಅಭಿವೃದ್ಧಿಯು ಜನರಿಂದ, ಜನರಿಗಾಗಿ ಮತ್ತು ಜನರಿಗೋಸ್ಕರವೇ ಇರುವಾಗ ಅದು ಜನ ಒಳಗೊಳ್ಳದಿರುವುದು ಹೇಗೆ? ಉತ್ಪಾದನೆಯಾದ ಸಂಪತ್ತು ಯಾರ ಮಡುಗಟ್ಟಿಗೊಳ್ಳುತ್ತಿದೆ? ಸಂಪತ್ತು ಉಳ್ಳವರ ಪಾಲಾಗುತ್ತಿದೆ. ಉಳಿದ ಅದರಿಂದ ವಂಚಿತರಾಗುತ್ತಿದ್ದಾರೆ. ಕರ್ನಾಟಕದ ಸಂಪತ್ತು ತೀವ್ರ ಏರಿಕೆಯಾಗುತ್ತಿದೆ. ರಾಜ್ಯದ ನಿವ್ವಳ ಆಂತರಿಕ ಉತ್ಪನ್ನ ಹಾಗೂ ತಲಾ ನಿವ್ವಳ ಆಂ ಉತ್ಪನ್ನ ತೀವ್ರಗತಿಯಲ್ಲಿ ಏರಿಕೆಯಾಗುತ್ತಿದೆ.

| ಕೋಷ್ಟಕ -೧ | | |
|---|---|---|
| ಕರ್ನಾಟಕ ರಾಜ್ಯದ ವರಮಾನ (ಚಾಲ್ತಿ ಬೆಲೆಗಳು) | | |
| ವರ್ಷಗಳು | ರಾಜ್ಯನಿವ್ವಳ ಆಂತರಿಕ ಉತ್ಪನ್ನ (ಕೋಟಿ ರೂ.ಗಳಲ್ಲಿ) | ತಲಾ ನಿವ್ವಳ ಆಂತರಿಕ ಉತ್ಪನ್ನ (ರೂ.ಗಳಲ್ಲಿ) |
| ೧೯೯೩-೧೯೯೪ | ೩೬೯೮೨.೨೮ | ೭೮೩೮ |
| ೧೯೯೯-೨೦೦೦ | ೮೬೨೯೬.೩೦ | ೧೬೬೫೪ |
| ೨೦೦೩-೨೦೦೪ | ೧೧೫೮೩೪.೦೮ | ೨೧೨೩೮ |
| ಮೂಲ : ಕರ್ನಾಟಕ ಸರ್ಕಾರ : ೨೦೦೫ ಆರ್ಥಿಕ ಸಮೀಕ್ಷೆ : ೨೦೦೪-೦೫ | | |


WITH BEST COMPLIMENTS FROM



PRINTERS
PROVIDERS

Aishwarya Grafics

# 123, 70th Cross, 5th Block, Rajajinagar
Bangalore - 560 010,
Phone : 23102445, 65635950
Mobile : 9341231378, 9845666122, 9880600770


ಕಳೆದ ದಶಕದಲ್ಲಿ (೧೯೯೪-೨೦೦೪) ಕರ್ನಾಟಕ ರಾಜ್ಯದ ನಿವ್ವಳ ಆಂತ ಉತ್ಪನ್ನವು ವಾರ್ಷಿಕ ಶೇ.೨೧.೩೨ರ ಪ್ರಮಾಣದಲ್ಲಿ ಏರಿಕೆಯಾಗಿದೆ. ತಲಾ ವರಮಾನ ಇದೇ ಅವಧಿಯಲ್ಲಿ ಶೇ. ೧೭.೦೯ಈ ಪ್ರಮಾಣದಲ್ಲಿ ಏರಿಕೆಯಾಗಿದೆ.

ಇಲ್ಲಿ 'ಜನರು' – 'ಜನಸಮುದಾಯ' ಎಂಬುದನ್ನು ಒಂದು ನಿರ್ದಿಷ್ಟ ಅರ್ಥ ಬಳಸಲಾಗಿದೆ. ಅಭಿವೃದ್ಧಿಯಿಂದ ವಂಚಿತರಾದವರು, ಸಮಾಜದಲ್ಲಿ ಅಂಚಿನಲ್ಲಿ ವವರು, ಮಹಿಳೆಯರು, ದಲಿತರು, ಹಿಂದುಳಿದ ವರ್ಗ – ಇವರನ್ನು ಇಲ್ಲಿ 'ಜನ ಎಂದು ಸಂಬೋಧಿಸಲಾಗುತ್ತಿದೆ. ಅಭಿವೃದ್ಧಿಯು ಜನರನ್ನು ಒಳಗೊಳ್ಳುತ್ತದೆಂ ಅದು ವಂಚಿತರ, ಅಂಚಿನಲ್ಲಿರುವವರ, ದಲಿತರ, ಹಿಂದುಳಿದ ವರ್ಗಗಳ ಪರವಾ ಬೇಕಾಗುತ್ತದೆ. ಕರ್ನಾಟಕದಲ್ಲಿ ಸರಿಸುಮಾರು ೬೨ ಲಕ್ಷ ಭೂರಹಿತ ದಿನಗೂ ದುಡಿಮೆಗಾರರಿದ್ದಾರೆ. ಇವರ ದಿನಗೂಲಿ ಐವತ್ತು ರೂಪಾಯಿ ದಾಟುವುದಿ ಕರ್ನಾಟಕದಲ್ಲಿ ೧೫೧ ಲಕ್ಷ ಅನಕ್ಷರಸ್ಥರಿದ್ದಾರೆ. ಇಲ್ಲಿ ಸುಮಾರು ೨೬೦ ಮಹಿಳೆಯರಿದ್ದಾರೆ. ಸರಿಸುಮಾರು ೧೨೦ ಲಕ್ಷ ದಲಿತರಿದ್ದಾರೆ. ಇವರ ಅಭಿವೃದ್ಧಿಯು ಅರ್ಥಪೂರ್ಣವಾಗಿ ಒಳಗೊಳ್ಳಬೇಕು. ದಲಿತ ಜನಸಮೂಹದ ಬಡತನದ ರೇಖೆ ಕೆಳಗೆ ಬದುಕು ಮಾಡುತ್ತಿರುವವರ ಪ್ರಮಾಣ ಶೇ. ೯೦. ಇದು ಸರ್ಕಾರದ ಸಮೀಕ್ಷೆಗಳೇ ದೃಢಪಡಿಸಿವೆ.

ರಾಜ್ಯದ ಗ್ರಾಮೀಣ ಪ್ರದೇಶದಲ್ಲಿ ೩೫೦ ಲಕ್ಷ ಜನರು ಬದುಕು ನಡೆಸುತ್ತಿದ್ದಾ ಅಭಿವೃದ್ಧಿ ಅಂದರೆ ಅಕ್ಷರ, ಶಿಕ್ಷಣ, ಆರೋಗ್ಯ, ಆಹಾರ, ಉದ್ಯೋಗ – ಇವೆಲ್ಲ ಇವರನ್ನು ಒಳಗೊಳ್ಳಬೇಕು. ಅಭಿವೃದ್ಧಿಗೆ ಸಲ್ಲುವ ದುಡಿಮೆಯಲ್ಲಿ ವಂಚಿತರ ಅಂಚಿನಲ್ಲಿರುವವರ ಕಾಣಿಕೆ ದೊಡ್ಡದು. ಆದರೆ ಅದರಿಂದ ಇವರು ಪಡೆ ಕೊಳ್ಳುತ್ತಿರುವುದು ಸಾಪೇಕ್ಷವಾಗಿ ಕಡಿಮೆ. ಅವರು ಬೆವರು, ಕಣ್ಣೀರು – ರಕ್ತ ಹರಿ ದುಡಿಯುತ್ತಿದ್ದಾರೆ. ದುಡಿಮೆಯ ಸಿಂಹಪಾಲನ್ನು ಇವರು ನಿರ್ವಹಿಸುತ್ತಿದ್ದಾರೆ. ಆದ ಅಭಿವೃದ್ಧಿಯು ಇವರನ್ನು ಒಳಗೊಳ್ಳುತ್ತಿಲ್ಲ. ವಾಸ್ತವವಾಗಿ ಮಹಿಳೆಯರ – ದಲಿತ ಪದತಲದಿಂದ ಅಭಿವೃದ್ಧಿಯ ಆರಂಭವು ನಡೆಯಬೇಕಾಗಿದೆ.

ಅಭಿವೃದ್ಧಿಯೆಂಬುದು ಕೇವಲ ವರಮಾನ ವರ್ಧನೆಗೆ ಸಂಬಂಧಿಸಿ ಸಂಗತಿಯಲ್ಲ. ವರಮಾನವೆಂಬುದು ಅಭಿವೃದ್ಧಿಯ ಸಾಧನವೇ ವಿನಾ ಅದು ಅದ 'ಸಾಧ್ಯ'ವಲ್ಲ. ಅಭಿವೃದ್ಧಿಯೆಂದರೆ ಜನರ ಬದುಕು ಉತ್ತಮಗೊಳ್ಳುವುದಾಗಿದೆ. ನ ಸಮಾಜದ ಸಂದರ್ಭದಲ್ಲಿ ತಮ್ಮ ಬದುಕನ್ನು ಉತ್ತಮಪಡಿಸಿಕೊಳ್ಳಲು ಮಹಿಳೆಯರಿ ದಲಿತರಿಗೆ, ಹಿಂದುಳಿದ ವರ್ಗಗಳಿಗೆ, ಅಲ್ಪಸಂಖ್ಯಾತರಿಗೆ ದೊರೆಯುವ ಅವಕಾಶಗ ವ್ಯಾಪ್ತಿ ತುಂಬಾ ಸೀಮಿತವಾದುದು. ಬದುಕನ್ನು ಉತ್ತಮಪಡಿಸಿಕೊಳ್ಳಲು ಸಮಾಜದ ಹರಿದುಬರುತ್ತಿರುವ ಅವಕಾಶಗಳನ್ನು ಧಾರಣೆ ಮಾಡಿಕೊಳ್ಳುವ ಜನರ ಸಾಮರ್ಥ್ಯ ಹಾಗೂ ಸ್ವಾತಂತ್ರ್ಯವನ್ನು ಅಮರ್ತ್ಯ ಸೇನ್ ಅಭಿವೃದ್ಧಿಯೆಂದು ಕರೆದಿದ್ದಾರೆ.

ಅಭಿವೃದ್ಧಿಯನ್ನು ಧಾರಣೆ ಮಾಡಿಕೊಳ್ಳುವ ಜನರ ಸಾಮರ್ಥ್ಯ-ಸ್ವಾತಂ ಕರ್ನಾಟಕದಲ್ಲಿ ತುಂಬಾ ಕಡಿಮೆ. ಅವಕಾಶಗಳ ವ್ಯಾಪ್ತಿಯನ್ನು ವಿಸ್ತತಗೊಳಿಸುವುದ ಅಭಿವೃದ್ಧಿ. ವಿಸ್ತತಗೊಂಡ ಅವಕಾಶಗಳಲ್ಲಿ ಆಯ್ಕೆ ಪ್ರಕ್ರಿಯೆಗೆ ಮಹತ್ವದ ಸಾಧನವಾ

ಬೇಕು. ಅಭಿವೃದ್ಧಿಯು ಜನರನ್ನು ಒಳಗೊಳ್ಳುವುದೆಂದರೆ ಅವರನ್ನು ಯಾಚಕರನ್ನಾಗಿ, ಫಲಾನುಭವಿಗಳನ್ನಾಗಿ, ಆಶ್ರಿತರನ್ನಾಗಿ ನೋಡುವುದಲ್ಲ. ಏಕೆಂದರೆ ಜನರು ಅಭಿವೃದ್ಧಿಯ ಕರ್ತೃಗಳಾಗಿದ್ದಾರೆ. ಅಭಿವೃದ್ಧಿಯು ಜನರನ್ನು ಒಳಗೊಳ್ಳುವುದೆಂದರೆ ಜನರ ಕರ್ತೃತ್ವ ಶಕ್ತಿಗೆ ಅವಕಾಶವಿರಬೇಕು. ಅದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಅಭಿವೃದ್ಧಿಯ ಕರ್ತೃಗಳಾದ ಜನರು ಅದರಲ್ಲಿ ತಮ್ಮ ಹಕ್ಕುದಾರಿಕೆಯನ್ನು, ಪಾಲನ್ನು ಒತ್ತಾಯಿಸುವಂತಾಗಬೇಕು. ಹೀಗೆ ಅಭಿವೃದ್ಧಿ ಎಂಬುದು ಜನರನ್ನು ಒಳಗೊಳ್ಳಬೇಕು. ಇದು ನೈತಿಕತೆಯ ಪ್ರಶ್ನೆಯಲ್ಲ. ''ಅಯ್ಯೋ ಪಾಪ''ವೆಂದು ಜನರ ಸಂಕಷ್ಟಕ್ಕೆ ಮರುಗುವುದರಿಂದ ಏನೂ ಆಗುವುದಿಲ್ಲ. ಅಭಿವೃದ್ಧಿಯೆಂಬುದು ದಾನ - ದತ್ತಿ - ಉಂಬಳಿಯಲ್ಲ. ಜನರ ಧಾರಣ ಶಕ್ತಿ, ಕರ್ತೃತ್ವ ಸಾಮರ್ಥ್ಯ ಉತ್ತಮವಾಗಿದ್ದಾಗ ಮಾತ್ರ ಅಭಿವೃದ್ಧಿ ಜನರನ್ನು ಒಳಗೊಳ್ಳುವುದು ಸಾಧ್ಯ.

ಸಾಕ್ಷಾತ್ಕಾರ

ಭೂತವನು
ದಹಿಸಿ
ಭವಿಷ್ಯತ್ತನು
ಮರೆಸಿ
ವಾಸ್ತವದಿ
ಜೀವಿಸುವ
ಪ್ರಕಾರ

— ನಾ. ದಿವಾಕರ

ನಮ್ಮ ಸಮಾಜದ ಸಂದರ್ಭದಲ್ಲಿ ಅನೇಕ ಬಗೆಯ ಅಸಮಾನತೆಗಳು ಜನರನ್ನು ಅಭಿವೃದ್ಧಿಯಲ್ಲಿ ಒಳಗೊಳ್ಳದಂತೆ ಮಾಡುತ್ತಿವೆ; ಅಭಿವೃದ್ಧಿ ಪರಿಧಿಯಿಂದ ದೂರವಾಗುವ ಪ್ರವೃತ್ತಿ ಕಂಡುಬರುತ್ತಿದೆ. ಅಭಿವೃದ್ಧಿಯು ಜನರನ್ನು ಒಳಗೊಳ್ಳದಿದ್ದರೆ ಅದಕ್ಕೆ ಅನೂಚಾನವಾಗಿ ಹರಿದುಕೊಂಡು ಬಂದಿರುವ ಅಸಮಾನತೆ ಕಾರಣವಾಗಿದೆ. ಅಸಮಾನತೆಗೆ ಸಾಮಾಜಿಕ ಆಯಾಮವಿದೆ. ಲಿಂಗಸಂಬಂಧಿ ನೆಲೆಯಿದೆ. ಅದಕ್ಕೆ ಪ್ರಾದೇಶಿಕ ಸ್ವರೂಪವಿದೆ. ಈ ಸಂಗತಿಗಳು ಜನರನ್ನು ಅಭಿವೃದ್ಧಿತೊಡಗದಂತೆ ಮಾಡುತ್ತಿವೆ. ಈ ಜನರಿಗೆ ಅತೀತವಾದ ರೀತಿಯಲ್ಲಿ ಅಭಿವೃದ್ಧಿಯಲ್ಲಿ ನಡೆಯತೊಡಗಿದೆ. ಈ ಎಲ್ಲ ಬಗೆಯ ಅಸಮಾನತೆಗಳು ಜನರ ಧಾರಣ ಸಾಮರ್ಥ್ಯ-ಕರ್ತೃತ್ವ ಶಕ್ತಿ ಏರಿಕೆಯಾಗದಂತೆ ನೋಡಿಕೊಳ್ಳುತ್ತಿವೆ. ಅನೇಕ ರೀತಿಯಲ್ಲಿ ಜನರು ಅಭಿವೃದ್ಧಿಯಿಂದ ವಂಚಿತರಾಗುತ್ತಿದ್ದಾರೆ. ಕರ್ನಾಟಕದ ಸಂದರ್ಭದಲ್ಲಿ ಅಸಮಾನತೆಗಳು ಹೇಗೆ ಜನರನ್ನು ಅಭಿವೃದ್ಧಿಯಿಂದ ವಂಚಿತರನ್ನಾಗಿ ಮಾಡುತ್ತಿವೆ ಎಂಬುದನ್ನು ವಿವರವಾಗಿ ಚರ್ಚಿಸುವ ಅಗತ್ಯವಿದೆ.

ಜಾಗತೀಕರಣದ ಅಧ್ವರ್ಯುವಾದ ಡಾ|| ಮನಮೋಹನ ಸಿಂಗ್ ಮತ್ತು ಪಿ. ಚಿದಂಬರಂ ಅವರಿಗೂ ಅದರ ಮಿತಿಯ ಅರಿವಾಗಿದೆ. ಈ ಕಾರಣದಿಂದಾಗಿ ಇವರಿಬ್ಬರೂ ಇಂದು ಜನರನ್ನು ಒಳಗೊಳ್ಳುವ ಅಭಿವೃದ್ಧಿ ಬಗ್ಗೆ ಮಾತನಾಡುತ್ತಿದ್ದಾರೆ. ಇವರ ಮಾರ್ಗದರ್ಶನದಲ್ಲಿ ರೂಪಿತವಾಗಿರುವ ಹನ್ನೊಂದನೆಯ ಯೋಜನೆಯ (೨೦೦೭-೨೦೧೨) ಆಶಯ ಪತ್ರದ ಶೀರ್ಷಿಕೆಯೇ 'ತೀವ್ರಗತಿಯ ಮತ್ತು ವಿಸ್ತೃತವಾಗಿ ಜನರನ್ನು ಒಳಗೊಳ್ಳುವ ಅಭಿವೃದ್ಧಿ' ಎಂಬುದಾಗಿದೆ. ಜನರನ್ನು ಒಳಗೊಳ್ಳುವ ಅಭಿವೃದ್ಧಿಯೆಂಬುದು ಹೊಸ ಸಿದ್ಧಾಂತದ ರೂಪ ತಳೆಯುತ್ತಿದೆ.

-೨-

### ೩. ಅಭಿವೃದ್ಧಿ ಅಸಮಾನತೆಯ ವಿರಾಟ್ ಸ್ವರೂಪ

ಅಮರ್ತ್ಯ ಸೇನ್ ತಮ್ಮ 'ಇನೀಕ್ವಾಲಿಟಿ ರೀಎಕ್ಸಾಮಿನ್ಡ್' (೧೯೯೨)ನಲ್ಲಿ ಅಸಮಾನತೆಯ ವಿರಾಟ್ ಸ್ವರೂಪದ ಸೂಕ್ಷ್ಮ ನೆಲೆಗಳನ್ನು ಅನಾವರಣ ಮಾಡಿದ್ದಾರೆ. ಸಾಮಾನ್ಯವಾಗಿ ಅಸಮಾನತೆಯನ್ನು ಕುರಿತ ಚರ್ಚೆಗಳು ವರಮಾನ - ವರ್ಗ ಸಂಬಂಧಿ ನೆಲೆಗೆ ಮಾತ್ರ ಸೀಮಿತಗೊಂಡಿರುವ ಸಂಗತಿ ನಮ್ಮ ಮುಂದಿದೆ. ವರಮಾನ ಸಂಬಂಧಿ - ವರ್ಗ ಸಂಬಂಧಿ ಅಂತರವು ಅಸಮಾನತೆಯ ಒಂದು ನೆಲೆಯಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಅಭಿವೃದ್ಧಿಯು ಜನರನ್ನು ಒಳಗೊಳ್ಳಲು ಅಡ್ಡಿಯುಂಟುಮಾಡುತ್ತಿರುವ ವಿವಿಧ ಬಗೆಯ ಅಸಮಾನತೆಗಳನ್ನು ಕರ್ನಾಟಕ್ಕೆ ಸಂಬಂಧಿಸಿದಂತೆ ಚರ್ಚಿಸಲಾಗಿದೆ. ಈ ಅಸಮಾನತೆಗಳನ್ನು ನಿವಾರಣೆ ಮಾಡದೆ ಅಭಿವೃದ್ಧಿಯು ಜನರನ್ನು ಒಳಗೊಳ್ಳುವಂತೆ ಮಾಡುವುದು ಸಾಧ್ಯವಿಲ್ಲ. ಅಭಿವೃದ್ಧಿಯು ಅನೇಕ ಬಗೆಯ ಅಸಮಾನತೆಗಳನ್ನು ಹುಟ್ಟುಹಾಕುತ್ತಿದೆ. ಅರಣ್ಯಧಾಮ, ವನ್ಯಮೃಗ ಅಭಯಾರಣ್ಯ, ಎಸ್.ಇ.ಜಡ್., ಅಣುವಿದ್ಯುತ್ ಮತ್ತು ಶಾಖೋತ್ಪನ್ನ ಸ್ಥಾವರಗಳು, ಉಪನಗರ ಮುಂತಾದವುಗಳ ಹೆಸರಿನಲ್ಲಿ ಜನರನ್ನು ಅನಾಥರನ್ನಾಗಿ ಮಾಡಲಾಗುತ್ತಿದೆ. ಅಭಿವೃದ್ಧಿಯು ಜನರನ್ನು ಒಳಗೊಳ್ಳುವುದಕ್ಕೆ ಪ್ರತಿಯಾಗಿ ಅದು ಜನರನ್ನು ವಂಚಿತರನ್ನಾಗಿ ಮಾಡುತ್ತಿದೆ. ಶಿಕ್ಷಣದ ಖಾಸಗೀಕರಣದಿಂದಾಗಿ ಅಭಿವೃದ್ಧಿಯು ಜನರನ್ನು ಒಳಗೊಳ್ಳುವುದಕ್ಕೆ ಪ್ರತಿಯಾಗಿ ಅದು ಉಳ್ಳವರ ಹಿತಾಸಕ್ತಿಗಳನ್ನು ಪೂರೈಸುವ ಸಾಧನವಾಗುತ್ತಿದೆ.

#### ೩.೧ ಸಾಮಾಜಿಕ ಅಸಮಾನತೆ

ಪ್ರಜೆಗಳನ್ನು ಒಳಗೊಳ್ಳುವ ಪ್ರಭುತ್ವ ನಮ್ಮಲ್ಲಿ ಅಸ್ತಿತ್ವಕ್ಕೆ ಪೂರ್ಣಪ್ರಮಾಣದಲ್ಲಿ ಬರದಿದ್ದರೆ ಅದಕ್ಕೆ ಮುಖ್ಯ ಕಾರಣ ಅನೂಚಾನವಾಗಿ ಹರಿದುಕೊಂಡು ಬರುತ್ತಿರುವ ಸಾಮಾಜಿಕ - ಸಾಂಸ್ಕೃತಿಕ ಅಸಮಾನತೆಗಳು. ಅಭಿವೃದ್ಧಿಯ ಯಾವುದೇ ಸೂಚಿಯನ್ನು ತೆಗೆದುಕೊಂಡರೂ ನಾಡಿನ ಪರಿಶಿಷ್ಟ ಜನಸಮುದಾಯದ ಬದುಕು ಉಳಿದ ಜನಸಮುದಾಯದ ಬದುಕಿಗಿಂತ ದುರ್ಬಲವಾಗಿರುವುದು ಕಂಡುಬರುತ್ತದೆ. ಸಮಾಜದಲ್ಲಿ ಅವಕಾಶಗಳು ಸಮಾನವಾಗಿ ಎಲ್ಲರಿಗೂ ದೊರೆಯುವಂತಿದ್ದರೆ ಪರಿಶಿಷ್ಟರ ಬದುಕು ಉಳಿದೆಲ್ಲ ಜನಸಮುದಾಯಗಳ ಬದುಕಿಗಿಂತ ತೀವ್ರ ಕೆಳಮಟ್ಟದಲ್ಲಿರಬೇಕಾಗಿರಲಿಲ್ಲ. ಪರಿಶಿಷ್ಟ ಮಹಿಳೆಯರ ಬದುಕು ಇಡೀ ಸಮಾಜದಲ್ಲಿ ಅತ್ಯಂತ ತೀವ್ರ ದುಃಸ್ಥಿತಿಗೆ ಒಳಗಾಗಿದೆ. ಪರಿಶಿಷ್ಟರು ಎಂಬ ಕಾರಣಕ್ಕೆ ಅವರ ಬದುಕು ದುಃಸ್ಥಿತಿಗೆ ಒಳಗಾಗಿದೆ. ಮಹಿಳೆ ಎಂಬ ಕಾರಣಕ್ಕೆ - ಪರಿಶಿಷ್ಟರ ಮಹಿಳೆ ಎಂಬ ಕಾರಣಕ್ಕೆ ಅವರು ನಿಕೃಷ್ಟೀಕರಣಕ್ಕೆ ಒಳಗಾಗಿದ್ದಾರೆ.

#### ದಲಿತರ ಅಭಿವೃದ್ಧಿ ಸ್ಥಾನ

ಸಾಂಪ್ರದಾಯಿಕ ಅಭಿವೃದ್ಧಿ ಮೀಮಾಂಸೆಯಲ್ಲಿ ದೇಶದ/ಪ್ರದೇಶದ ಸಾಮಾಜಿಕ ಗುಂಪುಗಳ ಅಭಿವೃದ್ಧಿ ಮಟ್ಟವನ್ನು ಅಳೆಯುವುದು ಸಾಧ್ಯವಿಲ್ಲ. ಆದರೆ ಮಾನವ ಅಭಿವೃದ್ಧಿ ಮೀಮಾಂಸೆಯಲ್ಲಿ ವಿವಿಧ ಸಾಮಾಜಿಕ ಗುಂಪುಗಳ ಅಭಿವೃದ್ಧಿ ಮಟ್ಟವನ್ನು ಪರಿಮಾಣಾತ್ಮಕವಾಗಿ ಹಿಡಿದಿಡುವುದು ಸಾಧ್ಯ. ಕರ್ನಾಟಕವು ಪ್ರಥಮ ಬಾರಿಗೆ ಇಂತಹ ಒಂದು ಪ್ರಯತ್ನವನ್ನು 'ಕರ್ನಾಟಕ ಮಾನವ ಅಭಿವೃದ್ಧಿ ವರದಿ - ೨೦೦೫'ರಲ್ಲಿ ಮಾಡಿದೆ. ರಾಜ್ಯದ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ಮಟ್ಟವನ್ನು ಮಾಪನ ಮಾಡಿ ಅದರ ವಿವರಗಳನ್ನು ಪ್ರಕಟಿಸಲಾಗಿದೆ. ಮಾನವ ಅಭಿವೃದ್ಧಿ ಸೂಚ್ಯಂಕವೆಂಬುದು ಆರೋಗ್ಯ, ಶೈಕ್ಷಣಿಕ ಸಾಧನೆ ಮತ್ತು ವರಮಾನ – ಮೂರು ಸೂಚಿಗಳು ಈ ಸಂಯುಕ್ತ ಸೂಚ್ಯಂಕವಾಗಿದೆ. ಇಲ್ಲಿ ಅಭಿವೃದ್ಧಿಯ ಗರಿಷ್ಠ ಮಟ್ಟ **ಒಂದು** ಮತ್ತು ಕನಿಷ್ಠ ಮಟ್ಟ **ಶೂನ್ಯ**. ವಾಸ್ತವವಾಗಿ ಅಭಿವೃದ್ಧಿ ಮಟ್ಟವು ಗರಿಷ್ಠ- ಕನಿಷ್ಠಗಳ ನಡುವೆ ಇರುತ್ತದೆ. ಕೋಷ್ಟಕ - ೨ರಲ್ಲಿ ಇದರ ವಿವರಗಳನ್ನು ನೀಡಲಾಗಿದೆ.

ಕೋಷ್ಟಕ - ೨

ಕರ್ನಾಟಕದಲ್ಲಿ ಸಾಮಾಜಿಕ ಗುಂಪುಗಳ ಮಾನವ ಅಭಿವೃದ್ಧಿ ಸೂಚ್ಯಂಕ

| ಕ್ರ. ಸಂ. | ಸಾಮಾಜಿಕ ಗುಂಪುಗಳು | ಆರೋಗ್ಯ ಸೂಚಿ | ಶೈಕ್ಷಣಿಕ ಸೂಚಿ | ವರಮಾನ ಸೂಚಿ | ಮಾನವ ಅಭಿವೃದ್ಧಿ ಸೂಚ್ಯಂಕ |
|---|---|---|---|---|---|
| ೧ | ಪರಿಶಿಷ್ಟ ಜಾತಿ | ೦.೬೧೭ | ೦.೬೩೩ | ೦.೪೭೫ | ೦.೫೭೫ |
| ೨ | ಪರಿಶಿಷ್ಟ ಪಂಗಡ | ೦.೬೧೩ | ೦.೫೬೩ | ೦.೪೪೨ | ೦.೫೩೯ |
| ೩. | ಒಟ್ಟು ಜನಸಂಖ್ಯೆ | ೦.೬೮೦ | ೦.೭೧೨ | ೦.೫೫೯ | ೦.೬೫೦ |

ಮೂಲ : ಕರ್ನಾಟಕ ಸರ್ಕಾರ ೨೦೦೬, ಕರ್ನಾಟಕ ಮಾನವ ಅಭಿವೃದ್ಧಿ ವರದಿ : ೨೦೦೫

ಒಟ್ಟು ಜನಸಂಖ್ಯೆಯ ಅಭಿವೃದ್ಧಿ ಮಟ್ಟ ಮತ್ತು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ಮಟ್ಟಗಳ ನಡುವೆ ಅಂತರವಿರುವುದು ಕೋಷ್ಟಕದಿಂದ ತಿಳಿಯುತ್ತದೆ. ಪರಿಶಿಷ್ಟ ಜಾತಿಯ ಅಭಿವೃದ್ಧಿ ಮಟ್ಟವು ಒಟ್ಟು ಜನಸಂಖ್ಯೆಯ ಅಭಿವೃದ್ಧಿ ಮಟ್ಟದ ಶೇ. ೮೮.೪೬ ರಷ್ಟಿದ್ದರೆ, ಪರಿಶಿಷ್ಟ ಪಂಗಡದ ಅಭಿವೃದ್ಧಿ ಮಟ್ಟವು ಒಟ್ಟು ಜನಸಂಖ್ಯೆಯ ಅಭಿವೃದ್ಧಿ ಮಟ್ಟದ ಶೇ. ೮೨.೯೨ ರಷ್ಟಿದೆ, ಅಂದರೆ ಸಾಮಾಜಿಕವಾಗಿ ಅಭಿವೃದ್ಧಿ ಸಂಬಂಧಿ ಅಸಮಾನತೆಯು ತೀವ್ರವಾಗಿಲ್ಲ. ಮುಂದಿನ ದಶಕದಲ್ಲಿ ಖಂಡಿತ ಪರಿಶಿಷ್ಟರ ಅಭಿವೃದ್ಧಿ ಮಟ್ಟವು ಒಟ್ಟು ಜನಸಂಖ್ಯೆಯ ಅಭಿವೃದ್ಧಿ ಮಟ್ಟಕ್ಕೆ ಸಾಗುವುದು ಖಚಿತ. ಇದೊಂದು ಅಭಿನಂದನೀಯ ಸಂಗತಿಯಾಗಿದೆ. ಕರ್ನಾಟಕವು ಮಧ್ಯಮ ಗತಿಯ ಅಭಿವೃದ್ಧಿ ನೀತಿಯ ಮೂಲಕ ಇಂತಹ ಸಾಧನೆಯನ್ನು ಸಾಧಿಸಿಕೊಳ್ಳುವ ದಿಶೆಯಲ್ಲಿ ಮುಂದೆ ಸಾಗುತ್ತಿರುವುದು ಒಂದು ಒಳ್ಳೆಯ ಸೂಚನೆಯಾಗಿದೆ. ಮಾನವ ಅಭಿವೃದ್ಧಿ ಸೂಚ್ಯಂಕವು ಒಳಗೊಳ್ಳುವ ಮೂರು ಸೂಚಿಗಳಾದ ಆರೋಗ್ಯ (ಜೀವನಾಯುಷ್ಯ), ಶೈಕ್ಷಣಿಕ ಸಾಧನೆ (ಸಾಕ್ಷರತೆ + ದಾಖಲಾತಿ) ಮತ್ತು ವರಮಾನಗಳಲ್ಲಿ ಪರಿಶಿಷ್ಟರ ಅಭಿವೃದ್ಧಿ ಮಟ್ಟವು ಒಟ್ಟು ಜನಸಂಖ್ಯೆಯ ಅಭಿವೃದ್ಧಿ ಮಟ್ಟಕ್ಕಿಂತ ಕಡಿಮೆಯಿದೆ.

#### ಸಾಕ್ಷರತೆಯಲ್ಲಿ ಅಸಮಾನತೆ

ಬದುಕನ್ನು ಉತ್ತಮಪಡಿಸಿಕೊಳ್ಳಲು ಅಗತ್ಯವಾದ ಅವಕಾಶಗಳಲ್ಲಿ ಸಾಕ್ಷರತೆ ಮತ್ತು ಶಿಕ್ಷಣ ಬಹಳ ಮುಖ್ಯವಾದ ಸಂಗತಿಗಳಾಗಿವೆ. ಈ ವಿಷಯದಲ್ಲಿ ಪರಿಶಿಷ್ಟರು ಮತ್ತು

ಶಿಷ್ಟರ ನಡುವೆ ಅಪಾರ ಅಂತರವಿರುವುದು ವಿಷಾದನೀಯ ಸಂಗತಿಯಾಗಿದೆ. ರೂಢಿಯಲ್ಲಿರುವ ಕ್ರಮವೆಂದರೆ ಒಟ್ಟು ಜನಸಂಖ್ಯೆಯ ಸಾಕ್ಷರತೆ ಮತ್ತು ಪರಿಶಿಷ್ಟರ (ಪ್ರ.ಜಾ.+ಪ.ಪಂ.) ಸಾಕ್ಷರತೆ ನಡುವಿನ ಅಂತರದ ಆಧಾರದ ಮೇಲೆ ಸಾಕ್ಷರತೆಗೆ ಸಂಬಂಧಿಸಿದ ಸಾಮಾಜಿಕ ಅಸಮಾನತೆಯನ್ನು ಅಳೆಯಲಾಗುತ್ತದೆ. ಈ ಬಗೆಯ ವಿಧಾನದಲ್ಲಿ ಪರಿಶಿಷ್ಟರ ಸಾಕ್ಷರತೆಯು ಒಟ್ಟು ಜನಸಂಖ್ಯೆಯ ಸಾಕ್ಷರತೆಗಿಂತ ಶೇ. ೧೫.೦೫ ಅಂಶಗಳಷ್ಟು ಕಡಿಮೆಯಿರುವುದು ಕಂಡುಬರುತ್ತದೆ. ಆದರೆ ನಾವು ಶಿಷ್ಟರ ಮತ್ತು ಪರಿಶಿಷ್ಟರ ಸಾಕ್ಷರತೆ ನಡುವೆ ಅಂತರವನ್ನು ಗಣನೆ ಮಾಡಿದರೆ ಅಸಮಾನತೆ ಪ್ರಮಾಣ ಶೇ. ೧೯.೯ ಅಂಶಗಳಷ್ಟಾಗುತ್ತದೆ. ಇದೊಂದು ಬಹಳ ಮುಖ್ಯವಾದ ಸಂಗತಿಯಾಗಿದೆ. ಇಲ್ಲಿ ರೂಪಿಸಿರುವ ವಿಧಾನವು ರೂಢಿಯಲ್ಲಿರುವ ವಿಧಾನಕ್ಕಿಂತ ಅಧಿಕವಾದ ಅಂತರವನ್ನು ತೋರಿಸುತ್ತದೆ. ಈ ವಿಷಯದಲ್ಲಿ ಸರ್ಕಾರವು ದಲಿತರ ಸಾಕ್ಷರತೆಯನ್ನು ಉತ್ತಮಪಡಿಸುವ ಕಡೆ ಹೆಚ್ಚು ಗಮನ ನೀಡುವ ಅಗತ್ಯವಿದೆ.

**ಪ್ರಾಥಮಿಕ ಶಿಕ್ಷಣ (೧-೧೦ನೆಯ ತರಗತಿ)**

ದಲಿತ ಮಕ್ಕಳ ಶಾಲಾ ದಾಖಲಾತಿ ಪ್ರಮಾಣ ತೀವ್ರಗತಿಯಲ್ಲಿ ಏರಿಕೆಯಾಗುತ್ತಿರುವುದು ಮತ್ತು ಅದು ಈಗಾಗಲೆ ಸಾಪೇಕ್ಷವಾಗಿ ಉನ್ನತ ಮಟ್ಟ ತಲುಪಿರುವುದು ಶ್ಲಾಘನೀಯ ಮತ್ತು ಸ್ವಾಗತಾರ್ಹವಾದ ಸಂಗತಿಯಾಗಿದೆ. ರಾಜ್ಯದಲ್ಲಿ ೨೦೦೪-೨೦೦೫ರಲ್ಲಿ ೧ರಿಂದ ೧೦ನೆಯ ತರಗತಿಯವರೆಗೆ ದಾಖಲಾದ ಪರಿಶಿಷ್ಟ ಮಕ್ಕಳ ಸಂಖ್ಯೆ ೨.೬೧ ಲಕ್ಷ. ಇವರ ಸಂಖ್ಯೆ ೨೦೦೫-೦೬ರಲ್ಲಿ ೨.೬೮ ಲಕ್ಷಕ್ಕೆ ಏರಿಕೆಯಾಗಿದೆ. ರಾಜ್ಯದ ಒಟ್ಟು ದಾಖಲಾತಿಯಲ್ಲಿ ದಲಿತ ಮಕ್ಕಳ ದಾಖಲಾತಿ ಪ್ರಮಾಣವು ೨೦೦೪-೦೫ರಲ್ಲಿ ಶೇ. ೨೬.೨೪ ರಷ್ಟಿದ್ದುದು ೨೦೦೫-೦೬ ರಲ್ಲಿ ಶೇ. ೨೬.೮೯ ರಷ್ಟಾಗಿದೆ. ಜನಸಂಖ್ಯೆಯಲ್ಲಿ ದಲಿತರ ಪ್ರಮಾಣ ಎಷ್ಟಿದೆಯೋ (೨೨.೯೬) ಅದಕ್ಕಿಂತಲೂ ಅಧಿಕವಾದ ಪ್ರಾತಿನಿಧ್ಯವನ್ನು ಶಾಲಾ ದಾಖಲಾತಿಯಲ್ಲಿ ಅವರು ಪಡೆದುಕೊಂಡಿದ್ದಾರೆ. ಇದೊಂದು ಗಮನಾರ್ಹ ಅದ್ಭುತ ಸಾಧನೆಯಾಗಿದೆ. ಇಲ್ಲಿ ಒಂದು ಸಮಸ್ಯೆಯಿದೆ. ಒಂದನೆಯ ತರಗತಿಯಲ್ಲಿ ಅವರ ಪ್ರಮಾಣ ೨೦೦೫-೦೬ರಲ್ಲಿ ಶೇ.೩೨.೦೮ರಷ್ಟಿದ್ದರೆ ಏಳನೆಯ ತರಗತಿಯಲ್ಲ ಅವರ ಪ್ರಮಾಣ ಶೇ. ೨೫.೬೬ರಷ್ಟಿದೆ ಮತ್ತು ಹತ್ತನೆಯ ತರಗತಿಯಲ್ಲಿ ಅದು ಕೇವಲ ಶೇ. ೨೨.೩೭ರಷ್ಟಾಗಿದೆ. ಇದನ್ನು ದಲಿತ ಮಕ್ಕಳ ದಾಖಲಾತಿಯ ಅವರೋಹಣ ಕ್ರಮವೆಂದು ಹೇಳಬಹುದು. ಉನ್ನತ ಹಂತಕ್ಕೆ ಸಾಗಿದಂತೆ ದಲಿತ ಮಕ್ಕಳ ಪ್ರಮಾಣವು ಕಡಿಮೆಯಾಗುತ್ತಿದೆ. ಒಟ್ಟು ದಾಖಲಾತಿ ಉತ್ತಮವಾಗಿದೆ. ಆದರೆ ಇನ್ನು ಮುಂದೆ ಉನ್ನತ ಹಂತದಲ್ಲಿ ಅವರ ಪ್ರಾತಿನಿಧ್ಯವು ಉತ್ತಮಗೊಳ್ಳುವಂತೆ ಶ್ರಮವಹಿಸುವ ಅಗತ್ಯವಿದೆ.

ಸಾಮಾಜಿಕ ಅಸಮಾನತೆಯನ್ನು ಸಹನೀಯ ಸ್ಥಿತಿಯಲ್ಲಿಟ್ಟುಕೊಂಡಿರುವ ಕರ್ನಾಟಕದ ಸಾಧನೆ ಮಧ್ಯಮ ಸ್ಥಿತಿಯದ್ದಾಗಿದೆ. ಸಮಾನತೆಯ ದಾರಿಯ ಅದು ಸಾಗಬೇಕಾದ ದಾರಿ ದೂರವಿದೆ.

**೩.೨. ಲಿಂಗಸಂಬಂಧಿ ಅಸಮಾನತೆ**

ಜನರನ್ನು ಒಳಗೊಳ್ಳುವ ಅಭಿವೃದ್ಧಿಯನ್ನು ಸಾಧಿ ಕೊಳ್ಳಬೇಕಾದರೆ ಸಾಮಾಜಿಕ ಅಸಮಾನತೆಯನ ಮೊದಲು ತೊಡೆದುಹಾಕಬೇಕಾಗುತ್ತದೆ. ಈಗ ಜನರನ ಒಳಗೊಳ್ಳುವ ಅಭಿವೃದ್ಧಿಗೆ ಅಡ್ಡಿಯಾಗಿರುವ ಮತ್ತೊಂದು ಅಸಮಾನತೆಯನ್ನು ಕುರಿತಂತೆ ಚರ್ಚಿಸಬಹುದಾಗಿದೆ ಅದು ಮಹಿಳೆಯರು ಮತ್ತು ಪುರುಷರ ನಡುವಿನ ಅಸಮಾನತೆ. ಅಮರ್ತ್ಯ ಸೆನ್ ತಮ್ಮ ಬರಹಗಳಲ್ಲಿ ಮ ಮತ್ತೆ ಪ್ರತಿಪಾದಿಸುತ್ತಿರುವಂತೆ ಸಮಾಜದಲ್ಲಿ ಅವಕಾ ಗಳು ಸಮಾನವಿದ್ದ ಪಕ್ಷದಲ್ಲಿ ಲಿಂಗ ಅನುಪಾತವ ಒಂದಕ್ಕಿಂತ ಅಧಿಕವಾಗಿರಬೇಕು. ಆದರೆ ನಮ ದೇಶದಲ್ಲಿ ಕೇರಳದಲ್ಲಿ ಮಾತ್ರ ಅಂತಹ ಸ್ಥಿತಿಯಿದೆ ಕರ್ನಾಟಕದಲ್ಲಿ ದಕ್ಷಿಣ ಕನ್ನಡ, ಉಡುಪಿ ಮತ್ತು ಹಾಸನ ಜಿಲ್ಲೆಗಳಲ್ಲಿ ಮಾತ್ರ ಲಿಂಗ ಅನುಪಾತವು ಏಕಾಂಕಕ್ಕಿಂತ ಅಧಿಕವಿದೆ. ಲಿಂಗ ಅನುಪಾತವು ಒಟ್ಟು ಜನಸಂಖ್ಯೆಗ ಸಂಬಂಧಿಸಿದಂತೆ ಒಂದು ಸಾವಿರಕ್ಕಿಂತ ಕಡಿಮೆಯಿದ ಮತ್ತು ೦-೬ ವಯೋಮಾನದ ಮಕ್ಕಳಿಗೆ ಸಂಬಂಧಿಸಿದಂತೆ ಅದು ಕಡಿಮೆಯಾಗುತ್ತಿದೆ. ಇದನ್ನು ಲಿಂಗ ತಾರತಮ್ಯದ ಸೂಚಿಯನ್ನಾಗಿ ಸೆನ್ ಬಳಸುತ್ತಾರೆ ಅಭಿವೃದ್ಧಿ ಸೂಚಿಗಳಿಗೆ ಸಂಬಂಧಿಸಿದಂತೆ ಮಹಿಳೆಯರು




ಸುಖ-ಸಂತೋಷಗಳ ಜ್ಯೋತಿ
ಎಂದೆಂದು ಬೆಳಗುತಿರಲಿ

ಮೈಸೂರ್ ಸ್ಯಾಂಡಲ್ ಸಾಬೂನು
ಶ್ರೀಗಂಧದೆಣ್ಣೆಯು ತ್ವಚೆಯನ್ನು ಕೋಮಲ
ಹಾಗೂ ಮೃದುವಾಗಿಸುತ್ತದೆ.

ಮೈಸೂರ್ ಸ್ಯಾಂಡಲ್ ಸೋಪ್
100% ಪರಿಶುದ್ಧ ನೈಸರ್ಗಿಕ ಶ್ರೀಗಂಧದೆಣ್ಣೆಯ ಏಕೈಕ ಸಾಬೂನು






RGI No.30

ಇದುವೇ ಅಸಲಿ



ಎಲ್ಲ ವಿಷಯಗಳಲ್ಲೂ ತಾರತಮ್ಯ ಎದುರಿಸುತ್ತಿದ್ದಾರೆ.

ಮಹಿಳೆಯರ ಸಾಕ್ಷರತೆಯು ಪುರುಷರ ಸಾಕ್ಷರತೆಯ ಶೇ. ೭೫ ರಷ್ಟಿದೆ. ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣವು ಪುರುಷರ ಸಹಭಾಗಿತ್ವ ಪ್ರಮಾಣದ ಶೇ. ೫೬.೫೪ರಷ್ಟಿದೆ. ಒಟ್ಟು ಪುರುಷ ದುಡಿಮೆಗಾರರಲ್ಲಿ (೧೫೨.೩೫ ಲಕ್ಷ) ಕೃಷಿ ಅವಲಂಬನೆಯು ಶೇ. ೪೮.೯೨ ರಷ್ಟಾದರೆ ಒಟ್ಟು ಮಹಿಳಾ ದುಡಿಮೆಗಾರರಲ್ಲಿ (೮೨.೯೯ ಲಕ್ಷ) ಕೃಷಿ ಅವಲಂಬನೆಯು ಶೇ. ೬೮.೧೬ ರಷ್ಟಿದೆ. ಪುರುಷ ದುಡಿಮೆಗಾರರಲ್ಲಿ ಭೂರಹಿತ ದಿನಗೂಲಿಗಳ ಪ್ರಮಾಣ ಶೇ. ೧೬.೨೦ ರಷ್ಟಿದ್ದರೆ ಮಹಿಳಾ ದುಡಿಮೆಗಾರರಲ್ಲಿ ಭೂರಹಿತ ದಿನಗೂಲಿಗಳ ಪ್ರಮಾಣ ಶೇ. ೪೩.೪೫.

ಈ ಅಂಕಿ - ಅಂಶಗಳಿಂದ ಸ್ಪಷ್ಟವಾಗಿ ಮಹಿಳೆಯರು ದುಡಿಮೆಗೆ ಸಂಬಂಧಿಸಿದಂತೆ ಪುರುಷರಿಗಿಂತ ಹೆಚ್ಚು ದುಃಸ್ಥಿತಿ ಎದುರಿಸುತ್ತಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ. ಸಾಮಾನ್ಯವಾಗಿ ಕೃಷಿವಲಯದಿಂದ ಪ್ರಾಪ್ತವಾಗುವ ತಲಾ ಉತ್ಪನ್ನದ ಪ್ರಮಾಣವು ಕೃಷಿಯೇತರ ವಲಯದಿಂದ ಪ್ರಾಪ್ತವಾಗುವ ತಲಾ ಉತ್ಪನ್ನದ ಪ್ರಮಾಣಕ್ಕಿಂತ ತೀವ್ರ ಕಡಿಮೆಯಿರುತ್ತದೆ. ಅಂದ ಮೇಲೆ ಕೃಷಿಯನ್ನು ಅವಲಂಬಿಸಿಕೊಂಡಿರುವವರ ಪ್ರಮಾಣ ಅಧಿಕವಿರುವ ಹಾಗೂ ದಿನಗೂಲಿಗಳಿಗೆ ಸಂಬಂಧಿಸಿದ ಅಧಿಕ ಪ್ರಮಾಣದಲ್ಲಿರುವ ಮಹಿಳೆಯರ ವರಮಾನದ ಮಟ್ಟವು ಪುರುಷರ ವರಮಾನದ ಮಟ್ಟಕ್ಕಿಂತ ಬಹಳ ಕಡಿಮೆಯಿದೆ.

ಅಭಿವೃದ್ಧಿಯು ಸಾಮಾನ್ಯವಾಗಿ ಹೆಚ್ಚು ಹೆಚ್ಚು ಪುರುಷರನ್ನು ಒಳಗೊಳ್ಳುತ್ತಿದೆಯೇ ವಿನಾ ಮಹಿಳೆಯರನ್ನಲ್ಲ. ಜೀವನಾಧಾರ ಅವಕಾಶಗಳ ಸೂಚ್ಯಂಕವನ್ನು ತೆಗೆದುಕೊಂಡರೆ ಪುರುಷರ ಸೂಚ್ಯಂಕವು ೦.೫೦೪ ರಷ್ಟಾದರೆ ಮಹಿಳೆಯ ಸೂಚ್ಯಂಕ ಕೇವಲ ೦.೩೫೦. ಮಹಿಳೆಯರಿಗೆ ತಮ್ಮ ಬದುಕನ್ನು ಸಾಕಷ್ಟು ಉತ್ತಮಗೊಳಿಸಿಕೊಳ್ಳಲು ಲಭ್ಯವಿರುವ ಅವಕಾಶಗಳು ಪುರುಷರಿಗಿಂತ ಅತ್ಯಂತ ಕಡಿಮೆ. ಕರ್ನಾಟಕದಲ್ಲಿ ೨೦೦೪-೦೫ರಲ್ಲಿ ೧ರಿಂದ ೭ನೆಯ ತರಗತಿ ದಾಖಲಾತಿಯಲ್ಲಿ ಲಿಂಗ ಸಮಾನತಾ ಸೂಚ್ಯಂಕ ೦.೯೩೧ರಷ್ಟಾದರೆ ೮ರಿಂದ ೧೦ನೆಯ ತರಗತಿ ದಾಖಲಾತಿಯಲ್ಲಿ ಅದು ೦.೮೬೧ ರಷ್ಟಿದೆ.

ಲಿಂಗಸಂಬಂಧಗಳನ್ನು ಕುರಿತಂತಹ ಚರ್ಚೆಯಲ್ಲಿ ರೂಢಿಗತ ಕ್ರಮವೆಂದರೆ ಒಟ್ಟಾರೆ ಪುರುಷರು ಮತ್ತು ಮಹಿಳೆಯರ ನಡುವಣ ಸ್ಥಿತಿಗತಿಯನ್ನು ತುಲನೆ ಮಾಡುವುದಾಗಿದೆ. ಆದರೆ ಶ್ರೇಣೀಕರಣ ಸಮಾಜವಾದ ಕರ್ನಾಟಕದ ಸಂದರ್ಭದಲ್ಲಿ ಪರಿಶಿಷ್ಟ ಮಹಿಳೆಯರು ಮತ್ತು ಶಿಷ್ಟ ಮಹಿಳೆಯರ ನಡುವಿನ ಅಸಮಾನತೆಯ ನೆಲೆಗಳನ್ನು ನೋಡಬೇಕಾಗುತ್ತದೆ. ನಮ್ಮಲ್ಲಿ ಪರಿಶಿಷ್ಟ ಮಹಿಳೆಯರ ಬದುಕು ಎರಡು ಬಗೆಯ ತಾರತಮ್ಯದ ದುಃಸ್ಥಿತಿಗೆ ಒಳಗಾಗಿದೆ. ಜಾತಿಗೆ ಸಂಬಂಧಿಸಿದ ಬರ್ಬರತೆಗೆ ಅವರು ಒಳಗಾಗಿದ್ದಾರೆ. ಎರಡನೆಯದಾಗಿ ಮಹಿಳೆಯರು ಎಂಬ ಕಾರಣಕ್ಕೆ ಅವರು ತುಳಿತಕ್ಕೆ ಒಳಗಾಗಿದ್ದಾರೆ. ಶಿಷ್ಟ ಮಹಿಳೆಯರ ಸಂದರ್ಭದಲ್ಲಿ ಸಮಸ್ಯೆ ಕೇವಲ ಲಿಂಗತಾರತಮ್ಯದ್ದಾಗಿದೆ. ಅಷ್ಟರ ಮಟ್ಟಿಗೆ ಅವರು ಭಾಗ್ಯಶಾಲಿಗಳು. ಆದರೆ ಪರಿಶಿಷ್ಟ




ಮಹಿಳೆಯರ ಬದುಕು ಇಡೀ ಸಮಾಜದಲ್ಲಿ ತೀವ್ರವಾಗಿ ಜರ್ಜರಿತವಾಗಿದೆ.

ಒಟ್ಟು ಮಹಿಳೆಯರ ಕೃಷಿ ಅವಲಂಬನೆಯು ಶೇ. ೬೮.೧೬ ರಷ್ಟಾದರೆ ಪರಿಶಿಷ್ಟ (ಪ.ಜಾ+ಪ.ಪಂ.) ಮಹಿಳೆಯರ ಕೃಷಿ ಅವಲಂಬನೆಯು ಶೇ.೭೫.೬೨ ರಷ್ಟಿದೆ. ಒಟ್ಟು ಮಹಿಳೆಯ ಸಾಕ್ಷರತೆಯು ಒಟ್ಟು ಪುರುಷರ ಸಾಕ್ಷರತೆಯ ಶೇ. ೭೫ರಷ್ಟಿದ್ದರೆ ಅದರ ಪ್ರಮಾಣ ಪರಿಶಿಷ್ಟ ಮಹಿಳೆಯರಿಗೆ ಸಂಬಂಧಿಸಿದಂತೆ ಶೇ. ೬೪.೨೮ರಷ್ಟಿದೆ. ಒಟ್ಟು ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ ಶೇ. ೩೧.೯೮ರಷ್ಟಾದರೆ ಪರಿಶಿಷ್ಟ ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ ಶೇ. ೩೯.೩೪ರಷ್ಟಿದೆ. ಒಟ್ಟು ಕೃಷಿ ಅವಲಂಬಿತ ಮಹಿಳಾ ದುಡಿಮೆಗಾರರಲ್ಲಿ ಮಹಿಳಾ ದಿನಗೂಲಿಗಳ ಪ್ರಮಾಣ ಶೇ.೪೩.೪೫ ರಷ್ಟಾದರೆ ಪರಿಶಿಷ್ಟ ಮಹಿಳಾ ದುಡಿಮೆಗಾರರಲ್ಲಿ ದಿನಗೂಲಿಗಳ ಪ್ರಮಾಣ ಶೇ. ೭೭.೬೬ ರಷ್ಟಿದೆ.

ಒಟ್ಟಾರೆ ಹೇಳುವುದಾದರೆ ಕರ್ನಾಟಕದಲ್ಲಿ ಪುರುಷರಿಗಿಂತ ಮಹಿಳೆಯರು ದುಡಿಮೆಯ ಅಧಿಕ ಭಾರವನ್ನು ನಿಭಾಯಿಸುತ್ತಿದ್ದಾರೆ. ಬಡತನ - ದುಃಸ್ಥಿತಿಯ ಪ್ರಮಾಣವು ಪುರುಷರಿಗಿಂತ ಮಹಿಳೆಯರಿಗೆ ಸಂಬಂಧಿಸಿದಂತೆ ಅಧಿಕವಾಗಿದೆ. ಇದು ಮಹಿಳೆಯರ ದುಃಸ್ಥಿತಿಯ ಒಂದು ಮುಖ. ಇನ್ನೊಂದು ಮುಖವೆಂದರೆ ಮಹಿಳೆಯರಲ್ಲಿ ಅತಿ ಹೆಚ್ಚಿನ ದುಃಸ್ಥಿತಿಯನ್ನು ಪರಿಶಿಷ್ಟ ಮಹಿಳೆಯರು ಅನುಭವಿಸುತ್ತಿದ್ದಾರೆ. ಇಡೀ ಸಮಾಜದಲ್ಲಿ ತೀವ್ರ ಸಂಕಷ್ಟಕ್ಕೆ ಒಳಗಾಗಿರುವ ಪರಿಶಿಷ್ಟ ಮಹಿಳೆಯರ ಬದುಕನ್ನು ಉತ್ತಮಪಡಿಸುವ ಕಡೆಗೆ ಹೆಚ್ಚಿನ ಗಮನ ಕೊಡುವ ಅಗತ್ಯವಿದೆ.

ಇಲ್ಲಿ ಲಿಂಗಸಂಬಂಧಿ ಅಸಮಾನತೆ ಬಗ್ಗೆ ಇಷ್ಟು ಹೇಳಬಹುದು. ಇದಕ್ಕೆ ಎರಡು ಆಯಾಮಗಳಿವೆ. ಮೊದಲನೆಯದು, ಮಹಿಳೆಯರು ಎಂಬ ಕಾರಣಕ್ಕೆ ಅವರು ಅನೇಕ ಬಗೆಯ ಲಿಂಗ ತಾರತಮ್ಯ ಅನುಭವಿಸುತ್ತಿದ್ದಾರೆ. ಎರಡನೆಯದು, ಪರಿಶಿಷ್ಟರು ಎಂಬ ಕಾರಣಕ್ಕೆ ಪರಿಶಿಷ್ಟ ಮಹಿಳೆಯರು ಇನ್ನೂ ಅನೇಕ ಬಗೆಯ ಅನ್ಯಾಯವನ್ನು ಎದುರಿಸುತ್ತಿದ್ದಾರೆ. ಪರಿಶಿಷ್ಟ ಮಹಿಳೆಯರಿಗೆ ಸಂಬಂಧಿಸಿದಂತೆ ಎರಡು ಬಗೆಯ ತಾರತಮ್ಯ ಎದುರಿಸುತ್ತಿದ್ದಾರೆ. ಲಿಂಗಸಂಬಂಧಗಳ ಬಗ್ಗೆ ಮಾತನಾಡುವವರು, ಸ್ತ್ರೀವಾದಿಗಳು, ಇಂತಹ 'ತಾರತಮ್ಯದೊಳಗಿನ ತಾರತಮ್ಯ'ದ ಬಗ್ಗೆ ಯೋಚಿಸುವ ಅಗತ್ಯವಿದೆ. ಕರ್ನಾಟಕದಲ್ಲಿನ ೨೫೯.೫೨ ಲಕ್ಷ ಮಹಿಳೆಯರು ಎಷ್ಟು ದುರ್ಬಲರೆಂದರೆ ಅವರನ್ನು ಕಡೆಗಣಿಸಿ ರಾಜ್ಯ ಸಂಪುಟದಲ್ಲಿ ಮಹಿಳೆಯರಿಗೆ ಅವಕಾಶವನ್ನೇ ನೀಡದೆ ೨೦ ತಿಂಗಳುಗಳ ರಾಜ್ಯಭಾರ ಮಾಡುವುದು ಕರ್ನಾಟಕದಲ್ಲಿ ಸಾಧ್ಯವಾಗಿದೆ!

### ೩.೩. ಅಭಿವೃದ್ಧಿಯ ಪ್ರಾದೇಶಿಕ ನೆಲೆಗಳು

ಕರ್ನಾಟಕವು ಇಂದು ತೀವ್ರ ಸ್ವರೂಪದ ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆಯನ್ನು ಎದುರಿಸುತ್ತಿದೆ. ಇಡೀ ರಾಜ್ಯವನ್ನು, ಅಂದರೆ ೨೯ ಜಿಲ್ಲೆಗಳನ್ನು, ೧೭೫ ತಾಲ್ಲೂಕುಗಳನ್ನು, ಸರಿಸುಮಾರು ಮೂವತ್ತು ಸಾವಿರ ಹಳ್ಳಿಗಳನ್ನು, ಐದೂವರೆ ಕೋಟಿ ಜನರನ್ನು ಒಳಗೊಳ್ಳುವಂತೆ ಅಭಿವೃದ್ಧಿಯು ಇಲ್ಲಿ ಸಂಭವಿಸುತ್ತಿಲ್ಲ. ಪ್ರಾದೇಶಿಕವಾಗಿ ಕಂಡುಬರುತ್ತಿರುವ ಅಭಿವೃದ್ಧಿ ಅಸಮಾನತೆಗಳನ್ನು ಸರ್ಕಾರ - ರಾಜಕಾರಣಿಗಳು - ಬುದ್ಧಿಜೀವಿಗಳು ಗಂಭೀರವಾಗಿ ಪರಿಗಣಿಸುತ್ತಿಲ್ಲ. ಇದು ಕರ್ನಾಟಕದ ಮಧ್ಯಮಗತಿ ರಾಜಕಾರಣಕ್ಕೆ ಸರಿಯಾದ ರೀತಿಯಲ್ಲೆ ನಡೆಯುತ್ತಿದೆ. ಪ್ರಾದೇಶಿಕ ಅಸಮಾನತೆಯನ್ನು ಕುರಿತಂತೆ ಅಧ್ಯಯನ ನಡೆಸಿ, ಅದರ ಪರಿಹಾರಕ್ಕೆ ಮಾರ್ಗೋಪಾಯಗಳನ್ನು ಸೂಚಿಸಿದ ಡಾ|| ಡಿ. ಎಂ. ನಂಜುಂಡಪ್ಪ ಅವರ ನೇತೃತ್ವದ ಸಮಿತಿಯು ನೀಡಿದ ವರದಿಯನ್ನು ಇಂದು ಜಪ ಮಾಡಿದಂತೆ ಜಪಿಸಲಾಗುತ್ತಿದೆ. ಆದರೆ ಪ್ರಾದೇಶಿಕ ಅಸಮಾನತೆಗೆ ಸಂಬಂಧಿಸಿದಂತೆ ಸಮಿತಿಯ ವರದಿ ಮಂಡನೆಯಾದ ಮೇಲೆ ನಿರ್ದಿಷ್ಟವಾಗಿ ಏನೂ ನಡೆದಿಲ್ಲ. ವಾಸ್ತವವಾಗಿ ಡಾ|| ಡಿ. ಎಂ. ನಂಜುಂಡಪ್ಪ ಸಮಿತಿ ವರದಿಯ ಸೂಕ್ಷ್ಮ ನೆಲೆಗಳೇ ನಮ್ಮ ರಾಜಕೀಯ ಪ್ರಭೃತಿಗಳಿಗೆ ಅರ್ಥವಾಗಿಲ್ಲ. ಉದಾಹರಣೆಗೆ, ಸಮಿತಿಯು ರಾಜ್ಯದಲ್ಲಿನ ೧೭೫ ತಾಲ್ಲೂಕುಗಳಲ್ಲಿ ೧೪೩ ಶೈಕ್ಷಣಿಕವಾಗಿ ಮುಂದುವರಿದಿದ್ದಾವೆಂದೂ ಮತ್ತು ಉಳಿದ ೩೨ ತಾಲ್ಲೂಕುಗಳ ಪೈಕಿ ೧೧ ಶೈಕ್ಷಣಿಕವಾಗಿ ಹಿಂದುಳಿದಿದ್ದಾವೆಂದು ಮತ್ತು ೧೦ ಅತ್ಯಂತ ಹಿಂದುಳಿದ ಸ್ಥಿತಿಯಲ್ಲಿವೆಯೆಂದು ತಿಳಿಸಿದೆ (ಪು.೪೩೮). ಮುಂದುವರಿದು, ಸರ್ಕಾರವು ಪ್ರಥಮ ಹಂತದಲ್ಲಿ ಶೈಕ್ಷಣಿಕವಾಗಿ ದುಃಸ್ಥಿತಿಯ ಕೂಪಗಳಾಗಿರುವ ಹತ್ತು ತಾಲ್ಲೂಕುಗಳ ಶೈಕ್ಷಣಿಕ ಅಭಿವೃದ್ಧಿಗೆ ಕ್ರಮವಹಿಸ ಬೇಕೆಂದು ಸಲಹೆ ಮಾಡಿದೆ (ಪು. ೮೭೬). ಆದರೆ ಇದನ್ನು ಕುರಿತಂತೆ ಅಧಿಕಾರದಲ್ಲಿರುವ ಯಾರೊಬ್ಬರೂ ಮಾತನಾಡಿದಂತೆ ಕಾಣಲಿಲ್ಲ. ಕುತೂಹಲದ ಸಂಗತಿ ಎಂದರೆ ಸಮಿತಿ ಗುರುತಿಸಿದ ಹತ್ತು ಶೈಕ್ಷಣಿಕ ದುಃಸ್ಥಿತಿ ಕೂಪಗಳಾದ ತಾಲ್ಲೂಕುಗಳಲ್ಲಿ ಐದು ಗುಲಬರ್ಗಾ ಜಿಲ್ಲೆಗೆ ಸೇರಿದ್ದರೆ ಒಂದು ಕೊಪ್ಪಳ ಜಿಲ್ಲೆಗೆ ಮತ್ತು ಮೂರು ರಾಯಚೂರು ಜಿಲ್ಲೆಗೆ ಸೇರಿವೆ. ಒಟ್ಟಾರೆ ಇವೆಲ್ಲವೂ ರಾಜ್ಯದ ಅತ್ಯಂತ ಹಿಂದುಳಿದ ಪ್ರದೇಶವಾಗಿ ಇರುವ ಗುಲಬರ್ಗಾ ವಿಭಾಗಕ್ಕೆ ಸೇರಿವೆ. ಶಿಕ್ಷಣಕ್ಕೆ ಸಂಬಂಧಿಸಿದಂತೆ ಪ್ರಾದೇಶಿಕ ಅಸಮಾನತೆ ಎಷ್ಟು ತೀವ್ರವಾಗಿದೆ ಎಂಬುದನ್ನು ಯಾರೂ ಊಹಿಸಿದಂತೆ ಕಾಣುತ್ತಿಲ್ಲ.

ಕರ್ನಾಟಕ ಪ್ರಾಥಮಿಕ ಶಿಕ್ಷಣದ ಕನಿಷ್ಠ

ಜ್ಞಾನವಿರುವವರಿಗೂ ತಿಳಿದಿರುವ ಸಂಗತಿಯೆಂದರೆ ರಾಜ್ಯದಲ್ಲಿ ಶಾಲೆಯನ್ನು ಮಧ್ಯದಲ್ಲಿ ಬಿಡುವ ಮಕ್ಕಳಲ್ಲಿ ಅತಿ ಹೆಚ್ಚು ಮಕ್ಕಳು ಏಳನೆಯ ತರಗತಿಯಿಂದ ಎಂಟನೆಯ ತರಗತಿಗೆ ಪರಿವರ್ತನೆಯಾಗುವ ಹಂತದಲ್ಲಿ ಕಂಡುಬರುತ್ತಾರೆ. ಸರ್ವಶಿಕ್ಷಣ ಅಭಿಯಾನದ ಪ್ರಕಟಣೆಗಳೇ ತಿಳಿಸುವಂತೆ ೨೦೦೫-೦೬ರಲ್ಲಿ ಏಳನೆಯ ತರಗತಿಯಲ್ಲಿ ದಾಖಲಾಗಿದ್ದ ಮಕ್ಕಳ ಸಂಖ್ಯೆ ೯.೯೬ ಲಕ್ಷ. ಈ ಮಕ್ಕಳಲ್ಲಿ ೨೦೦೬-೦೭ರಲ್ಲಿ ಎಂಟನೆಯ ತರಗತಿಗೆ ಬಡ್ತಿ ಪಡೆದು ಪ್ರವೇಶ ಪಡೆದ ಮಕ್ಕಳ ಸಂಖ್ಯೆ ಕೇವಲ ೮.೯೫ ಲಕ್ಷ. ಇಲ್ಲಿ ಉಂಟಾದ ಕಡಿತ ೧.೦೧ ಲಕ್ಷ. ಇಷ್ಟು ಮಕ್ಕಳು ಶಾಲಾ ಪ್ರಕ್ರಿಯೆಯಿಂದ ಹೊರಗೆ ಹೋಗಿದ್ದಾರೆ. ಕುತೂಹಲದ ಮತ್ತು ಆತಂಕಕಾರಿಯಾದ ಸಂಗತಿಯೆಂದರೆ ಹೀಗೆ ಶಾಲಾ ವಾಹಿನಿಯಿಂದ ಹೊರಗೆ ಬಂದ ೧.೦೧ಲಕ್ಷ ಮಕ್ಕಳಲ್ಲಿ ದಕ್ಷಿಣ ಕರ್ನಾಟಕದ ಪಾಲು ಶೇ.೧೪.೪೧ರಷ್ಟಾದರೆ ಉತ್ತರ ಕರ್ನಾಟಕದ ಪಾಲು ಶೇ. ೮೫.೫೯. ಉತ್ತರ ಕರ್ನಾಟಕದಲ್ಲಿ ಬೆಳಗಾವಿ ವಿಭಾಗದ ಪಾಲು ಶೇ.೪೮.೦೮ರಷ್ಟಾದರೆ ಗುಲಬರ್ಗಾ ವಿಭಾಗದ ಪಾಲು ಶೇ. ೩೭.೫೧. ಪರಿಸ್ಥಿತಿ ಹೀಗಿರುವಾಗ ಶಿಕ್ಷಣವು ಎಲ್ಲರನ್ನೂ ಒಳಗೊಳ್ಳಬೇಕೆಂದರೆ ಹೇಗೆ ಸಾಧ್ಯ ? ಇದಕ್ಕೆ ಸಂಬಂಧಿಸಿದ ಪ್ರಾದೇಶಿಕ ಅಸಮಾನತೆ ಬಗ್ಗೆ ಸಂಬಂಧಿಸಿದ ಅಧಿಕಾರಿಗಳಿಗೆ, ರಾಜಕೀಯ ಪಕ್ಷಗಳಿಗೆ, ರಾಜಕೀಯ ಧುರೀಣರಿಗೆ ಕನಿಷ್ಠ ಕಾಳಜಿಯಿಲ್ಲ.

**ಜಮೀನುದಾರಿ ಪಾಳೆಗಾರಿಕೆ**

ಕರ್ನಾಟಕಕ್ಕೆ ಸಂಬಂಧಿಸಿದಂತೆ ಜೇಮ್ಸ್ ಮೇನರ್ (೨೦೦೭) ಹೇಳಿದ ಸಾಮಾಜಿಕ ಬದಲಾವಣೆಗಳು ರಾಜ್ಯದ ಗುಲಬರ್ಗಾ ವಿಭಾಗದಲ್ಲಿ ಮತ್ತು ಬೆಳಗಾವಿ ಹಾಗೂ ವಿಜಾಪುರ ಜಿಲ್ಲೆಯಲ್ಲಿ ನಡೆದಿಲ್ಲ. ದಕ್ಷಿಣ ಕರ್ನಾಟಕದಲ್ಲಿ ಏಕೀಕರಣದ ನಂತರ ಬಂಡವಾಳಶಾಹಿಯು ಸಾವಕಾಶವಾಗಿ ಬೇರುಬಿಡುತ್ತಿದ್ದರೆ ರಾಜ್ಯದ ಹಿಂದುಳಿದ ಪ್ರದೇಶಗಳಾದ ಗುಲಬರ್ಗಾ, ರಾಯಚೂರು, ಕೊಪ್ಪಳ ಮತ್ತು ವಿಜಾಪುರ ಜಿಲ್ಲೆಗಳಲ್ಲಿ ಜಮೀನುದಾರಿ ಪಾಳೆಗಾರಿಕೆ ಇಂದಿಗೂ ಮುಂದುವರಿದಿದೆ. ಅದರ ಸೂಚಿಗಳನ್ನು ಇಲ್ಲಿ ನೀಡಲಾಗಿದೆ.

* ರಾಜ್ಯಮಟ್ಟದಲ್ಲಿ ಒಟ್ಟು ಕೃಷಿ ಅವಲಂಬಿತರಲ್ಲಿ ಭೂರಹಿತ ದಿನಗೂಲಿ ದುಡಿಮೆಗಾರರ ಪ್ರಮಾಣವು (ಶೇ.೨೬.೪೦)ಸಾಗುವಳಿದಾರರ ಪ್ರಮಾಣಕ್ಕಿಂತ (ಶೇ.೨೯.೪೮) ಕಡಿಮೆಯಿದ್ದರೆ, ಉತ್ತರ ಕರ್ನಾಟಕ ಪ್ರದೇಶದ ಬೆಳಗಾವಿ ಹಾಗೂ ಗುಲಬರ್ಗಾ ವಿಭಾಗಗಳಲ್ಲಿ ಭೂರಹಿತ ದಿನಗೂಲಿಗಳ ಪ್ರಮಾಣ ಸಾಗುವಳಿದಾರರಿಗಿಂತ ಅಧಿಕವಾಗಿದೆ.
* ರಾಜ್ಯ ಮಟ್ಟದಲ್ಲಿ ಕೃಷಿ ಅವಲಂಬನೆ ೨೦೦೧ರಲ್ಲಿ ಶೇ.೫೫.೮೫ ರಷ್ಟಾದರೆ ಬೆಳಗಾವಿ ವಿಭಾಗದಲ್ಲಿ ಶೇ. ೬೪.೫೪ ಮತ್ತು ಗುಲಬರ್ಗಾ ವಿಭಾಗದಲ್ಲಿ ಶೇ.೬೮.೩೭.
* ಒಟ್ಟು ಕೃಷಿ ಅವಲಂಬಿತರಲ್ಲಿ ದಿನಗೂಲಿಗಳ ಪ್ರಮಾಣ ರಾಜ್ಯಮಟ್ಟದಲ್ಲಿ ಶೇ.೪೭ ರಷ್ಟಾದರೆ ಗುಲಬರ್ಗಾ ವಿಭಾಗದಲ್ಲಿ ಅವರ ಪ್ರಮಾಣ ಶೇ.೫೯.೩೭.

ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆಯೆಂಬುದು ಕೇವಲ ಬಂಡವಾಳದ, ನೀರಾವರಿ ಯೋಜನೆಯ ಪ್ರಶ್ನೆಯಲ್ಲ. ಅದು ರಾಚನಿಕವಾದ, ಸಾಂಸ್ಥಿಕವಾದ, ಸಾಮಾಜಿಕವಾದ ಸಮಸ್ಯೆ. ಅದರ ಬಗ್ಗೆ ಗಂಭೀರವಾಗಿ ಯೋಚಿಸಬೇಕಾಗಿದೆ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ೯೫ ಲಕ್ಷ (೨೦೦೧)ದಷ್ಟಿರುವ ಗುಲಬರ್ಗಾ ವಿಭಾಗದ ಜನರ ಸಾಕ್ಷರತೆ ಮಟ್ಟ, ಪ್ರಾಥಮಿಕ ಶಿಕ್ಷಣ, ಆಹಾರ ಭದ್ರತೆ, ಮತ್ತು ನಿರುದ್ಯೋಗ ಸಮಸ್ಯೆಗಳನ್ನು ನಿವಾರಿಸದೆ ಜನರನ್ನು ಒಳಗೊಳ್ಳುವ ಅಭಿವೃದ್ಧಿ ಯೆಂಬುದು ಅರ್ಥರಹಿತ ಪ್ರಯಾಸವಾಗಿಬಿಡುತ್ತದೆ.

ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ (೨೦೦೧) ದಕ್ಷಿಣ ಕರ್ನಾಟಕದ ಪಾಲು ಶೇ. ೫೭ರಷ್ಟಾದರೆ ಉತ್ತರ ಕರ್ನಾಟಕದ ಪಾಲು ಶೇ. ೪೩. ಆದರೆ ರಾಜ್ಯದ ವರಮಾನದಲ್ಲಿ (೧೯೯೯-೨೦೦೦) ಅವುಗಳ ಪಾಲು ಕ್ರಮವಾಗಿ ಶೇ. ೬೫.೩೧ ಮತ್ತು ಶೇ. ೩೪.೬೯. 'ಸಮಪಾಲು - ಸಮಬಾಳು' ಎಂಬುದು ಇಲ್ಲಿ ಸಾಧ್ಯವಾಗಿಲ್ಲ. ಅದು ಸಾಧ್ಯವಾಗಬೇಕಾದರೆ ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆಯ ಪ್ರಶ್ನೆಯನ್ನು ಗಂಭೀರವಾಗಿ ಪರಿಗಣಿಸಿ ಅದರ ನಿವಾರಣೆಗೆ ರಾಚನಿಕವಾದ ಮತ್ತು ಸಾಂಸ್ಥಿಕವಾದ ಕ್ರಮಗಳ ಬಗ್ಗೆ ನಾವು ಯೋಚಿಸಬೇಕಾಗಿದೆ.

**೪. ಅಭಿವೃದ್ಧಿಯು ಜನರ ಬದುಕಾಗುವ ಪರಿ**

ಅಭಿವೃದ್ಧಿಯು ಜನರನ್ನು ಒಳಗೊಳ್ಳುವುದೆಂದರೆ ಅಭಿವೃದ್ಧಿಯು ಜನರ ಬದುಕಾಗಿ ಪರಿವರ್ತನೆಯಾಗುವುದೆಂದರ್ಥ. ಅಭಿವೃದ್ಧಿಗೆ ವರಮಾನದ ಏರಿಕೆ ಅಗತ್ಯ ಮತ್ತು ಮುಖ್ಯ. ಆದರೆ ವರಮಾನದ ಮೊತ್ತವೇ ಜನರ ಬದುಕಲ್ಲ. ಜನರನ್ನು ಯಾಚಕರೆಂದು ಪರಿಭಾವಿಸಿಕೊಂಡು ಗ್ರಾಮ ದರ್ಬಾರು ಮಾಡುವುದರಿಂದ ಅಭಿವೃದ್ಧಿ ಸಾಧ್ಯವಿಲ್ಲ. 'ನಾನೊಬ್ಬನೇ ಬೆಂಗಳೂರಿನಿಂದ ಎಲ್ಲವನ್ನೂ ಪರಿಹರಿಸಿಬಿಡುತ್ತೇನೆ' ಎಂಬುದು ಕೇವಲ ಪಾಳೆಗಾರಿಕೆಯಾಗಬಹುದೇ ವಿನಾ ಮುತ್ಸದ್ದಿತನವಾಗುವುದಿಲ್ಲ. ಸ್ಥಳೀಯ ಮಟ್ಟದಲ್ಲಿ ಜನರಿಗೆ ಅಧಿಕಾರ ನೀಡಬೇಕು. ಗ್ರಾಮ ಪಂಚಾಯಿತಿ ವ್ಯವಸ್ಥೆಯನ್ನು ಬಲಪಡಿಸಬೇಕು. ಅಭಿವೃದ್ಧಿ ಅನ್ನೋದು ಕೇವಲ ಶಾಸಕರ ಸ್ವತ್ತಾಗಬಾರದು. ಜನರ ಕರ್ತೃತ್ವ ಶಕ್ತಿಯನ್ನು ದಷ್ಟಪುಷ್ಟಗೊಳಿಸಬೇಕು ಮತ್ತು ಅದಕ್ಕೆ ಅವಕಾಶ ನೀಡಬೇಕು. ದಲಿತರು ಮತ್ತು ಮಹಿಳೆಯರು ಗೌರವದಿಂದ ಬದುಕುವಂತಾಗಬೇಕು.

ಜನರನ್ನು ಕಾಡುತ್ತಿರುವ ಅಸಮಾನತೆಗಳನ್ನು ನಿವಾರಿಸದೆ ಅಭಿವೃದ್ಧಿಯು ಜನರನ್ನು ಒಳಗೊಳ್ಳುವುದು ಸಾಧ್ಯವಾಗುವುದಿಲ್ಲ. ಉಳ್ಳವರ ಹಿತಾಸಕ್ತಿಗೆ ಪ್ರತಿಯಾಗಿ ಉಳಿದವರ ಹಿತಾಸಕ್ತಿಗಳು ಮುಂಚೂಣಿಗೆ ಬರಬೇಕು. ಮಧ್ಯಮಗತಿ ಅಭಿವೃದ್ಧಿಗೆ ಕರ್ನಾಟಕವು ಕೊನೆ ಹೇಳಬೇಕು. ಉಳ್ಳವರ ಆಳ್ವಿಕೆ ಕೊನೆಯಾಗಬೇಕು. ಉಳಿದವರ ಪ್ರಭುತ್ವ ಅಸ್ತಿತ್ವಕ್ಕೆ ಬರಬೇಕು. ಮಧ್ಯಮ ಸ್ಥಿತಿಯು ಉಳ್ಳವರಿಗೆ ಮಾತ್ರ ಅನುಕೂಲವಾಗಿರಲು ಸಾಧ್ಯ. ಅದನ್ನು ಮುರಿಯಬೇಕು. ಇದಕ್ಕೆ ಅಗತ್ಯವಾದ ರಾಜಕಾರಣವನ್ನು, ಜನಸಂಘಟನೆಯನ್ನು ಕಟ್ಟಬೇಕಾಗಿದೆ.

'ಉಳ್ಳವರು ಮತ್ತು ಉಳಿದವರು' ಎಂಬ ಸಂಗತಿಯನ್ನು ಸೈದ್ಧಾಂತಿಕವಾಗಿ ಪರಿಗಣಿಸುವ ಅಗತ್ಯವಿದೆ. ಅಭಿವೃದ್ಧಿಯು ಜನರನ್ನು ಒಳಗೊಳ್ಳುವುದೆಂದರೆ ಅದು ಉಳಿದವರನ್ನು ತಬ್ಬಿಕೊಳ್ಳುವುದೆಂದೇ ಅರ್ಥ. ಅಭಿವೃದ್ಧಿಯು ಉಳಿದವರ ಅಭಿಮುಖವಾಗಬೇಕು. ಆಗ ಪರಿಶಿಷ್ಟರ ಬದುಕು ಅಭಿವೃದ್ಧಿಯ ಕೇಂದ್ರಕ್ಕೆ ಬರುತ್ತದೆ. ಆಗ ಮಾತ್ರ ಪರಿಶಿಷ್ಟ ಮಹಿಳೆಯರ ಬದುಕನ್ನು ಪ್ರಜ್ಞಾಪೂರ್ವಕವಾಗಿ ಉತ್ತಮ ಪಡಿಸಬೇಕೆಂಬುದು ನೀತಿ-ನಿರೂಪಣೆಯ ಭಾಗವಾಗುತ್ತದೆ. ಆಗ ಮಾತ್ರ ಅಭಿವೃದ್ಧಿಯು ಜನರನ್ನು ಒಳಗೊಳ್ಳುವುದಕ್ಕೆ ಸಾಧ್ಯವಾಗುತ್ತದೆ.

ಡಾ|| ಟಿ.ಆರ್.ಚಂದ್ರಶೇಖರ
ಪ್ರಾಧ್ಯಾಪಕ, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

## ನಮ್ಮ ಇತ್ತೀಚಿನ ಪ್ರಕಟಣೆಗಳು

1. ಮೂರು ತಲೆಮಾರು — ತ. ಸು. ಶಾಮರಾಯ 120-00
2. ಕನ್ನಡ ನಾಟಕ — ತ. ಸು. ಶಾಮರಾಯ 200-00
3. ಕುಮಾರವ್ಯಾಸ ಭಾರತ ನಿಘಂಟು — ತ. ಸು. ಶಾಮರಾಯ 200-00
4. ಕನ್ನಡ ಸಾಹಿತ್ಯ ಚರಿತ್ರೆ — ತ. ಸು. ಶಾಮರಾಯ 120-00
5. ಶಬ್ದಮಣಿ ದರ್ಪಣಂ — ತ. ಸು. ಶಾಮರಾಯ 150-00
6. ಅಣ್ಣನ ಸ್ಮರಣೆ — ಟಿ. ಎಸ್. ಛಾಯಾಪತಿ 45-00
7. ಯಕ್ಷ ಪ್ರಶ್ನೆ — ಮತ್ತೂರು ಕೃಷ್ಣಮೂರ್ತಿ 45-00
8. ಅಂಬೇಡ್ಕರ್ ನುಡಿಮುತ್ತುಗಳು — ಡಾ|| ಎಸ್. ಶಿವರಾಜಪ್ಪ 40-00
9. ಗಾಂಧೀಜಿ ನುಡಿಮುತ್ತುಗಳು — ಡಾ|| ಎಸ್. ಶಿವರಾಜಪ್ಪ 60-00
10. ಬಸವಣ್ಣನವರ ವೈಚಾರಿಕ ವಚನಗಳು — ಡಾ|| ಎಸ್. ಶಿವರಾಜಪ್ಪ 45-00

ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ
ನಂ. 9, 'ರಮ್ಯ' ಗೋಕುಲ 3ನೇ ಹಂತ, ಮೈಸೂರು – 570 002
ದೂರವಾಣಿ : 2513821

# ನಮ್ಮ ಪ್ರಕಟಣೆಗಳು

www.mastermindbooks.com



840 ಪುಟಗಳು ರೂ. 135/-



256 ಪುಟಗಳು ರೂ. 150/-



220 ಪುಟಗಳು ರೂ. 150/-



220 ಪುಟಗಳು ರೂ. 150/-



372 ಪುಟಗಳು ರೂ. 195/-



176 ಪುಟಗಳು ರೂ. 95/-



150 ಪುಟಗಳು ರೂ. 125/-



352 ಪುಟಗಳು ರೂ. 175/-



238 ಪುಟಗಳು ರೂ. 150/-



244 ಪುಟಗಳು ರೂ. 125/-



232 ಪುಟಗಳು ರೂ. 80/-



204 ಪುಟಗಳು ರೂ. 95/-



320 ಪುಟಗಳು ರೂ. 175/-


211 ಪುಟಗಳು ರೂ. 125/-



140 ಪುಟಗಳು ರೂ. 50/-



Pages 80 Rs.60/-

ಎಲ್ಲ ಪುಸ್ತಕದಂಗಡಿಗಳಲ್ಲಿ, ನವಕರ್ನಾಟಕ ಪ್ರಕಾಶನದ ಮಳಿಗೆ ಮತ್ತು ಪ್ರದರ್ಶನಗಳಲ್ಲಿ ನಮ್ಮ ಪ್ರಕಟಣೆಗಳು ಲಭ್ಯ

ವಾಸನ್ ಪಬ್ಲಿಕೇಷನ್ಸ್
#25, ವಾಸನ್ ಟವರ್ಸ್, ಡಾ। ಟಿ.ಸಿ.ಎಂ. ರಾಯನ್ ರಸ್ತೆ (ಗುಡ್ಸ್‌ಶೆಡ್ ರಸ್ತೆ) ಬೆಂಗಳೂರು-53 ದೂ: 080-2670 5679



ವಿಶ್ವದ ರಾಷ್ಟ್ರೀಯ ವಿಮೋಚನಾ ಹೋರಾಟಗಳಲ್ಲಿ ವಿಯೆಟ್ನಾಂ ಜನತೆ ನಡೆಸಿದ ಹೋರಾಟಕ್ಕೆ ನಿಸ್ಸಂಶಯವಾಗಿಯೂ ಅಗ್ರಸ್ಥಾನ. ಸಾಮ್ರಾಜ್ಯಶಾಹಿ ಆಡಳಿತದ ವಿರುದ್ಧ ಸುಮಾರು ನಾಲ್ಕು ನೂರು ವರ್ಷಗಳ ಕಾಲ ಫ್ರಾನ್ಸ್, ಜಪಾನ್, ಅಮೆರಿಕಾಗಳ ವಿರುದ್ಧ ಹೋರಾಡುತ್ತಲೇ ಇದ್ದ ವಿಯಟ್ನಾಂನದು ಸಮರಶೀಲ ಇತಿಹಾಸ. 'ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ' ಎನ್ನುವಂತೆ ಅಮೆರಿಕಾ ಮತ್ತಿತರ ದೈತ್ಯರಾಷ್ಟ್ರಗಳು ತಮ್ಮ ಅತ್ಯಾಧುನಿಕ ಶಸ್ತ್ರ ಸಂಪತ್ತಿನಿಂದ ಸಜ್ಜಿತರಾಗಿ ಪುಟ್ಟ ವಿಯೆಟ್ನಾಂ ದೇಶದ ಮೇಲೆ ಎರಗಿಬಿದ್ದಾಗ, ಅಪಾರ ಆತ್ಮವಿಶ್ವಾಸ, ದೇಶಾಭಿಮಾನಗಳಲ್ಲಿ ಎರಕ ಹೊಯ್ದ ವಿಯೆಟ್ನಾಮೀ ಜನತೆ ತಮ್ಮಲ್ಲಿದ್ದ ಸರಳ ಶಸ್ತ್ರಗಳಿಂದಲೇ ಕೆಚ್ಚೆದೆಯಿಂದ ಕಾದಾಡಿ ಶತ್ರುಗಳನ್ನು ಹಿಮ್ಮೆಟ್ಟಿಸಿದರು. ಹುಲ್ಲಿನ ಟೊಪ್ಪಿಯ ವಿಯಟ್ನಾಮೀಯರ ಈ ಶೌರ್ಯ ಕಂಡು ಜಗತ್ತೇ ಬೆರಗಾಯಿತು. ತನ್ನ ಅಸ್ತಿತ್ವಕ್ಕಾಗಿ, ಸ್ವಾತಂತ್ರ್ಯಕ್ಕಾಗಿ ಕೆಚ್ಚೆದೆಯ ಹೋರಾಟ ನಡೆಸಿದ ಈ ವೀರ ವಿಯೆಟ್ನಾಮಿಯರ ಬಗ್ಗೆ ವಿಶ್ವದ ಎಲ್ಲ ಶಾಂತಿಪ್ರಿಯ ಜನತೆಯ ಮೆಚ್ಚುಗೆ ಇದೆ. ಸ್ವಾತಂತ್ರ್ಯ, ಸಮಾನತೆ, ಶಾಂತಿಯ ಸೂತ್ರವನ್ನು ಪ್ರೀತಿಸುವ ಎಲ್ಲರಿಗೂ ವಿಯಟ್ನಾಂ ಭಾವನಾತ್ಮಕವಾಗಿ ಮುಖ್ಯವಾದದ್ದು. ನಾಲ್ಕುನೂರು ವರ್ಷಗಳ ಸಮರಶೀಲ ಇತಿಹಾಸ ಇರುವ ವಿಯೆಟ್ನಾಮಿನ ಚರಿತ್ರೆಯಲ್ಲಿ 'ಹೋ ಚಿ ಮಿನ್' ಯುಗ ಅತ್ಯಂತ ಉಜ್ವಲವಾದುದು. ಹೋ ಚಿ ಮಿನ್‌ನನ್ನು ಸೃಷ್ಟಿಸಿದ ನಾಡು ಸ್ವಾಭಿಮಾನಿ ಚೇತನಗಳಿಗೆ ಸ್ಫೂರ್ತಿಯ ತಾಣ.

ಸಾಹಿತ್ಯದಲ್ಲಿ ಪದವಿ ಪಡೆದ ತಾತ, ವೈದ್ಯ ವೃತ್ತಿಯ ತಂದೆ, ಕನ್‌ಫ್ಯೂಶಿಯನ್ ಪಂಥದ ರಾಷ್ಟ್ರೀಯವಾದಿ ಚಿಕ್ಕಪ್ಪ- ಇವರೆಲ್ಲರ ಸ್ಫೂರ್ತಿಯ ಮಾರ್ಗದರ್ಶನದಲ್ಲಿ ಹೋರಾಟದ ಬೀಜಗಳನ್ನು ಆಯ್ದುಕೊಂಡವರು ಹೋ ಚಿ ಮಿನ್. ಅವಿವಾಹಿತೆಯಾಗಿಯೇ ಉಳಿದ ಅಕ್ಕ ಬಾಹ್‌ಲಿಯೆನ್ ಗೆರಿಲ್ಲಾ ಪಡೆಗಳಿಗೆ ಗುಪ್ತವಾಗಿ ಮದ್ದು ಗುಂಡು ಸಾಗಿಸುತ್ತಿದ್ದಕ್ಕಾಗಿ ಬಂಧನಕ್ಕೊಳಗಾದ ಹೋರಾಟಗಾರ್ತಿ. ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೇ ಫ್ರೆಂಚರ ಸುಂಕನೀತಿಯ ರದ್ದತಿಗಾಗಿ ಹೋರಾಡಿ ಹೋ ಚಿ ಮಿನ್ 'ರೆನೊವೇಶನ್ ಚಳುವಳಿ'ಯಲ್ಲಿ ಭಾಗವಹಿಸಿದ್ದರಿಂದ ಕಾಲೇಜಿನಿಂದ ಹೊರದಬ್ಬಲ್ಪಟ್ಟರು. ಇದು ಅವರ ಹೋರಾಟದ ಆರಂಭ. ನಂತರ ಇಡೀ ವಿಶ್ವವೇ ಅವರಿಗೆ ಪಾಠಶಾಲೆಯಾಯಿತು. ಓದು-ಬರಹ-ಕ್ರಿಯೆ, ಮೂರೂ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ತಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಬೇಕಾದ ಮಂತ್ರದಂಡವನ್ನು ಅರಸಿಕೊಂಡು ವಿಶ್ವದಾದ್ಯಂತ ಸಂಚರಿಸಿದರು. ಯೂರೋಪ್, ಆಫ್ರಿಕಾ, ಅಮೆರಿಕಾ, ರಷ್ಯಾ, ಹಾಂಕಾಂಗ್ - ಎಲ್ಲೆಡೆಯಲ್ಲೂ ಸಂಚರಿಸಿ, ಅಲ್ಲೆಲ್ಲಾ ಹೋಟೆಲ್‌ನಲ್ಲಿ ಅಡಿಗೆಯ ಕೆಲಸ, ಹಿಮ ಗುಡಿಸುವ ಕೆಲಸ, ಫೋಟೋಗ್ರಾಫರ್ ಕೆಲಸ, ಶ್ರೀಮಂತರ ಮನೆಯ ಚಾಕರಿ -- ಹೀಗೆ ಹತ್ತು ಹಲವು ಕಸುಬುಗಳನ್ನು ಮಾಡಿಕೊಳ್ಳುತ್ತಾ ಅಲ್ಲಲ್ಲಿ ಕಾರ್ಮಿಕರನ್ನು ಸಂಘಟಿಸುತ್ತಾ ಕಾರ್ಮಿಕರ ನಾಯಕರಾದರು. ಅಲ್ಲಿನ ರಾಜಕೀಯ ಹೋರಾಟಗಾರರೊಂದಿಗೆ ಸೇರಿಕೊಂಡು

# ಅಂಕಲ್ ಹೋ, ನಿನಗೆ ನಮಸ್ಕಾರ

ವಿಶ್ವ ರಾಜಕೀಯದ ಬಗ್ಗೆ ಅಪಾರ ಜ್ಞಾನ ಸಂಪಾದಿಸಿದರು. ತಮ್ಮ ಅಧ್ಯಯನದ ಹಸಿವನ್ನು ಪರಿಹರಿಸಿಕೊಳ್ಳಲು ದೇಶದಿಂದ ಹಡಗಿನ ಚಾಕರನಾಗಿ ಹೊರಟ ಹೋ ೧೪ ವರ್ಷಗಳ ನಿರಂತರ ಅಲೆದಾಟದಲ್ಲಿ ಮಾರ್ಕ್ಸ್‌ವಾದ ಮತ್ತು ಲೆನಿನ್‌ವಾದಗಳ ಅಧ್ಯಯನ ಹಾಗೂ ಹೋರಾಟಗಳಲ್ಲಿ ಭಾಗಿಯಾಗಿ ಒಬ್ಬ ನಿಷ್ಠಾವಂತ ಕಮ್ಯುನಿಸ್ಟನಾಗಿ ಪರಿವರ್ತನೆ ಹೊಂದಿದರು. ಈ ಉಗ್ರ ಹೋರಾಟಗಾರನ ಚಟುವಟಿಕೆ ಕೇವಲ ವಿಯಟ್ನಾಂನ ಸ್ವಾತಂತ್ರ್ಯ ಹೋರಾಟಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಹೋ ಜಗತ್ತಿನ ಹಲವಾರು ಹೋರಾಟಗಳ ಪ್ರೇರಕರೂ, ಚಾಲಕರೂ ಆಗಿದ್ದರಿಂದ ವಿಶ್ವ ಸಾಮ್ರಾಜ್ಯಶಾಹಿಗಳೆಲ್ಲರ ಕೆಂಗಣ್ಣಿಗೆ ಗುರಿಯಾಗಿದ್ದರು.



೧೯೪೫ರ ಆಗಸ್ಟ್ ೨೫ರ ವೇಳೆಗೆ ಹೋ ಚಿ ಮಿನ್ ಸ್ಥಾಪಿಸಿದ ವಿಯೆಟ್‌ಮಿನ್ಹ್ ಜನತಾ ಪಡೆಗಳು ದೇಶದ ಎಲ್ಲ ಮಹತ್ವದ ನಗರಗಳನ್ನು ತನ್ನ ಕೈವಶ ಮಾಡಿಕೊಂಡಾಗ ಹೋ ವಿಮೋಚನಾ ಪಡೆಯ ಒಂದು ಪುಟ್ಟ ತುಕಡಿಯ ಜೊತೆ ನಡೆಯುತ್ತಲೇ ಹನಾಯಿ ನಗರವನ್ನು ಪ್ರವೇಶಿಸಿದರು. ಹನಾಯಿ ನಗರಕ್ಕೆ ಅವರು ಮೊಟ್ಟಮೊದಲು ಬಂದದ್ದು ಆಗಲೇ. ನ್ಯೂಯಾರ್ಕ್, ಲಂಡನ್, ಪ್ಯಾರಿಸ್, ಮಾಸ್ಕೋದಂತಹ ಜಗತ್ತಿನ ಪ್ರಮುಖ ಪಟ್ಟಣಗಳನ್ನು ನೋಡಿದ್ದ ಹೋ ತನ್ನ ರಾಜಧಾನಿಗೆ ಬರಲು ೫೫ ವರ್ಷ ಬೇಕಾಗಿತ್ತು. ಜನಸಮೂಹಕ್ಕೆ ಕ್ರಾಂತಿಯ ಕಿಡಿಯನ್ನು ಹಚ್ಚಿಸಿದ ಈ ಮಾಂತ್ರಿಕ ಇಲ್ಲಿಂದ ಜೀವನದ ತನ್ನ ಮುಖ್ಯ ಕಾರ್ಯಕ್ಷೇತ್ರದ ಸ್ಥಳವನ್ನಾಗಿ ಆರಿಸಿಕೊಂಡಿದ್ದು ಹನಾಯಿ ಪಟ್ಟಣ. ಹಾಗಾಗಿ ಸಮರಶೀಲ ಇತಿಹಾಸ ಹೊಂದಿದ ವಿಯಟ್ನಾಮಿನ ಹೋರಾಟದ ಹೆಜ್ಜೆಗಳನ್ನು ನೋಡಲು, ಈ ನಾಡಿನ ಜನರ ಸ್ವಾತಂತ್ರ್ಯ ಹೋರಾಟದ ನೇತಾರನಾದ ಹೋ ಚಿ ಮಿನ್‌ನ ಬದುಕಿನ, ಕಾರ್ಯಕ್ಷೇತ್ರದ ಹೆಜ್ಜೆಗಳ ಸ್ಮರಣೆಯ ಸ್ಥಳವನ್ನು ಸಂದರ್ಶಿಸಲು ವಿಯಟ್ನಾಂನ ಹನಾಯ್‌ಗೆ ನಮ್ಮ ಭೇಟಿ. ಈ ಧೀರೋದಾತ್ತ ನಾಯಕನಿಗೆ ಇಲ್ಲಿದೆ ಅಕ್ಷರ ನಮನ.

– ಡಾ॥ ಎನ್. ಗಾಯತ್ರಿ

# ಗನ್ನಿಗೆ ಮಣಿಯದ ಹುಲ್ಲಿನ ಟೋಪಿ



**ಕ**ಳೆದ ಆಗಸ್ಟ್ ತಿಂಗಳ ಒಂದು ದಿನ ಗೆಳತಿ ಡಾಕ್ಟರ್ ನಂದಿನಿ ಹೀಗೆ ಉಭಯ ಕುಶಲೋಪರಿಗಾಗಿ ಫೋನ್ ಮಾಡಿದ್ದಳು. ಮಾತಿನ ಮಧ್ಯೆ ಸೆಪ್ಟೆಂಬರ್ ತಿಂಗಳಲ್ಲಿ ತಾನು ವಿಯೆಟ್ನಾಂ, ಕಾಂಬೋಡಿಯಾಗೆ ಹೋಗುತ್ತಿರುವ ಸುದ್ದಿ ಕೊಟ್ಟಳು. ಅವಳ ಪ್ರಯಾಣದ ಬಗ್ಗೆ ಉತ್ಸಾಹ, ಆಸಕ್ತಿ ತೋರಿಸಿದ ನನಗೆ ನನ್ನನ್ನೂ ಅವಳೊಂದಿಗೆ ಪ್ರಯಾಣ ಮಾಡಲು ಆಹ್ವಾನಿಸಿದಳು. ತಕ್ಷಣವೇ ನಂದಿನಿ ಮತ್ತು ಅವಳ ವೈದ್ಯ ಸಂಗಾತಿಗಳ ಗುಂಪಿನೊಂದಿಗೆ ನಾನೂ ಪ್ರಯಾಣ ಬೆಳೆಸುವ ತೀರ್ಮಾನ ಕೈಗೊಂಡೆ. ಜೊತೆಗೆ ಜಿ. ಆರ್. ಕೂಡ ನಮ್ಮೊಡನೆ ಸೇರಿಕೊಂಡರು. ಹೀಗಾಗಿ ಸೆಪ್ಟೆಂಬರ್ ೨೭ರಿಂದ ೩೧ರವರೆಗೆ ವಿಯಟ್ನಾಂನಲ್ಲಿ ನಮ್ಮ ಪ್ರವಾಸ ಯೋಜಿಸಲ್ಪಟ್ಟಿತ್ತು.

ಸಿಯಾಮ್ ರಿಪ್ (ಕಾಂಬೋಡಿಯಾ) ವಿಮಾನ ನಿಲ್ದಾಣದಲ್ಲಿ ಹನಾಯ್‌ಗೆ ಹೋಗಲು ವಿಯೆಟ್ನಾಂ ಏರ್‌ಲೈನ್ಸ್ ಹತ್ತಿದಾಗ ಸಮಯ ಸಂಜೆ ... ಗಂಟೆ. ಅಲ್ಲಿಂದ ಸುಮಾರು ಎರಡು ಗಂಟೆಗಳ ಪ್ರಯಾಣ. ಪ್ರಯಾಣದ ಸಂದರ್ಭದಲ್ಲಿ ನನ್ನ ಮುಂದಿದ್ದ ಪತ್ರಿಕೆ, ಮ್ಯಾಗ್‌ಜೈನ್‌ಗಳತ್ತ ಕಣ್ಣು ಹಾಯಿಸಿದೆ. ಅದರಲ್ಲಿ ಇಂಗ್ಲಿಷ್ ದಿನಪತ್ರಿಕೆ 'ವಿಯೆಟ್ನಾಂ ನ್ಯೂಸ್'ನಲ್ಲಿ ಭಾರತೀಯರಿಗೆ ಸಂಬಂಧಿಸಿದ್ದೊಂದು ಸುದ್ದಿ, ಅದೇ ದಿನದ ಪತ್ರಿಕೆಯ

ವಿಯೆಟ್ನಾಮಿನ ಸ್ವಾತಂತ್ರ್ಯ ಹೋರಾಟಕ್ಕೆ ಭಾರತ ತನ್ನ ಬೆಂಬಲ ಸೂಚಿಸಿ ಆತ್ಮೀಯ ಸ್ನೇಹಿತನಂತೆ ಸಹಕಾರ ನೀಡಿತ್ತು. ವಿಶ್ವಸಂಸ್ಥೆಯ ಸಭೆಗಳಲ್ಲಿ ನಮ್ಮ ಪ್ರಧಾನಿ ಜವಹರಲಾಲ್ ನೆಹರುರವರು ವಿಯೆಟ್ನಾಂ ಪರವಾಗಿ ದನಿಯೆತ್ತಿದ್ದರು. 1927ರಲ್ಲಿ ಬ್ರಸಲ್ಸ್‌ನಲ್ಲಿ ನಡೆದ ಸಾಮ್ರಾಜ್ಯಶಾಹಿ ವಿರೋಧಿ ಸಮಾವೇಶದಲ್ಲಿ ಹೊ ಮೊದಲು ನೆಹರುರವರನ್ನು ಭೇಟಿಯಾಗಿದ್ದರು. ಉತ್ತರ ವಿಯೆಟ್ನಾಂನ ಅಧ್ಯಕ್ಷರಾಗಿ ಹೋ ಚಿ ಮಿನ್ ವಿಶ್ವದ ಹಲವಾರು ದೇಶಗಳಿಗೆ ಭೇಟಿ ಕೊಟ್ಟ ಸಂದರ್ಭದಲ್ಲಿ ಭಾರತಕ್ಕೂ 1958ರ ಫೆಬ್ರವರಿಯಲ್ಲಿ ಭೇಟಿ ಕೊಟ್ಟಿದ್ದರು. ಶಾಂತಿಪ್ರೇಮಿ ಭಾರತದ ಜನತೆ ಏಷಿಯಾ ಖಂಡದ ಈ ಮಹಾನ್ ಹೋರಾಟಗಾರನನ್ನು ಆತ್ಮೀಯವಾಗಿ ಸ್ವಾಗತಿಸಿತ್ತು. ಹೋ ಚಿ ಮಿನ್ ಭಾರತವನ್ನು ಆಪ್ತಮಿತ್ರನೆಂದೇ ಭಾವಿಸಿದ್ದರು.



ಮುಖಪುಟದಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷದ ಪ್ರಧಾನ ಕಾರ್ಯದರ್ಶಿ ಎ. ಬಿ. ಬರ್ಧನ್‌ರವರು ವಿಯೆಟ್ನಾಮಿ ಕಮ್ಯುನಿಸ್ಟ್ ಪಕ್ಷದ ಪ್ರಧಾನ ಕಾರ್ಯದರ್ಶಿ ನೋಂಗ್ ಡಕ್ ಮನ್ಹ್‌ರ ಜೊತೆಗಿರುವ ವರ್ಣಮಯ ಫೋಟೋ ಪ್ರಕಟವಾಗಿತ್ತು. ಹನಾಯ್‌ನಲ್ಲಿ ನಾವು ಪಾದ ಊರುವ ಮುಂಚೆಯೇ ಭಾರತದ ಪ್ರತಿನಿಧಿಯೊಬ್ಬರು ಅಲ್ಲಿದ್ದುದು ಕಾಕತಾಳೀಯವಾಗಿತ್ತು. ಹನಾಯ್ ವಿಮಾನ ನಿಲ್ದಾಣದಲ್ಲಿ ಎಂಟುಗಂಟೆಗೆ ಇಳಿದಾಗ ಕತ್ತಲು ಆವರಿಸಿತ್ತು. ನಮ್ಮನ್ನು ಎದುರುಗೊಳ್ಳಲು ಗೈಡ್ ಆಗಲೇ ಸಿದ್ಧನಾಗಿ ನಿಂತಿದ್ದ. ನಮ್ಮನ್ನು ಹೊತ್ತ ಟ್ಯಾಕ್ಸಿ ಹೋಟೆಲ್‌ಗೆ ಪ್ರಯಾಣಿಸುತ್ತಿದ್ದಂತೆ ಕಿಟಕಿಯಿಂದ ಕಣ್ಣು ಹಾಯಿಸಿದೆ. ಆ ರಾತ್ರಿಯ ಕಣ್ಣು ಕುಕ್ಕುವ ದೀಪಗಳ ಬೆಳಕಿನಲ್ಲಿ ನಾನು ಕಲ್ಪಿಸಿಕೊಂಡಿದ್ದ ಹನಾಯ್ ಪಟ್ಟಣದ ವಿವರಗಳನ್ನು ಗ್ರಹಿಸುವ ತವಕ ನನಗೆ.

ವಿಯೆಟ್ನಾಂನ ರಾಜಧಾನಿಯೆನಿಸಿಕೊಂಡಿರುವ ಈ ಹನಾಯ್ ಪಟ್ಟಣಕ್ಕೆ ತನ್ನದೇ ಆದ ರಾಜಕೀಯ ಐತಿಹಾಸಿಕ ಮಹತ್ವವಿದೆ. ಫ್ರೆಂಚ್ ಆಧಿಪತ್ಯದಲ್ಲಿ ನಲುಗಿದ ಈ ಪಟ್ಟಣದಲ್ಲಿ ಫ್ರೆಂಚರ ವಾಸ್ತುಶಿಲ್ಪದ ಕುರುಹು ಬೇಕಾದಷ್ಟಿವೆ. ಕೆಂಪು ನದಿಯ ದಂಡೆಯ ಮೇಲಿರುವ ಈ ಪಟ್ಟಣ ವಿದ್ಯೋಗಿಕ ವಾಗಿ ಸಾಕಷ್ಟು ಅಭಿವೃದ್ಧಿ ಹೊಂದಿರುವುದನ್ನು

ಡಾ॥ ಎಸ್. ಗಾಯತ್ರಿ

# 'ಅಂಕಿತ ಪುಸ್ತಕ'ದ ಇತ್ತೀಚಿನ ಕೆಲವು ಪ್ರಕಟಣೆಗಳು

ಋಜುವಾತು
ಯು. ಆರ್. ಅನಂತಮೂರ್ತಿ

ಎಚ್ ವೈ ಶಾರದಾ ಪ್ರಸಾದ್ ಅವರ ಕಾಲದೇಶ
ವಿಶ್ವೇಶ್ವರ ಭಟ್

ಕನ್ನಡ ಸಾಹಿತ್ಯವೆಂಬ ಸ್ವಾತಂತ್ರ್ಯ ಹೋರಾಟ
ಬರಗೂರು ರಾಮಚಂದ್ರಪ್ಪ

ಮರವೇ ಮರ್ಮರವೇ
ಚಂದ್ರಶೇಖರ ಕಂಬಾರ

ಜೋಗಿ ಕಥೆಗಳು

ಶಬ್ದ ತೀರ
ಜಯಂತ ಕಾಯ್ಕಿಣಿ

ಅಗ್ನಿಕಾರ್ಯ
ಶ್ರೀನಿವಾಸ ವೈದ್ಯ

ಕಿರೀಟ
ಮೊಗಳ್ಳಿ ಗಣೇಶ್

ಎಲ್ಲ ಬಲ್ಲವರಿಲ್ಲ
ಎಸ್. ದಿವಾಕರ್

ಶಿಖರಸೂರ್ಯ
ಚಂದ್ರಶೇಖರ ಕಂಬಾರ

ಪಿಂಜರ್
ಅಮೃತಾ ಪ್ರೀತಮ್ ಅನು : ಎಲ್. ಸಿ. ಸುಮಿತ್ರಾ

ಸಮುದ್ರದಲ್ಲಿ ಮುಳುಗಿದ ಶ್ರೀಕೃಷ್ಣನ ದ್ವಾರಕೆ
ಡಾ|| ಎಸ್. ಆರ್. ರಾವ್

ನನ್ನ ವೃತ್ತಿಜೀವನದ ನೆನಪುಗಳು
ಸರ್ ಎಂ. ವಿಶ್ವೇಶ್ವರಯ್ಯ

ಕೈಲಾಸಂ ಕನ್ನಡ ನಾಟಕಗಳು
ಸಂ. : ಬಿ. ಎಸ್. ಕೇಶವರಾವ್

ಕೌಟಲೀಯ ಅರ್ಥಶಾಸ್ತ್ರ
ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳು

ಕಜ್ಜಾಯ
ಸುನಂದಾ ಬೆಳಗಾಂವಕರ

ಯಯಾತಿ
ಅನು : ವಿ. ಎಂ. ಇನಾಂದಾರ್

ಅ.ನ.ಕೃ. ಮತ್ತು ಕನ್ನಡ ಸಂಸ್ಕೃತಿ
ನರಹಳ್ಳಿ ಬಾಲಸುಬ್ರಹ್ಮಣ್ಯ

ಷೇರುಪೇಟೆ ಎಂಬ ವಿಸ್ಮಯ ಲೋಕ
ಕೆ. ಕೆ. ಪೂರ್ಣೇಶ್

ನಿತ್ಯಜೀವನಕ್ಕೆ ಹತ್ತಿರದ ಸುಭಾಷಿತಗಳು
ಮಹಾಬಲ ಸೀತಾಳಭಾವಿ

ಹಬ್ಬಗಳು - ದಿನಾಚರಣೆಗಳು
ಸಂಪಟೂರು ವಿಶ್ವನಾಥ್

ಕನ್ನಡ ಸಾಹಿತ್ಯಲೋಕದ ಗಣ್ಯರು
ಹೊ. ರಾ. ಸತ್ಯನಾರಾಯಣ ರಾವ್

ಪರವಾಗಿಲ್ಲ
ಎಚ್. ಡುಂಡಿರಾಜ್

ಬೆಸ್ಟ್ ಆಫ್ ರಾಶಿ
ಸಂ. : ಅಪರಂಜಿ ಶಿವು

ಕ್ರೀಮ್ ಆಫ್ ಕೈಲಾಸಂ
ಸಂ: ಬಿ.ಎಸ್. ಕೇಶವರಾವ್

ಅಂಕಿತ ಪುಸ್ತಕ

53, ಗಾಂಧಿ ಬಜಾರ್ ಮುಖ್ಯರಸ್ತೆ , ಬಸವನಗುಡಿ
ಬೆಂಗಳೂರು - 560 004
ದೂರವಾಣಿ : 26617100, 26617755

ಬೆಸ್ಟ್ ಆಫ್ ನಾಡಿಗೇರ್
ಸಂ. : ವೈ ಎನ್. ಗುಂಡೂರಾವ್



ವಿಯೆಟ್ನಾಂ ಧ್ವಜಗೋಪುರ

ಣಬಹುದಾಗಿತ್ತು. ವಿಮಾನ ನಿಲ್ದಾಣದಿಂದ ಹೊರಟ ನಾವು ಶಾಲವಾದ ರಸ್ತೆಯಲ್ಲಿ ಸಂಚರಿಸುತ್ತಿದ್ದಂತೆ ಎಡ ಬದಿಯಲ್ಲಿ ಕೆಂಪು ನದಿ, ಲಭಾಗದಲ್ಲಿ ಬೃಹತ್ ಕಟ್ಟಡಗಳು. ನಾವು ಒಂದು ವಿಶಾಲವಾದ ತುವೆಯ ಮೇಲೆ ಪ್ರಯಾಣಿಸಬೇಕಾಗಿಬಂತು. ಎರಡು ಕಿಲೋ ೕಟರಿಗೂ ಉದ್ದದ ಈ ಸೇತುವೆಯನ್ನು ರಷ್ಯನರು ನಿರ್ಮಿಸಿದ್ದೆಂದು ತ್ ಹೇಳಿದ. ರಸ್ತೆಯುದ್ದಕ್ಕೂ ಬಹುರಾಷ್ಟ್ರೀಯ ಕಂಪೆನಿಗಳ ಕಟ್ಟಡ ನ್ನು ನೋಡುತ್ತಲೇ ಸಾಗಿದೆವು. ಕ್ಯಾನನ್, ಪ್ಯಾನಸೋನಿಕ್, ಮೆಟ್ರೊ, ಲ್‌ಮಾರ್ಟ್ ಮುಂತಾದ ಜಗತ್ತಿನ ಮುಖ್ಯವಾದ ಉದ್ಯಮ ಸಂಸ್ಥೆಗಳೆಲ್ಲಾ ಲ್ಲಿ ಕಂಡುಬಂದವು. ನಂತರ ಜನದಟ್ಟಣೆಯ ರಸ್ತೆಗಳಲ್ಲಿ ಹಾದು ವಿಳಿದುಕೊಳ್ಳಬೇಕಿದ್ದ 'ಹೋಟೆಲ್ ಹನಾಯ್' ಸಮೀಪಿಸುತ್ತಿದ್ದಂತೆ ಮ್ಮ ಬಲಭಾಗದಲ್ಲಿ ವಿಶಾಲವಾದ ಸರೋವರ ಕಣ್ಣಿಗೆ ಬಿತ್ತು. ನರಂಚಿಗೆ ಗಗನಚುಂಬಿ ಕಟ್ಟಡಗಳ ಸಾಲು. ಸರೋವರದ ಎದುರಿನ ಟ್‌ಪಾತ್‌ನಲ್ಲಿ ಸುಮಾರು ಇಪ್ಪತ್ತು ಯುವಕ, ಯುವತಿಯರು ಗೀತದ ತಾಳಕ್ಕೆ ಏರೋಬಿಕ್ಸ್ ವ್ಯಾಯಾಮ ಮಾಡುತ್ತಿದ್ದರು.

ನಾವಿಳಿದುಕೊಂಡಿದ್ದ ಹೋಟೆಲ್ ಹನಾಯ್ ಹಲವಾರು ಕೊಠಡಿಗಳ ಹತ್ ಕಟ್ಟಡವಾಗಿತ್ತು. ಕೊಠಡಿಯೊಳಗೆ ಲಗ್ಗೇಜ್ ಇಡಲು ಬಂದ ೋಟೆಲ್ ಬಾಯ್ ಜಿ.ಆರ್.ರವರನ್ನು ನೋಡಿ 'ಯು ಇಂಡಿಯನ್' ದು ಪ್ರಶ್ನಿಸಿದ. 'ಹೌದು' ಎಂದು ಮುಗಿಳಕ್ಕ ಅವರಿಗೆ 'ಯು ಲುಕ್ ಸರು' ಎಂದು ಹೇಳಿ ಸಂತೋಷಪಟ್ಟ. ಕಾಂಬೋಡಿಯಾದಲ್ಲಿ 'ಗಾಂಡಿ' ಾಗಿದ್ದ ಜಿ.ಆರ್.ಅಂತೂ ವಿಯೆಟ್ನಾಂಗೆ ಬರುವ ವೇಳೆಗೆ ನೆಹರು ಬಿಟ್ಟಿದ್ದರು.

ವಿಯೆಟ್ನಾಂನಲ್ಲಿ ನಾವು ಕಳೆದ ಸಮಯದಲ್ಲಿ ಒಂದೂವರೆ ದಿನ ದ್‌ವಿಖ್ಯಾತ 'ಹೇಲಾಂಗ್ ಬೇ'ಯನ್ನು ನೋಡುವುದರಲ್ಲಿ ಕಳೆದೆವು. ೃತಿಯ ವೈಚಿತ್ರ್ಯಗಳ ಅದ್ಭುತ ಅನುಭವವನ್ನು ಕೊಡುವ ದೃಶ್ಯ ಇಲ್ಲಿ ುತ್ತದೆ. ಜಗತ್ತಿನ ಹೆರಿಟೇಜ್‌ನ ಭಾಗವೆಂದು ಗುರುತಿಸಲ್ಪಡುವ ಈ ೇಶವು ಸುಮಾರು ೩೪೩ಚದರ ಕಿಲೋಮೀಟರುಗಳಷ್ಟು ವಿಸ್ತಾರ ಗಿದ್ದು ೭೭೫ ದ್ವೀಪಗಳನ್ನು ಒಳಗೊಂಡಿದೆ. 'ಹೇಲಾಂಗ್ ಬೇ'ನಲ್ಲಿ ದು ರಾತ್ರಿ ತಂಗಿದ್ದು ಅಲ್ಲಿ ಬೆಳದಿಂಗಳು, ಸೂರ್ಯೋದಯ ಮತ್ತು ರ್ಯಾಸ್ತಮವನ್ನು ನೋಡಿದ ಅನುಭವ ಅವಿಸ್ಮರಣೀಯವಾದ್ದು.

ಹನಾಯ್ ಪಟ್ಟಣದ ಮಧ್ಯಭಾಗದಲ್ಲಿ, ಲೆನಿನ್ ಪಾರ್ಕ್‌ನ ಬಳಿ ಯಾನ್ ಬಿಯನ್ ಫೂ ರಸ್ತೆಯಲ್ಲಿ ಇರುವ ವಿಯೆಟ್‌ನಾಮ್ 'ಮಿಲಿಟರಿ ತ್ರೆಯ ಮ್ಯೂಸಿಯಂ' ಹನಾಯ್‌ನ ವೀರೋಚಿತ ಪರಿಚಯವನ್ನು ಡಿಕೊಡುವಂತಹ ನೋಡಲೇಬೇಕಾದ ಸ್ಥಳ. ೧೯೫೬ರ ಜುಲೈ ರಂದು ಸ್ಥಾಪಿತವಾದ ಈ ಮ್ಯೂಸಿಯಂ ದೇಶದ ಏಳು ರಾಷ್ಟ್ರೀಯ ್ಯೂಸಿಯಂಗಳಲ್ಲಿ ಒಂದು. ಈ ಮ್ಯೂಸಿಯಂನ ಆವರಣದಲ್ಲಿಯೇ ುವ ಆಕರ್ಷಕ 'ಹನಾಯ್ ಧ್ವಜಸ್ತಂಭ'ವು ೧೮೦೫ರಿಂದ ೧೮೧೨ರಲ್ಲಿ ಕಟ್ಟಲ್ಪಟ್ಟಿದ್ದು. ೩೯ ಮೀಟರ್ ಎತ್ತರ ಮತ್ತು ೧೮೦ ಮೀಟರ್ ಪೆರಿಮೀಟರ್ ಅಳತೆಯ ಈ ಧ್ವಜಸ್ತಂಭ ಪ್ರಾಚೀನ ವಾಸ್ತುಶಿಲ್ಪವನ್ನು ಒಳಗೊಂಡಿದೆ. ಈ ಮ್ಯೂಸಿಯಂಗೆ ಅಂಟಿಕೊಂಡಂತೆ ಇರುವ ಪುಸ್ತಕ ಭಂಡಾರದಲ್ಲಿ ವಿಯೆಟ್ನಾಮಿನ ಮಿಲಿಟರಿ ಸಂಸ್ಕೃತಿಯನ್ನು ಬಿಂಬಿಸುವ ಹಲವಾರು ಪುಸ್ತಕಗಳು, ಪತ್ರಿಕಾ ಪ್ರಕಟಣೆಗಳು, ಅಧ್ಯಯನ ಸಾಮಗ್ರಿಗಳು ಅಧ್ಯಯನಕ್ಕೆ ಲಭ್ಯವಿದೆ. ಮ್ಯೂಸಿಯಂ ಗ್ಯಾಲರಿಗಳಲ್ಲಿ ವಿಯೆಟ್ನಾಂನ ೪೦೦೦ ವರ್ಷಗಳ ಹೋರಾಟದ ಬದುಕನ್ನು ಬಿಂಬಿಸುವ ಹಲವಾರು ಭಿತ್ತಿಚಿತ್ರಗಳು, ಸಮರ ನಾಯಕರ ವಿಗ್ರಹಗಳು, ಯುದ್ಧದಲ್ಲಿ ಬಳಸಿದ ಅಸ್ತ್ರಗಳು, ಎಲ್ಲವನ್ನೂ ಪ್ರದರ್ಶನಕ್ಕೆಂದು ಜೋಡಿಸಿ ಇಡಲಾಗಿದೆ. ಜಪಾನ್, ಫ್ರಾನ್ಸ್, ಅಮೆರಿಕಾದೊಂದಿಗೆ ವಿಯೆಟ್ನಾಂ ನಡೆಸಿದ ಯುದ್ಧದ ಕೆಲವು ತುಣುಕುಗಳನ್ನು ಪ್ರೊಜೆಕ್ಟರ್ ಮೂಲಕ ಬಿಂಬಿಸಲಾಗುತ್ತಿತ್ತು. ಮ್ಯೂಸಿಯಂನ ಪ್ರವೇಶದ್ವಾರದಲ್ಲಿಯೇ ಕೆಂಪು ಹಿನ್ನೆಲೆಯಲ್ಲಿ ಹೋ ಚಿ ಮಿನ್‌ರ ಕಂಚಿನ ವಿಗ್ರಹವನ್ನು ಇಡಲಾಗಿದೆ. ವಿಯೆಟ್ನಾಂನ ಪ್ರತಿರೋಧದ ಯುದ್ಧವನ್ನು ಬೆಂಬಲಿಸಿದ, ಸಹಾಯ ಹಸ್ತ ನೀಡಿದ ಜಗತ್ತಿನ ಇತರ ರಾಷ್ಟ್ರಗಳ ಪಾತ್ರವನ್ನು ಬಿಂಬಿಸುವ ಒಂದು ಪ್ರತ್ಯೇಕ ಗ್ಯಾಲರಿಯೂ ಇಲ್ಲಿದೆ. ಇದಲ್ಲದೆ, ಯುದ್ಧ ವಿಮಾನಗಳ ಅವಶೇಷಗಳನ್ನು ಜೋಡಿಸಿ ಅದರಲ್ಲೇ ಒಂದು ವಿನ್ಯಾಸವನ್ನು ರೂಪಿಸಿ ಅದರ ಬಯಲು ಪ್ರದರ್ಶನದ ವ್ಯವಸ್ಥೆಯು ಇಲ್ಲಿದೆ. ವಿಯೆಟ್ನಾಮಿಯರು ಹೊಡೆದುರುಳಿಸಿದ ಅಮೆರಿಕಾದ ಯುದ್ಧ ವಿಮಾನವೊಂದರ ಪ್ರದರ್ಶನವೂ ಈ ಆವರಣದಲ್ಲಿ ಕಂಡುಬರುತ್ತದೆ. ವಿದೇಶೀ ಆಕ್ರಮಣದ ವಿರುದ್ಧ ವಿಯೆಟ್ನಾಮಿನ ಜನತೆ ನಡೆಸಿದ ಕೆಚ್ಚೆದೆಯ ಹೋರಾಟದ ವಿರಾಟ್ ಸ್ವರೂಪವನ್ನು ಬಿಂಬಿಸುವ ಈ ಮ್ಯೂಸಿಯಂ ಹೋ ಚಿ ಮಿನ್ ಯುಗದ ಚರಿತ್ರೆಯನ್ನು ಜಗತ್ತಿಗೆ ತೆರೆದಿಟ್ಟಿದೆ.

ಹೋ ಚಿ ಮಿನ್ ರಾಜಕೀಯದ ಹೆಜ್ಜೆ ಗುರುತುಗಳನ್ನು ಬಿಂಬಿಸುವ ಮತ್ತೊಂದು ತಾಣ ಅಧ್ಯಕ್ಷೀಯ ಅರಮನೆ, ಹೋ ಚಿ ಮಿನ್ ವಾಸಿಸುತ್ತಿದ್ದ ಮನೆಗಳು, ಸುಂದರ ತೋಟ ಮತ್ತು ಅವರ ಸಮಾಧಿಯ ಭವನವಿರುವ ಸಂಕೀರ್ಣ. ಈ ಹೋ ಚಿ ಮಿನ್ ಸ್ಮಾರಕ ಸಂಕೀರ್ಣವನ್ನು ಪ್ರವೇಶಿಸಿದಾಗ ಮೊದಲಿಗೆ ಕಾಣಸಿಗುವುದು ಹೂಂಗ್ ವಾಂಗ್ ರಸ್ತೆಗೆ ಮುಖ ಮಾಡಿ ನಿಂತ ವೈಭವೋಪೇತವಾದ ನಾಲ್ಕು ಮಹಡಿಯ ಅದ್ಭುತ ಕಟ್ಟಡ. ಫ್ರೆಂಚ್‌ರ ಆಧಿಪತ್ಯದಲ್ಲಿ ಈ ಕಟ್ಟಡವು ಇಂಡೋಚೀನಾ ಗವರ್ನರ್‌ರ ಅರಮನೆಯಾಗಿತ್ತು. ಜರ್ಮನ್ ಮೂಲದ ಫ್ರೆಂಚ್ ವಾಸ್ತುಶಿಲ್ಪಿ ಲಿಚಿನ್ ಫೆಂಡರ್ ವಿನ್ಯಾಸಗೊಳಿಸಿದ ಈ ಅರಮನೆಯನ್ನು ೧೯೦೦ರಿಂದ ೧೯೦೬ರಲ್ಲಿ ಕಟ್ಟಲಾಗಿತ್ತು. ವಿಯೆಟ್ನಾಂ ಸ್ವತಂತ್ರಗೊಂಡ ಮೇಲೆ ಅದರ ಮೊದಲ ಅಧ್ಯಕ್ಷರಾದ ಹೋ ಚಿ ಮಿನ್ ಈ ಅರಮನೆಯಲ್ಲಿ ವಾಸಮಾಡಲು ಇಚ್ಛಿಸದೆ ಅದನ್ನು ಸರ್ಕಾರದ ಕಛೇರಿಯನ್ನಾಗಿ ಬಳಸಲು ಇಚ್ಛಿಸಿದರು. ಸರ್ಕಾರದ ಎಲ್ಲಾ ಸಭೆಗಳು ಮತ್ತು ಅಂತರರಾಷ್ಟ್ರೀಯ ನಿಯೋಗಗಳಿಗಾಗಿ ಮತ್ತು ಸಭೆಗಳಿಗಾಗಿ ಈ ಅರಮನೆಯನ್ನು ಬಳಸುತ್ತಿದ್ದರು.

ಈ ಅಧ್ಯಕ್ಷೀಯ ಅರಮನೆಯ ಎದುರಿಗೆ ಹೋ ಚಿ ಮಿನ್‌ರ ಸಮಾಧಿಯ ಭವನವಿದೆ. ಪ್ರತಿ ನಿತ್ಯ ನೂರಾರು, ಸಾವಿರಾರು ಜನರು ಈ ಸ್ಥಳಕ್ಕೆ ಭೇಟಿ ಕೊಡುತ್ತಾರೆ. ಶಿಸ್ತಿನಿಂದ ಸರದಿಯಲ್ಲಿ ನಿಂತು ಈ ಭವನವನ್ನು ಪ್ರವೇಶಿಸುತ್ತಿರುವಾಗ ಒಂದು ರೀತಿಯ ಶಾಂತ, ಗಂಭೀರದ ವಾತಾವರಣ ಇಡೀ ಪರಿಸರದಲ್ಲಿ ಮೂಡುತ್ತದೆ. ಸರದಿಯಲ್ಲಿ ನಿಂತಿರುವಾಗ ಮಾತನಾಡುತ್ತಿದ್ದ ಒಬ್ಬನನ್ನು ಅಲ್ಲಿದ್ದ ಕಾವಲು ಸಿಬ್ಬಂದಿಗಳು ಮಾತನಾಡದಿರಲು ಹೇಳಿದರು. ನಮ್ಮೆದುರಿಗೇ ತಳ್ಳುಗಾಡಿಯಲ್ಲಿ ಬಂದ ಹಿರಿಯ ವ್ಯಕ್ತಿಯೊಬ್ಬನಿಗೆ ಎಲ್ಲರೂ ವಿಶೇಷ ಗೌರವ ತೋರಿಸಿ ವಂದಿಸುತ್ತಿದ್ದರು. ಬಹುಶಃ ಅವರು



ಅಧ್ಯಕ್ಷರ ಅರಮನೆ

ಯುದ್ಧದಲ್ಲಿ ಭಾಗವಹಿಸಿದ ಮಾಜಿ ಸೈನಿಕರಿರಬಹುದು. ಮೊದಲನೇ ಮಹಡಿಗೆ ಹತ್ತಿ ಹೋದಾಗ ಅಲ್ಲಿ ಹೋ ಚಿ ಮಿನ್‌ರ ಸಮಾಧಿಯಿದೆ. ರಾಷ್ಟ್ರೀಯ ವಿಮೋಚನಾ ಹೋರಾಟಗಳಿಗೆ ಸ್ಫೂರ್ತಿದಾಯಕರಾದ ಹೋ ಚಿ ಮಿನ್‌ರ ಸಮಾಧಿಯನ್ನು ನೋಡಿ, ಮನಸ್ಸಿನಲ್ಲೇ ಅವರಿಗೆ ವಂದಿಸಿ ಹೊರಬಂದೆವು.

ಇದೇ ಆವರಣದಲ್ಲಿ ಹೋ ಚಿ ಮಿನ್‌ರು ವಾಸಿಸುತ್ತಿದ್ದ ಮನೆಗಳಿವೆ. ಇಲ್ಲಿ ಎಲ್ಲೆಲ್ಲೂ ಹಸಿರು, ಹಲವು ವಿಧದ ಗಿಡಗಳು, ವಿಶೇಷವಾಗಿ ಮಾವು ಮತ್ತು ಚಕ್ಕೋತನೆಯ ಮರಗಳು, ಚಕ್ಕೋತದ ಕಾಯಿಗಳಂತೂ ಗಿಡಗಳಲ್ಲಿ ಜಗಿಯುತ್ತಿತ್ತು. ಈ ಆವರಣದಲ್ಲೇ ಇರುವ ಮನೆ ನಂ.೫೪ರಲ್ಲಿ ಹೋ ಚಿ ಮಿನ್‌ರು ೧೯೫೪ರ ಡಿಸೆಂಬರ್‌ನಿಂದ ೧೯೫೮ರವರೆಗೆ ವಾಸಿಸುತ್ತಿದ್ದರು. ಮೂರು ಕೊಠಡಿಗಳ ಈ ಮನೆಯ ಮುಂದೆ ಸುಂದರವಾದ ಮೀನಿನ ಕೊಳವೊಂದಿದೆ. ಅತ್ಯಂತ ಸರಳ ಜೀವನ ನಡೆಸುತ್ತಿದ್ದ ಹೋ ಚಿ ಮಿನ್‌ರ ಮನೆಯ ಪೀಠೋಪಕರಣಗಳು ಕೂಡ ಅಷ್ಟೇ ಸರಳವಾದವು. ಮನೆಯ ಎಡಭಾಗದಲ್ಲಿರುವ ಗ್ಯಾರೇಜಿನಲ್ಲಿ ಹೋ ಚಿ ಮಿನ್‌ರು ಬಳಸುತ್ತಿದ್ದ ಎರಡು ಕಾರುಗಳನ್ನು ಪ್ರದರ್ಶನಕ್ಕಾಗಿ ಇಡಲಾಗಿದೆ. ೧೯೫೫ರಲ್ಲಿ ಸೋವಿಯತ್ ರಷ್ಯಾ ಕಾಣಿಕೆಯಾಗಿ ನೀಡಿದ ಕಾರು 'ಪೊಬೆದಾ'. ಮತ್ತೊಂದು ಕಾರು 'ಪ್ಯುಗೌಟ್ ೪೦೪'ನ್ನು ನ್ಯೂ ಕ್ಯಾಲಿಡೋನಿಯಾದ ಫ್ರೆಂಚ್ ಕಾಲೋನಿಗಳಲ್ಲಿದ್ದ ಗಡಿಪಾರಾಗಿದ್ದ ವಿಯೆಟ್ನಾಮಿಯರು ಹೋ ಚಿ ಮಿನ್‌ರ ಮನವಿಗೆ ಬೆಲೆಕೊಟ್ಟು ಹಿಂತಿರುಗಿ ತಾಯ್ನಾಡಿಗೆ ಬಂದಾಗ ಕೊಡುಗೆಯಾಗಿ ಕೊಟ್ಟಿದ್ದು. ನಂತರ ೧೯೫೮ರಿಂದ ೧೯೬೯ಕ್ಕೆ ಅವರ ಕೊನೆಗಾಲದ ದಿನದವರೆಗೂ ಅವರು ಮರದ ಹಲಗೆಗಳ ಆಧಾರದ ಮೇಲೆ ಕಟ್ಟಲ್ಪಟ್ಟ ಚಿಕ್ಕ, ಚೊಕ್ಕ ಮನೆಯಲ್ಲಿ ವಾಸಿಸುತ್ತಿದ್ದರು. ಉತ್ತರದ ಬೆಟ್ಟ ಪ್ರದೇಶಗಳಲ್ಲಿ ವಾಸಿಸುವ ಬುಡಗಟ್ಟು ಜನರು ವಾಸಿಸುವಂತಹ ಮನೆ ತಮಗೆ ಬೇಕೆಂದು ಅದರ ಶೈಲಿಯಲ್ಲಿ ಈ ಮರದ ಮನೆಯನ್ನು ಕಟ್ಟಿಸಿಕೊಂಡಿದ್ದರಂತೆ. ಈ ಮನೆಯಲ್ಲಿ ಅವರು ಬಳಸುತ್ತಿದ್ದ ಎರಡು ಫೋನ್‌ಗಳು, ಒಂದು ಹೆಲ್ಮೆಟ್, ಅವರು ಮಲಗಲು ಬಳಸುತ್ತಿದ್ದ ಮಂಚ - ಎಲ್ಲವೂ ಪ್ರದರ್ಶನಕ್ಕಿಡಲಾಗಿದೆ. ಈ ಪ್ರತಿಯೊಂದು ವಸ್ತುವೂ ಹೋ ಚಿ ಮಿನ್‌ರ ಸರಳತೆಯನ್ನು ಮತ್ತೆ ಮತ್ತೆ ಎತ್ತಿ ತೋರಿಸುತ್ತವೆ. ಐದು ಮೀಟರು ಅಗಲ ಮತ್ತು ಇನ್ನೂರು ಮೀಟರ್ ಉದ್ದದ ಮಾವಿನ ಮರಗಳ ಕಾಲುದಾರಿಯೂ ಈ ಸಂಕೀರ್ಣದ ಮತ್ತೊಂದು ಆಕರ್ಷಕ ಅಂಶ. ಈ ಕಾಲುದಾರಿಯಲ್ಲಿ ಹೋ ದಿನ ನಿತ್ಯವೂ ವಾಕಿಂಗ್‌ಗೆ ಹೋಗುತ್ತಿದ್ದರಂತೆ. ಇಲ್ಲಿನ ಉದ್ಯಾನವನ ಹೋ ಚಿ ಮಿನ್‌ರ ಪರಿಸರ ಪ್ರೇಮಕ್ಕೆ ಅತ್ಯುತ್ತಮ ಉದಾಹರಣೆ. ಇಲ್ಲಿ ಹಲವಾರು ಬಗೆಯ ಹೂವಿನ, ಹಣ್ಣಿನ ಗಿಡಗಳು ಇವೆ. ತಾವೇ ಸ್ವತಃ ನಿಂತು ನಾಡಿನ ಹಲವು ಕಡೆಗಳಿಂದ ಕೊಡುಗೆಯಾಗಿ ಬಂದ ಗಿಡಗಳನ್ನು ನೆಟ್ಟು ಪೋಷಿಸುತ್ತಿದ್ದರಂತೆ. ಕೆಲವು ಗಿಡಗಳಿಗೆ ಅವರೇ ಹೊಸ ಬಗೆಯ ಹೆಸರನ್ನು ಕೊಟ್ಟಿದ್ದಾರೆ. ಸದಾ ಹಸಿರಿನ ಗಿಡಗಳು, ಬುದ್ಧನ ಮರಗಳು, ವಿಶ್ವವೃಕ್ಷಗಳು ಇತ್ಯಾದಿ. ಹೀಗೆ ಈ ಸಂಕೀರ್ಣದ ಪ್ರತಿಯೊಂದು ಹೆಜ್ಜೆಯಲ್ಲೂ ಹೋ ಚಿ ಮಿನ್‌ರ ಸರಳತೆ, ಪರಿಸರ ಪ್ರೇಮ ಮತ್ತು ಮಾನವೀಯತೆ ಬೆರೆತುಹೋಗಿರುವಂತೆ ಭಾಸವಾಗುತ್ತದೆ.

ಹನಾಯ್‌ನಗರದ ಮತ್ತೊಂದು ಆಕರ್ಷಣೆಯ ಸ್ಥಳ ವಿಯಟ್ನಾಮಿನ ಮೊಟ್ಟಮೊದಲ ವಿಶ್ವವಿದ್ಯಾಲಯ. ಒಂದು ಸಾವಿರ ವರ್ಷಗಳ ಇತಿಹಾಸ ಹೊಂದಿದ ಈ ಸ್ಥಳವನ್ನು ಈಗಲೂ ಪ್ರವಾಸಿಗರಿಗಾಗಿ ಉತ್ತಮ ರೀತಿಯಲ್ಲಿ ಪ್ರದರ್ಶನಕ್ಕಿಟ್ಟಿದ್ದಾರೆ.

ಹೋ ಚಿ ಮಿನ್‌ರ ರಾಜಕೀಯ ಬದುಕಿನಲ್ಲಿ ಮಹತ್ವದ ಪಾತ್ರ ವಹಿಸಿದ ಹನಾಯ್ ಪಟ್ಟಣಕ್ಕೆ ವಿದಾಯ ಹೇಳುತ್ತಾ ನಮ್ಮ ದೇಶದತ್ತ ಪ್ರಯಾಣ ಬೆಳೆಸಿದೆವು. ಈ ಭೇಟಿಯಲ್ಲಿ ನಮ್ಮದೇ ಮಿತಿಯಿಂದಾಗಿ ನಾವು ವಿಯೆಟ್ನಾಂ ಬಗ್ಗೆ ತಿಳಿದುಕೊಂಡದ್ದು, ಕಲಿಸಿಕೊಂಡದ್ದು ಎಲ್ಲವನ್ನೂ ನೋಡಲಾಗಲಿಲ್ಲವೆಂಬ ಕೊರಗಿದ್ದರೂ ಜಗತ್ತಿನ ಅಗ್ರಗಣ್ಯ ಹೋರಾಟಗಾರರ ನಾಡನ್ನು ಸ್ಪರ್ಶಿಸಿದೆವೆಂಬ ಸಮಾಧಾನ ನಮ್ಮಲ್ಲಿ ನೆಲೆಸಿತ್ತು. ಹಾಗೆಯೇ ಮತ್ತೊಮ್ಮೆ ಈ ನಾಡಿಗೆ ಬಂದು ಹೆಚ್ಚು ಸಮಯ ಕಳೆದು ಹೆಚ್ಚು ಜಾಗ ನೋಡಬೇಕೆಂಬ ಆಶಯದೊಂದಿಗೆ ನಮ್ಮ ನಾಡಿಗೆ ಹಿಂದಿರುಗಿದೆವು.



ಹೋ ಚಿ ಮಿನ್ ೧೯೫೮ರಿಂದ ೧೯೬೯ರವರೆಗೆ ವಾಸಿಸಿದ ಮರದ ಮನೆ




*ನೆಹರು ಜನ್ಮಶತಮಾನೋತ್ಸವದ ಸಂದರ್ಭದಲ್ಲಿ ವಿಯೆಟ್ನಾಂ ಸರ್ಕಾರ ಹೊರಡಿಸಿದ ಅಂಚೆ ಚೀಟಿ*

ವಿಯೆಟ್ನಾಮಿನ ಸ್ವಾತಂತ್ರ್ಯ ಹೋರಾಟಕ್ಕೆ ಭಾರ ತನ್ನ ಬೆಂಬಲ ಸೂಚಿಸಿ ಆತ್ಮೀಯ ಸ್ನೇಹಿತನಂ ಸಹಕಾರ ನೀಡಿತ್ತು. ವಿಶ್ವಸಂಸ್ಥೆಯ ಸಭೆಗಳಲ್ಲಿ ನಮ ಪ್ರಧಾನಿ ಜವಹರಲಾಲ್ ನೆಹರುರವರು ವಿಯೆಟ್ನಾ ಪರವಾಗಿ ದನಿಯೆತ್ತಿದ್ದರು. ೧೯೨೭ರಲ್ಲಿ ಬ್ರಸೆಲ್ಸ್‌ನ ನಡೆದ ಸಾಮ್ರಾಜ್ಯಶಾಹಿ ವಿರೋಧಿ ಸಮಾವೇಶದ ಹೋ ಮೊದಲು ನೆಹರುರವರನ್ನು ಭೇ ಯಾಗಿದ್ದರು. ಉತ್ತರ ವಿಯೆಟ್ನಾಂನ ಅಧ್ಯಕ್ಷರಾ ಹೋ ಚಿ ಮಿನ್ ವಿಶ್ವದ ಹಲವಾರು ದೇಶಗಳಿ ಭೇಟಿಕೊಟ್ಟ ಸಂದರ್ಭದಲ್ಲಿ ಭಾರತಕ್ಕೂ ೧೯೫೮ ಫೆಬ್ರವರಿಯಲ್ಲಿ ಭೇಟಿಕೊಟ್ಟಿದ್ದರು. ಶಾಂತಿಪ್ರೇಮಿ ಭಾರತದ ಜನತೆ ಏಷಿಯಾ ಖಂಡದ ಈ ಮಹಾನ ಹೋರಾಟಗಾರನನ್ನು ಆತ್ಮೀಯವಾಗಿ ಸ್ವಾಗತಿಸಿತು ಹೋ ಚಿ ಮಿನ್ ಭಾರತವನ್ನು ಆಪ್ತ ಮಿತ್ರನೆಂದ ಭಾವಿಸಿದ್ದರು. ಅವರು ೧೯೪೨ರಲ್ಲಿ ಜೈಲಿನಲ್ಲಿದ್ದಾ ಬರೆದ ಕವನಗಳಲ್ಲಿ ನೆಹರುರವರನ್ನು ಕುರಿ ಕವನವೊಂದು ಹೀಗಿದೆ :

**ನೆಹರೂಗೆ**

ನಾನು ಹೋರಾಡುತ್ತಿದ್ದೇನೆ
ನೀವೂ ಕ್ರಿಯಾಶೀಲರಾಗಿದ್ದೀರಿ.
ನೀವು ಜೈಲಿನಲ್ಲಿ
ನಾನು ಬಂದೀಖಾನೆಯಲ್ಲಿ
ಭೇಟಿ ಇಲ್ಲದ ಹತ್ತು ಸಾವಿರ ಮೈಲಿ ದೂರವಿದ್ದೂ
ನಮ್ಮದು ಶಬ್ದಾತೀತ ಸಂವಹನ,
ಚಿಂತನೆಗಳ ಅಪ್ಪುಗೆ ಮಾತ್ರ ನಮ್ಮ ಸಮ್ಮಿಲನ
ಮಿತ್ರನಿಂದ ನಾನು ಬಂಧಿ
ಶತ್ರುವಿನಿಂದ ನೀವು ಖೈದಿ

(ಹೋ ಚಿ ಮಿನ್‌ರ 'ಪ್ರಿಸನ್ ಡೈರಿ' ಯಿಂದ
ಅನುವಾದ: ಡಾ|| ಸಿದ್ದನಗೌಡ ಪಾಟೀಲ

ಡಾ|| ಎನ್. ಗಾಯತ್ರಿ
ಸ್ಕೈಲೈನ್ ಸುರಭಿ, ೧೦೮, ೧೪ ಸಿ, ವಿದ್ಯಾಪೀಠ ರಸ್ತೆ,
ಬನಶಂಕರಿ, ೨ನೇ ಹಂತ, ಬೆಂಗಳೂರು - ೫೬೦೦೮೫

# ಕನ್ನಡ : ಆದ್ಯತೆಗಳ ಪಲ್ಲಟ

ಕನ್ನಡವನ್ನು ಕೇವಲ ಅಭಿಮಾನದ ಪ್ರಶ್ನೆಯನ್ನಾಗಿ ನೋಡಿದರೆ ಸಾಲದು, ಅನ್ನದ ಪ್ರಶ್ನೆಯನ್ನಾಗಿ ಪರಿಗಣಿಸಬೇಕು – ಈ ಆದ್ಯತೆಯ ಮೇಲೆ ಕನ್ನಡ ಪರ ಚಿಂತನೆ ಮತ್ತು ಕ್ರಿಯೆಯನ್ನು ಕಟ್ಟಬೇಕು. ಕನ್ನಡಿಗರ ಬದುಕನ್ನು ಉಳಿಸಿ ಬೆಳೆಸುವ ಮೂಲಕ ಕನ್ನಡದ ಉಳಿವಿಗೆ ಒತ್ತಾಸೆಯಾಗಬೇಕು. ಉದ್ಯೋಗ, ಶಿಕ್ಷಣ ಮತ್ತು ಆಡಳಿತ – ಈ ಮೂರು ವಿಭಾಗಗಳು ಕ್ರಮವಾಗಿ ಕನ್ನಡ ಕೇಂದ್ರಿತವಾಗ ಬೇಕೆಂಬುದನ್ನು ತಾತ್ವಿಕವಾಗಿ ಪ್ರತಿಪಾದಿಸುತ್ತ ಬಂದಿದ್ದೇನೆ. ಅರ್ಹ ಕನ್ನಡಿಗರಿಗೆ ಸಾಮಾಜಿಕ ಮೀಸಲಾತಿಯನ್ನೂ ಒಳಗೊಂಡಂತೆ ಸರ್ಕಾರಿ ಮತ್ತು ಖಾಸಗಿ ಕ್ಷೇತ್ರದ ಉದ್ಯೋಗಗಳಲ್ಲಿ ಆದ್ಯತೆ ದೊರೆಯಬೇಕು. ಕನ್ನಡ ಕಲಿಯದೆ ಇಲ್ಲಿ ಯಾರೂ ಶಿಕ್ಷಣವನ್ನು ಪೂರೈಸಲು ಅವಕಾಶವಿರಬಾರದು. ಆಡಳಿತದಲ್ಲಿ ಸಂಪೂರ್ಣ ಕನ್ನಡ ಜಾರಿಯಾಗಬೇಕು; ಕನ್ನಡದಲ್ಲಿ ಆಡಳಿತ ನಡೆಸಲು ಪೂರಕವಾಗುವಂತೆ ಕನ್ನಡ ತಂತ್ರಜ್ಞಾನವನ್ನು ಸಜ್ಜುಗೊಳಿಸಬೇಕು. ಈ ಆದ್ಯತೆಗಳನ್ನು ಒಳಗೊಂಡ ಚಿಂತನೆ ಮತ್ತು ಹೋರಾಟ ಇಂದಿನ ಆದ್ಯತೆ. ಆನಂತರ ಶಾಸ್ತ್ರೀಯ ಸ್ಥಾನಮಾನದ ವಿಷಯ. ಶಾಸ್ತ್ರೀಯ ಸ್ಥಾನಮಾನವೇ ಮೊದಲ ಆದ್ಯತೆಯೆಂಬಂತೆ ಬಿಂಬಿಸುವುದು ಬೇಡ.

ಕರ್ನಾಟಕದ ಏಕೀಕರಣವಾಗಿ ಐವತ್ತು ವರ್ಷಗಳು ತುಂಬಿವೆ. 'ಸುವರ್ಣ ಕರ್ನಾಟಕ'ದ ಅಧಿಕೃತ ಆಚರಣೆಯನ್ನು ಕರ್ನಾಟಕ ಸರ್ಕಾರವು 'ತಾಂತ್ರಿಕ'ವಾಗಿ ಪೂರೈಸಿದೆ. ಈ ಐವತ್ತು ವರ್ಷಗಳಲ್ಲಿ ನಮ್ಮ ನಾಡು-ನುಡಿಯ ಚಿಂತನೆ ಮತ್ತು ಕ್ರಿಯಾಶೀಲತೆಗಳನ್ನು ಕುರಿತು ಆತ್ಮಾವಲೋಕನ ಮಾಡಿಕೊಳ್ಳಲು ಇದು ಸಕಾಲ. ಹಾಗೆ ನೋಡಿದರೆ ಆತ್ಮಾವಲೋಕನಕ್ಕೆ ಎಲ್ಲ ಕಾಲವೂ ಸಕಾಲವೇ. ಆದರೆ 'ಸುವರ್ಣ ಕರ್ನಾಟಕ'ವೆಂಬ ಆಚರಣೆ ಮತ್ತು ಕಾಲಘಟ್ಟವು 'ಸಕಾಲ'ದ ಶಕ್ತಿಯನ್ನು ಹೆಚ್ಚಿಸುತ್ತದೆ! 'ಸುವರ್ಣ'ದ ಕಲ್ಪನೆಯಲ್ಲಿ ಬೀಗುತ್ತಲೇ ಕನ್ನಡಪರ ಸಾಧನೆಯ 'ಬಡತನ'ದ ಬಗ್ಗೆಯೇ ಹೆಚ್ಚು ಮಾತಾಡುತ್ತಿರುವ ಇಂದಿನ ಸಂದರ್ಭವನ್ನು 'ಸಕಾಲ'ವೆನ್ನದಿರಲು ಹೇಗೆ ಸಾಧ್ಯ ? ಒಂದು ಕಡೆ ಬಂಗಾರದ (ಸುವರ್ಣ) ಕಲ್ಪನೆ, ಇನ್ನೊಂದು ಕಡೆ ಬಡತನದ ಕಲ್ಪನೆ – ಈ ವೈರುಧ್ಯ ವಿಚಿತ್ರ ವೆನ್ನಿಸಿದರೂ ನಮ್ಮ ಕಾಲದ ವಾಸ್ತವ. ವೈರುಧ್ಯಗಳ ವಾಸ್ತವವನ್ನು ಅರ್ಥ ಮಾಡಿಕೊಳ್ಳುತ್ತ, ಅರ್ಥ ಮಾಡಿಸುತ್ತ ಬಂದಿದ್ದರೆ, ಬಹುಶಃ ಈ ಐವತ್ತು ವರ್ಷಗಳಲ್ಲಿ ಕನ್ನಡ ಕುರಿತ ಹಳಹಳಿಕೆ ಕಡಿಮೆಯಾಗಿ ನಿಜ ಕಳಕಳಿ ಹೆಚ್ಚಾಗುತ್ತಿತ್ತೇನೋ ! ಆದರೇನು ಮಾಡುವುದು ? ವಾಸ್ತವಕ್ಕಿಂತ ವೈಭವವೇ ಹೆಚ್ಚು ಜನಪ್ರಿಯ !

ಕರ್ನಾಟಕ ಏಕೀಕರಣಕ್ಕೆ ಮುಂಚೆ ಕನ್ನಡ ಭಾಷೆಯ ಬಳಕೆಯಿದ್ದ ಪ್ರದೇಶಗಳು ಸುಮಾರು ಇಪ್ಪತ್ತು ಆಡಳಿತ ಘಟಕ ಗಳಲ್ಲಿ ಹಂಚಿಹೋಗಿದ್ದವೆಂದು ಚರಿತ್ರೆಕಾರರು ಗುರುತಿಸಿದ್ದಾರೆ. ಹೀಗೆ ವಿವಿಧ ಆಡಳಿತ ಘಟಕಗಳಲ್ಲಿ ಸೇರಿದ 'ಕನ್ನಡ'ವು ಆಯಾ ಪ್ರದೇಶದ ವಿವಿಧ ಪ್ರಭಾವಗಳಿಗೆ ಒಳಗಾಗಿ ಪದಸಂಪತ್ತು ಮತ್ತು ಉಚ್ಚಾರಗಳಲ್ಲಿ ವೈವಿಧ್ಯತೆಯನ್ನು ಪಡೆಯಿತು. ಇದರ ಫಲವಾಗಿ ಒಂದೇ ಮಾದರಿಯ ಕನ್ನಡದ ಬದಲು ವಿವಿಧ ಮಾದರಿಗಳ ಕನ್ನಡ ಅಥವಾ 'ಕನ್ನಡಂಗಳು' ಬಳಕೆಯಾದವು. ಹೀಗೆ ಕನ್ನಡ ಬಳಕೆಯು ಸಾಂದ್ರವಾಗಿದ್ದ ಪ್ರದೇಶಗಳನ್ನು ಭೌಗೋಳಿಕವಾಗಿ ಒಗ್ಗೂಡಿಸುವ ಹಂಬಲದಿಂದ ಏಕೀಕರಣದ ಕಲ್ಪನೆ ಹುಟ್ಟಿತೆಂದು ಭಾವಿಸಬಹುದಾಗಿದೆ. ೨೦-೭-೧೮೯೦ರಲ್ಲಿ ಪ್ರಾರಂಭವಾದ ಕರ್ನಾಟಕ ವಿದ್ಯಾವರ್ಧಕ ಸಂಘದ (ಧಾರವಾಡ) 'ವಾಗ್ಭೂಷಣ' ಪತ್ರಿಕೆಯಲ್ಲಿ ಶ್ರೀ ಆಲೂರು ವೆಂಕಟರಾಯರು 'ಕರ್ನಾಟಕವು ಒಂದಾಗದಿದ್ದರೆ ಕರ್ನಾಟಕಸ್ಥರ ಏಳಿಗೆಯು ಎಂದೆಂದಿಗೂ ಸಾಧ್ಯವಿಲ್ಲ' (೧೯೦೭) ಎಂದು ಪ್ರತಿಪಾದಿಸಿದರು. ೧೯೧೭ರ ಜನವರಿ ೭ರಂದು ಕರ್ನಾಟಕ ವಿದ್ಯಾವರ್ಧಕ ಸಂಘವು 'ಬ್ರಿಟಿಷರ ಅಧಿಕಾರಕ್ಕೆ ಒಳಪಟ್ಟ ಕನ್ನಡದ ಪ್ರದೇಶಗಳನ್ನು ಒಗ್ಗೂಡಿಸಿ ಒಂದು ರಾಜಕೀಯ ಘಟಕವನ್ನಾಗಿಸಿ, ಅದನ್ನು ಕರ್ನಾಟಕವೆಂದು ಕರೆಯಬೇಕು' ಎಂಬ ಗೊತ್ತುವಳಿಯನ್ನು ಸ್ವೀಕರಿಸಿತು. ೧೯೧೫ರಲ್ಲಿ ಸ್ಥಾಪನೆಯಾದ ಕನ್ನಡ ಸಾಹಿತ್ಯ ಪರಿಷತ್ತು ಕರ್ನಾಟಕ ಏಕೀಕರಣಕ್ಕೆ ಒತ್ತಾಯ ಮಾಡುತ್ತಲೇ ಇತ್ತು. ಕರ್ನಾಟಕದ ಸೋಷಲಿಸ್ಟರು ಮತ್ತು ಕಮ್ಯುನಿಸ್ಟರು ಏಕೀಕರಣದ ಪ್ರಬಲ ಪ್ರತಿಪಾದಕರಾಗಿದ್ದರು. ೧೯೨೮ರಲ್ಲಿ ರಚಿತವಾದ ಮೋತಿಲಾಲ್ ನೆಹರು ನೇತೃತ್ವದ 'ರಾಜ್ಯಘಟನಾ ಸಮಿತಿ'ಯು ಕರ್ನಾಟಕ ಪ್ರಾಂತ್ಯ ರಚನೆಗೆ ಒಲವು ವ್ಯಕ್ತಪಡಿಸಿದ್ದರೂ ೧೯೫೬ರವರೆಗೆ ಏಕೀಕರಣದ ಆಸೆ ಕೈಗೂಡಲಿಲ್ಲ. ೧೯೫೩ರಲ್ಲಿ ರಚನೆಯಾದ ಫಜಲ್ ಆಲಿ ಆಯೋಗದ ವರದಿಯನ್ನಾಧರಿಸಿ ೧೯೫೬ರ ನವೆಂಬರ್ ಒಂದರಂದು 'ವಿಶಾಲ ಮೈಸೂರು' ಅಸ್ತಿತ್ವಕ್ಕೆ ಬಂದಿತು. ೧೯೭೩ರ ನವೆಂಬರ್ ಒಂದರಂದು ಶ್ರೀ ದೇವರಾಜ ಅರಸು ನೇತೃತ್ವದ ಸರ್ಕಾರವು 'ವಿಶಾಲ ಮೈಸೂರು' ರಾಜ್ಯಕ್ಕೆ 'ಕರ್ನಾಟಕ' ಎಂದು ನಾಮಕರಣ ಮಾಡಿತು.

ಕನ್ನಡವೇ ಪ್ರಧಾನ ಭಾಷೆಯಾಗಿ ಬಳಕೆಯಲ್ಲಿರುವ ತಮಿಳುನಾಡಿನ ತಾಳವಾಡಿ ಫಿರ್ಕಾ, ಕೇರಳದಲ್ಲಿರುವ ಕಾಸರಗೋಡು, ಹೊಸದುರ್ಗ, ಆಂಧ್ರದ ಆದೋನಿ, ಮಡಕಶಿರಾ ಮುಂತಾದ ಪ್ರದೇಶಗಳು, ಮಹಾರಾಷ್ಟ್ರದ ಅಕ್ಕಲಕೋಟೆ, ಸೊಲ್ಲಾಪುರ ಮುಂತಾದವು ಕರ್ನಾಟಕದ ಭಾಗವಾಗಿಲ್ಲವೆಂಬ ಬೇಸರ ಇದ್ದೇ ಇದೆ. ಕನ್ನಡ ಪ್ರಧಾನ ಪ್ರದೇಶಗಳು ಕರ್ನಾಟಕಕ್ಕೆ ಸೇರಬೇಕಾದ್ದು ನ್ಯಾಯವೇ ಆಗಿದೆ. ಅದೇ ಸಂದರ್ಭದಲ್ಲಿ ಏಕೀಕರಣದ ಆಶಯವನ್ನು ಒಳಗೊಂಡಂತೆ ಮತ್ತಷ್ಟು ಮುನ್ನೋಟದ ಕ್ರಿಯೆ ಮುಖ್ಯವೆಂಬುದನ್ನು ನಾವು ಮರೆಯಬಾರದು.

ಕರ್ನಾಟಕ ಏಕೀಕರಣದ ಕೇಂದ್ರ ಪ್ರಜ್ಞೆಯೆಂದರೆ – ಭಾಷೆ ಮತ್ತು ಭೂಗೋಳ. ಇದು ಅಂದಿನ ಚಾರಿತ್ರಿಕ ಅಗತ್ಯ. ಆದರೆ ಇಂದಿಗೆ ಅದೊಂದೇ ಆದರ್ಶವಲ್ಲ. ಭೂಗೋಳ ಪ್ರಜ್ಞೆಯೇ ಅಂತಿಮವಲ್ಲ. ಇದರರ್ಥ– ಕರ್ನಾಟಕಕ್ಕೆ ನ್ಯಾಯವಾಗಿ ಸೇರಬೇಕಾದ ಪ್ರದೇಶಗಳ ಸೇರ್ಪಡೆಗೆ ಒತ್ತಾಯ ಮಾಡಬಾರದೆಂದಲ್ಲ. 'ಭೂಗೋಳ'ವನ್ನು ಅರ್ಥರಹಿತವಾಗಿ ಬಿಂಬಿಸಿ, ಕರ್ನಾಟಕದ ವಿಸ್ತೀರ್ಣವನ್ನು ತಪ್ಪಾಗಿ ಗ್ರಹಿಸಿ, ಕನ್ನಡಿಗರಲ್ಲಿ 'ಸಾಮ್ರಾಜ್ಯಶಾಹಿ ಪ್ರಜ್ಞೆ'ಯನ್ನು ಮೂಡಿಸುವ ಬದಲು ಪ್ರಜಾಪ್ರಭುತ್ವ ಪ್ರಜ್ಞೆಯನ್ನು ಜಾಗ್ರತಗೊಳಿಸುವುದು ಇಂದು ಅಗತ್ಯವಾಗಿದೆ. ನನ್ನ ಈ ಮಾತನ್ನು ಮುಂದಿನಂತೆ ವಿಸ್ತರಿಸಬಯಸುತ್ತೇನೆ: ಕನ್ನಡನಾಡು ಎಷ್ಟು ದೊಡ್ಡದಾಗಿತ್ತು ಗೊತ್ತೆ – ಎಂದು ವಿಸ್ಮಯ ಹುಟ್ಟಿಸುತ್ತ ಅದರ ವಿಸ್ತೀರ್ಣವನ್ನು ಹೇಳಿ ಹೆಮ್ಮೆಪಡುವ ಪ್ರವೃತ್ತಿಯೊಂದು ನಮ್ಮಲ್ಲಿ ಚಾಲ್ತಿಯಲ್ಲಿದೆ. ಉದಾಹರಣೆಗೆ – 'ಕಾವೇರಿಯಿಂದಮಾ ಗೋದಾವರಿವರೆಮಿರ್ದ ನಾಡು' ಕನ್ನಡನಾಡು ಎಂದು ಹೇಳುವುದು, ಕನ್ನಡನಾಡು ಉತ್ತರ ಭಾರತಕ್ಕೂ ವ್ಯಾಪಿಸಿತ್ತೆಂದು ಹಿಗ್ಗುವುದು, ಈಗ ಇರುವ 'ಕನ್ನಡ ಸಾಮ್ರಾಜ್ಯ' ಚಿಕ್ಕದಾಗಿದೆ ಎಂದು ಕುಗ್ಗುವುದು – ಈ ಅಂಶಗಳೆಲ್ಲ ಸಮಕಾಲೀನ 'ಭೂಗೋಳ ಪ್ರಜ್ಞೆ'ಯ ಭಾಗವಾಗಿವೆ. ಇಲ್ಲಿ ಒಂದು ಮುಖ್ಯ ಪ್ರಶ್ನೆಯನ್ನು ನಾವು ಉತ್ತರಿಸಿಕೊಳ್ಳಬೇಕಾಗಿದೆ.

ಪ್ರೊ॥ ಬರಗೂರು ರಾಮಚಂದ್ರಪ್ಪ

ಹಿಂದೆ ವಿವಿಧ ರಾಜರ ಕಾಲದಲ್ಲಿ ವಿಸ್ತಾರಗೊಂಡಿದ್ದ ಸಾಮ್ರಾಜ್ಯಗಳು 'ಕನ್ನಡ ಸಾಮ್ರಾಜ್ಯಗಳೊ' ಅಥವಾ ಕನ್ನಡ ಬಲ್ಲ 'ರಾಜರ ಸಾಮ್ರಾಜ್ಯಗಳೊ'? ಅಚ್ಚ ಕನ್ನಡ ವಂಶವೆಂದು ಹೆಸರಾದ 'ಕದಂಬರು' ಒಂದು ಹಂತದಲ್ಲಿ ನರ್ಮದಾನದಿಯವರೆಗೆ ಸಾಮ್ರಾಜ್ಯವನ್ನು ವಿಸ್ತರಿಸಿದ್ದರು. ಹಾಗೆಂದು ಕನ್ನಡನಾಡು ನರ್ಮದಾನದಿಯವರೆಗೆ ಇತ್ತು ಎಂದು ಹೇಳಲಾದೀತೆ? ಬಾದಾಮಿ ಚಾಲುಕ್ಯರ ಕಾಲದಲ್ಲಿ ಅಜಂತ, ಎಲ್ಲೋರ, ನಾಸಿಕ್ ಮುಂತಾದವು, ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಪಂಡರಾಪುರ, ಓರಂಗಲ್ಲು, ದೇವಗಿರಿ ಮುಂತಾದವು, ರಾಷ್ಟ್ರಕೂಟರ ಆಳ್ವಿಕೆಯಲ್ಲಿ ನಾಸಿಕ್, ಅಜಂತ, ಎಲ್ಲೋರ, ಇತ್ಯಾದಿ, ಹೊಯ್ಸಳ ಸಾಮ್ರಾಜ್ಯದಲ್ಲಿ ಕಂಚಿ, ಕಣ್ಣಾನೂರು ಮುಂತಾದವು ಸೇರಿದ್ದವು. ಹಾಗೆಂದ ಕೂಡಲೇ ಇವೆಲ್ಲ ಕನ್ನಡ ಪ್ರದೇಶಗಳೆ? ಕನ್ನಡನಾಡು ಅಷ್ಟೊಂದು ವಿಸ್ತಾರ ವಾಗಿತ್ತೆಂದು ತೀರ್ಮಾನಿಸಬಹುದೆ? ಅಥವಾ ಆಯಾ ರಾಜರ ಕಾಲದ ರಾಜಕೀಯ ಸಾಮ್ರಾಜ್ಯಗಳೆಂದು ಕರೆಯುವುದು ಸರಿಯಾದುದೆ? ಉತ್ತಮ ಉತ್ತರವೆಂದರೆ – ವಿಜಯನಗರ ಸಾಮ್ರಾಜ್ಯ. ವಿಜಯನಗರ ಸಾಮ್ರಾಜ್ಯ ಮತ್ತು ಕೃಷ್ಣದೇವರಾಯನನ್ನು ಕರ್ನಾಟಕದವರು ನಮ್ಮದು ಮತ್ತು ನಮ್ಮವನೆಂದು ತಿಳಿದಂತೆ ಆಂಧ್ರದವರೂ ತಿಳಿದಿದ್ದಾರೆ. ಅಷ್ಟೇ ಅಲ್ಲ, ಕೃಷ್ಣದೇವರಾಯನ ಹೆಸರಿನಲ್ಲಿ ಒಂದು ವಿಶ್ವವಿದ್ಯಾಲಯ ವನ್ನೇ ಸ್ಥಾಪಿಸಿದ್ದಾರೆ. ಹಾಗಾದರೆ ವಿಜಯನಗರ ಸಾಮ್ರಾಜ್ಯ ಕೇವಲ ಕನ್ನಡಿಗರದೆ? ಕೇವಲ ತೆಲುಗರದೆ? ಕೃಷ್ಣದೇವರಾಯ ಕನ್ನಡಿಗರಿಗೆ ಮಾತ್ರ ಸೇರಿದವನೆ? ಹಾಗೆಂದಾದರೆ ತೆಲುಗರು ತಮ್ಮವನೆಂದು ಯಾಕೆ ಭಾವಿಸಿದ್ದಾರೆ? ವಾಸ್ತವ ಸಂಗತಿ ಯೆಂದರೆ ವಿಜಯನಗರ ಸಾಮ್ರಾಜ್ಯದ ಆಡಳಿತದಲ್ಲಿ ತೆಲುಗು ಮತ್ತು ಕನ್ನಡ ಎರಡು ಭಾಷೆಗಳೂ ಇದ್ದವು. ಒಂದು ಮೂಲದ ಪ್ರಕಾರ ತೆಲುಗು ಮೊದಲ ಭಾಷೆ; ಕನ್ನಡ ಎರಡನೇ ಭಾಷೆ. ಮೊದಲನೆಯದೊ ಎರಡನೆಯದೊ, ಒಟ್ಟಿನಲ್ಲಿ ಅದು ದ್ವಿಭಾಷಿಕ ಸಾಮ್ರಾಜ್ಯ, ಕೇವಲ ಕನ್ನಡ ಸಾಮ್ರಾಜ್ಯವಲ್ಲ. ಆದ್ದರಿಂದ ಕನ್ನಡ ಬಲ್ಲ ರಾಜರು ಆಳುತ್ತಿದ್ದ ಪ್ರದೇಶಗಳನ್ನು ಇಡಿಯಾಗಿ ಕನ್ನಡ ಸಾಮ್ರಾಜ್ಯಗಳೆಂದು ಕರೆಯಲು ಸಾಧ್ಯವಿಲ್ಲ. ಅವು ರಾಜರ ಸಾಮ್ರಾಜ್ಯಗಳೇ ಹೊರತು ಭಾಷೆಯ ಸಾಮ್ರಾಜ್ಯಗಳಲ್ಲ. ರಾಜಕೀಯ ಭೂಗೋಳವನ್ನು ಭಾಷಾ ಭೂಗೋಳವೆಂದು ಭಾವಿಸುವುದು ಸರಿಯಲ್ಲ.

ಆದರೂ ಕನ್ನಡಿಗರಿಗೆ ಈ ಬಗ್ಗೆ ಸೂಕ್ತ ಮಾಹಿತಿ ನೀಡದೆ ಭೂಗೋಳ ಭ್ರಮೆಯ ಬೀಗುವಂತೆ ಮಾಡುವ ಪ್ರವೃತ್ತಿಯೊಂದು ನಮ್ಮಲ್ಲಿ ಮುಂದುವರಿಯುತ್ತಲೇ ಇದ ರಾಜಕೀಯ ಭೂಗೋಳವನ್ನು ಗತವೈಭವದ ಭಾಗವಾಗಿಸಿ ಭಾಷಾ ಪ್ರೇಮವ ಪ್ರತಿಪಾದಿಸಲಾಗುತ್ತಿದೆ. ಎಲ್ಲರೂ ಈ ಪ್ರತಿಪಾದನೆಯ ಪಾಲುದಾರರಲ್ಲವಾದರ ಇದೊಂದು ಜನಪ್ರಿಯ ಮಾದರಿಯಾಗಿದೆಯೆನ್ನುವುದಂತೂ ನಿಜ. ಇನ್ನಾದರೂ ನಾ ಸ್ಪಷ್ಟಪಡಿಸಬೇಕು: ರಾಜರ ಸಾಮ್ರಾಜ್ಯಗಳೆಲ್ಲ ಭಾಷೆಯ ಸಾಮ್ರಾಜ್ಯಗಳಲ್ಲ. ಅಂದ ರಾಜಕೀಯ ಭೂಗೋಳವು ಭಾಷಾ ಭೂಗೋಳವಲ್ಲ. ನಮಗಿಂದು ಬೇಕಾದ ಭೂಗೋಳಪ್ರಜ್ಞೆಯನ್ನು ಮೀರಿದ ಸಾಮಾಜಿಕ ಪ್ರಜ್ಞೆ; ರಾಜಕೀಯ ಪ್ರಜ್ಞೆ. ಆ ಭೂಗೋಳ ಪ್ರಜ್ಞೆಗೂ ಅರ್ಥಪೂರ್ಣ ಆಯಾಮ ಲಭ್ಯವಾಗುತ್ತದೆ.

ಭಾಷಾಚಿಂತನೆಗೆ ಸಾಮಾಜಿಕ - ರಾಜಕೀಯ ಪ್ರಜ್ಞೆಯ ಹಿನ್ನೆಲೆ ಒದಗಿದಾ ಮೂಡುವ ತಾತ್ವಿಕ ಹೊಳಹುಗಳ ವಿಸ್ತಾರ ಮಹತ್ವಪೂರ್ಣವಾದುದು. ನವ ಸಮಾಜದ ಸಂರಚನೆಯ ಸ್ವರೂಪ ಮತ್ತು ಭಾಷೆಯ ಸಂಬಂಧವನ್ನು ಅರ್ಥೈ ಕೊಳ್ಳುವ ಮೂಲಕ ಭಾಷಾಪ್ರಜ್ಞೆ ಮತ್ತು ಸಾಮಾಜಿಕ ಪ್ರಜ್ಞೆಗಳ ಸಾವಯವತೆಯನ ಸಾಧಿಸುವುದು ಅಗತ್ಯ. ಆಗ ಮಾತ್ರ ನಮ್ಮ ಸಮಾಜದ ಎಲ್ಲ ಜನವರ್ಗಗಳು - ವಿಶೇಷವಾಗಿ – ತುಳಿತಕ್ಕೊಳಗಾದ ಸಮುದಾಯಗಳು, ಭಾಷಾಭಿಮಾನದ ಭಾಗವಾಗುತ್ತವೆ. ಈ ದೃಷ್ಟಿಯಿಂದ ನೋಡಿದಾಗ, ನಮ್ಮ ಭಾಷಾ ಚಿಂತನೆ ಮತ್ತು ಕ್ರಿಯೆಗಳು ಎಷ್ಟರಮಟ್ಟಿಗೆ ಶೋಷಿತ ಸಮುದಾಯಗಳನ್ನು ಒಳಗೊಂಡಿವೆಯೆಂಬ ಪ್ರಶ್ನೆಗೆ ಉತ್ತೇಜಕ ಉತ್ತರ ದೊರೆಯುವುದಿಲ್ಲ. ಸಾಮಾಜಿಕ ಚಳವಳಿ ಮತ್ತು ಭಾಷಾ ಚಳವಳಿಗಳ ನಡುವೆ ಸಂಬಂಧವೇರ್ಪಟ್ಟಾಗ ನಮ್ಮ ಚಿಂತನಾ ಕ್ರಮಕ್ಕೆ ಲಭ್ಯವಾಗುವ ಆಯಾಮ ಅನನ್ಯವಾದುದು. ಕರ್ನಾಟಕದಲ್ಲಿ ಇದು ಸಾಧ್ಯವಾಗಿದೆಯೆ? ಸಾಧ್ಯವಾಗಿಲ್ಲ ವಾದರೆ ಏನು ಕಾರಣ? ಇಂತಹ ಪ್ರಶ್ನೆಗಳ ಮೂಲಕ ಆತ್ಮಾವಲೋಕನದ ಅಗತ್ಯವಿದೆಯೆಂದು ನಾನು ಭಾವಿಸುತ್ತೇನೆ. ತಮಿಳುನಾಡಿನ ದ್ರಾವಿಡ ಚಳುವಳಿ ಮತ್ತು ಭಾಷಾ ಚಳವಳಿ ಬೇರೆಯಾಗಿರಲಿಲ್ಲ. ಕೇರಳದ ಸಮೂಹ ಚಳವಳಿಗಳು ಮತ್ತು ಭಾಷಾ ಚಳವಳಿಗಳು ಪ್ರತ್ಯೇಕವಾಗಿರಲಿಲ್ಲ. ಕರ್ನಾಟಕದಲ್ಲಿ ಮಾತ್ರ ಪ್ರತ್ಯೇಕ. ಭಾಷಾ


*With Best Compliments From*



**TELECOM EMPLOYEES CO-OP. HOUSING SOCIETY LIMITED**

No. 6/7, Rajbhavan Road, Bangalore - 560 001

ಳವಳಿ ಮತ್ತು ಸಾಮಾಜಿಕ ಚಳವಳಿಗಳು ಅಂತರ್ ಸಂಬಂಧ ಬೆಳೆಸುವ ವಾತಾವರಣ ರ್ಮಾಣವಾಗಬೇಕು. ಸಾಮಾಜಿಕ ಚಳವಳಿಗಳಿಗೆ ಭಾಷಾ ಪ್ರಜ್ಞೆ ಮತ್ತು ಭಾಷಾ ಳವಳಿಗೆ ಸಾಮಾಜಿಕ ಪ್ರಜ್ಞೆ ಪರಸ್ಪರ ಪೂರಕವಾಗಬೇಕು.

ಇನ್ನು, ರಾಜಕೀಯ ಪ್ರಜ್ಞೆಯೆಂದರೆ, ಕೇಂದ್ರ ಸರ್ಕಾರದ ಜೊತೆ ಚೌಕಾಶಿ ಾಡುವ ಪ್ರಜ್ಞೆಯಲ್ಲ. ಮೇಲು ಕೀಳಿಲ್ಲದ ರಾಜಕೀಯ ಸೈದ್ಧಾಂತಿಕತೆಯ ವಿವೇಕ ಮಗಿದ್ದರೆ, ಅದು ಭಾಷಾ ಪ್ರಜ್ಞೆಯಲ್ಲಿ ಕೆಲಸ ಮಾಡುವ ಕ್ರಮವೇ ವಿಭಿನ್ನ. ಮಾನತೆಯ ಆಶಯವನ್ನುಳ್ಳ ರಾಜಕೀಯ ಪ್ರಜ್ಞೆ ಮತ್ತು ಭಾಷಾ ಪ್ರಜ್ಞೆಗಳು ನಮ್ಮ ಂತನೆ ಹಾಗೂ ಹೋರಾಟಕ್ಕೆ ದೂರದೃಷ್ಟಿಯ ದೃಢತೆಯನ್ನು ತಂದುಕೊಡುತ್ತವೆ.

ರಾಜಕೀಯ ಪಕ್ಷ ಮತ್ತು ರಾಜಕೀಯ ಪ್ರಜ್ಞೆ – ಎರಡೂ ಒಂದೇ ಅಲ್ಲ. ಜಕೀಯ ಪಕ್ಷಗಳಿಗೆ ಅಗತ್ಯವಾಗಿ ರಾಜಕೀಯ ಪ್ರಜ್ಞೆ ಇರಬೇಕು. ಆದರೆ ರಾಜಕೀಯ ಜ್ಞೆಯೆನ್ನುವುದು ರಾಜಕೀಯ ಪಕ್ಷವೇ ಆಗಬೇಕಿಲ್ಲ. ರಾಜಕೀಯ ವಿವೇಕವಾಗಿದ್ದರೆ ುಕು. ಕನ್ನಡ ಪ್ರಜ್ಞೆಗೆ ಇಂದು ಬೇಕಾದ್ದು ಸಾಮಾಜಿಕ ಮತ್ತು ರಾಜಕೀಯ ವಿವೇಕ.

ಕನ್ನಡಕ್ಕೆ ಅಗಾಧ ಸಾಂಸ್ಕೃತಿಕ ಶಕ್ತಿಯಿದೆ. ಆದರೆ ಅಗತ್ಯ ಪ್ರಮಾಣದ ಸಾಮಾಜಿಕ ತ್ತಿ ಮತ್ತು ರಾಜಕೀಯ ಶಕ್ತಿಯ ಕೊರತೆಯಿದೆ. ಈ ಕೊರತೆಯನ್ನು ತುಂಬಿಕೊಳ್ಳುವ ಯೆಯಲ್ಲಿ ಕನ್ನಡ ಪರಿಕಲ್ಪನೆಯ ಪ್ರಬುದ್ಧತೆ ಅಡಗಿದೆ.

ಈ ದಿಕ್ಕಿನಲ್ಲಿ ನಾವೆಷ್ಟು ಕೆಲಸ ಮಾಡುತ್ತಿದ್ದೇವೆ ? ನಮ್ಮ ಜನರಿಗೆ ನಾವು ಸರಿಯಾದ ಾಹಿತಿ ಕೊಡುತ್ತಿದ್ದೇವೆಯೆ ? ಕನ್ನಡದ ಆದ್ಯತೆಗಳನ್ನು ನಾವು ಗುರುತಿಸಿ ೊಂಡಿದ್ದೇವೆಯೆ ? ಈ ಪ್ರಶ್ನೆಗಳು ಮುಖ್ಯ. ಸುಮ್ಮಸುಮ್ಮನೆ ಕನ್ನಡಿಗರನ್ನು ರಭಿಮಾನಿಗಳೆಂದು ದೂಷಿಸುವ ದೊಡ್ಡಸ್ತಿಕೆಯನ್ನು ಮೆರೆಯುವ ಬದಲು ಕನ್ನಡ ರ ಚಿಂತನೆಯಲ್ಲಿರುವ ಕೊರತೆಗಳ ಬಗ್ಗೆ ಆತ್ಮಾವಲೋಕನ ಮಾಡಿಕೊಳ್ಳುವುದು ುತ್ತಷ್ಟು ಮುಖ್ಯ. ಈಗ ನೋಡಿ ; 'ಕನ್ನಡದ ರಕ್ಷಣೆಗೆ ಪ್ರಾಧಿಕಾರಗಳೂ ಸಮಿತಿಗಳೂ ೀಕೆ, ಇದು ಕನ್ನಡದ ಸ್ಥಿತಿ ; ಅವಮಾನ'– ಎಂದೆಲ್ಲ ಅಭಿಮಾನದ ಪಾಠ ಹೇಳುವ ವೃತ್ತಿ ವಲಯವೊಂದು ನಮ್ಮಲ್ಲಿದೆ. ಇಂತಹ ಮಾತುಗಳನ್ನು ಕೇಳಿ ಕೇಳಿ ರ್ನಾಟಕದಲ್ಲಿ ಮಾತ್ರವೇ ಇಂತಹ ಹೀನಾಯ ಸ್ಥಿತಿ, ಬೇರೆ ರಾಜ್ಯಗಳಲ್ಲಿ ಎಲ್ಲವೂ ಸ್ಥಿತಿ ಎಂಬ ಅಭಿಪ್ರಾಯ ಜನಪ್ರಿಯವಾಗಿಬಿಟ್ಟಿದೆ. ಆದರೆ ವಸ್ತುಸ್ಥಿತಿಯೇ ೇರೆಯಿದೆ. ತಮಿಳುನಾಡಿನಲ್ಲಿ ತಮಿಳಿನ ಅಭಿವೃದ್ಧಿಗಾಗಿ 'ತಮಿಳು ಅಭಿವೃದ್ಧಿ ಭಾಗ'ವನ್ನು ಸ್ಥಾಪಿಸಲಾಗಿದೆ. ಈ ವಿಭಾಗದಿಂದ ನಾನು ಖುದ್ದು ತಿಳಿದುಕೊಂಡ ಾಹಿತಿಯ ಪ್ರಕಾರ – ತಮಿಳುನಾಡು ಸರ್ಕಾರದ ಸಚಿವಾಲಯದಲ್ಲಿ ಈಗಲೂ . ೩೦ರಿಂದ ೩೫ರಷ್ಟು ಇಂಗ್ಲಿಷ್ ವಿಜೃಂಭಿಸುತ್ತಿದೆ. ಅದರ ನಿಯಂತ್ರಣ ಮತ್ತು ಮಿಳು ಅನುಷ್ಠಾನಕ್ಕಾಗಿ 'ತಮಿಳು ಅಭಿವೃದ್ಧಿ ವಿಭಾಗ' ಪ್ರಯತ್ನಿಸುತ್ತಿದೆ. ಆದರೆ ಚಿವಾಲಯದ ಹೊರತಾಗಿ ಇತರ ಕಡೆ ತಮಿಳು ವ್ಯಾಪಿಸಿಕೊಂಡಿದೆ. ಕೇರಳ ಸರ್ಕಾರ ುತ್ತು ಆಂಧ್ರ ಪ್ರದೇಶ ಸರ್ಕಾರಗಳೂ ತಂತಮ್ಮ ರಾಜ್ಯ ಭಾಷೆಗಳ ಅಭಿವೃದ್ಧಿ ಮತ್ತು ನುಷ್ಠಾನಕ್ಕಾಗಿ ವಿಭಾಗಗಳನ್ನೂ ಸಮಿತಿಗಳನ್ನೂ ರಚಿಸಿಕೊಂಡಿವೆ. ಮೂರ್‍ನಾಲ್ಕು ರ್ಷಗಳ ಹಿಂದೆ ಕೇರಳ ಸರ್ಕಾರವು ಸುತ್ತೋಲೆಯೊಂದನ್ನು ಹೊರಡಿಸಿ 'ಕಡೇ ಪಕ್ಷ ಂದಾಯ, ಶಿಕ್ಷಣ ಮತ್ತು ಸಹಕಾರ ಇಲಾಖೆಗಳಲ್ಲಿ ಪೂರ್ಣ ಮಲೆಯಾಳಂ ಳಸಬೇಕು' ಎಂದು ಆದೇಶಿಸಿತು. ಇದರರ್ಥ ಏನು ? ಅಲ್ಲಿಯೂ ಆಡಳಿತ ಾಷೆಯಾಗಿ ಮಲೆಯಾಳಂ ಅನುಷ್ಠಾನವು ಪೂರ್ಣ ಪ್ರಮಾಣದಲ್ಲಿ ಆಗಿಲ್ಲ. ಆಂಧ್ರ ದೇಶದಲ್ಲೂ ಬಹಳ ವ್ಯತ್ಯಾಸವೇನಿಲ್ಲ. ಆಂಧ್ರ ಪ್ರದೇಶದ ಹದಿಮೂರು ಜಿಲ್ಲೆಗಳಲ್ಲಿ ುಗಿನ ಜೊತೆಗೆ ಉರ್ದುವನ್ನು ಎರಡನೇ ಆಡಳಿತ ಭಾಷೆ ಎಂದು ೋಷಿಸಲಾಗಿದೆ. ಕೇರಳವು ಕಾಸರಗೋಡನ್ನು 'ಅಲ್ಪಸಂಖ್ಯಾತರ ಪ್ರದೇಶ' ಎಂದು ಧಿಕೃತವಾಗಿ ಘೋಷಿಸಿದೆ. ಕರ್ನಾಟಕದಲ್ಲಿ ಇಂತಹ ಸನ್ನಿವೇಶ ಸೃಷ್ಟಿಯಾಗಿಲ್ಲ. ದರೂ ಕೆಲವೊಮ್ಮೆ ಅಲ್ಪಸಂಖ್ಯಾತರೇ ಕನ್ನಡಕ್ಕೆ ಅಡ್ಡಿಯೇನೊ ಎಂಬಂತೆ ರ್ಿಸಲಾಗುತ್ತಿದೆ. ಅಂತಹ ಅಭಿಪ್ರಾಯವನ್ನು ಬಿತ್ತಲಾಗುತ್ತಿದೆ.

೩೧-೩-೨೦೦೪ರಲ್ಲಿ ಕರ್ನಾಟಕ ಸರ್ಕಾರವು ಒಂದು ಆದೇಶವನ್ನು ಹೊರಡಿಸಿ ರ್ಕಾರದ ಪ್ರಮುಖ ಆದೇಶ ಅಥವಾ ಸುತ್ತೋಲೆಗಳನ್ನು ಅಲ್ಪಸಂಖ್ಯಾತರ ಭಾಷೆಯಲ್ಲಿ ದಗಿಸಲು ಅವಕಾಶ ಕಲ್ಪಿಸಿತು. ಇದು ಈ ರೀತಿಯ ಮೊದಲ ಆದೇಶವೇನೂ ಅಲ್ಲ.

ಮೊದಲು ೫-೧೧-೧೯೬೬, ೨೪-೧೧-೧೯೮೨, ೧೬-೧೧-೧೯೯೦, -೫-೧೯೯೯ ಮತ್ತು ೩೦-೭-೨೦೦೧ರಲ್ಲೂ –ಒಟ್ಟು ಐದು ಸಾರಿ ಈ ರೀತಿಯ ದೇಶವನ್ನು ಹೊರಡಿಸಲಾಗಿತ್ತು. ಆಗ ಆಗದೆ ಇರುವ ಧಕ್ಕೆ ೩೧-೩-೨೦೦೪ರ ದೇಶದಿಂದ ಆಗುತ್ತದೆಯೆಂದು ಅಬ್ಬರ ಮಾಡಿದ ಕೆಲವರು ಈ ಆದೇಶವನ್ನು ಹಿಂದಕ್ಕೆ ಪಡೆಯುವಂತೆ ಮಾಡಿ ತೃಪ್ತಿಪಟ್ಟುಕೊಂಡರು. ಆದರೆ ಮೊದಲ ಐದು ಆದೇಶಗಳು ಅಸ್ತಿತ್ವದಲ್ಲೇ ಇವೆ ! ಕನ್ನಡಕ್ಕೆ ಕಂಟಕವಾಗದಂತೆ ಉಳಿದಿವೆ ! ಹಾಗಾದರೆ ೩೧-೩-೨೦೦೪ರ ಆದೇಶವನ್ನು ವಿರೋಧಿಸಿದವರ ಮನೋಧರ್ಮ ಯಾವುದಾಗಿತ್ತು ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ. ಮುಂದುವರೆದು ಇನ್ನೊಂದು ಮಾಹಿತಿಯನ್ನು ಕೊಡುವುದಾದರೆ, ಕರ್ನಾಟಕ ಸರ್ಕಾರವು ೧೯೯೯ರಲ್ಲಿ ೨೮, ೨೦೦೦ದಲ್ಲಿ ೧೧, ೨೦೦೧ರಲ್ಲಿ ೧೦, ೨೦೦೨ರಲ್ಲಿ ೨ ಮತ್ತು ೨೦೦೩ರಲ್ಲಿ ೩ ಉರ್ದು ಆದೇಶಗಳನ್ನೂ ಅನುಕ್ರಮವಾಗಿ ೨೮,೧೧,೧೦,೦ ಮತ್ತು ೦ ಆದೇಶಗಳನ್ನು ಮರಾಠಿಯಲ್ಲೂ ಹೊರಡಿಸಿತ್ತು. ಅಂದರೆ ೩೧-೩-೨೦೦೪ರ ಆದೇಶಕ್ಕೆ ಮುಂಚಿನ ಐದು ವರ್ಷಗಳಲ್ಲಿ ಉರ್ದುವಿನ ೫೪ ಆದೇಶಗಳು ಮತ್ತು ಮರಾಠಿಯ ೪೯ ಆದೇಶಗಳು ಮಾತ್ರ ಬಂದಿದ್ದವು. ಅದೇ ಮಹಾರಾಷ್ಟ್ರದಲ್ಲಿ ೨೦೦೦ದಿಂದ ೨೦೦೪ ರೊಳಗೆ ೧೭೯ ಅಧಿನಿಯಮಗಳು ೬೭೯ ಆದೇಶಗಳೂ ಕನ್ನಡದಲ್ಲಿ ಬಂದಿದ್ದವು.

ಅಲ್ಪಸಂಖ್ಯಾತರ ಭಾಷೆಗಳಿಗೆ ಸಂವಿಧಾನಾತ್ಮಕವಾಗಿ ಇರುವ ರಕ್ಷಣೆಯನ್ನು ಪೂರೈಸುವ ಸಲುವಾಗಿ ರಾಜ್ಯ ಸರ್ಕಾರಗಳು ಅಲ್ಪಸಂಖ್ಯಾತರ ಭಾಷೆಗಳಲ್ಲಿ ಪ್ರಮುಖ ಆದೇಶಗಳನ್ನು ಪ್ರಕಟಿಸುವ ಬಗ್ಗೆ ಆದೇಶ ಹೊರಡಿಸುತ್ತವೆ. ಅಲ್ಪಸಂಖ್ಯಾತರು




ಕೇಳಿದಾಗ ಅವರ ಭಾಷೆಯಲ್ಲಿ ಆದೇಶದ ಪ್ರತಿಗಳನ್ನು ಒದಗಿಸುತ್ತವೆ. (ತಮಿಳುನಾಡಿನ ಧರ್ಮಪುರಿಯಲ್ಲಿ ಕನ್ನಡದಲ್ಲಿ ಆದೇಶಗಳನ್ನು ಒದಗಿಸುವ ಅವಕಾಶವಿದೆ). ಇಂತಹ ಕ್ರಮದಿಂದ ಆಯಾ ರಾಜ್ಯಭಾಷೆಗಳಿಗೆ ಧಕ್ಕೆ ಬರುತ್ತದೆಯೆಂದಾದರೆ ಮಹಾರಾಷ್ಟ್ರ, ಆಂಧ್ರ, ಕೇರಳ, ತಮಿಳುನಾಡುಗಳಲ್ಲಿ ಕನ್ನಡಕ್ಕಿರುವ 'ಶೋಚನೀಯ ಸ್ಥಿತಿ' ಇಲ್ಲ ಎಂದು ಇಂಥವರು ಹೇಳಲು ಇರುವ ಆಧಾರವಾದರೂ ಏನು ? ಆ ರಾಜ್ಯಗಳಲ್ಲಿ ಅಲ್ಪಸಂಖ್ಯಾತರಿಗೆ ಎಲ್ಲ ರೀತಿಯ ಸಂವಿಧಾನಾತ್ಮಕ ಭಾಷಾ ಸೌಲಭ್ಯಗಳನ್ನೂ ಒದಗಿಸಲಾಗಿದೆಯಲ್ಲ! ಆದರೆ ಸಾಮಾಜಿಕ ಮತ್ತು ಭಾಷಾ ಚಳವಳಿಗಳು ಒಂದಾಗಿ ಕ್ರಿಯಾಶೀಲವಾದ ಕಾರಣದಿಂದ ಅಲ್ಲಿನ ಅಲ್ಪಸಂಖ್ಯಾತರು ದೈನಂದಿನ ವ್ಯವಹಾರದಲ್ಲಿ ಸರಾಗವಾಗಿ ರಾಜ್ಯ ಭಾಷೆಯನ್ನು ಬಳಸುವಂತಾಗಿದೆ. ಕರ್ನಾಟಕದಲ್ಲಿ ಆಗಬೇಕಾದ್ದು ಇದೇ ಹೊರತು 'ತಾಂತ್ರಿಕ' ಆದೇಶಗಳನ್ನು ನಕಾರಾತ್ಮಕವಾಗಿ ವೈಭವೀಕರಿಸಿ ಕನ್ನಡಿಗರನ್ನು ಉದ್ರೇಕಿಸುವುದಲ್ಲ. ಹಾಗೆ ನೋಡಿದರೆ, ಕರ್ನಾಟಕದ ಖಾಯಂವಾಸಿಗಳಾದ ಭಾಷಾ ಅಲ್ಪಸಂಖ್ಯಾತರೂ ಕನ್ನಡಿಗರೇ ಆಗಿರುತ್ತಾರೆ. ತಂತಮ್ಮ ಮಾತೃಭಾಷೆ ಮತ್ತು ಸಂಸ್ಕೃತಿಯನ್ನು ಉಳಿಸಿಕೊಂಡೇ ದೈನಂದಿನ ಬಳಕೆಯಲ್ಲಿ ಕನ್ನಡಬದ್ಧರಾಗುವುದು, ಅಲ್ಪಸಂಖ್ಯಾತರ ನೀತಿ ಮತ್ತು ಅಲ್ಪಸಂಖ್ಯಾತರ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಪ್ರೀತಿಯಿಂದ ನೋಡುವುದು ಕನ್ನಡಿಗರ ನೀತಿಯಾದಾಗ ಸಮಸ್ಯೆ ಇರುವುದಿಲ್ಲ. ಇಲ್ಲದ ಸಮಸ್ಯೆಗಳನ್ನು ಸೃಷ್ಟಿಸುವುದು, ತಪ್ಪು ಮಾಹಿತಿ ನೀಡುವುದು, ಆದ್ಯತೆಗಳನ್ನು ಪಲ್ಲಟಗೊಳಿಸುವುದು ಯಾಕೆ ? ಇದರಿಂದ ಲಾಭ ಯಾರಿಗೆ ? ಕನ್ನಡಕ್ಕೂ ಅಲ್ಲ, ಕನ್ನಡಿಗರಿಗೂ ಅಲ್ಲ.

ತಪ್ಪು ಮಾಹಿತಿ ಮತ್ತು ಆದ್ಯತೆಗಳ ಪಲ್ಲಟಕ್ಕೆ ಮತ್ತೊಂದು ಮುಖ್ಯ ನಿದರ್ಶನ ವೆಂದರೆ – ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ನೀಡಿಕೆಯ ವಿಷಯ. ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಸಿಕ್ಕಿದರೆ ನಾವು ಸಂತೋಷ ಪಡೋಣ. ಈ ನೆಪದಲ್ಲಿ ಭಾವುಕ ವಲಯಕ್ಕೆ ಸಂಭ್ರಮ ಮತ್ತು ವಿದ್ವತ್ ವಲಯಕ್ಕೆ ಉಪಯೋಗ ಆಗುವುದಾದರೆ ನಾವ್ಯಾಕೆ ಬೇಡವೆನ್ನೋಣ ? ಆದರೆ, ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಬೇಕೆಂದು ಕೇಳುವ ನೆಪದಲ್ಲಿ ಕನ್ನಡಿಗರಿಗೆ ತಪ್ಪು ಮಾಹಿತಿ ನೀಡುವುದು ಮತ್ತು

*With Best Compliments From*



# Raviteja Constructions Pvt. Ltd.

# 13/1, 2nd Floor, Suraj Brigade, 'G' Block,
Sahakarnagar, Bangalore - 560 092
☎ : 080-23621822 / 23621866 Fax: 080-23621866



Rs. 150


Rs. 150



Rs. 175



Rs. 150



Rs. 150



ADARSH BOOKS

**ADARSH ENTERPRISES (NEW DELHI)**

4393/4, Tulsi Das Street, Ansari Road, New Delhi - 110 002
Phone : 23246131, Fax : 011-23246130
e-mail: adarshbooks vsnl.com Web : www.adarshbooks.com


ROBIN BOOKS



Rs. 95



Rs. 95



Rs. 70



Rs. 95



Rs. 70

ದ್ಯತೆಗಳನ್ನು ಪಲ್ಲಟಗೊಳಿಸುವುದು ಸರಿಯೆ ? ೨೬-೫-೨೦೦೫ರಂದು ಪತ್ರಿಕೆಗಳಲ್ಲಿ ಲವು ವಿದ್ವಾಂಸರ ಹೇಳಿಕೆ ಪ್ರಕಟವಾಯಿತು. ಈ ವಿದ್ವಾಂಸರು ಕನ್ನಡಕ್ಕೆ ಶಾಸ್ತ್ರೀಯ ಾಷೆಯ ಸ್ಥಾನಮಾನ ಬೇಕೆಂಬ ಬೇಡಿಕೆಗೆ ಸಮರ್ಥನೆಯ ಅಧಿಕೃತ ದಾಖಲೆಯನ್ನು ದ್ಧಪಡಿಸಿದವರು. ಇವರ ಪತ್ರಿಕಾ ಹೇಳಿಕೆಯ ಪ್ರಕಾರ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಕ್ಕಿದರೆ ಇಪ್ಪತ್ತು ಕೋಟಿ ರೂಪಾಯಿಗಳ ಅನುದಾನ, ದೇಶವಿದೇಶಗಳಲ್ಲಿ ಅಧ್ಯಯನ ೀಠ, ಈ ಭಾಷೆಗೆ ಎರಡು ಅಂತರರಾಷ್ಟ್ರೀಯ ಪ್ರಶಸ್ತಿ, ಯುನೆಸ್ಕೋ ನೆರವಿನ ಸಾಧ್ಯತೆ – ೆ ಸೌಲಭ್ಯಗಳು ಲಭ್ಯವಾಗುತ್ತವೆ. ಕನ್ನಡಪರ ಅಧಿಕೃತ ದಾಖಲೆ ಸಿದ್ಧವಾದ ಮತ್ತು ಈ ೇಳಿಕೆ ಬಂದ ದಿನದೊಳಗೆ ಕೇಂದ್ರ ಸರ್ಕಾರದಿಂದ ಶಾಸ್ತ್ರೀಯ ಭಾಷೆಯ ಬಗ್ಗೆ ರಡು ಸುತ್ತೋಲೆಗಳು ಬಂದಿದ್ದವು. ೧೨-೧೦-೨೦೦೪ರಂದು ಹೊರಟಿದ್ದ ುತ್ತೋಲೆಯಲ್ಲಿ ಶಾಸ್ತ್ರೀಯ ಭಾಷಾ ಸ್ಥಾನಮಾನಕ್ಕೆ ಮೂರು ಮಾನದಂಡಗಳನ್ನು ೂಚಿಸಲಾಗಿತ್ತು. (ಈ ಪ್ರಕಾರವೇ ತಮಿಳಿಗೆ ಶಾಸ್ತ್ರೀಯ ಭಾಷೆ ಸ್ಥಾನಕೊಡಲಾಯಿತು). ಈ ಮೂರು ಮಾನದಂಡಗಳು ಹೀಗಿವೆ: ೧. ಒಂದು ಸಾವಿರ ವರ್ಷಗಳಿಗೂ ಮೀರಿದ ಪ್ರಾಚೀನತೆ ಇರಬೇಕು; ೨. ವಿವಿಧ ಪೀಳಿಗೆಗಳಿಗೆ ವ್ಯಾಪಿಸಿದ ಪರಂಪರೆಯಿರ ಬೇಕು; ೩. ಸಾಹಿತ್ಯ ಪರಂಪರೆಯು ಒರಿಜನಲ್ ಆಗಿರಬೇಕು, ಬೇರೆ ಭಾಷಾ ಸಮೂಹ ದಿಂದ ತೆಗೆದುಕೊಂಡಿರಬಾರದು. ಈ ಸುತ್ತೋಲೆಯ ನಂತರ ೧-೧೧-೨೦೦೪ರಂದು ಮತ್ತೊಂದು ಸುತ್ತೋಲೆ ಹೊರಟಿತು. ಅದರಲ್ಲಿ ಹಿಂದಿನ ಮೂರು ಮಾನದಂಡ ಗಳನ್ನು ಹಾಗೆಯೇ ಉಳಿಸಿಕೊಂಡು ನಾಲ್ಕನೆಯ ಮಾನದಂಡವೊಂದನ್ನು ಸೇರಿಸಲಾಯಿತು. ಅದು ಹೀಗಿದೆ: 'ಶಾಸ್ತ್ರೀಯ ಭಾಷೆ ಮತ್ತು ಸಾಹಿತ್ಯವು ಈಗಿನ ರೂಪಕ್ಕಿಂತ ವಿಭಿನ್ನವಾಗಿರಬಹುದು, ಆನಂತರದ ಆಕೃತಿಗಳಿಂದ ಅಥವಾ ಅದರ ಉಪ ಉತ್ಪನ್ನಗಳಿಂದ ಪ್ರತ್ಯೇಕವಾಗಿರಬಹುದು ಅಥವಾ ಸಾತತ್ಯ ದೂರವಾಗಿರ ಬಹುದು. ಉದಾಹರಣೆಗೆ, ಲ್ಯಾಟಿನ್ ವರ್ಸಸ್ ರೋಮನ್, ಸಂಸ್ಕೃತ – ಪಾಲಿ ವರ್ಸಸ್ ಪ್ರಾಕೃತ ಮತ್ತು ಆಧುನಿಕ ಇಂಡೋಆರ್ಯನ್'. ಹೀಗೆ ಒಂದು ಹೊಸ ಮಾನದಂಡವನ್ನು ಸೇರಿಸಲಾಯಿತು ಮತ್ತು ಮುಂದುವರೆದು ಶಾಸ್ತ್ರೀಯ ಭಾಷೆಗೆ ಸಿಗುವ ಸೌಲಭ್ಯಗಳನ್ನು ತಿಳಿಸಲಾಯಿತು. ಅವು ಹೀಗಿವೆ: ೧. ಭಾರತೀಯ ಶಾಸ್ತ್ರೀಯ ಭಾಷೆಗಳಲ್ಲಿ ಪರಿಣತರಾದ ಇಬ್ಬರು ವಿದ್ವಾಂಸರಿಗೆ ಅಂತರರಾಷ್ಟ್ರೀಯ ಪ್ರಶಸ್ತಿ; ೨. ಶಾಸ್ತ್ರೀಯ ಭಾಷೆಗಳಿಗಾಗಿ ಒಂದು ಅಧ್ಯಯನ ಕೇಂದ್ರ ಸ್ಥಾಪನೆ ; ೩. ಕಡೇ ಪಕ್ಷ ಕೇಂದ್ರೀಯ ವಿಶ್ವವಿದ್ಯಾಲಯಗಳಲ್ಲಿ ಶಾಸ್ತ್ರೀಯ ಭಾಷೆಗಳ ಪೀಠಸ್ಥಾಪನೆಗೆ ಮನವಿ.

ಈಗ ಹೋಲಿಸಿ ನೋಡಿ, ೨೬-೫-೨೦೦೫ರಂದು ಪತ್ರಿಕೆಗಳಲ್ಲಿ ಪ್ರಕಟವಾದ ವಿದ್ವಾಂಸರ ಹೇಳಿಕೆಯಲ್ಲಿರುವ ಅಂಶಗಳಿಗೂ ೧-೧೧-೨೦೦೪ರ ಸುತ್ತೋಲೆಯಲ್ಲಿರುವ 'ಸೌಲಭ್ಯದ ಅಂಶಗಳಿಗೂ' ಇರುವ ವ್ಯತ್ಯಾಸ ತಾನಾಗಿಯೇ ಗೊತ್ತಾಗುತ್ತದೆ. ಕೇಂದ್ರ ಸರ್ಕಾರವು ೨೦ ಕೋಟಿ ರೂಪಾಯಿಗಳ ಅನುದಾನದ ವಿಷಯವನ್ನು ಹೇಳಿಯೇ ಇಲ್ಲ. ಯಾವುದೇ ಶಾಶ್ವತ ಅನುದಾನದ ಪ್ರಸ್ತಾಪವಿಲ್ಲ. ಪ್ರತಿ ಭಾಷೆಗೆ ಅಂತರರಾಷ್ಟ್ರೀಯ ಪ್ರಶಸ್ತಿ ಕೊಡುವ ಪ್ರಸ್ತಾಪವಿಲ್ಲ. ಎಲ್ಲ ಶಾಸ್ತ್ರೀಯ ಭಾಷೆಗಳಿಗೂ ಸೇರಿ ಎರಡು ಅಂತರರಾಷ್ಟ್ರೀಯ ಪ್ರಶಸ್ತಿ ಕೊಡಲಾಗುತ್ತದೆ. ಸುತ್ತೋಲೆಯಲ್ಲಿರುವ ಸೌಲಭ್ಯಗಳ ಪಟ್ಟಿಗೆ ಹೊರತಾಗಿ ಶಾಸ್ತ್ರೀಯ ಭಾಷೆಯ ಸ್ಥಾನಮಾನದ ಕಾರಣಕ್ಕಾಗಿ ಕೇಂದ್ರ ಸರ್ಕಾರದ ವಿವಿಧ ಅವಕಾಶಗಳಡಿಯಲ್ಲಿ ಸೌಲಭ್ಯಗಳನ್ನು ಪಡೆಯಲು ಸಾಧ್ಯ. ಯೋಜನೆಗಳನ್ನು ರೂಪಿಸಿ, ಸಲ್ಲಿಸಿ, ಅನುದಾನ ಪಡೆಯಲು ಯಾವಾಗಲೂ ಅವಕಾಶವಿರುತ್ತದೆ. ಆದರೆ ಕನ್ನಡಿಗರಿಗೆ ತಪ್ಪು ಮಾಹಿತಿ ನೀಡಬೇಕಾದರೂ ಯಾಕೆ ?

ಕೇಂದ್ರ ಸರ್ಕಾರವು 'ಶಾಸ್ತ್ರೀಯ ಭಾಷೆ' ಎಂದು ವಿಶೇಷ ಭಾಷಾವಲಯವನ್ನು ರೂಪಿಸಿದ್ದು, ತಮಿಳಿಗೆ ಆ ಸ್ಥಾನ ಮಾನವನ್ನು ಕೊಡಮಾಡಿದ್ದು ಅಪ್ಪಟ ಅಧಿಕಾರ ಕೇಂದ್ರಿತ ರಾಜಕೀಯ. ಇಂತಹ ಕ್ಷುಲ್ಲಕ ರಾಜಕೀಯವನ್ನು ವಿರೋಧಿಸಿ ಎಲ್ಲ ಭಾರತೀಯ ಭಾಷೆಗಳಿಗೂ ಸಮಾನ ಸ್ಥಾನ ಕೊಡಬೇಕಾದ್ದು ಕೇಂದ್ರ ಸರ್ಕಾರದ ಕರ್ತವ್ಯ – ಎಂದು ಹೋರಾಟ ಕಟ್ಟಬೇಕು. ಆದರೆ ಹಾಗಾಗುತ್ತಿಲ್ಲ. ಹೋಗಲಿ ಬಿಡಿ : ಶಾಸ್ತ್ರೀಯ ಭಾಷೆಯ ಸ್ಥಾನಮಾನವು ಕನ್ನಡದ ಮೊದಲ ಆದ್ಯತೆಯೆ ಎಂದು ಕೇಳಿಕೊಳ್ಳಿ, 'ಅಲ್ಲ' ಎಂದರೆ ಅಭಿಮಾನ ಶೂನ್ಯರು ಎಂದುಬಿಡುತ್ತಾರೆ ಕೆಲವರು. 'ಹೌದು' ಎಂದರೆ ಅಸತ್ಯವನ್ನು ಹೇಳಿದಂತಲ್ಲವೆ ಎನ್ನುತ್ತದೆ ಒಳಗಿನ ವಾಸ್ತವ. ಹಾಗಾದರೆ ಯಾವುದು ಸರಿ ?

ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಸಿಕ್ಕಬೇಕು ಎಂಬಂಶವನ್ನು ಇಂದು ಕನ್ನಡದ, ಕನ್ನಡಿಗರ ಮೊದಲ ಆದ್ಯತೆ ಎಂಬಂತೆ ಬಿಂಬಿಸಲಾಗುತ್ತಿದೆ. ಕನ್ನಡ ವಿಷಯ ವೆಂದರೆ ಶಾಸ್ತ್ರೀಯ ಭಾಷೆಯ ವಿಷಯ ಮಾತ್ರವೇನೊ ಎಂಬ ಭಾವನೆಯನ್ನು ಬಿತ್ತಲಾಗುತ್ತಿದೆ. ನಾನು ಮೊದಲೇ ಹೇಳಿದಂತೆ ಶಾಸ್ತ್ರೀಯ ಭಾಷೆಯ ಸ್ಥಾನಮಾನವು ಕನ್ನಡಕ್ಕೆ ಸಿಗಲಿ ಎನ್ನುತ್ತಲೇ ನನ್ನ ಮೊದಲ ಆದ್ಯತೆ, ಕನ್ನಡ ಬಲ್ಲವರಿಗೆ ಮಾತ್ರ ಕರ್ನಾಟಕದಲ್ಲಿ ಉದ್ಯೋಗ – ಎಂಬ ನೀತಿ ನಿರೂಪಣೆ ಮತ್ತು ಅನುಷ್ಠಾನ. ಕನ್ನಡವನ್ನು ಕೇವಲ ಅಭಿಮಾನದ ಪ್ರಶ್ನೆಯನ್ನಾಗಿ ನೋಡಿದರೆ ಸಾಲದು, ಅನ್ನದ ಪ್ರಶ್ನೆಯನ್ನಾಗಿ ಪರಿಗಣಿಸಬೇಕು – ಈ ಆದ್ಯತೆಯ ಮೇಲೆ ಕನ್ನಡ ಪರ ಚಿಂತನೆ ಮತ್ತು ಕ್ರಿಯೆಯನ್ನು ಕಟ್ಟಬೇಕು. ಕನ್ನಡಿಗರ ಬದುಕನ್ನು ಉಳಿಸಿ ಬೆಳೆಸುವ ಮೂಲಕ ಕನ್ನಡದ ಉಳಿವಿಗೆ ಒತ್ತಾಸೆಯಾಗಬೇಕು. ಈ ಮಾತನ್ನು ನಾನು ಅನೇಕ ವರ್ಷಗಳಿಂದ ಹೇಳುತ್ತಿದ್ದೇನೆ. ಉದ್ಯೋಗ, ಶಿಕ್ಷಣ ಮತ್ತು ಆಡಳಿತ – ಈ ಮೂರು ವಿಭಾಗಗಳು ಕ್ರಮವಾಗಿ ಕನ್ನಡ ಕೇಂದ್ರಿತವಾಗಬೇಕೆಂಬುದನ್ನು ತಾತ್ವಿಕವಾಗಿ ಪ್ರತಿಪಾದಿಸುತ್ತ ಬಂದಿದ್ದೇನೆ. ಅರ್ಹ ಕನ್ನಡಿಗರಿಗೆ ಸಾಮಾಜಿಕ ಮೀಸಲಾತಿಯನ್ನೂ ಒಳಗೊಂಡಂತೆ ಸರ್ಕಾರಿ ಮತ್ತು ಖಾಸಗಿ ಕ್ಷೇತ್ರದ ಉದ್ಯೋಗಗಳಲ್ಲಿ ಆದ್ಯತೆ ದೊರೆಯಬೇಕು. ಕನ್ನಡ ಕಲಿಯದೆ ಇಲ್ಲಿ ಯಾರೂ ಶಿಕ್ಷಣವನ್ನು ಪೂರೈಸಲು ಅವಕಾಶವಿರಬಾರದು. ಆಡಳಿತದಲ್ಲಿ ಸಂಪೂರ್ಣ ಕನ್ನಡ ಜಾರಿಯಾಗಬೇಕು; ಕನ್ನಡದಲ್ಲಿ ಆಡಳಿತ ನಡೆಸಲು ಪೂರಕವಾಗುವಂತೆ ಕನ್ನಡ ತಂತ್ರಜ್ಞಾನವನ್ನು ಸಜ್ಜುಗೊಳಿಸಬೇಕು. ಈ ಆದ್ಯತೆಗಳನ್ನು ಒಳಗೊಂಡ ಚಿಂತನೆ ಮತ್ತು ಹೋರಾಟ ಇಂದಿನ ಆದ್ಯತೆ ಎಂದು ನನ್ನ ಭಾವನೆ. ಆನಂತರ ಶಾಸ್ತ್ರೀಯ ಸ್ಥಾನಮಾನದ ವಿಷಯ. ಶಾಸ್ತ್ರೀಯ ಸ್ಥಾನಮಾನವೇ ಮೊದಲ ಆದ್ಯತೆಯೆಂಬಂತೆ ಬಿಂಬಿಸುವುದು ಬೇಡ ಎನ್ನುವುದಷ್ಟೇ ನನ್ನ ಕಳಕಳಿ. ಈ ಮಾತುಗಳನ್ನು ನಾನು ೨೫-೧೧-೨೦೦೭ ರಂದು ಮೈಸೂರಿನ ವಿಚಾರ ಸಂಕಿರಣವೊಂದರ ಉದ್ಘಾಟನಾ ಭಾಷಣದಲ್ಲಿ ಹೇಳಿದೆ. ಈ ಭಾಷಣದ ಪತ್ರಿಕಾ ವರದಿಯನ್ನು ಓದಿಯೋ, ಸಂಕಿರಣಕ್ಕೆ ಬಂದವರಿಂದ ಕೇಳಿಯೋ ಒಂದಿಬ್ಬರು ವಿದ್ವಾಂಸರು ಟೀಕಿಸಿದರು. ಒಬ್ಬ ಹಿರಿಯ ವಿದ್ವಾಂಸರು ನನ್ನನ್ನು 'ಇತಿಹಾಸ ಸಂಸ್ಕೃತಿ ಗೊತ್ತಿಲ್ಲದವರು' ಎಂದು ಕರೆದರು. ಮತ್ತೊಬ್ಬರು ನನ್ನ ಅಭಿಪ್ರಾಯ 'ಕನ್ನಡ ಸ್ವಾಭಿಮಾನದ ಬಾಯಿಗೆ ಮಣ್ಣು ಹಾಕಿದಂತೆ' ಎಂದರು. ಇನ್ನು ಕೆಲವರು ಮಾರನೇ ದಿನದಿಂದಲೇ ಶಾಸ್ತ್ರೀಯ ಭಾಷಾ ಸ್ಥಾನಮಾನದ ಬಗ್ಗೆ ದೊಡ್ಡದಾಗಿ ಒತ್ತಾಯಿಸಿದರು. ಇದು ಅವರೆಲ್ಲರ ಹಕ್ಕು. ಆದರೆ ಶತಮಾನಗಳ ಕನ್ನಡದ ವಿವೇಕ ಎಲ್ಲೋ ಒಂದು ಕಡೆ ಜೀವಂತವಾಗಿ, ಜಾಗೃತವಾಗಿ ಸರಿ-ತಪ್ಪುಗಳ ತೀರ್ಮಾನ ಮಾಡುತ್ತದೆಯೆಂದು ನಾನು ಭಾವಿಸುತ್ತೇನೆ. ಆದ್ಯತೆಯಲ್ಲಿ ಮೊದಲನೆಯದಲ್ಲ ಎನ್ನುವುದನ್ನೂ ಉಗ್ರ ಪ್ರತಿಕ್ರಿಯೆ ತೋರಿಸುವವರ ವಿವೇಕವನ್ನೂ ಈ ತೀರ್ಮಾನ ತೂಗಿ ನೋಡುತ್ತದೆ. ಅಂದಿನ ನನ್ನ ಭಾಷಣದ ಕೊನೆಯ ವಾಕ್ಯ ಹೀಗಿತ್ತು: 'ಉಪವಾಸವಿರುವ ಕನ್ನಡಿಗರ ಪರವಾಗಿ ಉಪವಾಸ ಸತ್ಯಾಗ್ರಹ ಮಾಡಿದರೆ ಮೊದಲ ಸಾಲಿನಲ್ಲೇ ನಾನಿರುತ್ತೇನೆ. ಈ ಕೆಲಸಕ್ಕೆ ಕೈ ಹಾಕೋಣ.' – ಈಗಲೂ ನನ್ನದು ಇದೇ ಮಾತು.

ಇಲ್ಲಿ, ಮತ್ತೊಂದು ವಿಷಯವನ್ನು ಹೇಳಬೇಕು: ನಾನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷನಾಗಿದ್ದಾಗ ಇಂಜಿನಿಯರಿಂಗ್, ವೈದ್ಯಕೀಯ ಮತ್ತು ದಂತ ವೈದ್ಯಕೀಯ ಕಾಲೇಜುಗಳ ಮೊದಲನೇ ವರ್ಷ ಕನ್ನಡವನ್ನು ಒಂದು ಪಠ್ಯವಾಗಿ ಕಲಿಯುವ ವ್ಯವಸ್ಥೆ ಮಾಡಿಸಿದೆ. ಪರೀಕ್ಷೆಗೆ ಕಡ್ಡಾಯ ಮಾಡಲು ವಿಶ್ವವಿದ್ಯಾಲಯದವರು ತಾತ್ವಿಕವಾಗಿ ಒಪ್ಪಿದ್ದರು. ಆದರೆ ಆನಂತರ ಪರೀಕ್ಷೆಗೆ ಕಡ್ಡಾಯ ಮಾಡಲಿಲ್ಲ. ಈ ಬಗ್ಗೆ ಪತ್ರಿಕಾ ವರದಿಗಳು ಬಂದವು. ಆದರೆ ಕನ್ನಡಪರ ಪ್ರತಿಷ್ಠಿತ ವಲಯವು ಈ ಬಗ್ಗೆ ಚಕಾರ ಎತ್ತಲಿಲ್ಲ. ರಾಜ್ಯಭಾಷೆಯನ್ನು ತಾಂತ್ರಿಕ ವೈದ್ಯಕೀಯ ಕಾಲೇಜುಗಳಲ್ಲಿ ಕಲಿಸುವ ವ್ಯವಸ್ಥೆಯನ್ನು ಇಡೀ ದೇಶದಲ್ಲೇ ಮೊಟ್ಟಮೊದಲು ಅಳವಡಿಸಿದ ರಾಜ್ಯ ಕರ್ನಾಟಕ. ಕನ್ನಡವನ್ನು ಈ ಕೋರ್ಸುಗಳಲ್ಲಿ ಪರೀಕ್ಷೆಗೆ ಕಡ್ಡಾಯ ಮಾಡಿದರೆ, ನೂರಾರು ಕನ್ನಡ ಎಂ.ಎ.ಪದವೀಧರರಿಗೆ ಖಾಯಂ ಕೆಲಸ ಸಿಗುತ್ತಿತ್ತು. ಕನ್ನಡ ಎಂ.ಎ. ಓದಿ ಬೀದಿಗೆ ಬಿದ್ದಿರುವ ನೂರಾರು ಜನಕ್ಕೆ ಬದುಕು ಸಿಕ್ಕುತ್ತಿತ್ತು. ಕನ್ನಡ ತಮ್ಮ ಕೈ ಹಿಡಿಯಿತು ಎಂಬ ಭರವಸೆಯ ಬೆಳಕು ಮೂಡುತ್ತಿತ್ತು. ಜೊತೆಗೆ ಅನ್ಯ ಭಾಷಿಕ ವಿದ್ಯಾರ್ಥಿಗಳೂ ಕನ್ನಡ ಕಲಿತಂತೆ ಆಗುತ್ತಿತ್ತು. ಇದಾವುದೂ ಕನ್ನಡದ ಕೆಲಸವಲ್ಲವೆ ? ಈ ಬಗ್ಗೆ ಒತ್ತಾಯ ಹೇರದೆ ಹೋದವರ ಕನ್ನಡ ಪ್ರೀತಿಗೆ ಪಕ್ಷಪಾತವಿದೆಯೆಂದು ಭಾವಿಸಬಹುದೆ ?

ಕನ್ನಡಕ್ಕೆ, ಕನ್ನಡಿಗರಿಗೆ, ಬದುಕಿನ ಆಸರೆಯಾಗುವುದು ಆದ್ಯತೆಯ ವಿಷಯವಾಗಬೇಕೆಂದು ನಂಬಿದ ನಾನು ನೋವು ಮತ್ತು ನಿರಾಶೆಯಿಂದ ಈಗ ಮೌನದ ಮೊರೆ ಹೋಗಲೆ ಎಂದು ಕೇಳಿಕೊಳ್ಳುತ್ತಿದ್ದೇನೆ. ಆದರೆ, ಕನ್ನಡ ಜನಸಾಮಾನ್ಯರಿಗೆ ನನ್ನಂಥವರನ್ನು ಮೌನಕ್ಕೆ ತಳ್ಳುವಷ್ಟು ಪ್ರತಿಷ್ಠೆಯ ಪೊರೆ ಕಟ್ಟಿಲ್ಲ ಎಂಬ ನಂಬಿಕೆ ನನ್ನದಾಗಿದೆ.

**ಪ್ರೊ॥ ಬರಗೂರು ರಾಮಚಂದ್ರಪ್ಪ**
೨೭೫, ೧೧ನೆಯ 'ಬಿ' ಕ್ರಾಸ್, ೧೪ನೇ ಮುಖ್ಯರಸ್ತೆ, ಜೆ. ಪಿ. ನಗರ, ೨ನೇ ಹಂತ, ಬೆಂಗಳೂರು-೫೬೦ ೦೭೮

ಶಿವರುದ್ರ ದಿಗಂತವನ್ನೆ ನುಂಗುವಂತೆ ದಿಟ್ಟಿಸುತ್ತಿದ್ದ. ಆತನ ಆ ದಿವ್ಯ ದೃಷ್ಟಿಗೆ ಭಂಗ ತರಲು ಮನಸ್ಸಾಗಲಿಲ್ಲ. ಅವನ ಸಮೀಪವೇ ತೊರೆ ಸಾಲ ಗಿಡಮರಗಳ ಪೊದೆ ಮರೆಯಲ್ಲಿ ಬಹಳ ಹೊತ್ತಿನ ತನಕ ಕಾಯುತ್ತ ನಿಂತೆ. ಶಿವರುದ್ರ ಆ ನಾಟ್ಯ ಶಿವಗಂಗೆಯನ್ನು ತನ್ನ ತಲೆ ಮೇಲೆ ಹೊತ್ತುಕೊಂಡಂತೆ ತೊರೆಯ ನೀರನ್ನೆಲ್ಲ ಗಟಗಟನೆ ಕುಡಿದುಬಿಡುವ ದಿವ್ಯ ದಾಹದಲ್ಲಿ ದಿಟ್ಟಿಸುತ್ತಲೇ ಇದ್ದ. ಬಣ್ಣದ ಓಕುಳಿಯಂತೆ ದಿಗಂತದ ಬೆಳಕು ತೊರೆಯ ಮಡುವಿನ ಮೇಲೆ ಚೆಲ್ಲಾಡುತ್ತಿತ್ತು. ಹೊನ್ನ ಹೊಳಪಿನ ನೀರವೆಗಳೇ ಅಮರ ಸುಂದರಿಯ ಸೀರೆಯಂತೆ ತುಳುಕುತ್ತಿದ್ದವು. ಶಿವರುದ್ರ ಮಡುವಿಗೆ ಧುಮುಕಿ ಜಲಸ್ತಂಭನ ಮಾಡಿ ತೇಲಿಬಂದು ಹಾಗೇ ನಿಶ್ಚಲನಾಗಿ ಬಹಳ ಹೊತ್ತಿನ ತನಕ ಪ್ರಾಣಾಯಾಮ ಮಾಡುವಂತೆಯೊ ಅಥವಾ ಆ ನೀರೆಂಬ ನೀರೆಯ ರೆಕ್ಕೆ ಮೇಲೆ ವಿರಮಿಸುವಂತೆಯೊ ತೇಲುತ್ತಿದ್ದ. ಕತ್ತಲು ಕವಿಯುತ್ತಿತ್ತು. ನೀರಲ್ಲಿ ನೀರಾಗಿಯೇ ಹರಿದು ಹೋಗುತ್ತಿರುವಂತೆ ಶಿವರುದ್ರ ಕಂಡ. ಹೇಳಲಾಗದ ಭಾವ ತುಳುಕಿತು. ಆಗ ಆ ಬಾಲ್ಯದಲ್ಲಿ ಕಂಡಿದ್ದ ಅಂತಹ ಶಿವರುದ್ರನಿಗೂ ಈಗ ಈ ಮುಪ್ಪಿನ ಹಠಯೋಗಿ ಶಿವರುದ್ರನಿಗೂ ಕಾಲ ಎಷ್ಟೊಂದು ಅಂತರ ಸೃಷ್ಟಿಸಿದೆಯಲ್ಲಾ ಎಂದು ಬೆರಗಾಗಿ ನನ್ನ ದಾರಿಗೆ ನಾನು ಹಿಂತಿರುಗಿದ್ದೆ. ಕಾಲಪಕ್ಷಿಯು ತನ್ನ ಎರಡೂ ರೆಕ್ಕೆಗಳ ಮರೆಯಲ್ಲಿ ಹುಟ್ಟು ಸಾವುಗಳ ಬಚ್ಚಿಟ್ಟುಕೊಂಡು ನನ್ನ ತಲೆ ಮೇಲೆ ಹಾರಿಹೋಗುತ್ತಿತ್ತು.



ಡಾ॥ ಮೊಗಳ್ಳಿ ಗಣೇಶ

# ಹರಿವ ತೊರೆಯ ನೀರೆ

## ಮೊದಲ ಪಾದ

ಊರ ತುಂಬ ಶಿವರುದ್ರನ ಮಾತು ಸುತ್ತಿಕೊಂಡಿತ್ತು. ಪ್ರಾಯದ ಕನ್ನೆಯರಿಗಂತು ಅವನ ಮೇಲೆ ವಿಪರೀತ ಸಿಟ್ಟು ಬಂದಿತ್ತು. ವಾರಿಗೆಯ ಯುವಕರಂತು ಸೀಮೆಯಿಂದಲೇ ಅವನನ್ನು ಗಡಿಪಾರು ಮಾಡಬೇಕೆಂದು ಒತ್ತಾಯಿಸುತ್ತಿದ್ದರು. ಶಿವರುದ್ರನ ನಡತೆ ಹದ್ದುಮೀರಿತೆಂದು ಹಿರಿಯರು ಚರ್ಚಿಸಿದ್ದರು. ಸಣ್ಣ ಮಕ್ಕಳು ಶಿವರುದ್ರನ ಸಾಹಸವನ್ನು ನೋಡಿ ಆನಂದಿಸಲು ತುದಿಗಾಲಲ್ಲಿದ್ದರು. ಸುಗ್ಗಿ ಮುಗಿದು ಸಂಕ್ರಾಂತಿ ಕಳೆದು ಊರ ಮುಂಬಾಗಿಲಿಗೆ ಯುಗಾದಿ ಹಬ್ಬವು ಬಂದು ನಿಂತಿತ್ತು. ಶಿವರುದ್ರ ಒಡ್ಡಿರುವ ಪಣದಿಂದ ನನ್ನ ತಾತನ ತಲೆ ಬಿಸಿಯಾಗಿತ್ತು. ಜನ ಹೋಟೆಲಲ್ಲಿ ಕುಳಿತು ತರಾವರಿಯಾಗಿ ಮಾತಿನ ಲೀಲೆಯಲ್ಲಿ ಮುಳುಗಿದ್ದರು. ನನ್ನ ಅಪ್ಪ ಗಲ್ಲದ ಮೇಲೆ ಆಸೀನನಾಗಿ ಅವರೆಲ್ಲರ ನುಡಿಗಳಿಗೆ ಕಿವಿಗೊಟ್ಟು ಸಿಗರೇಟಿನ ಹೊಗೆಯಲ್ಲಿ ತೇಲುತ್ತ ಆಗಾಗ ನಗುತ್ತಿದ್ದ. ತಾತ ಯಥಾಪ್ರಕಾರ ಬಗೆಬಗೆಯ ತಿಂಡಿಗಳ ತಯಾರಿಯಲ್ಲಿ ಮಗ್ನನಾಗಿದ್ದ. ಯುಗಾದಿ ಹಬ್ಬ ಇನ್ನು ಒಂದು ವಾರ ಇದೆ ಎನ್ನುವ ಹೊತ್ತಿಗಾಗಲೇ ಹೋಟೆಲಲ್ಲಿ ಜೂಜಾಟದ ಮೊದ ಸುತ್ತುಗಳು ಆರಂಭವಾಗುತ್ತಿದ್ದವು. ಗಿಜಿಗುಟ್ಟ ಹೋಟೆಲಲ್ಲಿ ಶಿವರುದ್ರನ ಪರವಾಗಿ ಒಬ್ಬರಾದರು ಮಾತನಾಡುವವರಿರಲಿಲ್ಲ. ಈ ಬಾರಿ ಹೇಗಾದರು ಮಾಡಿ ಅವನಿಗೆ ತಕ್ಕ ಪಾಠ ಕಲಿಸಲೇಬೇಕೆಂ ಎಲ್ಲರೂ ಕಾಯುತ್ತಿದ್ದರು.

ಶಿವರುದ್ರ ಉಡಾಳ, ಬೇಕಾಬಿಟ್ಟಿ ಮನುಷ ಏನಾದರೂ ಒಂದು ಯಡವಟ್ಟು ಮಾಡಿಕೊಂ ಆದರಿಂದ ಹೇಗೋ ಪಾರಾಗಿ ಪುಂಡನಂತೆ ಓಡಾ ಕೊಂಡಿದ್ದ. ಮಾರಮ್ಮನ ಗುಡಿಯ ಮುಂದೆ ಇದ್ದ ಬಾ ಗಾತ್ರದ ತರಾವರಿ ಗುಂಡುಕಲ್ಲುಗಳನ್ನು ಎತ್ತಿ ಭುಜ ಮೇಲೆ ಹೊತ್ತುಕೊಂಡು ಊರನ್ನೊಮ್ಮೆ ಸು ಬರುತ್ತಿದ್ದ. 'ನಾಳೆ ಮಾರಪ್ಪನ ಅಂಗಡೀಲಿ ಎಂ ದ್ವಾಸೆ ಕೊಡಿಸ್ತೀನಿ. ನೀನು ಗಂಡ್ಸಾದ್ರೆ ಈ ಗಾಡಿ ಚಕ್ರ ಎತ್ತಿ ತಲೆ ಮ್ಯಾಲೆ ಮಡಿಕಂಡು ಗಿರ್ರ್ ಅಂ ತಿರುಗ್ಸಿಯಾ' ಎಂದು ಯಾರಾದರೂ ಪಂಥಾಹ್ವಾ ನೀಡಿದರೆ ಸಾಕು, 'ಸೈ' ಎಂದು ತಲೆ ಮೇಲೆ ಸಿಂ ಸುತ್ತಿಕೊಂಡು ಗಾಡಿ ಚಕ್ರವನ್ನು ಇಟ್ಟುಕೊಂಡು ಹಾಗ ಮಾಡಿ ಗೆದ್ದು ಸಂತೋಷಪಡುತ್ತಿದ್ದ. ಅವನ ಅಂತ ಸಾಹಸಗಳು ಒಂದಲ್ಲ ಹತ್ತಲ್ಲ ನೂರಾರು. ಆದರಿಂ ತನ್ನ ಪ್ರಾಣಕ್ಕೇ ಅಪಾಯವಿದೆ ಎಂದರೂ ಶಿವರು ಲೆಕ್ಕಿಸುತ್ತಿರಲಿಲ್ಲ. ಸಾಹಸ ಮಾಡುವುದೆಂದ ಅವನಿಗದೇನೊ ದಿವ್ಯ ಸುಖ. ಅವನ ತಾಯಿ ಮಗ ಅಂತಹ ರೀತಿಗೆ ರೋಸಿಹೋಗಿದ್ದಳು. 'ಇಂತೇ ಕ ಮಾಡೋ ಬದ್ಲು ಮೈ ಮೂಳೆ ಮುರ್ದು ನಾಕ್ಕಾ ಸಂಪಾದ್ನೆ ಮಾಡ್ಕ ಬಂದು ಒಂದೊತ್ತುನ್ ಉಪ್ಪುಗಾದು

ಪಕಾರ ಮಾಡ್ದೇ ಇರೊ ಇವ್ನ ಗಂಡ್ಮಗ ಅಂತಾ ಕಾದ್ರೂ ಎತ್ತುದ್ನೊ' ಎಂದು ನಿಂಗವ್ವ ಮಗನ ಮೇಲೆ ಶ್ವಾಸ ಕಳೆದುಕೊಂಡಳು. ನೆರೆ ಊರುಗಳ ದುವೆಗೊ, ತಿಥಿಗೊ ಯಾವುದಾದರೂ ಜಾತ್ರೆ ಷೆಗಳಿಗೊ ಹೋಗಿ ಬೇಕಾದಷ್ಟು ತಿಂದು ಗೆದ್ದು ರುವ ಅವನನ್ನು ಬಕಾಸುರ ಎಂತಲೂ ಜನ ಯುತ್ತಿದ್ದರು. ಎಲ್ಲೊ ಮಾಟ ಮಂತ್ರ ಮಾಡಿ ಅಷ್ಟೆಲ್ಲ ದು ದಕ್ಕಿಸಿಕೊಳ್ಳುವನು ಎಂದು ಅನೇಕರು ಅವನ ಬಗ್ಗೆ ಚಿತ್ರವಾದ ಅತಿಮಾನುಷತೆಯನ್ನು ಆರೋಪಿಸಿ ಅವನ ಹೊಟ್ಟೆಯ ಒಳಗೆ ಪ್ರಾಯದ ಪಿಶಾಚಿ ಸೇರಿಕೊಂಡಿರ ಕೆಂದು ನಂಬಿದ್ದರು. ಶಿವರುದ್ರ ತಿಂದುಣ್ಣುವ ಣಗಳನ್ನು ಲೆಕ್ಕವಿಲ್ಲದಷ್ಟು ಬಾರಿ ಗೆದ್ದುಕೊಂಡಿದ್ದ. ಂತಹ ಹೊಟ್ಟೆಬಾಕನ ಕೈ ಹಿಡಿದವಳ ಗತಿ ಏನೊ ಂದು ಅವನಿಗೆ ಹೆಣ್ಣು ಕೊಡಲು ಯಾರೂ ಮುಂದೆ ಂದಿರಲಿಲ್ಲ.

ಶಿವರುದ್ರ ಊರಾಚೆಯ ತೊರೆಯಲ್ಲಿ ಮಿಂದು ಬಂದು ಮಾರವ್ವನ ಗುಡಿಯ ಡಸಾಲೆಯಲ್ಲಿ ಕುಳಿತು ಯುಗಾದಿ ಹಬ್ಬದ ಹೋಳಿಗೆಯ ಸವಿ ಸುವಾಸನೆಯನ್ನು ಲ್ಪನೆಯಲ್ಲೇ ಆಘ್ರಾಣಿಸುತ್ತ ಆ ದಿನ ಇನ್ನೇನೊ ಬಂದೇ ಬಿಟ್ಟಿತಲ್ಲ ಎಂದು ಲೆಕ್ಕಿಸುತ್ತಿದ್ದ. ಮ್ಮೂರು ವಿಶಾಲವಾಗಿತ್ತು. ಅಲ್ಲಿ ಎಲ್ಲ ಜನ ಜಾತಿಗಳೂ ತುಂಬಿದ್ದವು. ಸುತ್ತೇಳು ಳಿಗಳಿಗೂ ನಮ್ಮೂರು ಎಲ್ಲ ರೀತಿಯಲ್ಲೂ ಹಿರಿ ಮಗಳಂತಿತ್ತು. ಮಗನ ಮೇಲೆ ನಿಂಗವ್ವ ಟ್ಟು ಮಾಡಿಕೊಂಡು ಎಮ್ಮೆ ಹಾಲು ಕರೆದು ಡೈರಿಗೆ ಹಾಕಿ ಬಂದು ದೀಪ ಹಚ್ಚುತ್ತಿದ್ದಳು. ಗ ಮನೆಗೆ ಬಂದರೆ ಬರುತ್ತಿದ್ದ; ಇಲ್ಲ ಎಂದರೆ ಇಲ್ಲ. ಅವನಿಗೆ ಊರ ತೊರೆಯೇ ಯಾವತ್ತೂ ಪ್ರಿಯವಾದ ತಾಣ. ದಂಡೆಯ ಮರಳ ತಂಪಿನಲ್ಲಿ ಆತ ಎಷ್ಟೋ ರಾತ್ರಿ ಲಗಿಬಿಡುತ್ತಿದ್ದ. ಇಂತವನಿಂದ ಊರಿಗೆ ಕೆಟ್ಟ ಹೆಸರು ಎಂದೇ ಅನೇಕರು ವಿಸಿದ್ದರು. ಗಿರಾಕಿಗಳ ಬಾಯಿ ರುಚಿಗೆ ತಕ್ಕಷ್ಟು ತಿಂಡಿಗಳನ್ನೆಲ್ಲ ಮಾಡಿ ಮುಗಿಸುವ ವೇಳೆಗೆ ತಾತ ಬೆವೆತುಹೋಗಿದ್ದ. ಜೂಜಿನ ಅಮಲು ಹೋಟೆಲಿನ ತುಂಬ ಹಬ್ಬಿತ್ತು. ತ್ತದೇ ಶಿವರುದ್ರನ ಮೇಲೆ ಕಠಿಣವಾದ ಮಾತುಗಳು ಹೊತ್ತಿಕೊಂಡಿದ್ದವು.

'ಲಣ್ಣಾ, ಯೀ ಪಟಂತು ಆ ನನ್ ಮಗ್ನ ವುಟ್ಟಡಗಿಸುವಂಗೆ ಮಾಡ್ಲೇ ಬೇಕು ನಣ್ಣಾ.'

'ಬಡ್ಡಿ ಮಗುನ್ಗೆ ಚೆಂದುಳ್ಳಿ ಪ್ರಾಯ್ದ ಯೆಣ್ಣುಗಳೆಲ್ಲ ಬೇಕಂತೆ. ನೋಡ್ದ ಲೋಪರ್ ನ್ ಮಗ್ನ ಆಸೆಯಾ.'

'ಕಜ್ಜಾಯ್ಕೆ ವಸಿ ಇಸಾ ಹಾಕ್ಬುಡ್ಬೇಕು ಕನ್ರೋ.'

'ಅವುನು ಸೋತಾ ಅಂದ್ರೆ ಸತ್ತಾ ಅಂತ್ಲೇ.'

'ಒಂದ್ವೇಳೆ ಗೆದ್ದು ಬುಟ್ರೆ...'

'ಗೆದ್ದಂತಾ ಕಾಲ್ಕೆ ನೋಡ್ಕಮ'.

'ಯೇನೇ ಆಲಿ ಯೀ ಸಲಂತು ತಿಂತಾ ತಿಂತಾನೆ ವುಸುರ್ಕಟ್ಕಂಡು ಅವುನು ತ್ತೋಗುವಂಗೆ ಮಾರವ್ವ ಮಾಡುಬುಟ್ರೆ ನಾನೊಂದ್ ಟಗುರ್ ಕಡಿಸ್ತಿನಿ.'

ಕಾದ ಎಣ್ಣೆಯನ್ನು ಟಿನ್ನಿಗೆ ಸುರುವಿ, ಬೆವರು ಒರೆಸಿಕೊಂಡು ಬಂದ ತಾತ ಜೂಜುಕೋರರ ಮಾತುಗಳನ್ನು ಆಲಿಸಿ ಏನೋ ಅಪಶಕುನವಾದಂತಾಯಿತಲ್ಲಾ ಎಂದು ಹಾರಿದ ಎಡಗಣ್ಣ ಹುಬ್ಬನ್ನು ನೀವಿಕೊಂಡು ಶಿವರುದ್ರನ ಬಗ್ಗೆಯೇ ಯೋಚಿಸಿದ್ದರು. ಶಿವರುದ್ರನ ಪಣ ನಮ್ಮ ತಾತನ ಮೂಲಕವೇ ಉಂಟಾದದ್ದು. ಎಂದಿನಂತೆಯೆ ಗಿರಾಕಿಗಳು ವಿರಾಮವಾಗಿ ಹರಟುತ್ತಿದ್ದಾಗ ಶಿವರುದ್ರ ಬಂದ. ತಾತನೇ 'ಏನೋ ಶಿವರುದ್ರಾ, ಪತ್ತೆನೇ ಇರ್ಲಿಲ್ಲಾ. ಯಾವ್ ಪರಾಕ್ರಮಕ್ಕೆ ಎಲ್ಲಿಗೋಗಿದ್ದೆಯೊ' ಎಂದರು. 'ವಂಗ್ನೂರ್ ಸಾಬುರ್ ಬರೇಳಿದ್ರು. ಅವುರು ತ್ವಟ್ಟೆಲೊಸಿ ಕೆಲ್ಸ ಇತ್ತು. ಮಾಡ್ಬುಟ್ಟು ಬಂದೆ; ಯಾವ್ ಪರಾಕ್ರಮ ಒಪ್ಪವೋ' ಎಂದು ಒಂದೇ ಸಲಕ್ಕೆ 'ಒಂದತ್ ಬೋಂಡ ಕೊಡಪಾ' ಎಂದ. ಶಿವರುದ್ರನಿಗೆ ನಮ್ಮ ತಾತನ ತಿಂಡಿಗಳೆಂದರೆ ಪರಮಾನಂದ. ತಾತ ಮಾಡುವ ಹೋಟೆಲ ತಿಂಡಿಗಳಿಗಾಗಿ ಆತ ಯಾವ ಕೆಲಸ ಮಾಡಲೂ ಸಿದ್ಧನಿರುತ್ತಿದ್ದನಾದರೂ ಅವನು ತಿನ್ನುವ ಪರಿ ಕಂಡು ಬೆದರಿದ್ದ ತಾತ ಅವನಿಂದ ಯಾವ ಕೆಲಸವನ್ನೂ ಮಾಡಿಸಿಕೊಳ್ಳುತ್ತಿರಲಿಲ್ಲ. ಒಂದು ಮರದ ದಿಮ್ಮಿಯನ್ನೇ ಸೀಳಿ ಹಾಕಿ ಒಮ್ಮೆ ನೂರು ಕಜ್ಜಾಯ ತಿಂದು ತೇಗಿದ್ದ. ಅದೇ

## ಧನ್ಯತೆ

ಈ ಕಣ್ಣುಗಳು
ಕನ್ನಡಿ ಆಗಿದ್ದರೆ ಗೆಳತಿ
ಎಷ್ಟು ಚೆನ್ನಾಗಿತ್ತು?
ನಿನ್ನ ಬಿಂಬ ಇಟ್ಟುಕೊಂಡು
ನೋಟಕ್ಕೊಮ್ಮೆ ಜೀವ
ಧನ್ಯವಾಗುತ್ತಿತ್ತು!

ಡಿ. ಎ. ಬಡಿಗೇರ
ವಿರೂಪಾಕ್ಷಪ್ಪನಿಲಯ, ತೆಗ್ಗಿನಪೇಟೆ

ಕೊನೆ. ಆಮೇಲೆ ನಮ್ಮ ತಾತ ಅವನಿಂದ ಯಾವ ಕೆಲಸವನ್ನೂ ಮಾಡಿಸಿರಲಿಲ್ಲ. ಹತ್ತು ಬೋಂಡಗಳನ್ನು ಸುಮ್ಮನೆ ತನಗಿವು ಗುರುಗುಂಜಿ ಗಾತ್ರಕ್ಕೆ ಸಮ ಎಂದು ನೂಣೆದು ಗಿರಾಕಿಗಳ ಮುಂದೆ ಸುಮ್ಮನೆ ನಗಾಡಿದ. 'ಅಂಗಂತಾ ಅದೆಷ್ಟು ಬೋಂಡ ತಿನ್ನೋದ್ಲಾ ನೀನೂ' ಎಂದು ಒಬ್ಬ ಸವಾಲು ಎಸೆದ. ಆ ಮಾತಿನ ಕಡೆ ಕಿವಿಗೊಡದೆ 'ಇನ್ನೊಂದತ್ತು ಕಜ್ಜಾಯ ತಕಬಪ್ಪಾ' ಎಂದು ನನ್ನ ಕಡೆ ನೋಡಿದ. ತಾತ ಕೊಡು ಎಂಬಂತೆ ಕಣ್ಣಲ್ಲೆ ಸೂಚಿಸಿದ. ಸಾಬರ ತೋಟದಲ್ಲಿ ಕೆಲಸ ಮಾಡಿ ಬಂದಿರುವುದರಿಂದ ಅವನ ಬಳಿ ಹಣವಿದೆ ಎಂಬ ನಂಬಿಕೆ ತಾತನಿಗಿತ್ತು.

'ಬಲೇ ಕೊಬ್ಬಾಯ್ತು ಕಣಾ ಶಿವುರುದ್ರಾ ನಿಂದೂ, ಮಾತಾಡ್ಸುದ್ರೆ ಮಾತಾಡನೆ ನೋಡೂ.'

'ಅಲ್ಲೀ ಇಲ್ಲಿ ಬಾಜಿ ಕಟ್ಕಂಡು ತಿಂದಿರುದೆಲ್ಲ ಒಂದಿನ ಕರ್ಗೋಯ್ತದಲ್ಲಾ ಆವಾಗ ಮಾತಾಡ್ತನೆ. ಯೀಗೆಲ್ ಮಾತಾಡುಕಾದದೂ.'

ಜೂಜುಕೋರರ ಆ ಮಾತುಗಳಿಗೂ ಶಿವರುದ್ರ ಲೆಕ್ಕಿಸಲಿಲ್ಲ. ನನ್ನ ತಂದೆ ಉಗ್ರವಾಗಿ ಕಣ್ಣರಳಿಸಿ 'ಲೇ ಶಿವರುದ್ರಾ, ಎಲ್ಲಿದ್ದದ್ಲಾ ನಿನ್ ಜಾನಾ' ಎಂದರು.

'ಇಲ್ಲೇ ಅದೇ ಕನಣ್ಣಾ, ನಿಂತಾವನೇ. ನೀವಾಡೂ ಮಾತೆಲ್ಲ ಕೇಳಿಸ್ತಾವೆ ಕನ್ರಣ್ಣಾ' ಎಂದು ಕಜ್ಜಾಯವನ್ನು ಮೊತಗತೊಡಗಿದ.

'ಮಂತ್ಯಾಕ್ಲ ಮೊದ್ಲೆ ಮಾತಾಡ್ಲಿಲ್ಲಾ ಗುಲಾಮಾ' ಎಂದು ತಂದೆ ರೇಗಿದರು. ಹಿಮ್ಮೇಳವಾಗಿ ಅಪ್ಪನ ಬಲಗೈ ಬಂಟರಿಬ್ಬರು- ಸದಾ ಸಾಲದ ಹೆಸರಲ್ಲಿ ಬಿಟ್ಟಿಯಾಗಿ ಹೊಟ್ಟೆ ತುಂಬಿಸಿಕೊಳ್ಳುವವರು 'ಮಾಡ್ಲಾ ಮಂತೆ ಚಾಲೆಂಜಾ ಅಣ್ಣುನ್ ಮುಂದೇ' ಎಂದು ಉಚಾಯಿಸಿದರು. ತಾತ ಎಲ್ಲರನ್ನು ಗಮನಿಸುತ್ತ ಸುಧಾರಿಸಿಕೊಳ್ಳುತ್ತಿದ್ದರು. ಶಿವರುದ್ರ ಉಡಾಳನೆಂಬುದು ಎಷ್ಟು ನಿಜವೊ ಮಾತಿನಲ್ಲೂ ಕೃತಿಯಲ್ಲೂ ಸ್ವಾಭಿಮಾನದಲ್ಲೂ ಅಷ್ಟೇ ನಿಯತ್ತಿನವನು. ಅವನನ್ನು ರೇಗಿಸಿ ಮಜಾ ತೆಗೆದು ಕೊಳ್ಳುವುದು ಊರಲ್ಲಿ ಅನೇಕರಿಗೆ ಅಭ್ಯಾಸವಾಗಿತ್ತು. ಅಂತಹ ಮಾತುಗಳಿಗೆ ಕಟ್ಟುಬಿದ್ದೇ ಶಿವರುದ್ರ ಮೈ ಮೇಲೆ ಸವಾಲುಗಳನ್ನು ಎಳೆದುಕೊಳ್ಳುತ್ತಿದ್ದದು. ಕಜ್ಜಾಯ ತಿಂದು ನೀರು ಕುಡಿದು, ನಿಧಾನವಾಗಿ ಎಲ್ಲರ ಮುಖ ನೋಡಿ ಕೊನೆಗೆ ನನ್ನ ತಂದೆಯ ಕೋಪದ ಮುಖವನ್ನು ಲೆಕ್ಕಿಸದೆ ವಿನಯವಾಗಿಯೇ 'ಏನಂತಾ ಚಾಲೆಂಜ್ ಮಾಡ್ಬೇಕ್ರಣ್ಣಾ' ಎಂದು ಶಿವರುದ್ರ ಅವರೆಲ್ಲರ ಮಾತಿಗಾಗಿ ಕಾದ. ತಂದೆಯ ಕೋಪ ಎಡೆ ಬಿಚ್ಚಿತ್ತು. ಅಪ್ಪನ ಮುಂದೆ ಯಾರೂ ಕೂಡ ಸವಾಲಿನ ಪದ ಬಳಸುವಂತೆಯೆ ಇರಲಿಲ್ಲ. 'ಏಯ್, ಅವನೇನ್ ಚಾಲೆಂಜ್ ಮಾಡನು ಬಿಡ್ರೊ, ಪಾಪ ಅವುನ್ಯಾಕ್ ರೇಗ್ಸಿರೀ' ಎಂದು ತಾತ ಮಧ್ಯೆ ನಿಂತ. ಅಪ್ಪ ಮಧ್ಯೆ ಬಾಯಿ ಹಾಕಿ, 'ಶಿವರುದ್ರಾ ಹತ್ತು ಬೋಂಡ ಕಜ್ಜಾಯ ತಿಂದಿದ್ದಿಯಲ್ಲಾ ಅಂಗೇನೇ ನಮ್ಮೋಟ್ಲೆಲಿ ಮಾಡೊ ತಿಂಡಿನೆಲ್ಲ ನೂರು ನೂರು ಲೆಕ್ಕದಲ್ಲಿ ತಿಂದು ದಕ್ಸಿಸ್ಕಂದಿಲಾ' ಎಂದು ಗಂಭೀರವಾಗಿ ಸವಾಲು ಒಡ್ಡಿದರು. 'ಇದ್ದದ್ಲಾ ದಮ್ಮು', 'ತಾಕತ್ತಿದ್ರೆ ಹೂಂ ಅನ್ಲಾ', 'ಅಪ್ಪುನ್ಗುಟ್ಟಿದ್ರೆ ಯೀ ಚಾಲೆಂಜ್ಗೆ ಸೈ ಅನ್ಲಾ ಮಂತೆ', 'ನೀ ನೀ ಬಾಜಿಲಿ ಗೆದ್ದು ಬುಡ್ಲಾ, ಆಗ ನೀನೇನ್ ಕೇಳ್ತಿಯೊ ಅದ್ರಂತೆ ನಡ್ಕತಿವಿ ಕಣಾ' ಹತ್ತಾರು ಜನ ಹತ್ತಾರು ರೀತಿಯಲ್ಲಿ ಶಿವರುದ್ರನ ಮೇಲೆ ಬಾಜಿಯ ದಾಳಿಯಿಟ್ಟರು.

ಈ ಬಾಜಿಗೆ ಒಪ್ಪಿ ಅದರಂತೆ ನಡೆದುಕೊಳ್ಳದಿದ್ದರೆ ಆಮೇಲೆ ನಿನ್ನನ್ನು ಸುಮ್ಮನೆ ಬಿಡುವುದಿಲ್ಲ ಎಂದು ನನ್ನ ತಂದೆ ಪಾಳೆಯಗಾರನಂತೆ ಅಡ್ಡ ನಿಂತುಬಿಟ್ಟಿದ್ದರು. ಹೋಟೆಲಿನ ತುಂಬ ಕಿಕ್ಕಿರಿದಿದ್ದ ಜನ ಈ ಬಾಜಿ ನಡೆಯಲೇಬೇಕು ಎಂದು ಒಕ್ಕೊರಲಿಂದ ಅಂಗೀಕರಿಸುತ್ತಿದ್ದರು. ಅವತ್ತು ಅಲ್ಲಿದ್ದ ಊರ ಯಜಮಾನರು, ದುಡ್ಡಿದ್ದ ಹಳೆ ಕುಳಗಳು, ಮುಪ್ಪಾಗಿ ಹಲ್ಲು ಉದುರಿಹೋಗಿದ್ದರೂ ಹಳೆಯ ಚಪಲ ಬಿಟ್ಟಿರಲಾರದೆ ಅನೇಕ ಮುದುಕರು, ಯುವಕರು ಪುಂಡು ಪೋಕರಿಗಳು ಎಲ್ಲ ಸೇರಿ ದೊಂಬಿಯೇ ಆದಂತಾಗಿ ಶಿವರುದ್ರನ ಸಾಮರ್ಥ್ಯ ಪರೀಕ್ಷೆಗೆ ಇದೇ ದೊಡ್ಡ ಅಖಾಡ ಎಂದು ನೆರೆದವರೆಲ್ಲ ಗುಜುಗುಟ್ಟಿದರು. ಉದ್ವೇಗಕ್ಕೆ ಒಳಗಾದ ಶಿವರುದ್ರ ಸವಾಲಿಗೆ ಒಪ್ಪದೇ ಸುಮ್ಮನಿರುವುದು ಸಾಧ್ಯವಿರಲಿಲ್ಲ. ಬಹಳ ದಿನಗಳಿಂದ ಅವನ ಪರಾಕ್ರಮಕ್ಕೆ ತಕ್ಕ ಬಾಜಿಗಳೇ ಎದುರಾಗಿರಲಿಲ್ಲ. ನಮ್ಮ ತಾತ ಶಿವರುದ್ರನನ್ನೇ ದಿಟ್ಟಿಸಿ ಕೇಳಿದರು: 'ನಿಜವಾಗ್ಲೂ ಪಂತ ಕಟ್ಟಿದ್ದೀಯೇನೊ ಶಿವರುದ್ರಾ'. 'ಹೌದು ಕಣಪ್ಪಾ, ನೀವೇ ಇದ್ದೆ

ಸಾಕ್ಷಿ ನೀವೇ ನಿಂತು ಯೀ ಪಂತವ ನಡೀಸ್‌ಕೊಡ್ಬೇಕು' ಎಂದು ನನ್ನ ಅಪ್ಪನಿಗೇ ಸವಾಲು ಹಾಕುವಂತೆ ವಿನಂತಿಸಿದ.

'ಅಂಗಾದ್ರೆ ನಾನೇಳ್ದಂಗೆ ಬಾಜಿಯಾಗ್ಬೇಕು' ಎಂದು ಅಪ್ಪ ಗುಡುಗಿದ. ಜನ ನಿಶ್ಶಬ್ದರಾದರು. ಶಿವಲಿಂಗ ತಾತನ ಕಡೆಗೇ ನೋಡುತ್ತಿದ್ದ. ಪಂಥಕ್ಕೆ ಕಾವು ಬಂದಿತ್ತು. ಅಪ್ಪ ಹೇಳುತ್ತಿದ್ದ. 'ಒಂದು ನೂರು ಕಜ್ಜಾಯ ತಿನ್ಬೇಕು. ಒಂದು ನೂರು ಬೋಂಡ ತಿನ್ಬೇಕು. ಒಂದು ನೂರು ನುಪ್ಪಟ್ಟು ತಿನ್ಬೇಕು. ಒಂದು ನೂರು ವಬ್ಬಿಟ್ಟು ತಿನ್ಬೇಕು. ಒಂದು ನೂರು ದ್ವಾಸೆ ತಿನ್ಬೇಕು, ಒಂದು ಬಿಂದಿಗೆ ನೀರು ಕುಡೀಬೇಕು. ಒಂದು ತಪ್ಪಲೆ ಹಾಲು ಕುಡೀಬೇಕು' ಎಂದು ಅಪ್ಪ ಆವೇಶದಿಂದ ಪಟ್ಟಿ ನೀಡುತ್ತಿದ್ದ. ಸಾಕು ಸಾಕು ಇಷ್ಟು ಸಾಕು ಎಂದು ತಾತ ಇಷ್ಟಕ್ಕೇ ನಿಲ್ಲಿಸಿ; 'ಶಿವರುದ್ರಾ ಇದ್ಕೆ ಏನಂತಿಯೊ' ಎಂದರು. 'ಆಯ್ತು ಕನಪ್ಪಾ, ನೀವೇಳ್ದಂಗೆ ಆಯ್ತು. ನಾನೀ ಪಂತುಕ್ಕೆ ವಪ್ಪಕಂಡಿವಿನಿ' ಎಂದು ದೃಢವಾಗಿ ಹೇಳಿದ ಕೂಡಲೆ ತುಂಬಿದ್ದ ಅಂಗಡಿಯೊಳಗೆ ಅಚ್ಚರಿಯು ತೇಲಿಹೋಯಿತು. ಜನ ತಲೆಗೊಂದರಂತೆ ಮಾತಾಡಿ ಈ ಪಂಥದಲ್ಲಿ ಈತ ಸೋತರೆ ಅವನಿಗೆ ಏನು ಶಿಕ್ಷೆ ವಿಧಿಸಬೇಕೆಂದು ಗದ್ದಲವೆಬ್ಬಿಸಿದರು. ಆ ಕೆಲಸವನ್ನು ತಂದೆಯ ಜವಾಬ್ದಾರಿಗೇ ವಹಿಸಿದರು. ಅಪ್ಪ ತಕ್ಷಣವೇ ಮೂರು ಷರತ್ತುಗಳನ್ನು ಮುಂದಿಟ್ಟ.

'ಒಂದು ಪಕ್ಸ ಇವ್ನುನೇನಾದ್ರೂ ಸೋತ್ರೆ, ಸಾಯುಗಂಟಾ ಯಾವ್ ಯೆಂಗ್ಸುನ್ ಮೊಕಾನೂ ನೋಡುವಂಗಿಲ್ಲ, ಯಾವ್ ಹೆಣ್ಣನ್ನೂ ಮದುವೆ ಆಗುವಂಗಿಲ್ಲ. ಎರುಡ್ನೆದೂ, ಇವನು ಸೋತಕೂಡ್ಲೇ ವೂರ್ ಬಿಟ್ಟು ದೇಶಾಂತ್ರ ವಂಟೋಗ್‌ಬೇಕು. ಮೂರ್ನೇದೂ ಇವನು ಗೆದ್ರೆ ಇವನ ಮಾತ್ನಂತೆ ನಾವು ನಡಕೊಳೋಕೆ ಸಿದ್ಧ' ಎಂದು ಗಲ್ಲದ ಮೇಲೆ ಕೂತು 'ಇದಕ್ಕೆ ಎಲ್ರೂ ಒಪ್ತೀರಿತಾನೆ' ಎಂದು ಕೇಳಿದ. ಅದರಂತೆಯೇ ಎಲ್ಲರೂ ಒಪ್ಪಿದರು. ನನ್ನ ತಾತ ವಿಷಾದದಿಂದ ಶಿವರುದ್ರನ ಕಡೆಗೆ ನೋಡಿ : 'ನೋಡ್ಲೋ, ಯೋಚ್ನೆ ಮಾಡಿ ನೋಡು. ಮಾತಂದ ಮೇಲೆ ಮಾತು. ಹತ್ತೂ ಜನರ ಮುಂದೆ ಮಾತಿಗೆ ಸಿಕ್ಕಾಕೋ ಬೇಡ' ಎಂದು ಎಚ್ಚರಿಸಿದರು. ಶಿವರುದ್ರನನ್ನು ಅಂತಹ ಸ್ಥಿತಿಯಲ್ಲಿ ತಡೆಯುವುದು ಯಾರಿಂದಲೂ ಸಾಧ್ಯವಿರಲಿಲ್ಲ. ದಪ್ಪದಪ್ಪದಾದ ನೂರು ಮುದ್ದೆ ಉಂಡು ನಾಲ್ಕು ಕೆ.ಜಿ. ಮಾಂಸ ತಿಂದಿದ್ದ ಅವನಿಗೆ ತಾತನ ಕೈರುಚಿಯ ಪ[illegible]
ಪ್ರಿಯ ತಿಂಡಿಗಳ ಆಸೆಯು ಇದ್ಯಾವ ಲೆಕ್ಕ ಎನಿಸಿ ಸೆಳೆದಿತ್ತು. ಅಲ್ಲದೆ ಜನರೆಲ್ಲ ಅ[illegible]
ಬಕಾಸುರ ಶಕ್ತಿಗೇ ಸವಾಲು ಎಸೆದಿದ್ದರಿಂದ ಸ್ವಾಭಿಮಾನ ಕೆರಳಿತ್ತು.

'ಹಾಗಾದ್ರೆ ಬಾಜಿ ಯಾವತ್ತು' ಎಂದು ಜನ ಕೂಗಾಡಿದರು. 'ನಾಳೆನೇ ಆ[illegible]
ಎಂದು ಶಿವಲಿಂಗ ಅವರ ಅರಚಾಟದ ಮಧ್ಯೆ ತಣ್ಣಗೆ ಹೇಳಿದ. ಆಗಲೇ ಯುಗಾ[illegible]
ಹಬ್ಬ ಊರೊಳಕ್ಕೆ ಬಂದಾಗಿತ್ತು. ತಾತನೇ ನಿಶ್ಚಯಿಸಿ ಹೇಳಿದ : 'ಹಬ್ಬದ [illegible]
ಮಾರಮ್ಮನ ಗುಡಿ ಮುಂದೆ ನೆರೆದ ಸಮಸ್ತರ ಎದಿರು ಬಾಜಿ ನಡೆಸೋಣ' ಎಂ[illegible]
'ಆಗಬಹುದೇನೊ ಶಿವರುದ್ರಾ' ಎಂದು ಕೇಳಿದರು. 'ನೀವೇಳ್ದಂಗೇ ಆಗ್ಲಿ ಕನ್ರಪ್ಪಾ[illegible]
ಎನ್ನುತ್ತ ಶಿವರುದ್ರ ಇನ್ನೂ ಉದ್ವೇಗದಲ್ಲೇ ವಾಲಾಡುತ್ತಿದ್ದ. ಆತನನ್ನು ಸೂಕ್ಷ್ಮವಾ[illegible]
ದಿಟ್ಟಿಸಿದ ತಾತ, 'ಮತ್ತೇನೊ ನಿನ್ನ ಮಾತೂ' ಎಂದು ಕೇಳಿದರು. 'ನೀಮ್ ಪಂತುಕ[illegible]
ವಪ್ಪಿವಿನಿ, ನಾ ಸೋತ್ರೆ ನೀವೇನೇಳಿದ್ದಿರೂ ಅದ್ರಂತೇ ನಡ್ಕತಿನೀ... ಆದ್ರೇ ನಾನ[illegible]
ಒಂದ್ ಮಾತಾ ಕೇಳ್ತಿನಿ. ಅದ್ಕೆ ನೀವು ವಪ್ಕಬೇಕು' ಎಂದು ತನ್ನ ತಂದೆಯ [illegible]
ನೋಡಿದ. 'ಅದೇನ್ ಯೇಳ್ಲ' ಎಂದು ತಂದೆ ತಿರಸ್ಕಾರದಿಂದ ಅವನೆ[illegible]
ನೋಡಿದರು. 'ನೋಡ್ರಣ್ಣಾ, ನೀವೇಳ್ದಿನ್ನೆಲ್ಲ ವಪ್ಕತಿನಿ. ನಾನೊಂದು ವ[illegible]
ಗೆದ್ದುಬಿಟ್ರೆ, ಆಗ ಯೀ ವೂರೆಲಿರೊ ಚಂದುಳ್ಳಿ ಚೆಲುವೇರ್ನೆಲ್ಲ ನೀವು ನ[illegible]
ಕೊಟ್ಟುಬಿಡಬೇಕು' ಎಂದು ಯಾವ ಭಯವೂ ಇಲ್ಲದೆ ಕೇಳಿ ನೀವು ಈ ನನ್ನ ಷರ[illegible]
ಒಪ್ಪಿದರೆ ಮಾತ್ರ ಮುಂದುವರಿಯುವೆ ಎಂದು ಸವಾಲಿಗೆ ಸವಾಲು ಎಸೆದ. ಒಂದು ಕ್ಷ[illegible]
ಎಲ್ಲರೂ ಉದ್ಗಾರ ತೆಗೆದರು. ಹಾಗೆ ಆಗೋದಿಲ್ಲ ಎಂದು ಕೆಲವರು ಖ್ಯಾತೆ ತೆಗೆದರ[illegible]
ಇದು ಅತಿಯಾಯ್ತೆಂದು ಹಲವರು ರೇಗಿದರು. ತಾತ ಇಕ್ಕಟ್ಟಿಗೆ ಸಿಲುಕಿದ್ದರು. ತಂ[illegible]
ಉಢಾಪೆಯಿಂದ ಅಷ್ಟೇತಾನೆ, ಮೊದ್ಲು ನೀನು ಬಾಜಿಗೆದ್ದು ಈ ಮಾತ ಕೇಳು ಎಂ[illegible]
ಉಪೇಕ್ಷಿಸಿದರು. ತಾತನ ಗಮನ ಸೆಳೆದು 'ನೋಡ್ರಾಪ್ಪಾ ಇದ್ಕೆ ನೀವೇ ಸಾಕ್ಷಿ. ನಾನು ನ[illegible]
ಪ್ರಾಣನೇ ಯೀ ಪಂತುಕ್ಕೆ ಕಟ್ಟಿ ಈ ಮಾತಾ ಆಡ್ತಿವಿನಿ. ಎಲ್ರುಗೂ ಇದ್ಕೆ ಒಪ್ಗೆ ಅ[illegible]
ತಾನೆ' ಎಂದು ಮತ್ತೊಮ್ಮೆ ಕೇಳಿದ. ನನ್ನ ತಂದೆಯೇ ಎಲ್ಲರ ಪರವಾಗಿ : 'ಆಯ್ತು ಕ[illegible]


## ನಮ್ಮ ಜನಪ್ರಿಯ ಹೊಸ ಪ್ರಕಟಣೆಗಳು

1. ನೂತನ ರುಚಿಕರ ಪಾಕಶಾಸ್ತ್ರ — ಬಿ. ಎಂ. ಕೋಮಲ — 30.00
2. ಭಯ, ದುಃಖ, ಕೋಪಗಳ ಹತೋಟಿ ಹೇಗೆ ? — ಡಾ॥ ಸಿ. ಆರ್. ಚಂದ್ರಶೇಖರ್ — 15.00
3. ನಮ್ಮ ನಿಮ್ಮ ಅಸಹಜ ನಡೆವಳಿಕೆಗಳಿಗೆ ಪರಿಹಾರವೇನು ?* — ಡಾ॥ ಸಿ. ಆರ್. ಚಂದ್ರಶೇಖರ್ — 25.00
4. How to Keep the Mind Strong & Healthy — *Dr. C. R. Chandrashekar* — 15.00
5. (ಅ)ವಿವಾಹಿತರ ಸಮಸ್ಯೆಗಳು ಹಾಗೂ ಪರಿಹಾರ — ಡಾ॥ ಸಿ. ಆರ್. ಚಂದ್ರಶೇಖರ್ — 45.00
6. ವೈವಾಹಿಕ ಜೀವನ ಪ್ರಶ್ನೆ-ಪರಿಹಾರ — ಡಾ॥ ಸಿ. ಆರ್. ಚಂದ್ರಶೇಖರ್ — 15.00
7. ಕರ್ನಾಟಕದ ಔಷಧೀಯ ಸಸ್ಯಗಳು (ಮಾಲಿಕೆ-1) — ಡಾ॥ ಮಾಗಡಿ ಆರ್. ಗುರುದೇವ — 150.00
8. ಕರ್ನಾಟಕದ ಔಷಧೀಯ ಸಸ್ಯಗಳು (ಮಾಲಿಕೆ-2) — ಡಾ॥ ಮಾಗಡಿ ಆರ್. ಗುರುದೇವ — 300.00
9. ಮನೆ ಔಷಧಿಗಳು — ಡಾ॥ ಮಾಗಡಿ ಆರ್. ಗುರುದೇವ — 10.00
10. ಕರ್ನಾಟಕ ಸಸ್ಯಗಳ ಸಸ್ಯಶಾಸ್ತ್ರೀಯ, ಕನ್ನಡ ಕೊಂಕಣಿ ಮತ್ತು ತುಳು ಹೆಸರುಗಳು — ಡಾ॥ ಮಾಗಡಿ ಆರ್. ಗುರುದೇವ — 300.00
11. Botanical and Vernacular Names of South Indian Plants — *Dr. Magadi R. Gurudeva* — 800.00
12. ಆಯುರ್ವೇದದ 108 ಸುಲಭ ಚಿಕಿತ್ಸೆಗಳು ಡಾ॥ ಮಾಗಡಿ ಆರ್. ಗುರುದೇವ — 10.00
13. ಆಯುರ್ವೇದದ ಅದ್ಭುತ ಗುಣಗಳು ಹಾಗೂ ಸರಳ ಚಿಕಿತ್ಸೆಗಳು — ಡಾ॥ ವೈ. ಪರಮೇಶ್ವರಯ್ಯ — 60.00
14. ಔಷಧೀಯ ಗುಣವುಳ್ಳ ಹಿತ್ತಲ ಗಿಡ — ಡಾ॥ ವೈಜಯಂತಿ ಮಾಲಾ — 10.00
15. ಅಪೂರ್ವ ಗಿಡಮೂಲಿಕೆಗಳು ಹಾಗೂ ಸರಳ ಚಿಕಿತ್ಸೆಗಳು — ವೈದ್ಯ ಎ. ಆರ್. ಎಂ. ಸಾಹೇಬ್ — 50.00
16. ಶತಾಯುಷ್ಯಕ್ಕಾಗಿ ಪರ್ಯಾಯ ಚಿಕಿತ್ಸೆಗಳು — ಡಾ॥ ಟಿ. ಜಿ. ಹೊನ್ನಗಿರಿಯಪ್ಪ — 50.00
17. ಹಾಸ್ಯಮಲ್ಲಿಗೆ — 'ಪಾಪಪಾಂಡು' ಖ್ಯಾತಿಯ — 20.00
18. ವರ್ಗಾವರ್ಗಿ* — ಎಂ. ಎಸ್. ನರಸಿಂಹಮೂರ್ತಿ — 35.00
19. ಚುಕ್ಕಿ ಚಿತ್ರಗಳಲ್ಲಿ ಶತಸಾಹಿತ್ಯ ಪ್ರತಿಭೆ — ಮೋಹನ್ ವರ್ಣೇಕರ್ — 200.00
(ಕನ್ನಡದ ನೂರು ಮಂದಿ ಪ್ರಸಿದ್ಧ ಸಾಹಿತಿಗಳ ಚುಕ್ಕಿಚಿತ್ರಗಳು ಮತ್ತು ಪರಿಚಯ ಸಂಗ್ರಹ)
20. ನಮಗೆ ಖಾಯಿಲೆಗಳು ಏಕೆ ಬರುತ್ತವೆ ? — ಡಾ॥ ಟಿ. ಜಿ. ಹೊನ್ನಗಿರಿಯಪ್ಪ — 20.00
21. ಶ್ರೀನಿವಾಸ ಕಲ್ಯಾಣ — ಹೆಚ್. ಜಿ. ರಾಧಾದೇವಿ — 90.00
22. ಭಾರತದ ರತ್ನ ಡಾ॥ ರಾಜ್‌ಕುಮಾರ್ — ಬೆ. ಗೋ. ರಮೇಶ್ — 60.00
23. ಮೊದಲ 100 ವರ್ಷಗಳು - ಜೋಗಜಲಪಾತ — ನಾ. ಡಿಸೋಜ — 45.00
24. ಸದಾ ಆರೋಗ್ಯವಾಗಿರುವುದು ಹೇಗೆ? — ಡಾ॥ ಸಿ. ಆರ್. ಚಂದ್ರಶೇಖರ್ — 15.00
25. ಆಂದೋಲನ — ಉಷಾನವರತ್ನರಾಮ್ — 75.00
26. ಆಶ್ವಾಸನೆ — ಉಷಾನವರತ್ನರಾಮ್ — 75.00

* ರಾಜ್ಯಸಾಹಿತ್ಯ ಅಕಾಡೆಮಿ ಬಹುಮಾನಿತ ಕೃತಿಗಳು

ಇದೀಗ ಪ್ರಕಟವಾಗಿದೆ : (1) ಆರೋಗ್ಯದರ್ಶನ ಎನ್. ಗೋಪಾಲಕೃಷ್ಣ
(2) ಶತಾಯುಷ್ಯದ ಜೀವನ ಶೈಲಿ ನಿಮ್ಮ ಆರೋಗ್ಯ ಎನ್. ವಿಶ್ವರೂಪಾಚಾರ್
(3) ಮಾನಸ ಡಾ॥ ಕೆ. ವಿ. ಅಶೋಕ ಪೈ (4) ಬದುಕಿಗೆ ಬಣ್ಣ ನಾ. ಡಿಸೋಜ
(5) ನೀತಿಬೋಧಕ ಮಕ್ಕಳ ರಾಮಾಯಣ ಮೋಹನ್ ವರ್ಣೇಕರ್
(6) ಸವಿ ಉಷಾನವರತ್ನರಾಮ್ (7) ಹ್ಯಾಪಿಬರ್ಥ್‌ಡೇ ಉಷಾನವರತ್ನರಾಮ್
(8) ಸುವರ್ಣಕರ್ನಾಟಕ ಬೆ.ಗೋ. ರಮೇಶ್ (9) **Ramayana** *K. Narayana Rao*

# ದಿವ್ಯಚಂದ್ರ ಪ್ರಕಾಶನ

'ಕಾಳಿಕಾ ಸೌಧ', ನಂ. 6/7, ಪೂರ್ಣಯ್ಯ ಛತ್ರದ ರಸ್ತೆ (ಕಾರ್ಪೊರೇಷನ್ ವಾರ್ಡ್ ಆಫೀಸ್ ಎದುರು)
ಬಳೆಪೇಟೆ ಕ್ರಾಸ್, ಬೆಂಗಳೂರು - 560 053 ✆ 23404627 ಮೊಬೈಲ್ : 9448259595

ವರುದ್ರಾ, ನಿನ್ ಮಾತಾ ನಾನು ಒಪ್ಪಿದಿನಿ. ಬಾಜಿಗೆ ಸಿದ್ದವಾಗಿರು' ಎಂದು ರ್ಚೆಯನ್ನು ಅಲ್ಲಿಗೆ ನಿಲ್ಲಿಸಿ ಯುಗಾದಿ ಹಬ್ಬದ ದಿನಕ್ಕಾಗಿ ಎಲ್ಲರೂ ಕಾಯುವಂತೆ ೂಚಿಸಿದರು.

ಈ ಯಾವ ಬಾಜಿ ರಗಳೆಗೂ ಸಂಬಂಧಪಡದ ಆ ಊರ ಚೆಲುವೆಯರು ದರಿಂದ ಹೆದರಿದ್ದರು. ಯಾರನ್ನು ಕೇಳಿ ಹೀಗೆ ಪಂಥ ಕಟ್ಟಲಾಗಿದೆ ಎಂದು ಪ್ರಾಯದ ಎದೆಕಾತಿಯರ ಮಾತಿಗೆ ಕಿಮ್ಮತ್ತಿರಲಿಲ್ಲ. ಊರ ಎಲ್ಲ ಗಂಡಸರೂ ುಜಮಾನರೂ ತುಂಬಿದ್ದ ಸಭೆಯಲ್ಲೇ ಆ ತೀರ್ಮಾನ ಆಗಿರೋವಾಗ ಈ ಚಿನಾಲಿ ಲುವೆಯರ ರಗಳೆ ಏನು ಎಂದು ಪುಂಡು ಪೋಕರಿಗಳು ಗಂಟಲು ಬಿಸಿ ಾಡಿಕೊಂಡು ಪ್ರತಿಕ್ರಿಯಿಸಿದ್ದರು. ಅವನು ಗೆದ್ದಂತ ಕಾಲಕ್ಕೆ ನೋಡಿಕೊಳ್ಳುವ ಎಂದು ನೇಕರು ಆ ಬಾಜಿಯನ್ನೇ ನಿರ್ಲಕ್ಷಿಸಿದ್ದರು.

**ರಡನೆ ಪಾದ**

ಶಿವರುದ್ರ ಹೊಳೆಯ ದಂಡೆಯಲ್ಲಿ ಕೂತು ಯೋಚಿಸುತ್ತಿದ್ದ. ಅವನ ತಾಯಿ ಂಗವ್ವ ಮಗನ ಇಂತಹ ಬಾಜಿಯನ್ನು ತಿಳಿದು ಕಂಗೆಟ್ಟಿದ್ದಳು. ಮಗನ ಮೇಲೆ ಸಾಧ್ಯ ಸಿಟ್ಟು ಬಂದು ಇನ್ನು ತನಗೆ ಮುಖ ತೋರಿಸಬೇಡ ಹೊರಟುಹೋಗು ಂದು ಶಾಪವಿಕ್ಕಿದ್ದಳು. ಇದ್ದ ಒಬ್ಬನೇ ಮಗನಿಂದಲೂ ತನಗೆ ನೆಮ್ಮದಿ ಸಿಗಲಿಲ್ಲವಲ್ಲಾ ಂದು ಆಕೆ ಗಳಗಳ ಅತ್ತು ಎದೆ ಬಡಿದುಕೊಂಡು, ಮರ ಕಡಿಯುತ್ತಲೇ ಮರ ುರುಳಿ ಅದರ ಕೆಳಗೆ ಸಿಲುಕಿ ಸತ್ತಿದ್ದ ಗಂಡನ ನೆನೆದು ರೋದಿಸಿದ್ದಳು. ಒಂದು ಕ್ಷಣ, ಾಕಾದರೂ ಈ ಬಾಜಿಗೆ ಒಪ್ಪಿದೆನೊ ಎಂದು ಶಿವರುದ್ರ ಅಳುಕಿದ. ಊರ ತುಂಬ ವರುದ್ರನ ಷರತ್ತಿನ ಬಗ್ಗೆ ನೀತಿ ಅನೀತಿಯ ಚರ್ಚೆ ಸಾಗಿತ್ತು. ಹರಿವ ತೊರೆಯ ುಳು ಜುಳು ನಾದವು ಶಿವಲಿಂಗನ ಎದೆಯಾಳದಲ್ಲಿ ಝೇಂಕರಿಸುತ್ತಿತ್ತು. ಸವಾಲಿನ ವಿಚಿತ್ರ ಸುಳಿಗೆ ಶಿವರುದ್ರ ಯಾವಾಗಲೋ ಸಿಲುಕಿಯಾಗಿತ್ತು. ಜೀವನದಲ್ಲಿ ಆತನಿಗೆ ಇದ್ದ ಳೆತಗಳೆಂದರೆ ಎರಡೇ. ಒಂದು ಅಸಾಧ್ಯವಾದದ್ದನ್ನು ಸಾಧಿ ುವ ಯಾವುದೇ ಬಗೆಯ ಬಾಜಿ ಸವಾಲು, ಎರಡು ಊರಾಚೆ ಯಾವತ್ತೂ ಹರಿವ ತೊರೆಯ ಮೋಹದಲ್ಲಿ ಮೀಯುವುದು. ಊರ ತೊರೆಯೊ ಅದು ಎಂದೆಂದೂ ಬತ್ತದ ಹಾಲು ಚಿಲುಮೆಯಂತೆ ಹರಿಯುತ್ತಿತ್ತು. ಅವನ ಬಾಲ್ಯವೆಲ್ಲವೂ ಅದರಲ್ಲೇ ಮಿಂದುದಾಗಿತ್ತು. ಸಂಜೆಯ ತಂಪು ತೊರೆಯ ಮಾಧುರ್ಯ ಶಿವರುದ್ರನ ದೇಹದ ಒಳಗೆಲ್ಲ ಗಾಳಿಯ ಜೊತೆ ಮಿಳಿತು ಅವನ ಆತಂಕವನ್ನು ತಗ್ಗಿಸುತ್ತಿತ್ತು.

ನನ್ನ ತಂದೆ ಶಿವರುದ್ರನನ್ನು ಮಟ್ಟಹಾಕಲೇಬೇಕೆಂದು ಾತರಿಸುತ್ತಿದ್ದರು. ತಾತನೇ ಅಷ್ಟೆಲ್ಲ ಬಗೆಯ ತಿಂಡಿ ಗಳನ್ನು ತಯಾರಿಸಬೇಕಿತ್ತು. ತಿಂಡಿಗಳ ರುಚಿ ಕೆಡಿಸಿ ಅವನ್ನು ತಿನ್ನಲಾಗದಂತೆ ಮಾಡ ಬೇಕೆಂದು ತಾತನ ಜೊತೆ ನನ್ನ ತಂದೆ ಒತ್ತಾಯಿಸುತ್ತಿದ್ದುದು ನನ್ನ ಕಿವಿ ಮೇಲೆ ಬಿತ್ತು. ಆ ಕಡೆ ಜೂಜಾಟದ ಸಡಗರ ಊರ ತುಂಬ ಕುಣಿದಾಡುತಿತ್ತು. ಒಬ್ಬೊಬ್ಬರೂ ಯಾವುದಾವುದೊ ಬಾಜಿಗೆ ಬಿದ್ದು ಗೆಲುವಿಗಾಗಿ ಪರಿತಪಿಸುವವರಂತೆ ಇಸ್ಪೇಟ್ ಎಲೆಗಳನ್ನು ಕಲಸುತ್ತಾ ಎಲೆಗಳ ಜೋಡಿಸುತ್ತಾ ಬಿಡುತ್ತಾ ತಕ್ಕ ಜೋಡಿ ಎಲೆ ಬರದೆ ಜೋಕರ್‌ಗಳ ನಾಪತ್ತೆಯಾಗಿ ಗೆಲುವಿನ ದಾರಿಯಲ್ಲಿ ಜಾರಿಬಿದ್ದಂತೆ ಗುಂಪು ಗುಂಪಾಗಿ ಜೂಜಾಡುತ್ತಿದ್ದವರು ಬದುಕಿನ ಸೋಲುಗೆಲುವಿನ ತೂತಾದ ತೆಪ್ಪದಲ್ಲಿ ಬದುಕುಳಿಯಲು ದಂಡೆಗಾಗಿ ಪ್ರಾರ್ಥಿಸುವಂತೆ ಅದೇ ಜೂಜಿನ ಅಮಲಲ್ಲಿ ಲೀನವಾಗಿದ್ದರು. ಬಾಜಿಗೆ ಹೆದರಿ ಶಿವರುದ್ರ ಊರು ಬಿಟ್ಟು ಓಡಿಹೋಗಿರಬೇಕೆಂದು ಕೆಲವರು ಆಡಿಕೊಂಡು ನಗುತ್ತಿದ್ದರು. ಯುಗಾದಿ ಹಬ್ಬದ ಸಡಗರ ಆಗಲೇ ಊರ ತುಂಬ ಹಬ್ಬಿತ್ತು. ನೆಂಟರಿಷ್ಟರು ಬಂದು ತಮ್ಮ ಅದೃಷ್ಟ ಪರೀಕ್ಷೆಯನ್ನು ಜೂಜಿಗೆ ಒಡ್ಡಿ ಶಿವರುದ್ರನ ಬಾಜಿಗಾಗಿ ಕಾಯುತ್ತಿದ್ದರು. ನಿಂಗವ್ವ ಮಗನ ಮೇಲಿನ ಸಂಕಟಕ್ಕೋ ಬದುಕಿನಲ್ಲಿ ಸೋತು ಹಣ್ಣಾದ ದೀನ ಸ್ಥಿತಿಗೊ ಅಥವಾ ಮಗನ ಮೇಲಿನ ಕರುಳ ತುಡಿತಕ್ಕೋ ಬೇಸತ್ತು ನನಗ್ಯಾವ ಹಬ್ಬವೂ ಯಮಲೋಕದ ಸುಖವೂ ಎಂದು ಕೂತುಬಿಟ್ಟಿದ್ದಳು.



ಕತ್ತಲು ಎತ್ತೆತ್ತಲು ಸೊಕ್ಕಿ ಸುಳಿದಾಡುತ್ತಿತ್ತು. ಬೆಳದಿಂಗಳು, ಹೊಳೆಯ ಜುಳುಜುಳು ನೀರ ಮೇಲೆ ತುಳುಕುತ್ತಿತ್ತು. ಮೋಹದ ಆ ಬೆಳದಿಂಗಳ ಹೊಳೆಯ ನೀರನ್ನೆಲ್ಲ ಕುಡಿದು ಅದರೊಳಗೇ ತಾನೂ ನೀರಾಗಿ ಕರಗಿ ಹರಿದುಹೋಗಲೇ ಎಂಬ ಬಯಕೆ ಮೂಡಿ ಊರ ಮಾರಿ ಗುಡಿಯ ಮುಂದೆ ಹಬ್ಬದ ಸಲುವಾಗಿ ಬಡಿಯುತ್ತಿರುವ ತಮಟೆ ನಗಾರಿಗಳ ಸದ್ದು ಶಿವರುದ್ರನ ಅಂತರಾಳವನ್ನು ಕಲಕಿತು. ತಾಯಿ ಮುಂದೆ ಹೋಗಿ ನಿಲ್ಲುವ ಧೈರ್ಯ ಸಾಲದೆ ಅದೇ ಮಾರಿಗುಡಿಗೆ ಬಂದು ಕೂತ. ಪೂಜಾರಪ್ಪ ಪಂಚಾಮೃತ ಕೊಟ್ಟು 'ಏನೋ ಶಿವರುದ್ರಾ, ನಾಳೆ ನಿಂದೇನಪ್ಪಾ ಗೆಲುವೂ' ಎಂದು ವ್ಯಂಗ್ಯವೂ ಮೆಚ್ಚಿಗೆಯೊ ಏನೊ ಎಂಬುದು ಗೊತ್ತಾಗದಂತೆ ಕೇಳಿದರು. ಶಿವರುದ್ರನ ಮನಸ್ಸು ಮಂಕಾಗಿತ್ತು. ಊರ ಚೆಲುವೆಯರು ಮಾರವ್ವನಿಗೆ ಪೂಜೆ ಮಾಡಿಸಲು ಬಂದಿದ್ದವರು ಅವನ ಕಡೆ ನೋಡಲು ಹೆದರಿದರು. ತಮಟೆ ನಗಾರಿಯವರು ಗಸ್ತಿಯಲ್ಲಿ ದೇವರ ಕಾಣುತ್ತ ಬಡಿಯುತ್ತಿದ್ದರು. ಹೈಕಳು ಶಿವರುದ್ರನ ಕಡೆ ವಿಚಿತ್ರವಾಗಿ ನೋಡುತ್ತಾ ಅವನು ರಾಕ್ಷಸನಿರಬಹುದು ಎಂದು ತಮ್ಮ ಅಜ್ಜಿಯರು ಹೇಳುತ್ತಿದ್ದ ರಾಕ್ಷಸರ ಕತೆಗಳ ಎಲ್ಲ ಗುಣಗಳನ್ನೂ ಅವನಲ್ಲಿ ಕಲ್ಪಿಸುತ್ತಾ ಗೇಲಿ ಮಾಡಿಕೊಂಡು ದೂರದಲ್ಲೇ ಅಣಕಿಸಿ ಕೊಳ್ಳುತ್ತಾ ಆಟವಾಡುತ್ತಿದ್ದರು. ಶಿವರುದ್ರ ಮಾರಿಗುಡಿಯ ಮೂಲೆ ಕಂಬ ಒರಗಿ ಮಂಡಿಗಳ ಮೇಲೆ ಗಲ್ಲವಿಟ್ಟುಕೊಂಡು ಸುಮ್ಮನೆ ಎಲ್ಲರನ್ನೂ ನೋಡುತ್ತಿದ್ದ.

ನನ್ನ ತಾತ ಆಗಲೆ ಕಜ್ಜಾಯ ಬೇಯಿಸಿ, ವಬ್ಬಟ್ಟು ಮಾಡಿ ನುಪ್ಪಟ್ಟು ತಟ್ಟುತ್ತಿದ್ದರು. ಅಷ್ಟೆಲ್ಲ ತಿಂಡಿಗಳನ್ನು ಮಾಡುವ ಗಡಿಬಿಡಿಯಲ್ಲಿ ನುಪ್ಪಟ್ಟಿನ ಹದ ಕೊಂಚ ವ್ಯತ್ಯಾಸವಾಗಿ ಅವು ತಿನ್ನಲು ಗಟ್ಟಿಯಾಗಿದ್ದವು. ನನ್ನ ತಾತ ಆ ತಿಂಡಿಗಳನ್ನೆಲ್ಲ ನಿಯತ್ತಿನಿಂದಲೇ ಹದವಾಗಿ ರುಚಿಯಾಗಿ ಮಾಡಲು ತೀರ್ಮಾನಿಸಿದ್ದರು. ಆದರೆ ತಂದೆಗೆ ಅದು ಇಷ್ಟವಿರಲಿಲ್ಲ. ಹೇಗಾದರೂ ಸ್ವಲ್ಪ ಹದ ತಪ್ಪಿಸಲು ನೋಡುತ್ತಿದ್ದರಿಂದ ಆತನಿಂದಲೇ ಏನೋ ಕರಾಮತ್ತು ನಡೆದಿತ್ತು. ಬಿದಿರು ಬುಟ್ಟಿಯಲ್ಲಿ ಒಂದು ನೂರು ಕಜ್ಜಾಯ, ಒಂದು ನೂರು ನುಪ್ಪಟ್ಟು, ಒಂದು ನೂರು ವಬ್ಬಟ್ಟನ್ನು ಎಣಿಸಿ ಜೋಡಿಸಿಡಲಾಯಿತು. ನಾಳೆಯೇ ಉಳಿದ ಬೋಂಡ, ದೋಸೆ ಇತ್ಯಾದಿಗಳನ್ನು ತಯಾರಿಸುವುದೆಂದು ತಾತ ಮಲಗಲು ಸಿದ್ಧವಾದರು. ಆಗಲೇ ಸಮಯ ನಡು ರಾತ್ರಿಯನ್ನು ಮೀರಿತ್ತು. ಈ ಶಿವರುದ್ರ ಊರಲ್ಲೇ ಇದ್ದಾನೆಂದು ತಿಳಿದುಕೊಂಡು ನಾಳೆ ಏನಾಗುತ್ತೋ ಎಂಬ ಸಣ್ಣ ಆತಂಕವನ್ನು ತುಂಬಿಕೊಂಡು ತಾತ ಶಿವಾ ಎಂದು ನಿದ್ದೆಗೆ ಜಾರಿದರು. ಮಾರಿಗುಡಿ ತಣ್ಣಗಿತ್ತು. ಮಾರವ್ವನ ಗುಡಿಯ ಒಳಗಿನ ದೀಪ ದಿವ್ಯವಾಗಿ ಉರಿಯುತ್ತಿತ್ತು. ನನ್ನ ತಂದೆಯ ಬಲಗೈ ಬಂಟರು 'ಇದೇ ನಮಗಿರೋ ಸರ್ರ್ಯಾದ ಸಂದರ್ಭ, ಈಗ ಬಿಟ್ರೆ ಮುಂದೆ ಅವನ್ನ ಯಿಡಿಯುದು ಕಸ್ಟ' ಎಂದು ತಂದೆಯ ಕಿವಿಯಲ್ಲಿ ಗುಟ್ಟು ಹೇಳುತ್ತಿದ್ದರು. ಹಾಗೇ ಮಾಡೋಣ ಎಂದು ತಂದೆ ನಿಗೂಢವಾಗಿ ತಲೆಯಾಡಿಸುತ್ತಿದ್ದರು. 'ಮಾರವ್ವಾ ಅವುನು ಅಲ್ಲೇ ಎಲ್ಲಾನು ಕಕ್ಕೆಂದು ನಿಗುರುವಂಗಾಗ್ಲಿ' ಎಂದು ಶಿವರುದ್ರನ ಮೇಲೆ ಹೆಂಗಸರು ಶಾಪವಿಕ್ಕುತ್ತಿದ್ದರು. 'ಇಂತಾ ಮಗನ ಎತ್ತಿ ಊರಿಗೆ ಉಪಕಾರ ಮಾಡಿದ್ದಿಯೆ ಕನ್ ನಿಂಗವ್ವಾ' ಎಂದು ಕೆಲವರು ಹಳಿದು ನಿಂಗವ್ವನ ಉರಿವ ಎದೆಗೆ ಮತ್ತಷ್ಟು ಎಣ್ಣೆ ಉಯ್ದಿದ್ದರು.

ಹರಿದ ತೊರೆ ಕ್ಷುದ್ರ ಲೋಕದ ಕೊಳೆಯನ್ನೆಲ್ಲ ತೊಳೆದುಕೊಂಡು ನೀರವ ರಾತ್ರಿಯಲ್ಲಿ ಸಾಗುತ್ತಿತ್ತು. ಯುಗಾದಿ ಹಬ್ಬದ ಸಿಹಿ ಪದಾರ್ಥಗಳ ತಯಾರಿಯಲ್ಲಿ ಹೆಂಗಸರು ಹೊತ್ತು ಮೀರಿದ್ದರೂ ತೊಡಗಿದ್ದರು. ಮಾರಿಗುಡಿಯ ಮೂಲೆಯಲ್ಲಿ ತೂಕಡಿಸುತ್ತಿದ್ದ ಶಿವರುದ್ರನ ನೆತ್ತಿಯಲ್ಲಿ ಆ ತೊರೆಯೆ ಚಿಲುಮೆಯಾಗಿ ಜಿನುಗಿದಂತೆ ಬೆವರು ಮೆಲ್ಲನೆ ಇರುಕುತ್ತಿತ್ತು. ಆ ತೊರೆಯ ಮೂಲವನ್ನೇ ಹಿಡಿದು ಭೂಮಿಯ ಒಳಗಿನ ಜಲದ ಕಣ್ಣಲ್ಲಿ ಇಳಿದಂತೆ ಶಿವರುದ್ರ ನಿದ್ದೆಗೆ ಜಾರಿದ್ದ. ಅವನ ಮನದ ತುಂಬ ತೊರೆಯ ನೀರೇ ನೀರೆಯಂತೆ ಎಲ್ಲಿಗೊ ಕರೆದುಕೊಂಡು ಸಾಗುತ್ತಿತ್ತು. ಜೂಜಿನಲ್ಲಿ

ಮುಳುಗಿದ್ದವರು ಕಾಲದ ಅಲೆಯಲ್ಲಿ ಎತ್ತಿ ಎಸೆಯಲ್ಪಡುತ್ತಿದ್ದರು. ಕೋಳಿ ಕೂಗುವ ಮೊದಲೇ ಮಾರವ್ವನ ಪೂಜಾರಪ್ಪ ಗಂಟೆಯ ಸದ್ದು ಮಾಡಿ ಹಬ್ಬದ ಶುಭ ಕ್ಷಣವನ್ನು ಊರ ತುಂಬ ಮೊಳಗಿಸಿದ್ದ. ಯುಗಾದಿಯ ಹಗಲು ಎಲ್ಲೆಡೆ ಸಂಭ್ರಮದಿಂದ ಚಾಚಿಕೊಂಡಿತ್ತು. ನಿಂಗವ್ವ ನಿತ್ಯದ ಚಾಕರಿಗೆ ತೊಡಗಿ ಎಮ್ಮೆಗಳ ಕೊಟಿಗೆ ಗುಡಿಸಿ ತಿಪ್ಪೆಗೆ ಕಸ ಸುರಿದು ತೊರೆಗೆ ಹೋಗಿ ಸ್ನಾನ ಮಾಡಿ ಬಂದು ''ತಾಯೀ ಮಾರವ್ವಾ ಕೊನೆ ಸಲ ಕೇಳಿಕೊಳ್ಳುತ್ತಿರುವೆ, ಈಗಲಾದರೂ ನನ್ನ ಮಗನಿಗೆ ಒಂದಿಷ್ಟು ಬುದ್ಧಿಕೊಟ್ಟು ಅವನನ್ನು ಸರಿದಾರಿಗೆ ಕಳಿಸವ್ವಾ'' ಎಂದು ಕೈ ಮುಗಿದು ಅಡ್ಡಬಿದ್ದು ಕೇಳಿಕೊಂಡಿದ್ದಳು.

ತಾತನ ಹೋಟೆಲಂತು ತುಂಬಿಹೋಗಿತ್ತು. ಆ ಶಿವರುದ್ರನ ಮೇಲೆ ಕಣ್ಣಿಟ್ಟಿರಿ ಎಂದು ನನ್ನ ತಂದೆ ಸೂಚಿಸಿದ್ದರಿಂದ ಆತನ ಬಂಟರು ಆಗಲೆ ಅವನನ್ನು ತಮ್ಮ ಹದ್ದುಬಸ್ತಿಗೆ ತಂದುಕೊಂಡಿದ್ದರು. ಪರ ಊರಿಂದ ಬಂದಿದ್ದವರು ಶಿವರುದ್ರನ ಪಣ ಕೇಳಿ ತರಾವರಿಯಾಗಿ ಕತೆಕಟ್ಟಿ ಮಾತನಾಡಿಕೊಳ್ಳುತ್ತಿದ್ದರು. ನನ್ನ ತಂದೆ ಇದು ತನ್ನ ಪ್ರತಿಷ್ಠೆಯ ಪಣ ಎಂದು ಹೇಳುತ್ತಾ ಸುತ್ತೇಳು ಹಳ್ಳಿಯ ನೆಂಟರ ಮುಂದೆ ತುಂಬಿದ ಊರ ಸಮಸ್ತರ ಎದಿರು ತಾನು ಶಿವರುದ್ರನ ಮೇಲೆ ಗೆದ್ದು ನಿಲ್ಲಬೇಕು ಎಂಬುದನ್ನು ಕಲ್ಪಿಸಿಕೊಳ್ಳುತ್ತಾ ಗಟ್ಟಿದನಿಯಲ್ಲಿ ಮಾತನಾಡುತ್ತಿದ್ದರು. ಅಪ್ಪನಿಗೆ ಅಂತಹ ಶಿವರುದ್ರನ ಮೇಲೆ ಅದೆಂತಹ ಅಸೂಯೆಯೊ, ಸೇಡೊ ಎಡೆಬಿಚ್ಚಿ ಕುಟುಕಿಬಿಡಲು ಕಾಯುತ್ತಿತ್ತು. ಎಲ್ಲೆಡೆ ಹೋಳಿಗೆಯ ಗಮಲು ಹಬೆಯಾಡುತ್ತಿತ್ತು. ನಮ್ಮ ಅಜ್ಜಿ ಆ ಶಿವರುದ್ರನ ಮೇಲೆ ಊರಾದ ಊರೇ ಇಂತಾ ಜಿದ್ದಿನ ಬಾಜಿಗೆ ಬಿದ್ದಿದೆಯಲ್ಲಾ ಏನಾದರೂ ಎಡವಟ್ಟಾದರೆ ಏನು ಕತೇ ಎಂದು ಬೇಸರಿಸಿದ್ದರು. ನನ್ನ ತಾಯಿ ಮುಂದೇನಾಗುವುದೊ ಎಂಬ ಆತಂಕದಲ್ಲಿ ನೂರು ದೋಸೆಗಾಗಿ ಸಿದ್ಧವಾಗಿದ್ದ ಸಂಪಣವನ್ನು ನೋಡಿ ತನ್ನೊಳಗೇ ಕಳವಳವನ್ನು ನುಂಗಿಕೊಂಡಿದ್ದಳು. ಊರ ಹೈಕಳಂತು ಸಂಜೆ ಆಗುವುದನ್ನೇ ಕಾಯುತ್ತಿದ್ದರು. ಒಂದಿಬ್ಬರು ಚೆಲುವೆಯರು ತಮ್ಮೊಳಗೇ ಮಾತನಾಡಿಕೊಳ್ಳುತ್ತಾ ಒಂದು ವೇಳೆ ಶಿವರುದ್ರ ಪಂದ್ಯ ಗೆದ್ದರೆ ದಿಟವಾಗಿಯೂ ಪಂಚಾಯ್ತಿಯವರು ನಮ್ಮನ್ನು ಅವನಿಗೆ ಕೊಟ್ಟುಬಿಡುವರೇ? ಕೊಟ್ಟರೂ ಕೂಡ ನಮ್ಮನ್ನೆಲ್ಲ ಅವನು ಏನು ಮಾಡುವನು? ಎಲ್ಲರನ್ನೂ ಮದುವೆ ಮಾಡಿಕೊಳ್ಳುವನೇ? ಇಲ್ಲವೇ ಒಟ್ಟಾಗಿ ಎಲ್ಲರನ್ನೂ ದೂರ ದೂರ ಮರೆಯ ಮರೆಗೆ ಕರೆದುಕೊಂಡು ಹೋಗಿ ಕೊಂದುಬಿಡುವನೇ? ಅಥ… ನಮ್ಮೆಲ್ಲರ ಸೇವೆ ಮಾಡುತ್ತಾ ಪ್ರೀತಿಯಲಿ ನಗಿಸುತ್ತಾ ಬಾಲಗೋಪಾಲನಂತೆ … ಆಡಿಕೊಂಡಿರಬಲ್ಲನೇ ಎಂದು ಪ್ರಾಯದ ರೆಕ್ಕೆ ಮೇಲೆ ಕೂತು ಹರಟುತ್ತಿದ್ದರು.

ಜೂಜಿನ ಪ್ರವೀಣರು ಜಗತ್ತನ್ನು ಮರೆತು ಇಸ್ಪೀಟೆಲೆಗಳ ಲೋಕದಲ್ಲಿ ಸೋ… ಗೆಲುವಿನ ಹಾಯಿಗೋಲು ಮೀಟುತ್ತ ಎಂದೆಂದೂ ಸಿಗದ ದಡದ ಭ್ರಮೆಯಲ್ಲಿ ತೇ… ಹೋಗುತ್ತಿದ್ದರು. ತಾತ ಒಂದು ನೂರು ಬೋಂಡ ಬೇಯಿಸಿ ಮಂಕರಿಯಲ್ಲಿ ತುಂಬಿ… ಸಂಜೆಗೆ ದೋಸೆ ಸುಟ್ಟರಾಯಿತೆಂದು ಹೋಟೆಲಿನ ಗಜಿಬಿಜಿಯ ಮಾತುಗ… ಸೇರಿಕೊಂಡರು. ಹರಿವ ತೊರೆ ಇವತ್ತು ಯಾಕೆ ಇನ್ನೂ ಆ ಶಿವರುದ್ರ ತನ್ನೊ… ಮೀಯಲು ಬಂದಿಲ್ಲ ಎಂದು ಕಾಯುತ್ತಿತ್ತು. ಊರಾದ ಊರೆಲ್ಲ ತೊರೆಯಲ್ಲಿ ಮಿಂ… ಮಡಿಯಾಗಿ ಆಗಲೇ ಬಹಳ ಸಮಯವಾಗಿ ನಡು ಮಧ್ಯಾಹ್ನವು ನೆತ್ತಿ ಮೇಲೆ ನಿಂತಿತು… ಶಿವರುದ್ರ ಹೋಟೆಲಿನ ಮೂಲೆಯೊಂದರಲ್ಲಿ ಸೆರೆಯಾಗಿ ಕುಳಿತಿದ್ದ. ಎಲ್ಲೂ ಹೋಗ… ಅವನನ್ನು ಅಪ್ಪನ ಭಂಟರು ಬಿಡಲು ತಯಾರಿರಲಿಲ್ಲ. ಆಗಾಗ ಅವನ ಕಡೆ ಕಣ್ಣಿಂದ… ಎಚ್ಚರಿಸುತ್ತಾ, 'ಇವತ್ತದೆ ಕನೊ ಶಿವರುದ್ರಾ ಮಹಾ ಮಾರ್ಲಮ್ಮಿ ಹಬ್ಬಾ' ಎಂದು ಒ… ಹೇಳಿದರೆ ಮತ್ತೊಬ್ಬ ಅದೇ ಮಾತ ಮುಂದಿನ ಸಾಲನ್ನು ಬೆಳೆಸಿ 'ಮಾರವ್ವ ಎಸರೇ… ಕೋಣನ ಕಡ್ಡು ಬಾರಿ ದಿನಾಯ್ತು' ಎಂದು ಶಿವರುದ್ರನ ಕಡೆ ನೋಡಿ ನಗಾಡುತ್ತಿದ್ದರು… ಹರಕೆಯ ಕೋಣದ ಹಾಗೆಯೆ ಶಿವರುದ್ರ ತೆಪ್ಪಗೆ ಆಗಾಗ ಟೀ ಕುಡಿಯುತ್ತ ಎಲ್ಲರನ… ಪಿಳಿಪಿಳಿ ಕಣ್ಣು ಬಿಟ್ಟು ಗಮನಿಸುತ್ತಾ ರಾತ್ರಿಯ ಪಂಥಕ್ಕಾಗಿ ಕಾಯುತ್ತಿದ್ದ. ಅವನ ತಾ… ನಿಂಗವ್ವನ ಮನಸ್ಸಲ್ಲಿ ಅಂತಃಕರಣದ ಸೆಳೆತ ಉಂಟಾಗಿ ತಾತನ ಬಳಿ ಬಂದು '… ಬಾಜಿಯ ಯಾಕಾದ್ರೂ ಮಾಡ್ಸೀರಪ್ಪಾ? ಇದಾ ಬಿಟ್‌ಬುಡೀ. ಆ ಮುಠಾಳುನ್ನಾ ಮ… ಮನೆಗೆ ಕಳಿಸ್‌ಕೊಡ್ರಪ್ಪಾ' ಎಂದು ವಿನಂತಿಸಿದಳು. ನನ್ನ ತಾತ 'ಎಲ್ಲಾ ಆದ ಮೇಲೆ ಯಿ… ಬಂದು ಯೇಳ್ತಿಯಲ್ಲ, ಮೊದ್ಲೆ ಬರ್ದೆ ಎಲ್ಲಿಗೋಗಿದ್ದೆ' ಎನ್ನುವುದಕ್ಕೂ ನನ್ನಪ್ಪ ನಿಂಗವ… ಗದರಿ ಕಳಿಸುವುದಕ್ಕೂ ಒಂದೇ ಆಗಿತ್ತು. ಒಂದು ನೂರು ದೋಸೆ ಸುಡುವುದು ತಾತನಿ… ಕಷ್ಟವೆನಿಸಿರಲಿಲ್ಲ. ಹಬ್ಬದ ಸುಖದಲ್ಲಿ ಇದೇನಿದು ಈ ಕೆಲಸ ಎಂದು ಮನೆ… ಹೆಂಗಸರು ಗೊಣಗಾಡಿದ್ದರು. ಗಂಡಸರ ಈ ಪರಿಯ ರೀತಿಗೆ ಹೊಂದಿಕೊಂಡಿ… ಹೆಂಗಸರು ತೆಪ್ಪಗಿದ್ದರು. ದಿಗಂತದಲ್ಲಿ ಸೂರ್ಯ ಕರಗುತ್ತಿದ್ದ. ಕೆಂಬಣ್ಣದ ಬೆಳ… ಹೊಳೆಯ ನೀರ ಮೇಲೆ ರೇಶಿಮೆ ಸೀರೆಯಂತೆ ಪ್ರತಿಫಲಿಸುತ್ತಿತ್ತು. ಇಡೀ ತೊರೆ… ನೀರೆಯಂತೆ ಬಳೆ ಸದ್ದು, ಜುಳುಜುಳು ನಾದವನ್ನು ಮಿಡಿಸುತ್ತ ಕತ್ತಲೆಗೆ ಹೆದರು… ಕನ್ನೆಯಂತೆ ಸಾಗುತ್ತಿತ್ತು. ಆ ಹೊಳೆಯಲ್ಲಿ ಕೊನೆಗೊಮ್ಮೆ ಮಿಂದುಬರಲೇಬೇಕೆಂ… ಶಿವರುದ್ರ ಬಂಟರ ಬೆಂಗಾವಲಲ್ಲಿ ಬಂದು ಸ್ನಾನ ಮಾಡಿ ಹೋಟೆಲಿಗೆ ಹಿಂತಿರುಗಿದ್ದ.

ಮಾರಿಗುಡಿಯಲ್ಲಿ ಹಬ್ಬದ ಪೂಜೆ ಅದ್ದೂರಿಯಿಂದ ಸಾಗಿತ್ತು. ತಮ… ನಗಾರಿಯವರು ಗಸ್ತಿ ಶುರುಮಾಡಿದ್ದರು. ಕತ್ತಲು ಮುತ್ತಿಗೆ ಹಾಕಿತ್ತು. ಬಾಜಿಗೆ ರಂ… ಏರುವ ಸಮಯ ಸಮೀಪಿಸುತ್ತಿತ್ತು. ನನ್ನ ಅಪ್ಪ ಎರಡು ಸುತ್ತು ಡಂಗೂ… ಹೊಡೆಸಿದ್ದ. ಶಿವರುದ್ರನ ಬಾಜಿ ಪಂದ್ಯವನ್ನು ಸಾರಿಹೋದವರು ಕೇರಿಕೇರಿಗಳಲ್ಲಿ… ವಿಚಿತ್ರವಾದ ಕಾತರ ಬಿತ್ತಿದ್ದರು. ಹಬ್ಬದ ಸವಿಯೂಟ ಸವಿದವರಾಗಿ… ಮಾರಿಗುಡಿಯ ಕಡೆ ಪಂದ್ಯ ನೋಡಲು ನಡೆದಿದ್ದರು. ಹಗಲು ಇಷ್ಟು ಬೇಗ ಮುಗಿದ… ರಾತ್ರಿ ಆವರಿಸಿಬಿಟ್ಟಿತೇ ಎನ್ನುವಂತೆಯೇ ಕಾಲ ವೇಗವಾಗಿ ಹಾರಿಹೋಗುತ್ತಿ… ಉತ್ಸಾಹದ ಸಡಗರದಲ್ಲಿ ಕಾಲ ಹೋಗಿದ್ದೇ ತಿಳಿಯಲಿಲ್ಲ. ತಾತ ಬೋಂ… ಬೇಯಿಸಿಯೂ ಆಗಿತ್ತು. ಮಾರಿಗುಡಿಯಲ್ಲೀಗ ಪೂಜೆಯ ಗಡಿಬಿಡಿ ಮುಗಿದ… ಪೂಜಾರಪ್ಪನು ಪಂದ್ಯಕ್ಕಾಗಿ ಕಾಯುತ್ತಿದ್ದ. ಮಾರಿಗುಡಿಯ ಇಕ್ಕೆಲಗಳಲ್ಲೆಲ್ಲ ಪ… ಊರಿನ ನೆಂಟರು ಜಮಾಯಿಸಿದ್ದರು. ಡಂಗೂರ ಹೊಡೆಸಿದ್ದು ಸರಿಹೋಯಿತೆಂದ… ಅಪ್ಪ ಮೀಸೆ ತಿರುವುತ್ತ ಯಾರ ಜೊತೆಯೋ ಮಾತನಾಡುತ್ತಿದ್ದರು. ಊರ ಹತ… ಸಮಸ್ತರು ಚಾಪೆ ಮೇಲೆ ಕೂತು ಗುಜುಗುಜು ಎನ್ನುತ್ತಿದ್ದರು. ಮಾರಿಗುಡಿ… ಪಡಸಾಲೆಗಳ ಕಂಬಕ್ಕೆ ಪಂಜುಗಳ ಬಿಗಿದು ಕಟ್ಟಿದ್ದರು. ಹೊಗೆ ಉಗುಳುವ ಕೆಂಬೆಳ… ಅಲ್ಲೆಲ್ಲ ಚೆಲ್ಲಾಡುತ್ತಿತ್ತು. ಪೆಟ್ರೊಮ್ಯಾಕ್ಸ್ ದೀಪವನ್ನು ಮಧ್ಯೆ ಇಟ್ಟಿದ್ದರು. ಬಗೆ ಬಗೆ… ಆ ಎಲ್ಲ ತಿಂಡಿಗಳನ್ನು ರಾಶಿಯಾಗಿ ಹಾಕಿದ್ದರು. ಊರ ಯಜಮಾನರಂತು ಬಾ… ಮೇಲೆ ಕೈಯಿಟ್ಟುಕೊಂಡು ಅಬ್ಬಾ ಎನ್ನುತ್ತಿದ್ದರೆ ನೆರೆದ ಜನ ಪೂರಕವಾಗಿ ಉದ್ಗಾ… ತೆಗೆಯುತ್ತಿದ್ದರು. ಸಣ್ಣ ಹೈಕಳು ರಾಶಿ ತಿಂಡಿಗಳ ಕಂಡು ಬಾಯೂರಿಸಿಕೊಂಡು … ಶಿವರುದ್ರನ ಹೊಟ್ಟೆ ಸಿಡಿಯಾ ಅವನೊಬ್ಬನೇ ಇವನ್ನೆಲ್ಲ ತಿಂದುಬಿಡುವನಲ್ಲಾ ಎಂದ… ಹೊಟ್ಟೆಕಿಚ್ಚಿನಿಂದ ಶಾಪ ಹಾಕುತ್ತಾ ಅವನು ಸೋತು ಸುಣ್ಣವಾಗಲಿ ಎನ್ನುತ್ತಿದ್ದರು… ಪ್ರಾಯದ ಚೆಲುವೆಯರು ಒಳಗೊಳಗೇ ಬೆವರುತ್ತಾ ಆದದ್ದಾಗಿಹೋಗಲಿ ನೋಡ…


## ಬಹುಜನ ಮಾಧ್ಯಮ ಕೇಂದ್ರ (ರಿ)

ಅಂತರರಾಷ್ಟ್ರೀಯ ಪ್ರಸಿದ್ಧಿಯ ನಮ್ಮ ಇತ್ತೀಚಿನ ಪ್ರಕಟಣೆಗಳು

ಡಾ|| ಮ. ನ. ಜವರಯ್ಯ ಅವರ

**Ambedkar versus Hindurashtra**

ಬೆಲೆ : ರೂ. 500/-

**ಸೂರಪ್ಪ** (ಮಹಾ ಕಾದಂಬರಿ) ಬೆಲೆ : ರೂ. 300/-

**ಅಂಬೇಡ್ಕರ್ ವರ್ಸಸ್ ಮನುವಾದ**

ಬೆಲೆ : ರೂ. 400/-

**ಯುಗಾಂತರ** (ನಾಟಕ)

(ಗಾಂಧಿ ಅಂಬೇಡ್ಕರ್ ಸಂಘರ್ಷದ ಐತಿಹಾಸಿಕ ಘಟನೆ ಆಧಾರಿತ)

ಬೆಲೆ : ರೂ. 100/-

**Ambedkar and we the people of India**

ಬೆಲೆ : ರೂ. 500/-

——— ಪ್ರತಿಗಳಿಗಾಗಿ ಸಂಪರ್ಕಿಸಿ ———

ಬಹುಜನ ಮಾಧ್ಯಮ ಕೇಂದ್ರ (ರಿ)

ನಂ. ಎಂ -13, 2ನೇ ಅಡ್ಡರಸ್ತೆ, 2ನೇ ಮುಖ್ಯ ರಸ್ತೆ, 2ನೇ ಹಂತ
ಇ ಮತ್ತು ಎಫ್ ಬ್ಲಾಕ್, ರಾಮಕೃಷ್ಣನಗರ, ಮೈಸೂರು - 570 022

ಡುವಾ ಎಂದು ಪಂದ್ಯದ ಕ್ಷಣಕ್ಕಾಗಿ ಕಾತರಿಸುತ್ತಿದ್ದರು. ನನ್ನ ತಂದೆ ಬಂಟರ ಜೊತೆ ೀಗುತ್ತಿದ್ದ. ಶಿವರುದ್ರ ಬಲಿ ಪೀಠದ ಮುಂದೆ ತಲೆಯಿಟ್ಟು ಮಂಡಿಯೂರಿ ೂತಿರುವಂತೆ ಕಾಣುತ್ತಿದ್ದ. ನಿಂಗವ್ವ ನೋಡಲಾರದೆ ಮನೆಯಲ್ಲೇ ಚಿಂತೆಯ ಾನೆಯಲ್ಲಿ ಮಲಗಿದ್ದಳು. ಬೇಗ ಆರಂಭಿಸಿ ಎಂದು ಜನ ಆತುರಪಡಿಸುತ್ತಿದ್ದರು. ಲುವೆಯರ ಕಡೆಗೊಮ್ಮೆ ಶಿವರುದ್ರ ಅಮಾಯಕನಂತೆ ನೋಡಿದ. ಅವರೆಲ್ಲ ಯ್ಯೋ ನಮ್ಮನ್ನೇ ನೋಡ್ತಾವ್ನೆ ಕನ್ರೇ ಎಂದು ಗದ್ದಲಮಾಡಿದರು. ನ್ಯಾಯಸ್ಥರು ುಗುಮ್ಮಾಗಿ ಕೂತಿದ್ದರು.

'ಬಾಜಿ ಸುರು ಮಾಡೋಣವೇನ್ರಪ್ಪಾ' ಎಂದು ನನ್ನ ತಂದೆ ಊರ ಹತ್ತೂ ಮಸ್ತರ ಅಪ್ಪಣೆ ಕೇಳಿದ. ಮೊದಲಿಗೆ ಮಾರವ್ವನಿಗೆ ಬಾಜಿ ಪ್ರಯುಕ್ತ ಜನ ಮೂಹದ ಸಾಕ್ಷಿಯಲ್ಲಿ ಪೂಜೆ ಮಾಡಲಾಯಿತು. ನನ್ನ ತಾತ ಶಿವರುದ್ರನ ಎದುರೇ ೂತಿದ್ದರು. ಆತನೂ ಮಾರವ್ವನಿಗೆ ಕೈ ಮುಗಿದು, 'ತಾಯೀ ಎಲ್ಲಾ ನಿಂದೇಕನವ್ವಾ, ನ್ನ ಪ್ರಾಣವ ತಗದು ನಿನ್ನ ಮುಂದಿಟ್ಟಿವಿನಿ, ತಕೋದು ನನ್ನ ಹಿಂತಿರುಗ್ಸಿ ಕೊಡೋದು ನ್ನ ಕೈಲೇ ಅದೆ ಕಣವ್ವಾ' ಎಂದು ಅಷ್ಟ ದಿಕ್ಕುಗಳಿಗೂ ಸುತ್ತುಹಾಕಿ ನಮಸ್ಕಾರ ಮಾಡಿದ. ಕಜ್ಜಾಯ ತಿನ್ನುವುದರ ಮೂಲಕ ಪಂದ್ಯ ಆರಂಭವಾಯಿತು. ಒಂದು ೂರು ಕಜ್ಜಾಯಗಳನ್ನು ಶಿವರುದ್ರ ಲೆಕ್ಕವಿಲ್ಲದೆ ಂದೇ ಬಿಟ್ಟ. ಕಜ್ಜಾಯದ ಹಿಂದೆಯೆ ನೂರು ಬ್ಬಿಟ್ಟುಗಳನ್ನು ತಿನ್ನಬೇಕಿತ್ತು. ಒಂದೊಂದಾಗಿ ಾಯಿಗೆ ಮೊತಗಿಕೊಂಡು ನಿರಾಳವಾಗಿ ಗಿದು ನುಂಗಿದ. ನೆರೆದವರು ಅವನ ಕಾಸುರ ಪರಿಗೆ ಬೆದರಿದರು. ನನ್ನ ತಂದೆ ವರುದ್ರನನ್ನು ಕಣ್ಣಲ್ಲೇ ಇರಿಯುತ್ತಿದ್ದರು. ತಾತ ವ್ಯವಾಗಿ ಶಿವರುದ್ರ ತಿನ್ನುವ ಪರಿಯನ್ನು ಟ್ಟಿಸುತ್ತಿದ್ದರು. ಸಮಸ್ತರು ಉಸಿರು ಬಿಗಿ ಡಿದುಕೊಂಡಿದ್ದರು. ಪ್ರಾಯದ ಕುವರಿಯರ ಸುವ ಮೊಗ್ಗಿನ ಎದೆಗೂಡು ಡವಗುಟ್ಟುತ್ತಿತ್ತು. ಾಕ್ಷಸನೇ ಶಿವರುದ್ರನ ಮೈಮೇಲೆ ಬಂದು ಎವನ್ನೆಲ್ಲ ತಿನ್ನುತ್ತಿರುವನು ಎಂದು ಮಕ್ಕಳು ಬೆದರಿದ ಭಾವದಿಂದ ಅವನನ್ನೆ ನೋಡುತ್ತಿದ್ದರು. ಂದೆಯ ಉದ್ವೇಗದ ಉಸಿರಾಟ ಎದ್ದು ಾಣುತ್ತಿತ್ತು. ಭಂಟರು ಬೇಗ ಬೇಗ ತಿನ್ನೊ ಂದು ಶಿವರುದ್ರನ ಮೇಲೆ ಮಾತಿನ ಾಳಿಗಿಳಿದಿದ್ದರು. ಹೆಂಗಸರು ಈ ಶಿವರುದ್ರ ೆದ್ದೇ ಬಿಡವನೇನೊ ಎನ್ನುತ್ತಿದ್ದರು. ಆಗಾಗ ಾತ ಮಾರವ್ವನ ಗುಡಿಯೊಳಗಿನ ವಿಗ್ರಹಕ್ಕೆ ಕೈ ಮುಗಿಯುತ್ತಾ 'ತಿನ್ನೊ ಶಿವರುದ್ರಾ ತಿನ್ನು' ಎಂದು ುಷಾದದಿಂದಲೊ, ಪ್ರೋತ್ಸಾಹದಿಂದಲೊ ೇಳುತ್ತಿದ್ದರು. ನೂರು ಕಜ್ಜಾಯ ಮುಗಿದು ೂರು ವಬ್ಬಿಟ್ಟು ತೀರಿ ನೂರು ಬೋಂಡವೂ ಕರಗಿ ಈಗ ೂರು ನುಪ್ಪಟ್ಟುಗಳು ಉಳಿದಿದ್ದವು. ದೋಸೆ ತಿಂದಾದ ಮೇಲೆ ನುಪ್ಪಟ್ಟನ್ನು ಜಗಿಯುವುದೊ ಎಂಬ ಗೊಂದಲ ಉಂಟಾಗಿ ಶಿವರುದ್ರ ತಾತನ ಕಡೆ ನೋಡುತ್ತಿದ್ದ. ಲೇ ಶಿವರುದ್ರಾ ಒಂದ್ ನಿಮ್ಸ ಬಿಡುವು ತಕೆಂದ್ರೂ ಬಾಜಿ ಸೋತಂಗೆ. ಬೇಗ ಮುಗ್ಸು ಇಲ್ದೇ ಇದ್ರೆ ಸೋತೆ ಅಂತಾ ಒಪ್ಕೋ' ಎಂದು ತಂದೆ ಆವೇಶದಿಂದ ಗದರಿದರು. ್ರತಿಕ್ರಿಯಿಸಿದ ಶಿವರುದ್ರ ಒಂದೊಂದಾಗಿ ನುಪ್ಪಟ್ಟು ತಿನ್ನಲು ತೊಡಗಿದ.

ಐವತ್ತರಷ್ಟು ನುಪ್ಪಟ್ಟು ಜಗಿದಿದ್ದನೆನಿಸುತ್ತದೆ. ಹಾಗೆ ಒಂದೇ ಸಮನೆ ತಿಂದಿದ್ದರಿಂದ ದವಡೆ ಸಂದುಗಳು ದಣಿದು ನೋವು ಹೆಚ್ಚಾಗಿ ಸಣ್ಣಗೆ ಅಧೀರತೆ ಸುಳಿದುಬಂತು. ಮಾರವ್ವನಿಗೆ ಮತ್ತೊಮ್ಮೆ ಕೈ ಮುಗಿದು ಅತ್ತ ಆ ಚೆಲುವೆಯರ ಕಡೆಗೂ ನೋಡಿ ಕಣ್ಣು ಮುಚ್ಚಿಕೊಂಡು ತಿನ್ನತೊಡಗಿದ. ತನ್ನ ಮಗನ ಗತಿ ಏನಾಯಿತೊ ಎಂದು ತಡೆಯಲಾರದೆ ನಿಂಗವ್ವ ಮಾರಿಗುಡಿಗೆ ಬಂದು ಕತ್ತಲ ಮರೆಯಲ್ಲಿ ನಿಂತು ಮಗನ ಪರಿಯನ್ನು ಹೇಳಲಾಗದ ಸಂಕಟದಲ್ಲಿ ಗಮನಿಸುತ್ತಿದ್ದಳು. ನಾವೆಲ್ಲೂ ಇಂತಾ ಬಕಾಸುರನ ಕಂಡಿರಲಿಲ್ಲ ಎಂದು ನೆಂಟರು ರಾಗ ಎಳೆಯುತ್ತಿದ್ದರು. ಕಷ್ಟಪಟ್ಟು ಜಗಿಯುತ್ತಿರುವುದನ್ನು ತಿಳಿದ ತಾತ ತನ್ನೊಳಗೆ ಪಾಪಪ್ರಜ್ಞೆಯಲ್ಲಿ ಬಳಲಿದರು. ಹದ ಮೀರಿ ನುಪ್ಪಟ್ಟು ತುಂಬ ಗಟ್ಟಿಯಾಗಿ ಜಗಿಯುವುದು ದುಸ್ತರವಾಗಿತ್ತು. ಅಂತಾದ್ದರಲ್ಲೂ ಶಿವರುದ್ರ ಅವನ್ನೂ ತಿಂದು ಮುಗಿಸಿದ್ದ. ತಾತ ಈ ಸಲ ನಿಜಕ್ಕೂ ಅಧೀರರಾಗಿದ್ದರು. ಅಪ್ಪನ ಮುಖದಲ್ಲಿ ಆತಂಕ ಸುಳಿದಾಡಿದ್ದನ್ನು ಜನ ಗಮನಿಸಿದರು. ಮೈ ಪರಚಿ ಕೊಳ್ಳುವಂತೆ 'ಇನ್ನೂ ನೂರು ದ್ವಾಸೆ ಅವೇ. ಒಂದು ದೊಡ್ಡ ತಪ್ಪಲೆ ತುಂಬ ಹಾಲದೆ. ಅಂಗೇ ಬಿಂದ್ಗೆ ನೀರೂ ಕುಂತದೆ. ಅವ್ನೆಲ್ಲ ಮುಗ್ಸೋ ವೇಳೆಗೆ ನೋಡೋಣ' ಎಂದು ಅಪ್ಪ ಲೆಕ್ಕಹಾಕುತ್ತಿದ್ದರು. ಸಮಯ ಜಾರುತ್ತಿತ್ತು. ಹೊಟ್ಟೆ ತುಂಬ ತಿಂಡಿಗಳು ತುಂಬಿಕೊಂಡು ನುಂಗುವುದು ಕಷ್ಟವಾಗುತ್ತಿತ್ತು. ದೋಸೆಗಳು ಆರಿ ತಣ್ಣಗಾಗಿದ್ದವು. ಚಟ್ನಿಯು ಕಾರವಾಗೇ ಇತ್ತು. ಅಂತಹ ಒಣಗಿದ ದೋಸೆಗಳನ್ನು ನುಂಗುವುದು ದುಸ್ಸಾಧ್ಯದ ಮಾತು. ಬಹಳ ಕಡಿದಾದ ಶಿಖರವನ್ನು ದೈವಬಲ ಮಾತ್ರದಿಂದಲೇ ಬರಿಗೈಲಿ ಏರುವ ಸಾಹಸಿಯಂತೆ ಶಿವರುದ್ರ ದೋಸೆ ನುಂಗುತ್ತಾ ಮಾರವ್ವನ ಗರ್ಭಗುಡಿಯನ್ನು ಆಗಾಗ ನೋಡುತ್ತಾ ತಲೆಬಾಗಿ ವಿನಂತಿಸಿಕೊಂಡು ತನ್ನ ಪ್ರಾಣವ ಕಾಯವ್ವ ಎಂಬಂತೆ ಮುಖ ಮಾಡುತ್ತಾ ಎಲ್ಲವನ್ನೂ ಸಾಂಗವಾಗಿ ನುಂಗುತ್ತಲೇ ಇದ್ದ. ಅವನು ಸೋತೇ ಹೋಗಲಿ ಎಂದು ಎಲ್ಲರೂ ಬಯಸುತ್ತಿದ್ದರು. ತಾತನಿಗೂ ಹಾಗೇ ಅನಿಸಿರಬೇಕು. ತೊಂಬತ್ತೊಂಬತ್ತನೇ ದೋಸೆ ತಿನ್ನುವಾಗ ಕಾರ ನೆತ್ತಿಗೇರಿ ಕೆಮ್ಮು ಸೀನು ಜೊತೆಗೇ ನುಗ್ಗಿ ಬಂದು ಹೊಟ್ಟೆಯೊಳಗಿದ್ದುದೆಲ್ಲಾ ಒಂದೇ ಬಾರಿಗೆ ವಾಂತಿಯಾಗುವುದಿತ್ತು. ಶಿವರುದ್ರ ತನ್ನೆಲ್ಲ ಶಕ್ತಿ ಮೀರಿ ಬಳಸಿ ಆಗಬಹುದಿದ್ದ ಅಪಾಯದಿಂದ ತಪ್ಪಿಸಿಕೊಂಡಿದ್ದ. ತಿನ್ನುವ ಮಧ್ಯೆ ಕಕ್ಕಿಕೊಂಡರೂ ಪಂದ್ಯ ಸೋತಂತೆಯೇ. ಆತ ಒಂದು ಕ್ಷಣ ಬಿಡುವೂ ಪಡೆವಂತಿರಲಿಲ್ಲ. ಅಲ್ಲದೆ ನಿಧಾನವಾಗಿ ತಿಂದರೂ ಬಾಜಿಯಿಂದ ಸೋತ ಹಾಗೇ ಎಂದು ಮೊದಲೇ ಕರಾರು ಮಾಡಲಾಗಿತ್ತು. ಎಲ್ಲವನ್ನೂ ತಿಂದೇ ಆಯಿತಲ್ಲಾ ಎಂದು ಜನ ಹಾ ಹೋ ಎಂದು ಗುಜುಗುಟ್ಟಿದರು. ದೊಡ್ಡ ಗಂಟಲಲ್ಲಿ 'ಬಾಜಿ ಮುಗ್ದಿಲ್ಲ. ಹಾಲೂ ನೀರು ಬಾಕಿಯವೆ. ಅವಾ ಕುಡ್ದು ಮುಗ್ಸೋವರ್ಗೂ ಬಾಜಿ ಅದೆ' ಎಂದು ಅಪ್ಪನ ಬಂಟರು ಕೂಗಾಡಿದರು. ಶಿವರುದ್ರ ಬೆವೆತುಹೋಗಿದ್ದ. ಪೆಟ್ರೋಮ್ಯಾಕ್ಸ್ ದೀಪದ ಬೆಳಕಿನಲ್ಲಿ ಆತ ಯಾವುದೊ ಗತಕಾಲದ ಹಸಿದ ಹೆಬ್ಬುಲಿಯಂತಹ ಪೂರ್ವಿಕನಂತೆ ಕಾಣುತ್ತಿದ್ದ. ಆದರೂ ವಿಪರೀತ ಭಯ ಅವನ ಕಣ್ಣುಗಳಲ್ಲಿ ಹೆಪ್ಪುಗಟ್ಟಿತ್ತು. ಕಾರದಿಂದಲೊ ಯಾವ ಕಾಲದ ಕಿಚ್ಚಿನಿಂದಲೊ ಅವನ ಕಣ್ಣಿಂದ ನೀರು ತುಂಬಿಕೊಂಡು ನೀರಾದ ಸಿಂಬಳ ತೊಟ್ಟಿಕ್ಕುತ್ತಿತ್ತು. 'ಇಷ್ಟೆಲ್ಲ ತಿಂದಾಯ್ತಿಲ್ಲಾ ಈಗ ಯೀ ಬಿಂದಿಗೆ ನೀರ ಕುಡ್ದು ಮುಗ್ಸೋ' ಎಂದು ಸಮಸ್ತರು ಹೆದರಿಸುವ ದನಿಯಲ್ಲಿ ಹೇಳುತ್ತಿದ್ದರು. ಬಿಂದಿಗೆಯನ್ನೇ ಎತ್ತಿಕೊಂಡು ಕುಡಿಯಬೇಕಾಗಿತ್ತು. ಶಿವರುದ್ರ 'ಮಾರವ್ವಾ' ಎಂದು ಕೂಗಿದ. ಮಾರವ್ವ ಎದ್ದು ಬಂದು ಅವನ ಬಾಯಿಗೀಗ ನೀರು ಬಿಡುವುದು ಸಾಧ್ಯವಿರಲಿಲ್ಲ. ಬಾಯಿಗೆ ಸೀರೆ ಸೆರಗ ತುದಿಯನ್ನು ಒತ್ತಿ ಹಿಡಿದು ನುಗ್ಗಿ ಬರುತ್ತಿದ್ದ ಸಂಕಟದ ಕಿಚ್ಚನ್ನು ನಿಂಗವ್ವ ಕತ್ತಲ ಮರೆಯಲ್ಲೆ ಹಿಂದಕ್ಕೆ ತಳ್ಳುತ್ತಿದ್ದಳು.



ಅರ್ಧ ಬಿಂದಿಗೆ ನೀರನ್ನೂ ಕುಡಿದಿದ್ದಾಯಿತು. ತಾತನೇ ಮಧ್ಯೆ ಪ್ರವೇಶಿಸಿ ಒಂದು ಕ್ಷಣ ಬಿಡುವು ಕೊಡಿಸಿದರು. ಏದುಸಿರು ಬಿಡುತ್ತಿದ್ದ ಶಿವರುದ್ರ ಇನ್ನೇನೊ ಒಂದರೆಕ್ಷಣದಲ್ಲಿ ಸೋಲೊಪ್ಪಿಕೊಳ್ಳುವನು ಎಂದು ಎಲ್ಲರೂ ತುದಿಗಾಲಲ್ಲಿ ನಿಂತಿದ್ದರು. ಅಪ್ಪ ತನ್ನ ಅರ್ಥಹೀನ ಪರಾಕ್ರಮದ ಬರ್ಬರ ಸುಖಕ್ಕಾಗಿ ಉದ್ವೇಗದಲ್ಲಿದ್ದ. ಅದಾವ

ಮಾಮೆಯೋ ಒಂದು ಬಿಂದಿಗೆ ನೀರನ್ನೂ ಕುಡಿದು ಮುಗಿಸಿದ. ಭಾಗಶಃ ಅನಂತವಾಗಿ ಹರಿವ ತೊರೆಯ ಪ್ರೇಮದ ಕೃಪೆ ಶಿವರುದ್ರನ ಮೇಲಿತ್ತೇನೊ. ಆ ನೀರೇ ಅವನ ಹೊಟ್ಟೆಯಲ್ಲಿ ಸೇರಿ ತುಳುಕಾಡುತ್ತಿತ್ತು. ಅಪ್ಪನ ಬಂಟರು ಮೆತ್ತಗಾಗಿದ್ದರು. ಶಿವರುದ್ರನ ಮುಂದೆ ಹಾಲು ತುಂಬಿದ ದೊಡ್ಡ ತಪ್ಪಲೆಯನ್ನು ಇಡಲಾಯಿತು. ಸಲೀಸಾಗಿ ಅದನ್ನೂ ಎತ್ತಿಕೊಂಡು ಕಣ್ಣುಮುಚ್ಚಿ ಕುಡಿಯತೊಡಗಿದ. ಇನ್ನೇನೊ ಒಂದಿಷ್ಟು ಬಾಕಿ ಉಳಿದಿದೆ ಎನ್ನುವಂತೆ ಎದ್ದು ನಿಂತು ಎಲ್ಲರಿಗೂ ಕಾಣುವಂತೆ ಬಾಯಿಗೆ ಸುರಿವಿಕೊಂಡು ಪೂರ ಮುಗಿಸಿ ಜನರೆದುರು ತಲೆ ಬಾಗಿದ್ದೇ ತಡ, ಒಂದೇ ಬಾರಿಗೆ ಹೊಟ್ಟೆಯೊಳಗಿದ್ದುದೆಲ್ಲ ಹೊರಕ್ಕೆ ಬಂದು ಶಿವರುದ್ರ ನೆತ್ತಿಗೆ ಉಸಿರಾಟ ಸಿಕ್ಕಿಕೊಂಡಂತಾಗಿ ಕೆಳಕ್ಕೆ ಬಿದ್ದೇಹೋದ. ಅಪ್ಪ ರಕ್ಕಸ ದನಿಯಲ್ಲಿ 'ನಾವೇ ಗೆದ್ವೋ' ಎಂದು ಕೂಗಾಡಿದ್ದರು. ಜನ 'ಹೌದು ಹೌದು ಶಿವರುದ್ರ ಕಕ್ಕಿಕೊಂಡು ದಕ್ಕಿಸಿಕೊಳ್ಳಲಾರದೆ ಸೋತುಹೋದ' ಎಂದು ಒಕ್ಕೊರಲಿಂದ ಹುಚ್ಚಾಗಿ ಗದ್ದಲವೆಬ್ಬಿಸಿದರು. ತಾತನೇ ಶಿವರುದ್ರನನ್ನು ಎತ್ತಿಕೂರಿಸಿ ಅವನ ನೆತ್ತಿಗೆ ನೀರು ತಟ್ಟಿ ಎದೆ ನೀವಿದ್ದರು. ಶಿವರುದ್ರ ಸುಧಾರಿಸಿಕೊಂಡಿದ್ದ. ಈ ಕೂಡಲೇ ಷರತ್ತಿನಂತೆ ಶಿವರುದ್ರ ನಡೆದುಕೊಳ್ಳಬೇಕೆಂದು ಅಪ್ಪ ಹಠ ಹಿಡಿದರು. ಜನ ಬೆಂಬಲವೂ ಅದಕ್ಕಿತ್ತು. ಅದಕ್ಕಿಂತಲೂ ಮೊದಲಿಗೆ ಸ್ವತಃ ಶಿವರುದ್ರನೇ ಪಣದ ಮಾತಿಗೆ ತಕ್ಕಂತೆ ನಡೆದುಕೊಳ್ಳಲು ಎದ್ದುನಿಂತಿದ್ದ. ಚೆಲುವೆಯರು ನಿರಾಳವಾಗಿದ್ದರು. ಮಾರವ್ವನಿಗೆ ಇದು ಕೊನೆಯ ನಮಸ್ಕಾರ ಎಂಬಂತೆ ಶಿವರುದ್ರ ಕೈಮುಗಿದು ನನ್ನ ತಾತನ ಪಾದ ಮುಟ್ಟಿ ಜನರಿಗೂ ನಮಿಸಿ 'ಹೋಗುವೆ' ಎಂದು ಹೇಳಿ ಆ ಕಡುಕತ್ತಲ ದಾರಿಯಲ್ಲಿ ಅಂತಹ ಅವೇಳೆಯ ನಿಶೆಯಲ್ಲಿ ಮಾಯವಾದ.

**ಮೂರನೆ ಪಾದ**

ಇಡೀ ಊರು ಗಪ್ಪಾಗಿತ್ತು. ಆದರೂ ಯುಗಾದಿ ಹಬ್ಬದ ಜೂಜಿನ ಅಮಲು ಇನ್ನೂ ಅಲ್ಲಲ್ಲಿ ತೂಕಡಿಸುತ್ತಿತ್ತು. ಜನರೆಲ್ಲ ಸಿಪಿ ನಿದ್ದೆಯಲ್ಲೇ ಇದ್ದರೆನಿಸುತ್ತದೆ. ನಿಂಗವ್ವ ಮಗನ ಬಗ್ಗೆಯೇ ನೆನೆಯುತ್ತ ಮಗ್ಗಲು ಬದಲಿಸಿದ್ದಳು. ತಾತನಿಗೆ ಯಾವುದೋ ಪಾಪಪ್ರಜ್ಞೆ ಕಾಡುತ್ತಿತ್ತು. ಅವನಂತಹ ಬಂಡ ಊರು ಬಿಟ್ಟು ಹೋದದ್ದರಿಂದ ಒಳ್ಳೆಯದೇ ಆಯಿತೆಂದು ಮುಂಜಾವಿಗೆ ಎದ್ದವರು ಬಂದು ಅದೇ ತಾತನ ಹೋಟೆಲಲ್ಲಿ ಶಿವರುದ್ರನ ಗತಿಯನ್ನು ಬಾಯಿ ಚಪ್ಪರಿಸಿಕೊಂಡು ಮಾತನಾಡುತ್ತಿದ್ದರು. ಅವನು 'ಸತ್ತೇ ಹೋಗುವನು ಎಂದುಕೊಂಡಿದ್ದೆ ಆದ್ರೆ ಬಡ್ಡೀ ಮಗನ ಜೀವ ಗಟ್ಟಿಯಾಗಿತ್ತು' ಎಂದು ಅಪ್ಪ ಮತ್ತದೇ ಸಿಗರೇಟಿನ ಹೊಗೆಯಲ್ಲಿ ಮಾತು ಉಗುಳುತ್ತಿದ್ದ. ಆ ಶಿವರುದ್ರ ಸೋತೇ ಹೋಗಲಿ ಎಂದು ಆ ಕ್ಷಣದಲ್ಲಿ ನಾನೂ ಬಯಸಿದ್ದೆನಾದರೂ ಹಾಗೆ ಆ ಅವೇಳೆಯಲ್ಲಿ ಹಾಗೆ ಸೋತು ಕರಗಿಹೋದ ಶಿವರುದ್ರನ ದೀನ ಸ್ಥಿತಿ ಆವರಿಸಿ ಬೇಸರವೆನಿಸಿತ್ತು. ಹರಿವ ತೊರೆಯಂತೆಯೇ ಕಾಲವೂ ಆಕಾಶದಲ್ಲಿ ಹರಿದುಹೋಗಿತ್ತು. ಶಿವರುದ್ರ ಎಂದೆಂದೂ ಊರಿಗೆ ಹಿಂತಿರುಗಿರಲಿಲ್ಲ. ಪಣದಂತೆಯೆ ಆತ ಊರು ಬಿಟ್ಟು ಎಷ್ಟೋ ವರ್ಷಗಳು ಮರೆಯಾದವು. ಹಳಬರು ಮಣ್ಣು ಸೇರಿ ಹೊಸಬರು ಮೊಳಕೆಯೊಡೆದು ಊರು ಸಾಕಷ್ಟು ಬದಲಾಗಿತ್ತು. ಶಿವರುದ್ರನಂತ ಪಣತೊಡುವ ಯಾರೊಬ್ಬರೂ ಈಗ ಊರಲ್ಲಿರಲಿಲ್ಲ. ಗತಕಾಲದ ಮೋಹದ ಹಳ್ಳಿಯ ಅಂತಹ ಯಾವ ಕ್ಷಣಗಳೂ ಈಗ ಹಳ್ಳಿಯಲ್ಲಿ ಉಳಿದಿರಲಿಲ್ಲ. ಕಾಲದ ಅಲೆಯಲ್ಲಿ ಏನೇನೊ ತೇಲಿಬಂದು ಯಾರ್‍ಯಾರೊ ಯಾವುದಾವುದೊ ಮೂಲೆ ಸೇರಿ ಬದುಕಿನ ಜಂಜಾಟದಲ್ಲಿ ಸಿಲುಕಿ ಶಿವರುದ್ರನ ನೆನಪೇ ಎಲ್ಲರಿಗೂ ಹಾರಿಹೋಗಿತ್ತು. ತಾತನ ಜೊತೆಯೇ ಹೋಟೆಲು ಬಾಗಿಲು ಮುಚ್ಚಿಕೊಂಡಿತ್ತು. ಬೆಂಗಳೂರಿನ ಮಾಯಾ ಬಜಾರಿನ ಸೆಳೆತ ಊರ ಬಹುತೇಕರನ್ನು ಆವರಿಸಿ ಆ ಗುಜುರಿ ಹಳ್ಳಿಗಳಲ್ಲಿ ಸಾಯುವುದಕ್ಕಿಂತ ನಗರದಲ್ಲಿ ಹೇಗೊ ಬದುಕುವುದೇ ಸರಿ ಎನಿಸಿ ಊರು ಬಿಕೋ ಎನ್ನುತ್ತಿತ್ತು. ನನ್ನ ಅಪ್ಪನೂ ಯಾವುದೊ ಜಿದ್ದಿನ ಪಾಶಕ್ಕೆ ಸಿಲುಕಿ ಜೀವ ಕಳೆದುಕೊಂಡಿದ್ದರು. ಒದಿನ ಹಾದಿಯಲ್ಲಿ ನಾನು ಊರ ದಾರಿಯನ್ನೆ ತುಂಡರಿಸಿಕೊಂಡಿದ್ದೆ. ಆದರೂ ಎಂದಾದರೂ ಒಮ್ಮೆ ಹುಟ್ಟಿ ಬೆಳೆದ ಬಾಲ್ಯಕಾಲದ ಆ ಊರು ಕೇರಿಯನ್ನು ನೋಡಿ ಬರಲು ಹೋಗುವುದಿತ್ತು. ನನ್ನ ಊರೇ ನನಗೀಗ ಅಪರಿಚಿತವಾಗಿತ್ತು. ನನ್ನ ಮದುವೆಯ ಲಗ್ನಪತ್ರಿಕೆಯನ್ನು ಊರವರಿಗೆ ಕೊಡುವ ಸಲುವಾಗಿ ಹಳ್ಳಿಗೆ ಹೋಗಬೇಕಾಗಿತ್ತು. ಊರಲ್ಲೀಗ ನನ್ನ ಹಳೆಯ ಸಂಬಂಧಿಗಳು ಮಾತ್ರ ಉಳಿದಿದ್ದು ಬಂಧುಬಳಗವೆಲ್ಲ ಬೆಂಗಳೂರು ಸೇರಿಕೊಂಡಿತ್ತು.

ಬಾಲ್ಯದ ನೆನಪುಗಳೆಲ್ಲ ಕಾಲಿಗೆ ತೊಡರಿಕೊಳ್ಳುತ್ತಿದ್ದವು. ಲಗ್ನಪತ್ರಿಕೆ ಕೊಡುವಷ್ಟರಲ್ಲಿ ಮನಸ್ಸು ಭಾರವಾಗಿತ್ತು. ಶಿವರುದ್ರನ ತಾಯಿ ಇದ್ದ ಮನೆ ಪಾಳುಬಿದ್ದಿತ್ತು. ಯಾರೂ ಹಳಬರೊಬ್ಬರು ನೆನಪಿಸಿದರು. ಊರಾಚೆ ತೊರೆ ತೋಪಿನಲ್ಲಿ ಶಿವರುದ್ರ ಗುಡಿಸಲು ಹಾಕಿಕೊಂಡು ಮುದ್ದಾಗಿ ಕೂತವನೆ. ಅವನನ್ನು ಹೋಗಿ ಮಾತನಾಡಿಸುವುದು ಒಳಿತು ಎಂದು ಸೂಚಿಸಿದರು. ನನಗೆ ಅಚ್ಚರಿಯೆನಿಸಿತ್ತು. ಅವನಿದ್ದಲ್ಲಿಗೆ ನಡೆದೆ. ಸಂಜೆ ಮುತ್ತೈದೆಯಂತೆ ದಿಗಂತದ ಕೆಂಬೆಳಕಲ್ಲಿ ಧರೆಗಿಳಿಯುತ್ತಿತ್ತು. ಅದೇ ಬೆಡಗು ತೊ ನೀರಲೆಗಳ ಮೇಲೆ ತುಳುಕಾಡುತ್ತಿತ್ತು. ಶಿವರುದ್ರನನ್ನು ಗುರುತು ಹಿಡಿಯುವುದು ಬ ಕಷ್ಟವಾಯಿತು. ಆತ ಕೊನೆಗೂ ಯಾವ ಹೆಣ್ಣನ್ನೂ ದಿಟ್ಟಿಸಿ ನೋಡಿರಲೇ ಇ ಮದುವೆಯಂತು ಮೊದಲೇ ಇರಲಿಲ್ಲ. ದಿವ್ಯ ಸಂತನಂತೆ ಹರಿವ ತೊರೆಯನ್ನೆ ದಿಟ್ಟಿ ದಂಡೆಯಲ್ಲಿ ಅಮರ ಪ್ರೇಮಿಯೊಬ್ಬ ಹರಿವ ನೀರನ್ನೇ ನೀರೆಯೆಂದು ಕಾಯುವ ಕೂತೇ ಇದ್ದ. ಆತ ಯಾರೊಡನೆಯೂ ಮಾತನಾಡುತ್ತಿರಲಿಲ್ಲ. ಯಾರ ಮುಖವ ನೋಡುತ್ತಿರಲಿಲ್ಲ. ಅವನಿಗೆ ಪ್ರಿಯವಾಗಿದ್ದುದು ಎರಡೇ ಎರಡು ಕಾಯಕ. ಒಂ ಸದಾ ಹರಿವ ತೊರೆಯಲ್ಲಿ ಮಿಂದು ಅದನ್ನೇ ದಿಟ್ಟಿಸಿ ನೋಡುತ್ತ ಕೂತಿರುವುದು ಹಾ ಬಿಡುವಿನ ವೇಳೆಯಲ್ಲಿ ಪುಟ್ಟ ಮಕ್ಕಳಿಗೆಂದು ಬಣ್ಣಬಣ್ಣದ ಆಟದ ಸಾಮಾನುಗ ಅಂದವಾಗಿ ಕೊರೆದು ಮಾಡಿ ಅವನ್ನೆಲ್ಲ ದೊಡ್ಡದೊಂದು ಬುಟ್ಟಿಯಲ್ಲಿ ತುಂಬಿಡುತ್ತಿ ಊರ ಜನ ಆ ಗೊಂಬೆಗಳನ್ನು ತೆಗೆದುಕೊಂಡು ಅವನಿಗಾಗಿ ತಿನ್ನಲು ಏನನ್ನಾದ ಇಟ್ಟು ಹೋಗುತ್ತಿದ್ದರು. ಕೆಲವೊಮ್ಮೆ ಮಕ್ಕಳು ಅವನ ಗುಡಿಸಿಲಿಗೆ ನುಗ್ಗಿ ಬೇ ಆಟಿಕೆಗಳನ್ನು ತೆಗೆದುಕೊಂಡು ಹಕ್ಕಿಯಂತೆ ಹಾರಿ ಹೋಗುತ್ತಿದ್ದರು. ಸಾಯ ಕೊನೆಗಾಲದಲ್ಲಿ ತನ್ನೂರಿನ ತೊರೆಯ ದಿವ್ಯತೆಯಲ್ಲೇ ಪಯಣ ಮುಗಿಸಬೇಕೆ ಶಿವರುದ್ರ ಮರಳಿ ಅದೇ ಅವನ ಪರಮಾಪ್ತ ನೆಮ್ಮದಿಯ ನೆಲೆಗೆ ಬಂದಿದ್ದ. ಹೊ ಕಾಲದ ಜನರಿಗೆ ಅವನ ಬಗ್ಗೆ ಯಾವ ಕುತೂಹಲವೂ ಇರಲಿಲ್ಲ. ಅವನೊಬ್ಬ ಭಿ ಭಿಕ್ಷುಕನೊ ಸಂತನೊ ಇರಬೇಕೆಂದು ಕೆಲವರಿಗಾದರೂ ಅನಿಸಿತ್ತು. ಆಡಿದ ಮಾ ಕಡು ನಿಷ್ಠೆಯಲ್ಲಿ ಶಿವರುದ್ರ ರೂಪಾಂತರಗೊಂಡಿದ್ದ. ತಿನ್ನುವ ಸಾಹಸವೇ ಅವ ಬತ್ತಿಹೋಗಿತ್ತು. ಅಷ್ಟು ಕಾಲವೂ ಅವನು ಎಲ್ಲೆಲ್ಲಿ ಹೇಗೆ ಹಠಯೋಗಿಯಂತೆ ಜೀವಿ ಎಂಬುದು ಯಾರೊಬ್ಬರಿಗೂ ಗೊತ್ತಿಲ್ಲ.

ಶಿವರುದ್ರ ದಿಗಂತವನ್ನೆ ನುಂಗುವಂತೆ ದಿಟ್ಟಿಸುತ್ತಿದ್ದ. ಆತನ ಆ ದಿವ್ಯ ದೃ ಭಂಗತರಲು ಮನಸ್ಸಾಗಲಿಲ್ಲ. ಅವನ ಸಮೀಪವೇ ತೊರೆ ಸಾಲ ಗಿಡಮರಗಳ ಪೊ ಮರೆಯಲ್ಲಿ ಬಹಳ ಹೊತ್ತಿನ ತನಕ ಕಾಯುತ್ತ ನಿಂತೆ. ಶಿವರುದ್ರ ನಾಟ್ಯಶಿವಗಂಗೆಯನ್ನು ತನ್ನ ತಲೆ ಮೇಲೆ ಹೊತ್ತುಕೊಂಡಂತೆ ತೊರೆಯ ನೀರ ಗಟಗಟನೆ ಕುಡಿದುಬಿಡುವ ದಿವ್ಯ ದಾಹದಲ್ಲಿ ದಿಟ್ಟಿಸುತ್ತಲೇ ಇದ್ದ. ಬ ಒಕುಳಿಯಂತೆ ದಿಗಂತದ ಬೆಳಕು ತೊರೆಯ ಮಡುವಿನ ಮೇಲೆ ಚೆಲ್ಲಾಡುತ್ತಿ ಹೊನ್ನ ಹೊಳಪಿನ ನೀರವೆಗಳೇ ಅಮರ ಸುಂದರಿಯ ಸೀರೆಯಂತೆ ತುಳುಕುತ್ತಿದ್ದ



ಶಿವರುದ್ರ ಮಡುವಿಗೆ ಧುವ ಜಲಸ್ತಂಭನ ಮಾಡಿ ತೇಲಿಬಂದು ಹಾ ನಿಶ್ಚಲನಾಗಿ ಬಹಳ ಹೊತ್ತಿನ ತ ಪ್ರಾಣಾಯಾಮ ಮಾಡುವಂತೆ ಅಥವಾ ಆ ನೀರೆಂಬ ನೀರೆಯ ಮೇಲೆ ವಿರಮಿಸುವಂತೆಯೊ ತೇಲುತ್ತಿ ಕತ್ತಲು ಕವಿಯುತ್ತಿತ್ತು. ನೀ ನೀರಾಗಿಯೇ ಹರಿದುಹೋಗುತ್ತಿರುವ ಶಿವರುದ್ರ ಕಂಡ. ಹೇಳಲಾಗದ ಭ ತುಳುಕಿತು. ಆಗ ಆ ಬಾಲ್ಯದಲ್ಲಿ ಕಂ ಅಂತಹ ಶಿವರುದ್ರನಿಗೂ ಈಗ ಮುಪ್ಪಿನ ಹಠಯೋಗಿ ಶಿವರುದ್ರನಿ ಕಾಲ ಎಷ್ಟೊಂದು ಅಂತರ ಸೃಷ್ಟಿ ಯಲ್ಲಾ ಎಂದು ಬೆರಗಾಗಿ ನನ್ನ ದಾ ನಾನು ಹಿಂತಿರುಗಿದ್ದೆ. ಕಾಲಪಕ್ಷಿಯು ಎರಡೂ ರೆಕ್ಕೆಗಳ ಮರೆಯಲ್ಲಿ ಹು ಸಾವುಗಳ ಬಚ್ಚಿಟ್ಟುಕೊಂಡು ನನ್ನ ಮೇಲೆ ಹಾರಿಹೋಗುತ್ತಿತ್ತು.

ಡಾ॥ ಮೊಗಳ್ಳಿ ಗಣೇಶ್
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

'ರಾಷ್ಟ್ರೀಯ ಜ್ಞಾನ ಆಯೋಗ'ವು ಇತ್ತೀಚೆಗೆ ಜ್ಞಾನಸಂಪನ್ನ ಸಮಾಜವೊಂದನ್ನು ನಿರ್ಮಿಸುವುದರ ಕುರಿತು ...ವು ಶಿಫಾರಸುಗಳನ್ನು ಮಾಡಿದೆಯಷ್ಟೆ. ನವ-ಉದಾರವಾದಿ ಸುಧಾರಣೆಗಳನ್ನು ತುರ್ತಾಗಿ ಆಚರಣೆಗೆ ತರಲು ...ಯೋಗವು ತುಂಬ ಉತ್ಸುಕವಾಗಿದೆ ಎಂಬ ಅಂಶವನ್ನೇ ಈ ಶಿಫಾರಸುಗಳು ವ್ಯಕ್ತಪಡಿಸುತ್ತವೆ ಎಂಬುದನ್ನು ಈ ...ಬಂಧದಲ್ಲಿ ವಿವರಿಸಲು ಯತ್ನಿಸಿದ್ದೇನೆ. ಮೊತ್ತಮೊದಲನೆಯದಾಗಿ ಆಯೋಗವು ಮುಂಗೇಕರ್ ನೀಡಿದ ...ಚ್ಚರಿಕೆಗಳನ್ನು ಗಾಳಿಗೆ ತೂರಿದೆ ಅನ್ನುವುದು ಮೇಲುನೋಟಕ್ಕೇ ಸುಸ್ಪಷ್ಟ. ಆಳುವ ವರ್ಗಗಳು ಸಾರ್ವಜನಿಕ ನಿಧಿ...ನ್ನು ಷೇರು ಮಾರುಕಟ್ಟೆಗಳೊಳಕ್ಕೆ ಹರಿಸಬೇಕು; ಕಾರ್ಪೊರೇಟ್ ವಲಯಕ್ಕೆ ಉತ್ತೇಜನ ನೀಡಲೋಸುಗ ...ರಕ್ಕೆ ಭಾರಿ ತೆರಿಗೆ ವಿನಾಯಿತಿಗಳನ್ನು ನೀಡಬೇಕು; ವಿಶ್ವವಿದ್ಯಾಲಯಗಳಿಗೆ ಸಹಾಯಧನ ನೀಡಲೋಸುಗ ...ಜ್ಯ - ಒಡೆತನದ ಭೂಮಿಗಳನ್ನು ಖಾಸಗೀಕರಿಸಬೇಕು ಮತ್ತು ಸಾರ್ವಜನಿಕ ಉದ್ಯಮಗಳಲ್ಲಿ ರಾಜ್ಯ ...ಡಗಿಸಿರುವ ಬಂಡವಾಳಗಳನ್ನು ಹಿಂತೆಗೆದುಕೊಳ್ಳಬೇಕು – ಎಂದೆಲ್ಲ ಆಯೋಗ ಶಿಫಾರಸು ಮಾಡಿದೆ. ಇವುಗಳ ...-ಅರ್ಥವೇನು ?– ರಾಜ್ಯದ ಹಣಕಾಸು ವಿಭಾಗವನ್ನು ಶೋಷಕರ ದುರ್ಬಳಕೆಗೆ ತೆರೆದಿರಿಸುವುದೇ ಆಗಿದೆ. ...ಳುವ ವರ್ಗಗಳ ಈ ಎಲ್ಲ ಕ್ರಿಯೆಗಳೂ ಸಾಮಾನ್ಯ ಜನರ ಹಕ್ಕುಗಳನ್ನು ಕಸಿದುಕೊಂಡು ಅವರನ್ನು ಹೆಚ್ಚು ...ಕಷ್ಟಕ್ಕೊಳಪಡಿಸುವ ಗುರಿ ಹೊಂದಿರುವುದರಿಂದ ಅವನ್ನು ಬಿಂಬಿಸುವ 'ರಾಷ್ಟ್ರೀಯ ಜ್ಞಾನ ಆಯೋಗ'ದ ...ಫಾರಸುಗಳನ್ನು ಒಳಗೊಂಡಿರುವ ವರದಿಯನ್ನು ಸಂಪೂರ್ಣವಾಗಿ ತಿರಸ್ಕರಿಸಬೇಕೆಂದು ಈ ಪ್ರಬಂಧ ...ಲಹೆ ಮಾಡುತ್ತದೆ.

**...ತೆರೆದಿರಿಸುವ' ಕ್ರಿಯೆಯ ಇಬ್ಬಗೆ ಸ್ವರೂಪ**

ಆರ್ಥಿಕ ಕ್ಷೇತ್ರದಲ್ಲಿ ಕೇನೀಸಿಯನ್ ವಾದವು ಸುಪರಿಚಿತ. ಜನರ ನಡುವೆ 'ಕೇಳಿಕೆ'ಗಳನ್ನು ...ಂಟುಮಾಡುವುದಕ್ಕೆ ಸಂಬಂಧಿಸಿಯೂ, ಸಾಮಾಜಿಕ ವಲಯದ ಅಭಿವೃದ್ಧಿಗಾಗಿ ಮಾಡಬೇಕಾದ ಖರ್ಚುಗಳಿಗೆ

# 'ರಾಷ್ಟ್ರೀಯ ಜ್ಞಾನ ಆಯೋಗ' ಯಾರ ಪರವಾಗಿದೆ?

...ಂಬಂಧಿಸಿಯೂ ಈ ವಾದ ಅನೇಕ ಮುಖ್ಯ ಅಂಶಗಳನ್ನು ಸೂಚಿಸಿದೆ. ರಾಷ್ಟ್ರೀಯ ಜ್ಞಾನ ಆಯೋಗದ ...ಫಾರಸುಗಳು ಬಿಂಬಿಸುವ ನವ-ಉದಾರವಾದಿ ಆರ್ಥಿಕ ಕಾರ್ಯಕ್ರಮವು ಈ ಕೇನೀಸಿಯನ್ ಸೂಚನೆಗಳಿಗೆ ...ರೋಧವಾಗಿದೆ. ಆದರೆ ಯುದ್ಧಕಾಲದ ಆಯವ್ಯಯ ವ್ಯವಸ್ಥೆಯ ಮೂಲಕ ಜನರ ನಡುವಿನ ಪರಿಣಾಮಕಾರೀ ...ಳಿಕೆಯನ್ನು ರಕ್ಷಿಸಿ ಇರಿಸಲು ಸಾಧ್ಯವೆಂಬ ಕೇನೀಸಿಯನ್ ಸಲಹೆಯನ್ನು ಮಾತ್ರ ಅದು ಬಿಟ್ಟುಕೊಟ್ಟಿಲ್ಲ. ಅಲ್ಲದೆ ...ಮಾಜಿಕ ವಲಯಗಳಿಗೆ ರಾಜ್ಯವು ಬೆಂಬಲ ಹಾಗೂ ಸಹಾಯಧನ ನೀಡಬೇಕೆಂಬ ವಿಚಾರವನ್ನು ಕೈಬಿಡಲಾಗಿದೆ.

'ತೆರೆದಿರಿಸುವುದು' ಎಂಬ ಪದಪುಂಜವು ನವ-ಉದಾರವಾದಿಗಳ ತುಂಬ ಮೆಚ್ಚುಗೆಯ ನುಡಿಗಟ್ಟಾಗಿದೆ. ...ದರಲ್ಲಿ ಧನಾತ್ಮಕ ಲಕ್ಷಣವೂ ಇದೆ. ಆದರೆ ಅದಕ್ಕೆ ತೀರ ವಿರುದ್ಧವಾದ ಲಕ್ಷಣವನ್ನೂ ಅದು ಒಳಗೊಂಡಿದೆ ...ನ್ನುವುದನ್ನು ನೆನಪಿನಲ್ಲಿಡಬೇಕು. 'ತೆರೆದಿರಿಸುವ' ಕ್ರಿಯೆಯು ಸಂಪೂರ್ಣ ವಿನಾಶದ ಅಪಾಯಕರ ...ತಿಲಕ್ಷಣವನ್ನೂ ಒಳಗೊಂಡಿರುತ್ತದೆಂಬುದನ್ನು ಹೈಡ್ರಾಲಿಕ್ ಹಾಗೂ ಸಿವಿಲ್ ಎಂಜಿನಿಯರಿಂಗ್ ವಿಭಾಗಗಳು ನಮ್ಮ ...ಮನಕ್ಕೆ ತಂದುಕೊಡುತ್ತವೆ. ಸೂಯೆಜ್ ಹಾಗೂ ಪನಾಮ ಕಾಲುವೆಗಳನ್ನು ನಿರ್ಮಿಸುವಾಗ ಈ ಅಂಶವನ್ನು ...ನಸ್ಸಿನಲ್ಲಿ ಇಟ್ಟುಕೊಳ್ಳಲಾಗಿದ್ದಿತು. ಇಕ್ಕೆಲಗಳಲ್ಲೂ ನೀರಿನ ಮಟ್ಟಗಳು ಸರಿಸಮ ಸ್ಥಿತಿಯಲ್ಲಿ ಇರುವುದಿಲ್ಲವೆಂಬ ...ಸ್ತವಾಂಶವನ್ನು ಗಮನದಲ್ಲಿರಿಸಲಾಗಿದ್ದಿತು. ಆದ್ದರಿಂದಲೇ 'ತೆರೆದಿರಿಸುವ' ಮೂಲಕ ಅತಿ ಹರಿವು ಉಂಟಾಗಿ ...ನಾಶವಾಗುವುದನ್ನು ತಪ್ಪಿಸಲೋಸುಗ ಕಾಲುವೆಗಳಲ್ಲಿ ಅನೇಕ ಬಲಿಷ್ಠ ತೂಬು-ಗೇಟುಗಳನ್ನು ನಿರ್ಮಿಸಲಾಯಿತು.

ಅರ್ಥಶಾಸ್ತ್ರದಲ್ಲಿ 'ತೆರೆದಿರಿಸುವುದು' ಅಂದರೆ ಲಾಭಗಳ ಸರ್ವತೋಮುಖ ಹೆಚ್ಚಳಕ್ಕಾಗಿ ಮಾರುಕಟ್ಟೆ ಶಕ್ತಿಗಳಿಗೆ ...ಡೆತಡೆ ಇಲ್ಲದಂತೆ ಅವಕಾಶಗಳನ್ನು ಒದಗಿಸುವುದು ಎಂದರ್ಥ. ಮಾರುಕಟ್ಟೆಯು ಕೊಳ್ಳುವ ಶಕ್ತಿಗಷ್ಟೆ. ಅಂದರೆ ...ಣ ಇರುವ ವ್ಯಕ್ತಿಗಳಿಗಷ್ಟೆ ಮನ್ನಣೆ ನೀಡುತ್ತದೆ. ಅಂದರೆ ಹಣ ಇಲ್ಲದವರು, ಮಾರುಕಟ್ಟೆಗೆ ಬೇಕಿಲ್ಲ. ಈ ...ರ್ಥದಲ್ಲಿ 'ತೆರೆದಿರಿಸುವುದು' ಅನ್ನುವುದು ಪ್ರತ್ಯೇಕತೆಯ ಸ್ವರೂಪದ್ದಾಗಿರುತ್ತದೆ.

'ರಾಷ್ಟ್ರೀಯ ಜ್ಞಾನ ಆಯೋಗ'ದ ಶಿಫಾರಸುಗಳು ಜ್ಞಾನಸಂಪನ್ನ ಸಮಾಜವೊಂದರ ಬಗೆಗೆ ಹೇಳುವಾಗಲೇ, ಪ್ರತ್ಯೇಕವಾದಿ ವರ್ಗಾಭಿಮುಖೀ ಶೈಕ್ಷಣಿಕ ವ್ಯವಸ್ಥೆಯೊಂದನ್ನು ಗುಣಾತ್ಮಕವಾಗಿಯೂ ಪಠ್ಯಕ್ರಮಾಂತರ್ಗತ ವಿಷಯಗಳಿಗೆ ಸಂಬಂಧಿಸಿದಂತೆಯೂ ಅನುಷ್ಠಾನಕ್ಕೆ ತರಲು ವಿಚಾರಧಾರಾತ್ಮಕ ಅಡಿಪಾಯಗಳನ್ನು ಹಾಕಿಕೊಡುತ್ತವೆ. ಒಂದು ಲಕ್ಷ ವಿದ್ಯಾರ್ಥಿವೇತನಗಳನ್ನು ಸ್ಥಾಪಿಸಬೇಕೆಂಬ ತೋರಿಕೆಗೆ ಧನಾತ್ಮಕವೆನ್ನಬಹುದಾದಂಥ ಶಿಫಾರಸನ್ನು ಒಳಗೊಂಡಿದ್ದರೂ ಆಯೋಗದ ಈ ವರದಿಯನ್ನು ಸಂಪೂರ್ಣವಾಗಿ ತಿರಸ್ಕರಿಸಬೇಕು. ಆಯೋಗದ ಆಧುನಿಕೋತ್ತರ ನುಡಿಗಟ್ಟುಗಳ ಬಲೆಗೆ ಸಿಕ್ಕಿಬೀಳದಂತೆ ಉಪಾಧ್ಯಾಯರುಗಳೂ ವಿದ್ಯಾರ್ಥಿಗಳೂ ಇತರ ಪ್ರಜಾಸತ್ತಾತ್ಮಕ ಜನವಿಭಾಗಗಳೂ ಎಚ್ಚರಿಕೆಯಿಂದಿರಬೇಕು. ತಮ್ಮನ್ನು ಅದರಿಂದ ದೂರ ಇರಿಸಿಕೊಳ್ಳಬೇಕು. 'ಜ್ಞಾನಸಂಪನ್ನ ಸಮಾಜ', 'ಕೈಗಾರಿಕೋತ್ತರ ಸಮಾಜ' ಎನ್ನುವಂಥ ಪದಗಳು ಅತ್ಯಂತ ಪ್ರಾಮಾಣಿಕ ಜನರನ್ನೂ, 'ಬಂಡವಾಳವಾದ' ಎನ್ನುವಂಥ ಪದಗಳು ಇನ್ನೆಷ್ಟು ಮಾತ್ರವೂ ಪ್ರಸ್ತುತವಲ್ಲ ಎಂದು ನಂಬುವಂತೆ ಬಲೆಗೆ ಬೀಳಿಸುವುದು ಖಂಡಿತ. ಎಲ್ಲವನ್ನೂ ಒಳಗೊಳ್ಳುವುದಾಗಿ ಸೂಚಿಸುವಂಥ ಆಯೋಗದ ನುಡಿಗಟ್ಟುಗಳ ಹಿಂದೆ ಪ್ರತ್ಯೇಕತಾವಾದಿ ಮನೋಭಾವ ಅಡಗಿರುವುದು ಸುಸ್ಪಷ್ಟ.

ಡಾ|| ಕೆ. ಕೆ. ಥೇಕೆದತ್

ಶಿಕ್ಷಣ ಕ್ಷೇತ್ರವನ್ನು ಉದಾಹರಣೆಗೆ ತೆಗೆದುಕೊಳ್ಳೋಣ. ಇದರಲ್ಲಿ ಮಾರುಕಟ್ಟೆಯ ಆದೇಶಗಳಿಗೆ ಅನುಗುಣವಾಗಿ ಶಿಕ್ಷಣ ಶುಲ್ಕಗಳನ್ನು ಬೇಕಾಬಿಟ್ಟಿ ಹೆಚ್ಚಿಸುವುದಕ್ಕೆ ಅನುಮತಿ ನೀಡಿದಲ್ಲಿ, ಜನಸಂಖ್ಯೆಯ ಇಡೀ ಅರ್ಧಭಾಗದಷ್ಟು ಜನರನ್ನು ಉನ್ನತ ಶಿಕ್ಷಣದಿಂದ ವಂಚಿಸಿದಂತಾಗುತ್ತದೆ. ಮುಂಗೇಕರ್ ಸಮಿತಿ ಈ ವಾದವನ್ನೇ ಮುಂದಿಟ್ಟಿರುವುದು. ಆದರೆ ರಾಷ್ಟ್ರೀಯ ಜ್ಞಾನ ಆಯೋಗವು ಶುಲ್ಕ ಹೆಚ್ಚಳವನ್ನು ಆದಾಯ ಹೆಚ್ಚಿಸುವ ಪ್ರಧಾನ ಆಸರೆಯನ್ನಾಗಿ ಪರಿಗಣಿಸುತ್ತದೆ. ಅದು ಹೆಚ್ಚಳಗಳಿಗೆ ಒಂದು ತಳಮಿತಿಯನ್ನೂ ಗೊತ್ತುಪಡಿಸುತ್ತದೆ. "ಅವಶ್ಯವಿದ್ದವರಿಗೆ ಶುಲ್ಕ ವಿನಾಯಿತಿ ನೀಡಬೇಕು" ಎಂದೇನೋ ಅದು ಸೂಚಿಸುತ್ತದೆ. ಆದರೆ ಹೇಳಿಕೆಯು ರಾಷ್ಟ್ರೀಯ ಜ್ಞಾನ ಆಯೋಗದ ವಾಸ್ತವಿಕ ಚರ್ಯೆಯನ್ನು ಗಮನದಲ್ಲಿಟ್ಟಾಗ ಕೇವಲ ಸೋಗಿನದೆಂದು ಸಾಬೀತಾಗುತ್ತದೆ. ಅದು ನಿಗದಿಪಡಿಸುವ ಮೊತ್ತಗಳೂ ತಾನು ಸಮಾನತೆಗೆ ಬದ್ಧವೆಂಬ ಅದರ ಘೋಷಣೆಯೂ ಅದರ ಬೂಟಾಟಿಕೆಯನ್ನು ಬಯಲು ಮಾಡುತ್ತವಷ್ಟೆ.

'ರಾಷ್ಟ್ರೀಯ ಜ್ಞಾನ ಆಯೋಗ'ವು 'ಜ್ಞಾನ ಸಮಾಜ' ಎನ್ನುವಂಥ ಕಲ್ಪನೆಯ ಬಗೆಗೆ, ಅದು ಯಾವುದೋ ಒಂದು ಹೊಸ ಸಮಾಜ ಕಲ್ಪನೆ, ಇಂದಿನ ಜಾಗತಿಕ ಬಂಡವಾಳಶಾಹಿ ಸಮಾಜದಿಂದ ಭಿನ್ನವಾದುದು ಎಂದು ಮುಂತಾಗಿ ದೊಡ್ಡ ದೊಡ್ಡ ಮಾತುಗಳನ್ನಾಡುತ್ತದೆ. ಇಂದು ಯುವಜನರ ದಾಖಲಾತಿ ಪ್ರಮಾಣ ಶೇ. ೭ರಷ್ಟು ಇರುವುದನ್ನು ೨೦೧೫ರ ಹೊತ್ತಿಗೆ ಶೇ.೧೫ಕ್ಕೆ ಏರಿಸುವಂತಹ ಚಿತ್ರವನ್ನು ಮುಂದಿಡುತ್ತದೆ. ಅಂದರೆ ಪ್ರತಿ ವರ್ಷವೂ ದಾಖಲಾತಿ ಹೆಚ್ಚಳ ಶೇ. ೧ರಷ್ಟಾಗುತ್ತದೆ – ಪ್ರತಿ ವರ್ಷವೂ ಸುಮಾರು ೫ ಮಿಲಿಯ ಹೊಸ ಪ್ರವೇಶಿಗರು ಎಂದಾಗುತ್ತದೆ. ಸರಕಾರವು ಒಂದು ಲಕ್ಷ ವಿದ್ಯಾರ್ಥಿವೇತನ ಒದಗಿಸಬೇಕೆಂದು ಆಯೋಗ ಶಿಫಾರಸು ಮಾಡುತ್ತದೆ. ಇದು ಗುರಿ ಅಂಕಕ್ಕೂ ಶೇ. ೨ರಷ್ಟು ಕಡಿಮೆಯಾಗುತ್ತದೆ. ಅಂದರೆ, ಒಂದೋ ಆಯೋ… ಗಣಿತ ಅಷ್ಟು ಚೆನ್ನಾಗಿ ಬರುವುದಿಲ್ಲ ಎಂದಾಗುತ್ತದೆ. ಇಲ್ಲವೇ ಅತ್ಯಂತ ಹಿಂದುಳಿದ… ಹಳ್ಳಕ್ಕೆ ತಳ್ಳಿಬಿಡುವುದೇ ಅತ್ಯುತ್ತಮ ಎಂದು ನಂಬಿದೆ, ಎಂದಾಗುತ್ತದೆ.

ಶುಲ್ಕ ಏರಿಕೆಯಿಂದ ಬಹುಮಂದಿ ಯುವ ಜನರನ್ನು ಬಡವರನ್ನು ಹೊರ… ದಂತಾಗಬಹುದೆಂದು ಮುಂಗೇಕರ್ ಸಮಿತಿ ಎಚ್ಚರಿಕೆ ನೀಡುತ್ತದೆ. ಬಡಜನರನ್ನು ಹೊರಗಿರಿಸಿದರೂ ವ್ಯವಸ್ಥೆಯನ್ನು ಆರ್ಥಿಕವಾಗಿ ಸುಸ್ಥಿತಿಯಲ್ಲಿ… ಬೇಕಾದಷ್ಟು ಇತರ ಜನ ಇದ್ದೇ ಇರುತ್ತಾರೆಂದು ಆಯೋಗ ಪರಿಭಾವಿಸುತ್ತದೆ.

**ಕಾರ್ಪೊರೇಟ್ (ಧನವಂತ ಕಂಪನಿ) ವಲಯಕ್ಕೆ ನೆರವಾಗಲು ಹೊಸ ತುಯ…**

ನವ-ಉದಾರವಾದಿ ಆರ್ಥಿಕತೆಯು ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಸಹ… ಮುಗ್ಗಟ್ಟು ಇದೆ ಎಂಬುದನ್ನು ಒಪ್ಪಿಕೊಳ್ಳುತ್ತದೆ. ಆದರೆ ಕೇನೀಸಿಯನ್ ವಾದವು (ಡಿಮಾಂಡ್)ಯ ಕಡೆಗೆ ಗಮನವಿಟ್ಟಿದ್ದಲ್ಲಿ ನವ-ಉದಾರವಾದವು ಸರಬ… (ಸಪ್ಲೈ)ನ ಕಡೆಗೆ ಹೆಚ್ಚು ಒತ್ತು ನೀಡುತ್ತದೆ ; ಸರಬರಾಜು ಕೇಳಿಕೆಯನ್ನು ಸೃಷ್ಟಿ… ಎಂಬ 'ಸೇಯವರ ನಿಯಮ'ದಲ್ಲಿ ಹೆಚ್ಚಿನ ವಿಶ್ವಾಸವಿರಿಸುತ್ತದೆ.

ಸರಬರಾಜಿನ ಕಡೆಗೆ ನೆರವಾಗಲು ಕಾರ್ಪೊರೇಟ್ ವಿಭಾಗಕ್ಕೆ ತೆರಿಗೆಯಲ್ಲಿ… ಹೆಚ್ಚು ರಿಯಾಯಿತಿ/ಪರಿಹಾರ ಗೊತ್ತುಪಡಿಸಲಾಗುತ್ತದೆ. ಬಂಡವಳಿಗರ … ತೆರಿಗೆಯ ಭಾರ ಹೆಚ್ಚಿಸುವ ಗೊತ್ತುವಳಿಗಳೇನೂ ಇಲ್ಲ. ಬದಲು ದುಡಿ… ಜನರ ಮೇಲೆ ಭಾರ ವರ್ಗಾಯಿಸುವ ಸಲಹೆ ಮಾಡಲಾಗಿದೆ. ಆದ್ದರಿಂ… ಸ್ಥಳೀಯ ಸಂಪನ್ಮೂಲ ಸಂಗ್ರಹಣೆಯ ಮೇಲೆ ಹಾಗೂ ಸಹಾಯಧನಗಳ ಕ… ಮೇಲೆ ಒತ್ತು ಹಾಕಲಾಗಿರುವುದು.




ಆ ನಾಣ್ಯಕ್ಕೆ ಎರಡು ಮುಖಗಳು
ಇರುವುದಂತೂ ನಿಜ.
'ರಾಜ-ರಾಣಿ'ಯ ಆಟಕ್ಕೆ
ಆಯ್ಕೆಯ ಗೊಂದಲದ ನಿವಾರಣೆಗೆ
ಒದಗಿ ಬರುತ್ತಿದ್ದ
ಆ ನಾಣ್ಯದ ಎರಡೂ ಮುಖಗಳು
ಅಂಟಿಕೊಂಡಿದ್ದವು ಬೆನ್ನಿಗೆ ಬೆನ್ನಾಗಿ -
ಸಯಾಮೀ ಅವಳಿಗಳಂತೆ
ಬೇರ್ಪಡಿಸಲಾಗದ ರೀತಿಯಲ್ಲಿ
ಒಂದರ ಅಸ್ತಿತ್ವ ಇರುವುದೇ
ಇನ್ನೊಂದರ ಇರುವಿಕೆಯಲ್ಲಿ

ಆದರೆ ಈಗ, ಜೇಬಿಂದ
ಠಣ್ಣೆಂದೆಗರಿದ ನಾಣ್ಯ
ಹೊರಗುರುಳಿ ನಿಂತಿದೆ ಬೀದಿಯಲ್ಲಿ
ಗರುಡಗಂಬದಂತೆ
ಒಂದು ಮುಖ ಉತ್ತರಕ್ಕೆ – ಇನ್ನೊಂದು
ದಕ್ಷಿಣಕ್ಕೆ – ಕ್ಷಿತಿಜದ ಕಡೆಗೆ
ಕಣ್ಣಿಟ್ಟು – ನಡುವೆ
ನಿಂತಿದೆ ಲೋಹದ ಗೋಡೆ – ಎಂದೆಂದೂ
ಒಂದಾಗದ ರೀತಿಯಲ್ಲಿ
ಮುಖಗಳೆರಡೂ ಮುಖಾಮುಖಿಯಾಗದೆ
ಎರಡಾಗಿಯೇ ಉಳಿಯುವ
ಕಠೋರ ವಾಸ್ತವದ ಸ್ಥಿರಚಿತ್ರವಾಗಿ.

ಸುಬ್ರಾಯ ಚೊಕ್ಕಾಡಿ, ಚೊಕ್ಕಾಡಿ - ೫೭೪ ೨೧೨, ದಕ್ಷಿಣ ಕನ್ನಡ

ಶಿಕ್ಷಣಕ್ಕೆ ನೀಡಲಾಗಿರುವ ಒಟ್ಟು ಹಣದಲ್ಲಿ ಶೇ. ಷ್ಟರೊಳಗೇ ಹಣವನ್ನು ಉನ್ನತ ಶಿಕ್ಷಣ ಕ್ಷೇತ್ರಕ್ಕೆ ರಿಸುವುದಾಗಿ 'ರಾಷ್ಟ್ರೀಯ ಜ್ಞಾನ ಆಯೋಗ' ುತ್ತದೆ. ಅಂದರೆ ಇದರ ಅರ್ಥ ಎಲಿಮೆಂಟರಿ ೂ ಸೆಕೆಂಡರಿ ಶಿಕ್ಷಣಕ್ಕೆ ಗೊತ್ತುಪಡಿಸಲಾದ ಹಣ ಾಣದಲ್ಲಿ ಕಡಿತ ಎಂದಾಯಿತು. ಮತ್ತೊಂದು ಕಡೆ, ರೀತಿಯ ನೆಪಗಳನ್ನು ಮುಂದಿಟ್ಟು ಖಾಸಗಿ ವಿದ್ಯಾಲಯಗಳಿಗೆ ಪ್ರೋತ್ಸಾಹ ಧನ ಒದಗಿಸುವ ರಸು ಮಾಡಲಾಗಿದೆ. ಖಾಸಗಿ ವಿಶ್ವವಿದ್ಯಾಲಯ ನ್ನು ಸ್ಥಾಪಿಸುವುದಕ್ಕೆ ಸಂಬಂಧಿಸಿ ಶಾಸನವೊಂದನ್ನು ನಿಯನ್ ಕ್ಯಾಬಿನೆಟ್ ಆಗಲೇ ಅನುಮೋದಿಸಿದೆ. ಷ್ಟ್ರೀಯ ಜ್ಞಾನ ಆಯೋಗ'ವು ಈ ಚಾಲನೆಗೆ ರ್ಥನೆ ನೀಡುತ್ತಿದೆ.

'ಭಾರತ್ ಹೆವಿ ಎಲೆಕ್ಟ್ರಿಕಲ್ಸ್ ಲಿಮಿಟೆಡ್' ಎಚ್.ಇ.ಎಲ್.)ನಲ್ಲಿ ಹಾಕಲಾಗಿರುವ ತನ್ನ ಷೇರು ನ್ನು ಹಿಂದಕ್ಕೆ ಪಡೆಯುವ ಭಾರತ ಸರಕಾರದ ವನ್ನು ಜನರ ಒತ್ತಡದಿಂದಾಗಿ ನಿಲ್ಲಿಸಲು ಸಾಧ್ಯ ದರೂ ಮುಂಬಯಿ ಮತ್ತು ಡೆಲ್ಲಿ ವಿಮಾನ ನಿಲ್ದಾಣಗಳನ್ನು ಖಾಸಗಿ ಒಡೆತನಕ್ಕೆ ಸುವುದನ್ನು ತಪ್ಪಿಸಲು ಸಾಧ್ಯವಾಗಲಿಲ್ಲ. ಈಗ ಸರಕಾರವು ವಿಶ್ವವಿದ್ಯಾಲಯಗಳಿಗೆ ಪ್ರಮಾಣದ ಭೂಪ್ರದೇಶಗಳನ್ನು ದಾನವಾಗಿ ನೀಡಬೇಕು, ಆ ವಿಶ್ವವಿದ್ಯಾಲಯ ಈ ಭೂಮಿಗಳನ್ನು ತಮಗೆ ಬೇಕಾದ ನಿಧಿ ಸಂಗ್ರಹಣೆಗೆ ಬಳಸಬೇಕು, ಎಂದು ಷ್ಟ್ರೀಯ ಜ್ಞಾನ ಆಯೋಗ'ವು ನಿಧಿ ಸಂಗ್ರಹಣೆಗೆ ಸಂಬಂಧಿಸಿ ಸಲಹೆ ಮಾಡಿದೆ. ಭೂಮಿಗಳಿಂದ ಆದಾಯ ಪಡೆಯುವುದು ಹೇಗೆ? ಖಂಡಿತ ಅವುಗಳನ್ನು ಸಗಿಯವರಿಗೆ ಬಳಸಲು ನೀಡುವುದರಿಂದಷ್ಟೇ ಸಾಧ್ಯ. ಹೀಗೆ, ಈ ಯೋಜನೆಯು ಪ್ರದೇಶಗಳನ್ನು ಅಥವಾ ಅವುಗಳ ಬಳಕೆಯನ್ನು ಸಾರ್ವಜನಿಕ ವಲಯದಿಂದ ಸಗಿ ವಲಯಕ್ಕೆ ವರ್ಗಾಯಿಸುವ ಹಂಚಿಕೆಯನ್ನು ದೃಷ್ಟಿಯಲ್ಲಿ ಇಟ್ಟುಕೊಂಡಿದೆ ಬುದು ಸ್ವಯಂವೇದ್ಯ. ಅಲ್ಲದೆ, ಅಷ್ಟು ಭೂಮಿ ಎಲ್ಲಿದೆ?

ಈಚೆಗೆ ಮುಂಬಯಿ ವಿಶ್ವವಿದ್ಯಾಲಯವು ತನ್ನ ವಶದಲ್ಲಿದ್ದ ಭೂಮಿಯಲ್ಲಿ ಸ್ವಲ್ಪ ಗವನ್ನು ಅಧ್ಯಾಪಕರ ವಿರೋಧವಿದ್ದಾಗ್ಯೂ, ಖಾಸಗಿ ಒಡೆತನಕ್ಕೆ - ಹೋಟೆಲ್ ತ್‌ಗೆ - ವರ್ಗಾಯಿಸಿತು. ಈಗ ನಿಧಿ ಸಂಗ್ರಹಣೆಗಾಗಿ ಶುಲ್ಕ ಏರಿಕೆಯಲ್ಲದೆ ಭೂ – ಯನ್ನು ಖಾಸಗಿಯವರಿಗೆ ಮಾರಾಟ ಮಾಡುವ ಈ ಅಭ್ಯಾಸವು ಸಹಜವಾಗಿಬಿಟ್ಟಿದೆ.

**ರು ಮಾರುಕಟ್ಟೆಯ ಸಟ್ಟಾ ವ್ಯಾಪಾರಕ್ಕೆ ಬೆಂಬಲ**

ಹೊಸ ಜಾಗತಿಕ ಆರ್ಥಿಕ ಪರಿಸ್ಥಿತಿಯ ಲಕ್ಷಣಗಳಲ್ಲೊಂದೆಂದರೆ ಹಣವು ಾದನಾ ವಿಭಾಗಗಳಿಂದ ಹೂಡಿಕೆ ವಿಭಾಗಗಳಿಗೆ ಹರಿದುಹೋಗುತ್ತಿರುವುದು. ಡವಾಳಶಾಹಿ ಆರ್ಥಿಕತೆಯ ಉತ್ಪಾದನಾ ವಲಯದಲ್ಲಿ ಮುಗ್ಗಟ್ಟು ಉಂಟಾಗಿರು ು, ಸ್ವಯಂಚಲೀಕರಣ ಭಾರಿ ಪ್ರಮಾಣದಲ್ಲಾಗುತ್ತಿರುವುದರಿಂದ ಲಾಭ ದರ ಯುತ್ತಿರುವುದು, ನಿರುದ್ಯೋಗ ಹೆಚ್ಚಿರುವುದು, ತತ್ಫಲವಾಗಿ ಸರಕುಗಳ ಬೆಲೆ ಕೆಯಲ್ಲಿ ಕುಸಿತ ಉಂಟಾಗಿರುವುದು – ಇವೆಲ್ಲ ಅದಕ್ಕೆ ಕಾರಣ. ಇಲ್ಲೂ ಸಟ್ಟಾ ಪಾರದ ಹಣಕಾಸು ಬಂಡವಾಳದ್ದೇ ಮೇಲುಗೈ.

ಸರಕಾರೀ ನಿಧಿಗಳನ್ನು ಷೇರು ಮಾರುಕಟ್ಟೆಯ ಸೇವೆಯಲ್ಲಿ ತೊಡಗಿಸುವ ರ್ಯವನ್ನೇ ಈ ಮುನ್ನಿನ ಎನ್.ಡಿ.ಎ. ಸರಕಾರ ಮಾಡಿತು. ಈಗ ಯು.ಪಿ.ಎ. ಕಾರವೂ ಅದನ್ನೇ ಮಾಡುತ್ತಿದೆ. ಈ ಎರಡು ಸರಕಾರಗಳೂ ಪೆನ್ಷನ್ ನಿಧಿಗಳನ್ನು ಸಗೀಕರಿಸುವುದರ ಪರವಾಗಿಯೇ ಇವೆ. ಪೆನ್ಷನ್ ನಿಧಿಗಳಲ್ಲಿ ಶೇ. ೫ರಷ್ಟನ್ನು ು ಹೊಸ ಹಣಕಾಸು ಸಾಧನವಾಗಿ, ಷೇರು ಮಾರುಕಟ್ಟೆಯಲ್ಲಿ ತೊಡಗಿಸ ಸುವುದೆಂದು ಈಚೆಗೆ ಕೇಂದ್ರ ಸರಕಾರ ಶಾಸನ ಮಾಡಿತು.

ಇದೇ ರೀತಿಯಲ್ಲಿ 'ರಾಷ್ಟ್ರೀಯ ಜ್ಞಾನ ಆಯೋಗ'ವೂ ಈ ಕೆಳಗಿನ ಶಿಫಾರಸು ಡುತ್ತಿದೆ:

"ವಿಶ್ವವಿದ್ಯಾಲಯಗಳಿಗೂ ದಾನಿಗಳಿಗೂ ಉತ್ತೇಜಕ ಸವಲತ್ತುಗಳಲ್ಲಿ ಬದಲಾವಣೆ ನ್ನು ತರುವ ಮೂಲಕ ಭಾರತವು ದಾನಶೀಲ ಕಾಣಿಕೆಗಳ ಪರಂಪರೆಯನ್ನು ಪೋಷಿಸ ು. ಪ್ರಸ್ತುತದಲ್ಲಿ ತೆರಿಗೆ ಸಂಬಂಧಿತ ಶಾಸನಗಳಲ್ಲೂ ದತ್ತಿ (ಟ್ರಸ್ಟ್)ಸಂಬಂಧಿತ ಶಾಸನಗಳಲ್ಲೂ ಪ್ರೋತ್ಸಾಹರಾಹಿತ್ಯತೆ ಅಂತರ್ಗತವಾಗಿದೆ. ವಿಶ್ವವಿದ್ಯಾಲಯಗಳು ತಮಗಿಷ್ಟ ಬಂದ ಹಣಕಾಸು ವ್ಯವಸ್ಥೆಗಳಲ್ಲಿ ಹಣ ತೊಡಗಿಸಲು ಸಾಧ್ಯವಾಗುವಂತೆ ಇದಕ್ಕಾಗಿ ತಮಗೆ ಲಭಿಸಿದ ದತ್ತಿ ಕೊಡುಗೆಗಳಿಂದ ಹಣಸಂಚಯ ನಿರ್ಮಿಸಲು ಸಾಧ್ಯವಾಗುವಂತೆ, ಈ ಶಾಸನಗಳನ್ನು ಬದಲಿಸಬೇಕಾಗಿದೆ."



ಪುಸ್ತಕ ತಂದಿಲ್ಲ... ಭರ್ಜರಿ ಊಟ ಮಾಡಿ ಪುಸ್ತಕದ ಪರಿಮಳ ಹೀರಿ ಬಂದಿದ್ದಾರಂತೆ...

ಕಾರ್ಪೊರೇಟ್ ವಲಯಕ್ಕೆ ತೆರಿಗೆ ರಿಯಾಯಿತಿ ನೀಡುವುದರ ಪರವಾಗಿ ಮತ್ತು ವಿಶ್ವವಿದ್ಯಾಲಯಗಳು ತಮ್ಮ ಆದಾಯ ಹೆಚ್ಚಿಸಿಕೊಳ್ಳುವ ಆಶಯದೊಂದಿಗೆ ತಮ್ಮ ಸಂಪನ್ಮೂಲಗಳ ಮೂಲಕ ಷೇರು ಮಾರುಕಟ್ಟೆಗೆ ನೆರವಾಗುವುದರ ಪರವಾಗಿ, ಶಾಸನಗಳನ್ನು ಬದಲಾಯಿಸುವುದಕ್ಕೆ ನೀಡಿದ ಬಹಿರಂಗ ಆಹ್ವಾನವಾಗಿದೆ ಇದು.

**ಉತ್ಕೃಷ್ಟತೆಯ ಪರೀಕ್ಷಣೆಗೆ ಪ್ರತಿಗಾಮಿ ಪ್ರಮಾಣಕಗಳು**

ಉತ್ಕೃಷ್ಟತೆ ಎಂಬ ಪದ ಒಂದು ಕೋಶ ಪ್ರಕಲ್ಪನೆ. ಅದರಲ್ಲಿ ಅನೇಕ ಪ್ರಕಲ್ಪನೆಗಳು ಒಂದುಗೂಡಿವೆ. ಪ್ರತ್ಯೇಕತೆ (ಇತರರ ಮೇಲೆ ಶ್ರೇಷ್ಠತೆ) ವಿಚಾರ ಒಂದಾದರೆ, ಗುಣಮಟ್ಟದ ವಿಚಾರ ಇನ್ನೊಂದು. ಈ ಎರಡನೆಯದು ಸಂಶಯಾಸ್ಪದವಾದುದು.

ಉತ್ಕೃಷ್ಟತೆಯನ್ನು ವರಿಷ್ಠ ವೃಂದ(peer groups)ಗಳು ಎನ್ನಲಾಗುವಂಥ ಜನರ ಗುಣಮಟ್ಟಗಳಿಂದ ನಿರ್ಧರಿಸಬೇಕು ಎಂಬ ಸಲಹೆಯೂ ಒಂದಿದೆ. ಈಗ ನಮ್ಮ ಇಂದಿನ ಪ್ರತ್ಯೇಕತಾ ಸಮಾಜವು ಮರ್ದಿತ ಹಾಗೂ ಮರ್ದಕ ವರ್ಗಗಳಾಗಿ ವಿಭಜಿತವಾಗಿದೆ. ಇದರಲ್ಲಿ ಬುದ್ಧಿಜೀವಿ ಜನರು ಅಸ್ತಿತ್ವದಲ್ಲಿರುವ ಪದ್ಧತಿಯನ್ನೇ ಮುಂದುವರಿಸಿಕೊಂಡು ಹೋಗಬೇಕೆನ್ನುವುದಕ್ಕೆ ಬೆಂಬಲ ನೀಡುವ ಸಮಾಜ ರಚನೆಯನ್ನೇ ಮೈಗೂಡಿಸಿಕೊಂಡಿರುತ್ತಾರೆ. ಈ ಅರ್ಥದಲ್ಲಿ ಅವರು ಸಂಪ್ರದಾಯವಾದಿಗಳು. ನಮ್ಮ ದೇಶದಲ್ಲಿನ ನ್ಯಾಯಾಂಗವೂ ಬಹುವೇಳೆ ನಮಗೆ ಆಘಾತ ಉಂಟುಮಾಡುತ್ತದೆ. ಏಕೆಂದರೆ, ಅದರ ಕೆಲವು ಸದಸ್ಯರು ಕೆಲವು ವೇಳೆ ತುಂಬ ಪ್ರತಿಗಾಮಿಯಾದ ಹಾಗೂ ಕಾರ್ಮಿಕವರ್ಗ-ವಿರೋಧಿ ತೀರ್ಪುಗಳನ್ನು ನೀಡಿರುತ್ತಾರೆ. ಈ ವ್ಯಕ್ತಿಗಳು ನವ-ಉದಾರವಾದಿ ವರ್ಗ ತತ್ತ್ವಜ್ಞಾನವನ್ನು ಮೈಗೂಡಿಸಿಕೊಂಡಂಥವರು ಎನ್ನುವುದಕ್ಕೆ ಇದೊಂದು ಉದಾಹರಣೆ. ಶುಲ್ಕ ಹೆಚ್ಚಳ, ಮೀಸಲಾತಿ ಅಥವಾ ಮುಷ್ಕರ ಮಾಡುವ ಹಕ್ಕು ಇಂಥ ವಿಷಯಗಳಿಗೆ ಸಂಬಂಧಿಸಿ ಅವರು ನೀಡಿರುವ ತೀರ್ಪುಗಳೇ ಇದಕ್ಕೆ ನಿದರ್ಶನ.

**ವಿಜ್ಞಾನದಲ್ಲಿ ವರಿಷ್ಠ ಮೌಲ್ಯಮಾಪನೆಗೊಂದು ನಿದರ್ಶನ**

ವಿಜ್ಞಾನವು ರಾಜಕಾರಣದಿಂದ ಮಲಿನಗೊಂಡಿರದ ಕ್ಷೇತ್ರ ಎಂದು ಸಾಮಾನ್ಯವಾಗಿ ಪರಿಗಣಿಸಲಾಗಿರುತ್ತದೆ. ಆದರೆ ಈ ಕ್ಷೇತ್ರದಲ್ಲೂ ವರಿಷ್ಠ ಮೌಲ್ಯಮಾಪನ ಪ್ರಕಲ್ಪನೆಯನ್ನು ಆಳುವ ವರ್ಗಗಳ ಹಿತಗಳಿಗೆ ವಿರುದ್ಧವೆಂದು ಪರಿಗಣಿಸಿದಂಥ ಸಂಶೋಧನೆಯನ್ನು ತಡೆಗಟ್ಟಲು ಬಳಸಲಾಗುತ್ತಿದೆ. ಇದಕ್ಕೆ ಒಂದು ಶ್ರೇಷ್ಠ ನಿದರ್ಶನವನ್ನು ಜಯಂತ್ ನಾರ್ಳೀಕರ್ ಮತ್ತಿತರರು ತಮ್ಮ 'ವಿಶ್ವ ವಿಜ್ಞಾನ ಅಧ್ಯಯನದ ಒಂದು ಭಿನ್ನ ಮಾರ್ಗ' (ಕೇಂಬ್ರಿಜ್ ವಿಶ್ವವಿದ್ಯಾಲಯ ಮುದ್ರಣಾಲಯ, ೨೦೦೦) ಎಂಬ ಗ್ರಂಥದಲ್ಲಿ ನೀಡಿದ್ದಾರೆ. ವರಿಷ್ಠ ಮೌಲ್ಯಮಾಪನ ಎಂಬ ಪ್ರಕಲ್ಪನೆಯನ್ನು 'ವಿಶ್ವವಿಜ್ಞಾನದ ಸ್ಥಿರ ಸ್ಥಿತಿ ಸಿದ್ಧಾಂತಕ್ಕೆ ಸಂಬಂಧಿಸಿದ ಸಂಶೋಧನೆಯನ್ನು ತಡೆಗಟ್ಟಲು ಬಳಸಿಕೊಳ್ಳಲಾಗುತ್ತಿದೆ' ಎಂಬುದನ್ನು ಅವರು ತಮ್ಮ ಗ್ರಂಥದ ಮೂರನೆಯ ಅಧ್ಯಾಯದಲ್ಲಿ ಸವಿವರವಾಗಿ ವರ್ಣಿಸಿದ್ದಾರೆ. 'ಸ್ಥಿರ ಸ್ಥಿತಿ ಸಿದ್ಧಾಂತ'ವು ಅಧಿಕೃತ 'ಮಹಾ ಬಾಜಣೆ ಸೃಷ್ಟಿ' (ಬಿಗ್ ಬ್ಯಾಂಗ್ ಕ್ರಿಯೇಷನ್) ಸಿದ್ಧಾಂತಕ್ಕೆ ವಿರೋಧವಾಗಿರುವುದೇ ಅದಕ್ಕೆ ಕಾರಣ. ಹೊಸತಾಗಿ ನಿರ್ಮಿಸಲ್ಪಟ್ಟಿರುವ ಬೃಹತ್ ದೂರದರ್ಶಕಗಳ ಬಳಕೆಯನ್ನೂ ನಿರ್ಬಂಧಗೊಳಿಸಲಾಗಿದೆ. 'ಸ್ಥಿರ ಸ್ಥಿತಿ ಸಿದ್ಧಾಂತ' ಕರ್ತೃಗಳು ಸಂಶೋಧನೆ ಮಾಡಲು ಆ ದೂರದರ್ಶಕಗಳನ್ನು ಬಳಸಲಿರುವರೆಂದು ತಿಳಿದ ಕೂಡಲೆ ವರಿಷ್ಠ ವೃಂದಗಳು ಅದಕ್ಕೆ ತಡೆ ಒಡ್ಡುತ್ತವೆ. ಇದು 'ಸ್ಥಿರ ಸ್ಥಿತಿ ಸಿದ್ಧಾಂತ' ಒಳಗಾಗಿರುವ ದುಃಸ್ಥಿತಿ.

ವಿಶ್ವವಿಜ್ಞಾನದಂಥ ವಿಷಯಕ್ಕೆ ಸಂಬಂಧಿಸಿಯೂ ವರಿಷ್ಠ ಮೌಲ್ಯಮಾಪನ ಇಷ್ಟು

ವರ್ಗ-ಹಿತಪ್ರೇರಿತವಾಗಿದ್ದಲ್ಲಿ ಇನ್ನು ಅರ್ಥಶಾಸ್ತ್ರ ರಾಜಕೀಯ ಶಾಸ್ತ್ರಗಳಲ್ಲಿನ ಸಂಶೋಧನ ಕಾರ್ಯದ ಗತಿ ಏನೆಂದು ಸುಲಭವಾಗಿ ಊಹಿಸಬಹುದು. ಕೃಷಿ ವಿಜ್ಞಾನಕ್ಕೆ ಸಂಬಂಧಿಸಿಯೂ ಇದೇ ಮಾತು ನಿಜ. ಮಾನ್‌ಸೆಂಟೋಗೆ ವಿರುದ್ಧವಾಗಿ ಹೊಸ ಮಾದರಿಯ ಬೀಜಗಳನ್ನು ವಿಕಾಸಗೊಳಿಸುವ ಸಂಶೋಧನೆಯಲ್ಲಿ ತೊಡಗಲು ಇಂದು ಎಲ್ಲಾದರೂ ಅವಕಾಶ ನೀಡುವುದುಂಟೆ ?

ಈ ವರಿಷ್ಠ ಮೌಲ್ಯಮಾಪನ ಅನ್ನುವುದು ಕಾರ್ಮಿಕವರ್ಗ-ವಿರೋಧಿ, ರೈತ-ವಿರೋಧಿ ತಾತ್ತ್ವಿಕ ಭಾವನೆಗಳಿಂದ ಪೂರಿತವಾಗಿದೆ. ನೌಕರವರ್ಗದ ನೇಮಕಾತಿ ಅಥವಾ ಬಡತಿ ವಿಷಯದಲ್ಲೂ ಇದು ವ್ಯಕ್ತವಾಗುತ್ತದೆ. ಅದು ದಲಿತ-ವಿರೋಧಿ, ಅಲ್ಪಸಂಖ್ಯಾತ-ವಿರೋಧಿ ಹಾಗೂ ಮಹಿಳಾ-ವಿರೋಧಿ ಆಗಬಲ್ಲುದು. ಸ್ವಲ್ಪದರಲ್ಲಿ ಹೇಳುವುದಾದರೆ, ವರಿಷ್ಠ ಮೌಲ್ಯಮಾಪನ ಅನ್ನುವುದು ಒಂದು ಸಕ್ಕರೆ ಹಚ್ಚಿದ ಗುಳಿಗೆ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಸಕ್ತ ಪದ್ಧತಿಯನ್ನು ಮುಂದುವರಿಸುವುದೇ ಅದರ ಎಲ್ಲ ಗುರಿ. ಇದು ಸಂಪೂರ್ಣವಾಗಿ ಪ್ರತ್ಯೇಕತಾವಾದಿ ಅನ್ನುವುದು ಸ್ವಯಂಸ್ಪಷ್ಟ.

**ಉಪಸಂಹಾರ**

ಜ್ಞಾನವಂತ ಸಮಾಜ ನಿರ್ಮಾಣಕ್ಕಾಗಿ ಎಲ್ಲರನ್ನೂ ಒಳಗೊಂಡಂಥ ಶೈಕ್ಷಣಿಕ ಪದ್ಧತಿಗಾಗಿ ಶ್ರಮಿಸುವುದೇ ತನ್ನೆಲ್ಲ ಗುರಿ ಎಂದು ಹೇಳಿಕೊಂಡರೂ 'ರಾಷ್ಟ್ರೀಯ ಜ್ಞಾನ ಆಯೋಗ'ವು ನೆರೆಹೊರೆ ಶಾಲಾ ಸ್ಥಾಪನೆ ಎಂಬಂಥ 'ಕೋಠಾರಿ ಆಯೋಗ'ದ ಶಿಫಾರಸುಗಳಿಗೆ ಎಲ್ಲೂ ಉಲ್ಲೇಖ ಅಥವಾ ಪ್ರಸ್ತಾಪ ಮಾಡಿಯೇ ಇಲ್ಲ. ನನ್ನ ಈ ಪ್ರಬಂಧ ಉನ್ನತ ಶಿಕ್ಷಣಕ್ಕೆ ಸೀಮಿತವಾಗಬೇಕಿದ್ದರೂ ಪ್ರಾಥಮಿಕ ಶಿಕ್ಷಣಕ್ಕೆ ಅಥವಾ ಸೆಕೆಂಡರಿ ಇಲ್ಲವೇ ವೃತ್ತಿಪರ ಶಿಕ್ಷಣಕ್ಕೆ ಸಂಬಂಧಿಸಿ ಅಥವಾ ಗ್ರಂಥಭಂಡಾರ ಸುಧಾರಣೆಗೆ ಸಂಬಂಧಿಸಿ ರಾಷ್ಟ್ರೀಯ ಜ್ಞಾನ ಆಯೋಗ ಮುಂದಿಟ್ಟಿರುವ ಶಿಫಾರಸ್ಸುಗಳನ್ನೂ ಪರಿಶೀಲಿಸಬಯಸುತ್ತೇನೆ. ಈ ಎಲ್ಲ ಕ್ಷೇತ್ರಗಳಿಗೆ ಸಂಬಂಧಿಸಿಯೂ ಪ್ರಮಿತೀಯ (parameters) ಅಂಶಗಳನ್ನು ನವ-ಉದಾರವಾದಿ ಆರ್ಥಿಕ ತತ್ತ್ವಜ್ಞಾನ ಮಿತಿಗಳೊಳಗೆಲ್ಲಾ ಇರುವಂತೆ ರಚಿಸಬೇಕೆಂದು ಆಯೋಗ ಸಲಹೆ ಮಾಡುತ್ತದೆ.

ಒಟ್ಟಿನ ಮೇಲೆ 'ರಾಷ್ಟ್ರೀಯ ಜ್ಞಾನ ಆಯೋಗ'ದ ಶಿಫಾರಸುಗಳು ಜ್ಞಾನಸಂ ಸಮಾಜವೊಂದರ ಬಗೆಗೆ ಹೇಳುವಾಗಲೇ, ಪ್ರತ್ಯೇಕವಾದಿ ವರ್ಗಾಭಿಮುಖೀ ಶೈಕ್ಷ ವ್ಯವಸ್ಥೆಯೊಂದನ್ನು ಗುಣಾತ್ಮಕವಾಗಿಯೂ ಪಠ್ಯಕ್ರಮಾಂತರ್ಗತ ವಿಷಯಗ ಸಂಬಂಧಿಸಿದಂತೆಯೂ ಅನುಷ್ಠಾನಕ್ಕೆ ತರಲು ವಿಚಾರಧಾರಾತ್ಮಕ ಅಡಿಪಾಯಗಳ ಹಾಕಿಕೊಡುತ್ತವೆ.

ಒಂದು ಲಕ್ಷ ವಿದ್ಯಾರ್ಥಿವೇತನಗಳನ್ನು ಸ್ಥಾಪಿಸಬೇಕೆಂಬ ತೋರ ಧನಾತ್ಮಕವೆನ್ನಬಹುದಾದಂಥ ಶಿಫಾರಸನ್ನು ಒಳಗೊಂಡಿದ್ದರೂ ಆಯೋಗದ ವರದಿಯನ್ನು ಸಂಪೂರ್ಣವಾಗಿ ತಿರಸ್ಕರಿಸಬೇಕು. ಆಯೋಗದ ಆಧುನಿಕೋ ನುಡಿಗಟ್ಟುಗಳ ಬಲೆಗೆ ಸಿಕ್ಕಿಬೀಳದಂತೆ ಉಪಾಧ್ಯಾಯರುಗಳೂ ವಿದ್ಯಾರ್ಥಿಗಳೂ ಇ ಪ್ರಜಾಸತ್ತಾತ್ಮಕ ಜನವಿಭಾಗಗಳೂ ಎಚ್ಚರಿಕೆಯಿಂದಿರಬೇಕು. ತಮ್ಮನ್ನು ಅದರಿಂದ ದ ಇರಿಸಿಕೊಳ್ಳಬೇಕು. 'ಜ್ಞಾನಸಂಪನ್ನ ಸಮಾಜ', 'ಕೈಗಾರಿಕೋತ್ತರ ಸಮಾಜ' ಎನ್ನುವ ಪದಗಳು ಅತ್ಯಂತ ಪ್ರಾಮಾಣಿಕ ಜನರನ್ನೂ, 'ಬಂಡವಾಳವಾದ' ಎನ್ನುವಂಥ ಪದ ಇನ್ನೆಷ್ಟು ಮಾತ್ರವೂ ಪ್ರಸ್ತುತವಲ್ಲ ಎಂದು ನಂಬುವಂತೆ ಬಲೆಗೆ ಬೀಳಿಸುವುದು ಖಂ ಎಲ್ಲವನ್ನೂ ಒಳಗೊಳ್ಳುವುದಾಗಿ ಸೂಚಿಸುವಂಥ ಆಯೋಗದ ನುಡಿಗಟ್ಟುಗಳ ಹಿ ಪ್ರತ್ಯೇಕತಾವಾದಿ ಮನೋಭಾವ ಅಡಗಿರುವುದು ಸುಸ್ಪಷ್ಟ.

*(ಈ ಪ್ರಬಂಧವನ್ನು ೨೦೦೭ರ ಮಾರ್ಚ್ ೨೪-೨೫ರಂದು ಕೋಲ್ಕತ್ತದ ಸ್ಕಾ ಕಾಲೇಜಿನಲ್ಲಿ 'ರಾಷ್ಟ್ರೀಯ ಜ್ಞಾನ ಆಯೋಗ'ದ ಶಿಫಾರಸುಗಳ ಕುರಿತು 'ವಿಶ್ವವಿದ್ಯಾ ಸಹಾಯಧನ ಆಯೋಗ' (ಯುಜಿಸಿ) ಏರ್ಪಡಿಸಿದ್ದ ವಿಚಾರ ಗೋಷ್ಠಿಯಲ್ಲಿ ಓದಲಾಗಿತ್ತು.)*

**ಡಾ|| ಕೆ.ಕೆ.ಥೇಕೆಡತ್**
ಎ-೬/೧೧, 'ಸಾವಂತ ಸದನ', ಜೀವನ್‌ಬಿಮಾನಗರ
ಮಂಡಪೇಶ್ವರ ಅಂಚೆ, ಬೊರಿವಿಲಿ (ವೆಸ್ಟ್), ಮುಂಬೈ - ೪೦೦೧೦೩
ಕನ್ನಡಕ್ಕೆ : **ಕೆ. ಎಲ್. ಗೋಪಾಲಕೃಷ್ಣ ರಾವ್**

SRI SIDDHARTHA EDUCATION SOCIETY

SIDDHARTHANAGAR, TUMKUR-572 107
Phone : 0816-2206458/2278867/2201073

***The following Institutions are run by the Society in different parts of Karnataka***

| | | | |
|---|---|---|---|
| 1. Medical College | 1 No. | 8. High School | 23 Nos. |
| 2. Engineering College | 1 No. | 9. Training Institute | 5 Nos. |
| 3. Dental College | 1 No. | 10. Sanskrit School | 9 Nos. |
| 4. School of Nursing | 1 No. | 11. Pali School | 1 No. |
| 5. B.Ed. College | 1 No. | 12. M.B.A. | 1 No. |
| 6. First Grade College | 1 No. | 13. M.C.A. | 1 No. |
| 7. Junior College | 5 Nos. | 14. College of Nursing | 1 No. |

***In addition there are 21 Student Hostels***

Shri H. M. GANGADHARAIAH
Founder Secretary

Dr. G. SHIVAPRASAD
Secretary

Dr. G. PARAMESHWARA
Joint Secretary

# ಬೈಜಿಕ ಶಕ್ತಿ ಒಂದು ದುಬಾರಿ ವ್ಯವಹಾರ

• ಎಂ. ವಿ. ರಮಣ
• ಜೆ. ವೈ. ಸುಚಿತ್ರ

ಭಾರತವು ಅಮೆರಿಕದೊಂದಿಗೆ ಸಂಧಾನ ನಡೆಸುತ್ತಿರುವ ಬೈಜಿಕ ಒಪ್ಪಂದಕ್ಕೆ ಸಂಬಂಧಿಸಿ ಇದೀಗ ವಿಸ್ತೃತ ಚರ್ಚೆ ನಡೆಯುತ್ತಿದೆ. ಈ ಚರ್ಚೆಗೆ ಬಹುಮಟ್ಟಿಗೆ ಆಧಾರವಾಗಿರುವ ಒಂದು ಚಿಂತನೆಯೆಂದರೆ ಭಾರತವು ತನ್ನ ಬೈಜಿಕ ಶಕ್ತಿ ಉತ್ಪಾದನಾ ಸಾಮರ್ಥ್ಯವನ್ನು ವಿಸ್ತರಿಸುವುದು ಅತ್ಯಗತ್ಯವಾಗಿದೆ ಎಂಬುದು. ಇಲ್ಲೂ ಪ್ರಚಲಿತವಾಗಿರುವ ಮುಖ್ಯವಾದ ಒಂದು ಭಿನ್ನಾಭಿಪ್ರಾಯವಿದೆ. ಅದೆಂದರೆ – ಈ ವಿಸ್ತರಣೆಯನ್ನು ಲಘುಜಲಕ್ರಿಯಾಕಾರಿ (ಲೈಟ್‌ವಾಟರ್ ರಿಯಾಕ್ಟರ್ಸ್ – ಎಲ್.ಡಬ್ಲ್ಯು.ಆರ್.)ಗಳನ್ನು ಆಮದು ಮಾಡಿಕೊಳ್ಳುವ ಮೂಲಕ ಮಾಡಬೇಕೆ ಅಥವಾ ಇನ್ನೂ ಪ್ರಾಯೋಗಿಕವಾಗಿರುವ ಕ್ಷಿಪ್ರ ಪ್ರಜನಕ ಕ್ರಿಯಾಕಾರಿಗಳ (ಫಾಸ್ಟ್ ಬ್ರೀಡರ್ ರಿಯಾಕ್ಟರ್ಸ್ – ಎಫ್.ಬಿ.ಆರ್.) ಮೂಲಕವೇ ಎಂಬುದಾಗಿದೆ.

ಇಲ್ಲಿ, ಮೊತ್ತಮೊದಲನೆಯದಾಗಿ ಒಂದು ಪ್ರಶ್ನೆ ಕೇಳಬೇಕು: ಬೈಜಿಕ ಶಕ್ತಿಯು ನಿಜಕ್ಕೂ ಶಕ್ತಿಯ ಅಷ್ಟೊಂದು ಮುಖ್ಯ ಆಕರವೇ? ಪರಮಾಣು ಶಕ್ತಿ ಇಲಾಖೆ (ಡಿಪಾರ್ಟ್‌ಮೆಂಟ್ ಆಫ್ ಅಟಾಮಿಕ್ ಎನರ್ಜಿ–ಡಿ.ಎ.ಇ.) ತಾನು ಅಸ್ತಿತ್ವಕ್ಕೆ ಬಂದಾಗಿನಿಂದಲೂ ಭಾರತದಲ್ಲಿ ಬೈಜಿಕ ಶಕ್ತಿಯ ಬಗೆಗೆ ಅಸಂಖ್ಯಾತ ಭರವಸೆಗಳನ್ನುಳ್ಳ ಭವಿಷ್ಯ ನುಡಿಗಳನ್ನು ಆಡುತ್ತ ಬಂದಿದೆ. ೧೯೮೭ರ ಹೊತ್ತಿಗೆ ಭಾರತದಲ್ಲಿ ೨೦-೨೫,೦೦೦ ಮೆಗಾವ್ಯಾಟ್ ಬೈಜಿಕ ಶಕ್ತಿ ಉತ್ಪಾದನೆಯಾಗಲಿದೆ ಎಂದು ಅದು ಭವಿಷ್ಯ ನುಡಿದಿತ್ತು. ೨೦೦೦ನೇ ವರ್ಷದ ಹೊತ್ತಿಗೆ ೪೩,೫೦೦ ಮೆಗಾವ್ಯಾಟ್ ವಿದ್ಯುಚ್ಛಕ್ತಿ ಉತ್ಪಾದನೆಯಾಗಲಿರುವುದೆಂದು ಅದು ೧೯೮೭ರಲ್ಲಿ ಭವಿಷ್ಯ ನುಡಿಯಿತು. ಆದರೆ ೨೦೦೦ರ ಹೊತ್ತಿಗೆ ಸಾಧಿಸಿದ ಉತ್ಪಾದನಾ ಶಕ್ತಿಯೆಲ್ಲ ಕೇವಲ ೨೭೨೦ ಮೆಗಾವ್ಯಾಟ್. ೨೦೦೭ರ ಸೆಪ್ಟೆಂಬರ್‌ನಲ್ಲಿ ಮಾಡಿರುವ ಲೆಕ್ಕಾಚಾರದ ಪ್ರಕಾರ, ಭಾರತದ ಒಟ್ಟು ವಿದ್ಯುಚ್ಛಕ್ತಿ ಸಾಮರ್ಥ್ಯ ೧೩೫,೦೦೦ ಮೆಗಾವ್ಯಾಟಿಗೂ ಸ್ವಲ್ಪ ಜಾಸ್ತಿ. ಇದರಲ್ಲಿ ಬೈಜಿಕ ವಿದ್ಯುಚ್ಛಕ್ತಿಯ ಕಾಣಿಕೆ ಕೇವಲ ೪೧೦೦ ಮೆಗಾವ್ಯಾಟ್. ಅಂದರೆ, ಕೇವಲ ಶೇಕಡ ೩ರಷ್ಟು. ಪ್ರಸ್ತುತದಲ್ಲಿ ದೇಶದ ಮುಂದಿರುವ ಗುರಿ ೨೦೨೦ನೇ ವರ್ಷದ ಹೊತ್ತಿಗೆ ವಿದ್ಯುದುತ್ಪಾದನಾ ಸಾಮರ್ಥ್ಯವನ್ನು ೨೦,೦೦೦ ಮೆಗಾವ್ಯಾಟ್‌ಗೆ ವಿಸ್ತರಿಸಬೇಕೆಂಬುದಾಗಿದೆ. ಇದನ್ನು ಸಾಧಿಸಿದರೂ ಇದರಲ್ಲಿ ಬೈಜಿಕ ಶಕ್ತಿಯ ಕಾಣಿಕೆ ಒಟ್ಟು ವಿದ್ಯುದುತ್ಪಾದನಾ ಸಾಮರ್ಥ್ಯದ ಶೇಕಡ ೮ರಿಂದ ೧೦ರಷ್ಟಾಗುತ್ತದಷ್ಟೆ.

ಹಾಗಾಗಿ ಬೈಜಿಕ ಶಕ್ತಿಯ ಪ್ರಾಮುಖ್ಯತೆಯ ಬಗೆಗೆ ಏನೆಲ್ಲ ಆಶಾದಾಯಕ ಸಾರ್ವಜನಿಕ ಹೇಳಿಕೆಗಳನ್ನು ನೀಡಲಾಗಿದ್ದರೂ ಅದರ ನಿಜವಾದ ಕಾಣಿಕೆ ನಮ್ಮ ವಿದ್ಯುತ್ ಸರಬರಾಜಿನ ಅತ್ಯಲ್ಪ ಭಾಗವಷ್ಟೆ ಎಂಬುದು ಕಂಡುಬರುತ್ತದೆ.

ಪರಮಾಣು ಶಕ್ತಿ ಇಲಾಖೆಯು ತಾನು ಇರಿಸಿಕೊಂಡಿದ್ದ ಗುರಿ ಪ್ರಮಾಣಗಳನ್ನು ಸಾಧಿಸಲು ವಿಫಲಗೊಂಡಿರುವುದಕ್ಕೆ ಅದರ ಸಂಪನ್ಮೂಲಗಳ ಕೊರತೆಯೇನೂ ಕಾರಣವಲ್ಲ. ಇದುವರೆಗೆ ಅಧಿಕಾರಕ್ಕೆ ಬಂದಿರುವ ಸರಕಾರಗಳೆಲ್ಲವೂ ಬೈಜಿಕ ಶಕ್ತಿಯ ಪರವಾಗಿಯೇ ಇದ್ದುಕೊಂಡು ಬಂದಿವೆ. ಪರಮಾಣು ಶಕ್ತಿ ಇಲಾಖೆಯ ಆಯವ್ಯಯ ಪ್ರಮಾಣಗಳು ಯಾವತ್ತೂ ಉನ್ನತವಾಗಿಯೇ ಇವೆ. ೧೯೯೮ರಲ್ಲಿ ಅಣ್ವಸ್ತ್ರ ಪರೀಕ್ಷೆಗಳ ನಂತರ ಈ ಹೂಡಿಕೆ ತೀಕ್ಷ್ಣಗೊಂಡಿದೆ. ಪರಮಾಣು ಶಕ್ತಿ ಇಲಾಖೆಯ ಬಜೆಟ್ ೧೯೯೭-೯೮ರಲ್ಲಿ ೧೮೪೦ ಕೋಟಿ ರೂಪಾಯಿಗಳಷ್ಟಾಗಿದ್ದುದು ೨೦೦೬-೦೭ರಲ್ಲಿ ೫೦೩೦ ಕೋಟಿ ರೂಪಾಯಿಗಳಿಗೇರಿತು. ಅಂದರೆ ಇಮ್ಮಡಿಗೂ ಹೆಚ್ಚಾಯಿತು. ಇದಕ್ಕೆ ಪ್ರತಿಯಾಗಿ ಅಸಾಂಪ್ರದಾಯಿಕ ಇಂಧನ ಮೂಲಗಳಾದ ಗಾಳಿ, ನೀರು ಮತ್ತು ಸೌರಶಕ್ತಿ ಕುರಿತ ಪುನರ್‌ನವೀಕರಣ ಶಕ್ತಿ ಸಚಿವಾಲಯ (ರಿನ್ಯೂಯಬಲ್ ಎನರ್ಜಿ ಮಿನಿಸ್ಟ್ರಿ)ದ ಬಜೆಟ್ ಸುಮಾರು ೩೮೭ ಕೋಟಿ ರೂಪಾಯಿಗಳಷ್ಟಾಗಿದ್ದಿತು. ವಾಸ್ತವವಾಗಿ ಈ ಇಲಾಖೆ ೨೦೦೬-೦೭ರಲ್ಲಿ ೧೦,೪೦೦ ಮೆಗಾವ್ಯಾಟ್ ವಿದ್ಯುಚ್ಛಕ್ತಿ ಉತ್ಪಾದಿಸಿತು. ಇದು ದೇಶದ ಸಂಸ್ಥಾಪಿತ ವಿದ್ಯುಚ್ಛಕ್ತಿ ಸಾಮರ್ಥ್ಯದ ಶೇಕಡ ೭.೦೭ರಷ್ಟಾಗಿದ್ದಿತು. ಸರಕಾರೀ ಬೆಂಬಲ ಹೀಗೆ ಸೀಮಿತವಾಗಿದ್ದಾದರೂ ವಾಯುಶಕ್ತಿಯಂಥ ಪುನರ್‌ನವೀಕರಣ ಸಾಧ್ಯ ತಂತ್ರಜ್ಞಾನ ಗಮನಾರ್ಹವಾದಷ್ಟು ಪ್ರಗತಿ ಸಾಧಿಸಿ ಕಳೆದ ದಶಕದಲ್ಲಿ ಅಣುಶಕ್ತಿಗಿಂತ ಅಗ್ಗ ದರದ ಶಕ್ತಿ ಉತ್ಪಾದಿಸಿದೆ. ಭಾರತವು ಜಗತ್ತಿನಲ್ಲೇ ನಾಲ್ಕನೆಯ ಅತಿ ದೊಡ್ಡ ವಾಯುಶಕ್ತಿ ಮೂಲದ ವಿದ್ಯುತ್ ಉತ್ಪಾದಿಸಿದ ರಾಷ್ಟ್ರವಾಗಿದೆ.

ಪರಮಾಣು ಶಕ್ತಿ ಇಲಾಖೆಯು ಎಷ್ಟೇ ಪ್ರಮಾಣದ ಶಕ್ತಿ ಉತ್ಪಾದಿಸಿದರೂ ಅದನ್ನು ಕಮ್ಮಿ ಖರ್ಚಿನಲ್ಲಿ ಉತ್ಪಾದಿಸದೆ ಹೋಗಿರುವುದು ಅದರ ಮುಖ್ಯ ವೈಫಲ್ಯವಾಗಿದೆ. ಹೀಗೆ ಆರ್ಥಿಕ ಪ್ರಮಿತಿಗಳಿಗೆ ಸಂಬಂಧಿಸಿ ಇಷ್ಟೊಂದು ನಿರಾಶಾದಾಯಕವಾಗಿ ಕಾರ್ಯ ನಿರ್ವಹಿಸಿದ್ದರೂ ಪರಮಾಣುಶಕ್ತಿ ಇಲಾಖೆಯು

ಬೈಜಿಕ ಶಕ್ತಿಯು ತುಂಬ ಖರ್ಚಿನದು. ಅದರಲ್ಲಿ ಅತ್ಯಂತ ಗಂಭೀರ ಸ್ವರೂಪದ ಅಪಘಾತಗಳ ಗಂಡಾಂತರ ಹೆಚ್ಚು. ಅಲ್ಲದೆ, ಅದು ಮಾನವ ಆರೋಗ್ಯಕ್ಕೂ ಪರಿಸರಕ್ಕೂ ತುಂಬ ಹಾನಿಕರ. ನಮ್ಮ ದೇಶದಲ್ಲಿ ಬೈಜಿಕ ಶಕ್ತಿ ಉತ್ಪಾದನೆಗೆ ಅರವತ್ತು ವರ್ಷಗಳ ಇತಿಹಾಸವಿದೆ. ಮೇಲೆ ತಿಳಿಸಿರುವ ಗಂಡಾಂತರಗಳು ಯಾವುವೂ ಅಷ್ಟು ಸುಲಭವಾಗಿ ಕಣ್ಮರೆಯಾಗಲಾರವೆಂದೇ ಈ ಇತಿಹಾಸ ಸಾಧಿಸಿ ತೋರಿಸಿದೆ. ಆದ್ದರಿಂದ, ಬೈಜಿಕ ವಿದ್ಯುದುತ್ಪಾದನೆಯ ನಿಷ್ಫಲ ಅನ್ವೇಷಣೆಯನ್ನು ಬಿಟ್ಟುಕೊಟ್ಟು ಇತರ ಊರ್ಜಿತವಾಗಬಲ್ಲ ವಿದ್ಯುದುತ್ಪಾದಕ ಆಕರಗಳನ್ನು ಶೋಧಿಸಿ ಅನುಷ್ಠಾನಕ್ಕೆ ತರುವ ಸಕಾಲ ಇದೀಗ ಸನ್ನಿಹಿತವಾಗಿದೆ.

ಬೈಜಿಕ ಶಕ್ತಿಯು ಸ್ಪರ್ಧಾತ್ಮಕವಾದುದು ಎಂದೇ ವಾದಿಸುತ್ತ ಅದರ ಆಧಾರದ ಮೇಲೆ ಶಕ್ತಿ ಯೋಜನೆಕಾರರ ಬೆಂಬಲ ಗಳಿಸಿಕೊಂಡಿದೆ. ವಾಸ್ತವವಾಗಿ ಬೈಜಿಕ ಮೂಲದ ಶಕ್ತಿ ಉತ್ಪಾದನೆ ಘಟಕಗಳ ನಿರ್ಮಾಣ ಹಾಗೂ ಕಾರ್ಯಾಚರಣೆ ಷ್ಟೇ ಸಾಮರ್ಥ್ಯದ ಕಲ್ಲಿದ್ದಲು ಅಥವಾ ಅನಿಲ ಆಧಾರಿತ ವಿದ್ಯುತ್ ಸ್ಥಾವರಗಳಿಗಿಂತ ಹೆಚ್ಚು ಖರ್ಚಿನದು ಎಂದು ಸಾಧಿತವಾಗಿದೆ. ಆಮದು ಮಾಡಿಕೊಂಡ ಕ್ರಿಯಾಕಾರಿಗಳು (ರಿಯಾಕ್ಟರ್)ಇನ್ನೂ ಹೆಚ್ಚು ಖರ್ಚಿನವು. ಪರಮಾಣು ಶಕ್ತಿ ಇಲಾಖೆಯು ನಡೆಸುತ್ತಿರುವ ಕ್ರಿಯಾಕಾರಿಗಳಂತೂ ಬಿಸಿ ಇಂಧನವನ್ನು ತಂಪಾಗಿಸಲು ಮತ್ತು ನ್ಯೂಟ್ರಾನ್‌ಗಳನ್ನು ಧಾನಗೊಳಿಸಲು ಭಾರ ಜಲವನ್ನು ಬಳಸುವ ತಂತ್ರದ ಮೇಲೆ ಆಧಾರಿತವಾಗಿವೆ. ಭಾರ ಜಲವನ್ನು ಉತ್ಪಾದಿಸುವುದೂ ಬಂಬ ದುಬಾರಿ. ಪ್ರತಿಯೊಂದು ಕ್ರಿಯಾಕಾರಿಗೂ ನೂರಾರು ಟನ್‌ಗಳಷ್ಟು ಭಾರ ಜಲ ಅವಶ್ಯ. ಬೈಜಿಕ ಕ್ರಿಯಾಕಾರಿ ಗಳಲ್ಲಿ ಇಂಧನೀಕರಣ ವೆಚ್ಚಗಳು ಅಲ್ಪವಾಗಿದ್ದರೂ ಬಂಡವಾಳ ವೆಚ್ಚಗಳೇ ಅಧಿಕವಾಗಿರುವ ಕಾರಣ ಒಟ್ಟಿನ ಮೇಲೆ ಬೈಜಿಕ ವಿದ್ಯುಚ್ಛಕ್ತಿಯು ಕಲ್ಲಿದ್ದಲು ಉಷ್ಣ ಬಳಸುವ ವಿದ್ಯುಚ್ಛಕ್ತಿಗಿಂತ ಹೆಚ್ಚು ದುಬಾರಿಯಾದುದಾಗಿದೆ. ಬೇರೆ ದೇಶಗಳಲ್ಲೂ ಇದೇ ಪರಿಸ್ಥಿತಿ ಇದೆ.

ಈ ಕ್ಷೇತ್ರದಲ್ಲಿ ನಿರ್ಮಾಣ ವೆಚ್ಚಗಳನ್ನು ಒಂದು ಮಿತಿಗೂ ಮೀರಿ ಕಡಿಮೆಮಾಡಲು ಸಾಧ್ಯವಿಲ್ಲದಿರುವುದಕ್ಕೆ ಒಂದು ಕಾರಣವೆಂದರೆ – ಸುರಕ್ಷತೆ. ಬೇರೆಲ್ಲ ವಿದ್ಯುದುತ್ಪಾದಕ ತಂತ್ರಗಳಿಗೆ ಹೋಲಿಸಿದರೆ ಬೈಜಿಕ ವಿದ್ಯುತ್‌ಯಂತ್ರ ಸ್ಥಾವರಗಳು ಅತ್ಯಂತ ಪ್ರಮಾದವಾದ ಅಪಘಾತಗಳಿಗೆ ಎಡೆಮಾಡಿಕೊಡುವ ಸಾಧ್ಯತೆಗಳಿಂದ ಕೂಡಿವೆ. ಇದಕ್ಕೆ ಒಂದು ಉದಾಹರಣೆಯೆಂದರೆ, ೧೯೮೬ರಲ್ಲಿ ಚೆರ್ನೋಬಿಲ್ ಕ್ರಿಯಾಕಾರಿಯಲ್ಲಾದ ಸ್ಫೋಟ.

ಬೈಜಿಕ ವಿದ್ಯುದುತ್ಪಾದನೆಯು ಉಷ್ಣ ವಿದ್ಯುದುತ್ಪಾದನೆಗಿಂತ ಹೆಚ್ಚಿನ ಖರ್ಚಿನದು ಅನ್ನುವುದಕ್ಕೆ ಮತ್ತೊಂದು ಮುಖ್ಯ ಕಾರಣವೆಂದರೆ, ಅದರ ಉತ್ಪಾದನೆಯ ಪ್ರಕ್ರಿಯೆ ಯತ್ನ ಫಲಿಸುವ ವಿಕಿರಣೀಕೃತ ವ್ಯರ್ಥ ಇಂಧನೋತ್ಪನ್ನ. ಬೈಜಿಕ ಕ್ರಿಯಾಕಾರಿಗಳಲ್ಲಿ ಉಂಟಾಗುವ ಈ ವ್ಯರ್ಥ ಇಂಧನೋತ್ಪನ್ನವು ಅತ್ಯಂತ ಹೆಚ್ಚಿನ ಪ್ರಮಾಣದ ವಿಕಿರಣ ಸಟುತ್ವವನ್ನು ಒಳಗೊಂಡಿರುತ್ತದೆ. ಈ ವ್ಯರ್ಥೋತ್ಪನ್ನವನ್ನು ವಿವಿಧ ದೇಶಗಳು ಎರಡು ವಿಶಿಷ್ಟ ರೀತಿಗಳಲ್ಲಿ



ವಿಲೇವಾರಿ ಮಾಡುತ್ತಿವೆ ಅಥವಾ ಮಾಡಲು ಯೋಜಿಸುತ್ತಿವೆ : ಫ್ರಾನ್ಸ್, ಭಾರತ, ಜಪಾನ್‌ಗಳು ಪುನರ್‌ಸಂಸ್ಕರಿಸುತ್ತಿವೆ. ಕೆನಡಾ, ಅಮೆರಿಕಾಗಳು ನೇರವಾಗಿ ಹಾಗೂ ಸುರಕ್ಷಿತವಾಗಿ ವಿಲೇವಾರಿ ಮಾಡುತ್ತಿವೆ.

ನೇರವಾಗಿ ವಿಲೇವಾರಿ ಮಾಡುವ ವ್ಯವಸ್ಥೆಯಲ್ಲಿ, ವ್ಯರ್ಥ ಇಂಧನೋತ್ಪನ್ನವನ್ನು ದೀರ್ಘಕಾಲ ದಾಸ್ತಾನಿನಲ್ಲಿ ರಿಸಬೇಕಾಗುತ್ತದೆ. ಅನಂತರ ಅದನ್ನು ಕೋಶ ನಿಕ್ಷೇಪನಕ್ಕೆ (ಎನ್‌ಕ್ಯಾಪ್ಸ್ಯುಲೇಷನ್) ಒಳಪಡಿಸಿ ಭೂ ಗರ್ಭದಲ್ಲಿ ವಿಶೇಷ ಸಂಪುಟಗಳಲ್ಲಿ ಶಾಶ್ವತವಾಗಿ ಹೂಳಬೇಕಾಗುತ್ತದೆ. ಪುನರ್‌ಸಂಸ್ಕರಣ ವ್ಯವಸ್ಥೆಯಲ್ಲಿ ವ್ಯರ್ಥ ಇಂಧನೋತ್ಪನ್ನವನ್ನು ರಾಸಾಯನಿಕ ಸಂಸ್ಕರಣೆಗೆ ಒಳಪಡಿಸಿ ಇಂಧನದಲ್ಲಿರುವ ಪ್ಲುಟೋನಿಯಮ್ ಹಾಗೂ (ರೇಚಿತ) ಯುರೇನಿಯಮ್‌ಗಳನ್ನು ಪ್ರತ್ಯೇಕಗೊಳಿಸಬೇಕಾಗುತ್ತದೆ. ಹೀಗೆ ಹೊರತೆಗೆಯಲಾದ ಪ್ಲುಟೋನಿಯಮ್ ಅನ್ನು ಬೈಜಿಕ ಕ್ರಿಯಾಕಾರಿಗಳಿಗೆ ಇಂಧನ ತಯಾರಿಸಲು ಬಳಸಲಾಗುತ್ತದೆ. ಹೀಗೆ ಪುನರ್‌ಸಂಸ್ಕರಣ ವ್ಯವಸ್ಥೆಯು ಎರಡು ರೀತಿಗಳಲ್ಲಿ ಉಪಯುಕ್ತ: ಒಂದು ಅದು ವ್ಯರ್ಥೋತ್ಪನ್ನವನ್ನು ವಿಲೇವಾರಿ ಮಾಡುತ್ತದೆ; ಇನ್ನೊಂದು ಕ್ರಿಯಾಕಾರಿಗಳಲ್ಲಿ ಇಂಧನ ತಯಾರಿಸಲು ಪ್ಲುಟೋನಿಯಮ್‌ಅನ್ನು ಒದಗಿಸುತ್ತದೆ. ಆದರೆ ಪುನರ್‌ಸಂಸ್ಕರಣ ವ್ಯವಸ್ಥೆಯು ಅತ್ಯುನ್ನತ ವಿಕಿರಣಶೀಲ ವ್ಯರ್ಥೋತ್ಪನ್ನವನ್ನು ಉತ್ಪಾದಿಸುತ್ತದೆ. ಇದನ್ನು ಗಾಜಿನಂಥ ವಸ್ತುವನ್ನಾಗಿ ಪರಿವರ್ತಿಸಿ ಸುಕ್ಷೇಮವಾದ ಸಂಪುಟಗಳಲ್ಲಿ ದೀರ್ಘಾವಧಿ ದಾಸ್ತಾನಿನಲ್ಲಿರಿಸಲಾಗುತ್ತದೆ.

ನೇರ ವಿಲೇವಾರಿ ಹಾಗೂ ಪುನರ್‌ಸಂಸ್ಕರಣ ಎರಡೂ ವ್ಯವಸ್ಥೆಗಳಲ್ಲಿ ಅತ್ಯಂತ ವಿಕಿರಣಶೀಲ ಭಾಗಗಳನ್ನು (ಮೊದಲ ವ್ಯವಸ್ಥೆಯಲ್ಲಿ ವ್ಯರ್ಥ ಇಂಧನೋತ್ಪನ್ನ, ಎರಡನೇ ವ್ಯವಸ್ಥೆಯಲ್ಲಿ ಉನ್ನತ ಮಟ್ಟದ ವ್ಯರ್ಥೋತ್ಪನ್ನ) ಪ್ರಸ್ತುತದಲ್ಲಿ ವಿಕಿರಣತಾ ಸೂಚಕ (ಮಾನಿಟರ್ಡ್) ನಿವೇಶನಗಳಲ್ಲಿ ದಾಸ್ತಾನು ಮಾಡಲಾಗುತ್ತಿದೆ. ಇವುಗಳನ್ನು ಭೂಗರ್ಭಕೋಶಗಳಲ್ಲಿ ವಿಲೇವಾರಿ ಮಾಡಬೇಕೆಂದು ಎಲ್ಲ ದೇಶಗಳೂ ಇಷ್ಟಪಡುತ್ತಿದ್ದರೂ ಅಂಥ ಯಾವ ಕೋಶಗಳನ್ನೂ ಇದುವರೆವಿಗೂ ನಿರ್ಮಿಸಲಾಗಿಲ್ಲ.

ಮೇಲಿನ ಎರಡು ವ್ಯವಸ್ಥೆಗಳಲ್ಲಿ ಯಾವುದು ಹೆಚ್ಚು ಅಗ್ಗ ಎಂಬ ಬಗೆಗೆ ಈಗ ಹಲವಾರು ದಶಕಗಳಿಂದ ಚರ್ಚೆ ನಡೆಯುತ್ತಿದೆ. ಪುನರ್‌ಸಂಸ್ಕರಣ ವಿಧಾನವು ನೇರ ವಿಲೇವಾರಿ ವಿಧಾನಕ್ಕಿಂತ ತುಂಬ ಹೆಚ್ಚು ಖರ್ಚಿನದೆಂದು ಪಾಶ್ಚಿಮಾತ್ಯ ದೇಶಗಳು ವೆಚ್ಚ - ಆಧಾರಿತ ದತ್ತಾಂಶಗಳ ಆಧಾರದ ಮೇಲೆ ಸರ್ವ ಸಮ್ಮತ ತೀರ್ಮಾನಕ್ಕೆ ಬಂದಿವೆ. ಪುನರ್‌ಸಂಸ್ಕರಣ ಸೌಲಭ್ಯ ಒದಗಿಸಲು ತೊಡಗಿಸಬೇಕಾದ ಬಹುಭಾರಿ ಬಂಡವಾಳ ವೆಚ್ಚವೇ ಈ ತೀರ್ಮಾನಕ್ಕೆ ಬರುವುದಕ್ಕೆ ಕಾರಣ. ನಮ್ಮ ದೇಶದಲ್ಲೇ ತೀರ ಈಚೆಗೆ ಕಲ್ಪಾಕ್ಕಮ್‌ನಲ್ಲಿ ಅಂಥ ಒಂದು ಪುನರ್‌ಸಂಸ್ಕರಣ ಸ್ಥಾವರವನ್ನು ನಿರ್ಮಿಸಲಾಗಿದೆ. ಇದಕ್ಕಾಗಿ ಸರಕಾರ ಮಾಡಿರುವ ವೆಚ್ಚಗಳನ್ನು ಆಧರಿಸಿ ಲೆಕ್ಕ ಹಾಕಿದರೆ, ಪ್ರತಿ ಒಂದು ಕಿಲೋಗ್ರಾಮ್ ವ್ಯರ್ಥ ಇಂಧನೋತ್ಪನ್ನವನ್ನು ಪುನರ್ ಸಂಸ್ಕರಿಸಲು ರೂ. ೨೬,೦೦೦ ಖರ್ಚು ಮಾಡಲಾಗಿದೆ ಎಂದು ಅಂದಾಜು ಮಾಡಬಹುದು. ಪ್ರಸ್ತುತದಲ್ಲಿ ಈ ವೆಚ್ಚದ ಹೊರೆ ತೆರಿಗೆದಾರರ ಮೇಲೆಯೇ ಬಿದ್ದಿದೆ.

ಪುನರ್‌ಸಂಸ್ಕರಣ ಕ್ರಿಯೆಯನ್ನು ಮಾಡಲು ಮತ್ತೊಂದು ತಂತ್ರವಿದೆ: ಪುನರ್ ಸಂಸ್ಕರಣದಲ್ಲಿ ದೊರೆತ ಪ್ಲುಟೋನಿಯಮ್‌ಅನ್ನು ಕ್ರಿಯಾಕಾರಿಗಳಲ್ಲಿ ಇಂಧನವನ್ನಾಗಿ ಬಳಸುವುದು. ಇದರ ಫಲವಾಗಿ ದೊರೆಯುವ ವಿದ್ಯುಚ್ಛಕ್ತಿಯು, ಹೊಸತಾಗಿ ಗಣಿಯಿಂದ ಅಗೆದು ತೆಗೆದ ಯುರೇನಿಯಮ್‌ಅನ್ನು ಇಂಧನವಾಗಿ ಬಳಸುವ ಲಘು ಅಥವಾ ಭಾರ ಜಲ ಕ್ರಿಯಾಕಾರಿಗಳು ಉತ್ಪಾದಿಸುವ ವಿದ್ಯುಚ್ಛಕ್ತಿಗಿಂತ ಹೆಚ್ಚು ಅಗ್ಗ ಅನ್ನುವುದು ನಿಜ. ಆದರೆ ವಾಸ್ತವವಾಗಿ ಇದು ಹೀಗಿಲ್ಲ. ಏಕೆಂದರೆ, ಪ್ಲುಟೋನಿಯಮ್, ಯುರೇನಿಯಮ್ ಇಂಧನದ ವಿದಲನೀಯ ಘಟಕವಾದ ಯುರೇನಿಯಮ್ ೨೩೫ಕ್ಕಿಂತ ಸುಮಾರು ೩೦,೦೦೦ ಪಟ್ಟು ಹೆಚ್ಚು ವಿಕಿರಣ ಶೀಲ. ಹಾಗಾಗಿ ಇಂಧನ ತಯಾರಿಕೆ ಕಾಲದಲ್ಲಿ ಅತ್ಯಂತ ಹೆಚ್ಚಿನ ಸುರಕ್ಷತಾ ಮುನ್ನೆಚ್ಚರಿಕೆಗಳನ್ನು ಅನುಸರಿಸಬೇಕಾಗುತ್ತದೆ. ಪ್ಲುಟೋನಿಯಮ್ ಹಾಗೂ ಯುರೇನಿಯಮ್ ಎರಡನ್ನೂ ಒಳಗೊಂಡ ಮಿಶ್ರಿತ ಆಕ್ಸೈಡ್ (ಎಂ ಓ ಎಕ್ಸ್) ಇಂಧನ ಉತ್ಪಾದನೆಯೂ ಯುರೇನಿಯಮ್ ಇಂಧನದ ಒಟ್ಟು ವೆಚ್ಚಕ್ಕಿಂತ ಹಲವಾರು ಪಟ್ಟು ಹೆಚ್ಚು ಖರ್ಚಿನದೆಂದು ಸಾಧಿತ ವಾಗಿದೆ. ಆದ್ದರಿಂದ ಪ್ಲುಟೋನಿಯಮ್ ಸ್ವಲ್ಪವೂ ಖರ್ಚಿಲ್ಲದೆ ವೆಚ್ಚ ರಹಿತವಾಗಿ ಲಭಿಸುತ್ತದೆಂದು ಭಾವಿಸಿದರೂ, ಪ್ಲುಟೋನಿಯಮ್‌ಅನ್ನು ಇಂಧನ ವನ್ನಾಗಿ ಬಳಸುವ ಕ್ರಿಯಾಕಾರಿಗಳು, ಪ್ರಸ್ತುತ ಯುರೇನಿಯಮ್ ಬೆಲೆಗಳನ್ನು ಪರಿಗಣಿಸಿದಲ್ಲಿ ವೆಚ್ಚರೀತ್ಯಾ ಸ್ಪರ್ಧಾತ್ಮಕವಲ್ಲ, ಹಾಗೂ ಅವು ಅಂತಿಮ ವಾಗಿ ಅಗ್ಗದ ವಿದ್ಯುಚ್ಛಕ್ತಿಯನ್ನು ಉತ್ಪಾದಿಸುವುದು ಅಸಂಭವ ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ – ಯುರೇನಿಯಮ್‌ನ ಬೆಲೆ ಅಪಾರವಾಗಿ ಹೆಚ್ಚಾದ ಹೊರತು.

ಪ್ಲುಟೋನಿಯಮ್‌ಅನ್ನು ಇಂಧನವನ್ನಾಗಿ ಬಳಸಿ ಕೊಂಡು ಕಾರ್ಯ ಜರುಗಿಸುವ ಕ್ಷಿಪ್ರ ಪ್ರಜನಕ ಕ್ರಿಯಾಕಾರಿಗಳನ್ನು (ಫಾಸ್ಟ್ ಬ್ರೀಡರ್ ರಿಯಾಕ್ಟರ್)

ಬೈಜಿಕ ವಿದ್ಯುಚ್ಛಕ್ತಿಯ ಭವಿಷ್ಯತ್ತು ಎಂದು ಪರಿಗಣಿಸಲಾಗಿದೆ. ಏಕೆಂದರೆ, ಅವು ತಾವು ಬಳಸುವುದಕ್ಕಿಂತ ಹೆಚ್ಚು ಪ್ರಮಾಣದಲ್ಲಿ ವಿದಳ ಸಾಮಗ್ರಿಯನ್ನು (ಪ್ಲುಟೋನಿಯಮ್ ಇತ್ಯಾದಿ) ಉತ್ಪಾದಿಸುತ್ತವೆ. ಈ ಪ್ರಯತ್ನವೂ ಭಾರತದಲ್ಲೂ ಜಗತ್ತಿನಾದ್ಯಂತ ಇತರ ದೇಶಗಳಲ್ಲೂ, ಒಟ್ಟಾರೆ ಸಾಂಪ್ರದಾಯಿಕ ಬೈಜಿಕ ವಿದ್ಯುಚ್ಛಕ್ತಿಗಿಂತ ಹೆಚ್ಚು ವಿಫಲವೇ ಆಗಿವೆ. ಅನೇಕ ದಶಕಗಳಿಂದ ಪ್ರಯತ್ನ ನಡೆದಿದ್ದರೂ ಪರಮಾಣು ಶಕ್ತಿ ಇಲಾಖೆಯು ಈಗಷ್ಟೆ ಸಣ್ಣ ಪ್ರಮಾಣದ ಒಂದು ಪರೀಕ್ಷಾರ್ಥ ಪ್ರಜನಕ ಕ್ರಿಯಾಕಾರಿಯನ್ನಷ್ಟೆ ನಿರ್ಮಿಸಲು ಯಶಸ್ವಿಯಾಗಿದೆ. ಈ ಕ್ಷಿಪ್ರ ಪ್ರಜನಕ ಪರೀಕ್ಷಾರ್ಥ ಕ್ರಿಯಾಕಾರಿಯೂ ತಾನು ಕಾರ್ಯಶೀಲವಾಗಿರುವ ಹೆಚ್ಚಿನ ಕಾಲ ವಿಪರೀತ ಖರ್ಚು, ಅಪಘಾತ ಮತ್ತಿತರ ಸಮಸ್ಯೆಗಳಿಂದ ಪೀಡಿತವಾಗಿದೆ.

ಪರಮಾಣು ಶಕ್ತಿ ಇಲಾಖೆಯು ಕಲ್ಪಾಕ್ಕಮ್ ಬಳಿ ತನ್ನ ಮೊದಲ ಕೈಗಾರಿಕಾ ಪ್ರಮಾಣದ ಪರೀಕ್ಷಾರ್ಥ ಪ್ರಜನಕ ಕ್ರಿಯಾಕಾರಿಯನ್ನು – ಪ್ರೋಟೋಟೈಪ್ ಫಾಸ್ಟ್ ಬ್ರೀಡರ್ ರಿಯಾಕ್ಟರ್‌ಅನ್ನು ನಿರ್ಮಿಸುತ್ತಿದೆ. ಈ ಕ್ರಿಯಾಕಾರಿಯ ಬಜೆಟ್ ಸಂಖ್ಯೆಗಳನ್ನು ಆಧರಿಸಿಕೊಂಡು (ಅಂದರೆ ಅದಕ್ಕೂ ಮೀರಿ ಅತಿ ಹೆಚ್ಚಿನ ವೆಚ್ಚಗಳಾಗುವುದಿಲ್ಲವೆಂದು ಭಾವಿಸಿಕೊಂಡು) ಮತ್ತು ಪುನರ್‌ಸಂಸ್ಕರಣ ವೆಚ್ಚಗಳ ನಮ್ಮ ಈ ಮುನ್ನಿನ ಲೆಕ್ಕಾಚಾರಗಳನ್ನು ಆಧರಿಸಿಕೊಂಡು, ಈ ಪ್ರೊಟೊಟೈಪ್ ಫಾಸ್ಟ್ ಬ್ರೀಡರ್ ರಿಯಾಕ್ಟರ್‌ನಲ್ಲಿ ವಿದ್ಯುಚ್ಛಕ್ತಿ ಉತ್ಪಾದಿಸಲು ಎಷ್ಟು ಖರ್ಚಾಗುವುದೆಂದು ನಾವು ಅಂದಾಜುಮಾಡಿದ್ದೇವೆ. ಇತರ ದೇಶಗಳಲ್ಲಿನಂತೆ ಇಲ್ಲೂ ಪರಮಾಣುಶಕ್ತಿ ಇಲಾಖೆಯ ಪ್ರಜನಕ ಕ್ರಿಯಾಕಾರಿಗಳು ಉತ್ಪಾದಿಸುವ ವಿದ್ಯುಚ್ಛಕ್ತಿಯು ಇದೇ ಇಲಾಖೆಯ ಭಾರ ಜಲಕ್ರಿಯಾಕಾರಿಗಳಿಂದ ಲಭಿಸುತ್ತಿರುವ ವಿದ್ಯುಚ್ಛಕ್ತಿಗಿಂತ ಹೆಚ್ಚು ದುಬಾರಿಯಾಗಲಿರುವುದೆಂದೇ ನಮ್ಮ ಫಲಿತಾಂಶಗಳು ತೋರಿಸಿಕೊಡುತ್ತವೆ. ಮುನ್ನವೇ ತಿಳಿಸಿರುವಂತೆ ಭಾರ ಜಲಕ್ರಿಯಾಕಾರಿಗಳೂ ವೆಚ್ಚದ ದೃಷ್ಟಿಯಿ ಸ್ಪರ್ಧಾತ್ಮಕವಾದವುಗಳೇನಲ್ಲ. ಯಾವ ಮಾದರಿಯ ಉತ್ಪಾದಕಗಳಿಂದ ವಿದ್ಯುದುತ್ಪಾ ಮಾಡಬೇಕು ಎಂಬುದನ್ನು ನಿರ್ಧರಿಸಲು ಅವುಗಳಿಗೆ ತಗಲುವ ವೆಚ್ಚಗಳ ಆಧರಿಸಿಕೊಂಡಿರಬೇಕೆಂದೇ ಹೇಳುವ ಇಂದಿನ ಆರ್ಥಿಕ ಸ್ಪರ್ಧೆಯ ಅಂಶವ ಗಮನದಲ್ಲಿಟ್ಟುಕೊಂಡರೆ, ಭಾರತದಲ್ಲಿ ಬೈಜಿಕ ಶಕ್ತಿಯ ವಿಸ್ತೃತ ಪ್ರಮಾಣ ವಿಸ್ತರಣೆಗೆ ಪ್ರಜನಕ ಕ್ರಿಯಾಕಾರಿಗಳು ಸೂಕ್ತ ಸ್ಪರ್ಧಿಗಳಾಗುವುದು ಅಸಂಭವ.

ಬೈಜಿಕ ಶಕ್ತಿಯು ತುಂಬ ಖರ್ಚಿನದು. ಅದರಲ್ಲಿ ಅತ್ಯಂತ ಗಂಭೀರ ಸ್ವರೂಪ ಅಪಘಾತಗಳ ಗಂಡಾಂತರ ಹೆಚ್ಚು. ಅಲ್ಲದೆ, ಅದು ಮಾನವ ಆರೋಗ್ಯಕ ಪರಿಸರಕ್ಕೂ ತುಂಬ ಹಾನಿಕರ. ನಮ್ಮ ದೇಶದಲ್ಲಿ ಬೈಜಿಕ ಶಕ್ತಿ ಉತ್ಪಾದನೆಗೆ ಅರವ ವರ್ಷಗಳ ಇತಿಹಾಸವಿದೆ. ಮೇಲೆ ತಿಳಿಸಿರುವ ಗಂಡಾಂತರಗಳು ಯಾವುವೂ ಅ ಸುಲಭವಾಗಿ ಕಣ್ಮರೆಯಾಗಲಾರವೆಂದೇ ಈ ಇತಿಹಾಸ ಸಾಧಿಸಿ ತೋರಿಸಿದೆ. ಆದ್ದರಿಂ ಬೈಜಿಕ ವಿದ್ಯುದುತ್ಪಾದನೆಯ ಈ ನಿಷ್ಫಲ ಅನ್ವೇಷಣೆಯನ್ನು ಬಿಟ್ಟುಕೊಟ್ಟು ಇ ಊರ್ಜಿತವಾಗಬಲ್ಲ ವಿದ್ಯುದುತ್ಪಾದಕ ಆಕರಗಳನ್ನು ಶೋಧಿಸಿ ಅನುಷ್ಠಾನಕ್ಕೆ ತರು ಸಕಾಲ ಇದೀಗ ಸನ್ನಿಹಿತವಾಗಿದೆ.

ಮೂಲ : ಎಂ. ವಿ. ರಮಣ, ಜೆ. ವೈ. ಸುಚಿತ್ರ
ಇನ್‌ಸ್ಟಿಟ್ಯೂಟ್ ಫಾರ್ ಸೋಷಿಯಲ್ ಅಂಡ್ ಎಕನಾಮಿಕ್ ಚೇಂಜ್, ಬೆಂಗಳೂರು-೫೬೦ ೦೭೨
ಕನ್ನಡಕ್ಕೆ : ಕೆ. ಎಲ್. ಗೋಪಾಲಕೃಷ್ಣ ರಾವ್

## ಜೀವ ಕಾಗುಣಿತ

ಬದುಕಿರುವಾಗಲೇ ತನ್ನ ಶ್ರಾದ್ಧ ಮುಗಿಸಿಕೊಂಡು
ಹೆಮ್ಮೆಯಿಂದ ಬಂದಿಳಿದ ಅವನನ್ನು ನೋಡುತ್ತಲೇ ಇದ್ದಾರೆ
ಅವನು ಕೊಟ್ಟ ಸಿಹಿಯ ಬಾಯಲ್ಲಿಟ್ಟುಕೊಂಡು

ಬದುಕ ಗತ್ತಿನಲ್ಲಿ ಬಂದು ಹೋದ ಸಾವು
ಏನು ಹೇಳಿತೋ ಆ ಹೊತ್ತಿನಲ್ಲಿ
ಉತ್ತರವನ್ನೇ ತ್ಯಾಗ ಮಾಡಿದವನಂತೆ ಕಾಶಿಯಲ್ಲಿ

ಉತ್ತರದ ಉಮೇದಿಲ್ಲದ ಆಯಸ್ಸಿನಲ್ಲಿ
ಅವನು ದಿನವೂ ಸಂಭವಿಸುತ್ತಿರಲು
ಸಾವನ್ನೂ ಬಿಟ್ಟು ಬಂದವನಂತೆ ಈ ಹೊಸ್ತಿಲಲ್ಲಿ

ತನ್ನ ಪಿಂಡಕ್ಕೆ ಧಾವಿಸಿ ಬಂದ ಕಾಗೆ
ತಾನೇ ಆಗಿದ್ದ ಹೊತ್ತಿನಲ್ಲಿ
ಅವನ ಚಿತ್ತ ತನ್ಮಯ ಕ್ಷಣಕ್ಕೆ ಕವಿತೆಯೊಂದು ಕಾಯುತ್ತಿರಲು

ಉಯಿಲು ಬರೆಯುತ್ತಿದ್ದಾನೆ ಈಗ
ಬದುಕ ಪೀಠಿಕೆ ಬರೆದಿಟ್ಟುಕೊಂಡವನಂತೆ
ನಿರಾಳ ಕೂತ ಅವನನ್ನು ನೋಡುತ್ತಲೇ ಇದ್ದಾರೆ ಮನೆಯೊಳಗೆ
ಶ್ರಾದ್ಧದ ನಿತ್ಯ ಶ್ರದ್ದೆಗಳಂತೆ

ಕಾಯುತ್ತಲೇ ಇದೆ ಕವಿತೆಯೊಂದು
ಅವನೊಡಲ ಬ್ರಹ್ಮಕಪಾಲದ ಬಿಂದುವಿನಲ್ಲಿ
ಕೂತ ಸಾವಿನ ಭಾಷ್ಯಕ್ಕಾಗಿ
ಭೀತ ತುಮುಲದ ಕೊನೆಯ ಮಾತಿಗಾಗಿ
ಇನ್ನೂ ಉಳಿದಿರಬಹುದಾದ ಒಂದು ಪುಟ್ಟ ಗುಟ್ಟಿಗಾಗಿ

ಸಾವ ಪ್ರಯಾಗದಂತೆ
ಜೀವ ಪ್ರತೀಕದಂತೆ

ತಿರುಗಿ ನೋಡದ ಅವನು
ಜೀವ ಮುಖವೇ ಸಾವ ಮುಖವೇ
ಹೇಳಲಾರದ ಅವನು
ಶಬ್ದ ಋಣವೇ ಭಾವ ಋಣವೇ
ತೆತ್ತುಕೊಳ್ಳುವ ಉಸಿರು

ಸಾವ ಕಟ್ಟುವ ಲಯದಲ್ಲಿ
ಬದುಕ ಮುಟ್ಟುವ ಸಾಲಿನಲ್ಲಿ
ಕಾ ಕಾ ಎಂದು ಕರೆಯುವ ಜೀವ ಕಾಗುಣಿತ

ತಪ್ಪಿ ಹೋದ ಅಕ್ಷರವೇ ಅವನು ?

ಜಿ. ಕೆ. ರವೀಂದ್ರ ಕುಮಾರ್
ಕಾರ್ಯಕ್ರಮ ನಿರ್ವಾಹಕ, ಆಕಾಶವಾಣಿ
ಮಡಿಕೇರಿ - ೫೭೧ ೨೦೧, ಕೊಡಗು ಜಿಲ್ಲೆ

# Bestsellers from Pustak Mahal

Authors Invited



How to Remain Ever Happy



Secrets of Mind Power



Cholesterol Busters



The Healing Power of Mudras



Ayurveda for All



Success Through Positive Thinking



Homeopathy Cures where Allopathy fails



Combating Allergy Naturally



Hindu Tenets



Rapidex Computer Course (with CD)



Bringing up a Dream Child



Meditation



Life After 50



Healing Power of Foods



Hindu Rites, Rituals, Customs & Traditions



Solve Your Problems –The Birbal Way



CAN is the word of Power



100 Ways to Bring Out Your Best



Success Secrets



71 Golden Tales of Panchatantra (HB)



*Available at all leading bookshops, or contact:*

**PUSTAK MAHAL**

Delhi · Mumbai · Patna · Hyderabad · Bangalore · London

22/2, Mission Road, Shama Raos Compound, **Bangalore-560027**
E-mail: pmblr@sancharnet.in, pustak@sancharnet.in
T.: 222-34025 • Fax: 22240209

Visit our website, ***www.pustakmahal.com*** for detailed contents of the books

# ನಾವು ಇತರ ದೇಶಗಳಿಗೂ ದೂರಸಂಪರ್ಕ ವ್ಯವಸ್ಥೆ ಒದಗಿಸುವಷ್ಟು ಸಮರ್ಥರಾಗಿದ್ದೇವೆ

**– ಪ್ರೊ॥ ಯು. ಆರ್. ರಾವ್**

ಬಾಹ್ಯಾಕಾಶ ವಿಜ್ಞಾನಿ ಪ್ರೊ॥ ಯು. ಆರ್. ರಾವ್ ಅವರ ಹೆಸರು ಕನ್ನಡಿಗರ ಮನೆ ಮನೆಯಲ್ಲೂ ಪರಿಚಿತ. ಭಾರತದ ಬಾಹ್ಯಾಕಾಶ ವಿಜ್ಞಾನ ಕ್ಷೇತ್ರದಲ್ಲಿ ಪ್ರೊ॥ ಸತೀಶ್ ಧಾವನ್ ಅವರ ನಂತರ ಇವರೇ ಆ ಕ್ಷೇತ್ರದ ನಿರ್ಮಾಪಕರೆಂಬ ಶ್ರೇಯಸ್ಸಿಗೆ ಪಾತ್ರರು. ೭೫ರ ಹರೆಯದ ಇವರು ಈಗಲೂ ಅಹಮದಾಬಾದಿನ ಫಿಸಿಕಲ್ ರಿಸರ್ಚ್ ಲ್ಯಾಬ್‌ನ ಅಧ್ಯಕ್ಷರು. ಇದಲ್ಲದೆ ಹತ್ತಾರು ರಾಷ್ಟ್ರೀಯ, ಅಂತರರಾಷ್ಟ್ರೀಯ ಸಂಸ್ಥೆಗಳಲ್ಲಿ ಹಲವಾರು ಸ್ಥಾನಮಾನಗಳನ್ನು ಅಲಂಕರಿಸಿ ನಿರಂತರ ಸೇವೆ ಸಲ್ಲಿಸುತ್ತಲೇ ಇದ್ದಾರೆ. ನಿಜವಾದ ವಿಜ್ಞಾನಿಗೆ ನಿವೃತ್ತಿಯಿಲ್ಲ ಎಂಬುದಕ್ಕೆ ಇವರು ಉತ್ತಮ ಉದಾಹರಣೆ. ಇವರನ್ನು ಅರಸಿ ಬಂದು ಅಲಂಕರಿಸುವ ಪುರಸ್ಕಾರಗಳು, ಡಾಕ್ಟರೇಟುಗಳು ಅಪಾರ ಸಂಖ್ಯೆಯವು. ೧೯೭೬ರಷ್ಟು ಹಿಂದೆಯೇ ಇವರಿಗೆ 'ಪದ್ಮಭೂಷಣ' ಪ್ರಶಸ್ತಿಯಿತ್ತು ರಾಷ್ಟ್ರ ಗೌರವಿಸಿದೆ. ಮುನ್ನೂರಕ್ಕೂ ಹೆಚ್ಚು ಲೇಖನಗಳನ್ನೂ, ವೈಜ್ಞಾನಿಕ ಪ್ರಬಂಧಗಳನ್ನೂ ಇವರು ಪ್ರಕಟಿಸಿದ್ದಾರೆ. ಅವರ ಪುಸ್ತಕಗಳಲ್ಲಿ ಹೆಚ್ಚು ಗಮನ ಸೆಳೆದವೆಂದರೆ 'ಫಿಸಿಕ್ಸ್ ಆಫ್ ಕಮ್ಯೂನಿಕೇಷನ್', 'ಸ್ಪೇಸ್ ಅಜೆಂಡಾ ೨೧ – ಕೇರಿಂಗ್ ಫಾರ್ ದಿ ಪ್ಲ್ಯಾನೆಟ್ ಅರ್ತ್' ಮತ್ತು 'ಸ್ಪೇಸ್ ಟೆಕ್ನಾಲಜಿ ಫಾರ್ ಸಸ್ಟೈನಬಲ್ ಡೆವಲಪ್‌ಮೆಂಟ್'. ಇತ್ತೀಚೆಗಷ್ಟೆ ಅವರು 'ವಿಶ್ವಮಾನವ ಪ್ರಶಸ್ತಿ' ಭಾಜನರಾಗಿದ್ದಾರೆ. ಇವರನ್ನು 'ಹೊಸತು' ವಾರ್ಷಿಕ ಸಂಚಿಕೆಗಾಗಿ ಸಂದರ್ಶಿಸಲಾಯಿತು. ಡಾ॥ ರಾವ್ ಪತ್ರಿಕೆಗೆ ಶುಭ ಹಾರೈಸಿದ್ದಾರೆ.



**ಸಂದರ್ಶಿಸಿದವರು : ಡಾ॥ ಜಿ. ರಾಮಕೃಷ್ಣ, ಕೆ. ಎಸ್. ಪಾರ್ಥಸಾರಥಿ, ಎಸ್. ಸುರೇಂದ್ರ**

**ಲೇಖನ ಸಿದ್ಧಪಡಿಸಿದವರು : ಕೆ. ಎಸ್. ಪಾರ್ಥಸಾರಥಿ, ಡಿ. ಟಿ. ಲೋಹಿತ್. ಚಿತ್ರಗಳು : ಕೆ. ಪಿ. ಸ್ವಾಮಿ**

**ಹೊಸತು** : ನಮಸ್ಕಾರ, ಬಹಳ ವರುಷಗಳ ಹಿಂದೆ ತಮ್ಮನ್ನು ಭೇಟಿ ಮಾಡಿ ಾರತ-ಸೋವಿಯೆತ್ ಸಾಂಸ್ಕೃತಿಕ ಸಂಘದ ಪರವಾಗಿ ಆರ್ಯಭಟದ ವಿಷಯದಲ್ಲಿ ಮ್ಮ ಸಂದರ್ಶನ ಮಾಡಲಾಗಿತ್ತು, ತಮಗೆ ನೆನಪಿರಬಹುದು. ಈ ವರ್ಷದ ಾರ್ಷಿಕ ಸಂಚಿಕೆಗಾಗಿ ನೀವು ಸಂದರ್ಶನ ನೀಡಲು ಒಪ್ಪಿದ್ದಕ್ಕೆ ನಿಮಗೆ ತಜ್ಞರಾಗಿದ್ದೇವೆ. ತಮ್ಮ ಹಿನ್ನೆಲೆ ಬಗ್ಗೆ ನಮಗೆ ಸ್ವಲ್ಪಮಟ್ಟಿಗೆ ಪತ್ರಿಕೆಗಳಿಂದ ಗೊತ್ತಿದೆ. ಾದರೆ, ತಮ್ಮಿಂದಲೇ ನೇರವಾಗಿ ತಿಳಿದರೆ ಹೆಚ್ಚು ಸ್ವಾರಸ್ಯವಾಗಿರುತ್ತದೆ.

**ಯು. ಆರ್. ರಾವ್** : ಅದು ಅಂಥ ಸ್ವಾರಸ್ಯವಾದ ವಿಷಯವೇನಲ್ಲ!!

**ಹೊ** : ತಮ್ಮ ವಿದ್ಯಾಭ್ಯಾಸ ಮತ್ತು ಉಳಿದ ವಿಷಯಗಳ ಬಗ್ಗೆ ಸ್ವಲ್ಪ ತಿಳಿಸಿ.

**ಯು. ಆರ್. ರಾವ್** : ನಾನು ಹುಟ್ಟಿದ್ದು ದಕ್ಷಿಣ ಕನ್ನಡ ಜಿಲ್ಲೆಯ ಅದಮಾರಿನಲ್ಲಿ. ಅದಮಾರು ನನ್ನ ತಾಯಿಯ ಊರು. ನನ್ನ ತಾಯಿಯ ಅಣ್ಣ ಈಗಿರುವ ಅದಮಾರು ಮಠದ ಗುರುಗಳಾಗಿದ್ದರು.

**ಹೊ** : ಗುರುಗಳ ಹೆಸರೇನು ?

**ಯು. ಆರ್. ರಾವ್** : ವಿಠಲಾಚಾರ್ ಎಂದು. ನನ್ನ ಕುಟುಂಬದಲ್ಲಿ ಯಾರೂ ಈ ಹಿಂದೆ ಹೆಚ್ಚು ಓದಿಕೊಂಡವರಲ್ಲ. ನಾನೇ ಮೊದಲಿಗ. ನಾವು ತುಳು ಮತ್ತು ಕನ್ನಡ ಮಾತಾಡುವ ಜನ. ನನ್ನ ತಂದೆ ಅದಮಾರಿನಲ್ಲಿ ನಾಲ್ಕು ಅಥವಾ ಐದನೆಯ ತರಗತಿ ಓದಿದ್ದಿರಬಹುದು. ನನ್ನ ತಾಯಿ ಶಾಲೆಗೆ ಹೋದವರಲ್ಲ, ಆದರೆ ಸಂಗೀತದಲ್ಲಿ ತುಂಬಾ ಜ್ಞಾನವಿದ್ದವರು. ಅದಕ್ಕೆ ಕಾರಣ ಅವರ ತಂದೆ ಉಡುಪಿಯ ದೇವಾಲಯದಲ್ಲಿ ಭಾಗವತರಾಗಿದ್ದುದು. ನಾನು ಎಸ್.ಎಸ್.ಎಲ್.ಸಿ.ಯಾಗುವವರೆಗೆ ಸಾಮಾನ್ಯ ವಿದ್ಯಾರ್ಥಿಯಾಗಿದ್ದೆ. ನಾನು ಏಳನೇ ತರಗತಿ ಓದುವ ವೇಳೆಗೆ ಉಡುಪಿಯ ಸಮೀಪದ ಮಾರತಹಳ್ಳಿಯಲ್ಲಿ ಇದ್ದೆವು. ನಂತರ ಉಡುಪಿಯಲ್ಲಿದ್ದೆವು. ನನ್ನ ತಮ್ಮ ಪ್ರಸಿದ್ಧ ಅರ್ಥಶಾಸ್ತ್ರಜ್ಞ ಮಾರತಹಳ್ಳಿ ಗೋವಿಂದ ರಾವ್. ಅವರು ಐಸೆಕ್‌ನ ಡೈರೆಕ್ಟರ್ ಆಗಿದ್ದರು. ಪ್ರಧಾನ ಮಂತ್ರಿಗಳು ಆಗಾಗ್ಗೆ ಕೇಳುವುದುಂಟು, 'ನನ್ನ ಸಹೋದರ ಎಕಾನಮಿಸ್ಟ್ ಹೇಗಿದ್ದಾರೆ' ಎಂದು. ಪ್ರಧಾನ ಮಂತ್ರಿಯವರ ಸಲಹಾ ಮಂಡಲಿಯಲ್ಲಿ ಕೂಡ ಇದ್ದಾರೆ. ನನ್ನ ಮತ್ತೊಬ್ಬ ಸಹೋದರ ಕಳೆದ ವರುಷ ತೀರಿಕೊಂಡರು. ಅವರು ನನಗಿಂತ ಹತ್ತು ವರುಷ ಕಿರಿಯರು. ಗೋವಿಂದ ರಾವ್ ನನಗಿಂತ ಹದಿನೈದು ವರುಷ ಕಿರಿಯರು. ಗೋವಿಂದ ಹುಟ್ಟಿದಾಗ ನಾನು ಇಂಟರ್‌ಮೀಡಿಯೆಟ್ ಮುಗಿಸಿ ಡಿಗ್ರಿ ತರಗತಿಯಲ್ಲಿದ್ದೆ,

With Best Compliments of



**SESHADRIPURAM GROUP OF INSTITUTIONS**

Seshadripuram Stree Samaja Middle School
Seshadripuram Boys' High School
Seshadripuram Girls' High School
Seshadripuram Pre-University College (Aided)
Seshadripuram Evening Pre-University College
Seshadripuram Evening Degree College
Seshadripuram College & Post-Graduate Centre
Seshadripuram Pharmacy College
Seshadripuram Law College
Seshadripuram English Higher Primary School, Kumara Park
Seshadripuram Pre-University College, Yelahanka
Seshadripuram First Grade College, Yelahanka
Seshadripuram English Higher Primary School, Yelahanka
Seshadripuram High School, Yelahanka
Seshadripuram Composite Pre-University College, Seshadripuram
Seshadripuram Institute of Management Studies, Yelahanka
Seshadripuram Institute for Studies in Chartered - Accountancy
Seshadripuram Public School, Yelahanka
Seshadripuram Independent Pre-University College, Magadi Road
Seshadripuram Pre-University College, Kengeri
Seshadripuram Institute of Commerce & Management
Seshadripuram Teacher Training Institute, Yelahanka
Seshadripuram Academy of Business Studies, Kengeri
Seshadripuram Commerce College, Magadi Road

**K. M. Nanjappa**
President

**Wooday P. Krishna**
Hon. General Secretary

**SESHADRIPURAM EDUCATIONAL TRUST**
Seshadripuram, Bangalore - 560 020
website : www.set.edu.in email : info@set.edu

**ಹೊ :** ತಾವು ಅನ್ಯಥಾ ಭಾವಿಸದಿದ್ದರೆ ತಮ್ಮ ವಯಸ್ಸು ಎಷ್ಟೆಂದು ತಿ ನಾವೆಲ್ಲರೂ ಹಲವಾರು ವರುಷಗಳಿಂದ ತಮ್ಮನ್ನು ನೋಡುತ್ತಿದ್ದೇವೆ, ತಾವು ಏಜ್‌ ಆಗಿ ಕಾಣುತ್ತೀರಿ !

**ಯು. ಆರ್. ರಾವ್ :** ನನಗೆ ಈಗ ೭೫ ವರುಷ.

**ಹೊ :** ನಿಮ್ಮ ಏಜ್‌ಲೆಸ್‌ನೆಸ್‌ನ ಸೀಕ್ರೆಟ್ ಏನೆಂದು ಕೇಳಬೇಕೆನಿಸುತ್ತದೆ !!

**ಯು. ಆರ್. ರಾವ್ :** ನೋಡಿ, ಮೊನ್ನೆ ಮನೆಯಲ್ಲಿ ಜಾರಿಬಿದ್ದು ಗಾ ಮಾಡಿಕೊಂಡು ಇಲ್ಲೆಲ್ಲಾ ರಕ್ತ ಮಾಡಿಕೊಂಡಿದ್ದೆ. ಇನ್ನು ಸೀಕ್ರೆಟ್ ಏನುಳಿದಿದ ಏಜ್‌ಲೆಸ್‌ನೆಸ್ ಆದರೂ ಎಲ್ಲಿದೆ ?!

**ಹೊ :** ತಾವು ಮೂಲತಃ ತಂತ್ರಜ್ಞಾನದ ವಿದ್ಯಾರ್ಥಿಯೇ ?

**ಯು. ಆರ್. ರಾವ್ :** ನಾನು ಓದಿದ್ದು ಎಂ.ಎಸ್ಸಿ. (ಫಿಸಿಕ್ಸ್) ಬನಾರಸ್‌ನಲ್ಲಿ ಕಾಲದಲ್ಲಿ ಉಡುಪಿಯಲ್ಲಿ ಕಾಲೇಜು ಇರಲಿಲ್ಲ. ನನ್ನ ತಂದೆಗೆ ನನ್ನನ್ನು ಓದಿಸುವ ಆರ್ಥಿಕ ಶಕ್ತಿ ಇರಲಿಲ್ಲ. ನಾನು ಹಲವಾರು ಸಂಬಂಧಿಕರ ಸಹಾಯದಿ ಇಂಟರ್‌ಮೀಡಿಯಟ್ ಮಾಡಲು ಬಳ್ಳಾರಿಯಲ್ಲಿ ಆಗತಾನೆ ಆರಂಭವಾ ವೀರಶೈವ ಕಾಲೇಜು ಸೇರಿದೆ. ೧೯೪೭ರಲ್ಲಿ ಎಸ್.ಎಸ್.ಎಲ್.ಸಿ. ಮತ್ತು ೧೯೪೯ ಇಂಟರ್‌ಮೀಡಿಯಟ್ ಮಾಡಿದೆ. ಆ ಕಾಲದಲ್ಲಿ ಇಡೀ ರಾಯಲಸೀಮೆಯಲ್ಲಿ ಒಂ ಒಂದು ಡಿಗ್ರಿ ಕಾಲೇಜು ಅನಂತಪುರದಲ್ಲಿತ್ತು. ೧೯೫೨ರಲ್ಲಿ ಡಿಗ್ರಿ ಮುಗಿಸಿ ನಂ ಬನಾರಸ್ ಯೂನಿವರ್ಸಿಟಿಗೆ ಬರೆದಿದ್ದೆ: ನನಗೆ ಬಿ.ಎಸ್‌ಸಿ.ಯಲ್ಲಿ ಇಷ್ಟನೇ ರ್‍ಯಾ ಬಂದಿದೆ, ಮುಂದೆ ಓದಲು ಇಷ್ಟಪಡುತ್ತೇನೆ, ಆದರೆ ನನಗೆ ಹಣದ ತೊಂದರೆ ಇ ಎಂದು. ಅಲ್ಲಿ ಬಿಜಾಪುರದ ಪ್ರೊಫೆಸರ್ ಅಸುಂಡಿ ಇದ್ದರು. ಅವರು ಸಹಾ ಮಾಡುವುದಾಗಿ ಭರವಸೆ ಕೊಟ್ಟದ್ದರಿಂದ ಅಲ್ಲಿಗೆ ಹೋದೆ. ಸಿ. ಎನ್. ಆರ್. ರಾ ಕೂಡ ನನ್ನ ಜೊತೆಯೇ ಓದಿದರು. ಅವರು ಎಂ.ಎಸ್‌ಸಿ. (ಕೆಮಿಸ್ಟ್ರಿ), ನಾನ ಎಂ.ಎಸ್‌ಸಿ. (ಫಿಸಿಕ್ಸ್). ಒಂದೇ ವಿದ್ಯಾರ್ಥಿನಿಲಯದಲ್ಲಿ ಇದ್ದೆವು. ೧೯೫೪ರ ಸಂ ೮-೧೦ ತಿಂಗಳು ನಾನು ಲೆಕ್ಚರರ್ ಆಗಿ ಕೆಲಸ ಮಾಡಿದೆ. ೬ ತಿಂಗ ಅಹಮದ್‌ನಗರದಲ್ಲಿ, ಮತ್ತು ೨ ತಿಂಗಳು ಮೈಸೂರಿನ ಸೆಯಿಂಟ್ ಫಿಲೊಮಿನಾ ಕಾಲೇಜಿನಲ್ಲಿ. ನಂತರ ನನಗೆ ಡಾ|| ಸಾರಾಭಾಯಿ ಅವರಿಂದ ಕರೆ ಬಂತು. ಆಗ ನಾನ ಅವರ ಆಶ್ರಯ ಪಡೆದೆ, ಪಿಎಚ್.ಡಿ. ಮಾಡಲು. ಅಲ್ಲಿಂದ ಸಾರಾಭಾಯಿ ಅವ ಇಷ್ಟದ ಮೇರೆಗೆ ಎಂ.ಐ.ಟಿ.ಗೆ ಫ್ಯಾಕಲ್ಟಿಯಾಗಿ ಹೋದೆ. ಅವರು ಪ್ರತಿ ವರುಷ ಎರಡು ತಿಂಗಳು ಅಲ್ಲಿಗೆ ಬರುತ್ತಿದ್ದರು. ನಾವಿಬ್ಬರೂ ಒಟ್ಟಿಗೆ ಸೇರಿ ಕೆಲ ಮಾಡಬಹುದೆಂಬುದೇ ಅವರ ಉದ್ದೇಶವಾಗಿತ್ತು. ನನ್ನ ಕೆಲಸದಲ್ಲಿ ನಾ ಎಮ್.ಐ.ಟಿ.ಯಿಂದ ಆಗಾಗ್ಗೆ ಕ್ಯಾಲಿಫೋರ್ನಿಯಾದ ಜೆಫರ್‌ಸನ್ ಇನ್‌ಸ್ಟಿಟ್ಯೂಟ್ ಹೋಗಬೇಕಾಗುತ್ತಿದ್ದಿತು. ಅಲ್ಲಿ ಮೊಟ್ಟಮೊದಲನೆಯ ಬಾರಿಗೆ ಬಾಹ್ಯಾಕಾಶದ ಬ ಪ್ರಯೋಗಗಳನ್ನು ಮಾಡಿದೆ. ಆಸ್ಟ್ರೇಲಿಯಾದ ನನ್ನ ಸಹೋದ್ಯೋಗಿಯೂ ನಾ ಸೇರಿ ಮಾಡಿದ ಪ್ರಯೋಗವು ಪ್ರಪ್ರಥಮ ಬಾರಿಗೆ ಯಶಸ್ವಿಯಾಯಿತು. ನಾ ಅಮೆರಿಕಾಗೆ ಹೋದದ್ದು ೧೯೬೦ರಲ್ಲಿ, ಹಿಂದಿರುಗಿ ಬಂದದ್ದು ೧೯೬೫ರ ಅಹಮದಾಬಾದಿಗೆ ಬಂದಾಗ ಸ್ಪೇಸ್ ಸೆಟಲೈಟ್‌ಗಳೆಂದರೇನು, ಅವುಗ ಸಾಮಾಜಿಕ-ಆರ್ಥಿಕ ಪ್ರಯೋಜನಗಳೇನು, ಇತ್ಯಾದಿಗಳನ್ನು ಕುರಿತು ಒಂದು ವರ ಬರೆದೆ. ಇದನ್ನು ನೋಡಿ ನಮ್ಮ ಮುಖ್ಯಸ್ಥರು ಇಡೀ ಯೋಜನೆಯ ನಿರ್ದೇಶಕ ಯಾರೆಂದು ತಿಳಿಸಲಿಲ್ಲವಲ್ಲಾ ಎಂದರು. ನಾನು "ನೋಡಿ, ಇಲ್ಲಿ ಸಾಕಷ್ಟು ಜ ಸಮರ್ಥರಿದ್ದಾರೆ, ನೀವು ಯಾರನ್ನಾದರೂ ಸೆಲೆಕ್ಟ್ ಮಾಡಿಕೊಳ್ಳಬಹುದು" ಎಂ "ನೀವೇ ಏಕೆ ಆಗಬಾರದು ?" ಎಂದು ಕೇಳಿದರು. ಮೊದಲಿಗೆ ಒಪ್ಪಿಕೊಳ್ಳ ಇಷ್ಟವಿರಲಿಲ್ಲ. ಒಂದು ವರುಷ ಅವರು ನನ್ನನ್ನು ಒತ್ತಾಯಿಸುತ್ತಲೇ ಇದ್ದುದರಿಂ ಕಡೆಗೆ ಒಪ್ಪಿಕೊಳ್ಳಬೇಕಾಯಿತು. ಆಗ ನಾನು ಒಂದು ಸಣ್ಣ ಗುಂಪ ತಯಾರುಮಾಡಿದೆ. ಕಸ್ತೂರಿರಂಗನ್ ಕೂಡ ಅವರ ಪಿಎಚ್.ಡಿ.ಯಾದ ಮೇಲೆ ಗುಂಪಿಗೆ ಸೇರಿಕೊಂಡರು. ನಾನು ೧೯೭೧ರ ಹೊತ್ತಿಗೆ ರಷ್ಯಾಗೆ ಹೋಗಿ ಈ ಕುರಿ ಒಂದು ಒಪ್ಪಂದವನ್ನು ಮಾಡಿಕೊಂಡು ಬಂದೆ. ಈ ಒಪ್ಪಂದದ ಪ್ರಕಾರ ಎರಡೂವ ವರುಷದೊಳಗೆ ನಮ್ಮ ದೇಶದವರು ಉಪಗ್ರಹವನ್ನು ನಿರ್ಮಾಣ ಮಾಡಬೇಕೆಂದು ರಷ್ಯಾದವರು ಅದನ್ನು ಉಚಿತವಾಗಿ ನಮ್ಮ ದೇಶದ ಪರವಾಗಿ ಉಡಾಯಿಸಬೇಕೆಂದು ನಿರ್ಧರಿಸಲಾಯಿತು. ಇದೇ ಸಮಯದಲ್ಲಿ ಬಾಹ್ಯಾಕಾಶ ವಿಭಾಗವು ಅಣುವಿಜ್ಞಾ ವಿಭಾಗದಿಂದ ಪ್ರತ್ಯೇಕಿಸಲ್ಪಟ್ಟಿತು. ಒಂದು ಅಲ್ಪಾವಧಿಗಾಗಿ ಪ್ರೊ|| ಎಂ. ಜಿ. ಕೆ. ಮೆನ ಅವರನ್ನು ಈ ವಿಭಾಗಕ್ಕೆ ಮುಖ್ಯಸ್ಥರನ್ನಾಗಿ ಮಾಡಲಾಯಿತು. ಈ ಸಮಯದಲ್ಲಿ ಡಾ

ಾಭಾಯಿ ಅವರಿಗೆ ಸ್ಪಷ್ಟವಾಗಿ ಹೇಳಿದ್ದೆ, ತಿರುವನಂತಪುರವು ಈ ಪ್ರಯೋಗಕ್ಕೆ ಯಾದ ಸ್ಥಳ ಅಲ್ಲ ಎಂದು. ಅಲ್ಲಿ ಸೌಲಭ್ಯಗಳು ಸಾಕಷ್ಟು ಇರಲಿಲ್ಲ.

ಉಪಗ್ರಹವು ರಾಕೆಟ್‌ನಂತಲ್ಲ. ಅದು ಅತ್ಯಂತ ಹಗುರವಾಗಿರಬೇಕಾಗುತ್ತದೆ. ಕೆಟ್‌ಸಲ್ಲಾದರೆ ಅದರ ಒಟ್ಟು ಭಾರವೇ ೪೦೦ ಟನ್ನುಗಳಷ್ಟಿರುವಾಗ ಅದರಲ್ಲಿ ವು ಕಿಲೋಗ್ರಾಮು ಹೆಚ್ಚು ಕಡಿಮೆಯಾದರೂ ಪರವಾಗಿಲ್ಲ. ಆದರೆ ಉಪಗ್ರಹದಲ್ಲಿ ತಿಯೊಂದು ಚಿಕ್ಕ ವಸ್ತುವೂ ಹಗುರತೆಯ ಮಾಪನದ ಮೇಲೆಯೇ ಆರಿಸಲ್ಪಡುತ್ತದೆ. ಲ್ಲಿ ಹಲವು ಗ್ರಾಮುಗಳಷ್ಟು ತೂಕವನ್ನು ನಾವು ಕಡಿಮೆ ಮಾಡಲಾದರೂ, ಅದಕ್ಕೆ ನ್ಯತೆ ಕೊಡಬೇಕಾಗುತ್ತದೆ. ರಾಕೆಟ್ಟು ಬಾಹ್ಯಾಕಾಶಕ್ಕೆ ಹೋಗಿ ಹಲವಾರು ಟೆಗಳಲ್ಲಿ ಕೆಲಸವನ್ನು ಮುಗಿಸಿಬಿಡುತ್ತದೆ. ಆದರೆ ಉಪಗ್ರಹವು ಹಲವಾರು ರುಷಗಳು ಬಾಹ್ಯಾಕಾಶದಲ್ಲಿಯೇ ಇದ್ದು ಕೆಲಸ ಮಾಡುತ್ತಿರುತ್ತದೆ. ಅಂದಿನ ಂತ್ರಿಕತೆಯ ಘಟ್ಟದಲ್ಲಿ, ಅದು ಹಗುರವಾಗಿರಬೇಕಾದುದು, ಎಂದರೆ ಸುಮಾರು ೦ ಕಿಲೋಗ್ರಾಮುಗಳಷ್ಟು ಮಾತ್ರ ಇರಬೇಕಾದುದು ಅತಿ ಮುಖ್ಯ. ಅಲ್ಲದೆ ಅದು ಲ್ಲಿಯೇ ಹಲವಾರು ವರುಷಗಳು ಇರುವುದರಿಂದ, ಅದರ ಪ್ರತಿಭಾಗವೂ ಅಲ್ಲಿನ ಅತಿ ಕ್ಷಿನ ರೇಡಿಯೇಷನ್‌ಅನ್ನು ತಡೆದುಕೊಳ್ಳುವ ಕ್ಷಮತೆಯನ್ನು ಒಳಗೊಂಡಿರಬೇಕು.

ಹಾಗೆ ನೋಡಿದರೆ ಬೆಂಗಳೂರನ್ನೇ ನಮ್ಮ ಕೇಂದ್ರವಾಗಿ ಆರಿಸಿಕೊಳ್ಳಲು ಇಲ್ಲಿಯ ತ್ತಮ ಸೌಲಭ್ಯಗಳು ಕಾರಣ. ಆಗ ತಾನೆ ಭಾರತ-ಪಾಕಿಸ್ತಾನಗಳ ನಡುವೆ ಯುದ್ಧ ಾಡ ಆರಂಭವಾಗಿದ್ದು, ಯುದ್ಧ ಇನ್ನೂ ಕೆಲವು ವಾರಗಳು ಮುಂದುವರೆದಿದ್ದರೆ, ುಗೆ ಹಲವಾರು ಬಿಡಿ ಭಾಗಗಳು ಸಿಗುವುದು ಕೂಡ ತುಂಬ ಕಷ್ಟವಾಗುತ್ತಿತ್ತು. ಇಡೀ ೇಶ ಅಲ್ಲೋಲಕಲ್ಲೋಲ ಪರಿಸ್ಥಿತಿಯಲ್ಲಿತ್ತು. ಆದ್ದರಿಂದ, ಇಂತಹ ಹಲವಾರು ುಸ್ಯೆಗಳನ್ನು ಪರಿಹರಿಸಲು ಭಾಭಾ ನೇತೃತ್ವದ ಸಮಿತಿಯನ್ನು ರಚಿಸಲಾಯಿತು. ॥ ಸಾರಾಭಾಯಿ ಅವರೂ ಅದರ ಸದಸ್ಯರಾಗಿದ್ದರು. ಪ್ರೊ॥ ಸತೀಶ್ಚಂದ್ರ ಅವರನ್ನು ಹಮದಾಬಾದ್‌ನಿಂದ ಬೆಂಗಳೂರಿಗೆ ಕರೆಸಿಕೊಳ್ಳಲಾಯಿತು. ಖಾಲಿಜಾಗವನ್ನು ಗೆದುಕೊಂಡು ಅಲ್ಲಿ ಕಟ್ಟಡ ಅಥವಾ ಶೆಡ್ ಕಟ್ಟಿ, ನಂತರ ಕೆಲಸ ಶುರು ಮಾಡುವಷ್ಟು ಮಯ ಇರಲಿಲ್ಲ, ಏಕೆಂದರೆ ಎರಡೂವರೆ ವರುಷಗಳಲ್ಲಿ ನಾವು ಉಪಗ್ರಹದ ರ್ಮಾಣವನ್ನು ಮುಗಿಸಬೇಕಾಗಿತ್ತು. ಹಾಗಾಗಿ ನಾವು ಪೀಣ್ಯದಲ್ಲಿ ಒಂದು ಂಡಸ್ಟ್ರಿಯಲ್ ಶೆಡ್‌ಅನ್ನು ತೆಗೆದುಕೊಂಡು ಆಗಸ್ಟ್ ೭೨ರಲ್ಲಿ ಕೆಲಸ ಶುರು ಾಡಿದೆವು. ಅಲ್ಲಿದ್ದ ಹಲವಾರು ಶೆಡ್‌ಗಳನ್ನು ಆ ವೇಳೆಗಾಗಲೇ ಒಳ್ಳೆಯ ಎಲೆಕ್ಟ್ರಾನಿಕ್ ಯೋಗಶಾಲೆಗಳನ್ನಾಗಿ ಪರಿವರ್ತಿಸಲಾಗಿತ್ತು. ಉಪಗ್ರಹದ ತಯಾರಿಗೆ ಅವಶ್ಯವಾಗಿ ೇಕಾದ 'ಕ್ಲೀನ್ ರೂಂ' ಗಳನ್ನೂ ಸಜ್ಜುಗೊಳಿಸಲಾಯಿತು.

ಅಲ್ಲದೆ ಉಪಗ್ರಹದ ತಯಾರಿ ಹಾಗೂ ಉಡಾವಣೆಗೆ ಕಂಪನ ಅತಿ ಕಮ್ಮಿಯಿರುವ ಸ್ಥಳದ ಅವಶ್ಯಕತೆಯಿರುತ್ತದೆ. ನಮ್ಮ ಇಡೀ ದೇಶದಲ್ಲಿ ಈ ರೀತಿ ಅತಿ ಕಡಿಮೆ ಕಂಪನ ಇರುವ ಸ್ಥಳಗಳು ಎರಡೇ ಎರಡು : ಹೈದರಾಬಾದ್ ಹಾಗೂ ಬೆಂಗಳೂರು. ಈ ಪ್ರಯೋಗವನ್ನು ಬೆಂಗಳೂರಿನಲ್ಲಿ ಮಾಡುವುದೆಂದು ನಿರ್ಧರಿಸಿದಾಗ ಕೇರಳದ ಹಲವು ರಾಜಕಾರಣಿಗಳು ಆಕ್ಷೇಪ ವ್ಯಕ್ತಪಡಿಸಿದರು. ಕಡೆಗೆ ೧೯೭೭ರಲ್ಲಿ ಬೆಂಗಳೂರಿನಲ್ಲಿ ಈ ಕೆಲಸ ಮಾಡಲು ಅನುಮತಿ ದೊರಕಿತು. ಕೂಡಲೆ ನಾವು 'ಭಾಸ್ಕರ' ಉಪಗ್ರಹದ ತಯಾರಿ ಆರಂಭಿಸಿದ್ದವು.

ಇದೇ ಸಮಯದಲ್ಲಿ ರಿಮೋಟ್ ಸೆನ್ಸಿಂಗ್ ಬಗ್ಗೆಯೂ ಕೆಲಸ ನಡೆದಿತ್ತು (ಗುಲ್ಬರ್ಗದ ಬಳಿ). ಉಳಿದ ಎಲ್ಲರಿಗಿಂತ ಮುಂಚಿತವಾಗಿ ಗುಲ್ಬರ್ಗಾದ ಸುತ್ತಮುತ್ತ ೪೦೦ ಹಳ್ಳಿಗಳಿಗೆ ದೂರದರ್ಶನದ ಸೌಲಭ್ಯವು ದೊರೆಯಿತು. ಮೊಟ್ಟಮೊದಲನೆಯ ಬಾರಿಗೆ ದೂರದರ್ಶನ ಎಷ್ಟು ಪ್ರಭಾವಿ ಮಾಧ್ಯಮ ಎಂಬುದು ಇಡೀ ದೇಶಕ್ಕೆ ಅರಿವಾಯಿತು. ಪ್ರಮುಖವಾಗಿ ಈ ಮಾಧ್ಯಮವನ್ನು ವಿದ್ಯಾಭ್ಯಾಸಕ್ಕಾಗಿ ಬಳಸಿಕೊಳ್ಳಲಾಯಿತು. ಅದೇ ವೇಳೆಗೆ ಏಷ್ಯನ್ ಗೇಮ್ಸ್ ಆರಂಭವಾದುದರಿಂದ ಅದರ ಪ್ರಚಾರಕ್ಕೂ ಸಾಕಷ್ಟು ಬಳಸಿಕೊಳ್ಳಲಾಯಿತು. ಆಗ ಆಕಾಶವಾಣಿಯವರೂ ಆಸಕ್ತಿ ತೋರಿದುದರಿಂದ ಮತ್ತೊಂದು ಕಮ್ಯೂನಿಕೇಷನ್ ಸ್ಯಾಟಲೈಟ್ ಅನ್ನು ಸೇರಿಸಲಾಯಿತು. ಈ ಉಪಗ್ರಹವನ್ನು ಆರ್ಬಿಟ್‌ಗೆ ನೇರವಾಗಿ ಉಡಾಯಿಸ ಲಾಗುವುದಿಲ್ಲ. ರಾಕೆಟ್‌ನ ಸಹಾಯದಿಂದ ಇವನ್ನು ಆರ್ಬಿಟ್‌ಗೆ ಕಳಿಸಿದ ಮೇಲೆ ಉಪಗ್ರಹವೇ ತನ್ನಲ್ಲಿರುವ ಸಣ್ಣ ಮೋಟರ್‌ನ ಸಹಾಯದಿಂದ ಚಲಿಸಲು ತೊಡಗುತ್ತದೆ. ಎಲಿಪ್ಟಿಕಲ್ ಆರ್ಬಿಟ್‌ನ ಒಂದು ಭಾಗದಲ್ಲಿ ಭೂಮಿಯಿಂದ ದೂರವು ೨೦೦ ಕಿಲೋಮೀಟರ್‌ಗಳಷ್ಟೂ, ಮತ್ತೊಂದು ಭಾಗದಲ್ಲಿ ದೂರವು ೩೬,೦೦೦ ಕಿಲೋಮೀಟರ್‌ಗಳಷ್ಟೂ ಇರುವುದರಿಂದ, ಈ ದೂರವನ್ನು ಉಪಗ್ರಹವು ಕ್ರಮಿಸಿದ ನಂತರ ಭೂಮಧ್ಯರೇಖೆಗೆ ಹಿಂತಿರುಗಿ ತರಬೇಕಾಗುತ್ತದೆ. ಈ ಕ್ರಮಣದಲ್ಲಿ ಉಪಗ್ರಹವು ಭೂಮಧ್ಯರೇಖೆಯಿಂದ ೧°ಗಿಂತ ಹೆಚ್ಚು ಭ್ರಮಣಗೊಳ್ಳಬಾರದು. ಇದನ್ನು ಭೂಮಿಯಿಂದಲೇ ನಿಯಂತ್ರಿಸಬೇಕಾಗುತ್ತದೆ.

ಈ ಸಮಯದಲ್ಲಿಯೇ ನಾವು ಒಂದು ವಿಶೇಷವಾದ ಜಿಯೋ- ಸ್ಟೇಶನ್ (Insat) ಆರಂಭಿಸಿದೆವು. ಇದರಲ್ಲಿ ಮೊಟ್ಟಮೊದಲನೆಯ ಬಾರಿಗೆ ದೂರದರ್ಶನ, ಶ್ರವಣ ಪ್ರಸಾರ, ದೂರಸಂಪರ್ಕ ಮತ್ತು ಹವಾಮಾನ ಅಭ್ಯಾಸ ಎಲ್ಲವನ್ನೂ ಸೇರಿಸಿ ಒಂದು ಸಂಯುಕ್ತ ಭೂಕಕ್ಷೆಯಲ್ಲಿ ಸ್ಥಾಯಿ ಕೇಂದ್ರವನ್ನು ಸ್ಥಾಪಿಸಲಾಯಿತು. ಅಲ್ಲಿಯವರೆಗೆ ಯಾರೂ ಈ ರೀತಿ ಈ ಮೂರೂ ವಿಷಯಗಳನ್ನೂ ಸೇರಿಸಿ ಒಂದೇ ಜಿಯೋ-ಸ್ಟೇಶನ್ ಸ್ಥಾಪಿಸಿರಲಿಲ್ಲ. ಹಣದ ಮುಗ್ಗಟ್ಟಿನಿಂದಾಗಿ ಅತಿ ಕಡಿಮೆ ವೆಚ್ಚವನ್ನು ಗಮನದಲ್ಲಿಟ್ಟು, ಈ ಕೇಂದ್ರವನ್ನು ತಾಂತ್ರಿಕತೆ ಅತಿ ಜಟಿಲವಾದರೂ ಸ್ಥಾಪಿಸಲಾಯಿತು. ಉಪಗ್ರಹದ



ಪ್ರೊ॥ ಯು. ಆರ್. ರಾವ್ ಅವರೊಡನೆ ಸಂದರ್ಶನ ಚಿತ್ರದಲ್ಲಿ, ಎಡದಿಂದ ಬಲಕ್ಕೆ : ಶ್ರೀ ಎಸ್. ಸುರೇಂದ್ರ, ಡಾ॥ ಜಿ. ರಾಮಕೃಷ್ಣ, ಶ್ರೀ ಕೆ. ವಿ. ಪಾರ್ಥಸಾರಥಿ ಮತ್ತು ಪ್ರೊ॥ ಯು. ಆರ್. ರಾವ್

ಉಡಾವಣೆ ತುಂಬ ವೆಚ್ಚದ ವಿಷಯವಾದುದರಿಂದ ಈ ವಿಧಾನವನ್ನು ಅವಲಂಬಿಸಲಾಯಿತು. ಈ ಅನುಭವದ ನಂತರ, ಪ್ರತಿ ಬಾರಿ ಉಡಾವಣೆಯಲ್ಲಿ ಸಾಕಷ್ಟು ಖಚಿತತೆಯು ಸಾಧಿತವಾಯಿತು. ಆದರೆ ಅವುಗಳಲ್ಲಿ ಎರಡು ಉಪಗ್ರಹಗಳು ಕಾರ್ಯಕ್ಷಮತೆ ತೋರದೆ ವಿಫಲವಾದುವು. ಒಂದು ಒಡನೆಯೇ, ಮತ್ತೊಂದು ಎರಡೂವರೆ ವರುಷಗಳ ನಂತರ ನಿಷ್ಪ್ರಯೋಜಕವಾಯಿತು. ಆದರೆ ಇನ್ಶೂರೆನ್ಸ್ ಇದ್ದುದರಿಂದ ನಮಗೆ ಆರ್ಥಿಕವಾಗಿ ನಷ್ಟವಾಗಲಿಲ್ಲ. ೨ನೆಯ ಇನ್ಸಾಟ್-೧ರ ಉಡಾವಣೆಯ ನಂತರ ಇಡೀ ದೇಶದಲ್ಲಿ ಒಂದು ರೀತಿಯ ಆಂದೋಳನವೇ ಆರಂಭವಾಯಿತು. ದಿನಕ್ಕೊಂದರಂತೆ ಹೊಸ ದೂರದರ್ಶನ ಕೇಂದ್ರಗಳು ಆರಂಭವಾದುವು.

**ಹೊ :** ಹಾಗಾದರೆ ಇಂದು ಇಡೀ ದೇಶದ ದೂರಸಂಪರ್ಕ ನಮ್ಮ ಉಪಗ್ರಹಗಳ ಸಹಾಯದಿಂದಲೇ ನಡೆಯುತ್ತಿದೆ ಎನ್ನಬಹುದೆ ?

**ಯು. ಆರ್. ರಾವ್ :** ಅಷ್ಟೇ ಅಲ್ಲ, ಇನ್ಸಾಟ್-೨ರ ನಂತರ ನಾವು ಇತರ ಕೆಲವು ದೇಶಗಳಿಗೂ ಈ ಸೌಲಭ್ಯವನ್ನು ಒದಗಿಸುವಷ್ಟು ಸಮರ್ಥರಾಗಿದ್ದೇವೆ. ೬೦ಕ್ಕೂ ಮಿಕ್ಕಿ ಚಾನಲ್‌ಗಳು ಇದರಿಂದ ದೊರೆಯುತ್ತವೆ.

**ಹೊ :** ಗ್ರಾಮೀಣ ಪ್ರದೇಶಗಳ ದೂರಸಂಪರ್ಕ ವ್ಯವಸ್ಥೆಯ ಬಗ್ಗೆ ಏನು ಹೇಳುತ್ತೀರಿ ?

**ಯು. ಆರ್. ರಾವ್ :** ಗ್ರಾಮೀಣ ಪ್ರದೇಶಗಳ ಸಂಪರ್ಕವೆಲ್ಲ ಭೂಮಿಯಲ್ಲೇ ಸ್ಥಾಪಿತವಾದ ಸಂಪರ್ಕಜಾಲದಿಂದಲೇ ನಡೆಯುತ್ತದೆ.

**ಹೊ :** ಅಂದರೆ ನಮಗೆ ಉಪಗ್ರಹದ ಮೂಲಕ ಆ ಸಂಪರ್ಕವನ್ನು ನಿಭಾಯಿಸಲು ಸಾಧ್ಯವಿದೆ – ಆದರೆ ನಾವು ಭೂಸ್ಥಾಪಿತ ವ್ಯವಸ್ಥೆಯನ್ನೇ ಉಪಯೋಗಿಸಿಕೊಳ್ಳುತ್ತಿದ್ದೇವೆ ಎಂದೇ ?

**ಯು. ಆರ್. ರಾವ್ :** ಹೌದು. ಮತ್ತೊಂದು ವಿಷಯ – ಇದಕ್ಕಾಗಿ ಸುಮಾರು ೮೦,೦೦೦ ವಿ-ಸ್ಯಾಟ್‌ಗಳು ನಮ್ಮ ದೇಶದಲ್ಲಿ ಕೆಲಸ ಮಾಡುತ್ತಿವೆ.






**ಹೊ :** ಸರ್ಕಾರದ ಸ್ತರದಲ್ಲಿ ಬ್ಯಾಂಡ್ ವಿಡ್ತ್‌ನ ಬಗ್ಗೆ ನಡೆಯುತ್ತಿರು ಚರ್ಚೆಯೇನು ?

**ಯು. ಆರ್. ರಾವ್ :** ತಂತ್ರಜ್ಞಾನವನ್ನವಲಂಬಿಸಿರುತ್ತದೆ. ನೋಡಿ, ನಾ C Band (Communicationಗಾಗಿ)ನಿಂದ S Band (TVಗಾಗಿ) ಹಾಗ TU Bandಗಳಿಗೆ ಬಂದಿದ್ದೇವೆ. ಇವೆಲ್ಲವೂ ಅಂತರರಾಷ್ಟ್ರೀಯ ಸ್ತರದಲ್ಲಿ ನಾ ಅವಶ್ಯಕತೆಗನುಗುಣವಾಗಿ ನಿಶ್ಚಯಿಸಲ್ಪಡುತ್ತವೆ. ಬಹು ಶೀಘ್ರವೇ ನಾವು Ky Band ಹೋಗಲಿದ್ದೇವೆ.

**ಹೊ :** ಅಂದರೆ ನಮ್ಮ ಸಂಪರ್ಕವ್ಯವಸ್ಥೆಯ ವಿಕಾಸ ತಂತ್ರಜ್ಞಾನ ಕೊರತೆಯಿಂದ ಹಿಂದುಳಿದಿಲ್ಲ ಎಂದಾಯಿತು.

**ಯು. ಆರ್. ರಾವ್ :** ನೋಡಿ, ಪ್ರಪಂಚದಲ್ಲಿ ಇನ್ನೂ ಯಾರೂ Ky Ban ಸ್ತರಕ್ಕೆ ಹೋಗಿಲ್ಲ, ಆದರೆ ನಾವು ಪ್ರಪಂಚದ ಉಳಿದ ಮುಂದುವರೆದ ದೇಶಗಳ ಸರಿಸಮಾನರಾಗಿಯೇ ಇದ್ದೇವೆ. ನಮ್ಮ ಉಪಗ್ರಹಗಳ ಕೊಡುಗೆಯೇ ಇದಕ್ಕೆ ಕಾರಣ Ky Band ಗಿಂತಲೂ ಹೆಚ್ಚು ಕ್ಷಮತೆಯಿರುವ Band ಮುಂದೆ ಬರಲಿದೆ.

**ಹೊ :** ಭೂಮಿಯಲ್ಲೇ ಬಳಸುವ ಉಪಕರಣಗಳನ್ನು ನಾವು ಆಮದ ಮಾಡಿಕೊಳ್ಳಬೇಕೆ ? ಇಲ್ಲಿಯೇ ತಯಾರುಮಾಡಲು ಸಾಧ್ಯವಿಲ್ಲವೆ ?

**ಯು. ಆರ್. ರಾವ್ :** ಈ ನಿರ್ಣಯವನ್ನು ದೂರಸಂಪರ್ಕ ಇಲಾ ತೆಗೆದುಕೊಳ್ಳಬೇಕಾಗುತ್ತದೆ. ಅದರ ಬಗ್ಗೆ ಒಂದು ಹಂತದ ನಂತರ ಬಾಹ್ಯಾಕಾ ಇಲಾಖೆ ಮಧ್ಯಪ್ರವೇಶ ಮಾಡುವುದಿಲ್ಲ. ಉದಾಹರಣೆಗೆ, ಹೆಚ್‌ಸಿಎಲ್ ಮುಂತಾ ನಮ್ಮ ಎಲ್ಲ V Sat ತಯಾರಕರು ತಾವೇ ತಯಾರಿಸದೆ ಹೊರಗಿನಿಂದ ಕೊಳ್ಳುತ್ತಿದ್ದಾ – ಇಸ್ರೇಲ್ ಮುಂತಾದ ದೇಶಗಳಿಂದ. ಇದು ಅಷ್ಟು ಒಳ್ಳೆಯ ಬೆಳವಣಿಗೆಯಲ ತಾತ್ಕಾಲಿಕವಾಗಿ ಇದು ಸರಿಯೆನಿಸಿದರೂ, ದೂರದೃಷ್ಟಿಯ ಅಭಾವ ಕಾಣುತ್ತದ ಉದಾಹರಣೆಗೆ, ಈಗ ನಮ್ಮ ದೇಶದಲ್ಲಿ ೨೫ ಕೋಟಿ ಮೊಬೈಲ್ ಫೋನ್‌ಗಳಿವ ಒಂದು ಕಾಲದಲ್ಲಿ ಕೇವಲ ಎರಡೂವರೆ ಲಕ್ಷ ಫೋನ್‌ಗಳಿದ್ದವು. ಕೇವಲ ೪-ವರ್ಷಗಳಲ್ಲಿ ಪರಿಸ್ಥಿತಿ ಹೇಳಲಾರದಷ್ಟು ಬದಲಾಯಿಸಿದೆ. ಅದು ಹಾಗಿರಲಿ ಉಪಗ್ರಹಗಳ ವಿಷಯಕ್ಕೆ ಹಿಂತಿರುಗೋಣ.

**ಹೊ :** ಬಾಹ್ಯಾಕಾಶ ವಿಭಾಗವೇ ಒಂದು ಖರ್ಚಿನ ಬಾಬ್ತು, ಬಿಳಿಯಾ ಯಂತಹದ್ದು; ಈ ವಿಭಾಗದಿಂದ ಸಮಾಜಕ್ಕೆ ಉಪಯೋಗವಾದರೂ ಏನು ಎಂ ಟೀಕೆ ಕೆಲವೊಮ್ಮೆ ಬಂದಿದೆ. ಅದನ್ನು ಈಗ ಒಂದು ಉದ್ಯಮದಂತೆ – ಎಂದ ಲಾಭ-ನಷ್ಟಗಳನ್ನು ಗಮನದಲ್ಲಿಟ್ಟುಕೊಂಡು ನಡೆಸುತ್ತಿದ್ದೀರಾ ? ಈ ವಿಭಾಗದಿಂ ಏನಾದರೂ ದೇಶಕ್ಕೆ ವರಮಾನವಿದೆಯೆ ? ಈ ವಿಭಾಗವು ತನ್ನ ವರಮಾನದಿಂ ತನ್ನನ್ನು ಭರಿಸುತ್ತಾ, ದೇಶಕ್ಕೂ ವರಮಾನವನ್ನು ತರಬಲ್ಲುದೆ ?

**ಯು. ಆರ್. ರಾವ್ :** ಈಗ ನಾವು ಉಪಗ್ರಹಗಳನ್ನು ತಯಾರುಮಾ ದೂರಸಂಪರ್ಕ, ದೂರದರ್ಶನ ಮತ್ತಿತರ ರಾಷ್ಟ್ರೀಯ ಉದ್ದೇಶಗಳಿಗಾ ಕೊಟ್ಟಿದ್ದೇವೆ. ಇವನ್ನು ಇತರ ದೇಶಗಳಿಂದ ಕೊಂಡಿದ್ದರೆ ತೆರಬೇಕಾಗುತ್ತಿದ್ದ ಹ ಅಪಾರ. ಒಂದು ವಿಭಾಗದಿಂದ ಬಂದ ವರಮಾನವು ಮತ್ತಾವುದೋ ಕ್ಷೇತ್ರದ ವ್ಯಯಿಸಲ್ಪಡುತ್ತದೆ, ಅಷ್ಟೆ. ಈ ಅರ್ಥದಲ್ಲಿ ನಮ್ಮ ವಿಭಾಗವು ಸ್ವಯಂ ನಿರ್ಭರವೇ ಬಿಳಿಯಾನೆಯಲ್ಲ. ಡಾ॥ ಶಂಕರ್ ಇದರ ಬಗ್ಗೆ ಅಧ್ಯಯನ ನಡೆಸಿ ಬಾಹ್ಯಾಕಾ ವಿಭಾಗದಿಂದ ದೇಶಕ್ಕೆ ಎಷ್ಟು ವರಮಾನವಿದೆ ಎಂಬುದನ್ನು ತೋರಿಸಿಕೊಟ್ಟಿದ್ದಾರ ದೂರಸಂವೇದಿ ವಿಭಾಗದ ಖರ್ಚನ್ನು ಅದರ ಕಾರ್ಯಕ್ರಮಗಳಿಂದ ರೈತರಿ ಅಪಾರ ಅನುಕೂಲಗಳಾಗುತ್ತಿವೆಯೆಂಬ ಕಾರಣದಿಂದ, ಅವರಿಂದ ವಸೂಲ ಮಾಡಲಾಗುತ್ತದೆಯೆ ? ನಮ್ಮ ದೂರಸಂವೇದಿ ವಿಭಾಗದಿಂದ ಕೊಡುತ್ತಿರುವ ಸೌಲಭ್ಯಗಳಿಂದ ಹಲವಾರು ದೇಶಗಳಿಂದ ನಮಗೆ ಸಾಕಷ್ಟು ವರಮಾನ ಬರುತ್ತಿದೆ ಈ ವರುಷದ ಲಾಭವೇ ೨೦೦ ಮಿಲಿಯ ಡಾಲರುಗಳಷ್ಟಿದೆ.

**ಹೊ :** ನೀವು ಅವರಿಗಾಗಿ ಏನೆಲ್ಲಾ ಮಾಡುತ್ತೀರಿ ? ಭೂಪಟ ಇತ್ಯಾದಿ ?

**ಯು. ಆರ್. ರಾವ್ :** ಹಾಗಲ್ಲ, ನಾವು ಅವರಿಗೆ ನಮ್ಮ ಉಪಗ್ರಹಗಳಿಂದ ನೇರವಾಗಿ ಮಾಹಿತಿ ಸ್ವೀಕರಿಸುವ ಪರವಾನಗಿಯನ್ನು ಕೊಡುತ್ತೇವೆ. ಮಾಹಿತಿಯನ್ನು ಅವರು ಹೇಗಾದರೂ ಉಪಯೋಗಿಸಿಕೊಳ್ಳಬಹುದು. ಈಗ ೧೦ ಹೊರ ದೇಶಗಳು ನಮ್ಮ ಉಪಗ್ರಹಗಳಿಂದ ಮಾಹಿತಿ ಪಡೆಯುತ್ತಿವೆ. ನಿ ಹೇಳಬೇಕೆಂದರೆ ಅಮೆರಿಕಾ ಈ ಮಾಹಿತಿಯನ್ನು ನಮ್ಮಿಂದ ಪಡೆದುಕೊಂಡ ಮೊದಲ ದೇಶ ! ರಾಜೀವ್ ಗಾಂಧಿಯವರು ಕೇಳಿದಾಗ ನಾನು ಅದನ್ನೇ ಹೇಳಿದ್ದೆ: ನಾವ

ರರಾಷ್ಟ್ರೀಯ ಸ್ತರದಲ್ಲಿ ಹೆಸರು ಮಾಡಬೇಕಾದರೆ ಮಾಯನ್ಮಾರ್, ಪಾಕಿಸ್ತಾನ ದಿ ದೇಶಗಳಿಗೆ ಮಾಹಿತಿ ಕೊಟ್ಟರೆ ಸಾಲದು. ನಮ್ಮ ಸೌಲಭ್ಯಗಳನ್ನು ರಿಕಾದಂತಹ ಅಭಿವೃದ್ಧಿಗೊಂಡ ದೇಶಗಳು ಬೆಲೆಕೊಟ್ಟು ಕೊಂಡಾಗಲೇ ನಮ್ಮ ದ ಅರಿವು ಇಡೀ ಪ್ರಪಂಚಕ್ಕೆ ಉಂಟಾಗುತ್ತದೆ, ಎಂದು.

**ಹೊ** : ಮಿಲಿಟರಿ ದೃಷ್ಟಿಯಿಂದ ದೂರಸಂವೇದೀ ತಂತ್ರಜ್ಞಾನ ಅಪಾಯಕಾರಿಯೆ ?

**ಯು. ಆರ್. ರಾವ್** : ಹಲವು ದೇಶದ ಮಿಲಿಟರಿಯವರು ನಮ್ಮ ಉಪಗ್ರಹಗಳ ಲಕ ದೊರೆತ ಮಾಹಿತಿಯನ್ನು ಉಪಯೋಗಿಸಿಕೊಂಡಿದ್ದಾರೆ.

**ಹೊ** : ಅಂದರೆ, ದೇಶ-ದೇಶಗಳ ನಡುವೆ ಯಾವ ರಹಸ್ಯವೂ ಇಲ್ಲವೆಂದಂತಾ ಲ್ಲ. ಎಲ್ಲ ದೇಶಗಳ ರಹಸ್ಯಗಳೂ ಎಲ್ಲರಿಗೂ ತಿಳಿಯುತ್ತವೆ !

**ಯು. ಆರ್. ರಾವ್** : ಆ ದೃಷ್ಟಿಯಿಂದ ಯಾವ ದೇಶವೂ ಯಾವ ರಹಸ್ಯವನ್ನೂ ಸಿಕೊಳ್ಳಲಾಗುವುದಿಲ್ಲ. ಆದರೆ ಯಾವ ದೇಶವಾದರೂ, ಅನೇಕ ವಿಷಯಗಳನ್ನು ಂತೆ ಮರೆಮಾಚಬಹುದು. ಈಗಿನ ಪರಿಸ್ಥಿತಿಯಲ್ಲಿ ಉಪಗ್ರಹಗಳ ಕ್ಷಮತೆ ನೆಯೆಂದರೆ ೭೦೦ ಕಿಲೋಮೀಟರ್‌ಗಳ ದೂರದಿಂದ ೦.೮ ಮೀಟರ್‌ಗಳಷ್ಟು ದಿಂದ ಹಿಡಿದಷ್ಟು ಸ್ಪಷ್ಟವಾದ ಮಾಹಿತಿಯೊಂದಿಗೆ ಛಾಯಾಚಿತ್ರ ತೆಗೆಯ ದು. ಭಾಸ್ಕರ ಉಪಗ್ರಹವು ಒಂದು ಕಿಲೋಮೀಟರ್‌ನಷ್ಟು ದೂರದಿಂದ ತೆಗೆದ ಯಾಚಿತ್ರದ ಸ್ಪಷ್ಟತೆಯ ಇಮೇಜ್‌ಗಳನ್ನು ಕೊಡುತ್ತಿತ್ತು. ಅದು ಒಂದು ಯೋಗಿಕ ಉಪಗ್ರಹ. ನಮ್ಮ ಉಪಗ್ರಹಗಳು ಕೊಡುವ ಚಿತ್ರಗಳ ಗುಣವು ಗಳೊಳಗಿರುವ ಕ್ಯಾಮೆರಾದ ಕ್ಷಮತೆಗೆ ಅನುಗುಣವಾಗಿರುತ್ತದೆ. ಅರಣ್ಯ, ಕೃಷಿ ದಿ ಕ್ಷೇತ್ರಗಳಲ್ಲಿ ಅನೇಕ ಮಾಹಿತಿಗಳು ದೊರೆಯುತ್ತವೆ. ಉದಾಹರಣೆಗೆ, ಒಂದು ಭಾಗದಲ್ಲಿರುವ ಕಾಡು ಎಷ್ಟು ದಟ್ಟವಾಗಿದೆ, ಅದರಲ್ಲಿರುವ ಮರಗಳ, ಇತರ ಗಳ ವಿವರಗಳೇನು, ಇತ್ಯಾದಿ. ವ್ಯವಸಾಯ ಕ್ಷೇತ್ರದ ಅನೇಕ ವಿವರಗಳೂ ಲಬ್ಧವಾಗುತ್ತಿವೆ: ಸಾಗುವಳಿಯಾಗಿರುವ ವಿಸ್ತೀರ್ಣ, ಫಸಲಿನ ವಿವರಗಳು, ಲಿನ ಗುಣ ಇತ್ಯಾದಿ. ಒಮ್ಮೆ ನಾವು ಈ ದೂರಸಂವೇದಿ ಕ್ಯಾಮೆರಾವನ್ನು ಕಾಪ್ಟರಿನಲ್ಲಿ ತೆಗೆದುಕೊಂಡು ಹೋಗಿ, ಕೇರಳ, ಮಂಡ್ಯ, ಪಾಟಿಯಾಲ ತಾದ ಸ್ಥಳಗಳಲ್ಲಿ ಪರೀಕ್ಷಿಸಿದೆವು. ಕೇರಳದ ತೆಂಗಿನ ಮರಗಳು ಗಗ್ರಸ್ತವಾಗಿದ್ದರೆ ನಸುಗೆಂಪಾಗಿ, ಸ್ವಸ್ಥವಾಗಿದ್ದರೆ ಇನ್ನೂ ಹೆಚ್ಚು ನಸುಗೆಂಪಾಗಿ ುತ್ತವೆ. ಈ ವಿವರಗಳೊಡನೆ ನಾವು ಒಮ್ಮೆ ಮಾಜಿ ಪ್ರಧಾನಿ ಶ್ರೀಮತಿ ಇಂದಿರಾ ಧಿಯವರಿಗೆ ಹೇಳಿದ್ದೆವು: ''ನೋಡಿ, ನಮ್ಮ ರೈತರಿಗೇ ತಿಳಿಯದೆ ೀಗಬಹುದಾದ ಅನೇಕ ಬೆಳವಣಿಗೆಗಳನ್ನು ನಾವು ಈ ಮೂಲಕ ನಾಲ್ಕು ಷಗಳ ಮುಂಚಿತವಾಗಿಯೇ ಹೇಳಬಲ್ಲೆವು,'' ಎಂದು.

**ಹೊ** : ಈ ವಿವರಗಳೆಲ್ಲವೂ ಈಗ ಅವಶ್ಯಕತೆಯಿರುವ ಜನರಿಗೆ ತಕ್ಷಣ ಪುತ್ತಿವೆಯೆ ?

**ಯು. ಆರ್. ರಾವ್** : ಹೌದು, ಈ ವಿವರಗಳು ಲಕ್ನೋ ಮತ್ತು ಹೈದರಾಬಾದು ಗಳಲ್ಲಿ ಉಪಲಬ್ಧವಿವೆ.

**ಹೊ** : ಈ ಚಿತ್ರಗಳ ಮೂಲಕ ಎಷ್ಟು ಆಳದವರೆಗೆ ಭೂಮಿಯ ವಿವರಗಳು ಯುತ್ತವೆ ?

**ಯು. ಆರ್. ರಾವ್** : ಸರೋವರ-ನದಿ ಇತ್ಯಾದಿಗಳಲ್ಲಿರುವ ನೀರು ಎಂತಹ ಹೊಂದಿದೆ – ಚೆನ್ನಾಗಿದೆಯೇ ಇಲ್ಲವೇ ಎಂದು ತಿಳಿಯಬಹುದು. ಅದರ ಆಳ ಬುದೆ ಇರಬಹುದು, ಅಲ್ಲದೆ ಅಪಾರವಾದ ಖನಿಜಗಳ ಪ್ರಮಾಣವೂ ಯುತ್ತದೆ; ಆದರೆ ಈ ಉದ್ದೇಶಕ್ಕಾಗಿ ವಿಮಾನಗಳನ್ನು ಉಪಯೋಗಿಸುವುದೇ ಮ. ಏಕೆಂದರೆ ವಿಮಾನಗಳು ಅಡ್ಡಾದಿಡ್ಡಿಯಾಗಿ ಹಾರಾಡಬಲ್ಲವು ಮತ್ತು ೩೦೦ ಟರ್‌ಗಳಷ್ಟು ಸಮೀಪದಿಂದ ವಿವರಗಳನ್ನು ತಿಳಿಯಬಹುದು.

**ಹೊ** : ಆಪತ್ತುಗಳ ಮುನ್ಸೂಚನೆಗೂ ಇದನ್ನು ಉಪಯೋಗಿಸಬಹುದೆನ್ನುತ್ತಾರೆ.

**ಯು. ಆರ್. ರಾವ್** : ಉದಾಹರಣೆಗೆ, ಸೈಕ್ಲೋನ್‌ಅನ್ನು ಬೆನ್ನಟ್ಟಿಹೋಗ ದು. ಇದರಿಂದ ಚಂಡಮಾರುತ ಮುಂದೆಲ್ಲಿ ಹೋಗುತ್ತದೆ ಎಂಬುದನ್ನು ಬಹುದು. ಆದರೂ ಕೆಲವು ಬಾರಿ ಪ್ರಕೃತಿಯು ಅದಕ್ಕಿಂತ ವೇಗವಾಗಿ ುತ್ತದೆ. ಚಂಡಮಾರುತವನ್ನು ಪೂರ್ತಿಯಾಗಿ ಬೆನ್ನಟ್ಟಲಾರದೆ ಹೋದರೂ, ರ್ವಾನುಭವಗಳಿಂದ ಎತ್ತ, ಎಷ್ಟು ವೇಗದಿಂದ ಅದು ಚಲಿಸಬಹುದು ುದನ್ನು ಅಂದಾಜು ಮಾಡಬಹುದು.

**ಹೊ** : ಪ್ರಕೃತಿಯ ವಿಕೋಪಗಳ ಪರಿಣಾಮವಾಗಿ ಆಗುವ ಹಲವಾರು ಅಪಘಾತಗಳು ತಂತ್ರಜ್ಞಾನದ ಅಭಾವದಿಂದಲ್ಲ ಎನ್ನಬಹುದೆ ?

**ಯು. ಆರ್. ರಾವ್** : ಈ ಅಪಘಾತಗಳನ್ನು ಮುಂಚಿತವಾಗಿಯೇ ಅರಿತು ಕೊಳ್ಳುವ ಕ್ಷಮತೆಯಿರುವ ಸುಮಾರು ೪೦೦ ಉಪಕರಣಗಳು ನಮ್ಮ ದೇಶದಲ್ಲಿವೆ. ಇವು ಮುಂಜಾಗ್ರತೆಯ ಸೈರನ್‌ಗಳನ್ನಾಗಲಿ ಇತರ ಸೂಚನೆಗಳನ್ನಾಗಲಿ ಕೊಡಬಲ್ಲವು.

**ಹೊ** : ಇಷ್ಟೊಂದು ಮುಂಜಾಗ್ರತಾ ಕ್ರಮಗಳಿದ್ದರೂ ಅಪಘಾತಗಳಾಗುವುದೇಕೆ ?

**ಯು. ಆರ್. ರಾವ್** : ಈ ಉಪಕರಣಗಳನ್ನು ಸರಿಯಾದ ರೀತಿಯಲ್ಲಿ ಇಡದೆ ಉಪೇಕ್ಷಿಸುವುದರಿಂದ ಹಾಗೆ ಆಗುವುದುಂಟು. ಇತ್ತೀಚೆಗೆ ಒರಿಸ್ಸಾದಲ್ಲಿ ಉಪಕರಣ ದಿಂದ ಮುನ್ಸೂಚನೆ ಏಕೆ ಬರಲಿಲ್ಲ ಎಂದು ಗಮನಿಸಿದಾಗ, ಅದರ ಪ್ಲಗ್ಗನ್ನೇ ತೆಗೆದು ಬಿಟ್ಟಿದ್ದುದು ಕಂಡುಬಂದಿತು ! ಇದಕ್ಕೆ ಉಪಕರಣವನ್ನು ದೂಷಿಸುವುದು ಸರಿಯೆ ?

**ಹೊ** : ಹೌದು, ಅನೇಕ ಕಡೆ ಹೀಗಾಗುತ್ತದೆ. ದೂರಸಂಪರ್ಕ ಇಲಾಖೆಯಲ್ಲೂ ಹೀಗೆಯೇ ಆಗುತ್ತದೆ. ಅದು ಸರಿ, ಮೀನುಗಾರಿಕೆ ಮತ್ತು ಬಂಜರು ಭೂಮಿಗಳ ಬಗ್ಗೆ ಏನು ಮಾಡಬಹುದು ?



**ಯು. ಆರ್. ರಾವ್** : ದೂರಸಂವೇದಿಯಲ್ಲಿ ಇವುಗಳನ್ನೆಲ್ಲ ತಿಳಿಯಲು ನಮ್ಮದೇ ಆದ ಕುರುಹುಗಳಿವೆ. ಹಲವು ರೀತಿಯ ಭೂಜಲ, ಹಲವಾರು ರೀತಿಯ ಬೆಳೆ-ಫಸಲುಗಳು, ದುರ್ಭಿಕ್ಷ, ಸುಭಿಕ್ಷ – ಮುಂತಾದ ವಿವರಗಳನ್ನು ಸಸ್ಯರಾಶಿಯ ಸೂಚಕಗಳ ಮೂಲಕ ತಿಳಿಯಬಹುದು. ಈ ಸೂಚಕಪಟ್ಟಿ ಬರ ಬರಲಿದೆಯೇ, ಈಗಾಗಲೇ ಬಂದಿದೆಯೇ, ಬಂದಿದ್ದರೆ ಅದರ ತೀಕ್ಷ್ಣತೆ ಎಷ್ಟು, ಇದು ಎಷ್ಟು ಶೀಘ್ರವಾಗಿ ಇತರ ಪ್ರದೇಶಗಳಿಗೆ ಹರಡಲಿದೆ – ಎಂಬೆಲ್ಲ ವಿವರಗಳನ್ನು ತಿಳಿಸಿಕೊಡಬಲ್ಲುದು.

**ಹೊ** : ಇಷ್ಟೆಲ್ಲ ಮುಂಜಾಗ್ರತೆ ಮಾಹಿತಿ ಸೌಕರ್ಯವಿದ್ದರೂ ನಮ್ಮ ದೇಶದಲ್ಲಿ ಹಲವಾರು ಪ್ರಾಂತ್ಯಗಳು ದುರ್ಭಿಕ್ಷದಿಂದ ಬಳಲುತ್ತವೆಯಲ್ಲ?

**ಯು. ಆರ್. ರಾವ್** : ನೋಡಿ, ಮಾಹಿತಿಯನ್ನು ಒದಗಿಸುವುದು ನಮ್ಮ ಕರ್ತವ್ಯ. ಅದನ್ನು ಉಪಯೋಗಿಸಿಕೊಂಡು ಭವಿಷ್ಯದ ಒಳಿತಿಗಾಗಿ ಪರಿಶ್ರಮಿಸುವುದು ಸರ್ಕಾರದ ಹಲವಾರು ವಿಭಾಗಗಳಿಗೆ ಸೇರಿದ್ದು.

**ಹೊ** : ಬೇರೆ ಪ್ರಶ್ನೆಗೆ ಬರುವುದಾದರೆ, ವೈಜ್ಞಾನಿಕ-ತಾಂತ್ರಿಕ ಬೆಳವಣಿಗೆಯು ಸಾಮಾಜಿಕ ಸಮಸ್ಯೆಗಳ ಪರಿಹಾರಗಳನ್ನು ಒದಗಿಸುವಂತಾಗಬೇಕಲ್ಲವೆ ?

**ಯು. ಆರ್. ರಾವ್** : ಹೌದು. ಉದಾಹರಣೆಗೆ, ರೈತರ ಉತ್ಪಾದನಾ ಸಾಮರ್ಥ್ಯ. ನಮ್ಮ ದೇಶದ ಆಹಾರೋತ್ಪಾದನೆ ದಕ್ಷಿಣ ಆಫ್ರಿಕಾದಷ್ಟು ಕೆಳಮಟ್ಟದಲ್ಲಿ ಇಲ್ಲದಿದ್ದರೂ, ಪ್ರಪಂಚದ ಅತಿ ಕೆಳಮಟ್ಟದವುಗಳಲ್ಲೊಂದಾಗಿದೆ. ದಕ್ಷಿಣ ಆಫ್ರಿಕಾದ ಉತ್ಪಾದನೆ ಪ್ರತಿ ಹೆಕ್ಟೇರಿಗೆ ೧.೧ ಟನ್. ಹಾಗೆಯೇ ಜಾರ್ಖಂಡ್‌ನಲ್ಲೂ ಉತ್ಪಾದನೆ ಅಷ್ಟೇ ಇದೆ. ನಮ್ಮ ಇಡೀ ದೇಶದ ಸರಾಸರಿ ಉತ್ಪಾದನೆ ಕೇವಲ ೧.೭ ಟನ್. ಅದೇ ಪ್ರಪಂಚದ ಸರಾಸರಿ ಆಹಾರೋತ್ಪಾದನೆ ೨.೭ ಟನ್. ಇಡೀ ಪ್ರಪಂಚದ ಕೃಷಿಗೊಳಪಟ್ಟ ಭೂಮಿಯಲ್ಲಿ ಶೇಕಡ ೨೫ ನಮ್ಮ ಭಾರತದಲ್ಲೇ ಇದೆ (೨೭೫ ಮಿಲಿಯನ್ ಹೆಕ್ಟೇರಿನಲ್ಲಿ ೫೫ ಮಿಲಿಯನ್ ಹೆಕ್ಟೇರ್). ಆದರೂ ಕೃಷಿಗೊಳಪಟ್ಟ ಭೂಮಿಯಲ್ಲಿ ನಮ್ಮ ಉತ್ಪಾದನೆಯು ಕೇವಲ ೨.೫ ಟನ್‌ಗಳಷ್ಟು. ಇದು ಸುಮಾರು ೪ ಮತ್ತು ೪.೫ ಟನ್‌ಗಳಷ್ಟಿರಬೇಕು. ಇಲ್ಲಿ

ವಾಸ್ತವವಾಗಿ ಆಗುವುದೇನೆಂದರೆ, ಮೊದಲ ಕೆಲವು ವರ್ಷಗಳು ಉತ್ಪಾದನೆ ಚೆನ್ನಾಗಿರುತ್ತದೆ. ನಂತರ ಹಲವಾರು ಕಾರಣಗಳಿಂದ, ಎಂದರೆ, ಕೃತಕ ಗೊಬ್ಬರಗಳ ಅತಿ ಉಪಯೋಗದಿಂದ, ನೀರಾವರಿ ಸರಿಯಾಗಿರದೆ ಇರುವುದರಿಂದ ಹಾಗೂ ಇನ್ನೂ ಹಲವಾರು ಕಾರಣಗಳಿಂದ ನಮ್ಮ ಭೂಮಿಯ ಗುಣಮಟ್ಟ ಕ್ಷೀಣಿಸುತ್ತದೆ. 'ಹಸಿರು ಕ್ರಾಂತಿ' ಇತ್ಯಾದಿ ಕ್ರಾಂತಿಗಳು ನಡೆದಿದ್ದರೂ ನಮ್ಮ ಆಹಾರೋತ್ಪಾದಕತೆ ಕೆಳಮಟ್ಟದಲ್ಲಿದೆ. ಗೋಧಿಯ ಉತ್ಪಾದನೆ ಆಗಬಹುದಾದ ಪ್ರಮಾಣಕ್ಕೆ ಶೇಕಡ ೪೦ರಷ್ಟೂ, ಭತ್ತದ ಉತ್ಪಾದನೆ ಶೇಕಡ ೫೦ರಷ್ಟೂ ಇರುವುದು ಏನು ಸೂಚಿಸುತ್ತದೆ ?

**ಹೊ :** ಕೃತಕ ಗೊಬ್ಬರ ಇತ್ಯಾದಿಗಳ ಉಪಯೋಗದಿಂದ ಈ ಪ್ರಮಾಣ ಕಡಿಮೆಯಾಗುತ್ತಲೇ ಬಂದಿದೆಯೆ ?

**ಯು. ಆರ್. ರಾವ್ :** ಜಿಪ್ಸಮ್‌ನ ಬಳಕೆಯಿಂದ ಇದನ್ನೆಲ್ಲಾ ಸರಿಪಡಿಸಬಹುದು ಎನ್ನಲಾಗಿದೆ. ಅದರ ಬಳಕೆಯಿಂದ ಉತ್ಪಾದನೆ ಸ್ವಲ್ಪಮಟ್ಟಿಗೆ ಹೆಚ್ಚಲೂಬಹುದು. ಆದರೆ ಇದು ತುಂಬ ದುಬಾರಿ. ಇದನ್ನು ನಮ್ಮ ಬಡ ರೈತರು ಹೇಗೆ ಮಾಡಬಲ್ಲರು ? ಅಲ್ಲದೆ ಉಪಯೋಗದ ವಿಧಾನ ಕೂಡ ಬಹಳ ಹಳೆಯದು.

**ಹೊ :** ಇದನ್ನು ಒಂದೆರಡು ಎಕರೆಗಳಿಗಾದರೆ ಮಾತ್ರ ಮಾಡಬಹುದೇ ವಿನಾ ಲಕ್ಷಾಂತರ ಎಕರೆಗಳಿರುವ ನಮ್ಮ ದೇಶದಲ್ಲಿ ಮಾಡಲು ಸಾಧ್ಯವಿಲ್ಲ. ಅಂದರೆ, ಇದು ಪ್ರಾಯೋಗಿಕವಾಗಿ ಅಳವಡಿಸಿಕೊಳ್ಳಬಹುದಾದ ವಿಧಾನವೇ ಆಗಿದೆ. ನಮ್ಮ ದೇಶದಲ್ಲಿ ಅದರ ಅವಶ್ಯಕತೆ ಇಲ್ಲ ಎನ್ನುತ್ತೀರಾ ?

**ಯು. ಆರ್. ರಾವ್ :** ಹೌದು, ಖಂಡಿತವಾಗಿ ಇದೆ. ನಾವು ರೈತರಿಗೆ ಸಲಹೆ, ಮಾರ್ಗದರ್ಶನ, ಮಾಹಿತಿಗಳನ್ನು ಕೊಡಬಹುದು. ಸಂರಕ್ಷಣಾ ರೀತಿಯ ವಿಧಾನಗಳನ್ನು ಅಳವಡಿಸಿಕೊಳ್ಳದಿದ್ದರೆ ಅಪಾಯ ಎಂದು ಎಚ್ಚರಿಸಬಹುದು. ಬೆಳೆಗಳನ್ನು ಆಗಾಗ್ಗೆ ಬದಲಾಯಿಸುವುದು ಕೂಡ ಒಂದು ಉಪಯುಕ್ತ ವಿಧಾನ. ಅಮೆರಿಕಾದಲ್ಲಿ "ಕರಾರುವಾಕ್ಕು ಕೃಷಿ ರೀತಿ" ಎಂದು ಕರೆಯುವ ವಿಧಾನದಲ್ಲಿ ಗೊಬ್ಬರದ ಬಳಕೆಯನ್ನು ಅರ್ಧದಷ್ಟು ಕಮ್ಮಿ ಮಾಡಿದ್ದಾರೆ. ಕೆಲವೆಡೆ ಮೂರನೆಯ ಒಂದರಷ್ಟು ಮಾತ್ರ ಉಪಯೋಗಿಸುತ್ತಾರೆ. ಇದರಿಂದ ಅವರ ಫಸಲಿನ ಇಳ ಎಕರೆಗೆ ೩ ಟನ್ನಿನಿಂದ ೪ ಟನ್ನಿನವರೆಗೆ, ಕೆಲವೆಡೆ ೫ ಟನ್‌ವರೆಗೆ ಏರಿದೆ.

**ಹೊ :** ಪಂಜಾಬಿನಲ್ಲಿ ಉತ್ಪಾದನೆಯು ಪ್ರತಿ ವರುಷವೂ ಕಮ್ಮಿಯಾಗು ಬರುತ್ತಿದೆ.

**ಯು. ಆರ್. ರಾವ್ :** ನೋಡಿ, ಪ್ರತಿ ಎಕರೆಗೆ ಒಂದು ಟನ್ನಿನಷ್ಟು ಉತ್ಪಾದನೆಯಾದರೂ, ನಮ್ಮ ಇಡೀ ದೇಶದ ಉತ್ಪಾದನೆ ಎಷ್ಟು ಹೆಚ್ಚಾಗ ಎಂಬುದು ನಿಮಗೇ ತಿಳಿಯುತ್ತದೆ. ನಾವು ಅತಿಯಾದ ರಸಗೊಬ್ಬರ ಬಳಕೆ ಎಚ್ಚರಿಸುತ್ತಲೇ ಇದ್ದೇವೆ. ಆದರೂ ಕಳೆದ ವರುಷ ರೈತರಿಗೆ ಮತ್ತೊಮ್ಮೆ ತೀವ್ರ ಎಚ್ಚರಿಕೆ ಕೊಡಬೇಕಾಯಿತು.

**ಹೊ :** ರಾಜಕೀಯ ಕ್ಷೇತ್ರದಿಂದ ಒತ್ತಡ ತರುವುದರಿಂದ ಪ್ರಯೋಜನ ಬಹುದೆ ?

**ಯು. ಆರ್. ರಾವ್ :** ರಾಜಕೀಯ ಕ್ಷೇತ್ರದ ಒತ್ತಡದ ಬಗ್ಗೆ ನನಗೆ ಗೊ ಆದರೆ ಮುಂಬರುವ ಅನಾಹುತವನ್ನು ತಡೆಯಲು ತೀವ್ರ ಕ್ರಮವಂತೂ ಅವ ನಮ್ಮ ರೈತರಿಗೆ ಈ ವಿಷಯದಲ್ಲಿ ಶಿಕ್ಷಣ ನೀಡಬೇಕು. ನಮ್ಮ ದೇಶದಲ್ಲಿ ಶೇ ೬೫ರಷ್ಟು ಜನಸಂಖ್ಯೆ ಕೃಷಿಯನ್ನು ಅವಲಂಬಿಸಿದೆ. ಇದು ಬದಲಾಗಬೇಕು.

**ಹೊ :** ಕರ್ನಾಟಕದಲ್ಲಿ ಒಣಭೂಮಿ ಕೃಷಿಯನ್ನು ಅಳವಡಿಸಿಕೊಳ್ಳಲಾಗಿದೆ.

**ಯು. ಆರ್. ರಾವ್ :** ಒಣಭೂಮಿ ಕೃಷಿಯಲ್ಲಿ ಇಳುವರಿ ತುಂಬ ಕಮ್ಮಿ. ಒ ಎಕರೆಗೆ ೦.೮ ಟನ್‌ನಷ್ಟು ಮಾತ್ರ.

**ಹೊ :** ಹಾಗಾದರೆ ದಾರಿಯೇನು ?

**ಯು. ಆರ್. ರಾವ್ :** ಒಣಭೂಮಿ ಕೃಷಿಗೆ ಬೀಜಗಳು ಅತ್ಯುತ್ತಮವಾಗಿರಬ ಕೃಷಿಕ್ಷೇತ್ರದಲ್ಲಿ ವಂಶತಳಿಯ ಬಗ್ಗೆ ತಿಳುವಳಿಕೆ ಸಾಲದು. ಹಸಿರು ಕ್ರಾಂತಿಯು ಒಣಭೂ ಕೃಷಿಯನ್ನು ಒಳಗೊಂಡಿರಲೇ ಇಲ್ಲ.

**ಹೊ :** ಕೃಷಿ ವಿಶ್ವವಿದ್ಯಾಲಯದವರು ಈ ಕೃಷಿಯ ಬಗ್ಗೆ ಸಾ


*Best Compliments From*



SURAKSHA

READY MIX CONCRETE

# 665, 17th Cross, 6th Phase, J. P. Nagar, Bangalore - 560 078
Tel : 080 - 2653 6991 e-mail : maheshp@mail.com

ನಾಡುತ್ತಲೇ ಇದ್ದಾರಲ್ಲಾ?
ಯು. ಆರ್. ರಾವ್ : ಕೇವಲ ಮಾತನಾಡುತ್ತಲೇ
ಸಾಕೆ? ಇದರ ಬಗ್ಗೆ ನಾನು ಪ್ರಸ್ತಾಪಿಸಿದಾಗ,
ರುವಾಕ್ಕು ಕೃಷಿ ಮಾದರಿ ಬಗ್ಗೆ ಬರೆಯಬೇಕೆಂದು
ೇ ಹೇಳಿದರು. ನಾನು ಅಮೆರಿಕಾದ ನಾರ್ತ್
ೇಟಾಗೆ ಹೋಗಿ ಎರಡು ದಿವಸವಿಡೀ ಒಬ್ಬ
ೂಡನೆಯೇ ಕಳೆದೆ. ಆತನ ಪತ್ನಿಗೂ ತುಂಬ
ರ್ಯವಾಯಿತು. ಈ ಮಾದರಿಯ ಬಗ್ಗೆ ಹೆಚ್ಚು
ವರ್ಧನೆ ನನ್ನ ಉದ್ದೇಶ ಆಗಿತ್ತು.
ಹೊ: ಹಾಗೆಂದರೆ ಏನು? ಸ್ವಲ್ಪ ವಿವರವಾಗಿ
ವಿರಾ?
ಯು. ಆರ್. ರಾವ್ : ಕರಾರುವಾಕ್ಕು ಕೃಷಿ ಎಂದರೆ,
ು ಚಿಕ್ಕ ಕ್ಷೇತ್ರವನ್ನು ತೆಗೆದುಕೊಂಡು ಸಾಗುವಳಿ
ತ್ತಿ, ಉಳಿದ ಚಿಕ್ಕ ಕ್ಷೇತ್ರಗಳ ಉತ್ಪಾದನೆಯನ್ನು
ೊಡನೆ ಹೋಲಿಸಿ ತಿಳಿದುಕೊಳ್ಳಲು ಬಾಹ್ಯಾಕಾಶ
ಜ್ಞಾನ ನೀಡುವ ಚಿತ್ರಗಳ ಉಪಯೋಗ
ಡುವುದು. ಅಮೆರಿಕಾದ ಸಾಗುವಳಿ ಕ್ಷೇತ್ರಗಳೆಲ್ಲಾ
ದೊಡ್ಡವು. ಸರಾಸರಿ ಹಿಡುವಳಿಯ ವಿಸ್ತೀರ್ಣ
ಹೆಕ್ಟೇರ್‌ಗಳಷ್ಟು. ಇದು ಒಂದು ವಿಧದಲ್ಲಿ
ಯದೇ. ಉದಾಹರಣೆಗೆ, ಪ್ರತಿ ಹೆಕ್ಟೇರ್‌ಗೂ ಎಷ್ಟು
ಧಿ ಉತ್ಪಾದನೆಯಾಯಿತೆಂಬುದನ್ನು ತಿಳಿಯುವುದು
ಯೋ ಪೊಸಿಷನಲ್ ಸಿಸ್ಟಮ್‌ನ ಸಹಾಯದಿಂದ.
ಪ್ಯೂಟರ್ ಬಳಸಿ ಪ್ರತಿ ಹೆಕ್ಟೇರಿನ ಪ್ರತಿ ಫಸಲಿನ
ಪಾದನೆಯನ್ನು ನಿಖರವಾಗಿ ತಿಳಿಯಬಹುದು.
ದೇ ಹೊಲದಲ್ಲಿ ಎಲ್ಲ ಜಾಗದಲ್ಲೂ ಫಸಲು
ಾನವಾಗಿರುವುದಿಲ್ಲ. ಅಂತರಿಕ್ಷ ಚಿತ್ರದ
ಯದಿಂದ ಕಮ್ಮಿ ಇಳುವರಿಯಿರುವ ಪ್ರದೇಶ ಮತ್ತು
ರ ಕಾರಣವನ್ನು ತಿಳಿಯಬಹುದು. ರೈತನು ಕಮ್ಮಿ
ವರಿ ಇರುವ ಕ್ಷೇತ್ರದ ಮಣ್ಣನ್ನು ವಿಶ್ವವಿದ್ಯಾಲಯಕ್ಕೆ
ದುಕೊಂಡುಹೋಗಿ, ಅದರ ಕಾರಣಗಳನ್ನು
ರ್ಸುತ್ತಾನೆ. ಯಾವ ಭಾಗದಲ್ಲಿ ಇಳುವರಿ
ಮೆಯಾಗಿದೆ ಎಂಬುದು ತಿಳಿದ ಕೂಡಲೇ ಅದರ
ವಿಚಾರಿಸಿ, ಒಡನೆಯೇ ಉತ್ಪಾದನೆ ಹೆಚ್ಚಾಗಲು
ಶ್ಯಕವಾದ ಕ್ರಮಗಳನ್ನು ಕೈಗೊಳ್ಳುತ್ತಾನೆ.
ಹೊ: ಇದು ತುಂಬ ಮುಂದುವರಿದ ತಾಂತ್ರಿಕ
ತ್ತಿ. ನಮ್ಮ ದೇಶದಲ್ಲಿ ಇದು ಆಗದೆ ಇರಲು ನಮ್ಮ
ಪನಿಗಳು ಸರಿಯಾಗಿ ಕೆಲಸ ಮಾಡುತ್ತಿಲ್ಲ – ಅಥವಾ
ತ್ರಜ್ಞಾನವು ರೈತರ ಬಳಿಗೆ ಸುಳಿಯುತ್ತಿಲ್ಲ ಎಂಬ
ಣದಿಂದಲೇ?
ಯು. ಆರ್. ರಾವ್ : ಆದರೆ ನಮ್ಮ ದೇಶದಲ್ಲಿ
ಲ್ಲೊಂದು ಮುಂದುವರೆದ ತಾಂತ್ರಿಕ ಪದ್ಧತಿಗಳೇ
ಕಿಲ್ಲ. ನಮ್ಮ ಕೃಷಿ ಕ್ಷೇತ್ರಗಳು ಚಿಕ್ಕವಾದುದರಿಂದ ಪ್ರತಿ
ಯಲ್ಲಿಯೂ, ಪ್ರತಿ ಜಮೀನನ್ನೂ ನೇರವಾಗಿ
ನಿಸಿ, ಅದಕ್ಕೆ ಉಪಯೋಗಿಸಿದ ನೀರು, ಬೀಜ,
ಬ್ಬರ ಇತ್ಯಾದಿಗಳನ್ನು ದಾಖಲಿಸಿ, ಪ್ರತಿ ಫಸಲಿಗೂ
ರಿಂದ ಬಂದ ಇಳುವರಿ ಎಷ್ಟೆಂಬುದನ್ನು ತಿಳಿದು
ಂಡು ಕಡಿಮೆ ಇಳುವರಿಯಿರುವ ಕ್ಷೇತ್ರಗಳ ಉತ್ಪಾದನೆ
ಚ್ಚು ಮಾಡಲು ಸೂಕ್ತ ಕ್ರಮಗಳನ್ನು ಕೈಗೊಳ್ಳಬಹುದು.
ಹೊ: ಒಂದು ಕಾಲದಲ್ಲಿ ನಮ್ಮಲ್ಲಿ ಕೂಡ
ಖ್ಯಾಶಾಸ್ತ್ರ ಇಲಾಖೆಯವರು ಈ ಕೆಲಸವನ್ನು ಸ್ವಲ್ಪ



ಬೇರೆ ರೀತಿಯಲ್ಲಿ ಮಾಡುತ್ತಿದ್ದರು. ಪ್ರತಿ ಹೊಲದ ಸ್ವಲ್ಪ ಫಸಲನ್ನು ತೆಗೆದುಕೊಂಡುಹೋಗಿ, ಅದರ ವಿವರಗಳನ್ನು ದಾಖಲಿಸುತ್ತಿದ್ದರು.

**ಯು. ಆರ್. ರಾವ್ :** ಇದನ್ನು ಆಣೆವಾರಿ ಪದ್ಧತಿ ಎನ್ನುತ್ತಿದ್ದರು.

**ಹೊ :** ಇದನ್ನೆಲ್ಲಾ ನಮ್ಮ ರೈತರ ಗಮನಕ್ಕೆ ತರುವುದು ಹೇಗೆ?

**ಯು. ಆರ್. ರಾವ್ :** ನೋಡಿ, ಅದೇನೂ ಅಂಥ ಕಷ್ಟದ ಕೆಲಸವಲ್ಲ. ನಮ್ಮ ರೈತನಿಗೆ ಆತನ ಜಮೀನಿನ ಉತ್ಪಾದನೆ ಎಷ್ಟು ಎಂದು ತಿಳಿದಿದೆ. ಅವನು ಹಾಕಿದ ಗೊಬ್ಬರ ಎಷ್ಟು, ನೀರು ಎಷ್ಟು ದೊರೆಯಿತು ಎಂಬ ಅಂದಾಜೂ ಇದೆ. ದೂರಸಂವೇದಿಯಿಂದ ದೊರೆತ ಛಾಯಾಚಿತ್ರಗಳನ್ನು ತೋರಿಸಿ, ಹೆಚ್ಚು ಅಥವಾ ಕಡಿಮೆ ಇಳುವರಿಯ ಕಾರಣಗಳನ್ನು ಆತನೊಡನೆ ಚರ್ಚಿಸಬಹುದು. ಅವನು ಈ ಚಿತ್ರಗಳನ್ನು ನೋಡಬೇಕಾದ ಅವಶ್ಯಕತೆಯೂ ಇಲ್ಲ. ಕೃಷಿ ವಿಶ್ವವಿದ್ಯಾಲಯದವರು ದೂರಸಂವೇದಿ ಚಿತ್ರಗಳ ಸಹಾಯದಿಂದ, ಅವನಿಗೆ ಹಲವಾರು ಸಲಹೆಗಳನ್ನು ಕೊಡಬಹುದು. ಪ್ರತಿ ೫ ವರುಷಕ್ಕೊಮ್ಮೆ ಅವನ ಭೂಮಿಯ ಮಣ್ಣನ್ನೂ ಫಸಲನ್ನೂ ಪರೀಕ್ಷಿಸಿ ಆತನ ಇಳುವರಿ ಹೆಚ್ಚಾಗುವ ಕ್ರಮಗಳನ್ನೂ ಹೇಳಬಹುದು.

**ಹೊ:** ಹಾಗಾದರೆ ಭಾರತದಲ್ಲಿ ದೊಡ್ಡ ಹಿಡುವಳಿ ತರಬೇಕೆ ಅಥವಾ ಈಗಿರುವಂತೆಯೇ ಸಣ್ಣ ಹಿಡುವಳಿಗಳನ್ನೇ ಮುಂದುವರಿಸಬೇಕೆ ಅಥವಾ ಇವೆರಡನ್ನೂ ಇರಗೊಡಬೇಕೆ? ಈ ಮಧ್ಯೆ ಗುತ್ತಿಗೆ ಕೃಷಿ ಎಂಬ ಪದ್ಧತಿಯು ಈಗಾಗಲೇ ಸ್ವಲ್ಪ ಮಟ್ಟಿಗೆ ಬೇರೂರಿದೆ.

**ಯು. ಆರ್. ರಾವ್ :** ಇದು ಖಂಡಿತವಾಗಿ ಯಶಸ್ವಿಯಾಗುವುದಿಲ್ಲ. ಈ ಪದ್ಧತಿಯಿಂದ ಅನೇಕ ರೈತರಿಗೆ ಸಾಕಷ್ಟು ತೊಂದರೆಯೇ ಆಗುತ್ತದೆ. ಇತ್ತೀಚೆಗೆ ಇಂತಹ ಒಂದು ಪ್ರಯೋಗದಿಂದ ಪುಣೆಯ ಬಳಿ ಆದ ಪ್ರಮಾದವೇ ಸಾಕ್ಷಿ. ಅಲ್ಲಿ ಕಳೆದ ೪-೫ ವರುಷಗಳಿಂದ ಗುತ್ತಿಗೆ ಕೃಷಿ ಪದ್ಧತಿಯಲ್ಲಿ ಹಲವಾರು ಹಳ್ಳಿಯ ರೈತರು ಆಲೂಗೆಡ್ಡೆ-ಈರುಳ್ಳಿ ಇತ್ಯಾದಿಗಳನ್ನು ಸರಬರಾಜು ಮಾಡುತ್ತಿದ್ದಾರೆ – ಪ್ರಸಿದ್ಧ ಆಲೂಗೆಡ್ಡೆ ಉಪ್ಪೇರಿಯನ್ನು ತಯಾರಿಸುವ ಫ್ರಿಟೋಲೆ ಕಂಪನಿಗೆ (ಇದು ಪೆಪ್ಸಿ ಕಂಪನಿಯ ಉಪ ಕಂಪನಿ). ಆಗಿರುವ ಒಪ್ಪಂದದ ಪ್ರಕಾರ ಕಂಪನಿಯವರು ಬೀಜಗಳನ್ನು ಸರಬರಾಜು ಮಾಡಬೇಕು. ೪-೫ ವರುಷಗಳಿಂದ ಈ ಎಲ್ಲಾ ಹಳ್ಳಿಗಳ ಇಡೀ ಆಲೂಗೆಡ್ಡೆ ಉತ್ಪಾದನೆ ಆ ಕಂಪನಿಗೇ ಸರಬರಾಜಾಗುತ್ತಿತ್ತು. ಈ ವರ್ಷ ಎಲ್ಲವೂ ಹದಗೆಟ್ಟಿದೆ. ರೈತರು ತಮಗೆ ಸರಬರಾಜಾದ ಬೀಜಗಳು ಕೆಳಮಟ್ಟದವಾಗಿದ್ದುದರಿಂದ ಫಸಲು ಚೆನ್ನಾಗಿಲ್ಲವೆನ್ನುತ್ತಾರೆ. ಆದರೆ ಫ್ರಿಟೋಲೆ ಕಂಪನಿಯವರು ಫಸಲಿಗೆ ಬಂದ ರೋಗದಿಂದ ಈ ಪರಿಣಾಮವಾಯಿತೆನ್ನುತ್ತಾರೆ. ಕಾರಣವೇನೇ ಇರಲಿ, ಈ ರೀತಿಯ ಪ್ರಮಾದವನ್ನು ಮುಂದೆ ತಪ್ಪಿಸುವುದು ಹೇಗೆ? ಅದು ಪ್ರಮುಖವಾದ ಪ್ರಶ್ನೆ. ಗುತ್ತಿಗೆ ಸಾಗುವಳಿಯಲ್ಲಿ ಹಲವಾರು ವಿಧಗಳಿವೆ. ಒಂದು ಗ್ರಾಹಕ ಕಂಪನಿಯು ರೈತರೊಡನೆ ಮುಂಬರುವ ಹತ್ತು ವರುಷಗಳು ಇಡೀ ಫಸಲನ್ನು ಒಂದು ನಿಗದಿಯಾದ ದರದಲ್ಲಿ ಕೊಳ್ಳುತ್ತೇವೆ ಎಂದು ಒಪ್ಪಂದ ಮಾಡಿಕೊಳ್ಳಬಹುದು. ಆದರೆ ಇದರಲ್ಲಿ ಒಂದು ಕರಾರು ಇದ್ದೇ ಇರುತ್ತದೆ : ಉತ್ಪನ್ನವು ಅವರು ನಿಗದಿಮಾಡಿದ ಮಟ್ಟದ್ದಾಗಿರಬೇಕು. ಯಾವುದೇ ಕಾರಣದಿಂದ ಫಸಲು ಕೆಳಮಟ್ಟದ್ದಾಗಿದ್ದರೆ (ಫಸಲಿನ ಗುಣಮಟ್ಟವನ್ನು ಪರೀಕ್ಷಿಸಿ ದೃಢೀಕರಣ ನೀಡಬೇಕಾದವರು ಯಾರು ಎಂಬುದೂ ಒಂದು ಪ್ರಶ್ನೆ) ಆ ಕಂಪನಿಯನ್ನೇ ನಂಬಿ ಇಡೀ ವರುಷ ದುಡಿದ ರೈತರು ಏನು ಮಾಡಬೇಕು? ಒಂದು ವೇಳೆ ಒಂದು ವರುಷ ಫಸಲು ತುಂಬ ಹೆಚ್ಚಾಗಿ ಬಂದರೆ, ಮಾರುಕಟ್ಟೆಯಲ್ಲಿ ಆ ಉತ್ಪಾದಿತ ವಸ್ತುವಿನ ದರವು ತೀರ ಕೆಳಕ್ಕಿಳಿಯುತ್ತದೆ. ಆಗ ಕಂಪನಿಯವರು ಕರಾರಿನ ಪ್ರಕಾರ ಹೆಚ್ಚು ಬೆಲೆ ಕೊಟ್ಟು ಈ ರೈತರಿಂದಲೇ ಕೊಳ್ಳುತ್ತಾರೆಯೇ? ಇಂತಹ ಸಂದರ್ಭದಲ್ಲಿ ಕಂಪನಿಯವರು ಇಲ್ಲದಸಲ್ಲದ ಕಾರಣಗಳನ್ನು ಹೇಳಿ ಫಸಲಿನ ಗುಣಮಟ್ಟ ನಿಗದಿಯಾದ ಮಟ್ಟಕ್ಕಿಂತ ಕೆಳಗಿದೆ ಎಂದರೆ, ಆಗ ರೈತನನ್ನು ರಕ್ಷಿಸುವವರಾರು? ಮತ್ತೊಂದು ರೀತಿಯ ಗುತ್ತಿಗೆ ಎಂದರೆ ಐಟಿಸಿ ಕಂಪನಿಯವರು ಮಾಡುವಂಥದು. ಉದಾಹರಣೆಗೆ, ಕಂಪನಿಯು ತಾನೇ ನೇರವಾಗಿ ೫ ವರುಷಗಳ ಕಾಲ ಜಮೀನನ್ನು ಉಪಯೋಗಿಸಿಕೊಳ್ಳುತ್ತದೆ. ರೈತನಿಗೆ ಯಾವ ಜವಾಬ್ದಾರಿಯೂ ಇಲ್ಲ. ಐದು ವರುಷಗಳ ನಂತರ ಗುತ್ತಿಗೆಯು ನವೀಕರಿಸಲ್ಪಡಬಹುದು ಅಥವಾ ಕೊನೆಗೊಳ್ಳಬಹುದು. ಈ ಅವಧಿಯಲ್ಲಿ ಕಂಪನಿಯು ಯಾವ್ಯಾವ


ಬೆಲೆ ರೂ.120.00


ಬೆಲೆ ರೂ.165.00


ಬೆಲೆ ರೂ.70.00

# ಪ್ರಿಸಮ್

## ಹೊಸ ಪ್ರಕಟಣೆಗಳು


ಬೆಲೆ ರೂ.145.00



ಬೆಲೆ ರೂ.250.00


ಬೆಲೆ ರೂ.295.00



ಬೆಲೆ ರೂ. 198.00



ಬೆಲೆ ರೂ. 198.00


ಬೆಲೆ ರೂ. 210.00


ಎರಡು ಸಂಪುಟಗಳಲ್ಲಿ ಲಭ್ಯ
ಬೆಲೆ ರೂ. 795.00

ಪ್ರಮುಖ ಪುಸ್ತಕ ಮಳಿಗೆಗಳಲ್ಲಿ ಲಭ್ಯ

**ಪ್ರಿಸಮ್ ಬುಕ್ಸ್ ಪ್ರೈ.ಲಿ.**
# 1865, 32ನೇ ಅಡ್ಡ ರಸ್ತೆ, 10ನೇ ಮುಖ್ಯ ರಸ್ತೆ
ಬನಶಂಕರಿ 2ನೇ ಹಂತ, ಬೆಂಗಳೂರು – 560 070 ದೂ : 2671 41 0

*With Best Compliments From*



# SRI KUMAR TRANSPORTS

**6/1, 7th Cross, H. Siddaiah Road**
**Bangalore - 560 027**
**Phone : 22225207/22234563/22216247**
**Fax : 51145949**

...ರ್ಗಿಕ ಅಥವಾ ರಾಸಾಯನಿಕ ಗೊಬ್ಬರಗಳನ್ನು ಉಪಯೋಗಿಸಿ, ಸರಿಯಾದ ಅಥವಾ ಸರಿಯಲ್ಲದ ಯಾವ್ಯಾವ ವಿಧಾನಗಳನ್ನು ಬಳಸಿ ಜಮೀನಿನ ಸತ್ವವನ್ನೆಲ್ಲಾ ಹೀರಿಬಿಟ್ಟಿರುತ್ತದೆಯೋ ಯಾರು ಬಲ್ಲರು!

**ಹೊ :** ಈ ಸಮಸ್ಯೆಯ ಪರಿಹಾರವು ಹಿಡುವಳಿಯ ಗಾತ್ರೆಯನ್ನವಲಂಬಿಸಿದೆಯೆ? ಅಥವಾ ಹಿಡುವಳಿಯ ಪ್ರಮಾಣದಿಂದ ಏನಾದರೂ ವ್ಯತ್ಯಾಸವಾಗುತ್ತದೆಯೇ?

**ಯು. ಆರ್. ರಾವ್ :** ಇಲ್ಲ, ಈ ಸಮಸ್ಯೆಗೂ ಹಿಡುವಳಿಯ ಪ್ರಮಾಣಕ್ಕೂ ಸಂಬಂಧ ಇಲ್ಲ. ಜಪಾನ್‌ನಲ್ಲಿರುವ ಜಮೀನುಗಳು ನಮ್ಮ ದೇಶದ ಜಮೀನುಗಳಿಗಿಂತ ಚಿಕ್ಕ ಅಳತೆಯಲ್ಲಿರುತ್ತವೆ. ನಿಜ ಹೇಳಬೇಕೆಂದರೆ ಪ್ರಪಂಚದ ಹಲವಾರು ದೇಶಗಳಲ್ಲಿ ಸಣ್ಣ ಸಣ್ಣ ಜಮೀನುಗಳಲ್ಲಿಯೇ ವ್ಯವಸಾಯ ನಡೆಯುತ್ತದೆ. ಕೇವಲ ಉತ್ತರ ಅಮೆರಿಕಾ, ದಕ್ಷಿಣ ಅಮೆರಿಕಾಗಳಲ್ಲಿ ಮಾತ್ರ ಭಾರಿ ವಿಸ್ತೀರ್ಣದ ಜಮೀನುಗಳಲ್ಲಿ ಸಾಗುವಳಿ ನಡೆಯುತ್ತದೆ. ಚೀನಾ ದೇಶದ ಉದಾಹರಣೆಯನ್ನು ಗಮನಿಸಿ. ಅಲ್ಲಿ ಕೃಷಿ ಮಾಡುವ ಹಿಡುವಳಿಯ ಪ್ರಮಾಣ ನಮ್ಮ ದೇಶಕ್ಕಿಂತ ಕಡಿಮೆ. ಆದರೂ ಅವರ ಆಹಾರೋತ್ಪಾದನೆ ೪೦೦ ಮಿಲಿಯನ್ ಟನ್‌ಗಳಷ್ಟಿದೆ. ನಮ್ಮ ದೇಶದ ಉತ್ಪಾದನೆ ಕೇವಲ ೨೧೦ ಮಿಲಿಯನ್ ಟನ್‌ಗಳು ಮಾತ್ರ.

**ಹೊ :** ಕೃಷಿಯನ್ನೇ ಅವಲಂಬಿಸಿರುವ ಜನರ ಶೇಕಡಾವಾರನ್ನು – ಅಂದರೆ ನಮ್ಮ ದೇಶದಲ್ಲಿ ಅದು ಶೇಕಡ ೬೫ ಇದೆಯಲ್ಲಾ – ಅದನ್ನು ಕಮ್ಮಿ ಮಾಡಬೇಕಲ್ಲವೆ?

**ಯು. ಆರ್. ರಾವ್ :** ಹೌದು, ಅದು ಎರಡನೆಯ ಸಮಸ್ಯೆ. ಈ ಶೇಕಡ ೬೫ ಜನರಿಗೆ ಗುತ್ತಿಗೆ ಕೃಷಿಯಡಿ ಏನೂ ಕೆಲಸವಿಲ್ಲ. ಈಗಾಗಲೇ ಕೃಷಿಯನ್ನು ಆಧಾರವಾಗಿಟ್ಟುಕೊಂಡ ಈ ಶೇಕಡ ೬೫ ಜನರು ಏನು ಮಾಡುತ್ತಿದ್ದಾರೆ? ಆರ್ಥಿಕ ಬೆಳವಣಿಗೆಯ ಚರಿತ್ರೆಯನ್ನು ಅಧ್ಯಯನ ಮಾಡಿದವರಿಗೆಲ್ಲರಿಗೂ ವಿದಿತವಾಗುವ ಸತ್ಯವೆಂದರೆ, ನಮ್ಮ ತಾಂತ್ರಿಕ ಮತ್ತಿತರ ವಿಧಾನಗಳು ಉತ್ತಮಗೊಂಡಂತೆಲ್ಲಾ ಕೃಷಿ ಆಧಾರಿತ ಜನರ ಸಂಖ್ಯೆ ಕಡಿಮೆಯಾಗುತ್ತಾ ಹೋಗುತ್ತದೆ. ಇದರಿಂದ ನಗರಗಳಲ್ಲಿ ಎರಡು ರೀತಿಯ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಮೊದಲನೆಯದು, ನಗರಗಳ ಕೊಳಚೆ ಪ್ರದೇಶಗಳು ವಿಪರೀತ ಹೆಚ್ಚಾಗುವುದು. ಜನರನ್ನು ನಗರಗಳಿಗೆ ಬರಬೇಡಿ ಎಂದು ಹೇಳುವಂತೆಯೂ ಇಲ್ಲ; ಏಕೆಂದರೆ ಅವರಿಗೆ ಉದ್ಯೋಗ ದೊರಕುವುದೇ ನಗರಗಳಲ್ಲಿ. ಹಳ್ಳಿಗಳಲ್ಲಿ ಯಾವ ಕೆಲಸವೂ ಉಳಿದಿಲ್ಲ. ಇದರಿಂದ ಉದ್ಯೋಗವನ್ನರಸಿ ನಗರಗಳಿಗೆ ವಲಸೆ ಬರುವ ಹಳ್ಳಿಗರಿಂದ ಬೃಹತ್ ನಗರಗಳು ಇನ್ನೂ ಬೆಳೆಯುತ್ತವೆ. ಉದಾಹರಣೆಗೆ, ಹಾಸನವನ್ನು ಗಮನಿಸಿ – ಅದೇನೂ ಕಳೆದ ವರುಷಗಳಲ್ಲಿ ಅಷ್ಟೊಂದು ಬೆಳೆದಿಲ್ಲ. ಅದೇ ಬೆಂಗಳೂರು ನಗರ ಬೃಹದಾಕಾರವಾಗಿ ಬೆಳೆಯುತ್ತಲೇ ಇದೆ. ಹಳ್ಳಿಗಳು ಬೆಳೆಯುವುದಿಲ್ಲ.

**ಹೊ :** ಆಧುನಿಕ ಕೈಗಾರಿಕೆಗಳೂ ಸಹ ಬಹಳಷ್ಟು ಯಂತ್ರಗಳು ಹಾಗೂ ಕಂಪ್ಯೂಟರ್‌ಗಳಿಂದಲೇ ನಡೆಯುವುದರಿಂದ, ಆ ವ್ಯವಸ್ಥೆ ಹಳ್ಳಿಯಿಂದ ವಲಸೆ ಬರುವ ಪ್ರಜೆಗಳನ್ನು ತನ್ನಲ್ಲಿ ಸಕಾರಾತ್ಮಕವಾಗಿ ತೊಡಗಿಸಿಕೊಳ್ಳಲು ಅಶಕ್ಯವೆನಿಸುವುದಿಲ್ಲವೆ?

**ಯು. ಆರ್. ರಾವ್ :** ಅಮೆರಿಕಾ ಸಂಯುಕ್ತ ಸಂಸ್ಥಾನದಲ್ಲಿ ರಾಷ್ಟ್ರೀಯ ವರಮಾನದ ಬಹುಭಾಗ ಸೇವಾಕ್ಷೇತ್ರದ್ದು (ಸರ್ವೀಸ್ ಸೆಕ್ಟರ್). ಶೇಕಡ ೭೫ರಷ್ಟು ಈ ಕ್ಷೇತ್ರದಿಂದಲೂ ಶೇಕಡ ೨೦ರಷ್ಟು ಉಳಿದ ಕ್ಷೇತ್ರಗಳಿಂದಲೂ ಬರುತ್ತದೆ. ಹೊಸ ಉದ್ಯೋಗ ಈ ಕ್ಷೇತ್ರದಲ್ಲೇ ಉಂಟಾಗುತ್ತದೆ.

**ಹೊ :** ಇದೇ ನಿಯಮವು ಪ್ರಪಂಚದ ಎಲ್ಲೆಡೆಯಲ್ಲಿಯೂ ಸಮಾನವಾಗಿ ಅನ್ವಯಿಸುತ್ತದೆಯೆಂದು ಹೇಳಲಾರೆವಲ್ಲ!

**ಯು. ಆರ್. ರಾವ್ :** ಅಮೆರಿಕಾ ದೇಶವನ್ನು ಗಮನಿಸಿ. ಕೇವಲ ಶೇಕಡ ೫ ಜನರು ಕೃಷಿಯಲ್ಲಿ ತೊಡಗಿದ್ದಾರೆ. ಮಿಕ್ಕ ಶೇಕಡ ೯೫ ಜನರು ಉಳಿದ ಉತ್ಪಾದಕ ಮತ್ತು ಸೇವಾಕ್ಷೇತ್ರಗಳಲ್ಲಿ ತೊಡಗಿದ್ದಾರೆ. ನಾನು ಸಂಧಿಸಿದ ರೈತರ ಇಡೀ ೨೦೦ ಹೆಕ್ಟೇರುಗಳ ವಿಸ್ತೀರ್ಣದ ಜಮೀನಿನ ವ್ಯವಸಾಯವನ್ನು ಕೇವಲ ೩ ಜನ ನಿಭಾಯಿಸುತ್ತಾರೆ! ಒಬ್ಬ ಮುಖ್ಯಸ್ಥ, ಒಬ್ಬ ಸಹಾಯಕ ಮತ್ತು ಒಬ್ಬ ಟ್ರ್ಯಾಕ್ಟರ್ ನಡೆಸುವವ.



**ಹೊ :** ಅಮೆರಿಕಾದಂತಹ ಅಭಿವೃದ್ಧಿಯೇ ಭಾರತದಲ್ಲೂ ಉಂಟಾದರೆ ಅದು ಸರಿಯಾಗಬಹುದು ಎನ್ನುತ್ತೀರಾ?

**ಯು. ಆರ್. ರಾವ್ :** ಅಭಿವೃದ್ಧಿಯಾಗಬೇಕು. ನಮ್ಮ ಇಡೀ ಶಿಕ್ಷಣದ ನೀತಿಯೇ ಬದಲಾಗಬೇಕು. ಉದಾಹರಣೆಗೆ, ಈಗ ಬೆಂಗಳೂರಿನಲ್ಲಿ ನನಗೆ ಒಬ್ಬ ಎಲೆಕ್ಟ್ರಿಷಿಯನ್, ಪ್ಲಂಬರ್ ಅಥವಾ ಬಡಗಿ ಬೇಕಾದರೆ ಸಿಗುವುದಿಲ್ಲ.

**ಹೊ :** ಅವರು ಮಾಡುವ ಕೆಲಸಕ್ಕೆ ಚೆನ್ನಾಗಿ ವರಮಾನ ದೊರೆತರೆ ಅವರೂ ಬರುತ್ತಾರೆಯಲ್ಲವೆ?

**ಯು. ಆರ್. ರಾವ್ :** ಅವರು ಕಡಿಮೆಯೇನೂ ಸಂಪಾದಿಸುತ್ತಿಲ್ಲ. ನೀವು ಯಾವ ಮನೆಯಲ್ಲಾದರೂ ನೋಡಿ: ಕಡೇ ಪಕ್ಷ ೨ ಕೊಳಾಯಿಗಳು ಲೀಕ್ ಆಗುತ್ತಿರುತ್ತವೆ. ಮೊನ್ನೆ ಬಂದ ಒಬ್ಬ ಪ್ಲಂಬರ್ ಸುಮ್ಮನೆ ಒಂದು ಸ್ಪ್ಯಾನರ್ ಹಿಡಿದು ತಿರುಗಿಸಿ ೧೫೦ ರೂ. ತೆಗೆದುಕೊಂಡು ಹೋದ. ಅವರೆಲ್ಲರಿಗೂ ಚೆನ್ನಾಗಿಯೇ ಹಣ ಸಿಗುತ್ತಿದೆ. ನಮ್ಮಲ್ಲಿ ಉತ್ತಮ ಗುಣಮಟ್ಟದ ಔದ್ಯೋಗಿಕ ತರಬೇತಿ ನೀಡುವ ವಿದ್ಯಾಸಂಸ್ಥೆಗಳ ತೀವ್ರ ಕೊರತೆಯಿದೆ. ಎಲ್ಲರೂ ಇಂಜನಿಯರಿಂಗ್ ಕಾಲೇಜಿನಿಂದ ಹೊರಬರುವ ಮೈ ಕೈ ಕೊಳೆ ಮಾಡಿಕೊಳ್ಳ ಬಯಸದ ಕಾರ್ಮಿಕರೇ! ಪ್ಲಂಬರ್, ಎಲೆಕ್ಟ್ರಿಷಿಯನ್ ಅಥವಾ ಬಡಗಿಗೆ ಬೇಕಾದುದು ಕೇವಲ ಕೆಲವೇ ತಿಂಗಳುಗಳ ತರಬೇತಿ. ನಾರಾಯಣಮೂರ್ತಿಯವರು ಹೇಳಿದಂತೆ ನಾವು ಕೆಳಸ್ತರದ ತಾಂತ್ರಿಕತೆಯ ಉದ್ಯೋಗಕ್ಕೆ ಅಗತ್ಯವಿರುವ ಉದ್ಯೋಗಿಗಳನ್ನು ಸೃಷ್ಟಿ ಮಾಡಬೇಕು. ಹೀಗಾದರೆ ತನ್ಮೂಲಕ ಇಡೀ ವಿಸ್ತಾರವಾದ ವಿವಿಧ ಸೇವಾಕ್ಷೇತ್ರಗಳ ಉದ್ಯಮ ರೂಪುಗೊಳ್ಳುತ್ತದೆ.



ಶಿಕ್ಷಣ, ಕೈಗಾರಿಕೆ, ವಿದ್ಯುತ್, ಅಂಟಾರ್ಕ್ಟಿಕ್ ಯೋಜನೆ ಮುಂತಾದ ವಿಷಯಗಳನ್ನು ಕುರಿತಂತೆ ಡಾ|| ಯು. ಆರ್. ರಾವ್ ಅವರ ಆಳವಾದ ಹೊಳಹುಗಳನ್ನು ಸಂದರ್ಶನದ ಮುಂದಿನ ಭಾಗದಲ್ಲಿ ನೋಡಬಹುದು. ಇದು ಫೆಬ್ರವರಿ ೨೦೦೮ರ ಸಂಚಿಕೆಯಲ್ಲಿ ಪ್ರಕಟಗೊಳ್ಳುತ್ತದೆ.

– ಸಂ.

# ಪುಣ್ಯಕೋಟಿ

ಜಿ. ಎಸ್. ಉಬರಡ್ಕ
'ಕಾರ್ತಿಕ', ನಾರ್ಣಕಜೆ, ಅಂಚೆ : ದೊಡ್ಡತೋಟ - ೫೭೪೨೪೮, ಸುಳ್ಯ ತಾಲೂಕು, ದ.ಕ.ಜಿಲ್ಲೆ

- ಒಂದು -

ಇದ್ದರೊಬ್ಬರು ಚೇರ್‌ಮನ್ನರು
ಗ್ರಾಮವೊಂದರ ಪಂಚಾಯತದಲ್ಲಿ.
ಗ್ರಾಮದ ಅಭಿವೃದ್ಧಿ ಕಾಮಗಾರಿಗಳ
ನಡೆಸುತಲಿದ್ದರು ; ಪಡೆಯುತಲಿದ್ದರು
ತಂಟೆತಕರಾರರ್ಜಿಗಳ ; ನೀಡುತಲಿದ್ದರು
ದಕ್ಷತೆಯಿಂದ ನ್ಯಾಯ ತೀರ್ಮಾನ.

ಇಂತಿರುವಲ್ಲಿ ಪಂಚಾಯತಿಗೆ
ಬಂತೇ ಬಂತು -- ಜಮೀನುದಾರರೊಬ್ಬರ
ಮರ್ಜಿಗೆ ತಕ್ಕ ಒಕ್ಕಣೆಯಂತೆ ತಕರಾರರ್ಜಿ.
ಅದರಲ್ಲಿದ್ದುದು ಇಷ್ಟೆ:
ಗುರುವ ಮಾದಿಗ ಎಂಬವನು
ಜನ ಸಂಚಾರದ ರಸ್ತೆಗೆ ಇಲ್ಲಿ
ಭಾರೀ ಅಡ್ಡಿ ಒಡ್ಡಿದ್ದಾನೆ ಸ್ವಾಮೀ,
ಏನನ್ಯಾಯ -- ಒದಗಿಸಬೇಕು ನ್ಯಾಯ.

ಮುಂದಾಲೋಚಿಸಿ ಚೇರ್‌ಮನ್ನರು
ಗ್ರಾಮಲೆಕ್ಕಿಗರ ಬರಹೇಳಿದರು.
ಗುರುವ ಮಾದಿಗನ ರೆಕಾರ್ಡು - ನಕ್ಷೆ
ದಫ್ತರ ಬಿಡಿಸಲು ಗ್ರಾಮಲೆಕ್ಕಿಗರು,
ಮಾಹಿತಿ ದೊರಕಿ ರಸ್ತೆಯ ಚಿತ್ರಣ
ಮನದಟ್ಟಾದವು ಚೇರ್‌ಮನ್ನರಿಗೆ.

- ಎರಡು -

ಚೇರ್‌ಮನ್ನರು ಹೊರಟೇಬಿಟ್ಟರು
ನಿಗದಿತ ದಿನವೇ ವಿವಾದಿತ ಜಾಗದ ಕಡೆಗೆ –
ಗ್ರಾಮಲೆಕ್ಕಿಗ, ಉಗ್ರಾಣಿಯ ಜತೆಗೆ.

ಸ್ಥಳ ಪರಿಶೀಲನೆ ಮಾಡಲು ಹೊರಟರೆ,
ಗುರುವ ಮಾದಿಗನ ದರಖಾಸ್ತು –
ಪಿತ್ರಾರ್ಜಿತ ಭೂಮಿಯ ಕರೆಕರೆ
ಕೆತ್ತೀ ಕೆತ್ತೀ ಒತ್ತರಿಸಿದ್ದ ಖಾಸಗಿ ರಸ್ತೆ
ಹಾವಿನ ತೆರದಲಿ ಸಾಗುತಲಿತ್ತು
ಜಮೀನುದಾರರ ಮನೆಗೆ.

ವಿವಾದಿತ ಸ್ಥಳದಲ್ಲಿ ಗಡಿ ತೋರಿಸಲು
ಸರ್ವೆಕಲ್ಲುಗಳ ಹುಡುಕೀ ಹುಡುಕಿ ಉಗ್ರಾಣಿ,
ಗಡಿಯಳತೆಯ ಸಂಕೋಲೆ
ಬಾಗೀ ತೂಗೀ ಹಿಡಿದೆಳೆದು
ನೆಲಕ್ಕೆ ಬಡಿದ ಜಬಕ್ಕ ಸದ್ದಿಗೆ
ಗುರುವ ಮಾದಿಗ ಒಂದಿಷ್ಟಾದರು
ತಲ್ಲಣಿಸಲೆ ಇಲ್ಲ ; ಸಮರ್ಥನೆಗೂ
ಮಾತೆತ್ತಲೆ ಇಲ್ಲ.

ವಾದಿ – ಪ್ರತಿವಾದಿಯ ಎದುರಿಗೆ
ಸಾಗುತ್ತಿರಲು ಗಡಿಯಳತೆ,
ಗುರುವ ಮಾದಿಗ ತದೇಕ ಚಿತ್ತದಿ
ಚೇರ್‌ಮನ್ನರ ಕಣ್ಣಲಿ ಕಣ್ಣಿಟ್ಟು
ಬಿನ್ನವಿಸಿದ ಕೈಮುಗಿಯುತ್ತ :
ಸತ್ಯವಂತರು ನೀವಯ್ಯ ,
ಕಾಪಾಡುವ ತಾಯೇ ನೀವೆನಗಯ್ಯ .

ಗುರುವ ಮಾದಿಗನ ದೃಢವಿಶ್ವಾಸದ ನುಡಿಗೆ
ಚೇರ್‌ಮನ್ನರು ವಿಸ್ಮಿತರಾದರು :
ಆ ಕ್ಷಣದಲ್ಲಿ ಕಣ್ಣೆದುರಲ್ಲಿ
ಮೈದೋರಿತು ಅವರಿಗೆ ಪುಣ್ಯಕೋಟಿಯೆ
ನಿಜಗುಣವನು ಬೆಳಗಿ.



ಕೆ. ಸತ್ಯನಾರಾಯಣ

# ದೇವರು ಮತ್ತು ಮಾಧವ ಮೆನನ್

ಇನ್ನಾದರೂ
ಈಗಲಾದರೂ :
ಮಾಧವ ಮೆನನ್ ದೇವರನ್ನು
ಬಲೇಬೇಕೆಂದು ನಂಬಲು ಸಕಾಲವೆಂದು ಮದ್ರಾಸಿನ ದಕ್ಷಿಣದ ತುದಿಯಲ್ಲಿರುವ ಪೂವೈ ಕಾಲೊನಿಯ ುಸ್ತ ನಾಗರಿಕ ಬಂಧುಗಳು ಪರಿಭಾವಿಸಲು ಪ್ರಾರಂಭಿಸಿದರು. ಹಾಗೆ ಪರಿಭಾವಿಸಲು ಮೆನನ್‌ರ ತ್ತಮುತ್ತ ನಡೆದು ಒತ್ತೊತ್ತಿಗೆ-ಒಟ್ಟೊಟ್ಟಿಗೆ ನಡೆದ ಮೂರು ವಿದ್ಯಮಾನಗಳು ಕಾರಣವಾಗಿತ್ತು.

ವಿದ್ಯಮಾನ – ೧

ಶುಕ್ರವಾರ ಸಂಜೆ, ಮುಸ್ಸಂಜೆ ಕತ್ತಲು. ಮೆನನ್ ಮಗಳು ಪಾರ್ವತಿ ಕೆ. ಕೆ. ನಗರದಿಂದ ಮನೆ ಪಾಠ ುಗಿಸಿಕೊಂಡು ಬರುತ್ತಿದ್ದಳು. ದಿನವೂ ಓಡಾಡುತ್ತಿದ್ದುದು ಅದೇ ರಸ್ತೆ, ಅದೇ ಹೊತ್ತು ಮೂರು ನಾಲ್ಕು ರ್ಷದಿಂದ. ಆದರೂ ಶುಕ್ರವಾರ ಸರಗಳ್ಳರು ಮೊಬೈಕ್‌ನಲ್ಲಿ ಹಿಂದುಗಡೆಯಿಂದ ಬಂದು ಪಾರ್ವತಿ ತ್ತಿನಲ್ಲಿದ್ದ ಸರಕ್ಕೆ ಕೈ ಹಾಕಿ ಎಳೆದರು. ಹಾಗೆ ಎಳೆದಾಗ ತಕ್ಷಣ ಕತ್ತನ್ನ ಪಕ್ಕಕ್ಕೆ ವಾಲಿಸಿದ್ದರಿಂದಲೋ, ಇಲ್ಲ ದುರುಗಡೆಯಿಂದ ಬರುತ್ತಿದ್ದ ಲಾರಿಯ ಪ್ರಖರವಾದ ಬೆಳಕಿನಿಂದಾಗಿ ಸರಗಳ್ಳರ ಷ್ಟಿಯಲ್ಲೇ ಏರುಪೇರಾಯಿತೋ, ಒಟ್ಟಿನಲ್ಲಿ ಸರ ಪಾರ್ವತಿಯ ಕತ್ತಿನಿಂದ ಕಿತ್ತುಕೊಂಡು ಂದರೂ ಕಳ್ಳರ ಕೈಗೆ ದಾಟಲಿಲ್ಲ. ರಸ್ತೆಯ ಮೇಲೆ ತೀರಾ ಬಿದ್ದುಹೋಯಿತು. ಹುಡುಗಿಯ ತ್ತು ಒಂದೆರಡು ದಿನ ಉಳುಕಿದ ಹಾಗಾಗಿತ್ತು ಅನ್ನುವುದನ್ನು ಬಿಟ್ಟರೆ ಮತ್ತೇನು ಆಗಲಿಲ್ಲ. ಡುಗಿ ಒಂದೆರಡು ದಿನ ಮಂಕಾಗಿ ಕಾಲೇಜಿಗೆ ಹೋಗಲಿಲ್ಲ: ಅಷ್ಟೇ.

ಮೆನನ್‌ದು ನಿಜವಾಗಲೂ ಒಳ್ಳೆಯ ಅದೃಷ್ಟ.

ವಿದ್ಯಮಾನ – ೨

ಮೆನನ್ ಕಾರ್ಯಾಲಯದಲ್ಲಿ ನಡೆದದ್ದು. ಹಿರಿಯ ಅಧಿಕಾರಿಯಾದ್ದರಿಂದ ನನ್‌ದು ವಿಶಾಲವಾದ ರೂಮು. ಕುಳಿತುಕೊಂಡು ಕೆಲಸ ಮಾಡುವ ಕುರ್ಚಿ, ೕಬಲ್‌ಗೆ ಮಾತ್ರವಲ್ಲದೆ, ಬೇಸರವಾದಾಗ ವಿಶ್ರಾಂತಿ ಪಡೆಯಲು ಕೂಡ ಎದುರಿಗೆ ೋಫಾ ಹಾಕಲು ಸ್ಥಳಾವಕಾಶವಿತ್ತು. ಮೊನ್ನೆ ಬುಧವಾರ ಏನಾಗಿದೆಯೆಂದರೆ ಧ್ಯಾಹ್ನದ ಸ್ಯಾಂಡ್‌ವಿಚ್ ತಿನ್ನಲೆಂದು ಮೆನನ್ ಸೋಫಾ ಕಡೆ ಹೊರಟ. ತಕ್ಷಣ ಕೆಲಸ ಮಾಡಲು ಕೂರುತ್ತಿದ್ದ ರ್ಚಿಯ ಮೇಲಿದ್ದ ಸೀಲಿಂಗ್ ಫ್ಯಾನ್ ಕಳಚಿಕೊಂಡು ಬಿದ್ದಿದೆ. ಒಂದೆರಡು ನಿಮಿಷ ಆ ಕಡೆ - ಈ ಕಡೆ ಆಗಿದ್ದರೆ ನನ್ ತಲೆ ಮೇಲೇನೆ ಬೀಳಬಹುದಿತ್ತು. ಏನೇನೆಲ್ಲಾ ಆಗಬಹುದಿತ್ತು. ಏನೂ ಆಗಲಿಲ್ಲ.

ಮೆನನ್‌ದು ನಿಜವಾಗಲೂ ಒಳ್ಳೆಯ ಅದೃಷ್ಟ.

ವಿದ್ಯಮಾನ - ೩

ಮಾಧವರ ಮೊದಲನೇ ಮಗ ವಿವೇಕ್ ಮೆನನ್ ಸುರತ್ಕಲ್‌ನಲ್ಲಿ ಎಂಜಿನಿಯರಿಂಗ್ ಓದುತ್ತಿದ್ದ. ವಿವೇಕನ ಹಪಾಠಿ ವಿವೇಕ್ ಅಯ್ಯರ್ ಕೂಡ ಮಲಯಾಳಿ ಹುಡುಗನೇ. ಇಬ್ಬರೂ ಮಂಗಳೂರಿನಲ್ಲಿ ಫಸ್ಟ್ ಶೋ ಸಿನಿಮಾ ೋಡಿಕೊಂಡು ಮೊಬೈಕ್‌ನಲ್ಲಿ ವಾಪಸ್ ಬರುತ್ತಿದ್ದರು. ಮೆನನ್‌ರ ಮಗ ಹಿಂದಿನ ಸೀಟಲ್ಲಿ ಕೂತಿದ್ದ, ಅಯ್ಯರ್ ಡಿ ಬಿಡುತ್ತಿದ್ದ. ಒಂದೂಕಾಲು ಸಾವಿರ ರೂಪಾಯಿಯ ಹೆಲ್ಮೆಟ್ ಹಾಕಿಕೊಂಡಿದ್ದ. ಹೀಗಿದ್ದೂ ಬೈಕಂಪಾಡಿ ್ರಸ್‌ನಲ್ಲಿ ಹಿಂದುಗಡೆಯಿಂದ ಬಂದ ಲಾರಿಯೊಂದು ಇವರ ಮೊಬೈಕನ್ನು ಸವರಿ ಮೇಲೇ ಹತ್ತಿಬಿಟ್ಟಾಗ ಪಘಾತದಲ್ಲಿ ಸತ್ತದ್ದು ಅಯ್ಯರ್ ಹೊರತು ಮೆನನ್ ಅಲ್ಲ. ಒಂದಿಷ್ಟು ತರಚುಗಾಯ ಆಯ್ತು ಅನ್ನುವುದನ್ನು ಬಿಟ್ಟರೆ. ಾಧವರಿಗೆ ಗೊತ್ತಾದ ತಕ್ಷಣ ರಾತ್ರೋರಾತ್ರಿ ಮದ್ರಾಸಿನಿಂದ ಹೋಗಿ ಮಗನನ್ನು ಕರೆದುಕೊಂಡುಬಂದರು.

ಏನು ಬೇಕಾದರೂ ಆಗಬಹುದಿತ್ತು. ಹೆಲ್ಮೆಟ್ ಹಾಕಿಕೊಂಡಿದ್ದ ಹುಡುಗನೇ ಹೋಗಿಬಿಟ್ಟ. ಧುತ್ ಅಂತ ದುರಿಗೆ ಬಂದದ್ದು ಸುಮ್ಮನೆ ಹಾಗೆ ಸವರಿಕೊಂಡು ಹೋಯಿತು. ಅಷ್ಟೇ.

ಮೆನನ್‌ದು ನಿಜವಾಗಲೂ ಒಳ್ಳೆಯ ಅದೃಷ್ಟ.

* * *

ಮೇಲಿನ ಕಾರಣಾವಳಿಗಳಿಂದಾಗಿ ಮೆನನ್ ದೇವರನ್ನು ಈಗ ನಂಬಲೇಬೇಕು. ನಂಬಿಯೇ ಬಿಡುತ್ತಾರೆಂಬುದು ಲೊನಿಯವರೆಲ್ಲರ ಆಸೆಯಾಗಿದ್ದರೂ, ಇಲ್ಲಿಯವರೆಗೆ ಮೆನನ್ ದೇವರನ್ನ ನಂಬಿಲ್ಲ, ನಂಬಿರಲಿಲ್ಲ ಎನ್ನುವುದು ಂತಹ ಗಂಭೀರ ಆಕ್ಷೇಪಣೆಯೇನಾಗಿರಲಿಲ್ಲ. ಮೆನನ್‌ರ ದಕ್ಷತೆ, ಪ್ರಾಮಾಣಿಕತೆ, ನಿಸ್ಪೃಹತೆ, ನಮ್ಮ ವಿಭಾಗದ ದಕ್ಷಿಣ ಭಾರತದ ಕಾರ್ಯಾಲಯಗಳಲ್ಲೆಲ್ಲ ದಂತ ಕತೆಯೆನ್ನುವಷ್ಟು ಪ್ರತೀತಿಯಾಗಿದ್ದರಿಂದ ಬೇರೆ ಯಾವ ಊನವೂ ನಮ್ಮ ಕಣ್ಣಿಗೆ ಬಿದ್ದಿರಲಿಲ್ಲ– ದೇವರನ್ನು ನಂಬುತ್ತಿಲ್ಲವೆಂಬುದನ್ನು ಬಿಟ್ಟರೆ. ಊನದ ಮಾತು ಬಿಡಿ, ಸ್ವತಃ ಅವರ ಹೆಂಡತಿ ಯಾಮಿನಿ ಬಾಯಿಯ ವ್ರತ, ನೇಮ, ನಿಷ್ಠೆಗೆ ಕಿಂಚಿತ್ತೂ ಅಡ್ಡಿ ಮಾಡಿದವರಲ್ಲ. ಸಂಜೆಯ ವಾಕಿಂಗ್ ಮುಗಿಸಿ ಕಾಲೊನಿಯ ಹೊರಗಡೆಯೇ ಇದ್ದ ಚಂದ್ರಮೌಳೇಶ್ವರ ಗುಡಿಗೆ ಕೊನೆಯ ಮಂಗಳಾರತಿಗೆಂದು ಯಾಮಿನಿಬಾಯಿ ದೇವಸ್ಥಾನದ ಪ್ರಾಂಗಣದೊಳಗೆ ಹೋದಾಗ ಮೆನನ್ ಎರಡೂ ಕೈಗಳನ್ನು ಪ್ಯಾಂಟಿನ ಜೇಬಿನೊಳಕ್ಕೆ ಇಳಿಬಿಟ್ಟುಕೊಂಡು ಗೇಟ್ ಹತ್ತಿರವೇ ತಾಳ್ಮೆಯಿಂದ ಕಾಯುತ್ತಾ ನಿಂತಿರೋರು – ಹೂವಿನವರ ಜೊತೆ, ಹಣ್ಣು, ಕಾಯಿ ಮಾರುವವರ ಹತ್ತಿರ, ಚಪ್ಪಲಿ ಕಾಯುವವರ ಬಳಿ, ಭಿಕ್ಷೆಗೆ ಕುಳಿತ ಅಂಗವಿಕಲರ ಸಾಲಿನ ಹತ್ತಿರ. ಯಾಮಿನಿಬಾಯಿ ಮಂಗಳಾರತಿ ಮುಗಿಸಿಕೊಂಡು ಬಂದವರೇ ಮೆನನ್ ಹಣೆಗೆ ಪ್ರಸಾದದ ಕುಂಕುಮ ಮತ್ತು ವಿಭೂತಿಯ ಚಿಕ್ಕ ಬೊಟ್ಟು ಇಟ್ಟಾಗಲೂ, ಮುಖದಲ್ಲಿ ವ್ಯಂಗ್ಯದ ನಗೆಯಾಗಲೀ,

ತಾಳ್ಮೆ ಕಳೆದುಕೊಂಡ ಸೂಚನೆಗಳಾಗಲೀ ಕಾಣುತ್ತಿರಲಿಲ್ಲ. ಯಾಮಿನಿಬಾಯಿ ಏರ್ಪಾಡು ಮಾಡುತ್ತಿದ್ದ ಲಲಿತಾಸಹಸ್ರನಾಮ ವಾಚನಾ ಮಂಡಲದ ಕೊನೆಯಲ್ಲಿ ನಡೆಯುತ್ತಿದ್ದ ಆರತಿಗಾಗಲೀ, ಸೌಂದರ್ಯ ಲಹರಿಯ ತರಗತಿಗಳಿಗಾಗಲೀ ಮೆನನ್ ಅಡ್ಡಿ ಮಾಡುತ್ತಿರಲಿಲ್ಲವೆಂಬುದು ಇಡೀ ಕಾಲೊನಿಗೆ ಗೊತ್ತಿತ್ತು. ಮಾತ್ರವಲ್ಲ ಹೆಂಡತಿಗೆ ಇಂತಹ ಸಮಾರಂಭಗಳ ಸಂದರ್ಭದಲ್ಲಿ ಸುತ್ತು ಕೆಲಸಕ್ಕೆ ನೆರವಾಗಲೆಂದು ಆಫೀಸಿನಿಂದ ಸಹಾಯಕರನ್ನು ಕಳಿಸಿಕೊಡೋರು. ದೇವರನ್ನು ನಂಬದಿದ್ದರೇನಂತೆ ನಿತ್ಯಶ್ರೀ ಮಹಾದೇವನ್, ಉನ್ನಿಕೃಷ್ಣನ್, ಶಂಕರನ್ ನಂಬೂದಿರಿಯಂತವರೆಲ್ಲ ನವರಾತ್ರಿ ಕಾರ್ಯಕ್ರಮಕ್ಕೆ ಸಂಗೀತ ನೀಡಲು ಬಂದಿದ್ದಾಗ ಮೆನನ್ ಉದಾರವಾಗಿ ದೇಣಿಗೆ ಕೊಡುವುದರ ಜೊತೆಗೆ ಮನೆಗೇ ಕರೆದುಕೊಂಡು ಬಂದು ಸತ್ಕಾರ ನೀಡಿ ಉಡುಗೊರೆ ಕೂಡ ಮಾಡುತ್ತಿದ್ದರು. ಇಷ್ಟೆಲ್ಲ ಒಳ್ಳೆಯ ಗುಣ ಸ್ವಭಾವದ ಮೆನನ್ ದೇವರನ್ನು ಕೂಡ ನಂಬುವವರಾಗಿದ್ದರೆ ಎಂಬ ಆಸೆ ನಮಗೆಲ್ಲ ಇದ್ದುದು ನಿಜವಾದರೂ ಅದನ್ನೇ ಮುಂದುಮಾಡುತ್ತಿರಲಿಲ್ಲ. ಆದರೂ ನಮ್ಮಂತವರಿಗೂ ಕೂಡ ಮೊನ್ನೆ ಮೊನ್ನೆಯ ಮೂರು ವಿದ್ಯಮಾನಗಳು ಒತ್ತೊತ್ತಿಗೇ ನಡೆದಾಗ ಈಗಲಾದರೂ ಮೆನನ್ ದೇವರನ್ನ ನಂಬದಿದ್ದರೆ ಹೇಗೆ ಎಂಬ ಪ್ರಶ್ನೆ ಉದ್ಭವವಾದದ್ದು ನಿಜ.

* * *

ಈ ಪ್ರಶ್ನೆಗಳಿಗೆಲ್ಲ ಉತ್ತರವೋ ಎಂಬಂತೆ ಮೆನನ್ ಬಗ್ಗೆ ನಾನಾ ರೀತಿಯ ಪುಕಾರುಗಳು. ನಡುರಾತ್ರಿಯಲ್ಲಿ ಮೆನನ್ ಚಂದ್ರಮೌಳೇಶ್ವರ ದೇವಸ್ಥಾನದ ಸುತ್ತ ಗಸ್ತು ಹೊಡೆಯುತ್ತಾರೆ, ಗಂಟೆಗಟ್ಟಲೆ ಗರುಡಗಂಬವನ್ನು ತಬ್ಬಿಕೊಂಡು ನಿಂತಿರುತ್ತಾರೆ, ಬೆಳಿಗ್ಗೆ ಮೂರು-ನಾಲ್ಕು ಘಂಟೆಯ ಹೊತ್ತಿಗೆ ಮನೆಗೆ ವಾಪಸ್ ಬರುತ್ತಾರೆಂದೆಲ್ಲ ಪುಕಾರು. ಮೆನನ್‌ಗೆ ದೇವರನ್ನು ನಂಬಲು ಆಸೆಯಾಗಿದೆ, ನಂಬಲು ಕೂಡ ಶುರುವಿಗಿಟ್ಟುಕೊಂಡಿದ್ದಾರೆ, ಇಲ್ಲಿಯತನಕ ಹಾಗಿರಲಿಲ್ಲವಾದ್ದರಿಂದ ಹೊಸ ರೀತಿಯ ವ್ಯಕ್ತಿತ್ವವನ್ನು ಎಲ್ಲರೆದುರಿಗೆ ತೋರಿಸಿಕೊಳ್ಳಲು ಸಂಕೋಚದಿಂದಾಗಿ ಹೀಗೆ ದೇವಸ್ಥಾನದ ಗಸ್ತು ಹೊಡೆಯುತ್ತಾರೆ. ಸರಿ, ಇದರಲ್ಲೆಲ್ಲ ಪ್ರಮಾದವೇನು, ಮೆನನ್ ಕೂಡ ನಮ್ಮೆಲ್ಲರಂತೆ ದೇವರನ್ನು ನಂಬುವ ಪೈಕಿಯೇ ಆದರಲ್ಲ ಎಂಬ ಸಮಾಧಾನ, ಸಂತೋಷ ವ್ಯಕ್ತವಾಗುತ್ತಿತ್ತು - ನಮ್ಮನಮ್ಮ ದಿನನಿತ್ಯದ ಮಾತುಕತೆಗಳಲ್ಲಿ.

ಮೆನನ್ ಮನೆಯಲ್ಲಿ, ಮನಸಿನಲ್ಲಿ, ಕನಸಿನಲ್ಲಿ ನಡೆಯುತ್ತಿದ್ದುದೇ ಬೇರೆ.

* * *

ಮೊದಲೇ ದೈವಭಕ್ತೆಯಾಗಿದ್ದ ಯಾಮಿನಿಬಾಯಿಯವರ ಭಕ್ತಿ, ಶ್ರದ್ಧೆ, ಪ್ರಾರ್ಥನೆಯೆಲ್ಲ ಇನ್ನೂ ಹೆಚ್ಚಾಗಿಬಿಟ್ಟಿತು. ಮೆನನ್‌ರನ್ನು ನಿಂದಿಸಿ ಕೇಳಿದ್ದರು :

"ಪ್ರಪಂಚದಲ್ಲಿ ದಿನವೂ. ಕ್ಷಣವೂ, ನೂರಾರು ಸಾವಿರಾರು ವ್ಯಾಪಾ[ರ]ಗಳಾಗುತ್ತವೆ. ಇಂತಹವರಿಗೆ ಹೀಗೇ ಆಗಬೇಕು ಎನ್ನುವುದಕ್ಕೆ ನಿಯಮವಿಲ್ಲ. ಆದರೂ ನಮ್ಮ ಕುಟುಂಬಕ್ಕೆ ಬಂದೊದಗಿದ ಕುತ್ತುಗಳು ಮನೆ ಬಾಗಿಲಿನ ತನಕವೂ ಬಂದಿದ್ದು, ಹೊಸ್ತಿಲಾಚೆಗೇ ನಿಂತು, ಮನೆ ಮುಂದಿನ ರಂಗೋಲಿಯನ್ನು ಕೂಡ ಮುಟ್ಟದೆ ಹಾಗೆ ಸವರಿಕೊಂಡು ಹೊರಟುಹೋದವು. ಇವೆಲ್ಲವನ್ನೂ ಆಕಸ್ಮಿಕ; ಕಾಕತಾಳೀಯವೆಂದು ತಿಳಿದುಕೊಳ್ಳುವ ಬದಲು, ದೇವರಿಗೆ, ನಿಯಾಮಕನಿಗೆ ನಮ್ಮ ಬಗ್ಗೆ ಇರುವ ಪ್ರೀತಿಯೆಂದು ತಿಳಿದುಕೊಂಡು ಈಗಲಾದರೂ ಆತನನ್ನು ನಂಬಿ ಕೃತಜ್ಞತೆ ಹೇಳದಿದ್ದರೆ ಏನು ಪ್ರಯೋಜನ. ಜೀವನ ನಡೆದುಕೊಂಡು ಹೋಗುವುದಕ್ಕೆ ಕೃತಜ್ಞತಾಭಾವವೂ ಮುಖ್ಯವಲ್ಲವೇ."

ಈಚೀಚೆಗಂತೂ ಯಾಮಿನಿಬಾಯಿಯವರ ದಿನಚರಿ ಬೆಳಗಿನ ನಾಲ್ಕು ಘಂಟೆಗೆ ಶುರುವಿಗೆ ಇಟ್ಟುಕೊಳ್ಳುತ್ತಿತ್ತು. ತಣ್ಣೀರಿನ ಸ್ನಾನದಿಂದ ಪ್ರಾರಂಭವಾಗಿ ಭಜನೆ, ಸಂಗೀತ, ಪ್ರಾರ್ಥನೆ, ಅರ್ಚನೆ ಎಂತೆಲ್ಲ ಏಳೂವರೆ ತನಕವೂ ನಡೆಯೋದು. ಮೆನನ್ ಹಾಸಿಗೆ ಬಿಟ್ಟು ಏಳುವ ಸಮಯವದು. ಒದ್ದೆ ಕೂದಲನ್ನು ಬೆನ್ನಿನ ತುಂಬಾ ಹರಡಿಕೊಂಡು, ಕೆನ್ನೆ ತುಂಬೆಲ್ಲಾ ಅರಿಶಿನ ಸವರಿಕೊಂಡು, ಹಣೆಯ ತುಂಬೆಲ್ಲಾ ವಿಭೂತಿ ಗೀರು ಕುಂಕುಮದಿಂದ ಶೋಭಿಸುತ್ತಿದ್ದ ಯಾಮಿನಿಬಾಯಿ ಮನೆತುಂಬಾ ಸರಸರ ಓಡಾಡುತ್ತಿದ್ದರೆ ನಿತ್ಯದ ಕಾಫಿ-ತಿಂಡಿಯನ್ನು ಕೇಳುವುದಕ್ಕೇ ಮೆನನ್‌ಗೆ ಹಿಂಜರಿಕೆಯಾಗುತ್ತಿತ್ತು. ಇಪ್ಪತ್ತೆಂಟು ವರ್ಷಗಳ ದಾಂಪತ್ಯ ಜೀವನದಲ್ಲಿ ಮೆನನ್ ತಮ್ಮ


# ಶೃಂಗಾರ ಪ್ರಕಾಶನ

ಚಿಕ್ಕನಾಯಕನಹಳ್ಳಿ - 572 214, ತುಮಕೂರು ಜಿಲ್ಲೆ
ದೂರವಾಣಿ : 08133 - 267116, 267416

ಹೈಸ್ಕೂಲು, ಕಾಲೇಜು, ಟಿಸಿಎಚ್, ಬಿಎಡ್ ವಿದ್ಯಾರ್ಥಿಗಳಿಗೆ ಸ್ಕೂಲ್ ಪ್ರಾಜೆಕ್ಟ್ ತಯಾರಿಸಲು ವಿದ್ಯಾಭ್ಯಾಸದ ಸಲಕರಣೆಯಾಗಿ ರಾಷ್ಟ್ರನಾಯಕರು, ಸ್ವಾತಂತ್ರ್ಯ ಹೋರಾಟಗಾರರು, ವಿಜ್ಞಾನಿಗಳು, ನೊಬೆಲ್ ಪ್ರಶಸ್ತಿ ವಿಜೇತರು, ಶಿಕ್ಷಣ ತಜ್ಞರು, ಸಾಹಿತಿಗಳು, ಮಹಾಪುರುಷರು, ದಾಸವರೇಣ್ಯರು, ಕರ್ನಾಟಕದ ಇತಿಹಾಸ ಪ್ರಸಿದ್ಧ ಪ್ರೇಕ್ಷಣೀಯ ಸ್ಥಳಗಳು ಮುಂತಾದ ಅತ್ಯುಪಯುಕ್ತ ಹಾಗೂ ಆಕರ್ಷಕ ವರ್ಣ ಭಾವಚಿತ್ರಗಳು. 130 GSM ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಮಾಹಿತಿ. 9" x 11" ಆರ್ಟ್ ಪೇಪರ್‌ನಲ್ಲಿ ಗಾತ್ರದಲ್ಲಿ ಲಭ್ಯ.

ಬೆಂಗಳೂರು ಶಾಖಾ ವಿಳಾಸ

# ಶೃಂಗಾರ ಪ್ರಕಾಶನ

164, 'ನಂದನ', 4ನೇ ಅಡ್ಡರಸ್ತೆ, ಗುರುದತ್ತ ಬಡಾವಣೆ
ಹೊಸಕೆರೆಹಳ್ಳಿ, ಬನಶಂಕರಿ 3ನೇ ಹಂತ
ಬೆಂಗಳೂರು - 560 085, ಮೊಬೈಲ್ : 98454 64886

ರಗಳನ್ನು ಹೆಂಡತಿಯ ಮೇಲೆ ಹೇರಲು ಯಾವ ರೀತಿ ಪ್ರಯತ್ನಿಸಿರಲಿಲ್ಲವೋ ಯೇ ಯಾಮಿನಿಬಾಯಿ ಕೂಡ ತಮ್ಮ ಭಕ್ತಿ-ಪೂಜೆ-ಪುನಸ್ಕಾರವನ್ನು ಗಂಡನ ೕ ಹೇರಲು ಹೋಗಿರಲಿಲ್ಲ. ದೇವರನ್ನು ನಂಬುವುದಿಲ್ಲ, ಪೂಜಿಸುವುದಿಲ್ಲ ವುದನ್ನು ಬಿಟ್ಟರೆ ತನ್ನ ಬಗ್ಗೆ ಇರುವ ಅಕರಾಸ್ಥೆಯಲ್ಲಾಗಲೀ, ತನ್ನ ಬಂಧುಬಳಗದ ಇರುವ ಪ್ರೀತಿಯಲ್ಲಾಗಲೀ ಯಾವ ಕುಂದೂ ಕಂಡಿರಲಿಲ್ಲ. ಒಂದು ರೀತಿಯ ಸ್ಪರ ಸಮೀಪ – ಇನ್ನೊಂದು ರೀತಿಯ ಪರಸ್ಪರ ದೂರ ಎರಡನ್ನೂ ಒಪ್ಪಿಕೊಂಡೇ ಣ ನಡೆದುಕೊಂಡು ಬಂದಿತ್ತು. ಹಾಗಿದ್ದರೂ ತೀರಾ ನಿಂದಿಸಿ ಮಾತನಾಡಿದ ತಿ ಹಿಂದಿನಂತಿಲ್ಲ ಎಂಬ ಭಾವನೆ ಮೆನನ್‌ಗೆ. ಇಲ್ಲ ತಾವೇ ಹಿಂದಿನಂತಿಲ್ಲವೋ ು ಅನುಮಾನವೂ ಬರುತ್ತಿತ್ತು. ಆಚೆ ಮೊನ್ನೆ ಮಧ್ಯರಾತ್ರಿ ಎಚ್ಚರವಾದಾಗ ನಲ್ಲೇ ಮಲಗಿದ್ದ ಹೆಂಡತಿ ಹೊದ್ದುಕೊಂಡಿದ್ದ ಹೊದಿಕೆ ಹೊರಳಾಟದಲ್ಲಿ ್ಯಸ್ತಗೊಂಡು ಕಾಲಬುಡಕ್ಕೇ ಬಂದುಬಿಟ್ಟಿತ್ತು. ಹೊದಿಕೆಯನ್ನು ಸರಿಪಡಿಸಿ, ಹಿಂದೆ ಲ್ಲ ಸರಿಪಡಿಸುವಾಗ ನಿದ್ದೆಗೆ ಭಂಗ ಬಾರದಂತೆ ಹೆಂಡತಿಯ ಹಣೆ, ಂಗೂದಲನ್ನು ಮೃದುವಾಗಿ ಸವರುತ್ತಿದ್ದಂತೆ ಈಗಲೂ ಮಾಡಹೋದಾಗ ಕ್ಕಿದ್ದಂತೆ ಕೈ ಹಿಂದೆ ಸರಿಯಿತು. ಕ್ಷಣಮಾತ್ರದ ಭಾವನೆಯೇನೋ ಎಂದುಕೊಂಡು ಕೈಯನ್ನು ಹಣೆಯ ಹತ್ತಿರ ತೆಗೆದುಕೊಂಡು ಹೋದಾಗಲೂ ಹಿಂಜರಿಕೆಯೇ.

ಹೀಗೆಂದುಕೊಳ್ಳುತ್ತಾ ಏನೂ ತೋಚದೆ ಸುಮ್ಮನಾಗಿಬಿಟ್ಟರು. ಪ್ರತಿದಿನ ಗಿದಾಗಲೂ ಮನಸ್ಸಿಗೆ ಇದೇ ಭಾವವೇ. ಯಾವುದೇ ರೀತಿಯ ತಳಮಳವಿಲ್ಲದೆ ಗಿಕೊಂಡಿರುವ ಹೆಂಡತಿಯ ಮುಖದಲ್ಲಿನ ನಿರಾಳತೆ, ಪ್ರಶಾಂತಿ, ಮ್ಯತೆಯನ್ನು ಗಮನಿಸಿದರು. ಮಾರನೇ ದಿನ ಬೆಳಿಗ್ಗೆ ಸ್ವಲ್ಪ ಮುಂಚೆಯೇ ಎದ್ದು ಜೆ, ಸಂಗೀತ, ಭಜನೆಗಳಲ್ಲಿ ತದೇಕಚಿತ್ತದಿಂದ ಮುಳುಗಿದ್ದ ಹೆಂಡತಿಯನ್ನು ನಿಸಿದಾಗ ಆಕೆ ಮತ್ತೊಂದು ಲೋಕದಲ್ಲಿ ಇದ್ದಾಳೆನ್ನಿಸಿತು. ಅಣ್ಣಾಮಾಚಾರ್ಯರ ಾಂಜನಂ, ನೀಲಾಂಜನಂ ಹಾಡುತ್ತಾ ಮಂಗಳಾರತಿ ಎತ್ತಿ ದೀಪದ ಕುಡಿಯಿಂದ ರವಾಗಿ ಬೆಳಕನ್ನು ಕೈಗೆ ಆವಾಹಿಸಿಕೊಂಡು ಭಕ್ತಿಯಿಂದ ಕಣ್ಣಿಗೆ ಸವರಿಕೊಳ್ಳುವ ಮಿನಿ ತಾನು ಇದುವರೆಗೆ ಪ್ರವೇಶಿಸಿದ ಲೋಕವೊಂದರಲ್ಲಿ ತಾನೇ ತಾನಾಗೇ ದುಬಿಟ್ಟಿರಬಹುದೇನೋ ಎಂಬ ಅನುಮಾನ ಬಂತು. ಮತ್ತೆ ಆ ರಾತ್ರಿ, ಮಾರನೇ ದ ರಾತ್ರಿ ಎಚ್ಚರವಾದಾಗಲೂ ಹೊದಿಕೆಯನ್ನು ಹಿಂದಿನಂತೆಯೇ ಸರಿಪಡಿಸಿದರೂ ಡತಿಯನ್ನು ಮುಟ್ಟುವ ಧೈರ್ಯವೇ ಬರಲಿಲ್ಲ. ಇವೆಲ್ಲವೂ ಹೆಂಡತಿಯ ಗಮನಕ್ಕೆ ುತ್ತಿರಬಹುದೇ, ಆಕೆ ಪ್ರತಿಕ್ರಿಯಿಸಬಹುದೇ ಎಂದುಕೊಂಡು ಕಾಯ್ದರು. ಯುತ್ತಲೇ ಇದ್ದರು. ಹಾಗೆ ಕಾಯುತ್ತಲೇ ಇದ್ದಾಗ :

''ನಿನ್ನನ್ನು ನಾನು ಇಷ್ಟೊಂದು ಚರ್ಚಾಸ್ಪರ್ಧೆಗಳಿಗೆ ಕಳಿಸಿ ಪ್ರೋತ್ಸಾಹಿಸಬಾರದಿತ್ತು. ಲ್ಲದರ ಬಗ್ಗೆಯು ನಿನ್ನ ವಿಶ್ಲೇಷಣೆ, ವಾದ, ನಿನ್ನ ವಯಸ್ಸಿಗೆ ಇದೆಲ್ಲಾ ಜಾಸ್ತಿ.''

ಪಿಯುಸಿ ಓದುತ್ತಿದ್ದಾಗ ಇಂಗ್ಲಿಷ್ ಮೇಷ್ಟ್ರು ಪಾಲ್ ಮಣಿಯನ್ ಹೇಳುತ್ತಿದ್ದುದು ಪಿಗೆ ಬಂತು. ಕಲ್ಲಿಕೋಟೆ, ಮಂಜೇಶ್ವರ, ಕೊಟ್ಟಾಯಂ, ಕೊಲ್ಲಂ ಎಲ್ಲ ಗೂ ತನ್ನನ್ನೇ ಚರ್ಚಾಸ್ಪರ್ಧೆಗೆ ತಯಾರುಮಾಡಿ ಕಳಿಸುತ್ತಿದ್ದರು. ದೇವರಿದ್ದಾನೋ ್ಲವೋ, ದೇವರು ಬೇಕೋ ಬೇಡವೋ, ಜೀವನ ನಡೆಯುವುದು ನಂಬಿಕೆ ಂದಲೋ, ವೈಚಾರಿಕತೆಯಿಂದಲೋ – ಇಂತಹದೇ ವಿಷಯಗಳು. ತಾನು ಾತನಾಡುತ್ತಿದ್ದುದರಲ್ಲೇ ತನ್ನ ಧ್ವನಿಯಲ್ಲೇ ತನಗೆಷ್ಟು ನಂಬುಗೆ. ಇದನ್ನೆಲ್ಲ ನಾನು ದಕ್ಕಾಗಿ ಹೇಳುತ್ತಿಲ್ಲ. ನಿಜವಾಗಿಯೂ ನಂಬಿ, ಯೋಚಿಸಿ, ಹೇಳುತ್ತಿದ್ದೇನೆ ಎಂದೇ ದವನ್ನು ಮುಗಿಸುತ್ತಿದ್ದುದು. ಬದುಕಿಗೆ ದೇವರ ಅಗತ್ಯವು ಕಿಂಚಿತ್ತೂ ಇಲ್ಲವೆಂದು ದಿಸಿ ಕಲ್ಲಿಕೋಟೆಯ ಡಿವಿಜನ್ ಮಟ್ಟದ ಸ್ಪರ್ಧೆಯಲ್ಲಿ ಗೆದ್ದಾಗ ಅಭಿನಂದಿಸಿ ಸ್ವಾಮಿ ಶ್ವೇಶ್ವರಾನಂದರು ಹೇಳಿದ್ದರಲ್ಲ ''ಚೆನ್ನಾಗಿ ಮಾತನಾಡುತ್ತಿ ಮಗು, ಇಷ್ಟು ಬೇಗ ಾವ ತೀರ್ಮಾನಕ್ಕೂ ಬರಬೇಡ. ನಮ್ಮ ನಂಬುಗೆಯೇ ನಮಗೆ ಕಣ್ಣು ಟ್ಟಿಯಾಗಿಬಿಡುತ್ತೆ. ವಿಶಾಲವಾದ ಕಾಲದಿಂದ, ಬದುಕಿನಿಂದ ನೀನು ಕಲಿಯುವುದು ಹಳ ಇದೆ. ನಿಮ್ಮ ಮಣಿಯನ್ ಮಾಸ್ತರನ್ನೇ ನೋಡು. ಕ್ರೈಸ್ತರಾದರೂ ನಮ್ಮ ರಾಮ, ಷ್ಣ, ಶಿವ ಎಲ್ಲರನ್ನೂ ತನ್ನೊಳಗೇ ಇಟ್ಟುಕೊಂಡಿದ್ದಾರೆ.''

ಅದೆಲ್ಲದರ ಅಗತ್ಯವೇ ಇಲ್ಲದಂತೆ, ಇಲ್ಲ ಅಗತ್ಯವೇ ಬೀಳದಂತೆ, ಎಲ್ಲ ಪರೀಕ್ಷೆ ಳಲ್ಲೂ ಉತ್ತಮ ದರ್ಜೆಯಲ್ಲಿ ಪಾಸಾಗುತ್ತಾ ಹೋದದ್ದು, ಪರೀಕ್ಷೆಯ ಫಲಿತಾಂಶವೇ ರಣವಾಗಿ ತನ್ನ ನಂಬಿಕೆಗಳಲ್ಲಿ ಇನ್ನೂ ಹೆಚ್ಚಿನ ನಂಬಿಕೆ ಬೆಳೆದದ್ದು, ನಂತರ ವೇಂದ್ರಂನ ಸೆಂಟರ್ ಫಾರ್ ಡೆವಲಪ್‌ಮೆಂಟ್ ಸ್ಟಡೀಸ್ ಸೇರಿದ್ದು. ಎಲ್ಲರೂ ಅಲ್ಲಿ ಸಿಕರೇ. ವಿಚಾರವಾದಿಗಳೇ. ಜೊತೆಗೆ ಪ್ರೊ|| ರಾಜಶೇಖರನ್ ಅಂತಹವರ ಆಯಸ್ಕಾಂತ ವ್ಯಕ್ತಿತ್ವ. ವಿಶ್ವಬ್ಯಾಂಕಿಗೆ ಹೋಗಿ ದೊಡ್ಡ ಸ್ಥಾನವನ್ನು ಅಲಂಕರಿಸುವ ಹೊತ್ತಿಗೆ ಸರಿಯಾಗಿ ಪ್ರೊಫೆಸರ್‌ಗೆ ವೃಷಣ ಗ್ರಂಥಿಯ ತೊಂದರೆ ಬಿಗಡಾಯಿಸಿ ಶಸ್ತ್ರಚಿಕಿತ್ಸೆಯಾಗಿ ವಿಶ್ರಾಂತಿ ಪಡೆಯುತ್ತಿದ್ದಾಗ ಅವರನ್ನು ನೋಡಲು ಬಂದವರೊಬ್ಬರು ಸ್ವಾಮಿ ರಂಗನಾಥಾನಂದರು. ಪ್ರೊಫೆಸರ್ ಬಾಲ್ಯ ಸ್ನೇಹಿತರಂತೆ. ನಮ್ಮೆಲ್ಲರನ್ನು ಉದ್ದೇಶಿಸಿ ಭಾಷಣ ಕೂಡ ಮಾಡಿದ್ದರು. ನಮ್ಮೆಲ್ಲರದು ಒಂದೇ ಪ್ರಶ್ನೆ. ದೇವರ ಮೇಲೆ ಭಾರ ಹಾಕಿ ಕುಳಿತರೆ ಬದುಕನ್ನು ಬದಲಾಯಿಸುವ ಆಸೆಯೂ, ತೀವ್ರತೆಯೂ ಎಲ್ಲಿಂದ ಬರಬೇಕು ? ಎಷ್ಟೇ ಪ್ರಚೋದಿಸಿದರೂ ಕೆರಳಿಸಿದರೂ ವಿಚಲಿತರಾಗಲಿಲ್ಲ ಸ್ವಾಮೀಜಿ. ನಂಬಿಕೆ ಎಂದರೆ ದೇವರನ್ನು ಕುರಿತದ್ದು ಮಾತ್ರವೇ ಏನು ? ಮನುಷ್ಯರೆಲ್ಲರ ಒಳ್ಳೆಯತನದಲ್ಲಿ, ಬದಲಾಯಿಸುವ ಶಕ್ತಿಯಲ್ಲಿ ನಮಗೆ ನಂಬಿಕೆಯಿದೆಯೇ ಅನ್ನುವುದೇ ಮುಖ್ಯ. ಮಾತ್ರವಲ್ಲ, ನಮ್ಮ ಹೋರಾಟ, ಕ್ರಾಂತಿ ಎಲ್ಲದರ ಕೊನೆಯಲ್ಲಿ ನಿರೀಕ್ಷಿಸುವ ಮನುಷ್ಯನ ಸಮಾನತೆಯಲ್ಲಿ ಈಗಿನಿಂದಲೂ, ಈ ಕ್ಷಣದಿಂದಲೂ ನಿಮಗೆ ನಂಬಿಕೆಯಿದೆಯೋ. ಎಲ್ಲ ಮನುಷ್ಯರೊಳಗಿರುವ ಚೈತನ್ಯ, ಸಾಧ್ಯತೆ, ಸೌಂದರ್ಯಗಳ ಬಗ್ಗೆ ಇಂದಿನಿಂದಲೂ, ನಂಬಿಕೆ ಇಲ್ಲದೇ ಹೋದರೆ ಕ್ರಾಂತಿಯ ಕೊನೆಯಲ್ಲಿ ತಾನೇ ತಾನಾಗಿ ಮನುಷ್ಯರ ನಡುವೆ ಸಮಾನತೆ ಮೂಡುತ್ತೆ ಎನ್ನುವುದು ಹುಂಬತನ. ನೀವು ಹೋರಾಟ, ಪ್ರತಿಭಟನೆ ಅಂತ ತಿಳಕೊಂಡಿರೋದು ಕೂಡ ನಾವು ಹೇಳುವ ಪ್ರಾರ್ಥನೆಯ ಸ್ವರೂಪದ್ದೇ. ಎರಡಕ್ಕೂ ವ್ಯತ್ಯಾಸವಿಲ್ಲ. ಪರಿಭಾಷೆ ಬೇರೆ ಅಷ್ಟೇ. ಈ ವ್ಯತ್ಯಾಸ ಗೊತ್ತಾಗುವವರೇ ಏನಾದರೂ ಬದಲಾವಣೆ ಮಾಡಲು ಸಾಧ್ಯ.

ರಂಗನಾಥಾನಂದ, ರಾಜಶೇಖರನ್ ಇಬ್ಬರ ವ್ಯಕ್ತಿತ್ವದ ಪ್ರಭಾವವೂ ಇಲ್ಲದಂತೆ, ಇಬ್ಬರಿಂದಲೂ ಕೇವಲ ಬುದ್ಧಿಮತ್ತೆ, ವೈಚಾರಿಕತೆಯನ್ನು ಮಾತ್ರವೇ ಪಡೆದವರಂತೆ ತಾನೂ ಸೇರಿದಂತೆ ಎಲ್ಲ ಸಹಪಾಠಿಗಳು, ವಿದೇಶೀ ಪ್ರವಾಸ, ಮ್ಯಾನೇಜ್‌ಮೆಂಟ್, ಸಿವಿಲ್ ಸರ್ವೀಸ್ ಹುದ್ದೆಗಳನ್ನು ಹುಡುಕಿಕೊಂಡು ಹೊರಡಲಿಲ್ಲವೆ ? ಸಿವಿಲ್ ಸರ್ವೀಸ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ದೊಡ್ಡ ಹುದ್ದೆಗೆ ಆಯ್ಕೆಯಾಗಿ ಡೆಹರಾಡೂನ್‌ಗೆ ತರಬೇತಿಗೆ ಹೋಗುವ ಮುನ್ನ ಮಣಿಯನ್ ಮಾಸ್ತರನ್ನು ನೋಡಲು ಹೋಗಿದ್ದಾಗ ಆರೋಗ್ಯ ಕ್ಷೀಣಿಸಿತ್ತು. ಹೆಂಡತಿ ಪಾರ್ಶ್ವವಾಯುವಿನಿಂದ ನರಳುತ್ತಾ ಹಾಸಿಗೆ ಹಿಡಿದಿದ್ದರು. ಮಕ್ಕಳಿಬ್ಬರು ಇಂಗ್ಲೆಂಡ್‌ಗೆ ವಿದ್ಯಾಭ್ಯಾಸಕ್ಕೆಂದು ಹೋದವರು ಹಿಂದಿರುಗೇ ಇರಲಿಲ್ಲ. ಮಕ್ಕಳ ಶ್ರೀಮಂತಿಕೆಯಿಂದಾಗಿ ಮನೆಯ ಚಹರೆ, ನೆಲದ ಹಾಸು, ಗೃಹೋಪಕರಣಗಳೆಲ್ಲ ಬದಲಾಗಿದ್ದರೂ ಮಾಸ್ತರ ಅಧ್ಯಯನದ ಕೊಠಡಿ ಹಾಗೇ ಇತ್ತು. ಹಿಂದಿನ ದಿನದ್ದೇ ಫೋಟೊಗಳು, ತೈಲಚಿತ್ರಗಳು. ಪರಮಹಂಸರದ್ದು, ಶಾರದಾದೇವಿಯವರದ್ದು, ಕ್ರಿಸ್ತನದು, ದಟ್ಟಕಾಡುಗಳನ್ನು ಒಳಗೊಂಡ ಪ್ರಕೃತಿಯ ಚಿತ್ರಗಳು, ಎಲ್ಲೆಲ್ಲೂ ಹರಡಿದ್ದ ಪುಸ್ತಕ, ಪೇಪರ್‌ಗಳ ರಾಶಿ. ತನ್ನನ್ನು ಕೂರಲು ಸೂಚಿಸಿದ ಕುರ್ಚಿಯ ಮೇಲೂ ಪುಸ್ತಕಗಳ ಕಂತೆ.

''ವಾದ ಮಾಡುತ್ತಾ, ವಿಚಾರ ಮಾಡುತ್ತಾ ಎಷ್ಟೊಂದು ಬೆಳೆದು ಬಿಟ್ಟೆ ಮಾಧವ. ನಮಗೆಲ್ಲರಿಗೂ ನಿನ್ನ ಬಗ್ಗೆ ಹೆಮ್ಮೆ. ಒಂದು ಮಾತು ಮಾತ್ರ ನೆನಪಿನಲ್ಲಿಟ್ಟುಕೊ. ಜೀವನದಲ್ಲಿ ನಮ್ಮ ರೀತೀನೇ ಭಾವಿಸದೆ ಇರುವವರು, ನಂಬದೆ ಇರುವವರ ಬಗ್ಗೇನೂ ಸಹನೆ ಮಾತ್ರ ಇಟ್ಟುಕೊಂಡರೆ ಸಾಲದು, ಇಂತವರನ್ನೆಲ್ಲ ಪ್ರೀತಿಸೋಕು ನಮ್ಮ ನಮ್ಮ ಶಕ್ತ್ಯನುಸಾರ ಪ್ರಯತ್ನಿಸಬೇಕು.''

ಶೇಕ್ಸ್‌ಪಿಯರ್‌ನಿಂದ ಹಿಡಿದು, ಎಳುತ್ತಚ್ಚನ್‌ತನಕ ಎಲ್ಲರ ಕೃತಿಗಳನ್ನೂ ಆಮೂಲಾಗ್ರವಾಗಿ ವಿಶ್ಲೇಷಿಸುವ ಮಾಸ್ತರು ನಂಬಿಕೆಯ ಪ್ರಶ್ನೆ ಬಂದಾಗ ಮಾತ್ರ ತಾನು ಓದಿದ್ದು, ತಿಳಿದದ್ದು, ವಿಚಾರಮಾಡಿದ್ದು ಎಲ್ಲವೂ ಸುಳ್ಳೆಂಬಂತೆ ಒಂದು ಫೋಟೊ ಮುಂದೆ ಭಕ್ತಿಯಿಂದ ಕೂರುವುದು, ಪ್ರಾರ್ಥಿಸುವುದು ಮೆನನ್‌ಗೆ ಹಾಸ್ಯಾಸ್ಪದವಾಗಿ ಕಂಡಿತ್ತು. ತನ್ನನ್ನು ಅಷ್ಟೊಂದು ಪ್ರೀತಿಸಿದ, ಇಷ್ಟೊಂದು ಬೆಳೆಸಿದ ಮಾಸ್ತರ ಎದುರಿಗೆ ಹಾಗೆ ಹೇಳಲು ಹಿಂಜರಿಕೆಯಾಗಿತ್ತು. ಮೂರ್ತಿ ಪೂಜೆ, ವಿಗ್ರಹಾರಾಧನೆ, ಎಷ್ಟು ಬಾಲಿಶವಾದ್ದು ಎಂದೆಲ್ಲಾ ಮೃದುವಾದ ಮಾತುಗಳಲ್ಲಿ ವಿವರಿಸಲು ಹೊರಟಾಗ :

''ಸರಿ, ಮಾಧವ, ನಿರಾಕಾರವನ್ನು ಪೂಜಿಸಬಹುದು, ಪ್ರಾರ್ಥಿಸಬಹುದು. ಆದರ ನಿರಾಕಾರ ಕೂಡ ನಮಗೆ ದಕ್ಕಬೇಕಾದರೆ ಮನಸ್ಸಿಗೆ ಎಷ್ಟು ನಿರ್ವಿಕಲ್ಪತೆ ಬೇಕು, ನಿರ್ವಿಕಾರ ಬೇಕು. ಸದಾ ಯೋಚಿಸುವ, ವಿಶ್ಲೇಷಿಸುವ ಮನಸ್ಸು ಕ್ಷಣವಾದರೂ ಚಿಂತನೆಯ ಆಸರೆಯಿಲ್ಲದೆ ನಿಲ್ಲಬಲ್ಲದೇನು. ಮನಸ್ಸೇ ನಿರ್ಮಲವಾಗದೇ ನಿರಾಕಾರದ ಕಲ್ಪನೆ, ಪ್ರಾರ್ಥನೆಯೆಲ್ಲಿಂದ ಬರಬೇಕು, ಮಾಧವಾ.''

ತಾದಾತ್ಮ್ಯ ಬಯಸುವುದೇ ಮನಸ್ಸಿನ ಪ್ರವೃತ್ತಿಯಾದರೆ ವಿಗ್ರಹವೇ ಏಕೆ, ವಿಶಾಲವಾದ ಭೂಮಿಯಿಲ್ಲವೇ, ಪ್ರಕೃತಿಯಿಲ್ಲವೇ, ಆಕಾಶವಿಲ್ಲವೇ, ಬೆಳಗುವ

ಕಾಡಿನಲ್ಲಿ ಓಡಾಡುವಾಗ ಮನಸ್ಸು ಗ್ರಹಿಸುವ ಅಗಾಧತೆಯನ್ನು ಮಾಸ್ತರಿಗೆ ವಿವರಿಸಲು ಮಾಧವ ಪ್ರಯತ್ನಿಸಿದ್ದ. ಮಾಸ್ತರು ಎಷ್ಟು ನಕ್ಕಿದ್ದರೆಂದರೆ ನಕ್ಕು ನಕ್ಕು ಕೆಮ್ಮೇ ಬಂದುಬಿಟ್ಟಿತ್ತು. ನಗುನಗುತ್ತಲೇ ನಿಧಾನವಾಗಿ ನಡೆದು ಅಡುಗೆ ಮನೆಗೆ ಹೋಗಿ ಹಸಿರುಮೆಣಸಿನಕಾಯಿ, ಕಹಿಬೇವಿನ ಸೊಪ್ಪು, ಈರುಳ್ಳಿ ಚೂರು ಬೆರಿಸಿದ ನೀರು ಮಜ್ಜಿಗೆಯ ಲೋಟವನ್ನು ಮುಂದಿಟ್ಟು ಕೇಳಿದ್ದರು :

''ಏನು ಮಾಧವಾ, ಭೂಮಿ, ಆಕಾಶ ಅಗಾಧವಾದ್ದು ನಿಜ. ಅಷ್ಟೊಂದು ಅಗಾಧವಾದದ್ದರ ಜೊತೆ ಮಾತ್ರ ತಾದಾತ್ಮ್ಯ ಪಡೆಯುತ್ತೇನೆ ಎನ್ನುವುದು ಕೂಡ ಮನುಷ್ಯನಿಗೆ ತನ್ನ ಮಹತ್ವವನ್ನು ಅಹಂಕಾರವನ್ನು ಸೂಚಿಸುವ ಒಂದು ಕ್ರಮವಾಗಿರ ಬಾರದೇಕೆ? ತಾದಾತ್ಮ್ಯ ನೆರೆಹೊರೆಯವರ ಜೊತೆ, ಅವರ ನಂಬುಗೆಯೊಡನೆ ಕೂಡ ಬೇಕಲ್ಲವೆ? ಬೇಜಾರು ಮಾಡಕೊಬೇಡ. ತಮಾಷೆಗೆ ಒಂದು ಮಾತು ಹೇಳ್ತೀನಿ. ಮತ್ಸ್ಯ, ಕೂರ್ಮ, ವರಾಹ ಕೂಡ ದೇವರವತಾರವೇ ನಮ್ಮಲ್ಲಿ. ನಿನಗೂ ಗೊತ್ತು. ಆದರೂ ನಮ್ಮ ದೇಶದಲ್ಲಿ ಪ್ರತಿವರ್ಷವೂ ಎಷ್ಟು ಪ್ರಾಣಿಗಳು ಹುಟ್ಟುತ್ತವೆ, ಸಾಯುತ್ತವೆ. ಇವುಗಳ ರೋಗರುಜಿನ ಏಂದೇನಾದರೂ ನಮಗೇನು ಗೊತ್ತುಂಟೊ. ಸುಮ್ಮನೆ ಭೂಮಿ, ಆಕಾಶದ ಅಗಾಧತೆಯ ಬಗ್ಗೆ ಮಾತನಾಡುತ್ತೇವೆ, ಅಷ್ಟೇ. ಪರಮಹಂಸರ ಮುಂದೆ ನಿಲ್ಲಲಿ, ಕ್ರಿಸ್ತನ ಮುಂದೆ ನಿಲ್ಲಲಿ, ಪದ್ಮನಾಭನ ಮುಂದೆ ನಿಲ್ಲಲಿ, ಕಣ್ಣುಮುಚ್ಚಿಯೇ ತಾನೇ ಪ್ರಾರ್ಥಿಸುವುದು. ಹಾಗೆ ಪ್ರಾರ್ಥಿಸುವಾಗ ಎಲ್ಲ ದೇವರ ಪಾದಗಳಲ್ಲೂ ನನಗೆ ಕಾಣುವುದು ಬೆಳಕಿನ ಕೋಲ್ಮಿಂಚೇ.''

ಎಲ್ಲಿಂದರಲ್ಲಿ ಮೆನನ್‌ಗೆ ಈ ನೆನಪುಗಳೇ ಈಚೆಗೆ ಬಾಧಿಸುವುದು. ನೆನಪಿನ ಒತ್ತಡ ತೀವ್ರವಾದಾಗಲೆಲ್ಲಾ ಏಕೆ ಈ ನೆನಪುಗಳೆಲ್ಲ ಈಗ ಇದ್ದಕ್ಕಿದ್ದಂತೆ ಇಷ್ಟೊಂದು ವರ್ಷಗಳ ನಂತರ ಒತ್ತರಿಸಿಕೊಂಡು ಬರುತ್ತಿವೆ ಎಂಬ ಪ್ರಶ್ನೆ ಕೂಡ ಹುಟ್ಟುವುದು. ಇಂತಹ ನೆನಪುಗಳ ಅಗತ್ಯವೇ ಇಲ್ಲದಂತೆ ಬದುಕು ಸುಸೂತ್ರವಾಗಿ ಇಷ್ಟು ದಿನ ನಡೆದು ಕೊಂಡು ಬಂದದ್ದೇ ಕಾರಣವಾಗಿರಬಹುದೇ! ಎಲ್ಲವೂ ಸುಸೂತ್ರವಾಗಿದ್ದರೆ ಯಾವ ನೆನಪೂ ಬಾಧಿಸುವುದಿಲ್ಲವೇನೋ? ಮೆನನ್‌ಗೆ ಇನ್ನೂ ಒಂದು ಸಂಗತಿ ಅರ್ಥವಾಗಲಿಲ್ಲ. ಇದುವರೆಗೆ ನೋಡುತ್ತಿದ್ದ, ದಿನವೂ ಎದುರಾಗುತ್ತಿದ್ದ ಎಲ್ಲವೂ




ಶುಭಾಶಯಗಳು



ಸಮಾಜ ಪುಸ್ತಕಾಲಯ

ಶಿವಾಜಿ ಬೀದಿ, ಧಾರವಾಡ - 580 001

ದೂರವಾಣಿ : 0836-2791616

ಶಾಖೆ : ಕೊಪ್ಪೀಕರ ಬೀದಿ, ಹುಬ್ಬಳ್ಳಿ - 580 020


ಹೊಸದೆಂಬಂತೆ, ಇದೀಗ ತಾನು ಮೊದಲ ಬಾರಿಗೆ ನೋಡುತ್ತಿರುವಂತೆ ವಾಗುತ್ತಿತ್ತು. ಮರವೆಂದರೆ ಮರ, ಮನುಷ್ಯರೆಂದರೆ ಮನುಷ್ಯರು, ಮನೆ ಮನೆ, ಎಲ್ಲವೂ ಹೊಸದಾಗಿ ಕಾಣಿಸೋದು. ಏಕೆ ಹೀಗೆಂದು ತಿಳಿಯದೆ ಎಲ್ಲವನ್ನು ನೋಡುತ್ತಿದ್ದರು. ಎಲ್ಲವೂ ಎಷ್ಟು ನಿಧಾನವಾಗಿದೆ, ನಿರಾಳವಾಗಿದೆ ಮತ್ತೆ ಗಲಿಬಿಲಿಗೊಳಗಾಗುತ್ತಿದ್ದರು.

ಈ ಒತ್ತಡದಲ್ಲಿದ್ದಾಗಲೇ ಮೆನನ್‌ಗೆ ಸುಮಾರು ನಲವತ್ತು - ನಲವ ವರ್ಷಗಳ ನಂತರ ಕನಸೊಂದು ಬಿತ್ತು. ನೆನಪಿದ್ದ ಹಾಗೆ ಎಂದೂ ಕನಸೇ ಬಿದ್ದಿ ಮೆನನ್‌ಗೆ. ಮದುವೆಯಾದ ಹೊಸದರಲ್ಲಿ ಹೆಂಡತಿ ಹತ್ತಿರ ಹಾಗೆಂದು ಕೊಂಡಿದ್ದಾಗ, ಎಲ್ಲಾದರೂ ಉಂಟೇ, ಕನಸೇ ಬೀಳದೆ ಹೇಗರಿ ನಿದ್ದೆ ಮಾಡೋ ಬದುಕೋದು, ಎಂದು ಯಾಮಿನಿ ಛೇಡಿಸಿ ಬಂಧುಬಳಗದವರ ಹತ್ತಿರವೆಲ್ಲ ಒಪ್ಪಿಸಿ

ಕನಸು ಬಿದ್ದದ್ದು ರಾತ್ರಿ. ಕನಸಿನ ತುಂಬಾ ಹಗಲಿನ ಬೆಳಕು. ಆದರೂ ಆಕಾಶದ ನಕ್ಷತ್ರಗಳು ಕಾಣ್ತಾಯಿವೆ. ಯಾವುದೋ ಜಾತ್ರೆಯೆಂಬಂತೆ, ಉತ್ಸವವೆಂಬಂತೆ ಜ ಹಬ್ಬದ ದಿರಿಸಿನಲ್ಲಿ ಸರಸರ ಓಡಾಡ್ತಾಯಿದ್ದಾರೆ. ಇಂತಹ ಜನಸಂದಣಿಯ ಮೂಡಿಬಂದ ವಿವೇಕ್ ಅಯ್ಯರ್ ಎದುರಿಗೆ ಬಂದು ಕೂತು ಬಾಯಿ ತುಂಬಾ ತಟಕ್ಕನೆ ಹಾಸಿಗೆಯಿಂದ ಎದ್ದರು. ವಿವೇಕ್ ನೀಲಿಬಣ್ಣದ ಷರ್ಟ್, ಜೀನ್ಸ್ ಪ್ಯಾ ತೊಟ್ಟಿದ್ದ. ಬೆಸೆಂಟ್‌ನಗರದ ಜೆ. ಕೆ. ಮಂಡಳಿಯವರ ವಿಚಾರ ಸಂಕಿರಣಕ್ಕೆ ಮಂಗಳೂರಿಂದ ಬಂದಿದ್ದಾಗ ಅದೇ ರೀತಿಯ ಬಟ್ಟೆ ಹಾಕಿಕೊಂಡು ಬಂದಿದ್ದನಲ್ಲ

''ಏನು ಅಂಕಲ್ ನೀವು ಮಂಗಳೂರಿಗೆ ಬಂದವರು ತಕ್ಷಣ ಹೊರಟುಬಿ ನನ್ನ ಕ್ರಿಮೇಷನ್‌ಗೂ ಕೂಡ ಕಾಯದೇ.''

ಅಪಘಾತದ ಸುದ್ದಿ ಗೊತ್ತಾದ ತಕ್ಷಣ ಮಂಗಳೂರಿಗೆ ವಿಮಾನದಲ್ಲಿ ಹೋದ ಕಾಲೇಜಿನಿಂದ ಮಗ ವಿವೇಕ್ ಮೆನನ್‌ನ್ನು ಬಿಡಿಸಿಕೊಂಡು ತಕ್ಷಣ ವಾ ಬಂದುಬಿಟ್ಟಿದ್ದರು. ಹಂಪನಕಟ್ಟೆಯ ಮಿಶನ್ ಆಸ್ಪತ್ರೆಗೆ ಹೋಗಿ ವಿವೇಕ್ ಅಯ ಹೆಣ ನೋಡಿದ್ದರು. ವಿವೇಕನ ಹಿರಿಯ ಸಹೋದರ ಕೌಲಾಲಂಪೂರ್‌ನ ಬರಬೇಕಾದ್ದರಿಂದ ಅಂತ್ಯಕ್ರಿಯೆ ಒಂದು ದಿನ ಮುಂದೆ ಹೋಗಿತ್ತು. ವಿ ಅಯ್ಯರ್‌ನ ತಂದೆ-ತಾಯಿ ರೋದಿಸುತ್ತಿದ್ದ ರೀತಿ, ಪದೇ ಪದೇ ಬಂದು ವಿವೇಕ್‌ನನ್ನು ತಬ್ಬುತ್ತಿದ್ದುದು, ಎಲ್ಲ ಹುಡುಗರೂ ಮಗ ವಿವೇಕ್ ಸು ಮುತ್ತಿಕೊಂಡು ವಿವೇಕ್ ಅಯ್ಯರ್ ಗುಣಗಾನ ಮಾಡುತ್ತಿದ್ದುದು ನೋ ದಿಗಿಲಾಗಿತ್ತು. ತನ್ನ ಮಗನನ್ನು ಕೂಡ ಇದ್ದವರೆಲ್ಲ ಸೇರಿ ತನ್ನಿಂದ ಕಸಿದುಕೊ ಬಿಡಬಹುದೆಂಬ ಭಯ.

ಇಲ್ಲ ಹಾಗಲ್ಲಪ್ಪ ವಿವೇಕ್ – ಉತ್ತರ ಕೊಡುವ ಮುನ್ನವೇ ಮಾಯವಾ ಆದರೇನಂತೆ ಮತ್ತೆ ಮರುದಿನ ಅದೇ ಹೊತ್ತಿಗೆ ಬಂದ. ಕನಸಿನಲ್ಲಿ ಆಗಲೂ ಕನಸಿ ಹಗಲೇ. ಮತ್ತೆ ನಕ್ಷತ್ರಗಳೇ. ಜನಸಂದಣಿ ಮಾತ್ರವಿಲ್ಲ.

''ಏನು ಅಂಕಲ್,You are not even thankful to me for having died. ನಿಮಗೇ ಗೊತ್ತಲ್ಲ, ಸೃಷ್ಟಿ ಪ್ರಾರಂಭವಾದ ಕ್ಷಣದಿಂದ ಪ್ರಪಂಚದಲ್ಲಿ ಜೀವರಸ ಇರೋದು ಒಂದೇ ಪ್ರಮಾಣದಲ್ಲಂತೆ. ಗಿಡ, ಮರ, ಪ್ರಾ ಪಕ್ಷಿ, ಭೂಮಿ, ನಕ್ಷತ್ರ, ಮನುಷ್ಯರು – ಎಲ್ಲರಿಗೂ ಇದನ್ನೇ ಹಂಚಬೇಕ ಒಂದೊಂದು ಯುಗದಲ್ಲಿ ಗಿಡಮರಗಳು ಹೆಚ್ಚಾಗಬಹುದು. ಮತ್ತೊಂದ ಪಶುಪಕ್ಷಿಗಳು. ಇನ್ನೊಂದರಲ್ಲಿ ಮನುಷ್ಯರು. ನಾವು ಹುಟ್ಟುವುದು, ಬದುಕುವು ಸಾಯುವುದು ಕೂಡ ಯಾರದೋ ಪರವಾಗಿ, ಇನ್ನು ಯಾರದೋ ಪ್ರತಿನಿಧಿಯಾ ನಿಮ್ಮ ಮಗ ವಿವೇಕ್ ಪರವಾಗಿ ನಾನು ಸತ್ತೆ ಎಂದಲ್ಲ ನಾನು ಹೇಳ್ತಿರೋದು. ನ ಪರವಾಗಿ ಕೂಡ ನಾನು ಸತ್ತಿರಬಹುದಲ್ಲವೇ!''

ನೀರವ ರಾತ್ರಿಯಲ್ಲೂ, ಕನಸಿನಲ್ಲೂ ಕೂಡ ಮೆನನ್ – ಏನು, ಏನು, ನಿ ಹೇಳ್ತಿರೋದು. ಮಾತನಾಡುತ್ತಿರುವುದರ ಪರಿವೆಯೇನಾದರೂ ಇದೆಯಾ – ಬಿಟ್ಟರು. ದಢಬಢನೆ ಹಾಸಿಗೆಯಿಂದ ಇಳಿದು ವಿವೇಕನನ್ನು ಹಿಡಿಯಲು ಹೊರಟ ಸತ್ತಿದ್ದ ವಿವೇಕ್ ಅಯ್ಯರ್‌ಗೂ ಕೂಡ ಹೆದರಿಕೆಯಾಗಿ ಓಡಿಬಿಟ್ಟ. ಮತ್ತೆ ಹುಡ ಕನಸಿನಲ್ಲಿ ಬರಲಿಲ್ಲ. ಮೆನನ್ ಪ್ರತಿದಿನ ಕನಸನ್ನೂ ಹುಡುಗನ ಆಗಮನವ ನಿರೀಕ್ಷಿಸಿದರು, ಕಾಯ್ದರು. ಕನಸು ಬೀಳದೆ, ಹುಡುಗ ಕಾಣದೆ, ನಿದ್ದೆ ಬಾರ ಕೂರಲಾರದೆ, ನಿಲ್ಲಲಾರದೆ ಒದ್ದಾಡಿದರು. ಬಾಲ್ಯದಿಂದ ಪರಿಚಯವಿದ್ದವ ಲಾಗಾಯ್ತಿನಿಂದ ಕಂಡ ರಸ್ತೆಗಳು, ಮರಗಳು ಒಂದರ ನಂತರ ಒಂದು ಒಂದೊಂದ ಸುಮ್ಮನೆ ಬಂದು ಇವರ ಮುಂದೆ ನಿಲ್ಲುತ್ತಿದ್ದವು. ಕೆಲಸದ ಮೇಲೆ ದೇಶದ ನಾ

ಗಳನ್ನು ಸುತ್ತುತ್ತಿದ್ದ ಮೆನನ್‌ಗೆ ಹೀಗೆ ಎದುರಿಗೆ ಬಂದು ರರ ಪೈಕಿ ಯಾರು ಬದುಕಿದ್ದಾರೆ. ಯಾರು ಸತ್ತಿದ್ದಾರೆ ಎಂಬುದು ತಿಳಿಯುತ್ತಿರಲಿಲ್ಲ. ರಸ್ತೆಗಳು, ಮರಗಳು, ಸ್ಥಳಗಳು ಮಾತ್ರ ಮೆನನ್ ಂದೋ ಕಂಡ ಸ್ಥಿತಿಯಲ್ಲೇ ಇತ್ತು. ರಸ್ತೆಯಲ್ಲಿ, ಬಸ್‌ಸ್ಟ್ಯಾಂಡ್‌ನಲ್ಲಿ ತ್ತಿ ಕಂಡಿದ್ದವರೇ ಈಗಲೂ ಸೌದೆ ಹೊರುತ್ತಾ, ಕಂಕುಳಲ್ಲಿರುವ ನ್ನು ಸಾವರಿಸುತ್ತಾ, ಹಣೆಯ ಮೇಲೆ ಮೂಡಿದ ಬೆವರು ಹನಿಯನ್ನು ಕೊಳ್ಳುತ್ತಾ, ಯಾರೂ, ಯಾವುದೂ, ಏನನ್ನೂ ಮಾತಾಡುತ್ತಿರಲಿಲ್ಲ. ನ್ನ ಬೇಡುತ್ತಿರಲಿಲ್ಲ. ಮೆನನ್‌ಗೂ ಕೂಡ ಏನನ್ನೂ ಕೇಳ ಸುತ್ತಿರಲಿಲ್ಲ. ಯಾವಾಗ ಬಂದವು, ಬರುತ್ತವೆ, ಎಷ್ಟು ಹೊತ್ತು ಗೆ ನಿಲ್ಲುತ್ತವೆ, ಕೂರುತ್ತವೆ ಕೂಡ ತಿಳಿಯುತ್ತಿರಲಿಲ್ಲ, ಯುತ್ತಿರಲಿಲ್ಲ. ಮನೆಯಲ್ಲಾಗಲೀ, ಆಫೀಸಿನಲ್ಲಾಗಲೀ ಯಾರ ವೂ ಇವೆಲ್ಲವನ್ನು ಹೇಳಬೇಕೆಂದು ಕೂಡ ಅನಿಸಲಿಲ್ಲ.

ೀಗೇ ಒಂದು ದಿನ ಮೆನನ್ ಚಂದ್ರಮೌಳೇಶ್ವರ ದೇವಸ್ಥಾನದ ಕ್ಕೆ ಒತ್ತಿಕೊಂಡಂತಿರುವ ತರಕಾರಿ ಅಂಗಡಿಯಲ್ಲಿ ರ ಮುಗಿಸಿ ಬಟಾಣಿ, ಟೊಮ್ಯಾಟೊ, ಲಂಗಿ, ಬೆಂಡೆಕಾಯಿ, ಕುಂಬಳ, ದಂಟಿನ ಸೊಪ್ಪು ದ ಬ್ಯಾಗನ್ನು ಭಾರವೆಂದು ಎಡಗೈಯಿಂದ ಬಲಗೈಗೆ ಾಯಿಸಿದ ನಂತರ ಮೆನನ್ ಮನೆ ಕಡೆಗೆ ನಾಲ್ಕು ಹೆಜ್ಜೆ ನ್ದಾರೆ. ಎದುರುಗಡೆ ಒಬ್ಬ ನೀಳಕಾಯದ, ಮುಖದ ಾ ಗಡ್ಡದ ರಾಶಿ ಬೆಳೆಸಿಕೊಂಡ, ಗಂಟುಗಂಟಾದ ದ ಜಡೆಕೂದಲಿನ, ಪಾಣಿಪಂಚೆ, ತೋಳಿಲ್ಲದ ರನ್, ಕಂದು ಬಣ್ಣದ ಅಂಗವಸ್ತ್ರ ಹೊದ್ದ ಒಬ್ಬ ಷ್ಯ ಇವರಿಗೇ ನಮಸ್ಕಾರ ಎನ್ನುವಂತೆ ಭಾವ ಮಾಡಿದ. ಯಾರೆಂದು ಮೆನನ್‌ಗೆ ಲೇ ಇಲ್ಲ. ಆತನೇ ಮತ್ತೆ ನಕ್ಕ.

''ಇದೇನು ಹೀಗೆ ನೋಡ್ತಿದ್ದೀರಿ. ನನ್ನನ್ನು ನೋಡೇ ಇಲ್ಲವೆನ್ನುವಂತೆ.''

''ಕ್ಷಮಿಸಿ, ತಾವು ಯಾರೆಂದು ಗೊತ್ತಾಗಲಿಲ್ಲ. ಹಿಂದೆ ನೋಡಿದ ನೆನಪು ಕೂಡ '' ಆತನನ್ನೇ ದೃಷ್ಟಿಸುತ್ತಾ, ಯಾರಿರಬಹುದೆಂದು ನೆನಸಿಕೊಳ್ಳುತ್ತಾ, ಈಚಿನ ಗಳಲ್ಲಿ ಇದ್ದಕ್ಕಿದ್ದಂತೆ ಬಂದು ನಿಲ್ಲುವ ಜನರ ಪೈಕಿ ಕೂಡ ಈತ ಂತಿಲ್ಲವೆಂದೆನ್ನುಕೊಳ್ಳುತ್ತಾ ನಿಧಾನವಾಗಿ ಮೆನನ್ ಹೇಳಿದರು.

'ಇದೇನಿದು ಹೀಗಂತೀರಿ. ಮಧ್ಯರಾತ್ರಿ ಆಗುವ ಹಾಗಿಲ್ಲ. ಸರಸರ ಎಂದು ದಿನವೂ ಸ್ಥಾನದ ಹತ್ತಿರ ಬರತೀರಿ. ಕಂಭಗಳನ್ನೆಲ್ಲ ಸವರತೀರಿ. ಎಲ್ಲ ಕೋನಗಳಿಂದ ಗಳನ್ನು ನಿರುಕಿಸುತ್ತೀರಿ. ಗರುಡಗಂಭದ ಹತ್ತಿರ ನಿಂತಕೊಂಡು, ಎರಡೂ ಂದಲೂ ಅದನ್ನು ತಬ್ಬಿ ಆಕಾಶದ ಕಡೆ ನೋಡುತ್ತಾ ಗಂಟೆಗಟ್ಟಲೆ ನಿಂತಿರುತೀರಿ. ಷ್ಟಕ್ಕೆ ನೀವೇ ಏನೇನೋ ಮಾತಾಡಕೊತೀರಿ. ಕಬ್ಬಿಣದ ದಪ್ಪ ಬೀಗ ಜಡಿದಿರುವ ್ಯದ್ವಾರದ ಹತ್ತಿರ ನಿಂತು ಬಾಗಿಲ ಸಂದಿಯಿಂದಲೇ ಗರ್ಭಗೃಹದೊಳಗಿರುವ ರ ವಿಗ್ರಹವನ್ನು ನೋಡ್ತಾ ದೊಡ್ಡದಾಗಿ ನಿಟ್ಟುಸಿರು ಬಿಡತೀರಿ. ನನಗೆ ಏನೇನೋ ಕೇಳತೀರಿ. ಹೆಚ್ಚು ಕಡಿಮೆ ಎರಡು ಅಮಾವಾಸ್ಯೆಯಿಂದ ಹೀಗೆ ನಡೀತಾಯಿದೆ. ನೋಡಿದರೆ ನನ್ನನ್ನು ನೋಡೇ ಇಲ್ಲ ಅಂತೀರಲ್ಲ.''

ಕೇಳುತ್ತಾ ಕೇಳುತ್ತಾ ಮೆನನ್ ದೇಹವೆಲ್ಲ ಗಡಗಡನೆ ನಡುಗಲು ಪ್ರಾರಂಭಿಸಿತು. ಲ್ಲಿದ್ದ ತರಕಾರಿ ಚೀಲ ಕೆಳಕ್ಕೆ ಬಿತ್ತು. ನಡುಕದಲ್ಲೇ ಎದುರಿಗಿದ್ದವನನ್ನು ತಬ್ಬಿದರು. ತನಾಡಲು ಹೊರಟರೆ ನಾಲಿಗೆ ಸರಿಯಾಗಿ ಹೊರಳದೆ ಮಾತೆಲ್ಲ ತೊದಲು ಲಾಗುತ್ತಿತ್ತು. ಸ್ವಲ್ಪ ಹೊತ್ತಿನ ನಂತರ ಸಾವರಿಸಿಕೊಂಡು,

'ಯಾರು ನೀವು, ಯಾರು ನೀವು, ನೀವೇನು ಹೇಳ್ತಾ ಇರೋದು, ಬಿಡಿಸಿ ಹೇಳಿ.''

'ನಾನೇ ಪರಮೇಶ್ವರನ್ ಅಂತಾ, ಏಳೆಂಟು ತಲೆಗಳಿಂದ ದೇವಸ್ಥಾನದ ಮುಖ್ಯ ಕರ ಸ್ಥಾನಮಾನ ನಮ್ಮದೇ. ನಮ್ಮಿಂದ ದೇವರ ಸೇವೆಯಲ್ಲಿ ಯಾವಾಗ ಎಂದು ಯಿತೋ ಗೊತ್ತಿಲ್ಲ. ಚಿಕ್ಕಂದಿನಿಂದ ನನಗೆ ಬಿಸಿನೀರು ಮುಟ್ಟಿದರೆ, ಬಿಸಿನೀರು ಮಾಡಿದರೆ ಮೂರ್ಛೆರೋಗ. ಹಾಗಂತ ತಣ್ಣೀರು ಸ್ನಾನ ಮಾಡಿದರೆ ದಿನವೆಲ್ಲ ಜ್ವರ. ಇದನ್ನೇ ಒಂದು ದೊಡ್ಡ ಕಾರಣಾಂತ ಮಾಡಿ ದಾಯಾದಿಗಳು ನನ್ನನ್ನು



ದೇವರ ಸೇವೆಯಿಂದ ದೂರ ಮಾಡಿಬಿಟ್ಟರು. ಮೊದಮೊದಲು ನನಗೂ ಇದರಿಂದ ಕೋಪ ಬರೋದು, ಬೇಸರವಾಗೋದು. ಗರ್ಭಗುಡಿಯ ಹಿಂದೆಯೆ ನಮ್ಮ ವಾಸದ ಮನೆ. ಆದದ್ದೆಲ್ಲ ಒಳ್ಳೆಯದಕ್ಕೇ. ಸುಪ್ರಭಾತ, ಅಭಿಷೇಕ, ಸಂಜೆಯ ಆರತಿ, ಶಯನೋತ್ಸವ ಎಲ್ಲವೂ ಮುಗಿದು ಭಕ್ತರು, ನಮ್ಮ ದಾಯಾದಿಗಳು, ಪಾರುಪತ್ತೇಗಾರರು ಎಲ್ಲರೂ ಅವರವರ ಮನೆಗಳಿಗೆ ಹೋದ ಮೇಲೆಯೇ ದೇವಸ್ಥಾನಕ್ಕೊಂದು ನಿರಾಳ. ದೇವಸ್ಥಾನ ದೇವರಸ್ಥಾನವೇ ಆಗಿಬಿಡುತ್ತೆ. ನಾನು ಆವಾಗ ನಮ್ಮ ಮನೆಯಿಂದ ಹೊರ ಬರ್ತೇನೆ. ಪ್ರಾಂಗಣದಲ್ಲಿ ಸುಮ್ಮನೆ ಗಂಟೆಗಟ್ಟಲೆ ಒಬ್ಬನೇ ಕುಳಿತಿರ್ತೇನೆ. ಸದ್ದಿಲ್ಲದೆ ಹೋಗಿ ಗರ್ಭಗುಡಿಯ ಬಾಗಿಲು ತೆಗೀತೀನಿ. ದೇವರ ಹತ್ತಿರ ನಿಂತು ಮನಸೋ ಇಚ್ಛೆ ಮಾತನಾಡಬಹುದು. ಬೇಕಾದ ದೇವರ ಸೇವೆ ಮಾಡಬಹುದು. ಗರ್ಭಗುಡಿಯ ಹೊಸ್ತಿಲ ಮೇಲೆ ಕುಳಿತುಕೊಂಡರೆ ಸಾಕು, ಸುತ್ತಮುತ್ತಲ ಮನೆಗಳಲ್ಲಿ ನಡೆದಿರುವುದು, ನಡೆಯುವುದು ಎಲ್ಲವೂ ಕಾಣುತ್ತದೆ. ಹೊತ್ತಾಗತಾ, ಹೊತ್ತಾಗತಾ ಯಾರು ಯಾರೋ ದೇವಸ್ಥಾನದ ಹತ್ತಿರ ಬಂದು ಇಳೀತ್ತಾರೆ. ಪ್ರಾಂಗಣದ ತುಂಬಾ ಓಡಾಡ್ತಾರೆ. ಕೆಲವರು ಸುಮ್ಮನೆ ಕುಳಿತುಬಿಡ್ತಾರೆ. ಇನ್ನು ಕೆಲವರು ಗರ್ಭಗುಡಿಯ ಹತ್ತಿರ ಹೋಗಿ ಪರದೆ ಸರಿಸಿ ಏನೇನೋ ಮಾತಾಡಿಬರ್ತಾರೆ. ಕೆಲವು ದಿನಗಳಂತೂ ಯಾರೂ ಬರುವುದೇ ಇಲ್ಲ. ಯಾಕೆ ನಿಮಗೆ ಜ್ಞಾಪಕ ಬರ್ತಾ ಇಲ್ಲವಾ, ಮೊನ್ನೆ ಕೂಡ ಬಂದಿದ್ದಿರಿ. ಗರುಡಗಂಭದ ಹತ್ತಿರ ನಿಂತಕೊಂಡು ಆಕಾಶದ ಕಡೆ ನೋಡುತಾ, ಬಲಗೈನ ಮೇಲಕ್ಕೆ ಮಾಡಿ, ಏನೇನೋ ಸನ್ನೆ ಮಾಡುತ್ತಾ ಎಷ್ಟು ಹೊತ್ತು ನಿಂತಿದ್ದಿರಿ.''

ಮೆನನ್ ನಡುರಾತ್ರಿಯಲ್ಲಿ ಎದ್ದು ಯಾರಿಗೂ ಗೊತ್ತಾಗದ ಹಾಗೆ ದೇವಸ್ಥಾನಕ್ಕೆ ಹೋಗುತ್ತಿದ್ದುದು ನಿಜ. ಹಾಗೆ ಮೆನನ್ ರಾತ್ರೋರಾತ್ರಿ ಹೋಗುತ್ತಿದ್ದುದನ್ನ ಕೆಲವರು ನೋಡೂ ಇದ್ದಾರೆ. ಹಾಗಾಗಿಯೆ ಮೆನನ್ ದೇವರನ್ನು ನಂಬಲು ಶುರು ಮಾಡಿದ್ದಾರೆಂದು ಕಾಲೊನಿಯಲ್ಲೆಲ್ಲ ಸುದ್ದಿ ಹಬ್ಬಿದ್ದು. ಆದರೆ ಮೆನನ್‌ಗೇ ಇದೆಲ್ಲ ಗೊತ್ತಿರಲಿಲ್ಲ ಎನ್ನುವುದು ಕೂಡ ನಿಜವೇ.

ಪರಮೇಶ್ವರನ್ ಹೇಳಿದ್ದು ಕೇಳಿಯೇ ಮೆನನ್ ತಡಬಡಾಯಿಸಿಹೋದರು. ತನಗೇ ಗೊತ್ತಿಲ್ಲದಂತೆ ತಾನು ಏನೇನೋ ಮಾಡುತ್ತಿದ್ದೇನೆ. ಏನೇನೋ ನಡೆಯುತ್ತಿದೆ. ಇವೆಲ್ಲವೂ ಯಾಕೆ ಹೀಗೆ ಈಗ ಎದುರಾಗುತ್ತಿವೆ. ಕನಸುಗಳು, ವಿವೇಕ್ ಕನಸಿನಲ್ಲಿ ಬಂದದ್ದು, ಏನೇನೋ ಹೇಳಿದ್ದು, ಮತ್ತೆಂದೂ ಬಾರದೆ ಹೋದದ್ದು, ಈಗ ಪರಮೇಶ್ವರನ್ ಹೇಳುತ್ತಿರುವುದು ಇವೆಲ್ಲವನ್ನೂ ಒಟ್ಟಾಗಿ ಜೋಡಿಸಿಕೊಂಡು ಇದೆಲ್ಲದರ ಬಗ್ಗೆಯು ಯೋಚಿಸಬೇಕು. ಹೆಂಡತಿಯನ್ನು, ಮಗಳು ಪಾರ್ವತಿಯನ್ನು, ಆಫೀಸಿನಲ್ಲಿ ಸಹೋದ್ಯೋಗಿಗಳನ್ನು, ಕಿರಿಯರನ್ನೂ ಗಮನಿಸಿದರು. ಯಾರೊಬ್ಬರಿಗೂ ಕೂಡ ತನ್ನೊಳಗೆ ನಡೆಯುತ್ತಿರುವುದು, ತನಗಾಗುತ್ತಿರುವ ಅನುಭವಗಳು – ಯಾವುದೂ ಗೊತ್ತಿಲ್ಲ. ಇವರೆಲ್ಲರಿಂದಲೂ ನಾನು ಈಗ ಬೇರ್ಪಟ್ಟಿದ್ದೇನೆ ಎಂಬ ತರ್ಕವನ್ನು ಒಪ್ಪಲು ಮೆನನ್‌ಗೆ ಮನಸ್ಸು ಬರಲಿಲ್ಲ. ಆದರೂ ಮನಸ್ಸು ಮತ್ತೇನಕ್ಕೋ ಕಾಯುತ್ತಿತ್ತು, ಚಡಪಡಿಸುತ್ತಿತ್ತು. ವಿವೇಕ್ ಅಯ್ಯರ್ ಮತ್ತೆ ಕನಸಿನಲ್ಲಿ ಬರಬಹುದೆನಿಸಿ ಭಯವಾಯಿತು. ಹುಡುಗ ಮಾತ್ರ ಮತ್ತೆ ಕನಸಿನಲ್ಲಿ ಬರುವುದು ಬೇಡವೆನಿಸಿತು.

ಯಾವುದಕ್ಕೋ, ಏನಕ್ಕೋ ಕಾಯುತ್ತಾ ಕುಳಿತಿದ್ದ ಒಂದು ರಾತ್ರಿ ಮೆನನ್ ಒಬ್ಬರನ್ನೇ ಬಿಟ್ಟು ಅವರು ಕುಳಿತಿದ್ದ ಹಾಸಿಗೆ, ಮಂಚ, ಮನೆ ಎಲ್ಲವೂ ಕೆಳಕ್ಕೆ ಕೆಳಕ್ಕೆ ಇಳಿಯುತ್ತಲೇ ಹೋಯಿತು. ಕಂಗಾಲಾದ ಮೆನನ್ ನೋಡುತ್ತಿದ್ದಂತೆಯೇ ಎಲ್ಲವೂ ಕೆಳಕ್ಕೆ ಕೆಳಕ್ಕೆ ಭೂಮಿಯೊಳಕ್ಕೆ ಇಳಿದು ಇಳಿದು ಕೊನೆಗೆ ಏನೇನು ಕಾಣದಾಯಿತು. ತಮ್ಮ ಮೈ, ಬಟ್ಟೆ ಬರೆ ಎಲ್ಲವನ್ನು ಮತ್ತೆ ಮತ್ತೆ ಮುಟ್ಟಿ ನೋಡಿಕೊಂಡರು. ಅಂಗೈಯನ್ನು ಉಜ್ಜಿಕೊಂಡರು. ನೋಡನೋಡುತ್ತಿದ್ದಂತೆಯೇ ಕಣ್ಣೆದುರಿಗೊಂದು ಜಲಸಾಗರ, ನಿಶ್ಚಲವಾಗಿ ನಿಂತ ಜಲಸಾಗರ, ನಂತರ ವಿಶಾಲವಾದ ಬಯಲು, ತುಂಬಾ ತುಂಬಾ ದೂರದಲ್ಲಿ ಆ ದಡದಲ್ಲಿ ಒಂದು ಹಕ್ಕಿ ಸಣ್ಣಗೆ ಕುಪ್ಪಳಿಸುತ್ತಾ, ಕುಪ್ಪಳಿಸುತ್ತಾ ಒಂದೊಂದೇ ಗುಟುಕು ನೀರು ಕುಡಿಯುತ್ತದೆ. ಕುಡಿದು ದಡದಲ್ಲಿ ಸುಮ್ಮನೆ ಕೂರುತ್ತದೆ. ಹಕ್ಕಿ ಮೆನನ್ ಕಡೆಗೇ ನಿಧಾನವಾಗಿ ಹಾರಿಬಂತು. ಇನ್ನೇನು ತನ್ನ ಹತ್ತಿರ ಬಂತೆನ್ನುವಾಗ ಮೆನನ್ ಪಕ್ಕನೆ ಹಿಂದಕ್ಕೆ ಸರಿದರು. ಹಕ್ಕಿ ಕಣ್ಮರೆಯಾಗಿ ಕೆಲವು ಅಕ್ಷರಗಳು ಕಂಡವು.

"ನಿಜ. ಜಗತ್ತೆಂಬುದು ಒಂದು ಮಾಯೆಯೇ ಹೌದು. ನಿಜವಾದ ಜಗತ್ತಿನಿಂದ ಒಮ್ಮೆ ಮಾತ್ರ ಅದು ಕಳಚಿಕೊಂಡು ಬಹುದೂರ ಬಂದುಬಿಟ್ಟಿದೆ. ಮತ್ತೆ ನಿಜದ ಕಡೆ ಹೊರಟಿದೆ."

ಎರಡು ಮೂರು ಸಲ ಮೆನನ್ ಓದಿದ ಮೇಲೆ ಅಕ್ಷರಗಳ ಸ್ಥಾನದಲ್ಲಿ ಹಿಂದಿನಂತೆ ಹಕ್ಕಿಯೇ ಕಾಣಿಸಿಕೊಂಡು ಮತ್ತೆ ನಿಧಾನವಾಗಿ ಹಾರುತ್ತಾ, ಹಾರುತ್ತಾ ಜಲಸಾಗರದ ಆ ಕಡೆಗೆ ಹೊರಟಿತು. ತಕ್ಷಣ ಗುಟುಕು ಗುಟುಕು ನೀರು ಕುಡಿಯಲಾರಂಭಿಸಿತು.

ಮೆನನ್ ಎಷ್ಟೋ ಹೊತ್ತು ಹಾಗೇ ಕುಳಿತಿದ್ದಾರೆ. ಕೆಳಗಡೆ ಮಾಯವಾದ ಮನೆ, ಮಗಳು, ಹೆಂಡತಿ ಯಾವುದೂ ಮೇಲಕ್ಕೆ ಬರುವ ಸೂಚನೆಗಳು ಕಾಣಲಿಲ್ಲ. ಕಾದು ಕಾದು ಈ ಸಲ ಮೆನನ್ ತಿಳಿಯದೇ ದೇವಸ್ಥಾನದ ಹತ್ತಿರ ಹೊರಟರು. ದೇವಸ್ಥಾನ ಹತ್ತಿರ ಬರುತ್ತಾ ಬರುತ್ತಾ ನಡಿಗೆ ಚುರುಕಾಯಿತು. ಪ್ರವೇಶದ್ವಾರದ ಹತ್ತಿರ ಬಂದು ನಿಂತರೆ ದೇವಸ್ಥಾನದ ಸುತ್ತಮುತ್ತೆಲ್ಲ ಕಣ್ಣಿಗೆ ಕಾಣುವ ತನಕವೂ ಸಂಖ್ಯೆಗಳು. ನೋಡ ನೋಡುತ್ತಿದ್ದಂತೆಯೇ ಸಂಖ್ಯೆಗಳು ಆಕಾರ ಕಳೆದುಕೊಂಡವು. ಸಂಖ್ಯೆಗಳ ಬದಲಿಗೆ ಹಳದಿಬಣ್ಣ ತುಂಬಿಕೊಂಡಿತು. ಹಳದಿ ಬಣ್ಣವೂ ಮತ್ತೆ ಕರಗಿತು. ಬಣ್ಣದ ಜಾಗದಲ್ಲಿ ಮಾತು. ಮಾತು. ಮಾತು. ಮಾತನಾಡುವ ಮನುಷ್ಯರು ಮಾತ್ರ ಕಾಣುತ್ತಿಲ್ಲ ಎಲ್ಲೂ. ಮಾತಿನ ಬಿರುಸು ಹೆಚ್ಚಾಯಿತು. ಬಿರುಸಿನಿಂದ ಮಾತೆಲ್ಲ ಒತ್ತಿಕೊಂಡು ಬಂದು ದೇವಸ್ಥಾನವನ್ನು ತಬ್ಬಿತು. ಇಡೀ ದೇವಸ್ಥಾನ ಒಂದು ಸಲ ಗಡಗಡವೆಂದು ಅಲುಗಾಡಿತು. ಮೆನನ್ ಒಂದು ಹೆಜ್ಜೆ ಹಿಂದೆ ಹಾಕಲು ಪ್ರಯತ್ನಿಸಿದರೆ ಕಾಲೇ ಏಳಲಿಲ್ಲ. ಪರಮೇಶ್ವರನ್ ಮಾತ್ರ ಪ್ರಾಂಗಣದ ತುಂಬಾ ಸರಸರ ಓಡಾಡುತ್ತಿರುವುದು ಕಾಣುತ್ತಿದೆ.

ಇದ್ದಕ್ಕಿದ್ದಂತೆ ಕಣ್ಣು ಕೋರೈಸುವ ದೀಪ – ಬೆಳಕು. ಮೆನನ್ ತಮಗೇ ಬೆಂಕಿ ಹತ್ತಿಕೊಂಡುಬಿಟ್ಟಿತೇನೋ ಎಂದು ಭಾವಿಸಿದರು. ಕೋರೈಸುವ ಬೆಳಕು ಗೆರೆಯೋಪಾದಿಯಲ್ಲಿ ಮೆನನ್ ಹತ್ತಿರ ಬಂದು ಎತ್ತಿಕೊಂಡು ದೂರದೂರ ಹಿಂದಕ್ಕೆ, ಹಿಂದಕ್ಕೆ ತಳ್ಳುತ್ತಲೇ ಹೋಯಿತು. ಮೆನನ್ ಹಿಂದಕ್ಕೆ ಹಿಂದಕ್ಕೆ ದೇವಸ್ಥಾನದಿಂದ ಬಹುದೂರ ಬಹುದೂರ ಹೋಗುತ್ತಲೇ ಇದ್ದಾರೆ. ಕಾಲದ ಪರಿವೆಯೇ ಇಲ್ಲ. ದೇಹ ನಿಶ್ಚಲವಾಗಿ ನಿಂತಮೇಲೆ ನೋಡುತ್ತಾರೆ: ಎತ್ತ ದೃಷ್ಟಿ ಹರಿಸಿದರೂ ಕಣ್ಣುಕೋರೈಸುವ ಬೆಳಕೇ. ದೇವಸ್ಥಾನ ಮಾತ್ರ ಕೈಗೆ ಸಿಗುವ ಹಾಗೆ ಪಕ್ಕದಲ್ಲೇ ಇದೆ. ಗೇಟು, ಪ್ರಾಕಾರ, ಕಂಭ ಎಲ್ಲವೂ ಅದೇ.

ಪರಮೇಶ್ವರನ್ ಕೈ ಸನ್ನೆ ಮಾಡಿ ಕರೆದರು. ಮೆನನ್ ಮುಂದಕ್ಕೆ ಹೋ… ಕಾಲೆತ್ತಿದರು. ಹೆಜ್ಜೆ ಮುಂದಕ್ಕಿಟ್ಟರು. ಕಾಲು ನೆಲದ ಮೇಲೆ ಊರುತ್ತಲೇ… ಆದರೂ ಮುಂದಕ್ಕೆ ಮುಂದಕ್ಕೆ ಹೋಗುತ್ತಿದ್ದಾರೆ. ಕೈಹಿಡಿದು ಗರ್ಭಗುಡಿಯ… ಕರೆದುಕೊಂಡು ಹೋಗಿ ಪರಮೇಶ್ವರನ್ ಪರದೆ ಸರಿಸಿದರು. ಮಾತ… ಬಾರದೆಂದು ತುಟಿಯ ಮೇಲೆ ಬೆರಳಿಟ್ಟು ಸೂಚಿಸಿದರು.

ಗರ್ಭಗುಡಿಯಲ್ಲಿ ಶಿವಲಿಂಗವೇ ಇಲ್ಲ. ದಿಕ್ಕು ತೋಚದಂತಾಯಿತು ಮೆನ… ಪರಮೇಶ್ವರನ್ ಕಡೆ ನೋಡಿದರೆ ಶಿವಲಿಂಗವಿಲ್ಲದ ಕಲ್ಲಿನ ಮಂಟಪದ… ಇಟ್ಟಿರುವ ದೀಪದ ಕಂಭಗಳಿಗೆ ಎಣ್ಣೆ ಹಾಕುತ್ತಿದ್ದಾರೆ. ಇವರ ಕಡೆ ಗಮನವೇ… ಎಲ್ಲ ಕಂಭಗಳಿಗೂ ಎಣ್ಣೆ ಹಾಕಿದ ಮೇಲೆ ಒಂದೊಂದು ಕಂಭದಲ್ಲಿದ್ದ ಹೂಬತ್ತಿ… ಹಚ್ಚಲು ಪ್ರಾರಂಭಿಸಿದರು. ಮೆನನ್ ಕಡೆಗೆ ತಿರುಗಿ ಅವರಿಗೂ ಹಾಗೇ ಮಾಡ… ಸೂಚಿಸಿದರು. ಪರಮೇಶ್ವರನ್ ದೃಷ್ಟಿಯಲ್ಲೇ ಆಗ್ರಹವಿತ್ತು. ಮೆನನ್ ಕೂಡ… ಹಚ್ಚಲು ಪ್ರಾರಂಭಿಸಿದರು. ಮತ್ತೆ ಎಲ್ಲೆಲ್ಲೂ ಕೋರೈಸುವ ಬೆಳಕು.

ಶಿವಲಿಂಗವಿದ್ದ ಜಾಗದ ಕಡೆ ಪರಮೇಶ್ವರನ್ ಕೈ ಬೆರಳು ತೋರಿಸಿದರು. ಒ… ಚೌಕಾಕಾರದ ಭಾವಿ. ತಳದಲ್ಲೆಲ್ಲೋ ನೀರು. ತಳದ ಕಡೆಗೆ ಮತ್ತೆ ಪರಮೇಶ್ವರ… ತೋರಿಸುತ್ತಿದ್ದಾರೆ. ಮೆನನ್ ನೋಡಿದರು. ನೋಡುತ್ತಲೇ ಇದ್ದರು.

ಮನೆಯಲ್ಲಿ ಕಂಡಿದ್ದ ಜಲಸಾಗರ. ದಡದಲ್ಲಿ ನೀರು ಗುಟಕರಿಸುತ್ತಾ… ಹಕ್ಕಿಮರಿ. ತುಂಬಾ ಹೊತ್ತು ಅದೇ ದೃಶ್ಯ. ಏನೂ ತೋಚದೆ ಪರಮೇಶ್ವರನ್… ನೋಡಿದರು. ಮತ್ತೆ ಪರಮೇಶ್ವರನ್ ತಳದ ಕಡೆಗೆ ಕೈ ತೋರಿಸಿದರು.

ಈಗ ಎಲ್ಲವೂ ಒಂದೊಂದಾಗಿ ಕಾಣಿಸಲು ಪ್ರಾರಂಭಿಸಿತು. ಬಾಲಕ ಮೆ… ಹೊಳೆಯ ದಡದಲ್ಲಿ ಶಾಲೆಗೆ ಹೋಗಲೆಂದು ದೋಣಿ ಹತ್ತುತ್ತಿರುವುದು, ಶಾ… ಸ್ವಾತಂತ್ರ್ಯ ದಿನಾಚರಣೆಯಲ್ಲಿ ನೆಹರೂವೇಷ ಧರಿಸಿ ಭಾಷಣ ಮಾಡುತ್ತಿರುವು… ಚರ್ಚಾಸ್ಪರ್ಧೆ, ಬಹುಮಾನ ಪಡೆಯುತ್ತಿರುವುದು, ಮಣಿಯನ್ ಮಾಸ್ತರು, ಪ್ರೊಫೆ… ರಾಜಶೇಖರನ್, ಯಾಮಿನಿಗೆ ತಾಳಿ ಕಟ್ಟುತ್ತಿರುವುದು, ಮಗ ವಿವೇಕ್‌ನನ್ನು… ಹತ್ತಿಸುತ್ತಿರುವುದು. ಯಾಮಿನಿ ಬಾಯಿಯ ಲಲಿತಾಸಹಸ್ರನಾಮ – ಸೌಂದ…


*With Best Compliments from*

**THE MANJESHWAR SERVICE CO-OP.BANK LTD., C.323.**

HEAD OFFICE : MANJESHWAR - 671323, ✆ 04998-272122
Main Branch : Hosabettu, Manjeshwar, ✆ 04998 - 272222

*Branches :*
Hosangadi ✆ 04998 - 272622 Kunjathur ✆ 04998 - 279381 Udyawar ✆ 04998 - 230046

**CLASS I SPECIAL GRADE BANK**

❐ All Members are covered by Accident Insurance Scheme of Rs. 25,000/-
❐ All Agricultural borrowers are additionally covered by Accident Insurance Scheme of Rs. 50,000/- ❐ Locker facility is available at our Udyawar Branch at reasonable rate of Rs.300, Rs. 600, Rs. 900/- per annum as per the capacity of the lockers.

**DEPOSITS RS. 23 CRORES, ADVANCES RS. 22 CRORES, WORKING CAPITAL RS. 25 CRORES**

*All banking facilities offered. Render quick, prompt and courteous service*

B. M. ANANTHA
*President*

S. RAMACHANDRA
*Secretary in Charge*

ಯ ಪೂಜೆ, ಕೊನೆ ಕೊನೆಗೆ ನಡುರಾತ್ರಿಯಲ್ಲಿ ಮಗ ವಿವೇಕ್ ಸಹಪಾಠಿ
ಜೊತೆ ಮೊಬೈಕ್‌ನಲ್ಲಿ ಬರುತ್ತಿರುವುದು, ಹಿಂದುಗಡೆಯಿಂದ ಬಂದ ಲಾರಿ,
ಸಿನಲ್ಲಿ ಸೀಲಿಂಗ್ ಫ್ಯಾನ್ ಕಳಚಿದ್ದು, ಕನಸಿನಲ್ಲಿ ಬಂದ ವಿವೇಕ್ ಅಯ್ಯರ್,
ಗರ, ಪುಟ್ಟ ಹಕ್ಕಿ, ಮೆನನ್ ದೇವಸ್ಥಾನಕ್ಕೆ ಬರುತ್ತಿರುವುದು – ಗರ್ಭಗುಡಿ
ಸಿಸುತ್ತಿರುವುದು, ದೀಪ ಹಚ್ಚುತ್ತಿರುವುದು, ಪರಮೇಶ್ವರನ್ ತಳದ ಕಡೆ ಕೈ
ಸುತ್ತಿರುವುದು, ಮೆನನ್ ಎಲ್ಲವನ್ನೂ ತದೇಕಚಿತ್ತದಿಂದ ನೋಡುತ್ತಿರುವುದು,
ನೋಡುತ್ತಿರುವುದು – ಇನ್ನೂ –

ಮೆನನ್ ಕುತೂಹಲದಿಂದ ಭಾವಿಯೊಳಕ್ಕೆ ಇಳಿದೇ ಬಿಡಬೇಕು. ಬಲಗಾಲನ್ನ
ಒಳಕ್ಕೆ ಇಟ್ಟುಬಿಟ್ಟರು. ಪರಮೇಶ್ವರನ್ ಮೆನನ್‌ರನ್ನು ಬಲವಾಗಿ ಹಿಂದಕ್ಕೆ
ರು. ಇಲ್ಲ, ಇಲ್ಲ ಇನ್ನೂ ನೋಡಬೇಕು, ನೋಡಬೇಕು – ಮೆನನ್
ಡುತ್ತಲೇ ಪರಮೇಶ್ವರನ್ ಹಿಡಿತದಿಂದ ಬಿಡಿಸಿಕೊಳ್ಳಲು ಒದ್ದಾಡಿದರು.
ಮೇಶ್ವರನ್ ಕೂಡ ತನ್ನ ಶಕ್ತಿಯನ್ನೆಲ್ಲ ಮೀರಿ ಮೆನನ್‌ನ್ನು ತಳ್ಳುತ್ತಲೇ ಇದ್ದರು.

"ಇಲ್ಲ, ಇಲ್ಲ ಇನ್ನೂ ನೋಡಬೇಕು, ನೋಡಬೇಕು. ಎಲ್ಲ, ಎಲ್ಲವೂ
ಯಿದೆ. ದಯವಿಟ್ಟು ನನ್ನನ್ನು ಬಿಡಿ, ನನ್ನನ್ನು ಬಿಡಿ.''

"ಹೌದು, ಮುಂದಿನದು, ನಾಳೆಯದು, ನಾಳಿದ್ದಿನದು ಎಲ್ಲವೂ ಇಲ್ಲಿ
ತ್ತದೆ. ಹಾಗೆಂದು ಈಗ ಈವತ್ತು ನೋಡಬೇಕೆಂದರೆ, ಖಂಡಿತ ಸಾಧ್ಯವಿಲ್ಲ,
ಗಿ. ದಾರಿ ಬಿಡಿ. ಈಗ ದಾರಿ ಬಿಡಿ.''

ವಲಿಂಗ ಕುಪ್ಪಳಿಸಿಕೊಂಡು ಕುಪ್ಪಳಿಸಿಕೊಂಡು ಹೊಸ್ತಿಲ ಬಳಿ ನಿಂತಾಗ
ಮೇಶ್ವರನ್ ಎತ್ತಿಕೊಂಡು ಏದುಸಿರುಬಿಡುತ್ತಾ ಭಾವಿಯಿದ್ದ ಜಾಗದಲ್ಲಿ
ಸಿದರು. ತಟಕ್ಕನೆ ಪರಮೇಶ್ವರನ್ ಮತ್ತು ಮೆನನ್ ಹಚ್ಚಿದ್ದ ಎಲ್ಲ ದೀಪಗಳು
ಹೋದವು. ಪರಮೇಶ್ವರನ್ ಪರದೆ ಎಳೆದು ಗರ್ಭಗುಡಿಯಿಂದ ಮೆನನ್‌ರನ್ನು
ಡಿಕೊಂಡೇ ಹೊರಬಂದರು.

"ಹೋಗಿ ಬನ್ನಿ. ನಮಸ್ಕಾರ.''

"ಮತ್ತೆ, ಮತ್ತೆ ''ಮೆನನ್ ತೊದಲುತ್ತಾ ಕೇಳಿದರು.

"ಮತ್ತೆ, ಮತ್ತೆ ಇನ್ನೇನು ಇಲ್ಲವಲ್ಲ''

ಪರಮೇಶ್ವರನ್ ಗರ್ಭಗುಡಿಯ ಹಿಂದಿದ್ದ ವಾಸದ ಮನೆ ಕಡೆಗೆ ಹೊರಟೇ
ರು.

ನಂತರ ಮೆನನ್ ಗಮನಕ್ಕೆ ಬಂತು. ತಾವು ದೇವಸ್ಥಾನಕ್ಕೆ ಪ್ರವೇಶಿಸುತ್ತಿದ್ದಾಗ
ಕೋರೈಸುವ ಬೆಳಕೇ ನಾಪತ್ತೆ. ಸುತ್ತಮುತ್ತ ಎಲ್ಲ ಮಸಕಾಗಿದೆ. ತಣ್ಣನೆಯ
ಗಾಳಿ ಮೈಯನ್ನು ಸವರಿತು. ಮೆನನ್ ಹಾಗೇ ನಿಂತಿದ್ದರು - ನಿಂತಿದ್ದರು.

* * *

ಮತ್ತೆ ಮೆನನ್ ಎಲ್ಲವನ್ನೂ ಪರಿಭಾವಿಸಿ ಜೋಡಿಸಿಕೊಳ್ಳಲು ಪ್ರಯತ್ನಿಸುತ್ತಾ
ನೂಕುತ್ತಿದ್ದರು.

ಮುಂದೊಂದು ದಿನ ಬೆಳಿಗ್ಗೆ ಬೆಳಿಗ್ಗೆ ಯಾಮಿನಿಬಾಯಿಯವರು ಏಳುವ
ತ್ತಿಗೆ ಮೆನನ್‌ಗೂ ಕೂಡ ಎಚ್ಚರವಾಯಿತು. ಸ್ನಾನ-ಪೂಜೆಯ ತಯಾರಿಯಲ್ಲಿದ್ದ
ಮಿನಿಬಾಯಿಯ ಮುಖದ, ಓಡಾಟದ ಸಲಿವು, ಒಲವು, ಸಂಗೀತವೆಲ್ಲ
ರಿಗೂ ತಟ್ಟಿತೇನೋ. ಹಾಸಿಗೆಯ ಮೇಲೆ ಕೂರಲು ಕಷ್ಟವಾಯಿತು.
ಯಿಂದ ಎದ್ದು ಹೊರಗೆ ಹೊರಟರು. ಹೀಗೆ ಬೆಳಿಗ್ಗೆ ಬೆಳಿಗ್ಗೆಯೇ
ರವಾದಾಗ, ನೆಂಟರಿಷ್ಟರು ಬಂದಾಗ ವಾಕಿಂಗ್ ಹೊರಟು ಬಡಾವಣೆಯ
ನೆಯಲ್ಲಿದ್ದ ಪುಟ್ಟಗುಡ್ಡವನ್ನು ಹತ್ತುತ್ತಿದ್ದರು. ಬಡಾವಣೆಯ ಸುತ್ತಮುತ್ತ
ವವರಿಗೆಲ್ಲ ವಾಯುವಿಹಾರದ ಸಮಯದಲ್ಲಿ ಪುಟ್ಟಗುಡ್ಡವನ್ನು
ವುದೊಂದು ರೂಢಿ. ಹಾಗೆ ಗುಡ್ಡದ ತುದಿ ತಲುಪುವ ಹೊತ್ತಿಗೆ
ರ್ಯೋದಯವಾಗಿ ಬೆಳ್ಳಿ ಕಿರಣ, ಹೊಂಗಿರಣವೆಲ್ಲ ಇಡೀ ಸೃಷ್ಟಿಯನ್ನು
ಸುವುದನ್ನು ಆಸ್ವಾದಿಸುತ್ತಾ ವಾಯುವಿಹಾರ ಮುಗಿಸುವರು.

ಈವತ್ತು ಬೆಳಿಗ್ಗೆ ಮೆನನ್ ವಾಯುವಿಹಾರಕ್ಕೆ ಹೊರಟಾಗ ಸೂರ್ಯೋದಯವು
ನ್ನೂ ಎಲ್ಲೋ ಬಹು ಬಹುದೂರದಲ್ಲಿತ್ತು. ಮೆನನ್ ಗುಡ್ಡದ ಬುಡ ತಲುಪುವ
ತ್ತಿಗೆ ಇನ್ನೂ ಒಬ್ಬೊಬ್ಬರಾಗಿ ಜನ ಬರುತ್ತಿದ್ದರು.

ಒಂದು ಹತ್ತು ಹೆಜ್ಜೆ ಗುಡ್ಡವನ್ನು ಹತ್ತಿರಬೇಕು, ಮಣಿಯನ್ ಮಾಸ್ತರು
ರಾದರು. ಡೆಹರಾಡೂನ್‌ಗೆ ತರಬೇತಿಗೆ ಹೊರಡುವ ಮುನ್ನ ಭೇಟಿ
ಡಿದಾಗ ಹೇಗಿದ್ದರೋ ಹಾಗೇ ಇದ್ದರು. ನಶ್ಯಬಣ್ಣದ ಸ್ವೆಟರ್, ಬೂದು ಬಣ್ಣದ
ಮಫ್ಲರ್. ಒಂದೇ ವ್ಯತ್ಯಾಸವೆಂದರೆ ಕೈಯಲ್ಲೊಂದು ಪಾರಿವಾಳ. ಮೃದುವಾಗಿ
ಸವರುತ್ತಿದ್ದಾರೆ. ಹಾಗೆ ಸವರಿದಾಗ ಪಾರಿವಾಳ ಪುರ್ರನೆ ಹಾರಿ ಮೊದಲು ಮಾಸ್ತರ
ಎಡಭುಜದ ಮೇಲೆ ಕೂತು ನಂತರ ಬಲಭುಜದ ಮೇಲೆ ಕುಳಿತು ಮತ್ತೆ
ಹಾರಾಡುತ್ತಾ ಹಾರಾಡುತ್ತಾ ಮಾಸ್ತರ ಕೈ ಹತ್ತಿರವೇ ಬರುತ್ತದೆ. ಮೆನನ್ ನೋಡಿ
ಮಾಸ್ತರರು ಬಾಯಿ ತುಂಬಾ ನಕ್ಕರು. ಇವರಿಗೇ ಕಾಯುತ್ತಿದ್ದವರಂತೆ ಮಾತನಾಡದೆ
ಮೆನನ್ ಸಮಕ್ಕೂ ಹೆಜ್ಜೆ ಹಾಕಲು ಪ್ರಯತ್ನಿಸಿದರು.

ಸ್ವಲ್ಪ ಮುಂದೆ ಹೋಗಿದ್ದಾರೆ. ಇಬ್ಬರು ಮುದುಕರು ಮರವೊಂದರ ಕೆಳಗೆ
ನಿಂತುಕೊಂಡು ಗಹನವಾದ ವಾದವಿವಾದದಲ್ಲಿ ತೊಡಗಿರುವಂತೆ ಕಂಡಿತು.
ನಿಂತಲ್ಲಿಂದಲೇ ಮಾಸ್ತರಿಗೆ ನಮಸ್ಕಾರವೆಂಬಂತೆ ಕೈ ಬೀಸಿದರು, ನಕ್ಕರು.

"ಯಾರು ಗೊತ್ತಾಯ್ತಾ ಮಾಧವ'' ಮಾಸ್ತರು ಕೇಳಿದರು.

"ಎಲ್ಲೋ ನೋಡಿದಂತಿದೆ. ತಕ್ಷಣ ಗೊತ್ತಾಗುತ್ತಿಲ್ಲ''

"ಇದೇನಿದು, ಇಷ್ಟು ಮರೆವು. ಬಿಳಿ ಷರ್ಟ್, ಪಂಚೆ, ದಪ್ಪ ಕನ್ನಡಕದ ಆಸಾಮಿ
ನಂಬೂದಿರಿಪಾದ್ ತಾನೇ. ಜೊತೆಯಲ್ಲಿದ್ದಾರಲ್ಲ ಕೆಂಪು ದಟ್ಟಿ ಪಂಚೆ ಉಟ್ಟುಕೊಂಡು,
ಬರೀ ಮೈಯಲ್ಲಿ, ಅವರು ನಾರಾಯಣಗುರು ಅಲ್ಲವೇ. ದಿನವೂ ವಾಕಿಂಗ್ ಬರುತ್ತಾರೆ.
ಇಬ್ಬರದೂ ಯಾವಾಗಲೂ ವಾದವಿವಾದ. ನಂಬೂದಿರಿ ಹೇಳುತ್ತಾರೆ, ಕೇರಳದಲ್ಲಿ
ನಾನು ಹುಟ್ಟಿ ನನ್ನ ಕೆಲಸ ಮುಗಿಸಿದ ಮೇಲೆ ನೀವು ಹುಟ್ಟಿದ್ದರೆ ಇನ್ನೂ ಚೆನ್ನಾಗಿರೋದು
ಅಂತಾ. ನಾರಾಯಣಗುರು ಉತ್ತರಿಸುತ್ತಾರೆ, ಇಲ್ಲ, ಇಲ್ಲ ಇಬ್ಬರೂ ಒಟ್ಟಿಗೇ
ಹುಟ್ಟಬೇಕಿತ್ತು. ಮಾತ್ರವಲ್ಲ ದೇವರು ಕೂಡ ನಮ್ಮಿಬ್ಬರ ಜೊತೆಯೇ ಹುಟ್ಟಬೇಕಿತ್ತು, ಆಗ
ತುಂಬಾ ಚೆನ್ನಾಗಿರೋದು ಎಂದು. ದಿನವೆಲ್ಲ ಇದೇ ವಾದ. ಎಲ್ಲ ವಾಯುವಿಹಾರ
ಮುಗಿದರೂ ಇವರ ವಿವಾದ ಮಾತ್ರ ಮುಗಿಯುವುದೇ ಇಲ್ಲ''

ವಿವರಿಸುತ್ತಾ ವಿವರಿಸುತ್ತಾ ಇಬ್ಬರೂ ನಂಬೂದಿರಿ ನಾರಾಯಣಗುರು ಹತ್ತಿರ
ಬಂದಿದ್ದರು. ವಾದ ಬಿರುಸಾಗಿಯೇ ನಡೆಯುತ್ತಿತ್ತು. ಇವರೂ ಅಲ್ಲೇ ನಿಂತರು.
ಮಾಸ್ತರರ ಪಾರಿವಾಳ ನಂಬೂದಿರಿ – ನಾರಾಯಣಗುರು ವಿವಾದದ ಮಧ್ಯೆ
ಪ್ರವೇಶಿಸುವಂತೆ ತನ್ನ ಹಾರಾಟದ ಪರಿಧಿಯಲ್ಲಿ ಅವರನ್ನು ಸೇರಿಸಿಕೊಂಡಿತು.

ಇದ್ದಕ್ಕಿದ್ದಂತೆ ನಾರಾಯಣ ಗುರು :

"ನೋಡಿ. ನೋಡಿ, ಈವತ್ತು ಮತ್ತೆ ಬಂತು. ಪುಟ್ಟ ಚಿಟ್ಟೆ. ಹಿಡಿದೇಬಿಡಬೇಕು
ಈವತ್ತಾದರೂ.''

ದಟ್ಟಿ ಪಂಚೆಯನ್ನು ಎತ್ತಿಕಟ್ಟುತ್ತಾ ಇಬ್ಬರ ಮುಂದುಗಡೆಯೂ ಬಂದು ಕುಳಿತ
ಹಸಿರು ಬಣ್ಣದ ಚಿಟ್ಟೆಯನ್ನು ಹಿಡಿಯಲು ಹೊರಟರು. ತುಂಬಾ ಪುಟ್ಟದಾದ
ಚಿಟ್ಟೆಯನ್ನು ಗಲಾಟೆಮಾಡದೆ, ಬೆರಳತುದಿಯಲ್ಲೇ ಹಿಡಿಯಬೇಕಾಗಿತ್ತು. ನಂಬೂದಿರಿ
ಕೂಡ ಜೊತೆ ಸೇರಿದರು. ಚಿಟ್ಟೆಯನ್ನು ಮೆತ್ತಗೆ ಸದ್ದಿಲ್ಲದೆ ಹಿಂಬಾಲಿಸಿ ಇನ್ನೇನು
ಹಿಡಿದೇಬಿಟ್ಟೆವು ಅನ್ನುವಷ್ಟರಲ್ಲಿ ಅದು ಹಾರಿಯೇಬಿಡುತ್ತಿತ್ತು.

"ಬಾ, ಈ ಹಿರಿಯರಿಬ್ಬರಿಗೆ ಚಿಟ್ಟೆ ಹಿಡಿಯಲು ನಾವು ನೆರವಾಗೋಣ''
ಮಾಸ್ತರರು ಮೆನನ್‌ಅನ್ನು ಆಹ್ವಾನಿಸಿದರು. ಇಬ್ಬರೂ ನಂಬೂದಿರಿ-ನಾರಾಯಣ
ಗುರು ಹಿಂದೆ ಓಡಲು ಪ್ರಾರಂಭಿಸಿದರು. ಮಾಸ್ತರರ ಪಾರಿವಾಳ ಚಿಟ್ಟೆಯ ಹಿಡಿಯು
ವಾಟವನ್ನು ತನ್ನ ಹಾರಾಟದಿಂದ ಇನ್ನೊಂದಿಷ್ಟು ಬಿಗಡಾಯಿಸಿತು. ಇಷ್ಟೊಂದು ಜನರ
ಓಡಾಟದ ನಡುವೆ ಧೃತಿಗೆಟ್ಟ ಚಿಟ್ಟೆ ಯಾರ ಕೈಗೂ ಸಿಗದೆ ಒಂದು ಕಡೆಯಿಂದ
ಇನ್ನೊಂದು ಕಡೆಗೆ ಹಾರಾಡುತ್ತಲೇ ಇತ್ತು.

ಮೆನನ್‌ಗೆ ತಮ್ಮ ಹಿಂದೆ ಯಾರೋ ಒತ್ತರಿಸಿಕೊಂಡು ನಿಂತಂತಾಗಿ ಹಿಂತಿರುಗಿ
ನೋಡಿದರೆ ವಿವೇಕ್ ಅಯ್ಯರ್, ವಿವೇಕನ ಹಿಂದೆ ಜನಸಮೂಹ. ವಿವೇಕ
ಬಂದಿರುವುದು, ಜನಪ್ರವಾಹ ಅವನ ಹಿಂದಿರುವುದು-ನಾರಾಯಣಗುರು-
ನಂಬೂದಿರಿ-ಮಣಿಯನ್ ಮಾಸ್ತರು-ಪಾರಿವಾಳ-ಯಾರಿಗೂ ಗೊತ್ತಿಲ್ಲ. ಅವರೆಲ್ಲ
ಚಿಟ್ಟೆಯ ಹಿಡಿಯುವಾಟದಲ್ಲಿ ತನ್ಮಯವಾಗಿದ್ದಾರೆ.

"ಮತ್ತೆ ಬಂದೆ ಎಂದು ಬೇಸರ ಮಾಡಿಕೊಳ್ಳಬೇಡಿ. ಜಗತ್ತೆಂಬುದು ಕೊನೆಗೆ
ಒಂದು ಮಾಯೆಯೇ ಅಂಕಲ್. ನಿಜವಾದ ಜಗತ್ತಿನಿಂದ ಒಮ್ಮೆ ಮಾತ್ರ ಅದು
ಕಳಚಿಕೊಂಡು ಬಹುದೂರ ಬಂದುಬಿಟ್ಟಿದೆ. ಮತ್ತೆ ನಿಜದ ಕಡೆಗೆ ಹೊರಟಿದೆ. ಬನ್ನಿ,
ಬನ್ನಿ ಅಂಕಲ್. ನಾವೂ ಕೂಡ ಎಲ್ಲರ ಜೊತೆ ಸೇರಿ ಚಿಟ್ಟೆಯನ್ನು ಹಿಡಿದೇಬಿಡೋಣ.''

**ಕೆ. ಸತ್ಯನಾರಾಯಣ**
ಸಿ-೪೦೩, 'ಸಿ'ವಿಂಗ್, ೪ನೇ ಮಹಡಿ, ಅಯೋಧ್ಯ ಪಾರ್ಕ್
ಪುಣೆ–ಬೆಂಗಳೂರು ಹೆದ್ದಾರಿ ರಸ್ತೆ, ಕೊಲ್ಹಾಪುರ - ೪೧೬೦೦೫

# ‘ಭಾರತೀಯ ಕಾವ್ಯಮೀಮಾಂಸೆ

# ನಮಗೆ ಬೇಕೇ ?

ಡಾ॥ ರಹಮತ್ ತರೀಕೆರೆ




ತೀ.ನಂ.ಶ್ರೀ.ಯವರು ಕವಿತೆ, ಲಲಿತ ಪ್ರಬಂಧ ಮತ್ತು ಸಂಶೋಧನ ಲೇಖನಗಳನ್ನು ಬರೆದರೂ, ನಿಜವಾಗಿ ಅವರ ಕೀರ್ತಿಗೆ ಕಾರಣವಾದ ಕೃತಿ ‘ಭಾರತೀಯ ಕಾವ್ಯಮೀಮಾಂಸೆ’(‘ಭಾಕಾಮೀ’); ಇದಕ್ಕೆ ಮುನ್ನುಡಿ ಬರೆದ ಕುವೆಂಪು ಇದನ್ನು ‘ಆಚಾರ್ಯಕೃತಿ’ ಎಂದೂ, ಜಿ. ಎಸ್. ಶಿವರುದ್ರಪ್ಪನವರು ಇದನ್ನೊಂದು ‘ಅಪೂರ್ವ ವಿದ್ವತ್ ಸಾಹಸ’ವೆಂದೂ ಕರೆದಿದ್ದಾರೆ. ಹೀಗೆ ಕರೆದ ಒಬ್ಬರು ತೀ.ನಂ.ಶ್ರೀ.ಯವರ ಸಹಪಾಠಿ. ಮತ್ತೊಬ್ಬರು ಶಿಷ್ಯ. ಇಬ್ಬರೂ ಸ್ವತಃ ಕಾವ್ಯಮೀಮಾಂಸಕರು ಕೂಡ. ಇವರು ಕೊಟ್ಟಿರುವ ಈ ಪ್ರಶಸ್ತಿಗಳು ಉಚಿತ ವಾಗಿವೆ. ಬಹುಭಾಷೆಗಳಲ್ಲಿ ಪ್ರವೇಶವಿದ್ದ, ಸಾಹಿತ್ಯದ ಸೂಕ್ಷ್ಮ ಸಂವೇದನೆಯಿದ್ದ, ಛಂದಸ್ಸು ಭಾಷಾಶಾಸ್ತ್ರ ಕಾವ್ಯಮೀಮಾಂಸೆ ಮುಂತಾದ ಹಲವು ಕ್ಷೇತ್ರಗಳಲ್ಲಿ ಪಾಂಡಿತ್ಯವಿದ್ದ ತೀ.ನಂ.ಶ್ರೀ.ಯವರು ನಿಸ್ಸಂಶಯವಾಗಿ ಕನ್ನಡದ ದೊಡ್ಡ ವಿದ್ವಾಂಸರಲ್ಲಿ ಒಬ್ಬರು. ಸಮಸ್ಯೆ ಇರುವುದು ಅವರ ವಿದ್ವತ್ತಿನಲ್ಲಲ್ಲ; ವಿದ್ವತ್ತಿನೊಳಗಿನ ದೃಷ್ಟಿಕೋನದಲ್ಲಿ ಹಾಗೂ ಕಳೆದರ್ಧ ಶತಮಾನದ ಸಾಹಿತ್ಯಾಧ್ಯಯನಗಳಲ್ಲಿ ‘ಭಾಕಾಮೀ’ ಪಠ್ಯವಾಗಿ ಮಾಡಿರುವ ಶೈಕ್ಷಣಿಕ ಪರಿಣಾಮಗಳಲ್ಲಿ. ಆದ್ದರಿಂದ ‘ಭಾಕಾಮೀ’ಯ ದೃಷ್ಟಿಕೋನ ಮತ್ತು ಶೈಕ್ಷಣಿಕವಾಗಿ ಅದರ ಪ್ರಸ್ತುತತೆ ಕುರಿತು ತಾತ್ವಿಕ ಪ್ರಶ್ನೆ ಈಗ ಕೇಳಿಕೊಳ್ಳಬೇಕಿದೆ. ತೀ.ನಂ.ಶ್ರೀ. ಹುಟ್ಟಿ ಒಂದು ಶತಮಾನವೂ (೧೯೦೬-೧೯೬೬) ‘ಭಾಕಾ (೧೯೫೩) ಪ್ರಕಟವಾಗಿ ಅರ್ಧಶತಮಾನವೂ ಮುಗಿದಿರುವ ಈ ಹೊತ್ತಿಲ್ಲಿ, ಈ ಬಗೆಯ ಮರುಪರಿಶಿ ಮಾಡುವುದು ಅಗತ್ಯವಾಗಿದೆ. ಈ ಕಾರ್ಯವನ್ನು ಹಿಂದೆಯೇ ಹಲವು ವಿದ್ವಾಂಸರು ಆರಂಭಿಸಿದ್ದಾರೆ. ‘‘ಪ್ರಶ್ನೆಗಳನ್ನು ಹುಟ್ಟಿಸುವುದಿಲ್ಲ’’ ಎಂದೂ (ಕುರ್ತಕೋಟಿ); ಕಾವ್ಯ ಕೇಂದ್ರಿತವಾಗಿ ರೂಪತಳೆದಿರುವ ಮೀಮಾಂಸೆ ಆಧುನಿಕ ಸಾಹಿತ್ಯದ ಇತರ ಪ್ರಕಾರಗಳ ಅನನ್ಯತೆಯನ್ನು ಗುರುತಿಸಲು ಅನುಪಯುಕ್ತ ಎಂದೂ (ಕೆ. ವಿ. ನಾರಾಯಣ), ಬೌದ್ಧರ ಅಪೋಹವಾದವೇ ಮುಂತಾದ ಭಾರತದ ಬೇರೆ ಧಾರೆಯ ಕಾವ್ಯಮೀಮಾಂಸೆಗಳನ್ನು ಗಣನೆಗೆ ತೆಗೆದುಕೊಂಡಿಲ್ಲವೆಂದೂ (ಸಿ. ಎನ್. ರಾಮಚಂದ್ರ ವಿಮರ್ಶೆಗಳು ಪ್ರಕಟವಾಗಿವೆ.

ಛಂದಸ್ಸು ಭಾಷಾಶಾಸ್ತ್ರ ಕಾವ್ಯಮೀಮಾಂಸೆ ಮುಂತಾದ ಹಲವು ಕ್ಷೇತ್ರಗಳಲ್ಲಿ ಪಾಂಡಿತ್ಯವಿ ತೀ.ನಂ.ಶ್ರೀ.ಯವರು ನಿಸ್ಸಂಶಯವಾಗಿ ಕನ್ನಡದ ದೊಡ್ಡ ವಿದ್ವಾಂಸರಲ್ಲಿ ಒಬ್ಬರು. ಸಮ ಇರುವುದು ಅವರ ವಿದ್ವತ್ತಿನಲ್ಲಲ್ಲ; ವಿದ್ವತ್ತಿನೊಳಗಿನ ದೃಷ್ಟಿಕೋನದಲ್ಲಿ ಹಾಗೂ ಕಳೆದ ಶತಮಾನದ ಸಾಹಿತ್ಯಾಧ್ಯಯನಗಳಲ್ಲಿ ‘ಭಾಕಾಮೀ’ ಪಠ್ಯವಾಗಿ ಮಾಡಿರುವ ಶೈಕ್ಷ ಪರಿಣಾಮಗಳಲ್ಲಿ. ಆದ್ದರಿಂದ ‘ಭಾಕಾಮೀ’ಯ ದೃಷ್ಟಿಕೋನ ಮತ್ತು ಶೈಕ್ಷಣಿಕವಾಗಿ ಅದ ಪ್ರಸ್ತುತತೆ ಕುರಿತು ತಾತ್ವಿಕ ಪ್ರಶ್ನೆಗಳನ್ನು ಈಗ ಕೇಳಿಕೊಳ್ಳಬೇಕಿದೆ. ತೀ.ನಂ.ಶ್ರೀ. ಹುಟ್ಟಿ ಒಂ ಶತಮಾನವೂ (೧೯೦೬-೧೯೬೬) ‘ಭಾಕಾಮೀ’ (೧೯೫೩) ಪ್ರಕಟವಾಗಿ ಅರ್ಧಶತಮಾನ ಮುಗಿದಿರುವ ಈ ಹೊತ್ತಿಲ್ಲಿ, ಈ ಬಗೆಯ ಮರುಪರಿಶೀಲನೆ ಮಾಡುವುದು ಅಗತ್ಯವಾಗಿದೆ.



೨

೨೦ನೇ ಶತಮಾನದ ಮೊದಲ ಘಟ್ಟದಲ್ಲಿ ಹಳೇ ಮೈಸೂರಿನ ವಿದ್ವತ್ ವಲಯದೊಳಗೆ ಸ್ಥೂಲವಾಗಿ ಮ ಮಾದರಿಗಳಿದ್ದವು: (೧) ಬಿ.ಎಂ.ಶ್ರೀ. ಮಾದರಿ. ಇದಕ್ಕೆ ಸಂಸ್ಕೃತದಲ್ಲಿ ಪ್ರವೇಶವಿತ್ತು, ಆದರೆ ಅದರ ಸಹವಾಸ ಬರಬಹುದಾದ ಜಡತೆಯ ಬಗ್ಗೆ ಎಚ್ಚರ ಮತ್ತು ಆತಂಕವಿತ್ತು. ಪಶ್ಚಿಮದ ಆಧುನಿಕ ವೈಚಾರಿಕ ಜಗತ್ತುಗಳ ಜ ಕೈ ಜೋಡಿಸಿ ಪಡೆಯುವುದರಲ್ಲಿ ಇದು ಹೆಚ್ಚು ಆಸಕ್ತಿ ವಹಿಸಿತು. ಎ. ಆರ್. ಕೃಷ್ಣಶಾಸ್ತ್ರೀ, ಡಿ. ಎಲ್. ಎನ್., ವಿ. ಎ. ಎನ್. ಮೂರ್ತಿರಾಯರು ಇದರಲ್ಲಿ ಬರುತ್ತಾರೆ. (೨) ಭಾರತೀಯ ಸಾಂಪ್ರದಾಯಿಕ ಚಿಂತನಾಕ್ರಮದ ತೀವ್ರ ವಿರೋಧವುಳ್ಳ, ಆದರೆ ವೈದಿಕ ಸಂಸ್ಕೃತ ವಾಙ್ಮಯದಲ್ಲಿ ಸಮಾಜವಾದಿ ತುಡಿತಗಳಿಗೆ ಬೇಕಾದ ವೈಚಾ ಚಿಂತನೆಗಳನ್ನು ಎಚ್ಚರಿಕೆಯಿಂದ ಆರಿಸಿ ಪಡೆಯುವ ಹಾಗೂ ಪಶ್ಚಿಮದ ಆಧುನಿಕ ವಿಚಾರಗಳ ಸೆಳೆತವುಳ್ಳ ಕುವೆ ಮಾದರಿ. ತಾನು ಪಡೆವ ಎಲ್ಲ ಜ್ಞಾನಕ್ಕೂ ವರ್ತಮಾನ ಸಮಾಜದಲ್ಲಿ ಸಂಚಲನೆ ತರುವ ಆಯಾಮವನ್ನು ಒ ನಿಕಷವಾಗಿಸಿಕೊಂಡಿದ್ದ ಈ ಮಾದರಿಗೆ ಬಹುಶಃ ಕುವೆಂಪು ಒಂಟಿ ನಿದರ್ಶನವಾಗಿದ್ದರು. (೩) ಸಂಸ್ಕೃತ ವಿದ್ವ ಜತೆಗೆ ಸಾಂಪ್ರದಾಯಿಕ ವೈದಿಕ ಶ್ರದ್ಧೆಯೂ ಇದ್ದ ಹಿರಿಯಣ್ಣನವರ ಮಾದರಿ. ಇದಕ್ಕೆ ಸಮಾಜ ಬದಲಾವಣೆಯ ತೀವ್ರ ತುಡಿತಗಳಿರಲಿಲ್ಲ. ಡಿ.ವಿ.ಜಿ., ಕೆ. ಕೃಷ್ಣಮೂರ್ತಿ, ತೀ.ನಂ.ಶ್ರೀ.–ಮುಂತಾದವರು ಈ ಧಾರೆಯವ (ಈ ಧಾರೆಯಲ್ಲೇ ಬರುವ ಪು.ತಿ.ನ. ಈ ವಿಷಯದಲ್ಲಿ ಕೊಂಚ ಭಿನ್ನರಾಗುತ್ತಾರೆ.) ತೀ.ನಂ.ಶ್ರೀ., ಮಹಾ ಕಾಲೇಜಿನ ತತ್ವಶಾಸ್ತ್ರ ಪ್ರಾಧ್ಯಾಪಕರಾದ ಹಿರಿಯಣ್ಣನವರ ಖಾಸಾಶಿಷ್ಯರು. ಅವರಿಗೆ ‘ಭಾಕಾಮೀ’ರಚಿಸಲು ಬೇಕ ಸಾಂಸ್ಥಿಕ ಪ್ರೇರಣೆ ಬಿ.ಎಂ.ಶ್ರೀ.ಯವರಿಂದ ಸಿಕ್ಕರೆ, ವಿದ್ವತ್ತು ಮತ್ತು ದೃಷ್ಟಿಕೋನದ ನೆರವು ಹಿರಿಯಣ್ಣನವ ದಕ್ಕಿತು. ಈ ನೆರವನ್ನು ಅವರು ಅರಿಕೆಯಲ್ಲಿ ಬಹು ಕೃತಜ್ಞತೆಯಿಂದ ಹೇಳಿಕೊಂಡೂ ಇದ್ದಾರೆ: ‘‘ರಸಧ್ವನಿತತ್ವ ನಾನು ಮೊದಲಬಾರಿ ಕೇಳಿದ್ದು ಅವರ ಮುಖದಿಂದ. ಅವರ ಪಾದಸಮೀಪದಲ್ಲಿ ಮತ್ತೆ ಒಂದೂವರೆ ವರ್ಷ ಕುಳಿತು ಅವರ ಯುಕ್ತಿಯನ್ನು ಆಲಿಸುತ್ತಾ, ಕಾವ್ಯರಹಸ್ಯವನ್ನೂ ಶಾಸ್ತ್ರಸಮಸ್ಯೆಯನ್ನೂ ಅರ್ಥಮಾಡಿಕೊಳ್ಳುತ್ತಾ, ಅ ಪರಿಣಾತ ಪ್ರಜ್ಞೆಯ ಬೆಳಕಿನಲ್ಲಿ ಸಂಶಯಗಳನ್ನು ಪರಿಹರಿಸಿಕೊಳ್ಳುತ್ತಾ ನಾನು ಪಡೆದ ಅನುಭವ ಅನಿರ್ವಚನೀಯ

ವಾಗಿ 'ಭಾಕಾಮೀ' ಸಿದ್ಧಗೊಂಡಿದ್ದು ೧೯೪೨
ರೂ ಎರಡನೇ ಮಹಾಯುದ್ಧದ ಕಾರಣದಿಂದ
ವಾಗಿದ್ದು ೧೯೫೩ರಲ್ಲಿ. ತೀ.ನಂ.ಶ್ರೀ.ಯವರು
ೊಂಡಿರುವಂತೆ ಈ ಕೃತಿ ರಚನೆಗೆ ಎರಡು ಉದ್ದೇಶ
(೧) 'ವರದಿಗಾರನ ಕೆಲಸ'. (೨) 'ವ್ಯಾಖ್ಯಾನ
ಕೆಲಸ'. ಲೇಖಕರ 'ವರದಿಗಾರನ ಕೆಲಸ'ದಿಂದ
ಮೀಮಾಂಸೆಗೆ ಸಂಬಂಧಪಟ್ಟ ಅನೇಕ ಹೊಸ
ಗಳ ದಾಖಲಾತಿ ಮತ್ತು ಪರಿಚಯ ಸಮರ್ಥ
ಆಗುತ್ತದೆ. ಹೀಗಾಗಿ ಇಲ್ಲಿ ಸಂಸ್ಕೃತ ಕಾವ್ಯ
ಾಂಸೆಯ ಒಂದು ಚರಿತ್ರೆಯೇ ಸಿಗುತ್ತದೆ.
ಗಾರಿಕೆ'ಗೆ ಶ್ರಮ, ಶ್ರದ್ಧೆ ಮತ್ತು ಪಾಂಡಿತ್ಯಗಳ
ವಿದೆ. ಪಾಂಡಿತ್ಯದ ಒಂದು ಗುಣವೆಂದರೆ
ರ್ನ. ಅದು ತಕ್ಕಮಟ್ಟಿಗೆ ಇಲ್ಲಿ ಆಗಿದೆ. ಈ ಕೃತಿ
ವಾಗ ತೀ.ನಂ.ಶ್ರೀ. ೩೬ ವರ್ಷದ ಯುವಕ
ದ್ದು ಈ ಪ್ರದರ್ಶನ ಸಹಜವೂ ಆಗಿದೆ. ಮುಖ್ಯ
ಯೆಂದರೆ, ತೀ.ನಂ.ಶ್ರೀ. ತಮ್ಮ ಕಾಲದಲ್ಲಿದ್ದ
ಂಸರು, ತತ್ವಶಾಸ್ತ್ರಿಗಳು, ಕವಿಗಳು ಹಾಗೂ
ಪಕರುಗಳ ಒಂದು ಕ್ರಿಯಾಶೀಲ ವಿದ್ವತ್
ರದಲ್ಲಿ ಬೆಳೆದವರು. ಇದರ ಪ್ರಭಾವಳಿಯು ಈ
ಲ್ಲಿ ಸಹಜವಾಗಿ ಮೂಡಿದೆ. ಇಲ್ಲಿನ 'ವರದಿಗಾರಿಕೆ'
ಇನ್ನೊಂದು ಕಾರಣ, 'ಭಾಕಾಮೀ'ಯು ಸಂಸ್ಕೃತ
ಮೀಮಾಂಸೆಯ ಬಗ್ಗೆ ಕನ್ನಡದಲ್ಲಿ ಬಂದ ಮೊದಲ
ಣ ಗ್ರಂಥವಾಗಿರುವುದು. ಇಲ್ಲಿ ಕೊಂಚ
ಾರವಿದೆ. ಸಾಂಪ್ರದಾಯಿಕ ಸಂಶೋಧನೆಯ
ವೂ ಇದೆ. ಉದಾಹರಣೆಗೆ, 'ಧ್ವನ್ಯಾಲೋಕ'ದ
ಳನ್ನು ಬರೆದವನು ಆನಂದವರ್ಧನನಾದರೆ,
ಕಾರಿಕೆಗಳನ್ನು ಬರೆದವನು ಅವನೋ
ಯೋ ? ಇಂತಹ ಪ್ರಶ್ನೆಗಳನ್ನು 'ಭಾಕಾಮೀ' ಎತ್ತಿ
ೀರವಾಗಿ ಚರ್ಚಿಸುತ್ತದೆ. ಕವಿ/ವಿದ್ವಾಂಸರ ಕಾಲ
ಕೃತಿಗಳ ಗತವನ್ನು ಖಚಿತಗೊಳಿಸುವ ಚಾರಿತ್ರಿಕ
ೋಧನೆಯ ಮಾದರಿಯು ಆ ಕಾಲದಲ್ಲಿ
ಮಾನ್ಯಗೊಂಡಿತ್ತು. ಆದರಿಂದ ತಪ್ಪಿಸಿಕೊಳ್ಳುವುದು
ಾಧ್ಯವಿತ್ತು.

ಇನ್ನು 'ವ್ಯಾಖ್ಯಾನಕಾರನ' ಕೆಲಸ. ಇಲ್ಲಿ ವಿಶ್ಲೇಷಣೆ,
ುತ, ಆನ್ವಯಿಕತೆ ಹಾಗೂ ವಿಸ್ತರಣೆಯ
ವಟಿಕೆ ಮುಖ್ಯ. ಇದು ಸಹ ಇಲ್ಲಿ ಸಮರ್ಥವಾಗಿ
ಿದೆ. ''ನಮ್ಮ ದೇಶದ ಹಿರಿಯ ಮೀಮಾಂಸಕರ
ಪ್ರಾಯವನ್ನು ಸಂಗ್ರಹಿಸಿ ಅವರ ಹೇಳಿಕೆಗೆ
ರೋಧವಾಗಿ ನಿರೂಪಿಸಬೇಕೆಂಬುದು ನನ್ನ ಗುರಿ''
ು ತೀ.ನಂ.ಶ್ರೀ. ಹೇಳಿಕೊಳ್ಳುವುದುಂಟು. ಈ
ರೋಧ''ದ ನಿಲುವೇ ಸಂಸ್ಕೃತ ಕಾವ್ಯ
ಮಾಂಸೆಗೆ ಆಧುನಿಕವೂ ವಿಮರ್ಶಾತ್ಮಕವೂ ಆದ
ವೊಂದನ್ನು ಬರೆವ ಚಾರಿತ್ರಿಕ ಅವಕಾಶಕ್ಕೆ
ವಾಗಿ ತೊಡಗದಂತೆ ಅವರನ್ನು ತಡೆದಿರಬಹುದೇ
ು ಶಂಕೆ ಬರುತ್ತದೆ. ಹಾಗೆಂದು 'ಭಾಕಾಮೀ'
ಪ್ರದಾಯಿಕ ಸಂಸ್ಕೃತ ಕಾವ್ಯತತ್ವಗಳನ್ನು
ಮರ್ಶಾತ್ಮಕವಾಗಿ ಮಂಡಿಸುತ್ತದೆ ಎಂತಲ್ಲ.
ಾಶ ಸಿಕ್ಕಾಗಲೆಲ್ಲ ಅದು ತನ್ನ ಭಿನ್ನಮತ
ಿಸುತ್ತದೆ. ಕೃತಿಯುದ್ದಕ್ಕೂ ಕಾವ್ಯಮೀಮಾಂಸೆಯ
ದ ಸಹ ವಿದ್ವಾಂಸರಾದ ಕೆ. ಕೃಷ್ಣಮೂರ್ತಿಯವರ
ಮಾಡುವ ಜಗಳಗಳಿವೆ. ಇದನ್ನು ತೀ.ನಂ.ಶ್ರೀ.
ವಿನಯ, ಗಾಂಭೀರ್ಯ ಮತ್ತು ನಿಷ್ಠುರತೆಯಲ್ಲಿ ಮಾಡುತ್ತಾರೆ. ಆದರೆ ಈ ಜಗಳವು 'ಭಾಕಾಮೀ' ಕಟ್ಟಿಕೊಂಡಿರುವ ಒಟ್ಟು ತಾತ್ವಿಕ ಚೌಕಟ್ಟಿನ ಒಳಗೇ ನಡೆಯುವ ಕಾರಣ, ಅಷ್ಟು ಮುಖ್ಯವೆನಿಸುವುದಿಲ್ಲ. ಬದಲಿಗೆ, ಈ ಜಗಳದಿಂದ ಕೃತಿಯೊಳಗಿನ ಪಾಂಡಿತ್ಯವು ಅನಗತ್ಯವಾಗಿ ಜಟಿಲಗೊಂಡಿದೆ. ಆದರೂ ಲೇಖಕರು ಪ್ರಾಚೀನ ಮೀಮಾಂಸಕರ ಜತೆ ಭಿನ್ನಮತ ಪ್ರಕಟಿಸುವ ಕಡೆಯಲ್ಲಿ ಉಪಯುಕ್ತವಾದ ಒಳನೋಟಗಳು ಹುಟ್ಟುತ್ತ ಹೋಗಿವೆ ಎಂಬುದು ಸ್ಪಷ್ಟವಾಗಿದೆ.

೩

'ಭಾಕಾಮೀ'ಯ ರಚನೆಯಲ್ಲಿ ತೊಡಗಿರುವ ಮನಸ್ಸು ಪ್ರತಿಭಾವಂತ ಮತ್ತು ಸೂಕ್ಷ್ಮ ಮಾತ್ರವಲ್ಲ. ಅದು ಶ್ರೇಷ್ಠ ಪ್ರಾಧ್ಯಾಪಕನ ಹೊಣೆಗಾರಿಕೆಯನ್ನೂ ಹೊಂದಿದೆ. ಸಾಹಿತ್ಯ ಬೋಧನೆ ಮತ್ತು ಅಧ್ಯಯನ ಗಳಲ್ಲಿ ತೊಡಗಿರುವ ಅಧ್ಯಾಪಕ ಸಮುದಾಯಕ್ಕೂ, ಕಲಿಯುವ ವಿದ್ಯಾರ್ಥಿಗಳಿಗೂ ಕೃತಿ ಉಪಯುಕ್ತವಾಗ ಬೇಕು ಎಂಬ ಶೈಕ್ಷಣಿಕ ಉದ್ದೇಶವೂ ಕೃತಿರಚನೆಯ ಹಿಂದಿದ್ದಂತಿದೆ. ಇಲ್ಲಿನ 'ವ್ಯಾಖ್ಯಾನಕಾರನ ಕೆಲಸ'ಕ್ಕೆ ಎರಡು ಪರಂಪರೆಗಳ ಹಿನ್ನೆಲೆ ಮತ್ತು ಪ್ರೇರಣೆ ಯಿದ್ದಂತಿದೆ: (೧) ವೈದಿಕ ದಾರ್ಶನಿಕ ಪರಂಪರೆಯಲ್ಲಿ ಬರುವ ವ್ಯಾಖ್ಯಾನ ಪದ್ಧತಿ. ಅಂದರೆ ಬ್ರಹ್ಮಸೂತ್ರ ಅಥವಾ ಭಗವದ್ಗೀತೆಗಳಿಗೆ ಶಂಕರ, ರಾಮಾನುಜ, ಮಧ್ವ ಮುಂತಾದ ಆಚಾರ್ಯರು ಬರೆದ ಟೀಕುಗಳು. ಈ ಟೀಕುಪದ್ಧತಿಯನ್ನು ಅನುಸರಿಸಿ 'ಭಾಕಾಮೀ' ಸಂಸ್ಕೃತದ ಕಾವ್ಯಮೀಮಾಂಸೆಯ ಸೂತ್ರಗಳಿಗೆ ಕನ್ನಡದಲ್ಲಿ ವ್ಯಾಖ್ಯಾನವನ್ನು ಮಾಡುತ್ತದೆ. ಕುವೆಂಪು ಇದನ್ನು 'ಆಚಾರ್ಯಕೃತಿ' ಎನ್ನುವಾಗ ಸೂಚಿಸುತ್ತಿರುವ ಧ್ವನಿ ಇದುವೇ ಇರಬೇಕು. (೨) ಪಶ್ಚಿಮದ ಆಧುನಿಕ ವಿಚಾರಧಾರೆ ಹಾಗೂ ಸಾಹಿತ್ಯ ವಿಮರ್ಶೆಯ ಪರಂಪರೆ ಗಳಿಂದ ಪಕ್ವಗೊಂಡ, ಆಧುನಿಕ ಸಾಹಿತ್ಯ ಅಧ್ಯಯನ ದಲ್ಲಿ ಪಳಗಿದ ಮನಸ್ಸೊಂದು ಕನ್ನಡದಲ್ಲಿ ಕಾವ್ಯ ವಿಮರ್ಶೆ ಬೆಳೆಸುವ ಹೊಣೆಗಾರಿಕೆಯಿಂದ ಮಾಡಿದ ಯತ್ನ. ಇಲ್ಲಿನ ಎರಡು ಅಧ್ಯಾಯಗಳು ತೀ.ನಂ.ಶ್ರೀ. ಯವರು ಇಂಗ್ಲಿಷಿನಲ್ಲಿ ಬರೆದ 'ಇಮ್ಯಾಜಿನೇಶನ್ ಇನ್ ಇಂಡಿಯನ್ ಪೊಯೆಟಿಕ್ಸ್' ಲೇಖನದ ಕನ್ನಡದ ರೂಪಗಳಾಗಿರುವುದು ಗಮನಾರ್ಹ. ಸಾಂಪ್ರದಾಯಿಕ ವೈದಿಕ ವ್ಯಾಖ್ಯಾನ ಪದ್ಧತಿ, ಸಂಸ್ಕೃತ ವಿದ್ವತ್ತು ಹಾಗೂ ಪಶ್ಚಿಮದ ವಿಶ್ಲೇಷಣಾ ವಿಧಾನ, ಚಿಂತನಶೀಲತೆ ಈ ಮೂರೂ ಧಾರೆಗಳು ಇಲ್ಲಿ ಹದವಾಗಿ ಬೆರೆತಿವೆ. ಎಂತಲೇ ಸಂಸ್ಕೃತ ಕಾವ್ಯಮೀಮಾಂಸೆಯ ವಿದ್ವಾಂಸರಾದ ಕೆ. ಕೃಷ್ಣಮೂರ್ತಿ, ಬಿ. ಕೆ. ಶಿವರಾಮಯ್ಯ ಮುಂತಾದ ವರಿಗೆ ಹೋಲಿಸಿದರೆ ತೀ.ನಂ.ಶ್ರೀ.ಯವರದು ಹೆಚ್ಚು ಆಧುನಿಕ, ಸಂವೇದನಶೀಲ ಹಾಗೂ ವಿಮರ್ಶಾತ್ಮಕ ಮನಸ್ಸು. ಈ ಮನಸ್ಸನ್ನು 'ಕಾವ್ಯದ ಪ್ರಯೋಜನ ಆನಂದ ಮಾತ್ರ' ಎಂಬ ಪ್ರಾಚೀನ ಸಂಸ್ಕೃತ ಮೀಮಾಂಸಕರ ಹೇಳಿಕೆಗೆ ಭಿನ್ನಮತ ತೋರಿಸುತ್ತ, ಕಾವ್ಯವು ಹೇಗೆ ಜ್ಞಾನ ಹಾಗೂ ಅನುಭವ ಕೂಡ ಆಗುತ್ತದೆ ಎಂದು ಪ್ರತಿಪಾದ ಮಂಡಿಸುವಲ್ಲಿ ಕಾಣ ಬಹುದು; ಈ ಮನಸ್ಸನ್ನು 'ಕವಿರಾಜಮಾರ್ಗ'ದ 'ಧ್ವನಿ ಯೆಂಬುದಳಂಕಾರಂ' ಹೇಳಿಕೆಯ ವಿಶ್ಲೇಷಣೆಯಲ್ಲೂ; ಪ್ರಾಚೀನರ ಸಾಹಿತ್ಯ ಹಾಗೂ ಗದ್ಯಪದ್ಯಗಳನ್ನು ಕುರಿತ ಪರಿಕಲ್ಪನೆಯ ಚರ್ಚೆಯಲ್ಲೂ; ಛಂದಸ್ಸು ಕಾವ್ಯಕ್ಕೆ ಅಗತ್ಯವೇ ಹೊರತು ಅನಿವಾರ್ಯವಲ್ಲ ಎಂಬ ಹೇಳಿಕೆಯಲ್ಲೂ; ಕವಿಯಾದವನು ತನ್ನ ಕೃತಿಗೆ ತಾನೇ ಹೊಸ ಓದುಗನಾಗುವ ಸಾಧ್ಯತೆಯ ಚರ್ಚೆಯಲ್ಲೂ; ಕವಿ ಮತ್ತು ರಾಜಾಶ್ರಯದಲ್ಲಿ ರಾಜನಿಗೇ ಹೇಗೆ ಹೆಚ್ಚು ಪ್ರಯೋಜನ ಎಂಬ ಕಾಮೆಂಟಿನಲ್ಲೂ ಕಾಣಬಹುದು. ಈ ಮನಸ್ಸು ಬಹು ಸ್ಫುಟವಾಗಿ ಪ್ರಕಟವಾಗುವುದು ಸಾಹಿತ್ಯದ ಶೀಲಾಶ್ಲೀಲದ ಚರ್ಚೆಯಲ್ಲಿ. ಕಾವ್ಯವು ಸುಳ್ಳು ಹೇಳುತ್ತದೆ, ಕೆಟ್ಟ ಬೋಧನೆ ಮಾಡುತ್ತದೆ ಮತ್ತು ಅಶ್ಲೀಲ ವರ್ಣನೆ ಮಾಡುತ್ತದೆ ಎಂಬ ಸಂಪ್ರದಾಯ ವಾದಿ ಚಿಂತಕರ ಆರೋಪಗಳನ್ನು ತೀ.ನಂ.ಶ್ರೀ. ಒಪ್ಪದೆ ಸುಳ್ಳು-ಸತ್ಯ, ಕೆಟ್ಟ-ಒಳ್ಳೆಯ ಹಾಗೂ ಶೀಲ-ಅಶ್ಲೀಲದ ಪ್ರಶ್ನೆಗಳು ಹೇಗೆ ಸಾಪೇಕ್ಷವಾದವು ಎಂದು ವಿವರಿಸುತ್ತಾರೆ. ಶಬ್ದಾರ್ಥದ ಚರ್ಚೆಯಲ್ಲಿ ತಮ್ಮ ಆಧುನಿಕ ಭಾಷಾ ವಿಜ್ಞಾನದ ತಿಳಿವಳಿಕೆಯನ್ನು ಸಾಂಪ್ರದಾಯಿಕ ಸಂಸ್ಕೃತ ವಿದ್ವಾಂಸರು ಭಾಷೆಯ ಬಗ್ಗೆ ಮಾಡಿರುವ ಚಿಂತನೆ ಗಳಲ್ಲಿ ಅರ್ಥಪೂರ್ಣವಾಗಿ ಬೆಸೆಯುತ್ತಾರೆ. ಸಂಸ್ಕೃತ ಮೀಮಾಂಸಕರಿಗೆ ಭಿನ್ನಮತ ತೋರಲು ಪಶ್ಚಿಮದ ಸಾಹಿತ್ಯ, ಸಾಹಿತ್ಯ ವಿಮರ್ಶೆ ಹಾಗೂ ಸಾಹಿತ್ಯ ಮೀಮಾಂಸೆಗಳು ಇಲ್ಲಿ ಯಥೇಚ್ಛ ಬಳಕೆಯಾಗುತ್ತವೆ. ಈ ಕೃತಿಯ ಅತ್ಯಂತ ಉಪಯುಕ್ತ ಭಾಗಗಳು ಭಾರತೀಯ ಹಾಗೂ ಪಾಶ್ಚಿಮಾತ್ಯ ಚಿಂತನೆಗಳನ್ನು ಬೆರೆಸುವ ವಿಧಾನದಲ್ಲಿ – ಅಂದರೆ ಹಿರಿಯಣ್ಣ ಮತ್ತು ಬಿ.ಎಂ.ಶ್ರೀ.ಯವರನ್ನು ಬೆರೆಸುವ ವಿಧಾನದಲ್ಲಿ – ವ್ಯಕ್ತವಾಗುತ್ತವೆ. ಸ್ವಭಾವೋಕ್ತಿಯ ಚರ್ಚೆಯಲ್ಲಂತೂ ಸಂಸ್ಕೃತ ಮೀಮಾಂಸಕರ ತೀಕ್ಷ್ಣ ವಿಮರ್ಶೆಯಿದೆ. ''ಭರತನ ಚಾರಿತ್ರಿಕತೆ ಹಿಂಜರಿದು ಅವನೊಬ್ಬ ಲೋಕೋತ್ತರ ವ್ಯಕ್ತಿಯಾಗಿದ್ದು, ನಾಟ್ಯಶಾಸ್ತ್ರಕ್ಕೆ ಪೂಜ್ಯತೆಯೂ ಪ್ರಾಮಾಣ್ಯವೂ ಪ್ರಾಪ್ತಿಯಾಯಿತು. ಅದೊಂದು ಅಧಿಕಾರಸ್ಥ ಪಠ್ಯವಾಯಿತು. ಹೀಗಾಗಿ ಅದಕ್ಕೆ ವಿಮರ್ಶಾತ್ಮಕ ವಿಸ್ತರಣೆಯೇ ಸಿಗಲಿಲ್ಲ'' ಎಂಬ ಟೀಕೆಯನ್ನು ಆಧುನಿಕ ಮನಸ್ಸಿಗೆ ಮಾತ್ರ ಮಾಡಲು ಸಾಧ್ಯ. ರೆಟೊರಿಕ್, ಪೊಯೆಟಿಕ್ಸ್, ಏಸ್ತೆಟಿಕ್ಸ್ ಹಾಗೂ ಫಿಲಾಸಫಿ – ಈ ನಾಲ್ಕು ಹಂತಗಳಲ್ಲಿ ಪಾಶ್ಚಿಮಾತ್ಯ ಕಾವ್ಯಮೀಮಾಂಸೆ ಬೆಳೆಯಿತು. ಇದು ಭಾರತದಲ್ಲಿ ಸಾಧ್ಯವಾಗಲಿಲ್ಲ ಎಂಬ ಆತ್ಮವಿಮರ್ಶಕ ಒಳನೋಟವನ್ನು ತೀ.ನಂ.ಶ್ರೀ. ಕೊಡುತ್ತಾರೆ. ಬಿ.ಎಂ.ಶ್ರೀ.ಯವರು

## ಅಳಿವು

ಆಳಿವಿಲ್ಲದ ಜಗವ
ಅಳಿಯ ಹೊರಟ ಮಾನವ
ಜಗವಳಿದರೆ ನೀನು
ಉಳಿವೆನೆಂದುಕೊಂಡೆಯಾ?
ಉಳಿದರೂ ಬೂದಿಯನ್ನು ತಿಂದು
ಬದುಕಬಲ್ಲೆಯಾ ?

ಡಿ. ವಿ. ಬಡಿಗೇರ
ವಿರೂಪಾಕ್ಷಪ್ಪನಿಲಯ. ತೆಗ್ಗಿನಪೇಟೆ

ಸಂಸ್ಕೃತದ ಕಾವ್ಯಮಾಲೆಯಿಂದ ಕನ್ನಡಕ್ಕೆ ಬಂದಿರುವ ಕಾಯಿಲೆಗಳನ್ನು ಆಂಗ್ಲಕಾವ್ಯವೇ ಪರಿಹರಿಸಬೇಕು ಎಂದು ಹೇಳಿದ್ದರು. ಈ ಹೇಳಿಕೆಯ ಚಾರಿತ್ರಿಕ ಸತ್ಯವನ್ನು ಪ್ರತಿಪಾದಿಸುವಂತೆ ಇಲ್ಲಿ ತೀ.ನಂ.ಶ್ರೀ.ಯವರ ವ್ಯಾಖ್ಯಾನವಿದೆ. ಆದರೆ ಅವರ ಈ ವ್ಯಾಖ್ಯಾನವು ಮುನ್ನಡೆದು ಕಾವ್ಯ ಮೀಮಾಂಸೆಯು ಪಶ್ಚಿಮದಲ್ಲಿ ಬೆಳೆದಂತೆ ಭಾರತದಲ್ಲಿ ''ಯಾಕೆ ಬೆಳೆಯಲು ಸಾಧ್ಯವಾಗಲಿಲ್ಲ'' ಎಂಬ ಪ್ರಶ್ನೆಯನ್ನು ವಿಶ್ಲೇಷಿಸುವ ಹಂತಕ್ಕೆ ಚಲಿಸುವುದಿಲ್ಲ. ಇದಕ್ಕೆ ಕಾರಣ ಶ್ರೀಯವರಷ್ಟು ಸಂಸ್ಕೃತ ಪರಂಪರೆಯ ಬಗ್ಗೆ ನಿಷ್ಠುರತೆ ತೋರದಿರುವುದೋ ಅಥವಾ ಕುವೆಂಪು ಅವರಂತೆ ದರ್ಶನಶಾಸ್ತ್ರದ ಪ್ರಶ್ನೆಯನ್ನು ಸಾಮಾಜಿಕ ಚಲನಶೀಲತೆಗೆ ಲಗತ್ತಿಸದಿರುವುದೋ, ಖಚಿತವಾಗುವುದಿಲ್ಲ. ವ್ಯಂಗ್ಯವೆಂದರೆ, ಶ್ರೀಯವರು ಸಂಸ್ಕೃತ ವಿರೋಧಿಗಳಲ್ಲ ಎಂದು ಅವರ ವಿರೋಧಿಗಳಿಗೆ ಸಮರ್ಥನೆ ಕೊಡಬೇಕಾದ ಪ್ರಸಂಗ ಸ್ವತಃ ತೀ.ನಂ.ಶ್ರೀ.ಯವರ ಮೇಲೆಯೇ ಬಂದಿತು. ಆ ಸಂದರ್ಭದಲ್ಲಿ ಅವರು ಗುರುವಿನ ರಕ್ಷಣೆಯನ್ನು ಚೆನ್ನಾಗಿ ಮಾಡಿದರು. ಆದರೂ ಅವರಿಗೆ ಸಂಸ್ಕೃತ ಮತ್ತು ಅದರೊಳಗಿನ ಸಾಹಿತ್ಯದ ಜತೆಗೆ ಶ್ರೀಯವರಂತೆ ವಿಮರ್ಶಾತ್ಮಕ ನಿಲುವನ್ನು ತಳೆಯಲು ಸಾಧ್ಯವಾಗಲಿಲ್ಲ. ಕನ್ನಡದಲ್ಲಿ ಪರಮೇಶ್ವರ ಭಟ್ಟರನ್ನು ಒಳಗೊಂಡಂತೆ ಅನೇಕರಿಗೆ ಸಾಧ್ಯವಾಗಲಿಲ್ಲ.

೪

'ಭಾಕಾಮೀ'ಯ ಒಂದು ಮಹತ್ವ ಇರುವುದು ಸಂಸ್ಕೃತ ಕಾವ್ಯಮೀಮಾಂಸೆಯ ವಿಭಿನ್ನ ಸೂತ್ರಗಳನ್ನು ವಿವರಿಸಲು ನಿದರ್ಶನಗಳಾಗಿ ಬಳಕೆಯಾಗಿರುವ ಕಾವ್ಯಭಾಗಗಳ ವಿಶ್ಲೇಷಣೆಯಲ್ಲಿ. ಈಗಾಗಲೇ ಕನ್ನಡ ವಿದ್ವತ್ತು ಗುರುತಿಸಿರುವಂತೆ ಇವು ಪರೋಕ್ಷವಾಗಿ ಆಧುನಿಕ ಕಾವ್ಯ ವಿಮರ್ಶೆಯನ್ನು ರೂಪಿಸುವ ಕಾರ್ಯವನ್ನು ಮಾಡುತ್ತವೆ. ಅದರಲ್ಲೂ ರಸ ಧ್ವನಿ ಔಚಿತ್ಯಗಳ ಚರ್ಚೆಯು ಆಧುನಿಕ ವಿಮರ್ಶೆಯ ಎಲ್ಲ ಒಳ್ಳೆಯ ಗುಣಗಳನ್ನು ಒಳಗೊಂಡಿದೆ. ಕುತೂಹಲವೆಂದರೆ, ತೀ.ನಂ.ಶ್ರೀ. ಶ್ರಮಪಟ್ಟು ವಿವರಿಸುವ ಅವಿವಕ್ಷಿತ ವಾಚ್ಯ, ವಿವಕ್ಷಿತಾನ್ಯಪರ ವಾಚ್ಯ, ಅರ್ಥಾಂತರ ಸಂಕ್ರಮಿತ ವಾಚ್ಯ, ಅತ್ಯಂತ ತಿರಸ್ಕೃತ ವಾಚ್ಯ, ಅಸಂಲಕ್ಷ್ಯ ಕ್ರಮ – ಮುಂತಾದ ಕ್ಲಿಷ್ಟ ಪರಿಕಲ್ಪನೆಗಳು ನೆನಪಲ್ಲಿ ಉಳಿವುದಿಲ್ಲ; ಆದರೆ ಇವನ್ನು ವಿವರಿಸಲು ಬಳಸುವ ಕಾವ್ಯ ವಿಶ್ಲೇಷಣೆಗಳು ಉಳಿಯುತ್ತವೆ. ಪಂಪ, ರನ್ನ, ಜನ್ನ, ರಾಘವಾಂಕ, ಪು.ತಿ.ನ., ಕುವೆಂಪು, ಬೇಂದ್ರೆ, ಜಾನಪದ, ಭಾಸ, ಗಾಥಾಸಪ್ತಶತಿಗಳಿಂದ ಆಯ್ದ ಕಾವ್ಯಭಾಗಗಳ ವಿಶ್ಲೇಷಣೆ ಬಹಳ ಸೂಕ್ಷ್ಮವಾಗಿದೆ. ನಿತ್ಯ ಬದುಕಿನ ಲಯದಿಂದ ಆರಿಸಿಕೊಳ್ಳುವ ಉದಾಹರಣೆಗಳು ತೀ.ನಂ.ಶ್ರೀ.ಯವರ ಜೀವನಪ್ರೀತಿಯ ಸಂಕೇತವಾಗಿವೆ. (ಉದಾಹರಣೆಗೆ, ವ್ಯಂಗ್ಯಾರ್ಥಕ್ಕಿಂತ ವಾಚ್ಯದತ್ತಲೇ ಓದುಗರು ಮತ್ತೆ ಮತ್ತೆ ಹೊರಳುವುದಕ್ಕೆ ಕೊಡುವ ಕಣ್ಣುಮುಚ್ಚಾಲೆ ಆಟದಲ್ಲಿ ಅಜ್ಜಿ ಮತ್ತು ಮಗುವಿನ ಚಿತ್ರ.)'ವರದಿಗಾರಿಕೆ' ಮಾಡುವಾಗ ಚರಿತ್ರೆಗಾರನಾಗಿಯೂ ಸಂಶೋಧಕರಾಗಿಯೂ ಕಾಣುವ ತೀ.ನಂ.ಶ್ರೀ., ಕಾವ್ಯ ವಿಶ್ಲೇಷಣೆಯಲ್ಲಿ ಪ್ರತಿಭಾವಂತ ಮನಸ್ಸಿನ ವಿಮರ್ಶಕ ಎಚ್ಚರದ ಗುರುವಾಗಿಯೂ ಚಿಂತಕರಾಗಿಯೂ ರೂಪಾಂತರಗೊಳ್ಳುತ್ತಾರೆ. ಕನ್ನಡಕ್ಕೆ ಶಾಸ್ತ್ರವಿಶ್ಲೇಷಣೆಯ ಭಾಷೆಯನ್ನು ರೂಪಿಸಿಕೊಡುವಲ್ಲಿ ಹಾಗೂ ಜಟಿಲವಾದ ತಾತ್ವಿಕ ಚರ್ಚೆಯನ್ನು ಧಾರಣ ಮಾಡುವುದಕ್ಕೆ ಬೇಕಾದ ಶಕ್ತಿ ದೊರಕಿಸುವಲ್ಲಿ 'ಭಾಕಾಮೀ'ಯ ಕಾಣಿಕೆ ದೊಡ್ಡದಾಗಿದೆ.

೫

ಆದರೆ ತೀ.ನಂ.ಶ್ರೀ.ಯವರಿಗೆ ಹೆಸರು ತಂದಿತ್ತಿರುವ ಅವರ ಪಾಂಡಿತ್ಯ ಮತ್ತು ದೃಷ್ಟಿಕೋನಗಳು ಹಲವು ತಾತ್ವಿಕ ಸಮಸ್ಯೆಗಳನ್ನು ಒಳಗೊಂಡಿದ್ದು, ತೀವ್ರ ಪ್ರಶ್ನೆಗಳನ್ನು ಹುಟ್ಟಿಸುತ್ತವೆ. ಮೊದಲನೆಯದಾಗಿ, ಸಂಸ್ಕೃತ ಕಾವ್ಯಮೀಮಾಂಸೆಯನ್ನು 'ಭಾರತೀಯ'ವೆಂದು ಕರೆದಿರುವುದರ ಪರಿಣಾಮಗಳು ಯಾವುವು ಎಂಬ ಪ್ರಶ್ನೆ. ಇಲ್ಲಿ 'ಭಾರತೀಯ' ಎಂಬ ಅಖಿಲ ಭಾರತೀಯ ಚೌಕಟ್ಟಿನಲ್ಲಿ ಚರ್ಚಿತವಾಗಿರುವ ಮೀಮಾಂಸಕರೆಲ್ಲ– ದಂಡಿಯನ್ನು ಬಿಟ್ಟರೆ – ಉತ್ತರದವರು. ಹೆಚ್ಚಿನವರು ಕಾಶ್ಮೀರದವರು. ಈ ಆಯ್ಕೆ ಕ್ರಮವೇ ಕನ್ನಡ ಆಲಂಕಾರಿಕ ಚರ್ಚೆಯನ್ನು ಊರೊಳಗಿನ ದಲಿತಕೇರಿಯಂತೆ ಪರಿಶಿಷ್ಟದಲ್ಲಿಡಲು ಕಾರಣವಾಗಿದೆ. ಇದರ ಬಗ್ಗೆ ಲೇಖಕರ ವಿವರಣೆಯಿದು: ''ಭಾರತೀಯ ಕಾವ್ಯಮೀಮಾಂಸೆ ಎಂದು ಗ್ರಂಥಕ್ಕೆ ಹೆಸರಿಟ್ಟಿದ್ದರೂ ಸಂಸ್ಕೃತ ಭಾಷೆಯಲ್ಲಿರುವ ಕಾವ್ಯಲಕ್ಷಣ ಗ್ರಂಥಗಳನ್ನೇ ಪ್ರಧಾನವಾಗಿ ಅವಲಂಬಿಸಿ ಇದನ್ನು ಬರೆಯಲಾಗಿದೆ. ಕನ್ನಡದಲ್ಲಿ ದೊರೆಯುವ ಲಕ್ಷಣ ಗ್ರಂಥಗಳನ್ನು ಕುರಿತ ಒಂದು ಅಧ್ಯಾಯ ಇದಕ್ಕೆ ಪರಿಶಿಷ್ಟವಾಗಿ ಬಂದಿದೆ. ಭರತಖಂಡದ ಮಿಕ್ಕ ಭಾಷೆಗಳಲ್ಲಿ ಈ ಶಾಸ್ತ್ರ ಹೇಗೆ ಬೆಳೆಯಿತು ಯಾವ ರೂಪ ತಾಳಿತು ಎಂಬುದನ್ನು ವ್ಯಾಸಂಗ ಮಾಡಿ ನಿರೂಪಿಸಲು ಶಕ್ಯವಾಗಲಿಲ್ಲ. ಆದರೂ ಕೆಲವು ವಿವರಗಳಲ್ಲೂ ವಿಶೇಷಾಂಶಗಳಲ್ಲೂ ಭೇದವಿರಬಹುದೇ ಹೊರತು, ನಮ್ಮ ಎಲ್ಲ ದೇಶಭಾಷೆಗಳಿಗೂ – ಕನ್ನಡಕ್ಕೆ ಹೇಗೋ


# KUMAR'S MOST USEFUL BOOK

## GENERAL KNOWLEDGE/QUIZ

| | |
|---|---|
| Ever Latest General Knowledge | 75. |
| General Knowledge Refresher | 60. |
| General Knowledge At A Glance | 40. |
| General Knowledge At Finger Tips | 18. |
| Up - to - Date General Knowledge | 30. |
| Objective General Knowledge | 60. |
| Objective General Knowledge | 25. |
| General Knowledge Quiz | 50. |
| India Quiz | 55. |
| General Knowledge Quiz | 55. |
| Science Quiz | 55. |
| Medical Quiz | 50. |
| Computer & Internet Quiz | 50. |

## LETTER WRITING

| | |
|---|---|
| 1000 Letters For All Occasions | 75. |
| Everyday Letters For All Occasions | 65. |
| Impressive Letters for All Occasions | 65. |
| Modern Business Letters | 55. |
| Model Business Letters | 95. |
| Model Letters for All Occasions | 95. |

## ENGLISH IMPROVEMENT

| | |
|---|---|
| Spoken English | 70.0 |
| Dictionary of Synonyms & Antonyms | 150.0 |
| English Usage | 90.0 |
| Book of Proverbs | 60.0 |
| The World of Proverbs | 25.0 |
| Dictionary of Idioms and Phrases | 85.0 |
| Idioms & Phrases & How to Use Them | 60.0 |
| Idioms and Phrases | 25.0 |
| Synonyms & Antonyms | 60.0 |
| Build Your Vocabulary | 50.0 |
| English Grammar & Composition | 65.0 |
| High School English Grammar & Composition | 110.0 |
| A Modern Approach to English Grammar | 80.0 |
| Dictionary of Phrasal Verbs | 75.0 |
| Common Errors in English & How to Avoid Them | 50.0 |

## ESSAY WRITING

| | |
|---|---|
| School Essays, Letters & Stories for Juniors | 40.0 |
| Selected School Essays, Letters & Paragraphs | 30.0 |
| Top School Essays, Letters, Paragraphs & Stories | 45.0 |
| Essays for Primary Classes | 22.0 |
| Essays and Comprehension for Junior Classes | 50.0 |
| School Essays, Letters, Stories & Paragraphs for Junior | 40.0 |
| Hindi/English Essays | 40.0 |
| Excellent School Essays & Letters | 65.0 |
| Up-to-date School Essays, Letters, Precis & Paragraphs | 60.0 |
| School Essays Letters Comprehension, Paragraphs & Precis Writing | 50.0 |
| Model School Essays, Letters, Stories & Paragraphs | 80.0 |

## GENERAL

| | |
|---|---|
| Body Language | 75.0 |
| Great Speeches of World Famous Personalities | 110.0 |
| World's Personalities | 85.0 |
| World's Great Scientists | 75.0 |
| Personality Development | 75.0 |
| Great International Personalities | 40.0 |
| Great Indians | 40.0 |
| Crossword Puzzles | 40.0 |



**VEE KUMAR PUBLICATIONS (P) LTD**

507, Vikram Tower, Rajendra Place, New Delhi - 110 00
Tel : 25720718, 25760718 Fax : 011-25711718
E-mail : kumarpublications@rediffmail.com

ಗೆಯೇ – ಸಂಸ್ಕೃತವೇ ಮೂಲವಸ್ತುವನ್ನೂ ರೂಪರೇಖೆಗಳನ್ನೂ ಒದಗಿಸಿದೆಯೆಂದು ಬಬಹುದು. ಆ ಮಟ್ಟಿಗಾದರೂ ಸಂಸ್ಕೃತ ಗ್ರಂಥಗಳಲ್ಲಿ ಕಾಣಬರುವ ಕಾವ್ಯ ಮೀಮಾಂಸೆ ನಿಸ್ಸಂದೇಹವಾಗಿ ಭಾರತೀಯ ಕಾವ್ಯಮೀಮಾಂಸೆಯೇ ಆಗುತ್ತದೆ.'' ಮೊಂದು ಚರ್ಚಾಸ್ಪದವಾದ ಹೇಳಿಕೆ. ತಮಿಳು ಕಾವ್ಯ ಮೀಮಾಂಸೆಯ ಷ್ಟಿಯಿಂದಂತೂ ಇದು ನಿಜವಲ್ಲ. ನಿರ್ದಿಷ್ಟ ಭಾಷೆ, ಸಾಹಿತ್ಯ, ಜನವರ್ಗ ಹಾಗೂ ೀವನಕ್ರಮಗಳನ್ನು 'ಭಾರತೀಯ'ವೆಂದು ಕರೆಯುವ ಹಾಗೂ ಉಳಿದವನ್ನು ಶಿಷ್ಟದಲ್ಲಿಡುವ ಈ ನಿಲುವು, ವಸಾಹತುಶಾಹಿ ಕಾಲದಲ್ಲಿ ಪ್ರಬಲವಾಗಿದ್ದ ರಾಷ್ಟ್ರೀಯ ಜಕಾರಣದ ಒಂದು ಭಾಗ. 'ಭಾಕಾಮೀ' ರಚನೆಗೊಂಡ ಕಾಲವು (೧೯೪೨) ಕ್ವಿಟ್ ಡಿಯಾ ಚಳುವಳಿಯದ್ದು. ದೇಶದಾದ್ಯಂತ ವಸಾಹತುಶಾಹಿ ವಿರೋಧಿ ೋರಾಟಗಳು ನಡೆಯುತ್ತಿದ್ದವು. ಆಗಿನ ರಾಷ್ಟ್ರೀಯವಾದಿ ಮತ್ತು ನಾಡವಾದಿ ಳುವಳಿಗಳ ಬುನಾದಿಯಲ್ಲಿ ವೇದ, ಗೀತೆ, ಗೋರಕ್ಷಣೆ, ಸಂಸ್ಕೃತ, ಮುಂತಾದ ವೈದಿಕ ನಾತನವಾದಿ ಸಂಗತಿಗಳು 'ಭಾರತೀಯ' ಹೆಸರಲ್ಲಿ ಪುನರುಜ್ಜೀವನ ಪಡೆದಿದ್ದವು. ಈ ನ್ನೆಲೆಯಲ್ಲಿ ಸಂಸ್ಕೃತ ಕಾವ್ಯಮೀಮಾಂಸೆಯು 'ಭಾರತೀಯ'ವಾಗಿದ್ದು ಸೋಜಿಗವಲ್ಲ. ಮಸ್ಯೆಯೆಂದರೆ ಈ 'ಭಾರತೀಯ' ಭಿತ್ತಿ ತೋರಿಕೆಗೆ ವಿಶಾಲವಾಗಿದ್ದು ವಾಸ್ತವದಲ್ಲಿ ಂಕುಚಿತವಾಗಿರುವುದು. ಇದು ತನಗೆ ಪ್ರಿಯವಲ್ಲದ ಅನೇಕ ಜಗತ್ತುಗಳನ್ನು ೂರಗಿಡುವ ರಾಜಕಾರಣ ಮಾಡುತ್ತದೆ. ಈಗಲೂ 'ಹಿಂದು', 'ಇಸ್ಲಾಂ', 'ರಾಷ್ಟ್ರೀಯ', ನ್ನಡ', 'ಕರ್ನಾಟಕ' ಮುಂತಾದ ಸಾರಾಸಗಟು ಪರಿಭಾಷೆಗಳು ತಮ್ಮ ಪರಿಸರದ ನೇಕ ಧಾರೆಗಳನ್ನು ಹೊರಗಿಡುವ ಕೆಲಸ ಮಾಡುತ್ತಲೇ ಇವೆ.

'ಭಾಕಾಮೀ'ಯ ಎರಡನೇ ಸಮಸ್ಯೆಯೆಂದರೆ, ಬೇರೊಂದು ಕಾಲದಲ್ಲಿ ಾಷೆಯಲ್ಲಿ ಹಿನ್ನೆಲೆಯಲ್ಲಿ ಸೃಷ್ಟಿಯಾದ ಕಾವ್ಯತತ್ವಗಳನ್ನು ಸ್ಪಷ್ಟಪಡಿಸಲು ಕನ್ನಡ ಾಹಿತ್ಯದಿಂದ ಲಕ್ಷ್ಯಪದ್ಯಗಳನ್ನು 'ಬಳಸು'ವುದು; ಆದರೆ ನಿದರ್ಶನಕ್ಕೆಂದು ಳಕೆಗೊಳ್ಳುವ ಈ ಕಾವ್ಯಭಾಗಗಳು ಬೇರೊಂದು ಕಾವ್ಯತತ್ವದ ಹಿನ್ನೆಲೆಯಲ್ಲಿ ಹುಟ್ಟಿವೆ ಥವಾ ತಮ್ಮೊಳಗೇ ಬೇರೊಂದು ಕಾವ್ಯಮೀಮಾಂಸೆಯನ್ನು ಹುದುಗಿಸಿಕೊಂಡಿವೆ ಂಬುದನ್ನು ಕಾಣಲಾಗದಿರುವುದು. ವಿದೇಶೀ ಪಾನೀಯಗಳ ಜಾಹೀರಾತಿಗೆ ೀಯ ಜನಪದ ಆಚರಣೆಯೊಂದು ಬಳಕೆಯಾಗುವಾಗ, ಪ್ರಚಾರಕ್ಕೆ ಬರುವುದು ಾನೀಯವೇ ಹೊರತು, ಆ ಆಚರಣೆಯಲ್ಲ. 'ಭಾಕಾಮೀ'ಯಲ್ಲಿ ಬಳಕೆಯಾಗಿರುವ ಚ್ಚಿನ ಕಾವ್ಯಭಾಗಗಳು ಕಾಳಿದಾಸ, ಭಾಸ, ಭಾರವಿ, ಬಾಣ, ಪಂಪ ಮುಂತಾದ ಲಾಸಿಕಲ್ ಕವಿಗಳವು. ಇವು ಸಹ ಇಲ್ಲಿನ ಕಾವ್ಯ ಮೀಮಾಂಸೆಯು ಪ್ರತಿಷ್ಠಿತ ವರ್ಗದ ಾಲೋಚನ ಕ್ರಮ, ಅಭಿರುಚಿ ಮತ್ತು ಲೋಕದೃಷ್ಟಿಗಳನ್ನು ಒಳಗೊಳ್ಳಲು ೂರಕವಾಗಿವೆ. 'ಭಾಕಾಮೀ'ಯಲ್ಲಿರುವ ಬಹುಪಾಲು ಸಂಸ್ಕೃತ ಉಲ್ಲೇಖಗಳಿಗೆ ನ್ನಡ ಅನುವಾದವಿಲ್ಲ ಎಂಬುದನ್ನು ಗಮನಿಸಬೇಕು. ಓದುಗರಿಗೆ ಇದರರ್ಥವು ೂತ್ತಿದೆ ಎಂಬ ಇಲ್ಲಿನ ನಿಲುವು ಈ ಕೃತಿಯು ಯಾವ ವರ್ಗವನ್ನು ಉದ್ದೇಶಿಸಿ ಚಿತವಾಗಿದೆ ಎಂಬ ಪ್ರಶ್ನೆಯನ್ನು ಹುಟ್ಟಿಸುತ್ತದೆ. ಮುಖ್ಯವೆಂದರೆ, ಕ್ಲಾಸಿಕಲ್ ರಂಪರೆಯಲ್ಲಿರುವ ಮೂಲ ಮಾತೃಕೆಗಳು ದೇಶದ ಎಲ್ಲ ದೇಶೀಭಾಷೆಗಳಿಗೆ ೇಕಾದ ಪ್ರೇರಣೆ ಮತ್ತು ಶಕ್ತಿಯನ್ನು ಮಾದರಿಯನ್ನು ಕೊಡುತ್ತವೆ; ಆ ಭಾಷೆಗಳು ವು ಸ್ವೀಕರಿಸಿದ್ದನ್ನು ತಮ್ಮ ಉಪಯುಕ್ತತೆಗೆ ತಕ್ಕಂತೆ ಅನುಸಾರವಾಗಿ ಸ್ತರಿಸಿಕೊಳ್ಳುವ, ರೂಪಾಂತರಿಸಿಕೊಳ್ಳುವ ಕೆಲಸ ಮಾಡುತ್ತವೆ; ಅವುಗಳಿಂದ ಾರತೀಯ/ರಾಷ್ಟ್ರೀಯ ಮಾದರಿಗಳು ಪಡೆಯುವುದೇನೂ ಇರುವುದಿಲ್ಲ – ಎಂಬ ಲ್ಲಿನ ನಂಬಿಕೆ. ಈ ನಂಬಿಕೆ ಯಜಮಾನಿಕೆಯ ಧೋರಣೆಯಾಗಿ ರೂಪಾಂತರ ೊಳ್ಳುತ್ತದೆ. ಉದಾಹರಣೆಗೆ, ತೀ.ನಂ.ಶ್ರೀ.ಯವರು ದಂಡಿಯ 'ಕಾವ್ಯಾದರ್ಶ'ದ ೂಲವಾಕ್ಯಗಳ ಸೊಗಸು ''ಕವಿರಾಜಮಾರ್ಗ'ದ ಅನುವಾದದಲ್ಲಿ ಸರಿಯಾಗಿ ಂದಿಲ್ಲ'' ಎನ್ನುತ್ತಾರೆ; 'ಕವಿರಾಜಮಾರ್ಗ'ದ 'ಧ್ವನಿಯೆಂಬುದು ಅಲಂಕಾರಂ' ೂತ್ರದ ಚರ್ಚೆ ಮಾಡುತ್ತ, ''ಸಂಸ್ಕೃತ ಲಕ್ಷಣ ಗ್ರಂಥಗಳಲ್ಲಿ ನನಗೆ ಪರಿಚಿತ ಾಗಿರುವ ಯಾವ ವಿವರಣೆಯನ್ನೂ ಇಲ್ಲಿಗೆ ಹೊಂದಿಸಲು ಆಗುವುದಿಲ್ಲ'' ಎನ್ನುತ್ತಾರೆ; ರಾಮಾಯಣ ಮೊದಲಾದ ಗ್ರಂಥಗಳಲ್ಲಿ ರಸವು ಸಿದ್ಧರೂಪದಲ್ಲಿಯೇ ೊರೆಯುತ್ತದೆ. ಅದನ್ನು ಆಸ್ವಾದಿಸುವುದೊಂದು ಮಾತ್ರವೇ ಉಳಿದಿರುವ ಕೆಲಸ. ಲ್ಲಿ ಕವಿಕಲ್ಪನೆಯನ್ನು ಅದರಲ್ಲೂ ಮೂಲರಸಕ್ಕೆ ವಿರೋಧವಾಗಿ ಬೆರೆಸಬಾರದು. ದಾಹರಣೆಗೆ, ಕಥೆಯನ್ನು ಮಾರ್ಪಡಿಸುತ್ತೇನೆಂದು ಹೊರಟು ರಾಮನನ್ನು ೀರಲಲಿತ ನಾಯಕನನ್ನಾಗಿ ಮಾಡಿ ಕೂರಿಸಿಬಿಟ್ಟರೆ ಎಷ್ಟೊಂದು ಅಸಮಂಜಸ!'' ನ್ನುತ್ತಾರೆ. ಈ ಮಾತುಗಳಲ್ಲಿರುವ ಆಕ್ಷೇಪಕ ದನಿಯನ್ನು ಗಮನಿಸಬೇಕು. .ಎಂ.ಶ್ರೀ.ಯವರ 'ಇಂಗ್ಲಿಷ್ ಗೀತ'ಗಳಿಗೆ ಬರೆದ ಮುನ್ನುಡಿಯಲ್ಲಿ ಕೂಡ ಇಂಗ್ಲಿಷಿನ 'ಮೂಲ' ಕವಿತೆಗಳಿಗೆ ಎಲ್ಲೆಲ್ಲಿ ವ್ಯತಿರಿಕ್ತ ಅನುವಾದವಾಗಿದೆ ಎಂಬುದನ್ನು ಗುರುತಿಸಲು ತೀ.ನಂ.ಶ್ರೀ. ಬಹಳ ಶ್ರಮವಹಿಸುತ್ತಾರೆ. ಅವರ ಈ ಮೂಲಶೋಧಕ ಪ್ರವೃತ್ತಿಗೆ ಮೊದಲನೇ ಕಾರಣ ವಸಾಹತುಶಾಹಿ ಕಾಲದ ಸಂಶೋಧನೆಯಲ್ಲಿ ಮುಖ್ಯ ತುಡಿತವಾಗಿದ್ದ ಅಧಿಕೃತ ಚರಿತ್ರೆ ಕಟ್ಟುವ ಮನೋಭಾವ. ಎರಡನೇ ಕಾರಣ, 'ಮೂಲಮಾತೃಕೆ'ಯು ಸ್ವೀಕರಿಸಿದ ಭಾಷೆ/ಕೃತಿಯಲ್ಲಿ ಯಥಾರೂಪದಲ್ಲಿ ಬಂದಿದೆಯೇ ಇಲ್ಲವೇ ಎಂದು ಪರಿಶೀಲಿಸುವ, ಪ್ರಭಾವ ಹುಡುಕುವ ಹಂಗಿನ ದೃಷ್ಟಿಕೋನ. ಈ ದೃಷ್ಟಿಕೋನಕ್ಕೆ ಪೂರಕವಾಗಿ ''ಕನ್ನಡ ಲಕ್ಷಣ ಗ್ರಂಥಗಳಲ್ಲಿ ಉಕ್ತವಾಗಿರುವ ವಿಷಯಗಳ ಎಲ್ಲ ಮೂಲರೇಖೆಗಳೂ ಬಲುಮಟ್ಟಿಗೆ ಎಲ್ಲ ವಿವರಗಳೂ ಸಂಸ್ಕೃತದಿಂದ ಬಂದವು'' ಎಂಬ ಹೇಳಿಕೆ ಬರುತ್ತದೆ; ''ಕನ್ನಡದಿ ಪೇಳ್ದುದೆಲ್ಲವು ಮುನ್ನವೆ ಸಕ್ಕದಲ್ಲಿರ್ದುದು'' ಹೇಳಿಕೆಯ ಉಲ್ಲೇಖ ಬರುತ್ತದೆ. ತೀ.ನಂ.ಶ್ರೀ. ಪ್ರಕಾರ ಕನ್ನಡದ ಲಕ್ಷಣಗ್ರಂಥಗಳು ''ಬೆಟ್ಟಕ್ಕೆ ನಿಲುವುಗನ್ನಡಿ ಹಿಡಿದು ತೋರಿಸುವ ಕೆಲಸ''ವನ್ನು ಮಾಡುತ್ತವೆ, ಅಷ್ಟೆ.

ಇಲ್ಲಿ ತಟ್ಟನೆ ಕೇಳಬೇಕೆನಿಸುವ ಪ್ರಶ್ನೆಯೆಂದರೆ, 'ಮೂಲ'ದ ಸೊಗಸು 'ಸರಿಯಾಗಿ' ಬರುವುದು ಎಂದರೇನು? ಅದನ್ನು 'ಮೂಲ' ಸಂಸ್ಕೃತ ಲಕ್ಷಣಗಳಿಗೆ 'ಹೊಂದಿಸಲು' ಯಾಕೆ ಸಾಧ್ಯವಾಗಬೇಕು? 'ಮೂಲವಾಕ್ಯ', 'ಮೂಲರಸ', 'ಮೂಲಲಕ್ಷಣ ಗ್ರಂಥ'ಗಳು ಅನುವಾದ ಮತ್ತು ರೂಪಾಂತರಗಳಲ್ಲಿ 'ಸರಿಯಾಗಿ ಬಂದಿಲ್ಲ', 'ಹೊಂದಿಸಲು ಆಗಿಲ್ಲ', 'ಅಸಮಂಜಸ'– ಇತ್ಯಾದಿ ನುಡಿಗಟ್ಟುಗಳ ಹಿಂದಿರುವ ಅಪೇಕ್ಷೆ ಯಾವುದು? ಮೂಲದ ಪಾವಿತ್ರ್ಯ ರಕ್ಷಣೆ ಮಾಡುತ್ತ, ದೇಶೀಯ ರೂಪಾಂತರಗಳ ಹಕ್ಕನ್ನು ಮತ್ತು ಅನುವಾದಗಳ ಸ್ವಾತಂತ್ರ್ಯವನ್ನು ಮನ್ನಿಸಲು ನಿರಾಕರಿಸುವಂತಹದ್ದು ತಾನೇ? ಅದರಲ್ಲೂ ರಾಮಾಯಣದ ವಸ್ತುವನ್ನು ಮಾರ್ಪಾಟು ಮಾಡಿಕೊಳ್ಳುವ ಬಗ್ಗೆ ತೀ.ನಂ.ಶ್ರೀ. ತೋರುವ ಅಸಮ್ಮತಿಯನ್ನು ('ಎಷ್ಟೊಂದು ಅಸಮಂಜಸ!'), 'ಶೂದ್ರತಪಸ್ವಿ' ನಾಟಕದ ವಿಷಯದಲ್ಲಿ ಕುವೆಂಪು ಹಾಗೂ ಮಾಸ್ತಿ, ದೇವುಡು ಅವರ ನಡುವೆ ನಡೆದ ವಾಗ್ವಾದಗಳ (೧೯೪೪) ಹಿನ್ನೆಲೆಯಲ್ಲಿಟ್ಟು ನೋಡಬೇಕು. ಕನ್ನಡ ಲಕ್ಷಣ ಗ್ರಂಥಗಳು ಸಂಸ್ಕೃತದ ಹಂಗಿನಲ್ಲಿ ಇರುವುದು ಚಾರಿತ್ರಿಕವಾಗಿ ಒಂದು ವಾಸ್ತವವಿದ್ದೀತು. ಆದರೆ ಅಂತಹ ದುರವಸ್ಥೆ ಕನ್ನಡದಂತಹ ಜನಭಾಷೆಗೆ ಯಾಕೆ ಬಂತು? 'ಕವಿರಾಜಮಾರ್ಗ'ವು ಯಾಕೆ ಔತ್ತರೇಯ ಮೀಮಾಂಸಕರಿಗಿಂತ ದಾಕ್ಷಿಣಾತ್ಯನಾದ ದಂಡಿಯ ಪ್ರಭಾವಕ್ಕೆ ಹೆಚ್ಚು ಒಳಗಾಯಿತು? ಕಾರ್ಯಗಳೂ ನಾಟಕಕ್ಕೆ ಆಧಾರವಾಗುತ್ತವೆ ಎಂದು ಭರತನ 'ನಾಟ್ಯಶಾಸ್ತ್ರ' ಹೇಳುತ್ತದೆ. ಸಂಸ್ಕೃತ ಕಾವ್ಯಮೀಮಾಂಸೆಯಲ್ಲಿ ಕಾವ್ಯದ ವಸ್ತು, ಸೃಷ್ಟಿಕ್ರಿಯೆ ಹಾಗೂ ಸಹೃದಯರ ಚರ್ಚೆಯು ದಾರ್ಶನಿಕವಾಗಿ ಹೀಗೆ ಅದ್ವೈತಿಯಾಗಿದೆ. ಈ ಅದ್ವೈತವು ಆಳದಲ್ಲಿ ಸಮಾನತೆಯ ಕಲ್ಪನೆಯನ್ನು ಒಳಗೊಂಡಿರುವ ಕಾರಣ, ಅದಕ್ಕೆ ಸಾಮಾಜಿಕ ಆಯಾಮವೂ ಒದಗಿಬಿಡುತ್ತದೆ. ಈ ಆಧಾರದಲ್ಲಿಯೇ ಕುವೆಂಪು ತಮ್ಮ ಕಾವ್ಯ, ದಾರ್ಶನಿಕ ಚಿಂತನೆ ಹಾಗೂ ಕಾವ್ಯಮೀಮಾಂಸೆಗಳನ್ನು ರೂಪಿಸಿಕೊಂಡಿದ್ದು. ಅಧಮರು ನೀಚರು ಎಂದು ಕರೆಸಿಕೊಂಡವರು ಮೇಲ್ಗಲನೆ ಪಡೆಯುತ್ತಾರೆ ಎಂಬುದು ಅವರ ಸಾಹಿತ್ಯ ಹಾಗೂ ಕಾವ್ಯಮೀಮಾಂಸೆಯ ತತ್ವಸಾರ. 'ಸೃಷ್ಟಿಯ ಮಹದ್‌ವ್ಯೂಹ ರಚನೆಯಲ್ಲಿ ಪಾಪಿಗೂ ಉದ್ಧಾರವಿದೆ' ಎಂಬ ಅವರ ಹೇಳಿಕೆ; ನಾಯಿಗುತ್ತಿಯು ಮಹಾಕಾದಂಬರಿಯ ನಾಯಕನಾಗುವ ವಿನ್ಯಾಸ; 'ಇಲ್ಲಿ ಯಾರೂ ಮುಖ್ಯರಲ್ಲ' ಎಂಬ ತತ್ವ; ರಾಮಾಯಣದ ರಾವಣ ಅಥವಾ 'ಶೂದ್ರತಪಸ್ವಿ'ಯ ಸನಾತನವಾದಿ ದ್ವಿಜ ಮುಂತಾದ 'ದುಷ್ಟ'ರು ಸಹ ರೂಪಾಂತರಗೊಳ್ಳುವ ಕಥಾರಚನೆ – ಇವೆಲ್ಲವೂ ಈ ರೂಪಾಂತರದ ತತ್ವದ ವಿಭಿನ್ನ ಮೊಗಗಳು. ಹುಟ್ಟಿನಿಂದ ಮನುಷ್ಯನ ಅಂತಸ್ತನ್ನು ನಿರ್ಧರಿಸುವ ಜಾತಿಪದ್ಧತಿ ವಿರುದ್ಧ ಬಂಡೇಳಲು, ಕುವೆಂಪು ಪಶ್ಚಿಮದ ಮಾನವತಾವಾದಿ ಚಿಂತನೆ ಮತ್ತು ಎಡಪಂಥೀಯ ವರ್ಗತತ್ವಗಳ ಜತೆ ಭಾರತದ ಅದ್ವೈತ ದರ್ಶನದಿಂದಲೂ ಪ್ರೇರಿತರಾಗಿದ್ದರು. ಆದರೆ ಧಾರ್ಮಿಕವಾಗಿ ಅದ್ವೈತಿಯಾಗಿದ್ದರೂ ಸಾಮಾಜಿಕವಾಗಿ ಶ್ರೇಣೀಕರಣದ ಭೇದತತ್ವವನ್ನು ಒಪ್ಪಿಕೊಂಡಿದ್ದ ಅನೇಕ ತತ್ವಶಾಸ್ತ್ರದ ವಿದ್ವಾಂಸರು, ಮುಖ್ಯವಾಗಿ ಡಿ.ವಿ.ಜಿ. ಮುಂತಾದವರು, ಕುವೆಂಪು ಅವರ ಅದ್ವೈತ ತತ್ವದ ಸಾಮಾಜಿಕ ವಿಸ್ತರಣೆಯನ್ನು ಒಪ್ಪಿಕೊಳ್ಳಲಿಲ್ಲ. ಮೀಮಾಂಸಕರು ತಮ್ಮ ವರ್ತಮಾನ ಸಮಾಜವನ್ನು ಹೇಗೆ ಗ್ರಹಿಸಿದ್ದಾರೆ ಮತ್ತು ಭವಿಷ್ಯದ ಸಮಾಜ ಕುರಿತಂತೆ ಅವರ ಕನಸು ಯಾವುದು? ಇದು ಯಾವಾಗಲೂ ನಿರ್ಣಾಯಕವಾದ ನಿಕಷ ಪ್ರಶ್ನೆ. ಈ ದೃಷ್ಟಿಯಿಂದ ನೋಡಿದರೆ ತೀ.ನಂ.ಶ್ರೀ.ಯವರಿಗೆ ಸಾಮಾಜಿಕವಾಗಿ ಚಲನಶೀಲ ಲೋಕದೃಷ್ಟಿಯಿರಲಿಲ್ಲ

ನ್ನರಿಂದಲೇ ಅದ್ವೈತ ದರ್ಶನದ ಹಿನ್ನೆಲೆಯುಳ್ಳ ಕಾವ್ಯತತ್ವಗಳನ್ನು ಚರ್ಚೆ ಾಡುವಾಗ, ಅದರೊಳಗಿನ ಆಧ್ಯಾತ್ಮಿಕ ಸಮಾನತೆಯ ಆಶಯ ಹಿಡಿಯಲು ಅವರಿಗೆ ಗಲಿಲ್ಲ. ಓದುಗರದು ಕವಿಗೆ ಹೋಲಿಸಿದರೆ 'ಕೆಳಮಟ್ಟದ' ಪ್ರತಿಭೆಯೆಂಬ, ವಿಸೃಷ್ಟಿಯು ಬ್ರಹ್ಮಸೃಷ್ಟಿಗೂ ಮಿಗಿಲಾದರೂ ಅದು ವಿಶ್ವಾಮಿತ್ರ ಸೃಷ್ಟಿಯಂತೆ ೀನವಲ್ಲ' ಎಂಬ ತರತಮವಾದಿ ಹೇಳಿಕೆಗಳನ್ನು ಗಮನಿಸಿದರೆ, ಅವರು ದ್ವೈತದರ್ಶನದ ಮೂಲತತ್ವಕ್ಕೆ ವಿರುದ್ಧವಾಗಿ ಚಿಂತಿಸಿದರು ಎಂದೂ ಅನಿಸುತ್ತದೆ.

ಈ ಸಮಸ್ಯೆಯು ಇಲ್ಲಿನ ಲಿಂಗತರತಮವನ್ನು ಒಪ್ಪಿಕೊಂಡಿರುವ ಸೌಂದರ್ಯ ಸ್ತ್ರದಲ್ಲೂ ಪ್ರಕಟವಾಗುತ್ತದೆ. ಇಲ್ಲಿ ಹೆಣ್ಣು ನಿಸರ್ಗ, ಹೂವು, ಕಾವ್ಯಗಳ ಜತೆಯಲ್ಲಿ ಮೀಕರಿಸಲ್ಪಡುವುದಾಗಲಿ ಪುರುಷರೂಪಿಯಾದ ಸೌಂದರ್ಯಾರಾಧಕ, ರಸಿಕ, ಹೃದಯ ಹಾಗೂ ಕವಿಗಳೆಂಬ ಭೋಗಿಗಳ ಪಾಲಿಗೆ ಭೋಗ್ಯ ವಸ್ತುವಾಗುವುದಾಗಲಿ ದಕ್ಕೆ ಸಾಕ್ಷಿ; ಇಲ್ಲಿ ಬರುವ ಸೌಂದರ್ಯದ ಬಹುತೇಕ ಚಿತ್ರಗಳು ದೇಹಪ್ರಧಾನವಾದ ಣ್ಣಿಗೆ ಸಂಬಂಧಪಟ್ಟಿದ್ದು, ಅವುಗಳಲ್ಲಿ ಪುರುಷರೂಪಿ ಭೋಗಿಯ ಚಿತ್ರಗಳು ೋಡಣೆಗೊಂಡಿವೆ. ಈ ಚಿತ್ರಗಳು ಊಳಿಗಮಾನ್ಯ ಸಮಾಜದ ನೇರ ಪ್ರತಿಬಿಂಬ ಾಗಿವೆ. ಇಲ್ಲಿನ ಭೋಗಿ-ಭೋಗ್ಯ ಸೇವ್ಯ-ಸೇವಿತ ಸಂಬಂಧಗಳು ಏಕಮುಖಿ ಗೂ ಪುರುಷಪರವಾಗಿವೆ. ಇದಕ್ಕೆ ಪೂರಕವಾಗಿ ಇಡೀ ಕೃತಿಯಲ್ಲಿ ಕವಿ, ಸಹೃದಯ, ಮಾಜಿಕರು ಗಂಡಸರಾಗಿರುವ ಗೃಹೀತವಿದೆ. ಹೆಣ್ಣನ್ನು ಕಾವ್ಯಕ್ಕೂ ಅದರೊಳಗಿನ ಚ್ಯಾರ್ಥವನ್ನು ಪೆರ್ಮೊಲೆಗಳಿಗೂ ಅವಳ ಕಣ್ಮಲರನ್ನು ಧ್ವನಿಗೂ ಹೋಲಿಸುವ ೀಮಿಚಂದ್ರನ ಪದ್ಯವನ್ನು 'ಭಾಕಾಮೀ' ಸಂಕೋಚವಿಲ್ಲದೆ ಉಲ್ಲೇಖಿಸುತ್ತದೆ. ತ್ರುಗಳ ''ಪೆಂಡಿರ ಮೆಯ್ಸಿರಿ, ಸತಿಯರ ಒಪ್ಪದಿಂಪು'' ಕಳೆದುಹೋಗುವ ಚಿತ್ರಗಳ ೂಲಕ ಅವರ ಗಂಡಂದಿರನ್ನು ಕೊಲ್ಲುವ ರಾಜರ ಶೌರ್ಯ ಬಣ್ಣಿಸುವ ಪದ್ಯಗಳನ್ನು ಾಳವಾಗಿ ಉಲ್ಲೇಖಿಸುತ್ತದೆ. ಯುದ್ಧ ಸಂಸ್ಕೃತಿಯ ಶೌರ್ಯ ವರ್ಣನೆಗಳಲ್ಲಿ ್ರಿರ್ಯದ ವೈಭವೀಕರಣವಿರುತ್ತದೆ; ಹಿಂಸೆ ಬಲಾತ್ಕಾರಗಳ ಮೂಲಕ ಬಲಿಷ್ಠರು ಜ್ಯವಿಸ್ತರಣೆ ಮತ್ತು ಸಂಪತ್ತಿನ ಲೂಟಿ ಮಾಡುವುದರ ಪರೋಕ್ಷ ಮರ್ಥನೆಯಿರುತ್ತದೆ. ಕನ್ನಡದ ಮಾನವತಾವಾದಿ ಲೇಖಕರಾದ ವಿ.ಸೀ.ಯವರು ಾಗವರ್ಮನ 'ಕರ್ನಾಟಕ ಕಾದಂಬರಿ'ಯ ಚರ್ಚೆಯಲ್ಲಿ), ಮೂರ್ತಿರಾಯರು ವಾಲ್ಮೀಕಿ ರಾಮಾಯಣದ ಚರ್ಚೆಯಲ್ಲಿ) ನಾಯಕನ ಶೌರ್ಯ ಬಣ್ಣನೆಯ ದ್ಯಗಳಲ್ಲಿರುವ ಇಂತಹ ಅಸೂಕ್ಷ್ಮತೆ ಮತ್ತು ಅಮಾನವೀಯತೆಯನ್ನು ಕಟುವಾಗಿ ಮರ್ಶಿಸುತ್ತಾರೆ. 'ಭಾಕಾಮೀ' ಇಂತಹ ವಿಮರ್ಶನ ಪ್ರಜ್ಞೆ ತೋರುವುದಿಲ್ಲ. ಈ ನ್ನೆಲೆಯಲ್ಲಿ ಇಲ್ಲಿ ಉಲ್ಲೇಖಗೊಂಡಿರುವ ಅಭಿಜಾತ ಕಾವ್ಯದ ನಿದರ್ಶನಗಳನ್ನೂ, ವುಗಳಿಂದ ಹುಟ್ಟಿರುವ ಕಾವ್ಯತತ್ವವನ್ನೂ, ಈ ಕಾವ್ಯತತ್ವ ಹಾಗೂ ಕಾವ್ಯಗಳನ್ನು ಳಸಿಕೊಂಡು ಹುಟ್ಟಿರುವ ಇಡೀ ಕಾವ್ಯಮೀಮಾಂಸೆಯನ್ನು ಸ್ತ್ರೀವಾದಿ ನೆಲೆಯಿಂದ ುರುವಿಮರ್ಶೆಗೂ ಮರು ವ್ಯಾಖ್ಯಾನಕ್ಕೂ ಒಳಪಡಿಸುವ ಅಗತ್ಯವಿದೆ. ಹೆಣ್ಣನ್ನು ೀಹಪ್ರಧಾನವಾಗಿ ಬಣ್ಣಿಸದೆ ಚೈತನ್ಯ ಪ್ರಧಾನವಾಗಿ ಬಣ್ಣಿಸುವ ತಮಿಳು ಾವ್ಯಮೀಮಾಂಸೆಯ ಜತೆಗಿಟ್ಟು ತೌಲನಿಕವಾಗಿ ನೋಡುವ ಅಗತ್ಯವಿದೆ.

'ಭಾಕಾಮೀ'ಯಲ್ಲಿ 'ಸ್ವೈಕತಗತ' ಎಂಬ ಪರಿಕಲ್ಪನೆಯ ಚರ್ಚೆ ಬರುತ್ತದೆ. ೈಕತಗತ ಎಂದರೆ, ಕೃತಿಯಲ್ಲಿ ಬರುವ ಸಂಗತಿಗಳನ್ನು ಸಾಮಾಜಿಕರು ತಮ್ಮ ಯಕ್ತಿಕ ಬದುಕಿಗೆ ಲಗತ್ತು ಮಾಡಿಕೊಂಡು, ಕೃತಿ ವಿರೋಧಿಸುವ ದೋಷ. ಂದ್ರಸಭೆಯಲ್ಲಿ ಸಮುದ್ರ ಮಥನದ ಕಥೆಯನ್ನು ಆಧರಿಸಿದ ನಾಟಕ ದರ್ಶನವಾದಾಗ, ಪ್ರೇಕ್ಷಕರಾಗಿದ್ದ ರಾಕ್ಷಸರು ಕೆರಳಿ ಗಲಾಟೆ ಮಾಡಿ ನಾಟಕ ನಿಲ್ಲಿಸಿದ ಸಂಗವನ್ನು ಇದಕ್ಕೆ ನಿದರ್ಶನವಾಗಿ ಕೊಡಲಾಗುತ್ತದೆ. ಇದರ ಚರ್ಚೆ ಮಾಡುತ್ತ ೀ.ನಂ.ಶ್ರೀ. ''ಕಥಾವಸ್ತು ದೇಶ ಕಾಲ ವಿಶೇಷಾವೇಶಕ್ಕೆ ಅವಕಾಶ ಕೊಡದಂತೆ'' ವಿಗಳು ಎಚ್ಚರ ವಹಿಸಬೇಕೆಂದು ಹೇಳುತ್ತಾರೆ. ಜತೆಗೆ ''ಲೋಕವೂ ನಾಟ್ಯವೂ ೀರೆಬೇರೆ ಜಗತ್ತುಗಳೆಂದು ಸಾಮಾಜಿಕ ತಿಳಿದುಕೊಂಡಲ್ಲಿ ಈ ದೋಷಗಳು ರಿಹಾರವಾಗುತ್ತವೆ'' ಎಂದೂ ಹೇಳುತ್ತ, ಸ್ವೈಕತಗತವು ಸಹೃದಯರ 'ಪ್ರತಿಭಾರಾಹಿತ್ಯ' ುತ್ತು 'ವ್ಯಕ್ತಿದೋಷ' ಎಂದು ನಿರ್ಧರಿಸುತ್ತಾರೆ; ಯತಿ ಮತ್ತು ಖಂಡಪ್ರಾಸಗಳ ಷಯು ಬಂದಾಗ, ಯಾಕೆ ಸಂಸ್ಕೃತಕ್ಕೆ ಗುಣ ಎನಿಸಿರುವುದನ್ನು ಕನ್ನಡದ ೂರ್ವಾಚಾರ್ಯರು ಉಲ್ಲಂಘಿಸುವ 'ದೋಷ' ಮಾಡುತ್ತಾರೆ? ನಂತರ 'ತಾವು ಾಡಿದ ಈ ದೋಷವನ್ನೇ ಕನ್ನಡದ ಗುಣ'ವೆಂದು ವಾದಿಸುತ್ತಾರೆ?– ಇಂತಹ ್ರಶ್ನೆಗಳನ್ನು ಕೇಳಿಕೊಳ್ಳಲು 'ಭಾಕಾಮೀ'ಗೆ ಸಾಧ್ಯವಾಗಿಲ್ಲ. ಮೂಲದಲ್ಲಿರುವುದು ರಿಯಾಗಿ' ಬಾರದಿದ್ದರೆ ಅದಕ್ಕೆ ಅನೇಕ ಕಾರಣಗಳಿರುತ್ತವೆ. ಅವುಗಳ ಸಾಂಸ್ಕೃತಿಕ ಸ್ಲೇಷಣೆ ಮಾಡುವುದರ ಅಗತ್ಯವಿರುತ್ತದೆ. ಯಾವತ್ತೂ 'ಅಖಿಲ' ಅಥವಾ ಕ್ಲಾಸಿಕಲ್ ಚೌಕಟ್ಟುಗಳಿಗೆ ಹೊಸಜೀವನ ಸಿಕ್ಕುವುದೇ ದೇಶೀಭಾಷೆ ಮತ್ತು ಸಾಹಿತ್ಯಗಳ ರೂಪಾಂತರಗಳಲ್ಲಿ. ಪಂಪನನ್ನು ಆಳವಾಗಿ ಅಭ್ಯಾಸಮಾಡಿದ್ದ ತೀ.ನಂ.ಶ್ರೀ.ಯವರಿಗೆ ಇದು ತಿಳಿಯದ ಸಂಗತಿಯಲ್ಲ. ಸಂಸ್ಕೃತ ಮೀಮಾಸೆಯನ್ನು ಕನ್ನಡದಲ್ಲಿ ಬರೆವ ಮತ್ತು ಸಂಸ್ಕೃತ ಲಕ್ಷಣಗಳಿಗೆ ಕನ್ನಡದ ಲಕ್ಷ್ಯಪದ್ಯಗಳನ್ನು ಕೊಟ್ಟು ವಿವರಿಸುವ ಅನಿವಾರ್ಯತೆ, ತಮಗೆ ಯಾಕೆ ಬಂತೆಂದು ಆಲೋಚಿಸಿದ್ದರೂ ಅವರಿಗೀ ಸತ್ಯ ಹೊಳೆಯುತ್ತಿತ್ತು. ವಾಸ್ತವವಾಗಿ ಕನ್ನಡ ಆಲಂಕಾರಿಕರಾಗಲಿ ಕವಿಗಳಾಗಲಿ 'ಮೂಲ'ವನ್ನು ಉಲ್ಲಂಘಿಸುವುದು ಒಂದು ಅಶಿಸ್ತಿನ ಸಂಗತಿಯೇ ಅಲ್ಲ; ಬದಲಿಗದು ಕನ್ನಡ ಕಾವ್ಯ ಮತ್ತು ಕಾವ್ಯಮೀಮಾಂಸೆಗಳು ತಮ್ಮತನದ ಹುಡುಕಾಟದ ಪ್ರಕ್ರಿಯೆಯಲ್ಲಿ ಮಾಡುವ ಅರ್ಥಪೂರ್ಣ ಸಂಘರ್ಷವಾಗಿದೆ. ಕನ್ನಡ ಲಕ್ಷಣ ಗ್ರಂಥಗಳ ಈ ಇಕ್ಕಟ್ಟುಗಳಲ್ಲಿ, ಕನ್ನಡ (ದೇಸೀ)–ಸಂಸ್ಕೃತ (ಮಾರ್ಗ)ಗಳ ನಡುವಣ ಘರ್ಷಣೆಗಳಲ್ಲಿ, ಸಂಸ್ಕೃತ ಮೀಮಾಂಸೆಯ ನಿಯಮಗಳನ್ನು ಕನ್ನಡ ಕವಿಗಳು ಉಲ್ಲಂಘಿಸುವ ಬಗೆಯಲ್ಲಿ ಕನ್ನಡ ಕಾವ್ಯಮೀಮಾಂಸೆಯ ಬೀಜಾಂಕುರಗಳಿವೆ. ಇದನ್ನು ಕಾಣುವುದು 'ಭಾಕಾಮೀ'ಯ ರಚನಾ ವಿನ್ಯಾಸದಲ್ಲಿಯಾಗಲಿ, ಆಲೋಚನ ಕ್ರಮದಲ್ಲಿಯಾಗಲಿ ಸಾಧ್ಯವಿರಲಿಲ್ಲ. ಈ 'ಇಲ್ಲ'ಗಳು 'ಭಾಕಾಮೀ'ಯು ಕನ್ನಡ ಸಾಹಿತ್ಯದ ಜತೆಗೆ ಇರಿಸಿಕೊಂಡಿರುವ ಸಂಬಂಧ ಸಾವಯವ ಮತ್ತು ಜೀವಂತವಲ್ಲ ಎಂಬುದನ್ನೇ ಪರೋಕ್ಷವಾಗಿ ಸೂಚಿಸುತ್ತವೆ.

೬

''ಕಾವ್ಯದ ತಾಯಿಬೇರು ಜೀವನ; ಕಾವ್ಯಮೀಮಾಂಸೆಯ ತಾಯಿಬೇರು ಜೀವನ'' ಎಂಬ ಹೇಳಿಕೆಯೊಂದು 'ಭಾಕಾಮೀ'ಯಲ್ಲಿ ಬರುತ್ತದೆ. ಜೀವನ = ಕಾವ್ಯ = ಕಾವ್ಯಮೀಮಾಂಸೆ ಎಂಬ ಈ ತಾತ್ವಿಕ ಸಮೀಕರಣವು ಉಚಿತವೂ ಪ್ರಬುದ್ಧವೂ ಆಗಿದೆ. ಈ ಸಮೀಕರಣದ ಹಿನ್ನೆಲೆಯಲ್ಲಿ 'ಭಾಕಾಮೀ'ಯಲ್ಲಿರುವ ಜೀವನ ಯಾರದು, ಕಾವ್ಯ ಯಾವುದು ಹಾಗೂ ಕಾವ್ಯತತ್ವ ಯಾವುದು ಎಂಬ ಪ್ರಶ್ನೆ ಕೇಳಿಕೊಳ್ಳ ಬಹುದು. 'ಭಾಕಾಮೀ'ಯ ಹಿಂದಿರುವ ಜೀವನಕ್ರಮವು ಮುಖ್ಯವಾಗಿ ಪ್ರತಿಷ್ಠಿತ ವರ್ಗಗಳದ್ದು. ಅಲ್ಲಿರುವ ಕಾವ್ಯ (ನಾಟಕ)ದ ಕಲ್ಪನೆ ಕೂಡ ಅಭಿಜಾತವಾದುದು. ಹೀಗಾಗಿ ಇಲ್ಲಿ ಕಾವ್ಯ ಮೀಮಾಂಸೆಯೊಳಗಿನ ಲೋಕದೃಷ್ಟಿಯು ಪ್ರಧಾನವಾಗಿ ಸಾಮಾಜಿಕ ಶ್ರೇಣೀಕರಣ, ಪುರುಷಪ್ರಧಾನತೆ, ಊಳಿಗಮಾನ್ಯತೆಗಳಿಗೆ ಪೂರಕ ವಾಗಿದೆ. ಸಮಸ್ಯೆಯೆಂದರೆ ಈ ಲೋಕದೃಷ್ಟಿಯು ತೀ.ನಂ.ಶ್ರೀ.ಯವರ ವಿಶ್ಲೇಷಣ ಭಾಷೆಯಲ್ಲೂ ಮುಂದುವರೆಯುವುದು. ಗುಣೀಭೂತ ವ್ಯಂಗ್ಯದಲ್ಲಿ ವ್ಯಂಗ್ಯಾರ್ಥವಿ ದ್ದರೂ ವಾಚ್ಯಾರ್ಥಕ್ಕೇ ಪ್ರಾಮುಖ್ಯತೆ ಎಂಬ ತತ್ವವನ್ನು ಹೇಳುವಾಗ ಬರುವ 'ಸೇವಕನ ಮದುವೆಗೆ ಬಂದ ಧಣಿ'ಯ ಚಿತ್ರವನ್ನು ಕಾಣಬಹುದು; ಶಾಸ್ತ್ರಸಾಹಿತ್ಯದಲ್ಲಿ ಶಬ್ದದ ಪಾತ್ರವನ್ನು ಚರ್ಚಿಸುತ್ತ 'ಕೊಟ್ಟ ಕೆಲಸ ಮಾಡಿ ಸುಮ್ಮನಾಗುವ ಕೂಲಿಯಾಳು' ಎಂಬ ರೂಪಕ ಕೊಡುವುದನ್ನು ಗಮನಿಸಬಹುದು; ಕಾವ್ಯದಲ್ಲಿ ಪ್ರಧಾನರಸವಿದ್ದಾಗ ಉಳಿದ 'ಅಧೀನ ರಸಗಳು' ''ಮುಖ್ಯ ನದಿಗೆ ಸೇರುವ ಉಪನದಿಗಳಂತೆ; ರಾಜನನ್ನು ಅನುಸ ರಿಸಿ ಸೇವಿಸುವ ಪರಿವಾರದವರಂತೆ ವಿಧೇಯವಾಗಿ ಬರುತ್ತವೆ'' ಎಂಬ ಹೋಲಿಕೆ ಯನ್ನು ನೋಡಬಹುದು; ಔಚಿತ್ಯದ ಚರ್ಚೆಯಲ್ಲಿ ''ಸಾಮಾನ್ಯವಾಗಿ ಪ್ರಭುವಿಗೆ ದೇವ ತೆಗಳ ಮಹಿಮೆ ಆರೋಪಿಸಿದರೆ ಅನುಚಿತವಾಗುತ್ತದೆ. ಉತ್ತಮ ಪ್ರಕೃತಿಯವನಲ್ಲಿ ಅಧಮನಿಗೆ ಯೋಗ್ಯವಾದ ರತಿವರ್ಣನೆಯನ್ನು ಅನ್ವಯಿಸಲಾದೀತೆ ?'' ಎಂಬ ಪ್ರಶ್ನೆ ಯನ್ನಾದರೂ ಗಮನಿಸಬಹುದು. ಈ ಹೇಳಿಕೆ, ಉಪಮೆ, ರೂಪಕ ಮತ್ತು ಪ್ರಶ್ನೆಗಳಲ್ಲಿ ಹೊರಡುತ್ತಿರುವ ಸಾಮಾಜಿಕ ಧ್ವನಿ ಯಾವುದು ? ಒಂದು ನದಿಯು ಇನ್ನೊಂದು ನದಿಗೆ ಸೇರುವುದು ವಿಧೇಯಕ ಹೇಗಾಗುತ್ತದೆ ? ಪ್ರಭು ಮತ್ತು ಪರಿವಾರದ ನಿದರ್ಶ ನದಲ್ಲಿರುವ ವರ್ಗಸಂಬಂಧದ ಧ್ವನಿಯನ್ನು ಸಮ್ಮತಿಸಬಹುದೇ ? ಬಹುಶಃ 'ಭಾಕಾಮೀ'ಯ ಪರಿಕಲ್ಪನಾತ್ಮಕ ವಿನ್ಯಾಸದಲ್ಲಿಯೇ ಇವು ಕಾಡುವ ಪ್ರಶ್ನೆಗಳಲ್ಲ. ಇನ್ನು ರತಿವರ್ಣನೆಯ ಬಗ್ಗೆ ಇಲ್ಲಿ ಎತ್ತಲಾದ ಪ್ರಶ್ನೆಗೆ ಐತ - ಪೀಂಚಲುವಿನ ಸಂಭೋಗ ವರ್ಣನೆಯ ಮೂಲಕ 'ಮಲೆಗಳಲ್ಲಿ ಮದುಮಗಳು' ಕಾದಂಬರಿ ಈಗಾಗಲೆ ಉತ್ತರಿಸಿಯಾಗಿದೆ. ಹೀಗೆ ಆಧುನಿಕ ಕನ್ನಡ ಸಾಹಿತ್ಯದ ಅಧ್ಯಯನ ದೃಷ್ಟಿಯಿಂದ 'ಭಾಕಾಮೀ' ಅನೇಕ ವೈರುಧ್ಯಗಳನ್ನು ಸೃಷ್ಟಿಸಿಕೊಳ್ಳುವ ಶಾಸ್ತ್ರಪಠ್ಯವಾಗಿದೆ.

೭

'ಭಾಕಾಮೀ'ಯಲ್ಲಿರುವ ಈ ವೈರುಧ್ಯಗಳು ಮತ್ತಷ್ಟು ಎದ್ದು ಕಾಣುವುದು ಇಲ್ಲಿನ ದಾರ್ಶನಿಕತೆಯಲ್ಲಿ. ಅನೇಕ ಸಂಸ್ಕೃತ ಕಾವ್ಯಮೀಮಾಂಸಕರು ಮೂಲತಃ ಕವಿ ಹಾಗೂ ದಾರ್ಶನಿಕವಾಗಿ ಅದ್ವೈತಿಗಳು. ಅವರ ಪ್ರಕಾರ ಕವಿಗಳು ನಿಸರ್ಗದ ಅನುಸಂಧಾನ ಮಾಡುವಾಗ ತಾವೂ ಅದರ ಭಾಗವಾಗುತ್ತಾರೆ; ಸಹೃದಯರು ಕಾವ್ಯಾಸ್ವಾದನೆ ಮಾಡುತ್ತ ತಾವೂ ಕವಿಸಮಾನರಾಗುತ್ತಾರೆ; ಕಾವ್ಯಾನಂದವು ಬ್ರಹ್ಮಾನಂದಕ್ಕೆ

ಸಮಾನವಾದ ಕಾರಣ, ಮನುಷ್ಯರು ತಾವೂ ಬ್ರಹ್ಮರಾಗುತ್ತಾರೆ. ಇದು ಅಹಂ ಬ್ರಹ್ಮಾಸ್ಮಿ ಮತ್ತು ತತ್ವಮಸಿ ತತ್ವ. ಇಲ್ಲಿನ ಈ ರೂಪಾಂತರ ತತ್ವವು ಅದ್ವೈತ ದರ್ಶನದ ಬುನಾದಿ. ಇದರ ಮುಂದುವರಿಕೆಯಾಗಿಯೇ ಕವಿ ಪರಿಭಾವನೆಗೆ ಒಳಪಡುವ ಲೋಕದಲ್ಲಿ ವಿಕೃತ, ಜುಗುಪ್ಸಿತ, ನೀಚ ಎಂದು ಕರೆಯಲಾಗುವ ಎಲ್ಲವೂ ರಸಮಯವಾಗುತ್ತದೆ ಎಂದು ಧನಂಜಯನ 'ದಶರೂಪಕ' ಹೇಳುತ್ತದೆ; ಉತ್ತಮ, ಅಧಮ, ಮಧ್ಯಮ ಎಲ್ಲರ ಶ್ರೇಣೀಕೃತ ಸಮಾಜದಲ್ಲಿ ಸಂಭವಿಸುವ ಸೃಷ್ಟಿಕ್ರಿಯೆಯಲ್ಲಿ ಲೇಖಕರ ವರ್ಗ-ವರ್ಣ ಹಿತಾಸಕ್ತಿಗಳು ಸುಪ್ತವಾಗಿ ಬಂದು ಒಳಸೇರುತ್ತವೆ. ತಮ್ಮನ್ನು ಅಪಮಾನಿಸುವ ಸಂಗತಿಗಳು ಕೃತಿಯೊಳಗೆ ಅಡಗಿದ್ದಾಗ ಸಂಬಂಧಪಟ್ಟ ವರ್ಗಗಳು ಅದನ್ನು ಕೇವಲ ಕಲೆಯಾಗಿ ಸ್ವೀಕರಿಸುವುದು ಕಷ್ಟ. ಕಲೆಯ ಸಂವಹನದಲ್ಲಿರುವ ಈ ಸಾಮಾಜಿಕ ಆಯಾಮವನ್ನು 'ಭಾಕಾಮೀ' ಪರಿಗಣಿಸುವುದಿಲ್ಲ. ಇದಕ್ಕೆ ಕಾರಣ, ಅದರೊಳಗಿನ ವರ್ಗಪ್ರಜ್ಞೆ. ಈಗಲೂ ಕೆಲವು ಯಕ್ಷಗಾನ ಪ್ರಸಂಗಗಳಲ್ಲಿ ತಮ್ಮ ಸಮುದಾಯವನ್ನು ಅಪಮಾನಿಸುವ ಅಂಶವಿದೆ ಎಂಬ ಕಾರಣಕ್ಕೆ ಬೇರೆ ಬೇರೆ ಸಮುದಾಯಗಳು ಪ್ರತಿಭಟನೆ ಮಾಡುವ ಘಟನೆಗಳು ಕರಾವಳಿಯಲ್ಲಿ ಜರುಗುತ್ತಿವೆ. 'ಆವರಣ' ಕುರಿತು ಬರುತ್ತಿರುವ ಪ್ರತಿಕ್ರಿಯೆಗಳು ಇಂತಹವೇ ತಾನೇ ?

೮

'ಭಾಕಾಮೀ'ಯು ಸಂಸ್ಕೃತ ಕಾವ್ಯಮೀಮಾಂಸೆಯ ಬಗ್ಗೆ ಕನ್ನಡದಲ್ಲಿರುವ ಆಕರ ಗ್ರಂಥಗಳಲ್ಲೇ ನಿಸ್ಸಂಶಯವಾಗಿ ಮಹತ್ವವಾದುದು. ಅದರೊಳಗಣ ತಿಳಿವಳಿಕೆ ಮತ್ತು ವಿದ್ವತ್ತನ್ನು ನಿರಾಕರಿಸದೆ ಅದರ ಜತೆ ವಿಮರ್ಶಾತ್ಮಕ ಅನುಸಂಧಾನ ಆರಂಭಿಸಬೇಕಿದೆ. ಈ ದ್ವಂದ್ವಾತ್ಮಕ ವಿಧಾನವನ್ನು ತಮ್ಮ ಮುನ್ನುಡಿಯಲ್ಲಿ ಕುವೆಂಪು ಪರೋಕ್ಷವಾಗಿ ಉದ್ಘಾಟಿಸಿದ್ದಾರೆ ಕೂಡ. ಈ ಮುನ್ನುಡಿಯು ಬಿ.ಎಂ.ಶ್ರೀ. ೧೯೧೧ರಲ್ಲಿ ಮಾಡಿದ 'ಕನ್ನಡ ಮಾತು ತಲೆಯೆತ್ತುವ ಬಗೆ' ಎಂಬ ಉಪನ್ಯಾಸದಷ್ಟೇ ಮಹತ್ವದ್ದು. ಶ್ರೀಯವರ ಉಪನ್ಯಾಸದಲ್ಲಿ ಬಂದಂತೆ ಇಲ್ಲಿ ಕೂಡ ಪಾಶ್ಚಿಮಾತ್ಯ ಸಂಪರ್ಕದಿಂದ 'ಹೊಸಸೃಷ್ಟಿ' ಸಂಭವಿಸುವ ಮಾತು ಬರುತ್ತದೆ. ಅಲ್ಲಿಯಂತೆ ಇಲ್ಲೂ 'ಕನ್ನಡ ಕಾಕವ್ಯಮೀಮಾಂಸೆ ತಲೆಯೆತ್ತುವ ಬಗೆ'ಗೆ ಸೂಚನೆಗಳಿವೆ. ಒಂದರ್ಥದಲ್ಲಿ ಈ ಮುನ್ನುಡಿ ಶ್ರೀಯವರ ಚಾರಿತ್ರಿಕ ಉಪನ್ಯಾಸದ ಅರ್ಥಪೂರ್ಣ ವಿಸ್ತರಣೆಯಂತಿದೆ. ಕುವೆಂಪು ಅವರು ಕನ್ನಡ ಕಾವ್ಯಮೀಮಾಂಸೆ ಹಾಗೂ ಸಾಹಿತ್ಯ ವಿಮರ್ಶೆ ಕ್ಷೇತ್ರಗಳ ಕೊರತೆಗಳನ್ನು ಚರ್ಚಿಸುತ್ತ, ಇಲ್ಲಿರುವ ಎರಡು ಅಪಾಯಗಳನ್ನು ಸೂಚಿಸುತ್ತಾರೆ: (೧) ಅಂಧಾನುಕರಣ. ಇದು ಪಶ್ಚಿಮದ ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದ್ದು; (೨) ಅಂಧಾನುಸರಣ. ಇದು ಸಂಸ್ಕೃತ ಕಾವ್ಯಮೀಮಾಂಸೆಗೆ ಸಂಬಂಧಿಸಿದ್ದು. ಅವರ ಪ್ರಕಾರ ಕಾವ್ಯಮೀಮಾಂಸೆಯ ಪ್ರಯೋಗಾಂಗವಾದ ಸಾಹಿತ್ಯ ವಿಮರ್ಶೆಯು 'ಅತ್ಯಂತ ಕೃಶಸ್ಥಿತಿ'ಯಲ್ಲಿದೆ. ಇದನ್ನು ನೀಗಲು ಬೇರೆಬೇರೆ ಶಾಸ್ತ್ರಗಳ ಸಹಯೋಗ ಪಡೆಯಬೇಕಿದೆ. ಕುವೆಂಪು ಈ ಮೂಲಕ ಸೂಕ್ಷ್ಮವಾಗಿ 'ಭಾಕಾಮೀ' ಕನ್ನಡ ಸಾಹಿತ್ಯದ ಅಧ್ಯಯನಗಳ ಮಟ್ಟಿಗೆ ಅಷ್ಟು ಉಪಯುಕ್ತವಲ್ಲ ಎಂದು ಸೂಚಿಸುತ್ತಿದ್ದಾರೆಯೇ ?

ಕನ್ನಡ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ 'ಭಾಕಾಮೀ'ಯು ಈವರೆಗೆ ಸಂಗಾತಿಯಾಗಲು ಸಾಧ್ಯವಾಗಿಲ್ಲ ಎನ್ನುವುದು ಸಾಬೀತಾಗಿರುವ ಸತ್ಯ. 'ಭಾಕಾಮೀ' ಮೂಲಕ ಶರಣರ ವಚನಗಳಿಗೆ, ಹರಿಹರನ ರಗಳೆಗಳಿಗೆ, ಕುಮಾರವ್ಯಾಸನ ಭಾರತಕ್ಕೆ, 'ಒಡಲಾಳ' ಕಾದಂಬರಿಗೆ, 'ಮಲೆಗಳಲ್ಲಿ ಮದುಮಗಳು' ಕೃತಿಗೆ, ಸಿದ್ದಲಿಂಗಯ್ಯನವರ 'ಹೊಲೆ ಮಾದಿಗರ ಹಾಡು'ಗಳಿಗೆ ಯಾವ ಬಗೆಯ ಪ್ರವೇಶ ಸಾಧ್ಯ ? ಹಾಗೆ ಕಂಡರೆ ತಾತ್ವಿಕವಾಗಿ ಈ ಪ್ರಶ್ನೆಯೇ ಅನುಚಿತ. ಯಾಕೆಂದರೆ ಸಾಹಿತ್ಯ ಮೀಮಾಂಸೆಗಳು ಸಾಹಿತ್ಯ ಸೃಷ್ಟಿಗೊಂಡ ಬಳಿಕ ರೂಪುತಳೆಯುತ್ತವೆಯೇ ವಿನಾ, ತಮ್ಮ ನಂತರ ಹುಟ್ಟುವ ಕಾವ್ಯಕ್ಕೆ ಮಾರ್ಗದರ್ಶಿಗಳಾಗಿಯಲ್ಲ. ಹೀಗಾಗಿಯೇ ಸಂಸ್ಕೃತ ಕಾವ್ಯತತ್ವಗಳನ್ನು ಆಧುನಿಕ ಸಾಹಿತ್ಯದ ವಿಮರ್ಶೆಗೆ ಬಳಸಿದ ಕೆಲವರ ಪ್ರಯೋಗಗಳು ಅವುಗಳ ಅನುಪಯುಕ್ತತೆಯನ್ನೇ ತೋರಿಸಿಕೊಟ್ಟವು. ಇದೊಂದು ವಿದ್ವತ್‌ಸಮಸ್ಯೆಯಾದರೆ 'ಭಾಕಾಮೀ'ಯನ್ನು ಕನ್ನಡ ಸಾಹಿತ್ಯ ಕಲಿಕೆಯ ಭಾಗವಾಗಿ ಪಠ್ಯಕ್ರಮಕ್ಕೆ ಸೇರಿಸಿದ್ದು ಒಂದು ಶೈಕ್ಷಣಿಕ ಸಮಸ್ಯೆ. ಪಠ್ಯಕ್ರಮಕ್ಕೆ ಸೇರಿದೊಡನೆ ವಿದ್ವತ್ತಿಗೆ ಒಂದು ಬಗೆಯ ಅಧಿಕೃತತೆ ಪ್ರಾಪ್ತವಾಗುತ್ತದೆ. ಶಿಷ್ಯರು ಹಿಂದಿನ ಆಚಾರ್ಯರು ಮಾಡಿದಂತೆ, ತಮ್ಮ ಗುರುವಿನ ಕೃತಿಗೆ ಭಾಷ್ಯ ಮಾಡಲಾರಂಭಿಸುತ್ತಾರೆ. ಮೂಲತತ್ವಗಳನ್ನು ಹೊಸ ಹೊಸ ನಿದರ್ಶನಗಳ ಮೂಲಕ ತರಗತಿಗಳಲ್ಲಿ ವಿಸ್ತರಣೆ ಮಾಡತೊಡಗುತ್ತಾರೆ. ಅಂದರೆ ಕುವೆಂಪು ಹೇಳುವಂತೆ 'ಅಂಧಾನುಸರಣೆ' ಶುರುವಾಗುತ್ತದೆ. ಬದಲಿಗೆ ಮೂಲಕೃತಿಯ ಜತೆ ತಾತ್ವಿಕ ಭಿನ್ನಮತದ ಮೂಲಕ ಮೀಮಾಂಸೆಯ ಪರಿಕಲ್ಪನೆಯನ್ನು ಸಮಕಾಲೀನ ಅಗತ್ಯಗಳಿಗೆ ತಕ್ಕಂತೆ ಬೆಳೆಸುವ ಹಾಗೂ ಪರ್ಯಾಯವನ್ನು ಶೋಧಿಸುವ ಕೆಲಸ ಕಡಿಮೆಯಾಗುತ್ತದೆ. ವಿದ್ವತ್ ಕೃತಿಯೊಂದು ತರಗತಿಗಳ ಸೀಮಿತ ಜಗತ್ತಿಗೆ ಸಿಲುಕುವುದು ವರವೂ ಹೌದು, ಶಾಪವೂ ಹೌದು. ತೀ.ನಂ.ಶ್ರೀ.ಯವರ ವಿದ್ವತ್ತು ಜಿ.ಎಸ್.[...] ಅವರ 'ಕಾವ್ಯಾರ್ಥ ಚಿಂತನ'ಯಂತಹ ಯತ್ನಗಳಲ್ಲಿ ಕೆಲಮಟ್ಟಿಗೆ ವಿಸ್ತರಣೆ ಕಂಡಿತು. ಇಲ್ಲಿ ತೀ.ನಂ.ಶ್ರೀ.ಯವರ ವಿದ್ವತ್ತಿನ ಜತೆಗೆ ಕುವೆಂಪು ಮುನ್ನುಡಿಯಲ್ಲಿ ಕೊ[...] ಸೂಚನೆ ಪಾಲಿಸುವ ಯತ್ನವೂ ಇದೆ. ಆದರೆ ಅದು ಕೂಡ ಆಧುನಿಕ ಕನ್ನಡ ಸಾಹಿತ್ಯ[...] ಹಾದಿಹೋಕರ ಜತೆ ಬಹುದೂರ ಸಂಗಾತಿಯಾಗಿ ಬರುವುದಿಲ್ಲ. ಅಧಿಕೃ[...] ಪಠ್ಯಕ್ರಮದ ಚೌಕಟ್ಟಿನಲ್ಲಿ ರೂಪುಪಡೆಯುವ ಕೃತಿಗಳ ಯಾವತ್ತೂ ವಿಧಿ ಎಂದರೆ[...] ಅವು ಯಥೇಚ್ಛ ಬಳಕೆಯಾಗುತ್ತವೆ. ಆದರೆ ವಾಗ್ವಾದದಲ್ಲಿ ಬೆಳೆಯುವುದಿ[...] ಹೀಗಾಗಿಯೇ 'ವಿಭಾವಾನುಭಾವ ವ್ಯಭಿಚಾರಿ ಸಂಯೋಗಾತ್ ರಸನಿಷ್ಪತ್ತಿಃ' ಎಂ[...] ಭರತನ ಹೇಳಿಕೆಯು ವಿದ್ಯಾರ್ಥಿಗಳ ಪರೀಕ್ಷೆಯ ಉತ್ತರಗಳಲ್ಲಿ ಬಳಕೆಯಾದಷ್ಟು ಕನ್ನಡದ ಕಾವ್ಯ ಮತ್ತು ಚಿಂತನೆಯಲ್ಲಿ ಬಳಕೆಯಾಗಲಿಲ್ಲ; ಡಿ. ಆರ್. ನಾಗರಾಜ[...] 'ಅಲ್ಲಮಪ್ರಭು ಮತ್ತು ಶೈವಪ್ರತಿಭೆ' ಕೃತಿಯ 'ಹೊಸ ಕಾವ್ಯ ಮೀಮಾಂಸೆಯೆಡೆಗೆ' ಎಂ[...] ಮಹತ್ವದ ಅಧ್ಯಾಯದಲ್ಲಿ ತೀ.ನಂ.ಶ್ರೀ.ಯವರ 'ಭಾಕಾಮೀ'ಯು ಉಲ್ಲೇಖಗೊಂಡಿ[...]

ಆದರೆ 'ಭಾಕಾಮೀ'ಯಲ್ಲಿರುವ ಲಕ್ಷ್ಯಪದ್ಯಗಳ ವಿಶ್ಲೇಷಣೆ ಕನ್ನಡ ಸಾಹಿತ್ಯ[...] ಅಧ್ಯಾಪನದಲ್ಲಿ ಬಳಕೆಯಾಯಿತು. ಇದು ಕನ್ನಡ ಕಾವ್ಯದ ಓದಿನ ಸೂಕ್ಷ್ಮತೆಯನ್ನು[...] ಕನ್ನಡ ಕಾವ್ಯವಿಮರ್ಶೆಯ ಹಾದಿಯನ್ನೂ ರೂಪಿಸಿತು. ಇದನ್ನು ಕನ್ನಡ ವಿದ್ವ[...] ಮನಸಾರೆ ಒಪ್ಪಿಕೊಂಡಿದೆ. ಇಂತಹ ಉಪಯುಕ್ತತೆ ದೊರಕಲು ಕಾರಣ, ತೀ.ನಂ.ಶ್ರೀ[...] ಸೂತ್ರಗಳನ್ನು ದಾಟಿಹೋಗಿ ಸ್ವತಂತ್ರವಾಗಿ ಚಿಂತನೆ ಮಾಡಿರುವುದು ಮತ್ತು ಪಶ್ಚಿಮ[...] ಆಧುನಿಕ ಸಾಹಿತ್ಯ ಚಿಂತನೆಯಿಂದ ತಮ್ಮ ಹತ್ಯಾರಗಳನ್ನು ಮಸೆದುಕೊಂಡಿರುವುದು[...] ವಾಸ್ತವಿಕವಾಗಿ ಇರುವ ಸಾಹಿತ್ಯದ ಅಧ್ಯಯನದ ಮೂಲಕ ವರ್ತಮಾನ[...] ಕಾವ್ಯಮೀಮಾಂಸೆ ಹುಟ್ಟುತ್ತದೆಯೇ ಹೊರತು, ಹಳೆಯ ಸೂತ್ರಗಳನ್ನು ಹೊ[...] ಸಾಹಿತ್ಯದ ನಿದರ್ಶನ ಕೊಟ್ಟು ವಿಸ್ತರಿಸುವುದರಿಂದಲ್ಲ. ಕನ್ನಡ ಕಾವ್ಯಮೀಮಾಂಸೆಯ[...] ಕನ್ನಡ ಅಲಂಕಾರ ಗ್ರಂಥಗಳ ಭಿನ್ನಮತಗಳ ಒಳಗೆ, ಪ್ರಾಚೀನ ಲೇಖಕರ ಪೀಠಿಕಾ[...] ಭಾಗ ಹಾಗೂ ಮಂಗಳಾಚರಣೆಯ ಪದ್ಯಗಳ ಹೇಳಿಕೆಗಳಲ್ಲಿ ಹಾಗೂ ಹೊಸಗನ್ನಡ[...] ವಿವಿಧ ಪ್ರಕಾರಗಳಲ್ಲಿ ಮೂಡಿರುವ ಕೃತಿಗಳಲ್ಲಿ ಅಡಗಿದೆ. ಇದರರಿವು ಸೂಕ್ಷ್ಮಮ[...] ಯಾದ ತೀ.ನಂ.ಶ್ರೀ. ಅವರಿಗೆ ತಿಳಿದಿತ್ತು. ಅದು ''ಬೇರೊಂದು ಪುಸ್ತಕಕ್ಕೆ[...] ವಸ್ತುವಾಗುತ್ತದೆ ಎಂದವರು ಸೂಚಿಸುತ್ತಾರೆ. ಅವರ ಈ ಸೂಚನೆಯನ್ನು ಅನುಸರಿಸಿ[...] ಕನ್ನಡ ಕೃತಿಗಳಲ್ಲಿ ಅಡಗಿರುವ ಮೀಮಾಂಸೆಯನ್ನು ಹೊರತೆಗೆದು ಕಟ್ಟಿಕೊಳ್ಳುವ ಕೆಲ[...] ಶುರುವಾಗಬೇಕಿದೆ. ಇಲ್ಲದಿದ್ದರೆ 'ಆಚಾರ್ಯ' ಕೃತಿಗೆ ಭಕ್ತಿಯಿಂದ ಹೆಬ್ಬೆರಳು ಕೊಟ[...] ಏಕಲವ್ಯನಂತೆ ಅಂಗವಿಕಲ ಆಗಬೇಕಾಗುತ್ತದೆ. ವಿದ್ವತ್ತು ಆರಾಧನೆಗೆ ಒಳಗಾದ[...] ಮೃತವಾಗುತ್ತದೆ. ವಾಗ್ವಾದಕ್ಕೆ ಒಳಗಾದರೆ ಜೀವಂತವಾಗುತ್ತದೆ. ತೀ.ನಂ.ಶ್ರೀ.ಯವ[...] ಜನ್ಮಶತಮಾನೋತ್ಸವದ ಈ ಸಂದರ್ಭದಲ್ಲಿ ಅವರ ವಿದ್ವತ್ತಿನಾದರ ಪೂರ್ವ[...] ಚರ್ಚೆಯಾಗಬೇಕಿದೆ, 'ಅಂಧಾನುಸರಣೆ'ಯಲ್ಲ. ಅದರೊಳಗಿನ ತಿಳಿವಳಿಕೆಯನ್ನ[...] ಪಡೆದುಕೊಳ್ಳಬೇಕಿದೆ, ದೃಷ್ಟಿಕೋನವನ್ನಲ್ಲ.

**ಅಭ್ಯಾಸಸೂಚಿ**


ಕುವೆಂಪು, 'ಮುನ್ನುಡಿ', ಭಾರತೀಯ ಕಾವ್ಯಮೀಮಾಂಸೆ, ೧೯೫೩

ಶಿವರುದ್ರಪ್ಪ ಜಿ.ಎಸ್., 'ಭಾರತೀಯ ಕಾವ್ಯಮೀಮಾಂಸೆ : ಒಂದು ಆಚಾರ್ಯಕೃತಿ[...] ಶ್ರೀಕಂಠತೀರ್ಥ, ೧೯೭೬

ನಾರಾಯಣ ಕೆ.ವಿ., 'ತೀ.ನಂ.ಶ್ರೀ. ಸಾಹಿತ್ಯ ಚಿಂತನೆಗಳು', ಬೇರು ಕಾಂಡ ಚಿಗುರು[...] ೧೯೯೭

ಕೀರ್ತಿನಾಥ ಕುರ್ತಕೋಟಿ, 'ಭಾರತೀಯ ಕಾವ್ಯಮೀಮಾಂಸೆ', ನೂರುಮ[...] ನೂರುಸ್ವರ ೧೯೯೮

ರಾಮಚಂದ್ರನ್ ಸಿ.ಎನ್., ತೀನಂಶ್ರೀ ಮತ್ತು ಭಾರತೀಯ ಕಾವ್ಯಮೀಮಾಂಸೆ ಎಂ[...] ರಚನೆ, ರಕ್ತಿ-ರೂಪಣೆ, ೨೦೦೭

ಷ. ಶೆಟ್ಟರ್, 'ತೊಲ್ಕಾಪ್ಪಿಯನಾರ್ ಮತ್ತು ಮಾರ್ಗಕಾರನ ಸಂವೇದನೆಯ ಸ್ವರೂಪ[...] ಶಂಗಂ ತಮಿಳಗಂ ಮತ್ತು ಕನ್ನಡ ನಾಡು-ನುಡಿ, ೨೦೦೭


(೩೦-೩-೨೦೦೭ರಂದು ಕೇಂದ್ರ ಸಾಹಿತ್ಯ ಅಕಾದೆಮಿಯ ವತಿಯಿಂದ ನಡೆ[...] ತೀ.ನಂ.ಶ್ರೀ. ಜನ್ಮಶತಮಾನೋತ್ಸವ ಕಾರ್ಯಕ್ರಮದಲ್ಲಿ ಮಂಡಿಸಿದ ಪ್ರಬಂಧ)


ಡಾ|| ರಹಮತ್ ತರೀಕೆರೆ

ಎಂ. ಪಿ. ಪ್ರಕಾಶ ನಗರ, ಹೊಸಪೇಟೆ-೫೮೩೨೦೧, ಬಳ್ಳಾರಿ ಜಿಲ್ಲೆ

# ವಿಕಾಸ್ ಕ್ಯಾಶ್ ಸರ್ಟಿಫಿಕೇಟ್

ಬಡ್ಡಿ ಇಲ್ಲಿ ಚಕ್ರಬಡ್ಡಿ

## ನಿಮ್ಮ ಆಶಯಗಳನ್ನು ಪೂರೈಸಬಲ್ಲೆವು










ಅದು ಬೇಕು, ಇದು ಬೇಕು, ಮತ್ತೊಂದು ಆಗಲೇಬೇಕು; ಆಸೆಗಳು ನೂರು. ಈ ಎಲ್ಲ ಆಸೆ ಆಶಯಗಳ ಪೂರೈಕೆಗೆ ಹಣವೂ ಬೇಕು. ಸಿಂಡಿಕೇಟ್‌ಬ್ಯಾಂಕಿನ **ವಿಕಾಸ್ ಕ್ಯಾಶ್ ಸರ್ಟಿಫಿಕೇಟ್**‌ನಲ್ಲಿ ಹಣ ಹೂಡಿದರೆ, ಅದು ತನ್ನೊಳಗೇ ಬಡ್ಡಿಗೆ ಬಡ್ಡಿಯನ್ನು ಕೂಡಿಸಿಕೊಂಡು ಬಲು ಬೇಗ ಬಹು ದೊಡ್ಡ ಮೊತ್ತವಾಗಿ ಬೆಳೆಯುತ್ತದೆ. ಮತ್ತೇನು ಬೇಕು ?




**ಸಿಂಡಿಕೇಟ್‌ಬ್ಯಾಂಕ್**

ನಿಮ್ಮ ವಿಶ್ವಸನೀಯ ಮತ್ತು ಮೈತ್ರಿಪೂರ್ಣ ವಿತ್ತೀಯ ಬಾಗೀದಾರ

www.syndicatebank.in

Toll Free Voice Mail No. : 1800 425 66 55

# ಉತ್ತಮ ಮಟ್ಟದ ಶೈಕ್ಷಣಿಕ ಅಗತ್ಯತೆಗಳಿಗಾಗಿ ಅಲ್-ಅಮೀನ್‌ಗೆ ಭೇಟಿ ನೀಡಿ




## ಅಲ್-ಅಮೀನ್ ಶಿಕ್ಷಣ ಸಂಸ್ಥೆ

ಹೊಸೂರು ರಸ್ತೆ (ಲಾಲ್‌ಬಾಗ್ ಮುಖ್ಯದ್ವಾರದ ಎದುರು), ಬೆಂಗಳೂರು - 560027

❍ ಶಿಕ್ಷಣ ಕ್ಷೇತ್ರದಲ್ಲಿ 40 ವರ್ಷಗಳಿಂದಲೂ ಅದ್ವಿತೀಯ ಸೇವೆ ಸಲ್ಲಿಸುತ್ತಿರುವ ಅಲ್-ಅಮೀನ್ ಸಂಸ್ಥೆಯು ಭಾರತದ ಪ್ರಮುಖ ಶೈಕ್ಷಣಿಕ ಸಂಸ್ಥೆಗಳಲ್ಲಿ ಒಂದಾಗಿದೆ ❍ ಅನುಭವೀ ಅಧ್ಯಾಪಕ ವರ್ಗ ❍ ಸುಸಜ್ಜಿತ ಗ್ರಂಥಾಲಯಗಳು ❍ ಹವಾನಿಯಂತ್ರಿತ ವಿಚಾರಗೋಷ್ಠಿ ಸಭಾಂಗಣಗಳು ❍ ಅತ್ಯಾಧುನಿಕ ಪ್ರಯೋಗಶಾಲೆಗಳು ❍ 24 ಗಂಟೆಗಳ ಕಾಲ ಅಂತರ್ಜಾಲ (ಇಂಟರ್ನೆಟ್) ಸೌಲಭ್ಯ ❍ ಓದಿನ ನಂತರ ಉದ್ಯೋಗಾವಕಾಶಗಳಿಗಾಗಿ ಆಡಳಿತ ಮಂಡಳಿಯವರ ಸಂಘಟಿತ ಸಲಹಾ ಕೇಂದ್ರಗಳ ನೆರವು

ಸಮಾಜದ ಎಲ್ಲ ಜನ ವಿಭಾಗದವರಿಗೂ ಮುಕ್ತ ಅವಕಾಶವಿದೆ. ಅಲ್-ಅಮೀನ್‌ನ ಎಲ್ಲ ಸಂಸ್ಥೆಗಳಲ್ಲೂ ಬಾಲಕರು ಹಾಗೂ ಬಾಲಕಿಯರೂ ಶಿಕ್ಷಣ ಕೈಗೊಳ್ಳಬಹುದಾಗಿದೆ.

**1. ಅಲ್-ಅಮೀನ್ ಕಲೆ, ವಿಜ್ಞಾನ ಮತ್ತು ವಾಣಿಜ್ಯ ಕಾಲೇಜು**

ಅಂತರ್ಜಾಲ ತಂತ್ರಜ್ಞಾನ, ಬಯೋ-ಇನ್‌ಫರ್ಮಾಟಿಕ್ಸ್, ಎಲೆಕ್ಟ್ರಾನಿಕ್ಸ್, ಟ್ಯಾಲಿ (ವಾಣಿಜ್ಯ ವಿದ್ಯಾರ್ಥಿಗಳಿಗೆ)
ಬಿ.ಎ. - ಹೆಚ್.ಇ.ಎಸ್., ಎಚ್.ಇ.ಯು, ಎಚ್.ಇ.ಪಿ, ಜೆ.ಪಿ.ಎಸ್.
ಬಿ.ಎಸ್ಸಿ- ಸಿ.ಬಿ.ಜ಼ಡ್., ಸಿ.ಎಮ್.ಜ಼ಡ್., ಬಿ.ಬಿ.ಬಿ., ಪಿ.ಸಿ.ಎಮ್., ಪಿ.ಎಮ್.ಸಿ., ಪಿ.ಎಮ್.ಇ., ಎಮ್.ಇ.ಸಿ.
ಬಿ.ಕಾಂ. (ಬೆಂಗಳೂರು ವಿಶ್ವವಿದ್ಯಾಲಯ ನಿಗದಿಪಡಿಸಿರುವ ಎಲ್ಲ ಕಡ್ಡಾಯ ಪತ್ರ ವಿಷಯಗಳು ಲಭ್ಯವಿವೆ)
ಎಂ.ಎಸ್ಸಿ - ಮೈಕ್ರೊಬಯಾಲಜಿ, ಬಯೋಟೆಕ್ನಾಲಜಿ
ಕನ್ನಡ ಸರ್ಟಿಫಿಕೇಟ್ ಕೋರ್ಸ್ (ಬೆಂಗಳೂರು ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ)

**2. ಅಲ್-ಅಮೀನ್ ಮಾಹಿತಿ ಅಧ್ಯಯನ ಸಂಸ್ಥೆ**

ಬಿ.ಸಿ.ಎ. (ಕರ್ನಾಟಕ ಸರ್ಕಾರ ಮತ್ತು ಬೆಂಗಳೂರು ವಿ.ವಿ.ದ ಮಾನ್ಯತೆ ಪಡೆದಿದೆ)
ಎಂ.ಸಿ.ಎ. (ಎ.ಐ.ಸಿ.ಟಿ.ಇ. ಮತ್ತು ಬೆಂಗಳೂರು ವಿ.ವಿ.ದ ಮಾನ್ಯತೆ ಪಡೆದಿದೆ)

**3. ಅಲ್-ಅಮೀನ್ ಫಾರ್ಮಸಿ ಕಾಲೇಜು**

ಡಿ.ಫಾರ್ಮ (ಡಿಪ್ಲೋಮ ಇನ್ ಫಾರ್ಮಸಿ - 2 ವರ್ಷ), ಬಿ.ಫಾರ್ಮ (ಬ್ಯಾಚೆಲರ್ ಇನ್ ಫಾರ್ಮಸಿ -4 ವರ್ಷ)
ಎಮ್.ಫಾರ್ಮ (ಮಾಸ್ಟರ್ ಇನ್ ಫಾರ್ಮಸಿ - 2 ವರ್ಷ)
ಅ) ಫಾರ್ಮಸ್ಯೂಟಿಕ್ಸ್, ಆ) ಫಾರ್ಮಕೆಮಿಸ್ಟ್ರಿ, ಇ) ಫಾರ್ಮಕಾಲಜಿ, ಈ) ಫಾರ್ಮಕಾಗ್ನೊಸಿ, ಉ) ಕ್ವಾಲಿಟಿ ಅಸ್ಯೂರೆನ್ಸ್, ಊ) ಫಾರ್ಮಸ್ಯೂಟಿಕಲ್ ಮಾರ್ಕೆಟಿಂಗ್ ಮತ್ತು ಮ್ಯಾನೇಜ್‌ಮೆಂಟ್, ಋ) ಫಾರ್ಮಸಿ ಪ್ರಾಕ್ಟೀಸ್
ಪಿಎಚ್.ಡಿ.

**4. ಅಲ್-ಅಮೀನ್ ಶಿಕ್ಷಣ ಕಾಲೇಜು**

ಬಿ.ಎಡ್., ಬ್ಯಾಚುಲರ್ ಆಫ್ ಎಜ್ಯುಕೇಷನ್

**5. ಅಲ್-ಅಮೀನ್ ಕಾನೂನು ಕಾಲೇಜು**

ಎಲ್‌ಎಲ್.ಬಿ. (3 ವರ್ಷ); ಎಲ್‌ಎಲ್.ಬಿ. (5 ವರ್ಷ)

**6. ಅಲ್-ಅಮೀನ್ ಮ್ಯಾನೇಜ್‌ಮೆಂಟ್ ಅಧ್ಯಯನ ಸಂಸ್ಥೆ**

(ಅ) ಬಿ.ಬಿ.ಎಂ. - ಬ್ಯಾಚುಲರ್ ಆಫ್ ಬ್ಯುಸಿನೆಸ್ ಮ್ಯಾನೇಜ್‌ಮೆಂಟ್ (ಸ್ಪೆಷಲೈಸೇಷನ್ಸ್ -ಮಾರ್ಕೆಟಿಂಗ್/ಫೈನಾನ್ಸ್/ಅಂತರರಾಷ್ಟ್ರೀಯ ವ್ಯವಹಾರ)
(ಆ) ಎಂ.ಬಿ.ಎ. - ಮಾಸ್ಟರ್ ಆಫ್ ಬ್ಯುಸಿನೆಸ್ ಅಡ್ಮಿನಿಸ್ಟ್ರೇಷನ್ಸ್ (ಸ್ಪೆಷಲೈಸೇಷನ್ಸ್ - ಮಾರ್ಕೆಟಿಂಗ್/ಎಚ್.ಆರ್.ಎಂ./ಫೈನಾನ್ಸ್/ಸಿಸ್ಟಮ್ಸ್/ಪ್ರೊಡಕ್ಷನ್)
ಕಮ್ಯುನಿಕೇಷನ್ ಸ್ಕಿಲ್ ಮತ್ತು ಪರ್ಸನಾಲಿಟಿ ಡೆವಲಪ್‌ಮೆಂಟ್, ಆ್ಯಟಿಟ್ಯೂಡ್ಸ್, ಕೌನ್ಸೆಲಿಂಗ್ ಇತ್ಯಾದಿ.

**7. ಅಲ್-ಅಮೀನ್ ಪದವಿಪೂರ್ವ ಕಾಲೇಜು**

ವಿಜ್ಞಾನ - ಪಿ.ಸಿ.ಎಂ.ಬಿ., ಪಿ.ಸಿ.ಎಂ.ಸಿ. ಮತ್ತು ಪಿ.ಸಿ.ಎಂ.ಇ.;
ವಾಣಿಜ್ಯ - ಎಚ್.ಇ.ಬಿ.ಎ., ಬಿ.ಎ.ಎಂ.ಎಸ್., ಬಿ.ಎ.ಎಸ್.ಇ.; ಕಲೆ - ಎಚ್.ಇ.ಪಿ.ಎಸ್.

**8. ಅಲ್-ಅಮೀನ್ ಪ್ರಾಥಮಿಕ ಮತ್ತು ಪ್ರೌಢಶಾಲೆ**

ನಂ. 69, ಅಲ್-ಅಮೀನ್ ಟವರ್ ಹಿಂಭಾಗ, ಹೊಸೂರು ರಸ್ತೆ, ಬೆಂಗಳೂರು - 560 027.
ಎಲ್.ಕೆ.ಜಿ.ಯಿಂದ 10ನೇ ತರಗತಿಯವರೆಗೆ. (ರಾಜ್ಯ ಸರ್ಕಾರ ನಿಗದಿಪಡಿಸಿದ ಪಠ್ಯಕ್ರಮ. ಶಿಕ್ಷಣ ಮಾಧ್ಯಮ : ಇಂಗ್ಲಿಷ್)

**ವಿವರಗಳಿಗೆ ಸಂಪರ್ಕಿಸಿ/ಪ್ರಾಂಶುಪಾ**

| | |
|---|---|
| 1 | ದೂರವಾಣಿ : 080 - 2222240 Extn : 713/720 ಟೆಲಿ ಫ್ಯಾಕ್ : 080 - 2224656 www.alameen.edu/asc e-mail : alameenasc@gmail.com |
| 2 | ದೂರವಾಣಿ : 080 - 22222402 Extn : 713/720 ಟೆಲಿ ಫ್ಯಾಕ್ : 080 - 2224656 www.alameen.edu/asc |
| 3 | ದೂರವಾಣಿ : 080 - 2223461 ಟೆಲಿ ಫ್ಯಾಕ್ಸ್ : 080 - 2222583 e-mail : info@alameenpharmacy.edu Homepage: www.alameenpharmacy.edu |
| 4 | ದೂರವಾಣಿ : 080 - 22222402 22235626/22278468 22123430. Extn: 715/74 e-mail : alameenbed@rediffmail.co Website : www.AlAmeen.edu/B.ed |
| 5 | ದೂರವಾಣಿ : 22222402/2223 22278468/22123430 Extn : 743 (O), 716 (P) ಟೆಲಿ ಫ್ಯಾಕ್ : 080 - 2224656 www.alameen.edu/asc |
| 6 | ದೂರವಾಣಿ : 22235626, 2222 22123431, 32404819 Extn : 718, 717 ಟೆಲಿ ಫ್ಯಾಕ್ಸ್ : 080 - 2227923 e-mail : MBA : mba@alameen.co. BBM : bbm@alameen.co. website : www.alameen.co |
| 7 | ದೂರವಾಣಿ : 22109479 website: www.alameen.edu/asc. |
| 8 | ದೂರವಾಣಿ : 22234860 |

# ಮುಂಬೈ ಷೇರುಪೇಟೆಯ ಏರಿಳಿತಗಳು
## ಕಾರಣ ಮತ್ತು ಪರಿಣಾಮಗಳು

ಡಾ|| ಕೆ. ಎಸ್.ಕೃಷ್ಣಸ್ವಾಮಿ

ಷೇರುಗಳ ಬೆಲೆ ವಿಪರೀತವಾಗಿ ಬೆಳೆಯಲು ಅನೇಕ ಕಾರಣಗಳಿವೆ. ಅವುಗಳಲ್ಲಿ ಕೆಲವು ರಾಜಕೀಯ, ಹಲವು ಆರ್ಥಿಕ, ಇನ್ನುಳಿದವು ಇಂತಹ ವ್ಯಾಪಾರಗಳಿಗೆ ಸ್ವಾಭಾವಿಕವಾದ ಅನಿಶ್ಚಿತತೆಯಿಂದ (uncertainty), ಜೊತೆಗೆ ದಳ್ಳಾಳಿಗಳ ಕಾರುಭಾರುಗಳಲ್ಲಿ ಪಾರದರ್ಶಕತೆ ಇಲ್ಲದೇ ಇರುವುದರಿಂದ. ರಾಜಕೀಯವಾಗಿ, ಕಾಂಗ್ರೆಸ್ ನೇತೃತ್ವದ ಸಂಯುಕ್ತ ಪ್ರಗತಿಪರ ಒಕ್ಕೂಟ (ಯು.ಪಿ.ಎ.) ಸರ್ಕಾರ ಬಂದ ನಂತರ ಸರ್ಕಾರದ ಆರ್ಥಿಕ ನೀತಿಗಳು ಮಾರುಕಟ್ಟೆಗಳ ಪರವಾಗುವುದೆಂಬ ನಿರೀಕ್ಷಣೆಯಿಂದ ಪ್ರಧಾನಿಯಾಗಿ ಡಾ|| ಮನಮೋಹನ ಸಿಂಗ್‌ರವರು ಮತ್ತು ವಿತ್ತ ಮಂತ್ರಿಯಾಗಿ ಶ್ರೀ ಚಿದಂಬರಂರವರು ಬಂದ ಮೇಲೆ ಮಾರುಕಟ್ಟೆಗಳ ಮೇಲಿದ್ದ ಕಟ್ಟುನಿಟ್ಟುಗಳೆಲ್ಲಾ ಬೇಗ ಸಡಿಲವಾಗುವುವೆಂಬ ನಂಬಿಕೆ ಖಾಸಗಿ ವಲಯಗಳಲ್ಲಿ ಜೋರಾಗಿತ್ತು. ಅಂತೆಯೇ ಸರ್ಕಾರದ ಹಣಕಾಸು ಮತ್ತು ತೆರಿಗೆ ಕ್ಷೇತ್ರಗಳಲ್ಲಿ ಸಾಕಷ್ಟು ಬದಲಾವಣೆಗಳಾದುವು. ಖಾಸಗಿ ಉದ್ಯಮಗಳಿಗೆ ಅನುಕೂಲವಾಗುವಂತೆ ಅನೇಕ ಕಾರ್ಯಕ್ರಮಗಳು ಜಾರಿಗೆ ಬಂದುದರಿಂದ ಕೈಗಾರಿಕಾ ಕ್ಷೇತ್ರ ಮತ್ತು ಸೇವಾ ಕ್ಷೇತ್ರಗಳ ಉತ್ಪನ್ನ ವರ್ಧಿಸಿ ರಾಷ್ಟ್ರದ ಸಮಗ್ರ ಉತ್ಪನ್ನ ಶೇಕಡ ೯ಕ್ಕಿಂತ ಹೆಚ್ಚಾಗಿ ಬೆಳೆಯುವಂತಾಯಿತು.

ದೇಶದ ಅನೇಕ ಪಟ್ಟಣಗಳಲ್ಲಿ ಷೇರುಗಳು ಮತ್ತು ಅವುಗಳ ಆಧಾರದ ಮೇಲೆ ನಿರ್ಮಿಸಿರುವ ಪತ್ರಗಳ ವ್ಯಾಪಾರ ನಡೆಯುತ್ತಿದ್ದರೂ ಭಾರತದಲ್ಲಿ ಮುಂಬಯಿ ಷೇರು ಪೇಟೆಯ ಸೂಚ್ಯಂಕಗಳು ಹಣಕಾಸು ವ್ಯವಹಾರಗಳಿಗೆ ಬಹುಮುಖ್ಯ. ಇತರ ಷೇರು ಪೇಟೆಗಳಿಗಿಂತ ಮುಂಬಯಿನ ಷೇರು ದಳ್ಳಾಳಿಗಳು ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಆರ್ಥಿಕ ಪರಿಸ್ಥಿತಿಗಳಲ್ಲಾಗುವ ಬದಲಾವಣೆಗಳಿಗೆ ಬಹುಬೇಗ ಸ್ಪಂದಿಸುತ್ತಾರೆ. ಜಪಾನ್, ಹಾಂಗ್‌ಕಾಂಗ್‌ಗಳ ಮಾರುಕಟ್ಟೆಗಳಿಂದ ಹಿಡಿದು ಯೂರೋಪ್, ಅಮೆರಿಕಾ ದೇಶಗಳ ಹಣಕಾಸು ಸ್ಥಿತಿಗಳನ್ನೂ, ಅಲ್ಲಿಯ ಆರ್ಥಿಕ ನಿರೀಕ್ಷಣೆಗಳನ್ನೂ ಪರಿಶೀಲಿಸಿ ತಮ್ಮ ವ್ಯವಹಾರಗಳನ್ನು ನಿರ್ಧರಿಸುತ್ತಾರೆ. ಅದಕ್ಕೆ ಅನುಗುಣವಾಗಿ ಮಿಕ್ಕ ಪಟ್ಟಣಗಳ ವ್ಯಾಪಾರಿಗಳು ತಮ್ಮ ಕೊಡುಕೊಳ್ಳುವಿಕೆಗಳನ್ನು ತೀರ್ಮಾನಿಸುತ್ತಾರೆ. ಹಾಗಾಗಿ ಷೇರು ಪೇಟೆಗಳ ವಿದ್ಯಮಾನಗಳನ್ನು ಪರಿಶೀಲಿಸುವಾಗ ಮುಂಬಯಿ ಷೇರು ಪೇಟೆಯ ವ್ಯತ್ಯಾಸಗಳನ್ನು ಗಮನಿಸುವುದು ಅತ್ಯವಶ್ಯಕ.

ಮುಂಬಯಿ ಷೇರು ಪೇಟೆಯ ಸೂಕ್ಷ್ಮಸೂಚ್ಯಂಕ (BSE Sensex) ೨೦೦೪ರ ಮಾರ್ಚಿ ಕೊನೆಯವರೆಗೆ ೩,೫೦೦ ಕೂಡ ತಲುಪಿರಲಿಲ್ಲ. ಇಲ್ಲಿಂದೀಚೆಗೆ ಅದರ ಬೆಳವಣಿಗೆ ಎಷ್ಟು ತೀವ್ರವಾಗಿದೆಯೆಂದರೆ ೨೦೦೭ರ ಅಕ್ಟೋಬರ್ ಕೊನೆಯ ವೇಳೆಗೆ ೧೯,೩೮೭ಕ್ಕೆ ಏರಿತು. ಅದರಲ್ಲೂ ೨೦೦೬ರ ಮಾರ್ಚಿಯಿಂದೀಚೆಗೆ ಸೂಚ್ಯಂಕದ ಹೆಚ್ಚಳ ಆತಂಕಪಡಿಸುವಂತಾಗಿದೆ. ಸುಮಾರು ೬೨೦೦ರ ಹತ್ತಿರದಿಂದ ಕಳೆದ ಇಪ್ಪತ್ತು ತಿಂಗಳಲ್ಲಿ ಮೂರು ಪಟ್ಟಿನಷ್ಟು ಏರಿಕೆಯಾಗಿದೆ. ಹಾಗೆಯೇ ರಾಷ್ಟ್ರೀಯ ಷೇರು ಮಾರುಕಟ್ಟೆಯ (National Stock Exchange) ಸೂಕ್ಷ್ಮ ಸೂಚ್ಯಂಕವೂ ಮಾರ್ಚಿ ೨೦೦೬ರಿಂದ ೨೦೦೭ರ ಅಕ್ಟೋಬರ್ ವೇಳೆಗೆ ೩,೩೩೬ರಿಂದ ೬೦೧೧ರವರೆಗೆ ಹೆಚ್ಚಾಗಿತ್ತು. ಅಂದರೆ ಅದರ ಬೆಳವಣಿಗೆ ಸುಮಾರು ಶೇಕಡ ೧೧೦ರಷ್ಟು. ಎರಡು ಷೇರು ಪೇಟೆಗಳಲ್ಲೂ ಈ ಮಧ್ಯಂತರದಲ್ಲಿ ವಿಪರೀತ ಏರಿಳಿತಗಳು ಉಂಟಾಗಿದ್ದವು. ದಿನದಿಂದ ದಿನಕ್ಕಲ್ಲದೆ ಸೂಚ್ಯಂಕಗಳು ಗಂಟೆಗಂಟೆಗೆ ಹೆಚ್ಚು ಕಡಿಮೆಯಾಗುತ್ತಿದ್ದವು. ಇಂತಹ ವ್ಯತ್ಯಾಸಗಳಿಂದ ಮಾರುಕಟ್ಟೆಯ ವ್ಯಾಪಾರದಲ್ಲಿ ನಿರತರಾದ ದಳ್ಳಾಳಿಗಳು, ದೇಶೀಯ ಸಂಸ್ಥೆಗಳು ಮತ್ತು ಅಂತರರಾಷ್ಟ್ರೀಯ ಹೂಡಿಕೆ ಸಂಸ್ಥೆಗಳು (Foreign Institutional Investors or FII's) ಲಾಭ ಪಡೆದುಕೊಂಡರೇ ಹೊರತು ಸಾಮಾನ್ಯ, ಸಣ್ಣಪುಟ್ಟ ಹೂಡಿಕೆದಾರರಿಗೇನೂ ಪ್ರಯೋಜನವಾಗಿಲ್ಲ. ಅವರ ಷೇರುಗಳ ಬೆಲೆ ಹೆಚ್ಚಿರಬಹುದು ; ಇರುವ ಷೇರುಗಳನ್ನು ಮಾರಿ ಮೊದಲಿಗಿಂತ ಹೆಚ್ಚು ಹಣ ವಾಪಸು ಪಡೆಯಬಹುದು. ಆದರೆ ಬದಲಾಗಿ ಬೇರೆ ಷೇರುಗಳನ್ನು ಕೊಳ್ಳಲು ಅವಕಾಶವಾಗಲಿ, ಅನುಕೂಲವಾಗಲಿ ದೊರಕುವುದು ಅಪರೂಪ. ಅಲ್ಲದೆ ಸೂಚ್ಯಂಕಗಳು ಈ ಮಟ್ಟ ತಲುಪಿರುವಾಗ ಅವುಗಳು ಕುಸಿಯುವ ಸಂಭವವೇ ಹೆಚ್ಚು. ಹೀಗಾಗಿ



ಸಾಧಾರಣ ಹೂಡಿಕೆದಾರರು ಯಾವ ತರಹ ನಿರ್ಧಾರ ತೆಗೆದುಕೊಳ್ಳಬೇಕೆಂಬುದು ತಿಳಿಯದೆ ಪೇಚಾಡುವಂತಾಗಿದೆ. ಮುಂಬಯಿಯಂತೆ ಇತರ ಪಟ್ಟಣಗಳ ಷೇರು ಮಾರುಕಟ್ಟೆಗಳಲ್ಲೂ ದೈನಂದಿನ ಏರುಪೇರುಗಳು ಹೆಚ್ಚಾಗಿರುವುದರಿಂದ ದೇಶದ ಹೂಡಿಕೆದಾರರೆಲ್ಲಾ ತೊಳಲುವಂತಾಗಿದೆ.

ಷೇರುಗಳ ಬೆಲೆ ಈ ರೀತಿ ಬೆಳೆಯಲು ಅನೇಕ ಕಾರಣಗಳಿವೆ. ಅವುಗಳಲ್ಲಿ ಕೆಲವು ರಾಜಕೀಯ, ಹಲವು ಆರ್ಥಿಕ, ಇನ್ನುಳಿದವು ಇಂತಹ ವ್ಯಾಪಾರಗಳಿಗೆ ಸ್ವಾಭಾವಿಕವಾದ ಅನಿಶ್ಚಿತತೆಯಿಂದ(uncertainty), ಜೊತೆಗೆ ದಳ್ಳಾಳಿಗಳ ಕಾರುಭಾರುಗಳಲ್ಲಿ ಪಾರದರ್ಶಕತೆ ಇಲ್ಲದೇ ಇರುವುದರಿಂದ. ರಾಜಕೀಯವಾಗಿ, ಕಾಂಗ್ರೆಸ್ ನೇತೃತ್ವದ ಸಂಯುಕ್ತ ಪ್ರಗತಿಪರ ಒಕ್ಕೂಟ (ಯು.ಪಿ.ಎ.) ಸರ್ಕಾರ ಬಂದ ನಂತರ ಸರ್ಕಾರದ ಆರ್ಥಿಕ ನೀತಿಗಳು ಮಾರುಕಟ್ಟೆಗಳ ಪರವಾಗುವುದೆಂಬ ನಿರೀಕ್ಷಣೆಯಿಂದ ಪ್ರಧಾನಿಯಾಗಿ ಡಾ|| ಮನಮೋಹನ ಸಿಂಗ್‌ರವರು ಮತ್ತು ವಿತ್ತ ಮಂತ್ರಿಯಾಗಿ ಶ್ರೀ ಚಿದಂಬರಂರವರು ಬಂದ ಮೇಲೆ ಮಾರುಕಟ್ಟೆಗಳ ಮೇಲಿದ್ದ ಕಟ್ಟುನಿಟ್ಟುಗಳೆಲ್ಲಾ ಬೇಗ ಸಡಿಲವಾಗುವುವೆಂಬ ನಂಬಿಕೆ ಖಾಸಗಿ ವಲಯಗಳಲ್ಲಿ ಜೋರಾಗಿತ್ತು. ಅಂತೆಯೇ ಸರ್ಕಾರದ ಹಣಕಾಸು ಮತ್ತು ತೆರಿಗೆ ಕ್ಷೇತ್ರಗಳಲ್ಲಿ ಸಾಕಷ್ಟು ಬದಲಾವಣೆಗಳಾದುವು. ಖಾಸಗಿ ಉದ್ಯಮಗಳಿಗೆ ಅನುಕೂಲವಾಗುವಂತೆ ಅನೇಕ ಕಾರ್ಯಕ್ರಮಗಳು ಜಾರಿಗೆ ಬಂದುದರಿಂದ ಕೈಗಾರಿಕಾ ಕ್ಷೇತ್ರ ಮತ್ತು ಸೇವಾ ಕ್ಷೇತ್ರಗಳ ಉತ್ಪನ್ನ ವರ್ಧಿಸಿ ರಾಷ್ಟ್ರದ ಸಮಗ್ರ ಉತ್ಪನ್ನ ಶೇಕಡ ೯ಕ್ಕಿಂತ ಹೆಚ್ಚಾಗಿ ಬೆಳೆಯುವಂತಾಯಿತು. ಈ ಹಿನ್ನೆಲೆಯಲ್ಲಿ ಕೈಗಾರಿಕೆಗಳಲ್ಲಿ ಹೂಡಿಕೆ ಬೆಳೆದುದರಿಂದ ಷೇರು ಪೇಟೆಯ ವ್ಯಾಪಾರ ತ್ವರಿತವಾಗಿ ಹೆಚ್ಚಾಯಿತು.

ಇವಲ್ಲದೆ ಕೆಲವು ಸಂದರ್ಭಗಳು ಈ ತರಹ ಬೆಳವಣಿಗೆಗೆ ಸಹಾಯವಾದುವು. ರಾಷ್ಟ್ರೀಯ ಅಭಿವೃದ್ಧಿಗೆ ಅನುಕೂಲವಾಗುವಂತೆ ಬಡ್ಡಿದರಗಳನ್ನು ಕಡಿಮೆ ಮಾಡುವುದಲ್ಲದೆ ಹಣಕಾಸು ನೀತಿಯಲ್ಲಿ ಭಾರತೀಯ ರಿಸರ್ವ್ ಬ್ಯಾಂಕು ಬದಲಾವಣೆಗಳನ್ನು ಮಾಡಿತು. ಇದರಿಂದ ಉದ್ಯಮಗಳಲ್ಲದೆ ಗ್ರಾಹಕರಿಗೂ ಬ್ಯಾಂಕುಗಳು ಸಾಲ ನೀಡಲು ಅನುಕೂಲವಾಯಿತು. ಷೇರು ದರಗಳು ಮೇಲೇರಿದಂತೆ


ನಾಲ್ವಾಡ ಬ್ರದರ್ಸ್
NALWAD BROTHERS

Wholesale Dealers & Suppliers
Educational Books
(L.K.G. to P. G. Course)

ಸಗಟು ಪುಸ್ತಕ ವ್ಯಾಪಾರಿಗಳು

Children's Books, Dictionaries

4th to 10th Standard Work Books,
Outline Map Books, PUC, B.A., B.Com, D.Ed. (TCH),
B.Ed., M.Ed., Law, M.A., M.Com, Books.

Departmental Textbooks :
Accounts Higher & Lower, General Law P I & P II
Revenue Higher & Lower, PWD Higher & Lower.
Ganesh Note Book
General Books, Digest & Guides.

ಇವೆಲ್ಲವೂ ನಮ್ಮಲ್ಲಿ ದೊರೆಯುತ್ತವೆ

# 79, Sanjeevappa Lane, Opp. Rice Memorial Church
Avenue Road Cross, Bangalore - 560 002
Ph : 22243132 Mobile : 98454 67784 / 94487 11002


ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳ ಹೂಡಿಕೆಗಳು ಮತ್ತು ಬಹುರಾ ಉದ್ಯಮಗಳ ನೇರ ಹೂಡಿಕೆಗಳೂ ಹೆಚ್ಚಿದವು. ಹೊರ ದೇಶಗಳಿಂದ ಬರುತ್ತಿದ್ದ ಹ ಹೆಚ್ಚಾದಂತೆ ಷೇರು ಪೇಟೆಯ ಸೂಚ್ಯಂಕಗಳ ಏರಿಕೆಯೂ ಹೆಚ್ಚಾಯಿತು. ಭಾರ ಅಂತರರಾಷ್ಟ್ರೀಯ ಹೂಡಿಕೆ ಈಚೀಚೆಗೆ ಅತಿ ಹೆಚ್ಚಾಗುತ್ತಿರುವುದಕ್ಕೆ ಮುಖ್ಯ ಕ ಅಮೆರಿಕಾದ ಹಣಕಾಸು ಕ್ಷೇತ್ರದಲ್ಲಾಗಿರುವ ಬದಲಾವಣೆಗಳಿಂದ. ಆ ದೇ ಮನೆಗಳ ನಿರ್ಮಾಣಕ್ಕೆ ಅನೇಕ ರೀತಿಯ ಹಣಕಾಸು ಸಂಸ್ಥೆಗಳು ಸಾಲಕೊಡುವ ವಿಪರೀತವಾಗಿ ಹೆಚ್ಚಿಸಿದ್ದವು. ಸುಮಾರು ೨೦೦೩ರಿಂದೀಚೆಗೆ ಈ ತರಹದ ಸಾಲ ಕೊಡುವಾಗ ಹಣಕಾಸು ಸಂಸ್ಥೆಗಳು ವಿಧಿಸುವ ಷರತ್ತುಗಳನ್ನು ಸಡಿಲಿಸಿ, ಕಟ್ಟುವವರಿಗೆ ಮತ್ತು ಕೊಳ್ಳುವವರಿಗೆ ದೀರ್ಘಾವಧಿ ಸಾಲಗಳನ್ನು ಒದಗಿಸಿದವು. ಪ್ರಮಾಣ ಹೆಚ್ಚಿದಂತೆ ಈ ಸಂಸ್ಥೆಗಳು ಇತರರಿಂದ ಸಾಲ ಪಡೆದುಕೊಳ್ಳಲು ಪ್ರಾರ ಮನೆ ಸಾಲಗಳ ವ್ಯಾಪ್ತಿ ಎಲ್ಲಾ ತರಹದ ಬ್ಯಾಂಕುಗಳನ್ನೂ, ನಿಧಿಗಳನ್ನೂ (he funds and mutual funds) ಆವರಿಸಿತು.

ಅಮೆರಿಕಾದ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಲು ಅಲ್ಲಿನ ಕೇ ಬ್ಯಾಂಕುಗಳು (Federal Reserve Banks) ತಮ್ಮ ಬಡ್ಡಿ ದರಗಳನ್ನು ಕ್ರಮ ಇಳಿಸಿದುದರಿಂದ ಹಣದ ಪೂರೈಕೆಗೆ ಅನುಕೂಲವಾಯ್ತು. ಜೊತೆಗೆ ಅಮೆರಿ ಕೇಂದ್ರ ಸರ್ಕಾರ ಇರಾಕ್ ದೇಶದ ಮೇಲೆ ಧಾಳಿ ಮಾಡಿದುದರಿಂದ ಅಲ್ಲಿನ ಬ ಕೊರತೆ ಹೆಚ್ಚಾಗಿ ಹಣದ ಸರಬರಾಜು ಬೆಳೆಯಲು ಸಹಾಯವಾದುದ ಅಮೆರಿಕಾದ ಡಾಲರ್‌ನ ಬೆಲೆ ಅಂತರರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ಕುಸಿಯ ತೊಡಗಿತು. ಈ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಮನೆಸಾಲಗಳ ಮಾರುಕಟ್ಟೆ ಇದ್ದಕ್ಕಿ ಕುಸಿದುದರಿಂದ ಅನೇಕ ಹಣಕಾಸು ಸಂಸ್ಥೆಗಳು ಸಾಲ ವಾಪಸು ಪಡೆಯ ಕಾರ್ಯಕ್ರಮ ಅನುಸರಿಸಿದುವು. ಆದರೆ ಅವರ ಪ್ರಯತ್ನಗಳು ನಿಷ್ಫಲವಾದುದ ಈ ಕೊರತೆ ಕ್ರಮೇಣ ಇತರ ಸಂಸ್ಥೆಗಳಿಗೆ ಹರಡಿ, ಆ ದೇಶದ ಷ ಮಾರುಕಟ್ಟೆಗಳೂ ಇಳಿತ ಅನುಭವಿಸಿದವು. ಪರಿಣಾಮವಾಗಿ, ಯೂರೋಪಿನಲ್ಲಿ ಇತರ ದೇಶಗಳಲ್ಲಿ ಷೇರು ಬೆಲೆಗಳ ಏರಿಳಿತಗಳು ಉಂಟಾಗಿ ಅಲ್ಲಿನ ಆ ಸ್ಥಿತಿಗಳಲ್ಲೂ ವ್ಯತ್ಯಾಸಗಳಾದವು. ಅಮೆರಿಕಾದ ಸಮಗ್ರ ಉತ್ಪನ್ನ ಮತ್ತು ಗ್ರಾ ಕೊಳ್ಳುವಿಕೆ ಇಳಿಮುಖವಾಗಿ ಇತರ ದೇಶಗಳು ಅಲ್ಲಿಗೆ ಕಳುಹಿಸುತ್ತಿದ್ದ ರಫ್ತಿನ ಪ್ರಮಾ ಕಡಿಮೆಯಾಗಿ ಆ ಮಾರುಕಟ್ಟೆಗಳಿಗೆ ಬದಲಾಗಿ ಬೇರೆ ದೇಶಗಳಿಗೆ ಸರಕುಗ ರವಾನಿಸುವಂತಾಗಿದೆ. ಆದರೂ ಇತರೆ ದೇಶಗಳು ಅಮೆರಿಕಾದ ಡಾಲರನ್ನು ಮೀ ಹಣವಾಗಿ (reserve currency) ಉಪಯೋಗಿಸುವುದು ಕಡಿಮೆಯಾಗಿ ಭಾರತವೂ ಇದಕ್ಕೆ ಹೊರತೇನೂ ಅಲ್ಲ. ನಮ್ಮ ದೇಶದ ವಿದೇಶೀ ವಿನಿಮ ಹೆಚ್ಚು ಭಾಗ ಅಮೆರಿಕಾ ಸರ್ಕಾರದ ಸಾಲಪತ್ರಗಳಲ್ಲಿ ಹೂಡಿಕೆಯಾಗಿದೆ.

ಒಟ್ಟಿನಲ್ಲಿ ಷೇರು ಪೇಟೆಯ ವ್ಯತ್ಯಾಸಗಳಿಗೆ ವಿದೇಶೀ ಹೂಡಿಕೆ ಸಂ (FIIs)ವ್ಯವಹಾರಗಳು ಕಾರಣವಾಗಿವೆ. ಅಮೆರಿಕಾದ ಹಣ ಮತ್ತು ಇತರ ಮಾರುಕ ಏರುಪೇರುಗಳಿಗೆ ಅನುಗುಣವಾಗಿ ಆ ಸಂಸ್ಥೆಗಳು ಮುಂಬಯಿ ಷೇರು ಪೇಟೆಯಲ್ಲಿ ಶೇಖರಿಸಿರುವ ಷೇರುಗಳನ್ನು ಮಾರುವ ಅಥವಾ ಹೊಸದಾಗಿ ಕೊಳ್ಳುವಿಕೆಯಿಂದ ಅ ಹರಿದುಬರುವ ವಿದೇಶೀ ವಿನಿಮಯದಲ್ಲಿ ವ್ಯತ್ಯಾಸ ಉಂಟಾಗುತ್ತದೆ. ಈಚೀಚೆಗೆ ಬರುವ ವಿದೇಶೀ ವಿನಿಮಯದ ಪ್ರಮಾಣ ಏರಲು ಮುಖ್ಯ ಕಾರಣ FII ಮಾಡಿರುವ ನಿವ್ವಳ ಹೂಡಿಕೆ (net investment). ಇದು ೨೦೦೭ರ ಮಾ ಯಿಂದೀಚೆಗೆ ೨೧,೦೦೦ ಮಿಲಿಯನ್ ಡಾಲರ್ (ಅಥವಾ ೨೧ ಶತಕೋ ಡಾಲರ್)ಗಿಂತ ಅಧಿಕವಾಗಿತ್ತು, ಅಲ್ಲದೆ ವಿದೇಶಿ ಕಂಪನಿಗಳು ಭಾರತ ಮಾಡಿರುವ ನೇರ ಹೂಡಿಕೆ ೩ ಶತ ಕೋಟಿ ಡಾಲರ್‌ನಷ್ಟು ಹೆಚ್ಚಾಗಿದೆ. ಹಿನ್ನೆಲೆಯಲ್ಲಿ ಮುಂಬಯಿ ಷೇರು ಪೇಟೆಯ ದಳ್ಳಾಳಿಗಳು (brokers)ಏರುಪೇರು ಕಂಡೊಡನೆ ಹಿಂಡು ಹಿಂಡಾಗಿ ಪ್ರತಿಕ್ರಿಯಿಸುವುದರಿಂದ ಏರಿಳಿತಗಳು ವಿಪರೀತ ಉಲ್ಬಣಿಸುತ್ತವೆ. ಹೀಗಿದ್ದರೂ ಮುಂಬಯಿ ಮಾರುಕಟ್ಟೆಯಲ್ಲಿ ಒಟ್ಟಾರೆ ಷ ಬೆಲೆಗಳು ಏರಿವೆಯೇ ಹೊರತು ಇಳಿದಿರುವುದು ಕಡಿಮೆ. ಸೂಕ್ಷ್ಮ ಸೂಚ ಹೆಚ್ಚಿದಂತೆಲ್ಲಾ ಹೊರಗಿನಿಂದ ಬರುವ ಹೂಡಿಕೆ ಬೆಳೆಯುತ್ತಾ ಹೋಗುತ್ತಿದೆ.

ಇವೆಲ್ಲದರ ಪರಿಣಾಮಗಳೇನು? ಸೂಚ್ಯಂಕದ ಏರಿಳಿತಗಳಲ್ಲದೆ ದೇ ಹಣಕಾಸು ಕ್ಷೇತ್ರಗಳಲ್ಲಿ ಆಗುವ ಬದಲಾವಣೆಗಳೇನು? ಇವಕ್ಕೆ ಭಾರತ ಸರ್ಕಾ ಮತ್ತು ರಿಸರ್ವ್ ಬ್ಯಾಂಕುಗಳು ಯಾವ ರೀತಿ ಪ್ರತಿಕ್ರಿಯಿಸಿವೆ? ಇತರ ದೇಶ ಪ್ರತಿಕ್ರಿಯೆಯೇನು? ಈ ಪ್ರಶ್ನೆಗಳನ್ನು ಪರಿಶೀಲಿಸಿದಾಗ ಅವುಗಳ ವ್ಯಾಪ್ತಿ ಎಷ್ಟೊ

ಶಾಲವಾಗಿದೆಯೆಂದು ಕಂಡುಬರುತ್ತದೆ.

ವಿದೇಶಿ ವಿನಿಮಯದ ಒಳ ಹರಿವು ಹೆಚ್ಚಿದಂತೆ ರಿಸರ್ವ್ ಬ್ಯಾಂಕಿನಲ್ಲಿರುವ ಅದರ ಂಗ್ರಹ ಬೆಳೆಯುತ್ತದೆ. ಇದಕ್ಕೆ ಕಾರಣ ವಿದೇಶೀ ವಿನಿಮಯವನ್ನು ಸಂಪಾದಿಸುವವರೆಲ್ಲಾ ದನ್ನು ಕಡ್ಡಾಯವಾಗಿ ರಿಸರ್ವ್ ಬ್ಯಾಂಕಿಗೆ ಮಾರಬೇಕಾದುದರಿಂದ, ರಿಸರ್ವ್ ್ಯಾಂಕ್ (RBI) ಈ ಕೊಳ್ಳುವಿಕೆಗೆ ಪ್ರತಿಯಾಗಿ ರೂಪಾಯಿಗಳನ್ನು ನೀಡ ೇಕಾದುದರಿಂದ ವಿದೇಶೀ ವಿನಿಮಯದ ಒಳಹರಿವಿನ ಪರಿಣಾಮವಾಗಿ ೇಶದೊಳಗಿನ ಹಣದ ಸರಬರಾಜು (money supply) ಬೆಳೆಯುತ್ತದೆ. ಅಲ್ಲದೆ ೂಪಾಯಿ – ಡಾಲರ್‌ಗಳ ವಿನಿಮಯ ದರದಲ್ಲಿ ವ್ಯತ್ಯಾಸವಾಗುತ್ತದೆ. ೨೦೦೭ರ ಾರ್ಚ್ ಕೊನೆಯಲ್ಲಿ ಪ್ರತಿ ಡಾಲರ್‌ಗೆ ಸುಮಾರು ರೂ. ೪೩.೬ ದೊರಕುತ್ತಿದ್ದುದು ಕ್ಟೋಬರ್ ೨೬ರ ವರೆಗೆ ರೂ. ೩೯.೪ಕ್ಕೆ ಏರಿತ್ತು (ಅಂದರೆ ಅಂತರರಾಷ್ಟ್ರೀಯ ಲರ್ ಮಾರುಕಟ್ಟೆಯಲ್ಲಿ ರೂಪಾಯಿ ತುಟ್ಟಿಯಾಗಿತ್ತು). ಆದರೂ ಅಮೆರಿಕಾದ ಣಕಾಸು ಪರಿಸ್ಥಿತಿ ಎಷ್ಟು ಕೆಟ್ಟಿತ್ತೆಂದರೆ ಅಲ್ಲಿಯ ಸಂಸ್ಥೆಗಳ ಮತ್ತು ವ್ಯಕ್ತಿಗಳ ಪರದೇಶ ೂಡಿಕೆಯ ಪ್ರಮಾಣ ಬೆಳೆಯುವುದು ತಗ್ಗಲಿಲ್ಲ. ಭಾರತವಲ್ಲದೆ ಇತರ ಪೌರ್ವಾತ್ಯ ೇಶಗಳಲ್ಲೂ ಡಾಲರಿನ ಒಳಹರಿವು ಹೆಚ್ಚುತ್ತಲೇ ಇದ್ದಿತು. ಇಂಗ್ಲೆಂಡಿನ ಪೌಂಡು, ಯೂರೋಪಿನ 'ಯೂರೋ', ಜಪಾನಿನ ಯೆನ್ ಇತ್ಯಾದಿಗಳ ಬೆಲೆಗಳು ವೃದ್ಧಿಸಿ ಪಂಚದ ವ್ಯಾಪಾರದಲ್ಲೂ ವಿಧವಿಧವಾದ ಹೊಂದಾಣಿಕೆಗಳಾದುವು. ಕಚ್ಚಾತೈಲ ತ್ತು ಇತರೆ ಪೆಟ್ರೋಲು ಸಾಮಗ್ರಿಗಳ ಬೆಲೆ ತೀವ್ರವಾಗಿ ಏರಲು ಕಾರಣವಾಯ್ತು. ಧಾರಣ ಕಚ್ಚಾತೈಲ ಈಗಾಗಲೇ ಬ್ಯಾರಲ್‌ಗೆ ೯೬ ಡಾಲರ್‌ಆಗಿ ಇಷ್ಟರಲ್ಲೇ ೧೦೦ ಲರ್‌ಗೆ ತಲುಪಬಹುದಾಗಿದೆ. ಅಂತೆಯೇ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಹಾರ ಸಾಮಗ್ರಿಗಳು, ಖನಿಜ, ಚಿನ್ನ ಇತ್ಯಾದಿ ಅಮೂಲ್ಯ ವಸ್ತುಗಳ ಬೆಲೆ ಡಾಲರ್ ಕ್ಕದಲ್ಲಿ ಹೆಚ್ಚಾಗಿರುವುದರಿಂದ ಅವುಗಳ ವ್ಯಾಪಾರ ಸ್ಥಿತಿಯೂ ಉಲ್ಬಣಿಸಿದೆ.

ಅಮೆರಿಕಾದ ಹಣಕಾಸು ಪರಿಸ್ಥಿತಿ ಹದಗೆಡಲು ಇನ್ನೂ ಹಲವು ಕಾರಣಗಳಿದ್ದವು. ೇಲೆ ತಿಳಿಸಿದಂತೆ ಅಲ್ಲಿನ ಅಧ್ಯಕ್ಷ ಜಾರ್ಜ್ ಬುಷ್‌ರವರು ಇರಾಕ್, ಅಫ್ಘಾನಿಸ್ಥಾನ ಯುದ್ಧಗಳನ್ನು ಮುಂದುವರೆಸಿದಂತೆ ಸರ್ಕಾರದ ಬಜೆಟ್ ಕೊರತೆ ಹೆಚ್ಚಿ ಹಣದುಬ್ಬರಕ್ಕೆ ರಣವಾಯ್ತು. ಜೊತೆಗೆ ಆರ್ಥಿಕ ಸಹಾಯ ಒದಗಿಸಲು ಅಲ್ಲಿಯ ಕೇಂದ್ರೀಯ ್ಯಾಂಕ್ (Federal Reserve Board) ಬಡ್ಡಿದರಗಳನ್ನೂ ಕ್ರಮೇಣ ಇಳಿಸುತ್ತಾ ಂದಿತು. ೨೦೦೬ರಿಂದೀಚೆಗೆ ಇದರ ಪ್ರಮಾಣ ಕಡಿಮೆಯಾಗುತ್ತಾ ಈಗ ಸರ್ಕಾರದ ಲ ಪತ್ರಗಳ ದರ (Federal Funds Rate) ಶೇಕಡ ೪.೫ರಷ್ಟಾಗಿದೆ. ಯೂರೋಪಿನ ಆರ್ಥಿಕ ಪರಿಸ್ಥಿತಿಯೂ ಸಮರ್ಪಕವಾಗಿಲ್ಲ. ಅಲ್ಲಿಯ ಕೇಂದ್ರೀಯ ್ಯಾಂಕುಗಳೂ ಬಡ್ಡಿದರಗಳನ್ನು ಹಿಡಿದಿಟ್ಟಿವೆ. ಆದರೆ ಭಾರತದ ರಿಸರ್ವ್ ಬ್ಯಾಂಕ್‌ನ ಣಕಾಸು ನೀತಿಗಳು ದೇಶದ ಹಣದುಬ್ಬರವನ್ನು ನಿಯಂತ್ರಿಸಲು ಇಲ್ಲಿನ ಡ್ಡಿದರಗಳನ್ನು ಕಳೆದೆರಡು ವರ್ಷಗಳಿಂದ ಹೆಚ್ಚಿಸುತ್ತಾ ಬಂದಿದೆ. ವಿದೇಶೀ ನಿಮಯದ ಒಳ ಹರಿವು ಹೆಚ್ಚಾಗಲು ನಮ್ಮ ಬ್ಯಾಂಕುಗಳು ಠೇವಣಿ ದರಗಳನ್ನು ಚ್ಚಿಸಿರುವುದೂ ಒಂದು ಕಾರಣ. ಅನಿವಾಸಿ ಭಾರತೀಯರು ಇಲ್ಲಿನ ್ಯಾಂಕುಗಳಲ್ಲಿಟ್ಟಿರುವ ಠೇವಣಿಗಳಲ್ಲದೆ ಅವರ ಹೂಡಿಕೆಗಳೂ ಜಾಸ್ತಿಯಾಗಿವೆ. ೂಪಾಯಿ ತುಟ್ಟಿಯಾಗಿದ್ದರಿಂದ ನಮ್ಮ ದೇಶದ ರಫ್ತುಗಾರರಿಗೆ ಅನನುಕೂಲ ಾಗುವುದನ್ನು ತಡೆಯಲು ರಿಸರ್ವ್ ಬ್ಯಾಂಕ್ ಕೂಡ ವಿದೇಶೀ ವಿನಿಮಯ ಮಾರುಕಟ್ಟೆಯಲ್ಲಿ ಡಾಲರ್‌ಗಳನ್ನು ಕೊಂಡುದರಿಂದ ಹಣದ ಚಲಾವಣೆ ಉಲ್ಬಣಿಸಿತು. ಈ ವರ್ಷದಲ್ಲಿ ಇದುವರೆಗೆ ರಿಸರ್ವ್ ಬ್ಯಾಂಕ್ ಸುಮಾರು ೪೩ ತಕೋಟಿ (43 billion) ಯಷ್ಟು ಡಾಲರ್‌ಗಳನ್ನು ಖರೀದಿಸಿರುವುದರಿಂದ ಅದರ ದೇಶೀ ವಿನಿಮಯ ಸಂಗ್ರಹಣೆ ಒಟ್ಟಾರೆ ೬೨ ಶತಕೋಟಿ ಡಾಲರ್ ಹೆಚ್ಚಾಗಿ ಅದಕ್ಕೆ ನುನಾಗಿ ರೂಪಾಯಿಯ ಚಲಾವಣೆ ಹೆಚ್ಚಾಗಿದೆ. ಇದರಿಂದ ಆಗಬಹುದಾದ ಬೆಲೆಗಳ ರಿಕೆಯನ್ನು ತಡೆಯಲು RBI ಇತರ ಬ್ಯಾಂಕುಗಳು ಇಡಬೇಕಾಗಿರುವ ನಗದು ೀಸಲು ಪ್ರಮಾಣವನ್ನು (Cash Reserve Ratio) ನವೆಂಬರ್ ೧೦, ೨೦೦೭ ಂದ ಶೇಕಡ ೭.೫ಕ್ಕೆ ಏರಿಸಿದೆ. ಪರಿಣಾಮವಾಗಿ ಬ್ಯಾಂಕುಗಳು RBI ಗೆ ಸುಮಾರು ೂ. ೧೭,೦೦೦ ಕೋಟಿ ಹೆಚ್ಚು ಠೇವಣಿ ಕೊಡಬೇಕಾಗಿರುವುದರಿಂದ ಅಷ್ಟರಮಟ್ಟಿಗೆ ಣದುಬ್ಬರ ತಗ್ಗುವ ನಿರೀಕ್ಷೆಯಿದೆ. ಸರ್ಕಾರಿ ಸಾಲಪತ್ರಗಳ ಆಧಾರದ ಮೇಲೆ ಕೊಡುವ ಪೊ' ಮತ್ತು 'ರಿವರ್ಸ್ ರಿಪೊ' ದರಗಳನ್ನು ಬದಲಾಯಿಸಿಲ್ಲ; ಅವೆರಡೂ ಶೇಕಡ ೭೫ ಮತ್ತು ಶೇಕಡ ೬ರಷ್ಟು ಇರುವುದರಿಂದ ಅನವಶ್ಯಕ ಹಣದುಬ್ಬರ ತಡೆಯಲು ಹಕಾರಿಯಾಗುತ್ತವೆಂದು RBI ಭಾವಿಸಿದೆ. ಇವಲ್ಲದೆ ಬ್ಯಾಂಕುಗಳು ಸಾಲಕೊಡುವಾಗ ಇನ್ನೂ ಹೆಚ್ಚು ಜಾಗರೂಕತೆ ವಹಿಸಬೇಕೆಂದು ಸೂಚಿಸಿದೆ.

ವಿದೇಶೀ ಮಾರುಕಟ್ಟೆಗಳಲ್ಲಿ ರೂಪಾಯಿಯ ಏರಿಕೆಯಿಂದ ರಫ್ತುಗಾರರಿಗೆ ಆಗಿರುವ ತೊಂದರೆಯನ್ನು ನಿವಾರಿಸಲು ಸರ್ಕಾರ ಕೆಲವು ಕ್ರಮಗಳನ್ನು ತೆಗೆದುಕೊಂಡಿದೆ. ಮುಖ್ಯವಾಗಿ ರಫ್ತುಸರಕುಗಳು ಕೊಡಬೇಕಾಗಿದ್ದ ತೆರಿಗೆಗಳಲ್ಲಿ ಸ್ವಲ್ಪ ಭಾಗ ಹಿಂದಿರುಗಿಸುತ್ತಿದೆ. ಆಮದುಗಳ ಮೇಲಿನ ಸುಂಕಗಳನ್ನು ಆದಷ್ಟು ಇಳಿಸಿರುವುದರಿಂದಲ್ಲದೆ ರೂಪಾಯಿಯ ಮೌಲ್ಯ ಹೆಚ್ಚಿರುವ ಕಾರಣ ಅವುಗಳಿಗೆ ಉತ್ತೇಜನ ಕೊಟ್ಟಂತಾಗಿದೆ. ಪರದೇಶಗಳಲ್ಲಿ ಭಾರತದ ಉದ್ಯಮಗಳು ಉಳಿಸಿಕೊಳ್ಳಬಹುದಾದ ಠೇವಣಿ ಮತ್ತು ಹೂಡಿಕೆಗಳ ಪರಿಮಿತಿಯನ್ನೂ RBI ವಿಸ್ತರಿಸಿದೆ. ಪ್ರಾಪಂಚಿಕ ಮಾರುಕಟ್ಟೆಯಲ್ಲಿ ತೊಡಗಿರುವ ಭಾರತದ ಕಂಪನಿಗಳು ಇತರ ದೇಶದ ಉದ್ಯಮಗಳನ್ನು ಕೊಳ್ಳಲು ಈ ಬದಲಾವಣೆಗಳು ಸಹಾಯಕವಾಗಿವೆ. ಟಾಟಾ, ರಿಲಯನ್ಸ್, ಮುಂತಾದ ಬಹುದೊಡ್ಡ ಉದ್ಯಮಗಳಲ್ಲದೆ ಅನೇಕ ಔಷಧಿ ತಯಾರಿಕೆ, ಮಾಹಿತಿ ತಂತ್ರಜ್ಞಾನ, ವಾಹನ ಭಾಗಗಳು ಇತ್ಯಾದಿ ಉದ್ಯಮಗಳು ಇತರ ದೇಶಗಳ ಕಂಪನಿಗಳನ್ನು ಕೊಳ್ಳುವುದು ಬೆಳೆಯುತ್ತಿದೆ. ಇವೆಲ್ಲದರ ಜೊತೆಗೆ ಇಲ್ಲಿಯ ಬ್ಯಾಂಕುಗಳ ವಿದೇಶೀ ವ್ಯವಹಾರಗಳು ವರ್ಧಿಸಿರುವುದರಿಂದ ವಿದೇಶೀ ವಿನಿಮಯದ ಬೇಡಿಕೆ ಬೆಳೆಯುತ್ತಾ ಬಂದಿದೆ. ಹಾಗೆಯೇ ಪರದೇಶಗಳಲ್ಲಿ ರೂಪಾಯಿಯ ಚಲಾವಣೆಯೂ ಹೆಚ್ಚಾಗಿದೆ. ಪರಿಣಾಮವಾಗಿ, ಭಾರತದ ಉದ್ಯಮಗಳು ಪ್ರಪಂಚದ ಮಾರುಕಟ್ಟೆಯಲ್ಲಿ ವಿದೇಶೀ ವಿನಿಮಯಗಳ ಏರುಪೇರುಗಳಿಗೆ ಸ್ಪಂದಿಸುವಂತಾಗಿದೆ.

ಒಟ್ಟಿನಲ್ಲಿ ಭಾರತದ ಆರ್ಥಿಕ ವ್ಯವಸ್ಥೆ ಹೆಚ್ಚು ಹೆಚ್ಚಾಗಿ ಜಾಗತಿಕ ಆರ್ಥಿಕ ವ್ಯವಸ್ಥೆಯ ಭಾಗವಾಗಿ ಪ್ರಪಂಚದ ವ್ಯವಹಾರಗಳಿಗೆಲ್ಲಾ ಪ್ರತಿಕ್ರಿಯಿಸಲು ತೊಡಗಿದೆ. ಸರಕು ವ್ಯಾಪಾರಗಳ ವಿದೇಶೀ ವ್ಯಾಪ್ತಿ ಬಹುವಾಗಿ ಬೆಳೆದು ಅಂತರರಾಷ್ಟ್ರೀಯ ಬೆಲೆಗಳ ಏರಿಳಿತ, ಹಣಕಾಸು ವಲಯದ ಮಾರ್ಪಾಡುಗಳು, ಉತ್ಪನ್ನಗಳ ಬದಲಾವಣೆ, ನೌಕರರ ವೇತನಗಳ ಹೆಚ್ಚಳ ಇತ್ಯಾದಿಗಳಿಂದ ಪ್ರಭಾವಿತವಾಗಿದೆ. ಇವೆಲ್ಲ ಷೇರು ಪೇಟೆಯ ಮೇಲೆ ಪರಿಣಾಮ ಬೀರುತ್ತವೆ. ಜೊತೆಗೆ ದಳ್ಳಾಳಿಗಳು ಕ್ಷಿಪ್ರವ್ಯವಹಾರಗಳಿಗೆ ಹಿಂಡು ಹಿಂಡಾಗಿ ಪ್ರತಿಕ್ರಿಯಿಸುವುದರಿಂದ ಏನು ಬದಲಾವಣೆಯಾದರೂ ಬೃಹತ್ತಾಗಿ ಆಗುತ್ತದೆ. ಹಣದ ಮಾರುಕಟ್ಟೆಗಳಲ್ಲಿ ಮುಂದಾಗಬಹುದಾದ ಏರುಪೇರುಗಳ ನಿರೀಕ್ಷಣೆಯೂ ಪ್ರಭಾವಶಾಲಿಯಾಗುವುದರಿಂದ ಹಣಕಾಸು ನೀತಿಗಳನ್ನು ರೂಪಿಸುವಾಗ ಅವನ್ನೂ ಗಣನೆಯಲ್ಲಿ ತಂದುಕೊಳ್ಳಬೇಕು. ಒಟ್ಟಿನಲ್ಲಿ, ಆಗುತ್ತಿರುವ ಅಥವಾ ಆಗಬಹುದಾದ ಮಾರ್ಪಾಟುಗಳನ್ನೆಲ್ಲಾ ಸರ್ಕಾರ ಮತ್ತು ರಿಸರ್ವ್ ಬ್ಯಾಂಕು ಮನಸ್ಸಿನಲ್ಲಿಟ್ಟುಕೊಂಡು ತಮ್ಮ ರೀತಿನೀತಿಗಳನ್ನು ಬದಾಲಾಯಿಸಲು ಪ್ರಯತ್ನಿಸುತ್ತವೆ.

ಮಾಹಿತಿ ತಂತ್ರಜ್ಞಾನದ ಪ್ರಗತಿಯಿಂದ ಹಣಕಾಸು ವ್ಯವಹಾರಗಳ ಏರುಪೇರುಗಳು ಕ್ಷಣಾರ್ಧದಲ್ಲಿ ಒಂದು ಮೂಲೆಯಿಂದ ಎಲ್ಲಾ ರಾಷ್ಟ್ರಗಳ ಮಾರುಕಟ್ಟೆಗಳಿಗೆ ಹಬ್ಬುತ್ತವೆ. ಅದರಲ್ಲೂ ಅಮೆರಿಕಾದ ಹಣಕಾಸು ಸ್ಥಿತಿಯಲ್ಲಾಗುವ ಬದಲಾವಣೆಗಳಿಂದ ಪ್ರಪಂಚದ ಇತರ ದೇಶಗಳೂ ಪ್ರಭಾವಿತರಾಗುವುದು ಹೆಚ್ಚು ಹೆಚ್ಚಾಗಿ ಕಂಡುಬರುತ್ತಿದೆ. ಇದು ಜಾಗತೀಕರಣದ ಒಂದು ಮುಖವಾದರೆ ವಿಶ್ವವ್ಯಾಪಾರ ಸಂಸ್ಥೆಯ (World Trade Organisation or WTO) ಒತ್ತಡದಿಂದ ಬದಲಾಗುತ್ತಿರುವ ಸರಕು ಅಥವಾ ಸೇವಾ ವ್ಯಾಪಾರಗಳಲ್ಲಿ ಕಾಣುವುದು ಇನ್ನೊಂದು ಮುಖ. ಕೈಗಾರಿಕಾ ಕ್ಷೇತ್ರದಲ್ಲಿ ಮುಂದುವರೆದಿರುವ ಅಮೆರಿಕಾ, ಯೂರೋಪ್, ಜಪಾನ್ ಇತ್ಯಾದಿ ದೇಶಗಳು ಪ್ರಗತಿಪರದೇಶಗಳ ಮೇಲೆ ಆರ್ಥಿಕವಾಗಲ್ಲದೆ ರಾಜಕೀಯವಾಗಿ ಬಲಾತ್ಕರಿಸಲು ತೊಡಗಿವೆ. ಈಚೀಚೆಗೆ ಭಾರತದ ಆರ್ಥಿಕ ವ್ಯವಸ್ಥೆಗಳು ಹೆಚ್ಚು ಹೆಚ್ಚಾಗಿ ಮಾರುಕಟ್ಟೆಯ ಸಿದ್ಧಾಂತಗಳನ್ನು ಅನುಸರಿಸುತ್ತಿರುವುದರಲ್ಲಿ ಈ ಪ್ರಭಾವ ಗೋಚರಿಸುತ್ತಿದೆ. ಅದರಲ್ಲೂ ಡಾಲರಿನ ಅಂತರರಾಷ್ಟ್ರೀಯ ಚಲನೆಗಳಿಗೆ ತಕ್ಕಂತೆ ವ್ಯಾಪಾರ ಮತ್ತು ಹಣಕಾಸು ನೀತಿಗಳು ಬಹುಬೇಗ ಸ್ಪಂದಿಸುತ್ತವೆ. ನಮ್ಮ ದೀರ್ಘಾವಧಿ ಉದ್ದೇಶಗಳಾದ ಬಡತನ ನಿವಾರಣೆ, ನಿರುದ್ಯೋಗ, ಜೀವನ ಮಟ್ಟದ ಅಸಮಾನತೆ ಇತ್ಯಾದಿಗಳಿಗೆ ಈ ನಡೆವಳಿಕೆ ಸೂಕ್ತವೆ ಎಂಬುದನ್ನು ರಾಜಕಾರಣಿಗಳು ಮತ್ತು ಆರ್ಥಿಕ ಸಲಹೆಗಾರರು ಗಂಭೀರವಾಗಿ ಪರಿಗಣಿಸಬೇಕು. ನಮ್ಮ ನೀತಿ, ನಡೆವಳಿಕೆಗಳನ್ನು ನಿರ್ಧರಿಸುವಾಗ ಜಾಗತೀಕರಣದ ಇತಿಮಿತಿಗಳನ್ನು ಗಮನದಲ್ಲಿಟ್ಟಿರಬೇಕಾದುದು ಅತ್ಯವಶ್ಯಕ.

**ಡಾ|| ಕೆ. ಎಸ್. ಕೃಷ್ಣಸ್ವಾಮಿ**
ಸಿ-೬೦೧, ಆದರ್ಶ ಗಾರ್ಡನ್, ೪೭ನೇ ಅಡ್ಡರಸ್ತೆ, ಜಯನಗರ, ೮ನೇ ಬ್ಲಾಕ್, ಬೆಂಗಳೂರು-೮೨



# ಭಾರತ - ಚೀಣಾ ಸಂಬಂಧ
# ಭವಿಷ್ಯದ ಸವಾಲುಗಳು



**ಚೀ**ಣಾದ ಪ್ರಧಾನಿ ವೆನ್ ಜಿಯಬಾವ್ರೊ ಆಹ್ವಾನದ ಮೇರೆಗೆ ಭಾರತದ ಪ್ರಧಾನಿ ಮನಮೋಹನ ಸಿಂಗ್ ೨೦೦೮ರ ಆದಿಭಾಗದಲ್ಲಿ ಚೀಣಾಕ್ಕೆ ಭೇಟಿ ನೀಡಲಲಿದ್ದಾರೆ. ಭಾರತ - ಚೀಣಾ ನಡುವಣ ಉನ್ನತ ಹಂತದ ಪರಸ್ಪರ ವಿನಿಮಯಗಳ ಸಾಲಿಗೆ ಇದು ಸೇರುತ್ತದೆ. ೧೯೮೮ರಲ್ಲಿ ಪ್ರಧಾನಿ ರಾಜೀವ ಗಾಂಧಿ ಭೇಟಿಯ ನಂತರ ಇದು ಸತತವಾಗಿ ಸಾಗಿಬರುತ್ತಿದೆ. ಪಂಡಿತ ಜವಾಹರಲಾಲ್ ನೆಹರು ಅವರ ಭೇಟಿಯ ೩೪ ವರ್ಷಗಳ ನಂತರ ಭೇಟಿ ನೀಡಿದ ರಾಜೀವ ಗಾಂಧಿ ಭೇಟಿಯು ಎರಡೂ ದೇಶಗಳ ನಡುವಣ ಸಂಬಂಧಗಳಲ್ಲಿ ತೋರಿಬಂದಿದ್ದ ಹಲವು ತಪ್ಪುಗಳ ಪ್ರತೀಕದಂತಿತ್ತು. ೧೯೫೯ರಿಂದ ಹಳಸಿಕೊಂಡಿದ್ದ ಸಂಬಂಧವು ೧೯೬೨ರ ಸೈನಿಕ ಧಾಳಿಯಲ್ಲಿ ಪರ್ಯವಸಾನವಾಗಿತ್ತು. ೧೯೭೮ರಲ್ಲಿ ಚೀಣಾದಲ್ಲಿ ಸುಧಾರಣಾ ಪ್ರಕ್ರಿಯೆ ಆರಂಭಗೊಂಡಿದ್ದು ಅಂದಿನ ಪ್ರಮುಖ ನೇತಾರ ಡೆಂಗ್ ಜ಼ಿಯಾವೋಪಿಂಗ್ ನೇತೃತ್ವದಲ್ಲಿ. ೧೯೮೮ರ ಚೀಣಾ ಭೇಟಿಯ ಸಂದರ್ಭದಲ್ಲಿ ಆತ ರಾಜೀವ ಗಾಂಧಿಯವರಿಗೆ ಹೇಳಿದ ಎರಡು ಮಾತುಗಳು ನನ್ನನ್ನು ಬಹಳ ಪ್ರಭಾವಿಸಿವೆ. ಆ ಸಂದರ್ಭದಲ್ಲಿ ನಾನು ಭಾರತದ ರಾಯಭಾರಿಯಾಗಿ ಚೀಣಾದಲ್ಲಿದ್ದೆ. ಅವರು ಹೇಳಿದ್ದ ಮಾತುಗಳಿವು: ಭಾರತ ಮತ್ತು ಚೀಣಾಗಳ ನಡುವೆ ಹಲವು ಭಿನ್ನಾಭಿಪ್ರಾಯಗಳಿದ್ದಾಗ್ಯೂ, ತಮ್ಮ ಅಭಿಪ್ರಾಯ ಭೇದವನ್ನು ಬದಿಗಿಟ್ಟು ಪರಸ್ಪರ ಸಂಬಂಧಗಳನ್ನು ಉತ್ತಮಪಡಿಸಿಕೊಳ್ಳಬೇಕು. ಭೇದಗಳಿಂದ ನಿರ್ಮಾಣಗೊಂಡಿರುವ ವಾತಾವರಣವನ್ನು ತೊಡೆದುಹಾಕಿ ಎರಡೂ ರಾಷ್ಟ್ರಗಳ ಜನತೆ ಹತ್ತಿರ ಬರಲು ಅದರಿಂದ ಸಹಾಯವಾಗುತ್ತದೆ. ಎರಡನೆಯದಾಗಿ, ಅನೇಕ ಪಾಶ್ಚಾತ್ಯರು ೨೦ ಮತ್ತು ೨೧ನೆಯ ಶತಮಾನಗಳು ಏಷ್ಯದ ಶತಮಾನಗಳಾಗಿರುತ್ತವೆಂದು ವ್ಯಾಖ್ಯಾನಿಸುತ್ತಿದ್ದಾರೆ; ಆದರೆ ಅತ್ಯಂತ ಹೆಚ್ಚು ಜನಸಂಖ್ಯೆಯುಳ್ಳ ಭಾರತ ಮತ್ತು ಚೀಣಾ ಅಭಿವೃದ್ಧಿ ಹೊಂದದಿದ್ದರೆ ಏಷ್ಯದ ಶತಮಾನವೆಂಬ ಮಾತು ಪೊಳ್ಳುಮಾತಾಗುತ್ತದೆ.

ಈ ಮಾತುಗಳು ಎಂತಹ ಭವಿಷ್ಯವಾಣಿಯಾಗಿದ್ದುವೆಂದು ಎರಡು ದಶಕಗಳ ನಂತರ ಇಂದು ಸ್ಪಷ್ಟವಾಗುತ್ತಿದೆ. ಕಳೆದ ಹದಿನೈದು ವರ್ಷಗಳಲ್ಲಿ ಚೀಣಾ ಸಾಧಿಸಿರುವ ಅಭಿವೃದ್ಧಿ ಮತ್ತು ಈಚಿನ ವರ್ಷಗಳಲ್ಲಿ ಭಾರತವು ಕಂಡಿರುವ ಅಭಿವೃದ್ಧಿ ಏಷ್ಯದ ಆರ್ಥಿಕತೆಗಳಿಗೆ ಹುಟ್ಟುಗೋಲುಗಳಂತಾಗಿವೆ; ಬಹುಶಃ ಅಂತರರಾಷ್ಟ್ರೀಯ ಆರ್ಥಿಕತೆಗೂ ಅದು ಪ್ರೇರಣೆ ನೀಡಬಲ್ಲುದಾಗಿದೆ. ಕಳೆದ ಕೆಲವು ವರ್ಷಗಳಲ್ಲಿ ರಾಜಕಾರಣಿಗಳು, ಅರ್ಥಶಾಸ್ತ್ರಜ್ಞರು, ಉದ್ದಿಮೆದಾರರು, ತಂತ್ರ ನಿರೂಪಕರು ಮತ್ತು ಬುದ್ಧಿಜೀವಿಗಳು ಹತ್ತಾರು ಸಭೆಗಳಲ್ಲಿ ಚರ್ಚಿಸುತ್ತಾ ಬಂದಿರುವ ವಿಷಯಗಳೆಂದರೆ ಭಾರತ ಮತ್ತು ಚೀಣಾಗಳಲ್ಲಿ ಆರ್ಥಿಕ ಮತ್ತು ಸಾಮಾಜಿಕ ಬೆಳವಣಿಗೆಗಳು ಉಂಟಾಗಿರುವುದು, ಎರಡೂ ದೇಶಗಳ ಮಾದರಿಗಳ ತುಲನೆ ಮತ್ತು ಸತತವಾಗಿ ವೃದ್ಧಿಯಾಗುತ್ತಿರುವ ರಾಜಕೀಯ, ತಾಂತ್ರಿಕ, ಆರ್ಥಿಕ ಹಾಗೂ ಸಾಮಾಜಿಕ ಸಂರಚನೆಯು ಅಂತರರಾಷ್ಟ್ರೀಯ ವಿದ್ಯಮಾನಗಳ ಮೇಲೆ ಉಂಟುಮಾಡುವ ಪ್ರಭಾವ. ಹಲವು ಕ್ಷೇತ್ರಗಳಲ್ಲಿ ಎರಡೂ ದೇಶಗಳ ನಡುವೆ ಗಣನೀಯ ಪ್ರಮಾಣದಲ್ಲಿ ದ್ವಿಪಕ್ಷೀಯ ಸಂಬಂಧಗಳು ಹೆಚ್ಚಾಗುತ್ತಾ ಬಂದಿವೆ. ರಾಜಕೀಯ, ತಂತ್ರಗಾರಿಕೆ, ರಕ್ಷಣೆ, ವಿಜ್ಞಾನ, ತಂತ್ರಜ್ಞಾನ, ಸಂಸ್ಕೃತಿ, ಹೀಗೆ ಎಲ್ಲ ಕ್ಷೇತ್ರಗಳಲ್ಲೂ ಸಂಬಂಧಗಳು ವರ್ಧಿಸಿವೆ. ಅಂತರ-ಸರ್ಕಾರಿ ಸಂಬಂಧಗಳಲ್ಲದೆ ಬೇರೆ ಗಮನಾರ್ಹ ಬೆಳವಣಿಗೆಗಳೂ ಇವೆ. ಪ್ರವಾಸಿಗರು, ಬೇರೆ ಬೇರೆ ಶಿಸ್ತುಗಳ ವಿದ್ವಾಂಸರು, ಉದ್ಯಮಿಗಳು, ಇತ್ಯಾದಿ ಹಲವು ಗುಂಪುಗಳಿಗೆ ಸೇರಿದ ಜನ ಹೆಚ್ಚಿನ ಪ್ರಮಾಣದಲ್ಲಿ ಪ್ರತಿವರ್ಷವೂ ಪರಸ್ಪರರ ದೇಶಗಳಿಗೆ ಭೇಟಿ ನೀಡುತ್ತಿದ್ದಾರೆ ಮತ್ತು ದೇಶಗಳ ನಡುವೆ ವಿಮಾನ ಸೌಕರ್ಯಗಳು ಹೆಚ್ಚಿವೆ. ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ ಭಾರತ ಮತ್ತು ಚೀಣಾಗಳ ನಡುವೆ ೨೦೦೮ರ ಅವಧಿಯಲ್ಲಿ ವ್ಯಾಪಾರ ವಹಿವಾಟು ಸುಮಾರು ೩೫೦೦ ಕೋಟಿ ಡಾಲರುಗಳಷ್ಟಾಗಲಿದೆ. ಭಾರತದ ಉದ್ಯಮಿ ಗಳು ಚೀಣಾದಲ್ಲಿ ಬಂಡವಾಳ ಹೂಡುವುದು ಮತ್ತು ಚೀಣಾದ ಉದ್ಯಮಿಗಳು ಭಾರತದಲ್ಲಿ ಬಂಡವಾಳ ತೊಡಗಿಸುವುದು ಗಮನಾರ್ಹವಾಗಿ ಹೆಚ್ಚುತ್ತಿದೆ. ಇದರಿಂದಾಗಿ ಮೈತ್ರಿಯುತ ಹಾಗೂ ಸ್ಥಿರವಾದ ಸಂಬಂಧಗಳನ್ನು ಮೈಗೂಡಿಸಿಕೊಳ್ಳುವುದು ಎರಡೂ ದೇಶಗಳ ಹಿತಕ್ಕೆ ಅಗತ್ಯವಾಗುತ್ತಿದೆ. ವ್ಯಾಪಾರ ಕ್ಷೇತ್ರದ ಒಟ್ಟು ಪ್ರಮಾಣವನ್ನು ನೋಡಿದರೆ ಭಾರತವು ಹೆಚ್ಚಿನ ವಹಿವಾಟು ನಡೆಸುವ ಮೊದಲ ಮೂರು ದೇಶಗಳಲ್ಲಿ ಚೀಣಾ ಸೇರಿದೆ.

ಭಾರತ ಮತ್ತು ಚೀಣಾ ಎದುರಿಸಬೇಕಾದ ಸವಾಲುಗಳು ಮುಖ್ಯವಾಗಿ ಆ ದೇಶಗಳ ಪ್ರಾದೇಶಿಕ ನೆರೆಹೊರೆಯವರೊಡನಿರುವ ಸಂಬಂಧಗಳೇ ಆಗಿವೆ. ದಕ್ಷಿಣ ಏಷ್ಯದ ದೇಶಗಳ ನಡುವಣ ಸಂಬಂಧಗಳು ಆ ಪೈಕಿ ಪ್ರಮುಖವಾಗಿವೆ. ಆಫ್ಘಾನಿಸ್ತಾನದಿಂದ ಹಿಡಿದು ಪಾಕಿಸ್ತಾನ, ನೇಪಾಳ, ಬಂಗ್ಲಾದೇಶ, ಶ್ರೀಲಂಕಾ, ಮ್ಯಾನ್ಮಾರ್ ಮತ್ತು ಮಾಲ್ಡೀವ್ಸ್, ಹೀಗೆ ಎಲ್ಲೆಡೆ ಅಸ್ಥಿರತೆಯ ಸನ್ನಿವೇಶವಿದೆ. ಇಲ್ಲೆಲ್ಲಾ ಇರುವುದು ಸರ್ವಾಧಿಕಾರಿ ಆಡಳಿತ, ಮಿಲಿಟರಿ ಸರ್ಕಾರ, ಮತ ಧಾರ್ಮಿಕ ಅಥವಾ ಇತರೆ ಸ್ವರೂಪದ ತೀವ್ರಗಾಮಿತ್ವ. ಜನಾಂಗೀಯ ಸಮಸ್ಯೆಗಳು ಮತ್ತು ಭಯೋತ್ಪಾದಕ ಹಿಂಸೆ ಇಲ್ಲೆಲ್ಲಾ ವ್ಯಾಪಕವಾಗಿದೆ. ಇವುಗಳೆಲ್ಲದರ ಪರಿಣಾಮವಾಗಿ ಭಾರತ ಮತ್ತು ಚೀಣಾಗಳಲ್ಲಿ ಗಡಿಯಾಚೆಗಳಿಂದ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಚೀಣಾಕ್ಕಿಂತಲೂ ಹೆಚ್ಚಿನ ಸಮಸ್ಯೆಯು ನೆರೆಹೊರೆಗಳಿಂದ ಭಾರತಕ್ಕಿದೆ. ಪಾಕಿಸ್ತಾನ ಮತ್ತು ಆಫ್ಘಾನಿಸ್ತಾನಗಳ ಅಕ್ಕಪಕ್ಕದ ಭಾಗಗಳಲ್ಲಿ ತೀವ್ರ ಹಿಂಸಾತ್ಮಕ ಬಣಗಳು ಬೀಡುಬಿಟ್ಟಿವೆ: ಅಂತರರಾಷ್ಟ್ರೀಯ ಭಯೋತ್ಪಾದನೆಗೆ ಅವೇ ಪ್ರಮುಖ ತಾಣಗಳು. ಪಾಕಿಸ್ತಾನದಲ್ಲಿ ಸದ್ಯಕ್ಕಿರುವ


೧೯೫೯ರಿಂದ ೧೯೯೭ರವರೆಗೆ ಭಾರತದ ವಿದೇಶಾಂಗ ಸೇವೆಯಲ್ಲಿದ್ದ ಸಿ. ವಿ. ರಂಗನಾಥನ್ ಚೀಣಾ ಮತ್ತು ಫ್ರಾನ್ಸ್‌ಗಳಲ್ಲಿ ಭಾರತದ ರಾಯಭಾರಿಯಾಗಿದ್ದರು ಹಾಗೂ ಇನ್ನಿತರ ಅನೇಕ ದೇಶಗಳಲ್ಲಿ ರಾಯಭಾರ ಕಚೇರಿಗಳಲ್ಲಿ ಕೆಲಸ ಮಾಡಿದ್ದಾರೆ. ೨೦೦೮ರಲ್ಲಿ ಎರಡನೇ ಮುದ್ರಣ ಕಂಡ 'ಭಾರತ- ಚೀಣಾ: ಮುಂದಿನ ಹಾದಿ' ಎಂಬ ಪುಸ್ತಕದ ಸಹ - ಲೇಖಕರಾದ ಶ್ರೀಯುತರು ಪ್ರಸ್ತುತ ಪ್ರಧಾನ ಮಂತ್ರಿಗಳು ನೇಮಿಸಿರುವ ಭಾರತ - ಚೀಣಾ ಪ್ರತಿಷ್ಠಿತ ವ್ಯಕ್ತಿಗಳ ಸಮುದಾಯದ ಸಹ - ಅಧ್ಯಕ್ಷರಾಗಿ ಇದ್ದಾರೆ.

ಸಿ. ವಿ. ರಂಗನಾಥನ್

ತೀವ್ರ ರಾಜಕೀಯ ಬಿಕ್ಕಟ್ಟು ಅಂತರರಾಷ್ಟ್ರೀಯವಾಗಿ ಆಳವಾದ ಅಮೆರಿಕಾ ವಿರೋಧಿಭಾವನೆಯನ್ನು ಬೆಳೆಸುತ್ತಿದೆ. ಇಂತಹ ಹಿನ್ನೆಲೆಯಲ್ಲಿ ಭಾರತವು ಬಯಸಬಹುದಾದ ಉತ್ತಮ ಬೆಳವಣಿಗೆಗಳು ಆಯಾ ದೇಶಗಳ ಜನರೇ ಸ್ವತಃ ನಿರ್ಮಿಸಬೇಕಾದಂಥವು ; ಅವೆಂದರೆ ಸೌಮ್ಯ ವ್ಯವಸ್ಥೆಯ ಪುನರ್‌ಸ್ಥಾಪನೆ, ಅಸ್ತಿತ್ವದಲ್ಲಿರುವ ರಾಜಕೀಯ ಪಕ್ಷಗಳು ಅಧಿಕಾರ ಪಡೆಯಲು ಅವಕಾಶಗಳು, ಸೈನ್ಯದ ತುಕಡಿಗಳು ತಮ್ಮ ಪಾಳೆಯಗಳಿಗೆ ಹಿಂದಿರುಗುವುದು ಮತ್ತು ಆಯಾ ದೇಶಗಳಲ್ಲಿ ಆಡಳಿತ ಯಂತ್ರದಲ್ಲಿ ಸೈನ್ಯದ ಪಾತ್ರದಲ್ಲಿ ಮಹತ್ವದ ಇಳಿಕೆ ಹಾಗೂ ನಾಗರಿಕ ಆಡಳಿತದ ಮರುಸ್ಥಾಪನೆ. ಇದಕ್ಕೆ ಕೆಲವು ಪೂರಕ ಸನ್ನಿವೇಶಗಳ ರಚನೆ ಅಗತ್ಯವಾಗಿದೆ. ಭಾರತದ ನೆರೆಹೊರೆಯ ದೇಶಗಳು ಭಾರತದ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯನ್ನು ಮೇಲ್ಪಂಕ್ತಿಯಾಗಿ ಮಾಡಿಕೊಂಡು ತಾವೂ ಅಭಿವೃದ್ಧಿ ಹೊಂದಲು ಸಾಧ್ಯವಿದೆ. ಅದಕ್ಕೆ ಅನುವಾಗುವಂತಹ ದ್ವಿಪಕ್ಷೀಯ ಸಂಬಂಧಗಳು ಎರಡು ಬಗೆಯವಾಗಿವೆ. ಒಂದು, ನೇರವಾಗಿ ಭಾರತದೊಂದಿಗೆ ಸಂಧಾನ; ಇನ್ನೊಂದು ದಕ್ಷಿಣ ಏಷ್ಯಾ ಪ್ರಾದೇಶಿಕ ಸಂಸ್ಥೆ (ಸಾರ್ಕ್) ನೀಡಬಹುದಾದ ನೆರವಿನೊಂದಿಗೆ ಅಭಿವೃದ್ಧಿ.

ಈ ದೇಶಗಳಲ್ಲಿ ನಾಗರಿಕ ಆಡಳಿತ ವ್ಯವಸ್ಥೆಯನ್ನು ಜಾರಿಗೊಳಿಸಲು ಭಾರತ ಮತ್ತು ಚೀಣಾಗಳು ಸ್ವತಃ ಸಮರ್ಥವಲ್ಲವೆಂಬುದು ನಿಜ; ಆ ಆಡಳಿತಗಳು ಅಲ್ಲಿಯ ಜನರಿಗೆ ಒಪ್ಪಿಗೆಯಾಗುವಂತಿರಬೇಕಾದ ಅಗತ್ಯವೂ ಇದೆ. ಆಗತಾನೆ ಅಲ್ಲಿ ಶಾಂತಿ ನೆಲೆಸಿ, ಆರ್ಥಿಕ ಅಭಿವೃದ್ಧಿ ಮತ್ತು ಸ್ಥಿರತೆಗಳತ್ತ ಮುನ್ನಡೆಯಲು ಸಾಧ್ಯ. ಇದನ್ನು ಸಾಧಿಸಬಲ್ಲವರು ಆಯಾ ದೇಶಗಳ ಜನರು ಮಾತ್ರ. ಆದಾಗ್ಯೂ, ಇದರಲ್ಲಿ ಚೀಣಾ ಒಂದು ಮಹತ್ವದ ಪಾತ್ರ ವಹಿಸಲು ಶಕ್ಯವಿದೆ; ಅದೇನೆಂದರೆ, ಆ ಎಲ್ಲ ದೇಶಗಳೊಡನೆ ಸಂಬಂಧಗಳನ್ನು ಬೆಳೆಸುವಾಗ ಚೀಣಾ ಆ ದೇಶಗಳ ಜನರ ಪರವಾದ ನೀತಿಯನ್ನು ಅಳವಡಿಸಿಕೊಳ್ಳುವುದು; ಕೇವಲ ಅಧಿಕಾರದಲ್ಲಿರುವವರ ಪರವಾದ ನೀತಿಯನ್ನು ಕೈಬಿಡಬೇಕು. ದಕ್ಷಿಣ ಏಷ್ಯಾದ, ಅಂದರೆ ಭಾರತ ಮತ್ತು ಚೀಣಾ ದೇಶಗಳನ್ನು ಸುತ್ತುವರಿದಿರುವ, ದೇಶಗಳಲ್ಲಿ ಪ್ರಚಲಿತವಾಗಿರುವ ಜನರ ಅಸಮಾಧಾನವನ್ನು ಕಂಡು ಚೀಣಾ ತನ್ನ ಸಮಕಾಲೀನ ನೀತಿಗಳನ್ನು ರೂಪಿಸಿಕೊಳ್ಳುವಲ್ಲಿ ಪಾಠ ಕಲಿಯಬೇಕು. ಮಿಲಿಟರಿ ಆಡಳಿತಗಳಿರುವ ದೇಶಗಳನ್ನು ಕುರಿತಂತೆ ಚೀಣಾ ಈವರೆಗೆ ಅನುಸರಿಸಿಕೊಂಡು ಬಂದಿರುವ ನೀತಿಯೆಂದರೆ ಅವುಗಳಿಗೆ ಶಸ್ತ್ರಾಸ್ತ್ರಗಳ ಪೂರೈಕೆ ಮಾಡುವುದು. ನಿರ್ದಿಷ್ಟವಾಗಿ ಪಾಕಿಸ್ತಾನದ ಬಗ್ಗೆ ಹೇಳುವುದಾದರೆ, ಚೀಣಾ ಆ ದೇಶದ ಮಿಲಿಟರಿ ಆಡಳಿತಕ್ಕೆ ಪರಮಾಣು ಅಸ್ತ್ರಗಳ ನಿರ್ಮಾಣದಲ್ಲಿ ಮತ್ತು ಆ ಅಸ್ತ್ರಗಳನ್ನು ಬಳಸಲು ಬೇಕಾದ ಕ್ಷಿಪಣಿಗಳ ರಚನೆಗೆ ಸಹಕಾರ ನೀಡಿದೆ. ಈ ನೀತಿಗಳು ಭಾರತಕ್ಕೆ ತೀರಾ ಮಾರಕವಾದುವು; ಅದರ ಪ್ರತಿಬಂಧನೆಗಾಗಿ ಭಾರತವು ಕೆಲ ಕ್ರಮಗಳನ್ನು ತೆಗೆದುಕೊಳ್ಳುವುದು ಅನಿವಾರ್ಯವಾಗಿತ್ತು. ದೇಶದ ಸಾಮಾಜಿಕ - ಆರ್ಥಿಕ ಅಭಿವೃದ್ಧಿ ತೊಡಗಿಸಬೇಕಾದ ಹಣವನ್ನು ಈ ಕ್ರಮಗ ನಿರ್ವಹಣೆಗೆ ಖರ್ಚು ಮಾಡಬೇಕಾಗಿ ಬಂದಿರ ಭಾರತಕ್ಕೆ ಮುಗ್ಗಟ್ಟನ್ನುಂಟುಮಾಡಿದೆ. ಪಾಕಿಸ್ತಾ ಬಂಗ್ಲಾದೇಶ ಮತ್ತು ಮ್ಯಾನ್ಮಾರ್‌ಗಳಲ್ಲಿ ಸದ್ಯ ಮಿಲಿಟರಿ ಆಡಳಿತಗಳಿವೆ; ಪಾಕಿಸ್ತಾನದಲ್ಲಿ ಅಸ್ಥಿರತೆಯ ಛಾಯೆಯು ದಟ್ಟವಾಗಿದೆ. ಇಂತಹ ಹಿನ್ನೆಲೆಯ ಮಾರಕಾಸ್ತ್ರಗಳು ತಪ್ಪು ಜನರ ಕೈಗೆ ಸಿಕ್ಕಿದರೆ ಮಹತ್ತ ಅಪಾಯಕಾರಿ ಗಂಡಾಂತರವಿರುತ್ತದೆ. ಆದ್ದರಿಂ ಚೀಣಾ ಶೀಘ್ರವಾಗಿ ತನ್ನ ಹಿಂದಿನ ನೀತಿಗಳ ಬದಲಾಯಿಸಿಕೊಳ್ಳಬೇಕು ಮತ್ತು ಭವಿಷ್ಯ ಕ್ರಮಗಳನ್ನು ಗಾಢವಾಗಿ ಆಲೋಚಿ ತೀರ್ಮಾನಿಸಬೇಕು. ಪಾಕಿಸ್ತಾನದಲ್ಲಿ ನೆಲೆಗೊಂಡಿರು ಭಯೋತ್ಪಾದನೆಯು ಚೀಣಾದ ಪಶ್ಚಿಮ ಭಾಗ ಕ್ಸಿಂಜಿಯಾಂಗ್ ಪ್ರಾಂತ್ಯದ ಮೇಲೆ ಉಗ್ರ ಪರಿಣಾ ಬೀರಿದೆ. ಆ ಪ್ರಾಂತ್ಯದಲ್ಲಿ ಮುಸಲ್ಮಾನ ಬಹುಸಂಖ್ಯಾತರು. ಈಚಿನ ವರ್ಷಗಳಲ್ಲಿ ಭಾರ ಮತ್ತು ಚೀಣಾ ನಡುವಣ ಸಂಬಂಧಗಳ ಪ್ರವರ್ಧಮಾನಕ್ಕೆ ಬಂದಿದ್ದು ಪರಸ್ಪರರ ಬಗ್ಗೆ ಒಳ್ಳೆಯ ತಿಳಿವಳಿಕೆ ಮೂಡಿದೆ. ಹೀಗಿರುವಾಗ ಎರಡು ದೇಶಗಳ ನೇತಾರರು ಅರ್ಥವತ್ತಾದ ಸಂವಾದಗಳ


ATTENTION

PUBLISHERS AND RETAIL BOOKSELLERS

Contact us for Distribution/Purchase of Books of General Interest



Rs. 22


Rs. 75


Vol. 1&2
Rs. 295 per set



Rs. 95



Rs. 75



Rs. 35



Rs. 35



Rs. 120

OVER 5,000 TITLES BY INDIAN & FOREIGN PUBLISHERS
AVAILABLE AT WHOLESALE PRICES




Kohinoor Book Distributors
6/2, Railway Parallel Road, Kumara Park East
Bangalore - 560 001 ✆ : 22261691, 51138691
e-mail : kohinoorbooks@yahoo.co.in



Rs. 30

ೊಡಗುವುದು ಅವಶ್ಯಕ. ನಮ್ಮೆರಡು ದೇಶಗಳು ರಸ್ಪರರಿಗೆ ಪೆಟ್ಟು ಬೀಳುವಂತಹ ಯಾವ ಕ್ರಮವನ್ನೂ ಗೆದುಕೊಳ್ಳದಿರುವುದು ಆಗ ಸಾಧ್ಯವಾಗುತ್ತದೆ.

ಆಗ್ನೇಯ ಮತ್ತು ಪೂರ್ವ ಏಷ್ಯಾಗಳಲ್ಲಿ ಪರಿಸ್ಥಿತಿಯು ೆಚ್ಚು ಸಕಾರಾತ್ಮಕವಾಗಿದೆ. ಆಗ್ನೇಯ ಏಷ್ಯಾದ ಹತ್ತು ೇಶಗಳು ಆಗ್ನೇಯ ಏಷ್ಯಾ ದೇಶಗಳ ಸಂಘದಲ್ಲಿ ಆಸಿಯಾನ್) ಸೇರ್ಪಡೆಗೊಂಡಿವೆ. ಭಾರತ-ಚೀನಾ ಂಬಂಧಗಳು ಉತ್ತಮಗೊಳ್ಳುತ್ತಿರುವುದನ್ನು ಈ ಂಘದ ದೇಶಗಳು ಹರ್ಷದಿಂದ ಸ್ವಾಗತಿಸಿವೆ. ಭಾರತ ುತ್ತು ಚೀನಾದ ಆರ್ಥಿಕ ಬೆಳವಣಿಗೆಯನ್ನು ಸಾಧನ ವನ್ನಾಗಿ ಮಾಡಿಕೊಂಡು ಇಡೀ ಆಸಿಯಾನ್ ದೇಶಗಳು ಾಭ ಪಡೆಯಲು ಆಶಿಸುತ್ತವೆ. ಸಿಂಗಪೂರದ ಮಾಜಿ ಪ್ರಧಾನಿ ಗೋಹ್ ಚೋಕ್ ಟೋಂಗ್ ಹಿಂದೊಮ್ಮೆ ಆಸಿಯಾನ್ ದೇಶಗಳನ್ನು ಒಂದು ದೊಡ್ಡ ವಿಮಾನಕ್ಕೆ ಹೋಲಿಸಿದ್ದರು; ಆ ವಿಮಾನಕ್ಕೆ ಭಾರತ ಮತ್ತು ಚೀನಾ ಎರಡು ರೆಕ್ಕೆಗಳಂತೆ ಕೆಲಸಮಾಡುತ್ತವೆಂದು ಅವರು ಹೇಳಿದ್ದರು. ಆಸಿಯಾನ್ ದೇಶಗಳೊಡನೆ ಚೀನಾದ ವ್ಯಾಪಾರ ಪ್ರಮಾಣವು ಭಾರತದ್ದಕ್ಕಿಂತಲೂ ಹೆಚ್ಚಿನದು; ಅಂತೆಯೇ ಬಂಡವಾಳ ಹೂಡಿಕೆ ಕೂಡ; ಆದರೂ ಸೇವಾ ಕ್ಷೇತ್ರದಲ್ಲಿ ಭಾರತವು ಹೆಚ್ಚಿನ ಸ್ಥಾನ ಪಡೆಯ ಬಹುದೆಂದು ಆಸಿಯಾನ್ ದೇಶಗಳು ಭಾವಿಸುತ್ತವೆ. ಅಂತೆಯೇ ಅತಿ ಪರಿಚ್ಛಿನ್ನವಾದ ಇಂಜಿನಿಯರಿಂಗ್ ಕ್ಷೇತ್ರ, ನೂತನ ಜ್ಞಾನ ಉದ್ಯಮಗಳು, ಜೀವ - ತಂತ್ರಜ್ಞಾನ, ಮುಂತಾದ ವಿಭಾಗಗಳಲ್ಲಿ ಭಾರತವು ಮಹತ್ವದ ಕೊಡುಗೆ ನೀಡಬಲ್ಲುದೆಂದು ಈ ದೇಶಗಳು ನಿರೀಕ್ಷಿಸುತ್ತವೆ. ಇನ್ನೂ ಮುಖ್ಯವಾಗಿ ಭಾರತ ಮತ್ತು ಚೀನಾ ಆಸಿಯಾನ್ ವಲಯದಲ್ಲಿ ಜಿಹಾದಿ ಭಯೋತ್ಪಾದನೆಯನ್ನು ಎದುರಿಸಲು ಹಾಗೂ ಭದ್ರತೆಯನ್ನು ನೀಡಲು ಸಮರ್ಥವಾಗಿವೆಯೆಂದು ಬಗೆದು ಆ ಎರಡೂ ರಾಷ್ಟ್ರಗಳು ಸಹಕಾರ ತತ್ತ್ವದ ಆಧಾರದ ಮೇಲೆ ಕೆಲಸ ಮಾಡಬೇಕೆಂದು ಬಯಸುತ್ತವೆ. ಜೊತೆಗೆ ಈ ಪ್ರದೇಶದ ಸಮುದ್ರದಲ್ಲಿ ನಾವೆಗಳನ್ನು ಲೂಟಿಮಾಡುವುದನ್ನು ತಡೆಗಟ್ಟಲು, ಮಾದಕ ದ್ರವ್ಯಗಳು ಮಾರುಕಟ್ಟೆಗೆ ಬರುವುದನ್ನು ತಡೆಯಲು ಹಾಗೂ ಇಂತಹ ಬೇರೆ ಅಪರಾಧಿ ಕೃತ್ಯಗಳನ್ನು ತಡೆಗಟ್ಟಲು ಭಾರತ ಮತ್ತು ಚೀನಾ ಸಹಕರಿಸ ಬೇಕೆಂದು ಆಸಿಯಾನ್ ದೇಶಗಳು ಅಪೇಕ್ಷಿಸುತ್ತವೆ. ಈಗಾಗಲೆ ಭಾರತವು ಆಸಿಯಾನ್ ದೇಶಗಳ ಜೊತೆ ಮಿಲಿಟರಿ ಸಂಬಂಧಗಳನ್ನು ವಿಸ್ತರಿಸಿಕೊಂಡಿದೆ ಮತ್ತು ವ್ಯಾಪಾರ, ಬಂಡವಾಳ ಹೂಡಿಕೆ ಹಾಗೂ ವಿಶಾಲವಾದ ಆರ್ಥಿಕ ವಿಷಯಗಳನ್ನು ಕುರಿತಂತೆ ಅನೇಕ ಒಪ್ಪಂದ ಗಳನ್ನು ಮಾಡಿಕೊಳ್ಳುವ ಹಂತದಲ್ಲಿದೆ.

ಇನ್ನೂ ಪೂರ್ವಕ್ಕೆ ಹೋದರೆ, ಭಾರತವು ಪೂರ್ವ ಏಷ್ಯಾ ಶಿಖರ ಸಮ್ಮೇಳನಗಳಲ್ಲಿ ಭಾಗಿದಾರ ರಾಷ್ಟ್ರ ವಾಗಿದೆ. ಈ ಬಣದಲ್ಲಿ ಆಸಿಯಾನ್‌ನ ಹತ್ತು ದೇಶ ಗಳಲ್ಲದೆ ಚೀನಾ, ದಕ್ಷಿಣ ಕೊರಿಯಾ, ಜಪಾನ್, ಆಸ್ಟ್ರೇಲಿಯ ಮತ್ತು ನ್ಯೂಜಿಲೆಂಡ್ ಸೇರಿವೆ. ವಿಶಾಲ ತಳಹದಿಯಲ್ಲಿ ಏಷ್ಯಾದ ಆರ್ಥಿಕ ಐಕ್ಯತೆಯನ್ನು ಸಾಧಿಸಲು ಪ್ರಾಥಮಿಕ ಹಂತದ ಚರ್ಚೆಗಳು ಆಗಲೆ ನಡೆಯುತ್ತಿವೆ. ಈ ಕಾರ್ಯಕ್ರಮದ ಅಂಗವಾಗಿ

# ಕನ್ನಡ



'ಅ' ಎಂಥ
ಮಧುರ ಅಕ್ಷರ
'ಅ' ಕಾರದಿಂದ
'ಱ' ಬಾಯ್ತುಂಬ
ಹೊರಳಾಡಿ
ಬಂದರೆ
ಅದೆಂಥ ಸವಿ
ಬಾಯಿಗೆ
ಸವಿದವನಿಗೆ
ಗೊತ್ತು
ಅದರ ಗಮ್ಮತ್ತು.

ಕಮಲುಂಬರಸು.

ಭಾರತದಿಂದ ಹಿಡಿದು ಶಾಂತಸಾಗರದವರೆಗಿನ ಎಲ್ಲ ದೇಶಗಳೂ ಒಳಗೊಳ್ಳುವಂತಿರಬೇಕೆಂಬುದು ಅಂತರ್ಗತ ಆಶಯವಾಗಿದೆ. ಜನ, ವ್ಯಾಪಾರ, ಜ್ಞಾನ ಭಂಡಾರ ಮತ್ತು ಸಂಸ್ಕೃತಿ, ಇವೆಲ್ಲಾ ಮುಕ್ತವಾಗಿ ಹರಿದಾಡುತ್ತಿರಬೇಕೆಂದು ಭಾರತದ ಪ್ರಧಾನಿ ೨೦೦೫ರ ಮೊದಲ ಶೃಂಗಸಭೆಯಲ್ಲಿ ಪ್ರಸ್ತಾಪಿಸಿದ್ದರು.

ಬೃಹತ್ತಾದ ಇನ್ನೊಂದು ಪ್ರದೇಶವಿದೆ: ಅದು ಮಧ್ಯ ಏಷ್ಯಾ. ಭಾರತಕ್ಕೆ ಅದು ಬಹಳ ಮಹತ್ವದ ಪ್ರದೇಶ. ಅಲ್ಲಿ ಮಧ್ಯ ಏಷ್ಯಾ, ಚೀನಾ ಮತ್ತು ರಷ್ಯಾ ಸೇರಿ ಷಾಂಘೈ ಸಹಕಾರ ಸಂಸ್ಥೆಯನ್ನು ರಚಿಸಿಕೊಂಡಿವೆ. ಕಜಕ್‌ಸ್ತಾನ್, ಕಿರಿಗಿಜ್‌ಸ್ತಾನ್, ಉಜ್ಬೆಕಿಸ್ತಾನ ಮತ್ತು ತಜಕಿಸ್ತಾನ್, ನಾಲ್ಕು ಮಧ್ಯ ಏಷ್ಯಾದ ದೇಶಗಳು, ಹಿಂದೆ ಸೋವಿಯತ್ ಒಕ್ಕೂಟದ ಭಾಗವಾಗಿದ್ದವು. ಭೌಗೋಳಿಕವಾಗಿ ಇವು ಬಹಳ ಆಯಕಟ್ಟಿನ ಪ್ರದೇಶದಲ್ಲಿವೆ. ಪ್ರಾಕೃತಿಕ ಸಂಪತ್ತು ಹೇರಳವಾಗಿರುವ ದೊಡ್ಡ ಪ್ರದೇಶ ಇದು; ಭಾರತಕ್ಕೆ ಅವಘಡ ಉಂಟು ಮಾಡಬಹುದಾದಂತಹ ಪ್ರದೇಶವೂ ಆಗಬಹುದು. ಅಲ್ಲಿಂದ ಉದ್ಭವಿಸುವ ಸಮಸ್ಯೆಗಳೆಂದರೆ ಮತ ಧಾರ್ಮಿಕ ತೀವ್ರಗಾಮಿತನ, ಪ್ರತ್ಯೇಕತೆಯ ಕೂಗು, ಭಯೋತ್ಪಾದನೆ, ಇತ್ಯಾದಿ. ಈ ಸಮಸ್ಯೆಗಳು ಹುಟ್ಟಿದ ರಾಷ್ಟ್ರಗಳನ್ನು ಬಾಧಿಸುವುದಿನಲ್ಲಿ, ಅವು ಬೇರೆ ದೇಶ ಗಳಿಗೂ ಹಬ್ಬುವ ಸಾಧ್ಯತೆಯುಂಟು. ಉದಾಹರಣೆಗೆ, ಅಫ್ಘಾನಿಸ್ತಾನ. ನಂತರ ಅದು ಭಾರತದ ನೆರೆರಾಷ್ಟ್ರವಾದ ಪಾಕಿಸ್ತಾನಕ್ಕೂ ಹರಡಿಕೊಳ್ಳುತ್ತದೆ. ಷಾಂಘೈ ಸಹಕಾರ ಸಂಸ್ಥೆಯಲ್ಲಿ ಭಾರತಕ್ಕೆ ವೀಕ್ಷಕನ ಸ್ಥಾನವಿರುವುದು ಒಂದು ರೀತಿ ಅನುಕೂಲ. ಆ ಪ್ರದೇಶದಲ್ಲಿ ಹುಟ್ಟಿಕೊಳ್ಳ ಬಹುದಾದ ಸಮಸ್ಯೆಗಳನ್ನು ಕಡಿಮೆಗೊಳಿಸಲು ಭಾರತವು ಯತ್ನಿಸಬಹುದಾಗಿದೆ. ಅಂತೆಯೇ, ಈ ಸಂಘದ ಸದಸ್ಯ ರಾಷ್ಟ್ರಗಳೊಂದಿಗೆ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಬಂಧಗಳನ್ನು ಬೆಳೆಸಿಕೊಳ್ಳಲು ಇದು ಅನುವುಮಾಡಿಕೊಡುತ್ತದೆ.

ಇದೆಲ್ಲವನ್ನೂ ಪರಿಶೀಲಿಸಿದಾಗ ಒಂದಂಶವು ಸ್ಪಷ್ಟವಾಗುತ್ತದೆ : ಮಧ್ಯ ಏಷ್ಯಾ, ದಕ್ಷಿಣ ಏಷ್ಯಾಗಳಿಂದ ಹಿಡಿದು ಆಗ್ನೇಯ ಮತ್ತು ಪೂರ್ವ ಏಷ್ಯಾಗಳನ್ನೆಲ್ಲಾ ಆವರಿಸುವಂತಹ ಸನ್ನಿವೇಶವೊಂದು ನಮ್ಮ ಮುಂದಿದೆ. ಈ ಇಡೀ ಪ್ರದೇಶದಲ್ಲಿ ಭಾರತ ಮತ್ತು ಚೀನಾಗಳೆರಡು ದೇಶಗಳಿಗೂ ಆಸಕ್ತಿಯ ಹಲವು ವಿಷಯಗಳಿವೆ. ಈ ಸನ್ನಿವೇಶವನ್ನು ಭಾರತಕ್ಕೆ ಫಲದಾಯಕವನ್ನಾಗಿ ಪರಿವರ್ತಿಸುವ ರಾಜಕೀಯ ಮತ್ತು ರಾಯಭಾರ ಸವಾಲನ್ನು ನಾವು ಅಂಗೀಕರಿಸಬೇಕು. ಈ ದೃಷ್ಟಿಯಿಂದ ಭಾರತ ಮತ್ತು ಚೀನಾಗಳ ನಡುವೆ ಪರಸ್ಪರ ಸಹಕಾರವು ಅತ್ಯಗತ್ಯ. ಮೇಲೆ ನಮೂದಿಸಿದ ಎಲ್ಲ ರಾಷ್ಟ್ರಗಳೂ ಎರಡೂ ದೇಶಗಳ ಆಸುಪಾಸಿನಲ್ಲಿವೆ. ಕೆಲವು ಸಮಾನ ಗಡಿಯುಳ್ಳವು, ಮಿಕ್ಕವು ನೆರೆಹೊರೆಯ ದೇಶಗಳು. ಎರಡು ಸಾವಿರ ವರ್ಷಗಳ ಹಿಂದಕ್ಕೆ ಹೋಗಿ ನೋಡಿದರೆ ಈ ಪ್ರದೇಶಗಳಲ್ಲಿ ಭಾರತ ಮತ್ತು ಚೀನಾ ಅತ್ಯಂತ ಶ್ರೀಮಂತವಾದ ಸಹಯೋಗವನ್ನು ಪ್ರದರ್ಶಿಸಿದ್ದುದು ಕಾಣಬರುತ್ತದೆ. ಭಾರತದಿಂದ ಬೌದ್ಧಮತವು ಚೀನಾಕ್ಕೆ ಹರಡಿದ್ದು ಅಂತಹ ಸಹಯೋಗದ ಒಂದು ನಿದರ್ಶನ. ಅದಲ್ಲದೆ ವ್ಯಾಪಾರ, ಲಲಿತ ಕಲೆಗಳು, ವೈದ್ಯಕೀಯ, ವಿಜ್ಞಾನ ಮುಂತಾದ ಕ್ಷೇತ್ರಗಳಲ್ಲೂ ಸಾಕಷ್ಟು ಅಗಾಧವಾದ ಕೊಡು-ಕೊಳೆಗಳಿದ್ದುವು. ಎರಡೂ ದೇಶಗಳ ಜೀವನ ವಿಧಾನದ ಮೇಲೆ ಇದರ ಪ್ರಭಾವವು ದಟ್ಟವಾಗಿದ್ದಿತು. ಆದ್ದರಿಂದ ನಾವಿಂದು ಒಂದು ಪ್ರಶ್ನೆಯನ್ನು ಹಾಕಿಕೊಳ್ಳಬೇಕು : ವರ್ತಮಾನ ಮತ್ತು ಭವಿಷ್ಯಗಳಲ್ಲಿ ಭಾರತ ಮತ್ತು ಚೀನಾ ತಮ್ಮ ಭೂತಕಾಲದ ಸಂಬಂಧ ಗಳಿಗಿಂತಲೂ ಆಳವಾದ ಮತ್ತು ಅರ್ಥವತ್ತಾದ ಸಂಬಂಧಗಳನ್ನು ಬೆಳೆಸಿಕೊಳ್ಳಲು ಸಾಧ್ಯವಾಗಬಹುದೆ ? ಹಿಂದೆ ಪರಸ್ಪರ ಚಲನೆಯು ಉನ್ನತಮಟ್ಟದಲ್ಲಿತ್ತು; ಇಲ್ಲಿಯವರು ಅಲ್ಲಿಗೆ, ಅಲ್ಲಿಯವರು ಇಲ್ಲಿಗೆ, ವಿಪುಲವಾಗಿ ಹೋಗಿಬರುತ್ತಿದ್ದುದುಂಟು. ಸಂಪರ್ಕ ಸಾಧನೆಗಳು ಇನ್ನೂ ಹೆಚ್ಚು ಮುಂದುವರಿದಿರುವ ಇಂದಿನ ಸಂದರ್ಭದಲ್ಲಿ ಪರಸ್ಪರ ಸಂಬಂಧಗಳು ಇನ್ನೂ ಗಾಢವಾಗಿ ಬೆಸೆಯಲ್ಪಡಬೇಡವೆ ?

ಸಿ. ಎ. ರಂಗನಾಥನ್
ಬಿ-೦೨೦೩, ಮ್ಯಾಗ್ನೋಲಿಯ ಬ್ರಿಗೇಡ್ ಮಿಲೆನಿಯಂ
ಪುಟ್ಟೇನಹಳ್ಳಿ ಮುಖ್ಯರಸ್ತೆ, ಜೆ.ಪಿ. ನಗರ ೭ನೆಯ ಹಂತ
ಬೆಂಗಳೂರು - ೫೬೦ ೦೭೮

# ಕಾಮಧೇನು ಪುಸ್ತಕ ಭವನ

ಶಾಸಕರ ಭವನದ ಆವರಣ, ಬೆಂಗಳೂರು - 560 001

ನಮ್ಮ ಹೊಸ ಪ್ರಕಟಣೆ ಇದೀಗ ಸಿದ್ಧವಾಗುತ್ತಿದೆ

## ಕುಮಾರ ವ್ಯಾಸ ಭಾರತ – ತಾತ್ಪರ್ಯ ಸಹಿತ

ಈ ಕೃತಿಯ ವಿಶೇಷಗಳು

- ಘನವಿದ್ವಾಂಸರಾದ ಶ್ರೀ ಅ.ರಾ.ಸೇ.ರವರು ಸಂಪಾದಿಸಿ ಪ್ರತಿ ಪದ್ಯಕ್ಕೂ ಸರಳ ಗದ್ಯಾನುವಾದ ಮಾಡಿದ್ದಾರೆ.
- ಪ್ರಸಿದ್ಧ ಕಲಾವಿದರಾದ ಶ್ರೀ ಗಂಜೀಫಾ ರಘುಪತಿಭಟ್ಟರು ಬರೆದಿರುವ 200ಕ್ಕೂ ಹೆಚ್ಚು ರೇಖಾಚಿತ್ರಗಳು ಕೃತಿಯಾದ್ಯಂತವೂ ಸಾಂದರ್ಭಿಕವಾಗಿ ಮೂಡಿಬಂದಿವೆ.
- 1/4 ಡೆಮಿ ಆಕಾರದಲ್ಲಿ 1500 ಪುಟಗಳಿಗೂ ಮಿಕ್ಕ ಈ ಕೃತಿ ಉತ್ತಮ ಕಾಗದ, ಉತ್ತಮ ಮುದ್ರಣ, ಉತ್ತಮ ವಿನ್ಯಾಸ ಹಾಗೂ ಆಕರ್ಷಕ ರಕ್ಷಾಕವಚದೊಂದಿಗೆ ಸರ್ವಾಂಗ ಸುಂದರವಾಗಿ ಮೂಡಿ ಬರಲಿದೆ.
- ಆಸಕ್ತರು ಮುಂಗಡವಾಗಿ ಸಂಪರ್ಕಿಸಬಹುದು. ಜಂಗಮವಾಣಿ : 94494 46328






ಹಾರ್ದಿಕ ಶುಭಾಶಯಗಳು

# ಹೋಟೆಲ್ ಉದ್ಯಮದಾರರ ಸಹಕಾರ ಬ್ಯಾಂಕ್ ನಿಯಮಿತ

ಸ್ಥಾಪನೆ: 1966 'ಸಹಕಾರ ಸೌರಭ', 234, 2ನೇ ಕ್ರಾಸ್, 4ನೇ ಮುಖ್ಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು - 560 018. ☎ 26678329 / 26612482

**ದಿನಾಂಕ: 31-03-2007ಕ್ಕೆ ಬ್ಯಾಂಕಿನ ಆರ್ಥಿಕ ಪ್ರಗತಿ**

| | | ರೂ.ಲಕ್ಷಗಳಲ್ಲಿ |
|---|---|---|
| ಷೇರು ಬಂಡವಾಳ | : | 676 |
| ಆಪದ್ಧನ ನಿಧಿ ಮತ್ತು ಇತರೆ ನಿಧಿಗಳು | : | 1289 |
| ಠೇವಣಿಗಳು | : | 11035 |
| ದುಡಿಯುವ ಬಂಡವಾಳ | : | 13462 |
| ಸಾಲ ಮತ್ತು ಮುಂಗಡಗಳು | : | 8811 |
| ನಿವ್ವಳ ಲಾಭ | : | 330 |

**ಬ್ಯಾಂಕಿನ 2007 - 2008ನೇ ಸಾಲಿನ ಆಡಳಿತ ಮಂಡಳಿ**

ಅಧ್ಯಕ್ಷರು : ಶ್ರೀ ಪುಂಡಲೀನ ಹಾಲಂಬಿ
ಉಪಾಧ್ಯಕ್ಷರು : ಶ್ರೀ ಎಂ.ಆರ್.ಭಟ್
ನಿರ್ದೇಶಕರು :

1. ಶ್ರೀ ಪಿ.ಎನ್.ಶ್ರೀಪತಿ ರಾವ್
2. ಶ್ರೀ ಎಂ.ಎಸ್.ಜನಾರ್ಧನ ಕಾರಂತ
3. ಶ್ರೀ ಸುಬ್ಬರಾವ್
4. ಶ್ರೀ ಬಿ.ಎಸ್.ನಾಗರಾಜ ಧನ್ಯ
5. ಶ್ರೀ ಜಿ. ಪ್ರಕಾಶ್
6. ಡಾ|| ವಿಷ್ಣುಮೂರ್ತಿ ಐತಾಳ ಪಿ.
7. ಶ್ರೀ ಎಸ್ ಸುಬ್ರಮಣ್ಯ ಐತಾಳ
8. ಶ್ರೀ ಬಿ.ಎಸ್. ಮಂಜುನಾಥ
9. ಶ್ರೀ ಹೆಚ್.ಬಿ.ರಾಜೀವ ಶೆಟ್ಟಿ
10. ಶ್ರೀ ಕೆ. ಮುರಳೀಧರ
11. ಶ್ರೀ ಜಿ.ಡಿ.ನಿರ್ಮಲ ಕುಮಾರ
12. ಶ್ರೀಮತಿ ತಾರಾ ಎಸ್.ಐತಾಳ
13. ಶ್ರೀ ಎನ್.ರಾಜು

ಪ್ರಭಾರೆ ಕಾರ್ಯದರ್ಶಿ : ಶ್ರೀ ಕೆ. ಶ್ಯಾಮ ಸುಂದರ ಐತಾಳ

ಶಾಖೆಗಳು

ಪ್ರಧಾನ ಕಛೇರಿ ಚಾಮರಾಜಪೇಟೆ ಬೆಂಗಳೂರು - 560 018 ದೂರವಾಣಿ: 26678329 / 26612482

ಬಳೇಪೇಟೆ ಶಾಖೆ ಓ.ಟಿ.ಸಿ. ರಸ್ತೆ, ಬಳೇಪೇಟೆ ಸರ್ಕಲ್ ಬೆಂಗಳೂರು - 560 053 ದೂರವಾಣಿ: 22207204

ಜಯನಗರ ಶಾಖೆ ಜಯನಗರ 9ನೇ ಬ್ಲಾಕ್ ಬೆಂಗಳೂರು - 560 069 ದೂರವಾಣಿ: 26589888

ರಾಜಾಜಿನಗರ ಶಾಖೆ ಇಂಡಸ್ಟ್ರಿಯಲ್ ಟೌನ್ ಬೆಂಗಳೂರು - 560 044 ದೂರವಾಣಿ : 23383226

ಹಲಸೂರು ಶಾಖೆ ಪಳನಿ ಮೊದಲಿಯಾರ್ ರಸ್ತೆ ಹಲಸೂರು, ಬೆಂಗಳೂರು – 560 008 ದೂರವಾಣಿ : 25566859

# ಕರ್ನಾಟಕದಲ್ಲಿ ನೀರಾವರಿ

## ಒಂದು ಒಳನೋಟ





■ ರಾ. ಹೃಷೀಕೇಶ್

*ನೀರಾವರಿ ಯೋಜನೆಗಳ ಕಾಮಗಾರಿಗಳು ಜಲವಿವಾದ, ರಾಜಕೀಯ ವ್ಯವಸ್ಥೆಯ ಹಸ್ತಕ್ಷೇಪ ಮುಂತಾದ ಕಾರಣಗಳಿಂದ ಅನಗತ್ಯವಾಗಿ ವಿಳಂಬವಾಗುತ್ತಿದ್ದು ವೆಚ್ಚವೂ ಹೆಚ್ಚಾಗಿ ನಿರೀಕ್ಷಿತ ಪ್ರಗತಿ ಸಾಧಿಸಲಾಗುತ್ತಿಲ್ಲ. ಬಹುತೇಕ ನೀರಾವರಿ ಯೋಜನೆಗಳಲ್ಲಿ ಹೆಚ್ಚು ಪ್ರದೇಶಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ದೃಷ್ಟಿಯಿಂದ ಅರೆ ನೀರಾವರಿ ಬೆಳೆಗಳನ್ನು ಬೆಳೆಯಲು ಉದ್ದೇಶಿಸಲಾಗಿದೆ. ಆದರೆ ರೈತರು ಹೆಚ್ಚು ನೀರು ಬೇಕಾಗುವ ಭತ್ತ, ಕಬ್ಬು ಬೆಳೆಯುವುದರಿಂದ ನೀರಾವರಿ ಸೌಲಭ್ಯ ಯೋಜಿತ ಪ್ರದೇಶಗಳಿಗೆ ತಲುಪುತ್ತಿಲ್ಲ. ವಿನ್ಯಾಸ, ಗುಣಮಟ್ಟ ನಿಯಂತ್ರಣ, ಜಲಾಶಯ ಮತ್ತು ಕಾಲುವೆಗಳ ನಿರ್ವಹಣೆ ಬಗ್ಗೆ ಹೆಚ್ಚಿನ ಗಮನ ಕೊಡುತ್ತಿಲ್ಲ. ಹಿಂದೆ ಭೂಕಂದಾಯವೇ ರಾಜ್ಯ ಬೊಕ್ಕಸದ ಆದಾಯದಲ್ಲಿ ಸಿಂಹಪಾಲು ಆಗಿದ್ದುದರಿಂದ ಆಡಳಿತಗಾರರೂ, ರೈತರೂ ಹೆಚ್ಚಿನ ಆಸಕ್ತಿ ವಹಿಸುತ್ತಿದ್ದರು. ಈಗ ಪರಿಸ್ಥಿತಿ ಬದಲಾಗಿದ್ದು ನೀರಾವರಿ ಯೋಜನೆಗಳಿಂದ ನಿರೀಕ್ಷಿತ ಆದಾಯ ಬರುತ್ತಿಲ್ಲ.*

**ರು**

ನೀರು ಪ್ರಾಣಿಸಂಕುಲಕ್ಕೆ , ಇವುಗಳ ಆಹಾರವಾದ ಸಸ್ಯಸಂಕುಲಕ್ಕೆ ಅತ್ಯವಶ್ಯಕವಾದ ಪ್ರಕೃತಿದತ್ತ ಮೂಲ್ಯ ಸಂಪತ್ತು. ಉಳಿದ ಪ್ರಕೃತಿ ಸಂಪತ್ತುಗಳಂತೆ ಜಲಸಂಪತ್ತು ಮುಗಿದುಹೋಗುತ್ತದೆಂಬ ಯವಿಲ್ಲ. ಜಲಚಕ್ರದಂತೆ ಭೂಮಿಯ ಮೇಲೆ ಸಂಗ್ರಹವಾದ ನೀರು ಆವಿಯಾಗಿ, ಮೋಡವಾಗಿ, ಳೆಯಾಗಿ ಬೀಳುತ್ತದೆ. ಹವಾಮಾನ ವೈಪರೀತ್ಯದಿಂದ ಪ್ರತಿವರ್ಷವೂ ಬೀಳುವ ಮಳೆಯ ಮಾಣದಲ್ಲಿ ಏರಿಳಿತಗಳಿವೆ. ಹೆಚ್ಚಿನ ಮಳೆಯಾದಲ್ಲಿ ಪ್ರವಾಹ, ಕಡಿಮೆ ಮಳೆಯಾದಲ್ಲಿ ಕ್ಷಾಮ ಡುತ್ತದೆ. ಈ ಎರಡೂ ಸಂಕಷ್ಟಗಳಿಂದ ಪಾರಾಗಲು ಹೆಚ್ಚಿನ ನೀರನ್ನು ಕೆರೆಕಟ್ಟೆಗಳಲ್ಲಿ, ಲಾಶಯಗಳಲ್ಲಿ ಸಂಗ್ರಹಿಸಿ ಮಳೆಯಿಲ್ಲದ ಸಮಯದಲ್ಲಿ ಉಪಯೋಗಿಸಿಕೊಳ್ಳಬೇಕಾಗುತ್ತದೆ. ಾಮಿಯಲ್ಲಿ ಇಂಗಿ ಸಂಗ್ರಹವಾಗುವ ಅಂತರ್ಜಲವನ್ನು ತೆರೆದ ಬಾವಿಗಳು ಅಥವಾ ಕೊಳವೆ ವಿಗಳ ಮೂಲಕ ಬಳಸಲಾಗುತ್ತದೆ.

**ರ್ನಾಟಕದ ಜಲಸಂಪತ್ತು**

ಕರ್ನಾಟಕದ ಪ್ರಮುಖ ನದಿ ಕಣಿವೆಗಳ ವಿಸ್ತೀರ್ಣ ಮತ್ತು ಜಲಸಂಪತ್ತು ಹೀಗಿವೆ :

| ್ರಮ ಂಖ್ಯೆ | ನದಿ ಕಣಿವೆ | ವಿಸ್ತೀರ್ಣ (ಸಹಸ್ರ ಚದರ ಕಿಲೋಮೀಟರ್‌ಗಳಲ್ಲಿ) | ಶೇಕಡ | ವಾರ್ಷಿಕ ಸರಾಸರಿ ಜಲಸಂಪತ್ತು ಅಂದಾಜು (ಶತಕೋಟಿ ಘನ ಅಡಿ) | ಶೇಕಡ |
|---|---|---|---|---|---|
| ೧. | ಕೃಷ್ಣಾ | ೧೧೩.೫೦ | ೫೯.೬ | ೯೬೦ | ೨೭.೯ |
| ೨. | ಕಾವೇರಿ | ೩೪.೨೭ | ೧೮.೦ | ೪೦೦ | ೧೧.೬ |
| ೩. | ಗೋದಾವರಿ | ೪.೪೩ | ೨.೩ | ೫೦ | ೧.೫ |
| ೪. | ಪಶ್ಚಿಮಕ್ಕೆ ಹರಿಯುವ ನದಿಗಳು | ೨೪.೬೩ | ೧೨.೯ | ೨೦೦೦ | ೫೮.೧ |
| ೫. | ಉತ್ತರ ಪಿನಾಕಿನಿ | ೬.೯೪ | ೩.೬ | ೧೫ | ೦.೪ |
| ೬. | ದಕ್ಷಿಣ ಪಿನಾಕಿನಿ | ೩.೭೬ | ೨.೦ | ೯ | ೦.೩ |
| ೭. | ಪಾಲಾರ್ | ೨.೯೭ | ೧.೬ | ೬ | ೦.೨ |
| | ಒಟ್ಟು | ೧೯೦.೫೦ | ೧೦೦.೦ | ೩೪೪೦ | ೧೦೦.೦ |

## ಕರ್ನಾಟಕದಲ್ಲಿ ನೀರಾವರಿಯ ಬೆಳವಣಿಗೆ

ವಿಜಯನಗರದ ಅರಸ ಪ್ರೌಢಪ್ರತಾಪ ದೇವರಾಯನ ಮಂತ್ರಿ ಲಕ್ಷ್ಮೀಧರನು ಕೂಸಾಗಿದ್ದಾಗ ಅವನ ತಾಯಿ "ಕೆರೆಯಂ ಕಟ್ಟಿಸು ಬಾವಿಯಂ ಸವೆಸು" ಎಂದು ಹಾಡಿ ಹಾಲೆರೆಯುತ್ತಿದ್ದಳೆಂದು ಹಂಪಿಯ ಕಡಲೆಕಾಳು ಗಣೇಶನ ಗುಡಿಯ ಮುಂದಿನ ಅಗಸೆಯಲ್ಲಿರುವ ಶಾಸನ (ಕ್ರಿ.ಶ. ೧೪೧೧) ಹೇಳುತ್ತದೆ. ಕರ್ನಾಟಕದಲ್ಲಿನ ಕೆರೆ ನೀರಾವರಿಗೆ ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವಿದೆ. ಕನ್ನಡನಾಡನ್ನು ಆಳಿದ ಎಲ್ಲಾ ರಾಜವಂಶದವರೂ ಕೆರೆಗಳ ನಿರ್ಮಾಣಕ್ಕೆ ಹೆಚ್ಚಿನ ಪ್ರಾಶಸ್ತ್ಯಕೊಟ್ಟಿದ್ದಾರೆ. ಕೆರೆಗಳ ನಿರ್ಮಾಣವನ್ನು ರಾಜರು, ಮಂತ್ರಿಗಳು, ದಂಡನಾಯಕರು, ಸಾಮಂತರು, ಅಧಿಕಾರಿ ವರ್ಗದವರು, ದೇವಾಲಯಗಳು, ಧಾರ್ಮಿಕ ಗುರುಗಳೇ ಅಲ್ಲದೆ ಜನಸಾಮಾನ್ಯರೂ ಸ್ತ್ರೀಯರೂ ಮಾಡಿದರೆಂದು ಇತಿಹಾಸ ತಿಳಿಸುತ್ತದೆ. ಶ್ರೀರಾಮಾನುಜಾಚಾರ್ಯರು ಕಟ್ಟಿಸಿದರೆನ್ನಲಾದ ತೊಣ್ಣೂರು ಕೆರೆ (ಮಂಡ್ಯ ಜಿಲ್ಲೆ), ವಿಜಯನಗರದ ಅರಸರ ಕಾಲದಲ್ಲಿ ನಿರ್ಮಾಣವಾದ ಹಾವೇರಿ ಜಿಲ್ಲೆಯ ಮದಗಮಾಸೂರು ಕೆರೆ, ದಾವಣಗೆರೆ ಜಿಲ್ಲೆಯ ಸೂಳೆಕೆರೆ ಅಥವಾ ಶಾಂತಿಸಾಗರ ನಮ್ಮ ಹಿರಿಯರ ತಾಂತ್ರಿಕ ಕೌಶಲ್ಯಕ್ಕೆ ಸಾಕ್ಷಿಯಾಗಿವೆ. ಮದಗಮಾಸೂರು ಕೆರೆಯ ಕಟ್ಟೆ ಸುಮಾರು ನೂರು ಅಡಿ ಎತ್ತರ, ತಳದಲ್ಲಿ ೮೦೦ ಅಡಿ ಅಗಲ, ಮೇಲ್ಭಾಗದಲ್ಲಿ ೪೦೦ರಿಂದ ೬೦೦ ಅಡಿ ಅಗಲ, ಉದ್ದ ಸುಮಾರು ೧೮೫೦ ಅಡಿ. ತೂಬಿನ ನಿರ್ಮಾಣಕ್ಕೆ ಉಪಯೋಗಿಸಿರುವ ಒಂದೊಂದು ಕಲ್ಲುಸ್ತಂಭ ೨೦ ಟನ್ನುಗಳಷ್ಟು ತೂಕದವು. ಈ ಕೆರೆಗಳ ಅಗಾಧತೆಯನ್ನು, ತಂತ್ರಕೌಶಲವನ್ನು ಕಂಡು ಬ್ರಿಟಿಷ್ ಇಂಜಿನಿಯರುಗಳೇ ಬೆರಗಾದದ್ದುಂಟು.

ಕೆರೆಗಳೇ ಅಲ್ಲದೆ ನದಿಗಳಿಗೆ ಅಡ್ಡಕಟ್ಟೆ ಹಾಕಿ ಕಾಲುವೆಗಳ ನಿರ್ಮಾಣವನ್ನು ನಮ್ಮ ಹಿರಿಯರು ಮಾಡಿದ್ದರು. ಕಾವೇರಿ ಕಣಿವೆಯ ಯಗಚಿ ನದಿಯ ನೀರನ್ನು ಹಳೇಬೀಡಿಗೆ ಹಾಯಿಸಲು ಹೊಯ್ಸಳ ದೊರೆ ವಿಷ್ಣುವರ್ಧನನು ತೋಡಿಸಿದನೆನ್ನಲಾದ ಕಾಲುವೆಯ ಅವಶೇಷಗಳನ್ನು ಈಗಲೂ ನೋಡಬಹುದು.


ಘನ ತ್ಯಾಜ್ಯ ವಸ್ತುಗಳ ವೈಜ್ಞಾನಿಕ ವಿಲೇವಾರಿ



ಆರೋಗ್ಯವಂತ ಪರಿಸರ ನಿರ್ಮಾಣಕ್ಕೆ ದಾರಿ

ದೇಶದಲ್ಲೆಡೆ ನಗರ/ಪಟ್ಟಣಗಳಿಂದ ಉತ್ಪತ್ತಿಯಾಗುತ್ತಿರುವ ಘನ ತ್ಯಾಜ್ಯ ವಸ್ತುಗಳ/ಅವೈಜ್ಞಾನಿಕ ವಿಲೇವಾರಿಯಿಂದ ಪರಿಸರ ಮಾಲಿನ್ಯ ಉಂಟಾಗುತ್ತಿದೆ. ಘನತ್ಯಾಜ್ಯ ವಸ್ತುಗಳು ಮನೆ, ಕಚೇರಿ, ವಾಣಿಜ್ಯ ಮಳಿಗೆಗಳಿಂದ ನಿರುಪಯುಕ್ತ ಕಾಗದಗಳು, ಪ್ಲಾಸ್ಟಿಕ್ ವಸ್ತುಗಳು, ಕಸ ಕಡ್ಡಿಗಳು, ವರ್ಜಿತ ತರಕಾರಿಗಳು, ಆಹಾರ ಪದಾರ್ಥ ಇನ್ನು ಮುಂತಾದವುಗಳ ಜೊತೆಗೆ ನೈಸರ್ಗಿಕವಾಗಿ ಮರಗಳಿಂದ ಉದುರುವ ಎಲೆ, ಕಸ ಕಡ್ಡಿಗಳು ಸಹ ಒಳಗೊಂಡಿರುತ್ತದೆ. ಇವುಗಳಲ್ಲಿ ಅನೇಕ ತ್ಯಾಜ್ಯ ವಸ್ತುಗಳು ಜೈವಿಕ ಕ್ರಿಯೆಗೆ ಒಳಪಡುತ್ತವೆ ಮತ್ತು ಕೆಲವು ತ್ಯಾಜ್ಯ ವಸ್ತುಗಳು ಜೈವಿಕ ಕ್ರಿಯೆಗೆ ಒಳಪಡದೆ ಪರಿಸರದಲ್ಲಿ ಹಾಗೆ ಉಳಿದುಬಿಡುತ್ತವೆ.

**ಪುರಸಭೆ ಘನತ್ಯಾಜ್ಯ ವಸ್ತುಗಳ ವೈಜ್ಞಾನಿಕ ವಿಲೇವಾರಿ** : ಭಾರತ ಸರ್ಕಾರವು ಪುರಸಭೆ ತ್ಯಾಜ್ಯ ವಸ್ತುಗಳ (ವ್ಯವಸ್ಥೆ ಮತ್ತು ನಿರ್ವಹಣೆ) ನಿಯಮಗಳು ೨೦೦೦, ಅನ್ನು ಜಾರಿಗೊಳಿಸಿದೆ. ಇದರ ಅನ್ವಯ ಘನ ತ್ಯಾಜ್ಯ ವಸ್ತುಗಳ, ಸಂಗ್ರಹಣೆ, ಪಿಂಗಡಣೆ, ಸಂಗ್ರಹ ವ್ಯವಸ್ಥೆ (Storage) ಸಾಗಾಣಿಕೆ, ಸಂಸ್ಕರಣೆ ಮತ್ತು ವಿಲೇವಾರಿಯ ಜವಾಬ್ದಾರಿಯು ಸ್ಥಳೀಯ ಸಂಸ್ಥೆಗಳದ್ದಾಗಿರುತ್ತದೆ. ಸದರಿ ನಿಯಮವನ್ನು ಸ್ಥಳೀಯ ಸಂಸ್ಥೆಗಳು ಪಾಲಿಸುತ್ತಿವೆ.

**ತ್ಯಾಜ್ಯ ವಸ್ತುಗಳ ಸೂಕ್ತ ವಿಲೇವಾರಿಗೆ ಸ್ಥಳೀಯ ಸಂಸ್ಥೆಗಳಿಗೆ ಸಾರ್ವಜನಿಕರ ನೆರವು ಅತ್ಯಗತ್ಯ**

- ತ್ಯಾಜ್ಯ ವಸ್ತುಗಳನ್ನು ಪಾಲಿಕೆಯವರು ಸ್ಥಾಪಿಸಿರುವ ನಿಗದಿತ ತೊಟ್ಟಿಗಳಲ್ಲಿ / ಸ್ಥಳಗಳಲ್ಲಿ ವಿಲೇವಾರಿ ಮಾಡುವುದು
- ಸಾಧ್ಯವಾದಷ್ಟು ಪುನಃ ಬಳಸಬಹುದಾದ ವಸ್ತುಗಳನ್ನು ಉಪಯೋಗಿಸುವುದು
- ಪ್ಲಾಸ್ಟಿಕ್ ವಸ್ತುಗಳು/ಕವರ್‌ಗಳು/ಪಾಲಿತಿನ್ ಕವರ್‌ಗಳನ್ನು ವಿಂಗಡಿಸಿ/ಬೇರ್ಪಡಿಸಿ ರೀಸೈಕಲ್ ಮಾಡುವವರಿಗೆ ಕೊಡುವುದು
- ಜೈವಿಕ [illegible] ಗಳನ್ನು [illegible] ಗೊಬ್ಬರವಾಗಿ [illegible], ಇದನ್ನು [illegible] ಉಪಯೋಗಿಸುವುದು
- ಮನೆಗಳಲ್ಲಿ [illegible] ಸ್ಥಳದಲ್ಲಿ [illegible] ಬದಲು ಸೂಕ್ತ ವಿಲೇವಾರಿ

[illegible] ಪ್ರಕಟಣೆ
ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ
ನಂ.49, ಪರಿಸರ ಭವನ, 4 ಮತ್ತು 5ನೇ ಅಂತಸ್ತು,
ಚರ್ಚ್ ಸ್ಟ್ರೀಟ್ ಬೆಂಗಳೂರು-560001, ಕರ್ನಾಟಕ, ಭಾರತ
ದೂರವಾಣಿ 25581383 25589112 25589113 25586520 ಫ್ಯಾಕ್ಸ್ :080-25586321
ಇಮೇಲ್ ksp[illegible]om@bl[illegible].net.in ವೆಬ್‌ಸೈಟ್ : http://kspcb.kar.nic.in


ಕಾವೇರಿ ಕಣಿವೆಯ ನದಿಕಾಲುವೆಗಳು, ವಿಜಯನಗರದ ಅರಸರು ತುಂಗ[illegible] ನದಿಗೆ ಕಟ್ಟಿದ ಕಾಲುವೆಗಳು ನೂರಾರು ವರ್ಷಗಳಿಂದ ನೀರಾವರಿಗೆ ಹೆಸರಾಗಿವೆ.

ಕರ್ನಾಟಕದಲ್ಲಿ ವಿವಿಧ ಮೂಲಗಳಿಂದ ೧೯೦೧, ೧೯೬೮-೬೯, ೨೦೦೪ [illegible] ವರ್ಷಗಳಲ್ಲಿ ನೀರಾವರಿ (ನಿವ್ವಳ) ಪ್ರದೇಶದ ವಿಸ್ತೀರ್ಣ ಹೀಗಿದೆ.

(ಲಕ್ಷ ಹೆಕ್ಟೇರುಗಳಲ್ಲಿ):

| ಕ್ರ. ಸಂ. | ನೀರಾವರಿ ಮೂಲ | ೧೯೦೧ | ೧೯೬೮-೬೯ | ೨೦೦೪-[illegible] |
|---|---|---|---|---|
| ೧. | ಕಾಲುವೆಗಳು | ೦.೫೬ | ೪.೪೯ | ೯.[illegible] |
| ೨. | ಕೆರೆಗಳು | ೨.೬೦ | ೩.೫೧ | ೧.[illegible] |
| ೩. | ಏತ ನೀರಾವರಿ | – | – | ೧.[illegible] |
| ೪. | ಉಳಿದ ಮೂಲಗಳು (ಪಿಕ್‌ಅಪ್‌ಗಳು, ತೂರೆಗಳು, ಕಟ್ಟೆಗಳು, ತಾಲಪರಿಗೆ ಮುಂತಾದುವು) | ೧.೨೬ | ೧.೧೮ | ೨.[illegible] |
| ೫. | ಬಾವಿಗಳು | ೦.೬೦ | ೩.೧೬ | ೪.[illegible] |
| ೬. | ಕೊಳವೆ ಬಾವಿಗಳು | – | – | ೮.[illegible] |
| | ಒಟ್ಟು | ೫.೦೩ | ೧೨.೩೪ | ೨೮.[illegible] |

### ನೀರಾವರಿ ಯೋಜನೆಗಳ ವರ್ಗೀಕರಣ

ಕೇಂದ್ರ ಜಲ ಆಯೋಗದ ಇತ್ತೀಚಿನ ನಿರ್ದೇಶನದಂತೆ ನೀರಾ[illegible] ಯೋಜನೆಗಳ ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣವನ್ನು ಗಮನದಲ್ಲಿಟ್ಟುಕೊಂಡು [illegible] ಮಧ್ಯಮ ಮತ್ತು ಭಾರೀ ನೀರಾವರಿ ಯೋಜನೆಗಳನ್ನು ವರ್ಗೀಕರಿಸಲಾಗಿದೆ.

ಸಣ್ಣ ನೀರಾವರಿ – ೨,೦೦೦ ಹೆಕ್ಟೇರ್ ಒಳಗೆ
ಮಧ್ಯಮ ನೀರಾವರಿ – ೨,೦೦೦ದಿಂದ ೧೦,೦೦೦ ಹೆಕ್ಟೇರ್ ಒಳಗೆ
ಭಾರೀ ನೀರಾವರಿ – ೧೦,೦೦೦ ಹೆಕ್ಟೇರ್‌ಗೆ ಮೇಲ್ಪಟ್ಟು

ಸಂವಿಧಾನದ ಪಟ್ಟಿ Iರ ೫೬ನೇ ಸೇರ್ಪಡೆಯಂತೆ ರಾಜ್ಯದೊಳಗಿನ ನ[illegible] ಅಭಿವೃದ್ಧಿ ಮತ್ತು ನಿರ್ವಹಣೆ ರಾಜ್ಯದ ಹೊಣೆಯಾಗಿರುತ್ತದೆ. ಆದರೆ ಅಂತರ[illegible] ನದಿಗಳ ನೀರಿನ ನಿರ್ವಹಣೆ ಕೇಂದ್ರದ ನಿಯಂತ್ರಣಕ್ಕೊಳಪಟ್ಟಿರುತ್ತದೆ. ಅಂತರ[illegible] ಜಲವಿವಾದಗಳ ಪರಿಹಾರದ ಹೊಣೆಯೂ ಕೇಂದ್ರದ ಮೇಲಿದೆ.

ಸಣ್ಣ ನೀರಾವರಿ ಯೋಜನೆಗಳನ್ನು ರಾಜ್ಯಗಳೇ ಕೈಗೆತ್ತಿಕೊಳ್ಳಬಹುದು. ಮ[illegible] ಮತ್ತು ಭಾರೀ ನೀರಾವರಿ ಯೋಜನೆಗಳಿಗೆ ಕೇಂದ್ರ ಸರ್ಕಾರದ ವಿವಿಧ ಇಲಾ[illegible] ಅನುಮತಿ ಪಡೆಯಬೇಕಾಗುತ್ತದೆ. ಕೇಂದ್ರ ಸರ್ಕಾರ ಅಥವಾ ಬೇರೆ ದೇಶಗ[illegible] ಆರ್ಥಿಕ ನೆರವು ಪಡೆಯಬೇಕಾದರೆ ಕೇಂದ್ರ ಸರ್ಕಾರದ ಅನುಮತಿ ಅತ್ಯಗತ್ಯ.

### ಅಂತರರಾಜ್ಯ ಜಲ ವಿವಾದಗಳು

ಕರ್ನಾಟಕದ ಎಲ್ಲಾ ಪೂರ್ವಾಭಿಮುಖವಾಗಿ ಹರಿಯುವ ನದಿಗಳು ಮತ್ತು ಕೆ[illegible] ಪಶ್ಚಿಮಾಭಿಮುಖವಾಗಿ ಹರಿಯುವ ನದಿಗಳು ಅಂತರರಾಜ್ಯ ನದಿಗಳಾಗಿರು[illegible] ರಿಂದ ಜಲವಿವಾದಗಳು ಹುಟ್ಟಿಕೊಂಡಿವೆ. ಅಂತರರಾಜ್ಯ ಜಲವಿವಾದ ಕಾಯಿ[illegible] ೧೯೫೬ರ ಅನ್ವಯ ಕೃಷ್ಣಾ, ಗೋದಾವರಿ ಮತ್ತು ಕಾವೇರಿ ಜಲವಿವಾದ ನ್ಯಾಯ[illegible] ಕರಣಗಳು ರಾಜ್ಯದ ಪಾಲಿನ ಬಗ್ಗೆ ತೀರ್ಪು ಕೊಟ್ಟಿವೆ. ಗೋದಾವರಿ ಜಲವಿ[illegible] ನ್ಯಾಯಾಧಿಕರಣವು ರಾಜ್ಯಗಳು ಕೈಗೊಳ್ಳಬಹುದಾದ ನೀರಾವರಿ ಯೋಜನೆಗಳ [illegible] ಒಪ್ಪಂದಕ್ಕೆ ಅನುವು ಮಾಡಿಕೊಟ್ಟು ಈ ಒಪ್ಪಂದಗಳ ಆಧಾರದ ಮೇಲೆ ತೀ[illegible] ಕೊಟ್ಟಿದೆ. ಕೃಷ್ಣಾ ನ್ಯಾಯಾಧಿಕರಣವು ೧೯೭೬ರಲ್ಲಿ ನೀಡಿದ ಅಂತಿಮ ತೀರ್ಪಿ[illegible] ಕೃಷ್ಣಾ ಕಣಿವೆಯಲ್ಲಿ ಶೇಕಡಾ ೭೫ರ ಅವಲಂಬನೆಯಂತೆ ಲಭ್ಯವಿರುವ ೨೦[illegible] ಟಿ.ಎಂ.ಸಿ. (ಶತಕೋಟಿ ಘನ ಅಡಿ) ನೀರಿನಲ್ಲಿ ಕರ್ನಾಟಕದ ಪಾಲು ೭[illegible] ಟಿ.ಎಂ.ಸಿ. ಎಂದು ನಿಗದಿ ಮಾಡಿದೆ.

ಇದಲ್ಲದೆ ಹೊಸ ಯೋಜನೆಗಳಿಂದ ಪುನರುತ್ಪತ್ತಿಯಾಗುವ ನೀರಿನಲ್ಲಿ [illegible] ಟಿ.ಎಂ.ಸಿ. ನೀರು ಬಳಸಿಕೊಳ್ಳಬಹುದು. ಈ ಪಾಲಿನಲ್ಲಿ ಚೆನ್ನೈ ಕುಡಿಯ[illegible] ನೀರಿಗೆಂದು ೫ ಟಿ.ಎಂ.ಸಿ. ನೀರನ್ನು ಕರ್ನಾಟಕ ಬಿಟ್ಟುಕೊಟ್ಟಿದೆ. ಕೃಷ್ಣಾ ಕಣಿವೆ[illegible]

ವ ಹೆಚ್ಚಿನ ನೀರಿನಲ್ಲಿ ರಾಜ್ಯಗಳ ಪಾಲನ್ನು ನಿಗದಿಮಾಡಲು ಎರಡನೆಯ ಕೃಷ್ಣಾ ಯಾಧಿಕರಣ ೨೦೦೪ರಲ್ಲಿ ರಚಿತವಾಗಿದ್ದು ಕಲಾಪಗಳು ನಡೆಯುತ್ತಿವೆ. ಕಾವೇರಿ ಯಾಧಿಕರಣವು ೧೯೯೦ರಲ್ಲಿ ರಚಿತವಾಗಿದ್ದು ಫೆಬ್ರವರಿ ೨೦೦೭ರಲ್ಲಿ ತನ್ನ ದಲನೆಯ ವರದಿ ಕೊಟ್ಟಿದೆ. ಈ ವರದಿಯಂತೆ ಕಾವೇರಿ ಕಣಿವೆಯಲ್ಲಿ ಶೇಕಡ ರ ಅವಲಂಬನೆಯಂತೆ ಲಭ್ಯವಿರುವ ೭೪೦ ಟಿ.ಎಂ.ಸಿ. ನೀರಿನಲ್ಲಿ ಕರ್ನಾಟಕದ ಲು ೨೭೦ ಟಿ.ಎಂ.ಸಿ. ಎಂದು ನಿಗದಿ ಮಾಡಲಾಗಿದೆ. ಈ ತೀರ್ಪನ್ನು ಸುಪ್ರೀಂ ರ್ಟಿನಲ್ಲಿ ಪ್ರಶ್ನಿಸಲಾಗಿದೆ. ಪಶ್ಚಿಮಾಭಿ ಮುಖವಾಗಿ ಹರಿಯುವ ಮಹದಾಯಿ ಯು ಉಪನದಿಗಳಾದ ಕಳಸ, ಬಂಡೂರಿ ನಾಲೆಗಳ ನೀರನ್ನು ರ್ವಾಭಿಮುಖವಾಗಿ ಹರಿಸುವ ಕರ್ನಾಟಕದ ಯೋಜನೆಗಳಿಗೆ ಗೋವಾ ಸರ್ಕಾರ ರು ಎತ್ತಿದೆ. ಈ ಜಲವಿವಾದದ ಪರಿಹಾರಕ್ಕೆ ನ್ಯಾಯಾಧಿಕರಣ ರಚಿಸಬೇಕೆಂದು ಯ ಮಾಡುತ್ತಿದೆ.

**ಜ್ಯ ಪುನರ್ವಿಂಗಡಣೆಯ ನಂತರದ ನೀರಾವರಿ ಬೆಳವಣಿಗೆ**

ರಾಜ್ಯ ಪುನರ್ವಿಂಗಡಣೆಯ ಮೊದಲು ಕರ್ನಾಟಕದಲ್ಲಿ ಭಾರಿ ಮತ್ತು ಮಧ್ಯಮ ವರಿ ಯೋಜನೆಗಳ ಸಂಖ್ಯೆ ಬೆರಳೆಣಿಕೆಯಲ್ಲಿತ್ತು. ಇವುಗಳಲ್ಲಿ ಕಾವೇರಿ ಣಿವೆಯಲ್ಲಿ ಕೃಷ್ಣರಾಜ ಸಾಗರ, ಕೃಷ್ಣಾ ಕಣಿವೆಯಲ್ಲಿ ವಾಣಿವಿಲಾಸ ಸಾಗರ, ಗಭದ್ರಾ, ಭದ್ರಾ ಮತ್ತು ಘಟಪ್ರಭಾ ಯೋಜನೆಗಳು ಭಾರಿ ನೀರಾವರಿ ವರ್ಗಕ್ಕೆ ದ ಯೋಜನೆಗಳು. ಕಾವೇರಿ ಕಣಿವೆಯಲ್ಲಿ ಮೂರು ಮತ್ತು ಕೃಷ್ಣಾ ಕಣಿವೆಯಲ್ಲಿ ಮತ್ತು ಮಧ್ಯಮ ನೀರಾವರಿ ಯೋಜನೆಗಳಿದ್ದವು.

ರಾಜ್ಯ ಪುನರ್ವಿಂಗಡಣೆಯ ನಂತರ ಕೃಷ್ಣಾ ಕಣಿವೆಯಲ್ಲಿ ೧೫, ಕಾವೇರಿ ಣಿವೆಯಲ್ಲಿ ೫, ಗೋದಾವರಿ ಕಣಿವೆಯಲ್ಲಿ ಒಂದು ಮತ್ತು ಪಶ್ಚಿಮಾಭಿಮುಖ ಯುವಲ್ಲಿ ವರಾಹಿ ಯೋಜನೆಯಂತಹ ಭಾರಿ ನೀರಾವರಿ ಯೋಜನೆಗಳನ್ನು ತ್ತಿಕೊಳ್ಳಲಾಗಿದೆ. ಇವುಗಳಲ್ಲಿ ಕೃಷ್ಣಾ ಮೇಲ್ದಂಡೆ, ಮಲಪ್ರಭಾ, ಘಟಪ್ರಭಾ ರನೇ ಹಂತ, ಹೇಮಾವತಿ, ಹಾರಂಗಿ, ಕಬಿನಿ, ಕಾರಂಜಾ ಮತ್ತು ವರಾಹಿ ೋಜನೆಗಳು ಪ್ರಮುಖವಾದುವು. ಅನೇಕ ಮಧ್ಯಮ ನೀರಾವರಿ ಯೋಜನೆಗಳನ್ನು ತ್ತಿಕೊಳ್ಳಲಾಗಿದೆ. ರಾಜ್ಯ ಜಲನೀತಿ - ೨೦೦೨ರಲ್ಲಿ ಸೂಚಿಸಿರುವಂತೆ ಭಾರಿ, ಧ್ಯಮ ಮತ್ತು ಸಣ್ಣ ನೀರಾವರಿ ಯೋಜನೆಗಳಿಂದ ೪೫ ಲಕ್ಷ ಹೆಕ್ಟೇರ್ ಮತ್ತು ತರ್ಜಲದಿಂದ ೧೬ ಲಕ್ಷ ಹೆಕ್ಟೇರ್ ಪ್ರದೇಶವನ್ನು ನೀರಾವರಿಗೆ ಒಳಪಡಿಸಲು ದ್ದೇಶಿಸಲಾಗಿದೆ. ಭಾರಿ ಮತ್ತು ಮಧ್ಯಮ ನೀರಾವರಿ ಯೋಜನೆಗಳಿಗೆ ಈವರೆಗೆ ಮಾರು ೨೦,೦೦೦ ಕೋಟಿ ರೂಪಾಯಿ ಖರ್ಚು ಮಾಡಲಾಗಿದೆ. ಸಣ್ಣ ನೀರಾವರಿ ೋಜನೆಗಳಿಗೆ ಸುಮಾರು ೧೦೦೦ ಕೋಟಿ ರೂಪಾಯಿ ಖರ್ಚು ಮಾಡಲಾಗಿದೆ. ಮತ್ತು ಮಧ್ಯಮ ನೀರಾವರಿ ಯೋಜನೆಗಳಿಂದ ಸುಮಾರು ೨೨ ಲಕ್ಷ ಹೆಕ್ಟೇರ್ ತ್ತು ಸಣ್ಣ ನೀರಾವರಿ ಯೋಜನೆಗಳಿಂದ ೧೦ ಲಕ್ಷ ಹೆಕ್ಟೇರ್ ನೀರಾವರಿ ದೇಶವನ್ನು ಅಭಿವೃದ್ಧಿ ಪಡಿಸಲಾಗಿದೆ.

**ತರ್ಜಲ ಅಭಿವೃದ್ಧಿ**

ಕರ್ನಾಟಕ ಸರ್ಕಾರದ ಲೆಕ್ಕಚಾರದಲ್ಲಿ ೩೧-೧೨-೧೯೯೯ರಲ್ಲಿದ್ದಂತೆ ಕರ್ನಾಟಕ ಜ್ಯದಲ್ಲಿ ಅಂತರ್ಜಲ ಸಂಪತ್ತು ಸುಮಾರು ೧೦೦೦ ಟಿ.ಎಂ.ಸಿ. ಎಂದು ಅಂದಾಜು ಡಿದೆ. ಇದರಲ್ಲಿ ಸುಮಾರು ಮೂರನೇ ಒಂದು ಭಾಗ ನೀರಾವರಿ ಮತ್ತು ಯುವ ನೀರಿಗಾಗಿ ಬಳಕೆಯಾಗುತ್ತಿದೆ. ಭಾರಿ ಮತ್ತು ಮಧ್ಯಮ ನೀರಾವರಿ ಲಭ್ಯವಿಲ್ಲದಿರುವ ಕಡೆ ಅಂತರ್ಜಲ ಬಳಕೆ ಹೆಚ್ಚಿದ್ದು ಅನೇಕ ಜಲಾನಯನ ದೇಶಗಳಲ್ಲಿ ಅಪಾಯದ ಮಟ್ಟ ಮುಟ್ಟಿದೆ. ೧೭ ಜಿಲ್ಲೆಗಳಿಗೆ ಸೇರಿದ ಸುಮಾರು ೭೯ ಲ್ಲೂಕುಗಳಲ್ಲಿ ಅಂತರ್ಜಲದ ಬಳಕೆ ಲಭ್ಯತೆಗಿಂತ ಹೆಚ್ಚಿದೆ.

**ರಾವರಿ ಸಮಸ್ಯೆಗಳು**

ನೀರಾವರಿ ಯೋಜನೆಗಳ ಕಾಮಗಾರಿಗಳು ಜಲವಿವಾದ, ರಾಜಕೀಯ ವ್ಯವಸ್ಥೆಯ ಹಸ್ತಕ್ಷೇಪ ಮುಂತಾದ ಕಾರಣಗಳಿಂದ ಅನಗತ್ಯವಾಗಿ ವಿಳಂಬವಾಗುತ್ತಿದ್ದು ವೂ ಹೆಚ್ಚಾಗಿ, ನಿರೀಕ್ಷಿತ ಪ್ರಗತಿ ಸಾಧಿಸಲಾಗುತ್ತಿಲ್ಲ. ಬಹುತೇಕ ನೀರಾವರಿ ೋಜನೆಗಳಲ್ಲಿ ಹೆಚ್ಚು ಪ್ರದೇಶಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ದೃಷ್ಟಿಯಿಂದ ನೀರಾವರಿ ಬೆಳೆಗಳನ್ನು ಬೆಳೆಯಲು ಉದ್ದೇಶಿಸಲಾಗಿದೆ. ಆದರೆ ರೈತರು ಹೆಚ್ಚು ು ಬೇಕಾಗುವ ಭತ್ತ, ಕಬ್ಬು ಬೆಳೆಯುವುದರಿಂದ ನೀರಾವರಿ ಸೌಲಭ್ಯ ಯೋಜಿತ ದೇಶಗಳಿಗೆ ತಲುಪುತ್ತಿಲ್ಲ. ವಿನ್ಯಾಸ, ಗುಣಮಟ್ಟ ನಿಯಂತ್ರಣ, ಜಲಾಶಯ ಮತ್ತು ಲುವೆಗಳ ನಿರ್ವಹಣೆ ಬಗ್ಗೆ ಹೆಚ್ಚಿನ ಗಮನ ಕೊಡುತ್ತಿಲ್ಲ. ಹಿಂದೆ ಭೂಕಂದಾಯವೇ ರಾಜ್ಯ ಬೊಕ್ಕಸದ ಆದಾಯದಲ್ಲಿ ಸಿಂಹಪಾಲು ಆಗಿದ್ದುದರಿಂದ ಅಧಿಕಾರಿಗಳೂ, ರೈತರೂ ಹೆಚ್ಚಿನ ಆಸಕ್ತಿ ವಹಿಸುತ್ತಿದ್ದರು. ಈಗ ಪರಿಸ್ಥಿತಿ ಬದಲಾಗಿದ್ದು ನೀರಾವರಿ ಯೋಜನೆಗಳಿಂದ ನಿರೀಕ್ಷಿತ ಆದಾಯ ಬರುತ್ತಿಲ್ಲ. ವಿದ್ಯುತ್ ಅಭಾವದಿಂದ ಏತ ನೀರಾವರಿಗಳು ಸರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ನೀರಾವರಿ ಯೋಜನೆಗಳ ನಿರ್ವಹಣೆಯಲ್ಲಿ ರೈತರು ಪಾಲುದಾರರಾಗಬೇಕೆಂದು ಸ್ಥಾಪಿಸಿರುವ ನೀರು ಬಳಕೆದಾರರ ಸಂಘಗಳು ಯಶಸ್ವಿಯಾಗಿ ಕಾರ್ಯ ನಿರ್ವಹಿಸುವ ಪರಿಸ್ಥಿತಿ ನಿರ್ಮಾಣವಾಗಿಲ್ಲ. ನೀರಾವರಿ ಯೋಜನೆಗಳಿಂದ ಮನೆ, ಜಮೀನು ಕಳೆದುಕೊಂಡವರ ಪುನರ್ವಸತಿಯಲ್ಲಿ ಲೋಪದೋಷಗಳಿದ್ದು ಶಾಶ್ವತ ಪರಿಹಾರ ಮರೀಚಿಕೆಯಾಗಿದೆ. ವ್ಯವಸ್ಥೆಯ ಲೋಪದೋಷಗಳಿಂದ ಬಲಿಷ್ಠರೇ ಎಲ್ಲಾ ಸವಲತ್ತುಗಳನ್ನು ಪಡೆಯುತ್ತಿದ್ದು ಉಳ್ಳವರ ಮತ್ತು ಉಳ್ಳದಿರುವವರ ಅಂತರ ಹೆಚ್ಚಾಗುತ್ತಿದೆ. ಬೆಳೆಗಳ ಉತ್ಪಾದನೆ ಮತ್ತು ಬೇಡಿಕೆಗಳ ಸಮಗ್ರ ಅಧ್ಯಯನ ಮಾಡಿ ಸೂಕ್ತ ಮಾರುಕಟ್ಟೆ ವ್ಯವಸ್ಥೆ ಮಾಡದಿರುವುದರಿಂದ ಬಡರೈತರ ಬವಣೆ ಹೆಚ್ಚಾಗುತ್ತಿದೆ. ರೈತರ ಆತ್ಮಹತ್ಯೆ ನಡೆಯುತ್ತಲೇ ಇದೆ.

ಬೇರೆ ರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕದ ರಾಜಕೀಯ ಪಕ್ಷಗಳ ನಾಯಕರು ಕೇಂದ್ರ ಸರ್ಕಾರದ ಮೇಲೆ ಒತ್ತಡ ತಂದು ಅಭಿವೃದ್ಧಿ ಕಾರ್ಯಗಳನ್ನು ಮಾಡಿಸಿಕೊಳ್ಳುವ ತಂತ್ರಗಾರಿಕೆ ಹೊಂದಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಹೋರಾಟ, ಚಳುವಳಿಗಳಿಗೆ ಮುಂದಾಗುವ ನಮ್ಮ ಜನ ಆಶ್ವಾಸನೆಗಳನ್ನು ನಂಬಿ ಬಹುಬೇಗ ಸಮಸ್ಯೆಗಳ ಶಾಶ್ವತ ಪರಿಹಾರಕ್ಕೆ ಹೋರಾಡುವುದನ್ನು ಮರೆಯುತ್ತಾರೆ. ಹಿಡಿದ ಕೆಲಸ ಸಾಧಿಸುವ ಜಿಗುಟುತನ ನಮ್ಮಲ್ಲಿಲ್ಲ. ಭದ್ರಾ ಮೇಲ್ದಂಡೆ ಯೋಜನೆ, ಸಿಂಗಟಲ್ಲೂರು ಏತ ನೀರಾವರಿ ಯೋಜನೆ, ಕಳಸ ಬಂಡೂರಿ ನಾಲಾ ಮುಂತಾದ ನೀರಾವರಿ ಯೋಜನೆಗಳು ರಾಜಕೀಯ ದಾಳಗಳ ವಸ್ತುವಾಗಿದ್ದು ಈ ಯೋಜನೆಗಳ ಅನುಷ್ಠಾನದ ಬಗ್ಗೆ ನಿರೀಕ್ಷಿತ ಪ್ರಗತಿ ಸಾಧಿಸಿಲ್ಲ.

**ಪರಿಹಾರಗಳು**

ನಮ್ಮಲ್ಲಿನ ಬಹುಪಾಲು ಸಮಸ್ಯೆಗಳಿಗೆ ಸ್ವಾರ್ಥ ಮತ್ತು ತಿಳುವಳಿಕೆಯ ಕೊರತೆಯೇ ಕಾರಣ. ಸಮಸ್ಯೆಗಳ ಆಳವಾದ ಅಧ್ಯಯನ ಮಾಡಿ ಶಾಶ್ವತ ಪರಹಾರ ಕಂಡುಹಿಡಿಯಬೇಕೇ ಹೊರತು ತಾತ್ಕಾಲಿಕ ಪರಿಹಾರದಿಂದ ತೃಪ್ತಿಪಟ್ಟುಕೊಳ್ಳಬಾರದು. ಈಗಿನ ರಾಜಕೀಯ ವ್ಯವಸ್ಥೆಯಲ್ಲಿ ಸರ್ಕಾರ ಜನಪ್ರತಿನಿಧಿಗಳದೇ ಆದುದರಿಂದ ಇವರ ಮೇಲೆ ಒತ್ತಡ ತರಬೇಕು. ಮಧ್ಯಮ ಮತ್ತು ಸಣ್ಣ ನೀರಾವರಿ ಯೋಜನೆಗಳು ನೀರಿನ ಲಭ್ಯತೆಯ ಕೊರತೆಯಿಂದ ಎಲ್ಲಾ ವರ್ಷಗಳಲ್ಲಿಯೂ ನಿರೀಕ್ಷಿತ ಫಲ ಕೊಡುವುದಿಲ್ಲ. ಕ್ಷಾಮದ ವರ್ಷಗಳಲ್ಲಿ ಭಾರಿ ನೀರಾವರಿ ಯೋಜನೆಗಳಲ್ಲಿಯೂ ನೀರಿನ ಕೊರತೆಯಿಂದ ತೊಂದರೆಯಾಗುತ್ತದೆ. ಆದುದರಿಂದ ಈ ಬಗ್ಗೆ ಬಳಕೆದಾರರಿಗೆ ಪೂರ್ಣ ತಿಳುವಳಿಕೆ ಕೊಟ್ಟು ಅರೆ ನೀರಾವರಿ ಬೆಳೆಗಳನ್ನು ಬೆಳೆಯುಲು ಪ್ರೋತ್ಸಾಹಿಸಬೇಕು. ತುಂತುರು ಮತ್ತು ಹನಿ ನೀರಾವರಿಯನ್ನು ಪ್ರೋತ್ಸಾಹಿಸಿ ನೀರಿನ ಮಿತ ಬಳಕೆ ಮಾಡಬೇಕು. ಅಂತರ್ಜಲದ ಸಂಯುಕ್ತ ಬಳಕೆ ಆಗಬೇಕು. ಸಂಕಷ್ಟ ಪರಿಸ್ಥಿತಿಯಲ್ಲಿ ಕೊರತೆಯನ್ನು ಹಂಚಿಕೊಳ್ಳುವ ಉದಾರ ಮನೋಭಾವ ತಾಳಬೇಕು. ಬಳಕೆದಾರರ ಸಂಘಗಳು ಕ್ರಿಯಾಶೀಲವಾಗಲು ಅನುಕೂಲ ಮಾಡಿಕೊಡಬೇಕು.

**ಗ್ರಂಥಋಣ**

೧. ಕರ್ನಾಟಕದ ಅಂಕಿಅಂಶಗಳ ನೋಟ – ೨೦೦೫-೨೦೦೬
೨. ಕೇಂದ್ರ ನೀರಾವರಿ ಆಯೋಗದ ವರದಿ – ೧೯೭೨, ಸಂಪುಟ ೨
೩. ಡಾ|| ಡಿ. ಎಂ. ನಂಜುಂಡಪ್ಪನವರು ಅಧ್ಯಕ್ಷರಾಗಿದ್ದ ಪ್ರಾದೇಶಿಕ ಅಸಮತೋಲನಾ ನಿವಾರಣಾ ವರದಿ – ೨೦೦೨
೪. ಕರ್ನಾಟಕದ ಜಲನೀತಿ – ೨೦೦೨
೫. ಕರ್ನಾಟಕ ರಾಜ್ಯ ಅಂತರ್ಜಲಕೋಶ ಸಿದ್ಧಪಡಿಸಿದ ೩೧-೧೨-೧೯೯೯ರಲ್ಲಿನ ಅಂತರ್ಜಲ ಸಂಪನ್ಮೂಲದ ವರದಿ
೬. ಖಾಸಗಿ ಟಿಪ್ಪಣಿಗಳು.

ಡಾ. [illegible]
[illegible]
[illegible]



ರೂ. 20




ರೂ. 25




ರೂ. 20




ರೂ. 30




ರೂ. 25




ರೂ. 55




ರೂ. 20



ರೂ. 20



ರೂ. 30




ರೂ. 35



# ಜನಪದ ಪ್ರಕಾಶನ

ನಂ. 57, ಮೊದಲನೆಯ ಮುಖ್ಯರಸ್ತೆ
ಯಶವಂತಪುರ, ಬೆಂಗಳೂರು - 560 022




ರೂ. 20




ರೂ. 30




ರೂ. 40




ರೂ. 20




ರೂ. 20

# ನಾನು ಯಾರು?



"ನಾನು ಯಾರು" ಎಂಬ ಪ್ರಶ್ನೆಗೆ ನಾನು ಯಾವ ನಾಮಫಲಕ ಅಂಟಿಸಿಕೊಳ್ಳಲಿ ? ಗತ್ಯಂತರವಿಲ್ಲವೆಂದು ನಾನು ಯಾವುದಾದರೂ ಮತಧರ್ಮಕ್ಕೆ ಶರಣಾಗಬೇಕೆ ? ಅನೇಕರು ಮಾಡುತ್ತಿರುವುದು ಅದನ್ನೇ. ಅವರಿಗೆ ಸಾಯಿಬಾಬನೋ ಮಾತಾಜೀಯೋ ಬೇಕಾಗಿಬಿಟ್ಟಿದೆ. ಅವರಂತಹ ಯಾವನೋ ಗುರುವೋ ಸಾಧುವೋ ಸಿಕ್ಕರೆ ಅವನ ಅಥವಾ ಅವಳ ಪದತಲದಲ್ಲಿ ಕೂತು ಈ ಜನ ನೆಮ್ಮದಿಯನ್ನು ಕಂಡುಕೊಳ್ಳುತ್ತಿದ್ದಾರೆ. ಇನ್ನಾವನೋ ಗುರು ಪವಾಡಪುರುಷನಾಗಿ ಕಾಣುತ್ತಾನೆ. ಮತ್ತೊಬ್ಬ ಐದೇ ನಿಮಿಷಗಳಲ್ಲಿ ನಿಮ್ಮ 'ಕುಂಡಲಿನಿ ಶಕ್ತಿ'ಯನ್ನು ಜಾಗ್ರತಗೊಳಿಸುತ್ತಾನೆ. ನಿಮ್ಮೊಬ್ಬರದೇ ಏನು, ಗುಂಪಿನಲ್ಲಿರುವ ಐನೂರು ಮಂದಿಯದನ್ನೂ ಜಾಗ್ರತಗೊಳಿಸಿಬಿಡುತ್ತಾನೆ. ಐನೂರಲ್ಲದಿದ್ದರೆ ಐದುಸಾವಿರವಾಗಲಿ, ಚಿಂತೆಯಿಲ್ಲ. ಮುಖ್ಯವಾಗಿ, ಅವರೆಲ್ಲಾ 'ನಂಬಿಕೆಯ' ಶಿಷ್ಯರಾಗಿರಬೇಕು, ದಾಸರಾಗಿರಬೇಕು. ಏನೇ ಇರಲಿ, ಈ ಮಾಂತ್ರಿಕ ಮಹಾತ್ಮರಲ್ಲಿ ಸ್ವಲ್ಪಮಟ್ಟಿನ ಪಾರದರ್ಶಕತೆ ಉಂಟು. ನಿಮಗೆ ಮೋಸ ಮಾಡುತ್ತಿದ್ದಾನೆಂದು ಕಂಡರೆ ಅವನನ್ನು ಬಿಡಬಹುದು. ಅಂತೂ ಅವನ ಕೆಲಸವೆಲ್ಲ ಬಹಿರಂಗವಾಗಿಯೇ ನಡೆಯುತ್ತದೆ.

**ನ**ಮ್ಮ ಅಸ್ಮಿತೆಯನ್ನು ಹುಡುಕಿಕೊಳ್ಳುವ ಪ್ರಕ್ರಿಯೆ ನಿರಂತರವಾದ್ದು. ಹಲವು ದಶಕಗಳಿಂದ ನನ್ನ ಕುತೂಹಲ ಇಂಗದೆ ಉಳಿದಿದೆ, "ನಾನು ಯಾರು ?" ಎಂಬುದನ್ನು ಕುರಿತಂತೆ. ಅದನ್ನು ನಾನು ಅಧ್ಯಾತ್ಮದ ಅರ್ಥದಲ್ಲಿ ಬಳಸುತ್ತಿಲ್ಲ. ಅದಕ್ಕೆ ನಮ್ಮ ಶ್ರುತಿಗಳು, ಗುರುಗಳು, ಬೇಕಾದಷ್ಟು ವ್ಯಾಖ್ಯಾನ ನೀಡಿದ್ದಾರೆ. ರಮಣ ಮಹರ್ಷಿಗಳು ಆ ಪೈಕಿ ಪ್ರಮುಖರು. ಅವರೆಲ್ಲಾ ನಮಗೆ ನೀಡಿರುವ ಉಪದೇಶದ ಸಾರವೆಂದರೆ "ನಾನು ಯಾರೆಂಬ ಪ್ರಶ್ನೆಯನ್ನು ಸದಾ ಹಾಕಿಕೊಳ್ಳುತ್ತಿರು" ಎಂಬುದು. ಅದು ನನ್ನ ಉದ್ದೇಶವಲ್ಲ. ನಾನು ಶುದ್ಧ ಭೌತವಾದಿ ದೃಷ್ಟಿಯಿಂದ ಈ ಪ್ರಶ್ನೆಯನ್ನು ಎತ್ತುತ್ತಿದ್ದೇನೆ. ಈಚಿನ ಕಾಲದಲ್ಲಿ ಯಾವುದಾದರೊಂದು ಹೆಸರಿನೊಂದಿಗೆ ತಗುಲಿಸಿಕೊಂಡಿರುವ ಸಿದ್ಧಾಂತವನ್ನು ಆತುಕೊಳ್ಳುವುದು ಅನಿವಾರ್ಯವೆನ್ನುವಂತಾಗಿದೆ. ನನಗೆ ಒಂದು ಹೆಸರಿರುವಂತೆ ಯಾವುದೋ ಸಿದ್ಧಾಂತದ ಅನುಯಾಯಿಯೆಂದು ಗುರುತಿಸಿಕೊಳ್ಳುವುದು ಅವಶ್ಯಕವೆಂಬ ಭಾವನೆ ಹೆಚ್ಚುತ್ತಿದೆ. ಅದಿಲ್ಲದಿದ್ದರೆ ಆ ವ್ಯಕ್ತಿಯು ವ್ಯಕ್ತಿಯೇ ಅಲ್ಲವೇನೋ ಎಂಬಂತಹ ಸಂಶಯ ! ಹೇಳಿ ಕೇಳಿ, ನಮ್ಮದು ವ್ಯಾಪಾರೀಕರಣದ ಯುಗ. ಸಿದ್ಧಾಂತವೆಂಬುದು ಸಹ ಒಂದು ನಮೂನೆ, ಅಂದರೆ 'ಬ್ರಾಂಡ್'. ಅದು ಅಗೋಚರವಾಗಿ ಕೆಲಸ ಮಾಡುತ್ತದೆ ಮತ್ತು ಸಮಾಜದಲ್ಲಿ ನಮಗೊಂದು ಸ್ಥಾನವನ್ನು ಹೇಗೋ ಕಟ್ಟಿಕೊಡುತ್ತದೆ. ಇಂದಿನ ಸಂದರ್ಭದಲ್ಲಿ ಬಹಳ ಅಚ್ಚುಮೆಚ್ಚಿನ 'ಬ್ರಾಂಡ್' ಎಂದರೆ ಜಾಗತಿಕತೆ ಎಂಬುದು ನನಗೆ ಮನದಟ್ಟಾಗಿದೆ. ಅದಕ್ಕೆ ಭಾರಿ ಮಾರುಕಟ್ಟೆ ಇದೆ. ಹಾಗೆ ನೋಡಿದರೆ, ಜಾಗತಿಕತೆಯ ಪ್ರಜ್ಞೆಯನ್ನು ಹೊಂದುವುದು ಒಂದು 'ಕ್ರಾಂತಿಕಾರಿ ಬೆಳವಣಿಗೆಯೇ ಹೌದು. ನಮ್ಮ ಕನಸುಗಳೆಲ್ಲಾ ನನಸಾದವೆಂಬ ಸಾರ್ಥಕತೆ ದಕ್ಕಿತೇನೋ ಎಂಬ ಭಾವನೆ.

ಒಂದೇ ಏಟಿಗೆ ವಿಶ್ವದಲ್ಲಿ ಎಲ್ಲ ರಾಷ್ಟ್ರೀಯ ಎಲ್ಲೆಗಳೂ ಮಾಯವಾಗಿ ಬಿಳಿ, ಕರಿ, ಕೆಸುಗೆಂಪು, ಹಳದಿ ಎಲ್ಲಾ ಒಂದೇ ಛತ್ರದಡಿ ಕೂಡಿಕೊಂಡು ಜನಾಂಗೀಯ ಭಿನ್ನತೆ ಅಳಿಸಿಹೋಯಿತೆಂಬ ಭ್ರಮೆ ಕೂಡ ಹುಟ್ಟಬಹುದು. ಈಗ ನಾವೆಲ್ಲಾ ವಿಶ್ವದಲ್ಲಿ ಸಮಾನತೆಯನ್ನು ಸಾಧಿಸಿರುವ ನಾಗರಿಕರು; ಏಕೆಂದರೆ ನಮ್ಮ ಪ್ರಪಂಚವು ಹಠಾತ್ತನೆ ಒಂದು 'ಜಾಗತಿಕ ಹಳ್ಳಿ'ಯಾಗಿ ಪರಿವರ್ತನೆ ಹೊಂದಿಬಿಟ್ಟಿದೆ !! ಇದಕ್ಕಿಂತಲೂ ದೊಡ್ಡದಾದ ಇನ್ನೊಂದು ಪವಾಡವಿದೆ : ಅದೇನೆಂದರೆ, ಸಿದ್ಧಾಂತಗಳು ಸಹ ಜಾಗತಿಕ ಮಟ್ಟಕ್ಕೆ ಏರಿಬಿಟ್ಟಿವೆ, ಎಂಬುದು. ಸೈದ್ಧಾಂತಿಕ ಕಲ್ಪನೆಗಳಿಗೆ ಇದ್ದ ಅಡ್ಡಗೋಡೆಗಳೆಲ್ಲಾ ಉರುಳಿಹೋಗಿವೆ, ಇಲ್ಲವೇ ಮಸುಕಾಗಿಬಿಟ್ಟಿವೆ. ನಮ್ಮದು ಹೊಸ ಸಂಸ್ಕೃತಿಯ ಯುಗ. ಇದರಲ್ಲಿ ಸಿಂಹ ಮತ್ತು ಕುರಿಮರಿ ಒಂದೇ ಹೊಂಡದಲ್ಲಿ ನೀರು ಕುಡಿಯುತ್ತವೆ. ಆ ನೀರು ಬೇರಾವುದೂ ಅಲ್ಲ, ಅದೇ ಜಾಗತೀಕರಣದ ಅಮೃತ. ಇದೆಲ್ಲಾ ಕೇವಲ ಭ್ರಮೆಯೆಂದು ತಿಳಿಯಲು ಬಹಳ ಸಮಯ ಹಿಡಿಯುವುದಿಲ್ಲ. ಆದರೆ ಅಚ್ಚರಿಯ ಸಂಗತಿಯೊಂದಿದೆ : ಶ್ರೀಮಂತ ವರ್ಗಗಳ ವಿರೋಧಿಗಳಾದ ಸಮಾಜವಾದಿಗಳು ಕೂಡ ಜಾಗತೀಕರಣದ ಮೋಹಕ್ಕೆ ಸಿಲುಕಿದ್ದಾರೆಂಬ ಕಠೋರ ಸತ್ಯವೇ ಆ ಸಂಗತಿ. ಸಮಾಜವಾದೀ ಸಿದ್ಧಾಂತದ ಭದ್ರಕೋಟೆಯಾಗಿದ್ದ ಸೋವಿಯೆತ್ ಒಕ್ಕೂಟವು ಕುಸಿದುಹೋಯಿತು. ಒಂದೇ ಒಂದು ಗುಂಡನ್ನು ಸಹ ಹಾರಿಸದೆ ಅದನ್ನು ಬಗ್ಗುಗೊಳಿಸಲಾದ್ದು ಒಂದು ವಿಸ್ಮಯ. ಇನ್ನುಳಿದದ್ದು ಚೀಣಾ. ಆದಾದರೋ ನೂತನ ಸಿದ್ಧಾಂತಕ್ಕೆ ಅನುಗುಣವಾಗಲು ಆಶ್ಚರ್ಯಕಾರಕವಾದ ಹಲವು ಹೊಂದಾಣಿಕೆಗಳನ್ನು ರಭಸದಿಂದ ಮಾಡಿಕೊಳ್ಳುತ್ತಿದೆ. ಅಂದರೆ, ಸಮಾಜವಾದದ ಹಾದಿಯಲ್ಲಿ ಹೆಗ್ಗುರುತುಗಳು ಕಳೆದುಹೋಗುತ್ತಿವೆ, ದಾರಿದೀಪಗಳು ಕಂದಿಹೋಗುತ್ತಿವೆ. ಅದರ ಮೂಲ ಲಕ್ಷಣಗಳಿಗೆ ಪರ್ಯಾಯವಾಗಿ ಬಂಡವಾಳಶಾಹಿಯ ಸ್ವೇಚ್ಛೆಯ ಕಂಬಗಳು ತಲೆಯೆತ್ತುತ್ತಿವೆ. ಒಂದು ಕಾಲಕ್ಕೆ ವಿಯೆಟ್ನಾಂ ಸಮಾಜವಾದದ ಪ್ರಬಲ ಆಧಾರಸ್ತಂಭವಾಗಿದ್ದಿತು. ಕೇವಲ ಮೂವತ್ತೈದು ವರ್ಷಗಳ ಹಿಂದೆ ಆ ಮಹಾನ್ ದೇಶವು ವಿಶ್ವದಲ್ಲೇ ಅತಿ ಪ್ರಬಲವಾದ ಅಮೇರಿಕಾವನ್ನು ಮಣಿಸಿದ್ದಿತು. ಅಗ್ಗ ಅದಕ್ಕಿದ್ದ ಉಕ್ಕಿನ ಊರುಗೋಲೆಂದರೆ ಕೇವಲ ಸಮಾಜವಾದಿ ಸಿದ್ಧಾಂತದ ನೈತಿಕ ಶಕ್ತಿ. ಆ ದೇಶವೂ ಚೀಣಾದ ಮಾರ್ಗದಲ್ಲಿ ಸಾಗಲು ಹವಣಿಸಿದೆ. ಅಲ್ಲಿಯ ನಾಯಕರು ಬಹಳ ಹುಮ್ಮಸ್ಸಿನಿಂದ ವಿಶ್ವದ ಹೊಸ ಮತಧರ್ಮವಾದ ಜಾಗತಿಕತೆಯ ಪ್ರಚಾರಕರಿಗೆ ಮಣೆಹಾಕುತ್ತಿದ್ದಾರೆ. ಈ ಮತಧರ್ಮದ ನಿಜವಾದ ಹೆಸರು 'ಕೊಳ್ಳುಬಾಕತನ' ಎಂಬುದಾಗಿದೆ. ಸದ್ಯಕ್ಕೆ ಇದಕ್ಕೆಲ್ಲಾ ಮಾರುಹೋಗದೆ ಉಳಿದಿರುವ ದೇಶ ಕ್ಯೂಬ ಒಂದೇ ಎನ್ನುವಂತಾಗಿದೆ. ಇಂದಿನ ಮಾರಕ ಮತಧರ್ಮವಾದ ಜಾಗತೀಕರಣದ ಸುನಾಮಿ ಅಲೆಯನ್ನು ಅದು ತಾನೇ ಇನ್ನೆಷ್ಟು ಕಾಲ ಹಿಮ್ಮೆಟ್ಟಿಸೀತು ಎಂಬ ಆತಂಕ ಗಾಢವಾಗುತ್ತಿದೆ. ಕ್ಯೂಬಾದ ಸಮಾಜವಾದವನ್ನು ಬುಡಮೇಲು ಮಾಡಲು ಅಮೇರಿಕಾ ಸದಾ ಕಾದುನಿಂತಿದೆ. ಸಮಾಜವಾದಿಗಳು ಎಂಬುದಕ್ಕಿಂತಲೂ ಹೆಚ್ಚು ಸುಸಂಗತವಾದ ನಾಮಧೇಯವೆಂದರೆ ಕಮ್ಯುನಿಸ್ಟರು ಎಂಬುದು. ತಾವು ಅಧಿಕಾರದಲ್ಲಿಲ್ಲದ ಅಥವಾ ಅರೆಬರೆ ಅಧಿಕಾರ ಅನುಭವಿಸುತ್ತಿರುವ ದೇಶಗಳಲ್ಲಿ ಕಮ್ಯುನಿಸ್ಟರು ಈಗಾಗಲೇ ಹಾಗೆ ಹೀಗೆ ತೊಯ್ದಾಡುತ್ತಿದ್ದಾರೆ. ಅಪಥ್ಯವೆನಿಸಿದರೂ ಅದು ಕಟುಸತ್ಯವೇ ಆಗಿದೆ. ಅದಕ್ಕೆ ಭಾರತವು ಉತ್ತಮ ಉದಾಹರಣೆಯಾಗಿದೆ ಎನಿಸುತ್ತಿಲ್ಲವೆ ? ಇಲ್ಲಿಯ ಪ್ರಸಕ್ತ ಪರಿಸ್ಥಿತಿಯನ್ನು ಅವಲೋಕಿಸಿದರೆ ಅದರ ಅರ್ಥೈಸುವಿಕೆಯು ಕಠಿಣವಾಗಿದೆ. ಅದನ್ನು ಅಂಗೀಕರಿಸಲು ಹಿಂಜರಿಕೆಯುಂಟಾಗುತ್ತದೆ. ನಮ್ಮಲ್ಲಿ ಈಗಿನ ಕಾಂಗ್ರೆಸ್ ಪಕ್ಷವು ಹಿಂದೆ ಇದ್ದು ಅಳಿಸಿಹೋದ ಸ್ವತಂತ್ರ ಪಕ್ಷದ ಎಲ್ಲ ಲಕ್ಷಣಗಳನ್ನೂ ಹೊಂದಿದೆ. ಅಂದರೆ, ಅಮೇರಿಕಾದ ಪರ, ಬಂಡವಾಳಶಾಹಿಯ ಪರ, ಭಾರಿ ಭೂಮಾಲಿಕರ ಪರ,

ಎಂದರ್ಥ. ನಮ್ಮ ದೇಶದ ಕಮ್ಯುನಿಸ್ಟರು ಅಂಥವರ ಜೊತೆ ಬಾಂಧವ್ಯ ಬೆಳೆಸಲು ಮುಂದಾಗಿದ್ದಾರೆ, ಅದಕ್ಕೆ ಸಮರ್ಥವಾದ ಕಾರಣಗಳನ್ನು ಮುಂದಿಟ್ಟಿದ್ದಾರೆ. ಸಾಮಾಜಿಕ ಸಮಾನತೆಗಾಗಿ ಹೋರಾಟ ನಡೆಸಲು ಬದ್ಧರಾದ ಕಮ್ಯುನಿಸ್ಟರು ಅದಕ್ಕೆ ಚ್ಯುತಿಯುಂಟಾಗುವಂತಹ ಸಂದರ್ಭವನ್ನು ಮೈಮೇಲೆ ಎಳೆದುಕೊಂಡಿದ್ದಾರೆಯೇ ಎಂಬ ಪ್ರಶ್ನೆ ಅಪ್ರಸ್ತುತವಲ್ಲ. ಇಂದಿನ ನಮ್ಮ ಆಳುವ ಅಧಿಪತಿಗಳು ವಿದೇಶೀಯರಲ್ಲ, ಆದರೆ ವಿದೇಶಗಳ ಹೊಗಳುಭಟರು. ಹಿಂದಿನ ರಾಜಮಹಾರಾಜರಿಲ್ಲ, ಪಾಳೆಗಾರಿ ಜಮೀನ್ದಾರರಿಲ್ಲ; ಆದರೆ ಆಳುವ ವರ್ಗದ ಹಿತರಕ್ಷಕರು ಹಾರ್ವರ್ಡ್ ವಿಶ್ವವಿದ್ಯಾಲಯ ದಂತಹ ಆವರಣಗಳಲ್ಲಿ ತರಬೇತಿ ಪಡೆದವರಾಗಿದ್ದಾರೆ. ಅವುಗಳ ಮುಖ್ಯ ಲಕ್ಷಣವೆಂದರೆ ಬಹುರಾಷ್ಟ್ರೀಯ ಕಂಪನಿಗಳ ಹಿತವನ್ನು ಕಾಪಾಡುವುದು ಮತ್ತು ವರ್ಧಿಸುವುದು. ಹೀಗಾಗಿ, ಇಂದಿನ ಕಾಂಗ್ರೆಸ್ ಪಕ್ಷಕ್ಕೆ ಸಮಾಜವಾದವಾಗಲಿ ರಾಷ್ಟ್ರೀಯತೆಯಾಗಲಿ ಮುಖವಾಡವಾಗಿ ಸಹ ಉಳಿದಿಲ್ಲ. ಅದಕ್ಕೂ ಸಮರ್ಥನೆ ನೀಡುವ ಉದ್ದಾಮ ಪಂಡಿತರು ಆ ಪಕ್ಷದ ವಕ್ತಾರರಾಗುತ್ತಾರೆ. ಕಾಲ ಬದಲಾದಂತೆ ನಾವೂ ಬದಲಾಗಬೇಕಾದ್ದು ಸಹಜವಲ್ಲವೆ, ಎಂಬುದು ಆ ದುಷ್ಟ ಸಮರ್ಥನೆ. ಗೋರ್ಬಚೇವ್‌ನಂತಹವರು ತಿಪ್ಪರಲಾಗ ಹಾಕಬಹುದಾದರೆ ಸೋನಿಯಾ ಗಾಂಧಿ ಹಾಕುವುದರಲ್ಲಿ ಆಶ್ಚರ್ಯವೆಲ್ಲಿಯದು! ಆದರೆ ಭಾರತದ ಕಮ್ಯುನಿಸ್ಟರಲ್ಲಿ ಗೋರ್ಬಚೇವ್ ಅಂಶವು ಸಂಪೂರ್ಣವಾಗಿ ಇಲ್ಲವೇ ಇಲ್ಲವೆಂಬ ಪರಿಸ್ಥಿತಿ ಇದೆಯೇ ಎಂಬುದನ್ನು ಪರಿಶೀಲಿಸಬೇಕಾಗಿದೆ. ಇಂದು ''ತೀವ್ರವಾಗಿ'' ಬದಲಾಗಿರುವ ವಾತಾವರಣವಿದೆಯೆಂದು ಹೇಳಲಾಗುತ್ತಿದೆ. ಬಹುಶಃ ಅಂತಹ ವಾತಾವರಣದಲ್ಲಿ ಸ್ವತಃ ಇಂದಿರಾ ಗಾಂಧಿ ಕೂಡ ಜಾಗತೀಕರಣದ ಗಾಳಿಯಲ್ಲಿ ತೇಲಿಹೋಗುತ್ತಿದ್ದರೋ ಏನೋ! ಹಾಗಿರುವಾಗ, ಅವರ ಸೊಸೆ ಸೋನಿಯಾ ಅದೇ ಗಾಳಿಯಲ್ಲಿ ತೂರಿಹೋದರೆ ಆಕ್ಷೇಪವೇಕೆ?

ಮತ್ತೊಮ್ಮೆ ನಮ್ಮ ಸಂದಿಗ್ಧ ಕಾಲವನ್ನು ಪರಾಮರ್ಶೆ ಮಾಡಿಕೊಳ್ಳೋಣ: ಇಂದು ಹಳೆಯ ಪದಗಳು ಮತ್ತು ಪದಗುಚ್ಛಗಳು ಹೊಸ ಅರ್ಥಗಳನ್ನು ಪಡೆದುಕೊಂಡು ಬಿಟ್ಟಿವೆ. ಜಾಗತೀಕರಣವನ್ನು ಹಾಡಿಹೊಗಳುವ ಮತ್ತು ಅಂತರರಾಷ್ಟ್ರೀಯ ಬಂಡವಾಳ ಶಾಹಿಯನ್ನು ಸಮರ್ಥಿಸುವ ವ್ಯಕ್ತಿಗೆ ಇಂದು ಪುರೋಗಾಮಿ ಅಥವಾ ರ್‍ಯಾಡಿಕಲ್ ಎಂಬ ಪದ ಅನ್ವಯವಾಗುತ್ತಿದೆ. ರಾಷ್ಟ್ರೀಯತೆ ಮತ್ತು ಸಮಾಜವಾ[…] ಗಳನ್ನು ಪುರಸ್ಕರಿಸುವ ವ್ಯಕ್ತಿಗೆ ಇಂದು ''ಹಳೆ ಕಾಲದವನು'' ಅಥವಾ ''ಸಂಪ್ರದಾಯವಾದಿ'' ಎಂಬ ಪದಗಳ ಬಳಕೆಯಾಗುತ್ತಿದೆ. ಭಾರತದ ಕಮ್ಯುನಿಸ್ಟ[…] ಇದೊಂದು ಗೊಂದಲದ ಸನ್ನಿವೇಶ ಎನ್ನಿಸಿರಬೇಕು.

ಪದಗಳ ಈ ಹೊಸ ಬಳಕೆಗೆ ಅವರಿನ್ನೂ ಒಗ್ಗಿಕೊಂಡಿಲ್ಲ. ಜಾಗತೀಕರಣ[…] ಸ್ಪಷ್ಟವಾದ ಪ್ರತಿಕ್ರಿಯೆ ನೀಡಲು ಅವರಿಗಿನ್ನೂ ಸಾಧ್ಯವಾಗಿಲ್ಲದಿರಬಹುದು. ಒಂದು ಕ[…] ಜಾಗತೀಕರಣವನ್ನು ತಮ್ಮ ಬೆಂಬಲಿಗರಿಗೆ ತಿಳಿಯಹೇಳಬೇಕಾದ ಅವಶ್ಯಕತೆ, ಇನ್ನೊಂದು ಕಡೆ ಅವರು ಅಧಿಕಾರದಲ್ಲಿರುವ ರಾಜ್ಯಗಳಲ್ಲಿ ಬಡಜನರ ಹಿತವನ್ನು ರಕ್ಷಿಸುವುದು ಎರಡನ್ನೂ ಏಕಕಾಲಕ್ಕೆ ಮಾಡುವುದು ಕ್ಲಿಷ್ಟಕರ. ಪಶ್ಚಿಮ ಬಂಗಾಳದಂತಹ ರಾಜ್ಯದ[…] ಇದು ಸವಾಲಿನ ಪ್ರಶ್ನೆ. ಕಮ್ಯುನಿಸ್ಟ್ ಪಕ್ಷಗಳ ಸಾಮಾನ್ಯ ಕಾರ್ಯಕರ್ತರಿಗೆ ಇದೊಂದು ಗೊಂದಲದ ಪರಿಸ್ಥಿತಿ. ಅವರ ಜವಾಬ್ದಾರಿ ಇರುವುದು ಕಾರ್ಮಿಕರ, ಕೂಲಿಗೆಲಸಗಾರರ ರಕ್ಷಣೆಯಲ್ಲಿ. ಆದರೆ ಎಷ್ಟೋ ಬಾರಿ ಅವರನ್ನೆದುರಿಸಲಾಗದೆ ಕೇಂದ್ರ ಸರ್ಕಾರ[…] ರಕ್ಷಣಾ ಪಡೆಗಳ ಆಶ್ರಯ ಪಡೆಯಬೇಕಾದಂತಹ ಸನ್ನಿವೇಶ ಈ ಕಾರ್ಯಕರ್ತರಿ[…] ಬಂದಿದೆ. ಕೇಂದ್ರವೇನೋ ಜಾಗತೀಕರಣ ನೀತಿಯನ್ನು ಎತ್ತಿಹಿಡಿಯಲು ತನ್ನ ರಕ್ಷಣಾ ಛತ್ರಿಯನ್ನು ನೀಡಲು ಸದಾ ಸಿದ್ಧವಿರುತ್ತದೆ. ಇದೆಲ್ಲಾ ಇಂದಿನ ಸಾಮಾನ್ಯ ತಿಳುವಳಿ[…] ಅದನ್ನು ದೀರ್ಘವಾಗಿ ವಿವರಿಸುವ ಅಗತ್ಯವಿಲ್ಲ. ಇಷ್ಟನ್ನು ಹೇಳಬಹುದು: ''ಹಳೆಯ ಸಂಪ್ರದಾಯ''ಕ್ಕೆ ಸೇರಿದವರೆನ್ನಲಾದ ಪ್ರಸ್ತುತ ಲೇಖಕನಂತಹವರಿಗೆ ಸಮಾ[…] ವಾದದ ಇಂದಿನ ದುಃಸ್ಥಿತಿ ಮನಕಲಕುವಂತಾಗಿದೆ, ಗೋರ್ಬಚೇವ್ ಪ್ರಕ್ರಿಯೆಯ ಮರುಕಳಿಸುತ್ತಿರುವಂತೆ ಭಾಸವಾಗುತ್ತದೆ. ಒಂದಾದನಂತರ ಇನ್ನೊಂದರ ಸರ[…] ಯೆಂಬಂತೆ ಸರ್ಕಾರಗಳು ಮತ್ತು ವ್ಯವಸ್ಥೆಗಳು ಕುಸಿಯುತ್ತಾ ಹೋಗುತ್ತಿವೆ. ಒಂದ[…] ಗುಂಡಿನ ಕಾಳಗವಿಲ್ಲ, ಸೈನ್ಯದ ಒಂದು ಕ್ಷಿಪ್ರ ಕಾರ್ಯಾಚರಣೆಯಿಲ್ಲ, ಆದರು 'ಬನಾನಾ ಗಣರಾಜ್ಯಗಳು' ಕುಸಿದುಹೋಗುವಂತಿವೆ. ಇದಕ್ಕೆ ಕಮ್ಯುನಿಸ್ಟರ ಸಾಮಾನ್ಯ ವಿವರಣೆ ಹೀಗಿದೆ: ಭಾರತೀಯ ಜನತಾ ಪಕ್ಷದ ಮತೀಯತೆಯು ಉ[…]





ಪುಟ : 136
ಬೆಲೆ : ರೂ.70



ಕಾದಂಬರಿ ಸಾರ್ವಭೌಮ
**ಅ.ನ.ಕೃ**
ಅವರ ಎಲ್ಲ ಕೃತಿಗಳು
ಮರುಮುದ್ರಣವಾಗಿವೆ



ಎಲ್ಲ ಪ್ರಮುಖ ಪುಸ್ತಕದ
ಅಂಗಡಿಗಳಲ್ಲಿ ದೊರೆಯುತ್ತವೆ

**ಸಾಗರ್ ಪ್ರಕಾಶನ**
1679, 10ನೇ ಮುಖ್ಯ ರಸ್ತೆ, 5ನೇ 'ಎ' ಅಡ್ಡರಸ್ತೆ
ಬನಶಂಕರಿ 1ನೇ ಹಂತ, 2ನೇ ಬ್ಲಾಕ್
ಬೆಂಗಳೂರು – 560 050
ಮೊಬೈಲ್ : 94484 94632



ಸಿನೆಮಾ ನಟರು, ರಾಜಕಾರಣಿ -ಗಳೆಲ್ಲ ಜೈಲಿಗೆ ಆಗಾಗ ಬಂದು ಹೋಗ್ತಿರೋದ್ರಿಂದ ಸುಧಾರಣೆ ಮಾಡಬೇಕಾದ್ದು ಬಿಡಿ...?!

ಶತ್ರುವಾದ್ದರಿಂದ ಅದನ್ನು ಮಣಿಸಬೇಕು; ಅದಕ್ಕಾಗಿ ಸ್ವಲ್ಪ ಕಾಲದ ಮಟ್ಟಿಗೆ ಜಾಗತೀಕರಣದ ಅಂತರರಾಷ್ಟ್ರೀಯ ಪ್ರಭಾವವನ್ನು ಸಹಿಸಿಕೊಳ್ಳಬೇಕಾಗಿದೆ. ''ಕೇಸರಿ ಸೈನ್ಯ''ವನ್ನು ಹಿಮ್ಮೆಟ್ಟಿಸಲು ಜಾಗತಿಕ ಬಂಡವಾಳ ದೊಂದಿಗೆ ಸ್ವಲ್ಪಮಟ್ಟಿನ ಸಂಧಾನ ಅಗತ್ಯವಾಗಿದೆ.

ಈ ವಿವರಣೆಯು ಎಷ್ಟರಮಟ್ಟಿಗೆ ಅಂಗೀಕಾರಾರ್ಹ ಎನ್ನುವುದನ್ನು ವಿವೇಚಿಸಬೇಕು. ಮೊಟ್ಟಮೊದಲು ನಾವು ಆದ್ಯತೆಗಳನ್ನು ಗುರುತಿಸಿ ಅವನ್ನು ನೀತಿಯಲ್ಲಿ ಅಳವಡಿಸಿ ಕೊಳ್ಳಬೇಕು. ಕಮ್ಯುನಿಸ್ಟರು ತಮ್ಮ ರಾಜಕೀಯ ಹೊಂದಾಣಿಕೆ ಗಳಲ್ಲಿ ತಮ್ಮ ಸಿದ್ಧಾಂತಕ್ಕೆ ಸಂಪೂರ್ಣವಾಗಿ ವಿರುದ್ಧ ದಿಕ್ಕಿನಲ್ಲಿ ಹೋಗುವುದು ಅತಾರ್ಕಿಕವಾಗುತ್ತದೆ. ವೈಜ್ಞಾನಿಕ ಸಮಾಜ ವಾದದ ಆದ್ಯಪ್ರವರ್ತಕರ ಮೂಲ ಸಿದ್ಧಾಂತಗಳನ್ನು ಪೂರ್ತಿಯಾಗಿ ಭಗ್ನಗೊಳಿಸದಿದ್ದರೂ ಇಡೀ ಸಮಾಜವಾದಿ ಚಳುವಳಿಗೆ ಪೆಟ್ಟುಬೀಳುವಂತಾಗಿರುವುದು ಇಂದಿನ ವಾಸ್ತವತೆ. ಸಾಮಾಜಿಕ ಮತ್ತು ಆರ್ಥಿಕ ಸಮಾನತೆಯ ಆಕಾಂಕ್ಷೆಯು ಮೂಲತತ್ತ್ವ. ಅದರಲ್ಲಿ ಯಾವ ಚೌಕಾಸಿಗೂ ಅವಕಾಶವಿಲ್ಲ. ಆದರೆ ಇದನ್ನು ಭದ್ರವಾಗಿ ಆತುಕೊಳ್ಳಲಾಗಿದೆಯೆ ? ಎರಡನೆಯದಾಗಿ, ಕಾಂಗ್ರೆಸ್ ಪಕ್ಷದೊಡನೆ ಸೇರಿದಾಗ ಮತೀಯತೆಯನ್ನು ಹಿಮ್ಮೆಟ್ಟಿಸುವ ತಂತ್ರವು ಅದನ್ನು ಇನ್ನೂ ವ್ಯಾಪಕವಾಗಿ ಭದ್ರಗೊಳಿಸುವ ಫಲ ನೀಡುತ್ತದೆ. ರೋಗವನ್ನು ಪರಿಹರಿಸುವ ಬದಲು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ನೆಲೆಯಲ್ಲಿ ಅದು ಇನ್ನೂ ಚೆನ್ನಾಗಿ ಹರಡುವಂತಹ ಪರಿಣಾಮ ನಮ್ಮೆದುರಿಗಿದೆ.

ಭಾರತದ ಆರ್ಥಿಕತೆಯತ್ತ ದೃಷ್ಟಿ ಹರಿಸಿದರೆ ಅಲ್ಪಸಂಖ್ಯಾತರು ನಮ್ಮ ಸಮಾಜದಲ್ಲಿ ಅತ್ಯಂತ ಹೆಚ್ಚಿನ ಮಟ್ಟದಲ್ಲಿ ಅವಕಾಶವಂಚಿತರು ಎಂಬುದು ತಿಳಿಯುತ್ತದೆ. ಅವರ ದಾರುಣ ಕೊರತೆಯು ಆರ್ಥಿಕವಾದ್ದು. ಸಮಾಜವಾದಿ ರಾಜ್ಯದಲ್ಲಿ ಶ್ರೀಮಂತರ ಮತ್ತು ಬಡವರ ನಡುವಿನ ಅಂತರ ಬೃಹತ್ತಾಗಿರಕೂಡದೆಂಬುದು ಪ್ರಾಥಮಿಕ ಸತ್ಯ. ಸಮಾಜವಾದವು ಅದಕ್ಕೆ ಪುಷ್ಟಿ ನೀಡಲಾರದು. ಅಂತಹ ಅಂತರವಿದ್ದಾಗ ಅದರ ಫಲಾನುಭವಿಗಳು ಯಾರು ? ಹಿಂದು ಬಹುಸಂಖ್ಯಾತರೋ ಅಥವಾ ಮುಸಲ್ಮಾನ ಅಲ್ಪಸಂಖ್ಯಾತರೋ ? ಇಂತಹ ಸರಳ ಪ್ರಶ್ನೆಗೆ ಕಮ್ಯುನಿಸ್ಟ್ ಬುದ್ಧಿವಂತರಿಗೆ ಉತ್ತರ ಗೊತ್ತೇ ಇರುತ್ತದೆ. ಅದರ ಬಗ್ಗೆ ಅವರು ಚಿಂತಿಸಿಲ್ಲವೆಂದಲ್ಲ. ಇಡೀ ಸಂದರ್ಭದ ಅರಿವು ಅವರಿಗಿದೆ. ಹೀಗಿರುವಾಗ ಕಾಂಗ್ರೆಸ್ ಪಕ್ಷಕ್ಕೆ ಬೆಂಬಲ ನೀಡುವುದೆಂದರೆ ಏನರ್ಥ ? ಕಾಂಗ್ರೆಸ್ ಪಕ್ಷವು ಹಿಂದಿನ ಸ್ವತಂತ್ರ ಪಕ್ಷದ ಎಲ್ಲ ಲಕ್ಷಣಗಳನ್ನೂ ಮೈಗೂಡಿಸಿ ಕೊಂಡಿದೆ. ಸ್ವತಂತ್ರ ಪಕ್ಷವು ರಾಜ ಮಹಾರಾಜರ ಮತ್ತು ಭಾರಿ ಬಂಡವಳಿಗರ ಹಿತವನ್ನು ಕಾಯಲು ಮುಂದಾಗಿರುತ್ತಿತ್ತು. ಕಾಂಗ್ರೆಸ್ಸಿನ ಇಂದಿನ ಜಾಗತೀಕರಣದ ಸಮರ್ಥಕರು ಮಾಡುತ್ತಿರುವುದೂ ಅದನ್ನೇ. ಊಳಿಗಮಾನ್ಯ ಸಂಸ್ಕೃತಿಯ ಭೂಮಾಲಿಕರು, ಆಧುನಿಕ ಉದ್ಯಮಿಗಳು, ಇವರದೇ ರಕ್ಷಣೆ. ಸದ್ಯದ ನಮ್ಮ ಸನ್ನಿವೇಶದಲ್ಲಿ ಇವರೆಲ್ಲಾ ಹಿಂದೂಗಳೋ ಇತರರೋ ? ಅತ್ಯುಚ್ಚಮಟ್ಟದಲ್ಲಿ ಕೊಳ್ಳುಬಾಕರಾಗಿರುವುದು ಸಹ ಇವರೇ, ಏಕೆಂದರೆ ಅದಕ್ಕೆ ತಗಲುವ ವರಮಾನವಿರುವುದು ಇವರಿಗೇ. ಇವರನ್ನು ಸೃಷ್ಟಿಸಿದ್ದು, ಪೋಷಿಸುತ್ತಿರುವುದು, ಕಾಂಗ್ರೆಸ್. ಈ ಜನವಿಭಾಗದವರೇ ಈಗಲೂ ಹಿಂದು ಮತಧರ್ಮದ ಸಂಸ್ಥೆಗಳಿಗೆ ಅತಿಹೆಚ್ಚಿನ ಹಣ ಹರಿಸುವವರು. ಹಾಗೆ ಹಣ ಪಡೆಯುವ ಸಂಸ್ಥೆಗಳ ಲಕ್ಷ್ಯವೂ ಇಂಥವರನ್ನು ಕುರಿತದ್ದೇ ಆಗಿದೆ. ಹೀಗಾಗಿ ಹಿಂದು ಮತೀಯತೆಯ ವೃದ್ಧಿಗೆ ಕಾಂಗ್ರೆಸ್ಸಿನ ಕಾಣಿಕೆ ಗಮನಾರ್ಹವಾಗಿದೆ.

ಅಂತರರಾಷ್ಟ್ರೀಯ ವಲಯದಲ್ಲಿ ಕಾಂಗ್ರೆಸ್ ಮಾಡಿರುವುದು ಇನ್ನೂ ಹೆಚ್ಚು ಹೇಯವಾದ್ದು. ಎಲ್ಲ ನಾಚಿಕೆಯನ್ನೂ ತೊರೆದು ಅದು ಅಮೆರಿಕಾದ ಹಿತಾಸಕ್ತಿಯನ್ನು ಮೊದಲ ಸೂತ್ರವನ್ನಾಗಿಸಿಕೊಂಡಿದೆ : ರಾಜಕೀಯ, ಆರ್ಥಿಕ ಮತ್ತು ಮಿಲಿಟರಿ ಎಂಬ ಮೂರೂ ಕ್ಷೇತ್ರಗಳಲ್ಲಿ. ಇದಕ್ಕೆ ಭಾರತದ ಅಲ್ಪಸಂಖ್ಯಾತರ ಪ್ರತಿಕ್ರಿಯೆ ಏನಾಗಿರ ಬಹುದು ? ಎಲ್ಲರಿಗೂ ತಿಳಿದಂತೆ ಅಮೆರಿಕಾವು ಜಾಗತಿಕವಾಗಿ ಇಸ್ಲಾಂ-ವಿರೋಧಿ ಧರ್ಮಯುದ್ಧವನ್ನು ಘೋಷಿಸಿರುವಂತೆ ನಡೆದುಕೊಳ್ಳುತ್ತಿದೆ. ನಮ್ಮ ದೇಶದ ಅಲ್ಪ ಸಂಖ್ಯಾತರಲ್ಲಿ ಅತಿಹೆಚ್ಚಿನ ಸಂಖ್ಯೆಯವರಾದ ಮುಸಲ್ಮಾನರು ಇದನ್ನು ಪರಿಗಣನೆಗೆ ತೆಗೆದುಕೊಳ್ಳುವುದಿಲ್ಲವೆ ? ಜಾಗತಿಕ ಕಾರ್ಯಾಚರಣೆಗಳಲ್ಲಿ ಇಸ್ಲಾಂ ಮತ್ತು ಅಮೆರಿಕಾ ವಿರುದ್ಧ ಧ್ರುವಗಳು. ಮುಸಲ್ಮಾನ-ವಿರೋಧಿ ಭಾರತೀಯ ಜನತಾ ಪಕ್ಷವು ಅಮೆರಿಕಾದೊಡನೆ ಮಿಲಿಟರಿ ಬಾಂಧವ್ಯವನ್ನು ವಿರೋಧಿಸಿರುವುದು ಗಮನಾರ್ಹವಾಗಿದೆ. ಕಾಂಗ್ರೆಸ್ ಅಂತಹ ಬಾಂಧವ್ಯಕ್ಕೆ ಹಾತೊರೆಯುತ್ತಿರುವುದು ತಿಳಿದ ವಿಷಯ. ಮೂರು ವರ್ಷಗಳ ಹಿಂದೆ ತಮಗೆ ತಿಳಿಯದೆ ಹೋದದ್ದನ್ನು ಕಮ್ಯುನಿಸ್ಟರು ಈಗ ತಿಳಿದು ಕೊಳ್ಳುತ್ತಿದ್ದಾರೆ, ಸಾರ್ವಭೌಮತ್ವಕ್ಕೆ ಕಾಂಗ್ರೆಸ್ ಮಹತ್ವ ನೀಡುವುದಿಲ್ಲವೆಂದು.

ಕಮ್ಯುನಿಸ್ಟರ ಬೆಂಬಲದಿಂದ ಮೂರು ವರ್ಷಗಳಿಂದ ಅಧಿಕಾರ ಚಲಾಯಿಸುತ್ತಿರುವ ಕಾಂಗ್ರೆಸ್ ಪಕ್ಷವು ಶ್ರೀಮಂತರ ಮತ್ತು ಬಡವರ ನಡುವಿನ ಅಂತರವನ್ನು ಹಿಂದೆಂದಿಗಿಂತಲೂ ಹೆಚ್ಚಿನ ಮಟ್ಟದಲ್ಲಿ ಬೆಳೆಸಿದ್ದಿದೆ. ಕಳೆದ ಅರವತ್ತು ವರ್ಷಗಳಲ್ಲಿ ಎಂದೂ ಇಷ್ಟು ಅಂತರವಿರಲಿಲ್ಲ. ಬೇರೆ ಕೆಲವು ದೇಶ ಗಳಲ್ಲಿದ್ದಂತೆ ಭಾರತದಲ್ಲಿಯೂ ಕಮ್ಯುನಿಸ್ಟರು ಭೌತಿಕ ಸಂಪತ್ತಿನ ಬೆಳವಣಿಗೆಗೆ ಆದ್ಯತೆ ನೀಡಿದ್ದಾರೆ. ಗತಿತಾರ್ಕಿಕ ಭೌತವಾದ ಹಿಂದಕ್ಕೆ ಸರಿದಿದೆ. ನಿವ್ವಳ ರಾಷ್ಟ್ರೀಯ ಉತ್ಪಾದನೆ ಹೆಚ್ಚಿದರೆ ಸಾಕೆಂಬ ಭಾವನೆ ವ್ಯಾಪಕ ವಾಗುತ್ತಿದೆ, ವಿವಿಧ ವರ್ಗಗಳ ಮೇಲೆ ಅದರ ಪ್ರಭಾವವು ಚರ್ಚೆಗೆ ಬರುತ್ತಿಲ್ಲ. ವರ್ಗ ಹೋರಾಟದ ಜಾಗದಲ್ಲಿ ವರ್ಗ ಶರಣಾಗತಿ ಮನೆಮಾಡಿ ಕೊಳ್ಳುತ್ತಿದೆಯೇ ಎಂಬ ಪ್ರಶ್ನೆ ಏಳುತ್ತಿದೆ. ನಿನ್ನೆಯ ನಾಸ್ತಿಕರು, ಸರ್ವಧರ್ಮ ಸಮಾನಭಾವ ಇದ್ದವರು, ಈಚೀಚೆಗೆ ಗಣನೀಯ ಸಂಖ್ಯೆಯಲ್ಲಿ ಲಕ್ಷ್ಮೀ ಪೂಜೆಯತ್ತ ವಾಲುತ್ತಿದ್ದಾರೆ. ಸಮಾಜವಾದಿಗಳಾಗಿ ಗೌರವದ ಸ್ಥಾನಗಳಿಸಿದ್ದ ಕೆಲವರಂತೂ ದೇವಿಯರ, ಪೂಜಾರಿಗಳ, ಮುಂದೆ ಅಡ್ಡಬೀಳುವಂತಹ ಹಂತವನ್ನು ಮುಟ್ಟಿದ್ದಾರೆ. ಇನ್ನೂ ಹೆಚ್ಚುಹೆಚ್ಚಾಗಿ ಬಂಡವಾಳ ಹೂಡಿಕೆ ಆಗಬೇಕೆಂದು ಬಯಸಿ ನಾಳೆ ಪೂಜಾರಿಗಳ ಮುಂದೆ ಅಡ್ಡಬಿದ್ದಂತೆ ಕೋಟ್ಯಧಿಪತಿಗಳ ಮುಂದೆಯೂ ಬಾಗಿನಿಲ್ಲಬಹುದು !

''ಜೀವನದ ಮೂಲಭೂತ ತತ್ತ್ವವಾಗಿ ಶುದ್ಧ ಸಮಾಜವಾದವನ್ನು ಒಂದು ಸ್ವಾಯತ್ತ ಮೌಲ್ಯ'' ಎಂದು ಬಗೆದಿದ್ದವರು ಉಳಿದೇ ಇಲ್ಲವೆ ? ಎಲ್ಲರೂ ಅಸ್ತಂಗತರಾದರೆ ? ಬಹುಶಃ ಇಲ್ಲ. ಆದರೆ ಆ ತತ್ತ್ವಶಾಸ್ತ್ರದ ಪ್ರಮುಖ ಪ್ರತಿಪಾದಕರು, ಅಂದರೆ ಕಮ್ಯುನಿಸ್ಟರು, ಅದನ್ನು ಗೌಣವಾಗಿಸುತ್ತಿದ್ದಾರೇನೋ ಎಂಬ ಆತಂಕವಿದೆ. ಆ ತತ್ತ್ವದ ಹೊಳಪು ಮಾಸು ವಂತಾಗಬಾರದು. ನನ್ನಂತಹ ಒಬ್ಬ ಸಾಮಾನ್ಯ ವ್ಯಕ್ತಿಯು ಈಗ ತನ್ನನ್ನು ತಾನು ಸಮಾಜವಾದಿಯೆಂದು ಕರೆದುಕೊಳ್ಳಲು ಸ್ವಲ್ಪ ಅಂಜುವಂತಾಗಿದೆ. ಏಕೆಂದರೆ ಜನಸಾಮಾನ್ಯರಲ್ಲಿ ಸಮಾಜವಾದಿಯೆಂದರೆ ವಿಚಿತ್ರ ಕಲ್ಪನೆಗಳಿವೆ : ಅವನೊಬ್ಬ ಗುಂಡಗಿನ ತಳವಿರುವ ಜಾಡಿ; ಅದನ್ನು ಯಾವ ಕಡೆಗೆ ಬೇಕಾದರೂ ವಾಲಿಸಬಹುದು.

ಒಟ್ಟಿನಲ್ಲಿ, ಈಗ 'ಜಾಗತಿಕ-ವಾದಿ' ಮತ್ತು 'ಸಮಾಜವಾದಿ' ಎಂಬೆರಡು ನಾಮಧೇಯಗಳೂ ತಳ್ಳಿ ಹಾಕಲ್ಪಟ್ಟು, ಒಬ್ಬ ವಿದ್ಯಾವಂತ ಭಾರತೀಯನು ಎಡ ಚಿಂತನೆಯ ಯಾವ ಸಾಮಾಜಿಕ-ರಾಜಕೀಯ ಆಶಯಗಳೊಡನೆ ತನ್ನನ್ನು ಗುರುತಿಸಿ ಕೊಳ್ಳಬೇಕೆನ್ನುವುದು ಗೊಂದಲದ ಗೂಡಾಗಿದೆ. 'ಗಾಂಧಿವಾದಿ' ಎಂಬ ಅಂಕಿತವು ಥಟ್ಟನೆ ಎದುರಿಗೆ ಬರುತ್ತದೆ. ಈಗ ಅರವತ್ತು ವರ್ಷಗಳ ಹಿಂದೆ ಆಗಿದ್ದರೆ ನಮ್ಮ ದೇಶದಲ್ಲಿ ಸಾಮಾಜಿಕ ಕಳಕಳಿಯಿರುವ ಬುದ್ಧಿಜೀವಿಗಳ ಪೈಕಿ ಬಹುಮಂದಿಗೆ ಅದೇ ಮೊದಲ ಆಯ್ಕೆಯಾಗಿರುತ್ತಿತ್ತು. ಅದು ಈಗ ಸಾಧ್ಯವಿಲ್ಲವಾಗಿದೆ. ಈಗ 'ಗಾಂಧಿವಾದಿ' ಎಂದರೆ ಗುಮಾನಿಯಿಂದ ನೋಡಬೇಕಾದ ಸನ್ನಿವೇಶ ಬಂದುಬಿಟ್ಟಿದೆ. ಬಹುಮಂದಿಗೆ 'ಗಾಂಧಿವಾದಿ'ಯು ಎಲ್ಲೋ ಸ್ಮಶಾನದಿಂದ ಎದ್ದುಬಂದವನಿರಬೇಕೆಂಬ ಭಾವನೆಯಿದೆ; ಹಾಗಿಲ್ಲದಿದ್ದರೆ, ಅವನೊಬ್ಬ ಬೂಟಾಟಿಕೆ ದಾಸಯ್ಯನೆಂಬ ಅಭಿಪ್ರಾಯವಿರುತ್ತದೆ. ಈ ಬದಲಾವಣೆ ಉಂಟಾದದ್ದು ಹೇಗೆಂಬ ಜಿಜ್ಞಾಸೆ ನನ್ನನ್ನು ಕಾಡುತ್ತಿದೆ.

ಎರಡನೆಯ ಮಹಾಯುದ್ಧದ ಕಾಲದಲ್ಲಿ ನಾನು ಕಾಲೇಜು ವಿದ್ಯಾರ್ಥಿಯಾಗಿದ್ದೆ. ಸ್ವಾತಂತ್ರ್ಯಪೂರ್ವದ ಕಾಲ ಅದು. ನಾನಿದ್ದ ಅಲಹಾಬಾದಿನಲ್ಲಿ ಅಮೆರಿಕಾದ ಒಬ್ಬ ಪಾದ್ರಿ ಇರುತ್ತಿದ್ದ. ಆತನ ಮನೆಯಲ್ಲಿ ಪ್ರತಿನಿತ್ಯ ಪ್ರಾತರ್ಭಜನೆ ಇರುತ್ತಿತ್ತು. ನಾನಲ್ಲಿಗೆ ಹೋಗುತ್ತಿದ್ದೆ. ಆ ಪಾದ್ರಿಯು ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಸಂಪೂರ್ಣವಾಗಿ ಮಗ್ನನಾಗಿದ್ದ. ಶುಕ್ರವಾರದ ಸಂಜೆ ಪ್ರಾರ್ಥನಾ ಸಭೆ ನಡೆಯುತ್ತಿತ್ತು. ಒಂದು ಏಳೆಂಟು ಮಂದಿಯಷ್ಟೆ ಹಾಜರಿ ರುತ್ತಿದ್ದದ್ದು. ಗಾಂಧೀಜಿಗೆ ಪ್ರಿಯವಾಗಿದ್ದ ಗೀತೆಗಳನ್ನು ಹಾಡುವುದು ಮತ್ತು ಚರಖಾದಲ್ಲಿ ನೂಲುವುದು ಅಲ್ಲಿಯ ಕಾರ್ಯಕ್ರಮವಾಗಿರುತ್ತಿತ್ತು.

ಗಾಂಧಿವಾದ ವೆಂದರೆ ಇವೆರಡೂ ಸೇರಿವೆಯೆಂಬ ಭಾವನೆ ಈಗಲೂ ನನ್ನ ಮನಸ್ಸಿನಲ್ಲಿ ಅಚ್ಚೊತ್ತಿದೆ. ಇವಿಲ್ಲದ ಗಾಂಧಿವಾದವು ನನಗೆ ಬರಡಾಗಿ ಕಾಣುತ್ತದೆ. ತನ್ನ ಅಹಿಂಸಾ ಮಾರ್ಗವು ಆಯುಧರಹಿತ ಹೋರಾಟವಾಗಿರಲಿಲ್ಲವೆಂದು ಗಾಂಧೀಜಿ ಹೇಳುತ್ತಿದ್ದುದುಂಟು. ಅಣ್ವಸ್ತ್ರಕ್ಕಿಂತಲೂ ಪ್ರಬಲವಾದ ಆಯುಧ ತಮ್ಮದಾಗಿತ್ತೆಂದು ಅವರ ಭಾವನೆಯಾಗಿತ್ತು. ಮೃಗೀಯ ಸಾಮ್ರಾಜ್ಯಶಾಹಿಯ ವಿರುದ್ಧ ಅದೇ ಅವರ ಅಸ್ತ್ರವಾಗಿತ್ತು. ಅಹಿಂಸೆಯೆಂಬ ಆಯುಧವು ಗಾಂಧೀಜಿಗೆ 'ಆತ್ಮಶಕ್ತಿ' ಎನಿಸಿತ್ತು. ಭಗವಂತನ ನಾಮಸ್ಮರಣೆಯಿಂದ ಅವರು ತಮ್ಮ ಆಯುಧವನ್ನು ಹರಿತಗೊಳಿಸಿ ಕೊಳ್ಳುತ್ತಿದ್ದರು. ''ಅದಿಲ್ಲದಿದ್ದರೆ ನಾನು ಸೊನ್ನೆ'' ಎನ್ನುತ್ತಿದ್ದರು ಅವರು. ಬ್ರಿಟಿಷರ ವಿರುದ್ಧ ಸೆಣೆಸಲು ಪ್ರತಿಯೊಬ್ಬ ಯೋಧನೂ ಈ 'ಆತ್ಮಶಕ್ತಿ'ಯನ್ನು ಬೆಳೆಸಿಕೊಳ್ಳಬೇಕೆಂದು ಅವರ ಆಶಯವಾಗಿತ್ತು. ಅಂತೆಯೇ, ಅವರಿಗೆ ಚರಖಾ ಎಂಬುದು ಒಂದು ಜೀವನ ವಿಧಾನವಾಗಿತ್ತು; ಇಂಗ್ಲೆಂಡಿನಿಂದ ಆಮದಾದ ಬಟ್ಟೆಗಳನ್ನು ಬಹಿಷ್ಕರಿಸುವುದಕ್ಕೆ ಅದೊಂದು ಸಾಧನ ವೆಂಬುದಷ್ಟೇ ಅವರ ಕಲ್ಪನೆಯಾಗಿರಲಿಲ್ಲ. ಭಾರತದ ಗ್ರಾಮ ಸ್ವರಾಜ್ಯ ಮತ್ತು ಸ್ವಾವಲಂಬನೆಗೆ ಚರಖಾ ಒಂದು ಪ್ರತೀಕ ಎಂಬುದು ಅವರ ಕಾಣ್ಕೆ. ಚೀಣಾದ ಗ್ರಾಮಾಂತರಗಳಲ್ಲಿದ್ದ 'ಕಮ್ಯೂನ್'ಗಳಿಗೆ ಸಂವಾದಿಯಾದದ್ದು ಇದು.

ಇದರ ಬಗ್ಗೆ ಇಂದಿನ ಗಾಂಧಿವಾದಿಗಳ ಅಭಿಮತ ವೇನು? ಎರಡನ್ನೂ ಧಿಕ್ಕರಿಸುವುದು, ಗಾಂಧೀಜಿಯ ಮೂಲಭೂತ ಗ್ರಹಿಕೆಗಳನ್ನು ತಿರಸ್ಕರಿಸುವುದು. ಹಾಗಿದ್ದರೂ ಅವರು ಗಾಂಧಿವಾದಿಗಳೇ! ಗಾಂಧೀಜಿಯ ಕಾಲದಲ್ಲಿ ಹುಡುಗನಾಗಿ, ಯುವಕನಾಗಿ, ಬೆಳೆದ ನನಗೆ ಇದು ಅಸಾಧ್ಯವಾದ ಪ್ರಮೇಯ ಎನಿಸುತ್ತದೆ. ನನಗೆ ನೈಜವಾದ ಗಾಂಧಿವಾದ ಮತ್ತು ಸಮಾಜವಾದಗಳು ಹೀಗೆಲ್ಲಾ ತಿರುಗುಮುರುಗು ಮಾಡಲು ಬರದ ಅಂಶಗಳಾಗಿ ಕಾಣುತ್ತವೆ. ಒಂದು ಚಿಂತನಾ ಪದ್ಧತಿಯಲ್ಲಿ ಅದರ ಮೂಲಸೂತ್ರಗಳನ್ನು ಹಿಗ್ಗಾಮುಗ್ಗಾ ಎಳೆದಾಡುವುದೆಂದರೇನು! ಹೇಗೆ ಸಮಾಜವಾದದಲ್ಲಿ 'ಪೂರ್ಣ ಸಮಾನತೆ'ಯು ಅವಿಚ್ಛಿನ್ನವಾಗಿರಬೇಕೋ ಹಾಗೆಯೇ ಗಾಂಧಿವಾದದಲ್ಲಿ 'ಆತ್ಮಶಕ್ತಿ' ಪ್ರಧಾನ ಅಂಶವಾಗಿರಬೇಕು. ಇದು ಭಗವಂತನಲ್ಲಿ ಸ್ಥಿರವಾದ ನಂಬಿಕೆಯಿಂದ ಮೂಡುವಂಥದು. ಅದಿಲ್ಲದಿದ್ದರೆ ಅದು ಕ್ರಿಸ್ತನಿಲ್ಲದ ಕ್ರೈಸ್ತಮತದಂತಾಗಿಬಿಡುತ್ತದೆ. ಈಗಿನ ಪರಿಸ್ಥಿತಿ ನೋಡಿ: ತಮ್ಮನ್ನು ತಾವು ಗಾಂಧಿವಾದಿಗಳೆಂದು ಕರೆದುಕೊಳ್ಳುವವರು ಬೇರೆಲ್ಲರಂತೆ ಅಮೇರಿಕಾ ನಿರ್ದೇಶಿತ ಜಾಗತಿಕ ರಥದ ಕಾಲಾಳುಗಳಾಗಿಬಿಟ್ಟಿದ್ದಾರೆ. ಅಮೇರಿಕಾದ ಪ್ರಜಾಪ್ರತಿನಿಧಿ ಸಭೆಯು ದಲೈಲಾಮನಿಗೆ ಚಿನ್ನದ ಪದಕ ನೀಡುತ್ತದೆ; ಅದಕ್ಕಾಗಿ ಗಾಂಧಿ ಶಾಂತಿ ಪ್ರತಿಷ್ಠಾನವು ಆ ದಲೈಲಾಮನಿಗೆ ಗೌರವ ಸಲ್ಲಿಸುತ್ತದೆ! ಇದಕ್ಕಿಂತಲೂ ಕರುಣಾಜನಕವಾದ ಸನ್ನಿವೇಶ ಬೇಕೆ! ಇದನ್ನು ವಿಸ್ತರಿಸಿ ಹೇಳುವ ಅಗತ್ಯವಿಲ್ಲ.

ಹೀಗಿರುವಾಗ ''ನಾನು ಯಾರು'' ಎಂಬ ಪ್ರಶ್ನೆಗೆ ನಾನು ಯಾವ ನಾಮಫಲಕ ಅಂಟಿಸಿಕೊಳ್ಳಲಿ? ಗತ್ಯಂತರವಿಲ್ಲವೆಂದು ನಾನು ಯಾವುದಾದರೂ ಮತಧರ್ಮಕ್ಕೆ ಶರಣಾಗಬೇಕೆ? ಅನೇಕರು ಮಾಡುತ್ತಿರುವುದು ಅದನ್ನೇ. ಅವರಿಗೆ ಸಾಯಿಬಾಬನೋ ಮಾತಾಜೀಯೋ ಬೇಕಾಗಿಬಿಟ್ಟಿದೆ. ಅವರಂತಹ ಯಾವನೋ ಗುರುವೋ ಸಾಧುವೋ ಸಿಕ್ಕರೆ ಅವನ ಅಥವಾ ಅವಳ ಪದತಲದಲ್ಲಿ ಕೂತು ಈ ಜನ ನೆಮ್ಮದಿಯನ್ನು ಕಂಡುಕೊಳ್ಳುತ್ತಿದ್ದಾರೆ. ಇನ್ನಾವನೋ ಗುರು ಪವಾಡಪುರುಷನಾಗಿ ಕಾಣುತ್ತಾನೆ. ಮತ್ತೊಬ್ಬ ಐದೇ ನಿಮಿಷಗಳಲ್ಲಿ ನಿಮ್ಮ 'ಕುಂಡಲಿನಿ ಶಕ್ತಿ'ಯನ್ನು ಜಾಗ್ರತಗೊಳಿಸುತ್ತಾನೆ. ನಿಮ್ಮೊಬ್ಬರದೇ ಏನು, ಗುಂಪಿನಲ್ಲಿರುವ ಐನೂರು ಮಂದಿಯದನ್ನೂ ಜಾಗ್ರತಗೊಳಿಸಿಬಿಡುತ್ತಾನೆ. ಐನೂರಲ್ಲದಿದ್ದರೆ ಐದುಸಾವಿರವಾಗಲಿ, ಚಿಂತೆಯಿಲ್ಲ. ಮುಖ್ಯವಾಗಿ, ಅವರೆಲ್ಲಾ 'ನಂಬಿಕೆಯ' ಶಿಷ್ಯರಾಗಿರಬೇಕು, ದಾಸರಾಗಿರಬೇಕು. ಏನೇ ಇರಲಿ, ಈ ಮಾಂತ್ರಿಕ ಮಹಾತ್ಮರಲ್ಲಿ ಸ್ವಲ್ಪಮಟ್ಟಿನ ಪಾರದರ್ಶಕತೆ ಉಂಟು. ನಿಮಗೆ ಮೋಸ ಮಾಡುತ್ತಿದ್ದಾನೆಂದು ಕಂಡರೆ ಅವನನ್ನು ಬಿಡಬಹುದು. ಅಂತೂ ಅವನ ಕೆಲಸವೆಲ್ಲ ಬಹಿರಂಗವಾಗಿಯೇ ನಡೆಯುತ್ತದೆ.



ಗುರು - ಶಿಷ್ಯರಿಬ್ಬರೂ ಸ್ವಯಂ ನಿರ್ಮಿತವಾದ ತಮ್ಮದೇ ಭ್ರಾಮಕಲೋಕದಲ್ಲಿ ವ್ಯವಹರಿಸುತ್ತಿರುತ್ತಾರೆ. ಅವರೇನು ಮಾಡುತ್ತಿದ್ದಾರೆಂಬುದು ಇಬ್ಬರಿಗೂ ತಿಳಿದಿದೆ. ಇಬ್ಬರದೂ ಆತ್ಮವಂಚನೆಯ ಪ್ರಸಂಗವೇ. ಆದರೆ ಅದನ್ನು ರಾಜಾರೋಷವಾಗಿ ಮಾಡಿಕೊಳ್ಳುತ್ತಿರುತ್ತಾರೆ. ರಾಜಕಾರಣಿಗಳಲ್ಲಿ ಬಹುತೇಕ ಇಂತಹ ಮುಕ್ತತೆ ಇಲ್ಲ. ಅಸತ್ಯವನ್ನು ಸತ್ಯವೆಂದು ತಮ್ಮ ಹಿಂಬಾಲಕರಿಗೆ ತಿಳಿಸುವಾಗ ಅವರಿಗೆ ಅಳುಕೆನಿಸುವುದಿಲ್ಲ. ಆದರೆ 'ಗುರು'ವೊಬ್ಬನು ಅಸತ್ಯವನ್ನು ಹಾಗೆಯೇ ಬಿಂಬಿಸುತ್ತಾನೆ; ಅದನ್ನು ಹಾಗೆಯೇ ಸ್ವೀಕರಿಸಿ ಮನಶ್ಶಾಂತಿ ಪಡೆಯಬೇಕೆಂದು ಶಿಷ್ಯನಿಗೆ ಬೋಧಿಸುತ್ತಾನೆ. ಜೊತೆಗೆ ಅದೇ ಸತ್ಯವೆಂದು ಪರಿಭಾವಿಸಬೇಕೆಂದು ಸಹ ಆಗ್ರಹಿಸುತ್ತಾನೆ. ಎರಡೂ ಪಕ್ಷಗಳ ಪೂರ್ಣಸಮ್ಮತಿಯಿಂದ ನಡೆಯುವ ವಂಚನೆ ಇದು.

### ಮರುಮಾತು

'ಹೊಸತು'ವಿಗಾಗಿ ಈ ಲೇಖನ ಬರೆ
ಪೂರೈಸುವ ವೇಳೆಗೆ ಒಂದು ಸುದ್ದಿ ಬಂತು. ಸಿ.ಪಿ.
(ಎಂ-ಎಲ್) ಪಕ್ಷದ ವಿದ್ಯಾರ್ಥಿ ವಿಭಾಗವಾದ ಅಖಿ
ಭಾರತ ವಿದ್ಯಾರ್ಥಿ ಸಂಘವು ದೆಹಲಿಯ ಜವಾಹರಲಾ
ನೆಹರು ವಿಶ್ವವಿದ್ಯಾನಿಲಯದ ಚುನಾವಣೆಯಲ್ಲಿ ನಾ
ಉಚ್ಚಸ್ಥಾನಗಳನ್ನು ಗೆದ್ದುಕೊಂಡಿತೆಂಬುದು ಆ ಸುದ್ದಿ.
ಜೆ.ಎನ್.ಯು. ಎಂಬುದು ಒಂದು ರೀತಿ ಭಾರತ
ಆಕ್ಸ್‌ಫರ್ಡ್ ಎನಿಸಿಕೊಂಡಿದೆ. ಅಲ್ಲಿ ಇಂತ
ತೀವ್ರಗಾಮಿ ಗುಂಪೊಂದು ಜಯಭೇರಿ ಬಾರಿಸಿ
ಬಹಳ ಸಂತಸ ತರುವ ಸುದ್ದಿಯೇನೂ ಅಲ್ಲ. ಆದರೆ
ವಿದ್ಯಾರ್ಥಿ ಸಂಘವು ಸೋಲುಣಿಸಿದ್ದು ಯಾರ
ಎಂಬುದು ಕುತೂಹಲದ ವಿಷಯ.

ಸೋತಿದ್ದು 'ಕೇಸರಿ' ಬಣ್ಣದ ಜಡ್ಡು ಮನಸ
ಪಕ್ಷಗಳ ಪ್ರತಿನಿಧಿಗಳಲ್ಲ, ಅಥವಾ ಕಾಂಗ್ರೆಸ್ ಪಕ್ಷ
ಎತ್ತಿಹಿಡಿಯುವ ಪ್ರಸಕ್ತ ಸನ್ನಿವೇಶದ ಸಂಪೂರ್ಣ ಮ
ಬಂಡವಾಳಶಾಹಿಯ ಪ್ರತಿನಿಧಿಗಳೂ ಅಲ್ಲ. ಸೋತವ
ಸೈದ್ಧಾಂತಿಕವಾಗಿ ಎಂ-ಎಲ್ ಪಕ್ಷದ ದಾಯಾದಿಗಳ
ಭಾರತ ವಿದ್ಯಾರ್ಥಿ ಒಕ್ಕೂಟ ಮತ್ತು ಅಖಿಲ ಭಾರ
ವಿದ್ಯಾರ್ಥಿ ಒಕ್ಕೂಟಗಳ ಪ್ರತಿನಿಧಿಗಳು. ಇವೆರಡ
ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ ಮತ್ತು ಭಾರ
ಕಮ್ಯುನಿಸ್ಟ್ ಪಕ್ಷದ ಪ್ರಾತಿನಿಧಿಕ ಸಂಘಗಳು. ಹಲ
ದಶಕಗಳಿಂದ ಜೆ.ಎನ್.ಯು.ನಲ್ಲಿ ಅವರದೇ ವಿಜಯ
ಪತಾಕೆ ಹಾರಾಡುತ್ತಿತ್ತು. ನಾನೆಷ್ಟೋ ಬಾರಿ ಅಂದ
ಕೊಳ್ಳುತ್ತಿದ್ದುದು ಹೀಗೆ: ಮಾವೋವಾದಿ ಎನ್ನಲಾ
ವಿದ್ಯಾರ್ಥಿ ಸಂಘದ ತೀವ್ರಗಾಮಿ ನಾಯಕರು ಏನಿದ್ದರೂ
ಸುಮ್ಮನೆ ಬಾಯಿಮಾಡುವ ಜನ. ಎಲ್ಲೋ ದೂರ
ಅಡವಿಗಳಲ್ಲಿ ಅಥವಾ ಮಧ್ಯ ಹಾಗೂ ದಕ್ಷಿಣ ಭಾರತ
ಕೆಲವು ಗುಡ್ಡಗಳಲ್ಲಿ ಅಡಗಿಕೂತ ಮಂದಿ, ಎಂದ
ಸಮಾಜದ ಮೇಲ್ವರ್ಗಗಳಿಗೆ ಸೇರಿದ ವಿದ್ಯಾರ್ಥಿಗ
ಮನದಾಳದಲ್ಲಿ ಇವರು ಬೇರುಬಿಡುತ್ತಿರ ಬಹು
ದೆಂಬುದು ನನ್ನ ಊಹೆಗೆ ನಿಲುಕಿರಲಿಲ್ಲ. ದೇಶದಲ್ಲ
ಪುರೋಗಾಮಿಗಳೆನಿಸಿ ಕೊಂಡ ಜೆ.ಎನ್.ಯು
ವಿದ್ಯಾರ್ಥಿಗಳಿಗೆ ಮಾವೋವಾದಿ ನಾಯಕರ ಮೇ
ಅಭಿಮಾನ ಉಕ್ಕಿದ್ದು ಹೇಗೆ? ಸಿ.ಪಿ.ಐ. ಮತ
ಸಿ.ಪಿ.ಎಂ. ವಿದ್ಯಾರ್ಥಿ ಸಂಘಟನೆಗಳ ಬಗ್ಗೆ ಅವರಿ
ಭ್ರಮನಿರಸನ ಉಂಟಾಗಿರುವುದು ಏಕೆ? ಉತ್ತರವ
ನಾನು ಊಹಿಸುವುದು ಹೀಗೆ: ಈ ಪಕ್ಷಗಳು ಕಾಂಗ್ರೆಸ
ಜೊತೆ ವಿವಾಹ ಸಂಬಂಧ ಬೆಳೆಸಿವೆ. ಕಾಂಗ್ರೆಸ
ಆದರೋ ಹಿಂದಿನ ಸ್ವತಂತ್ರ ಪಕ್ಷದ ಅಪರಾವತಾರ
ಅಂಥವರೊಡನೆ ಬೆರೆತು ಹೋಗುತ್ತಿರುವ ಪಕ್ಷಗ
ಬಗ್ಗೆ ಆದರವು ಕ್ರಮೇಣ ಕಂದಿಹೋಗುತ್ತಿರಬಹುದು
ಇದು ನಿಜವಾದರೆ ಕಮ್ಯುನಿಸ್ಟರು ಗಂಭೀರವಾ
ಕೂಡಲೆ ಆತ್ಮಾವಲೋಕನ ಮಾಡಿಕೊಳ್ಳಬೇಕಾದ
ಅನಿವಾರ್ಯ.

(ಲೇಖನವು ಆಂಗ್ಲಮೂಲದಿಂದ ಅನುವಾದಗೊಂಡಿದೆ)

ಎಂ. ಬಿ. ಲಾಲ್
ನಿವೃತ್ತ ಜಂಟಿ ಸಂಪಾದಕರು, 'ದಿ ಸ್ಟೇಟ್ಸ್‌ಮನ್', ನವದೆಹಲಿ,
ಡಿ-೩೦, ಪ್ರೆಸ್ ಎನ್‌ಕ್ಲೇವ್, ನವದೆಹಲಿ - ೧೧೦ ೦೧೭

# ಹಾಯೆನಿಸುವ ಕ್ಷಣಗಳು







ಖಾಲಿ ಕೋಣೆ, ಒಬ್ಬಂಟಿ ಕುಳಿತಾಗ ಹಾಸಿಗೆ-
ಯಲ್ಲಿ ಇಲಿಯ ಓಡಾಟ; ಜುಗುಪ್ಸೆ
ಕುಟು ಕುಟು ಸದ್ದು, ಕಡಿಯುತಿರಬಹುದೇನನೊ-
ಅದು ನನ್ನ ಪುಸ್ತಕವಾಗಿರಬಹುದೆ ?
ಏನು ಮಾಡಲೂ ತಿಳಿಯದೆ ಕುಳಿತಾಗ
ಕಾಣಿಸಿತು ಅಲ್ಲಿ ಮೂಲೆಯಲಿ ಮೆತ್ತಗೆ
ಅತ್ತಿತ್ತ ಅಲ್ಲಾಡಿಸುವ ಬೆಕ್ಕಿನ ಬಾಲ
ಸದ್ದು ಬಂದೆಡೆಗೇ ಗಮನವಿರಿಸಿ ನೋಡುತ್ತಿತ್ತು.
ನಾನು ಉಸಿರು ಬಿಗಿಹಿಡಿದು ಒಂದು ಕ್ಷಣ ಸ್ತಬ್ಧ
ಎಲ್ಲಿಂದಲೋ ಇಲಿಯು ಸರ್ರನೆ ಓಡಿ
ಮರೆಯಾಯ್ತು . ಮನಸ್ಸಿಗೆ ಹಾಯೆನಿಸಿತು.

*　　*　　*

ಮನೆ ಕಟ್ಟಿಕೊಳ್ಳುವ ಅಪೇಕ್ಷೆ ಅಷ್ಟಾಗಿ ಇರಲಿಲ್ಲ
ಎಲ್ಲಿಂದಲೊ ಕೈಗೆ ಒಂದಿಷ್ಟು ಹಣ ಬಂತು.
ಕಟ್ಟಿಸಲು ಪ್ರಾರಂಭಿಸಿದೆ.
ಕಟ್ಟಿಗೆ, ಇಟ್ಟಿಗೆ, ಕಲ್ಲು, ಉಸುಕು, ಸಿಮೆಂಟು
ನೂರೆಂಟು ಕೊಳ್ಳಬೇಕಾಯ್ತು
ಹಣ ಹೊಂದಿಸಲು ಎಲ್ಲ ಮೂಲಗಳ ತಡಕಾಡಿದೆ
ಎಲ್ಲವೂ ಮನೆಯ ಸಲುವಾಗಿ.

ಕೊನೆಗೊಂದು ದಿನ ಮನೆಕಟ್ಟಿ ಮುಗಿಯಿತು
ಗೋಡೆಗೆ ಸುಣ್ಣ ಬಣ್ಣ, ಅದೂ ಆಯ್ತು.
ಅಲ್ಲಲ್ಲಿ ವರ್ಣಚಿತ್ರಗಳು ತೂಗಿದವು
ಕೆಲಸದವರೆಲ್ಲ ಕೈತೊಳೆದು ಹೊರಟುಹೋಗಿದ್ದರು.
ಬಂದ ಗೆಳೆಯರು ಸೋಫಾದ ಮೇಲೆ ಕುಳಿತು
ಹಸನ್ಮುಖರಾಗಿ ಹರಟೆಗೆ ತೊಡಗಿದ್ದರು.
ಎಂಥ ನೆಮ್ಮದಿಯ ಕ್ಷಣ !

*　　*　　*

ವೈಶಾಖದ ಉರಿಬಿಸಿಲು
ಉಫ್ ಎಂದರೂ ಗಾಳಿ ಸದ್ದಿಲ್ಲ, ಮೋಡದ ಸುಳಿವಿಲ್ಲ
ಅಂಗಳ, ಹಿತ್ತಿಲು ಕಾದು ಕಂಗಾಲು
ಒಂದೇ ಒಂದು ಹಕ್ಕಿಗೂ ಹಾರುವ ಧೈರ್ಯವಿಲ್ಲ.
ಮೈಯೆಲ್ಲ ಬೆವರು, ಮಧ್ಯಾಹ್ನದ ಊಟದ ತಾಟು
ಎದುರಿಗಿದ್ದರೂ ಮನಸಿಲ್ಲ, ಕರಂಟೂ ಇಲ್ಲ.
ಬಾಪೆ ಹಾಸಿದರೆ ನೊಣಗಳ ಹಾಡು ಹಾಜರು.
ಆಗ – ಒಮ್ಮೆಲೇ ಕೇಳಿಸಿತು ಗುಡುಗು !

ನೋಡನೋಡುತ್ತ ಆಕಾಶದ ತುಂಬ ಕಾರ್ಮೋಡ
ಯುದ್ಧಕ್ಕೆ ಹೊರಟ ಸೈನ್ಯದ ಹಾಗೆ.
ಸುರಿಯತೊಡಗಿತು ಮಳೆ; ಮನೆಯ ಸೂರಿರದ ಧಬಧಬೆ.
ನೊಣಗಳೂ ಫರಾರಿ.
ಹಸಿವಾಯ್ತು ; ಆರಿದ್ದರೂ ಊಟಕ್ಕೆಂಥ ರುಚಿ !

*　　*　　*

ಮಳೆ ಹಿಡಿದದ್ದು ಬಿಟ್ಟಿಲ್ಲ, ತಿಂಗಳಾಯ್ತು ,
ಬೆಳಗಾದರೂ ಹಾಸಿಗೆಯಲ್ಲೆ ಹೊರಳಾಟ
ಒಮ್ಮೆಲೆ ಹಕ್ಕಿ ಚಿಲಿಪಿಲಿಸಿ, 'ಹಗಲು ಸ್ವಚ್ಛ-
ವಾಯಿತು ಏಳಿ' ಎಂದವು. ಕಿಟಕಿ ತೆರೆದೆ :
ಸೂರ್ಯ ಅದೆಷ್ಟು ಸುಂದರ ! ಇದೇ ಮೊದಲು ಕಂಡಂತೆ !

*　　*　　*

ವರ್ಷಗಳ ಹಿಂದೆ ಕೊಂಡ ಸುಂದರ ಪಿಂಗಾಣಿ
ಕೈಜಾರಿ ಬಿದ್ದು ಮುಕ್ಕಾಯಿತು.
ತಿರುಗಿಸಿ ತಿರುಗಿಸಿ ನೋಡಿದಷ್ಟೂ
ಮನಸ್ಸಿಗೆ ಹಳಹಳಿ.
ಅಡಿಗೆಯವನಿಗೆ ಹೇಳಿದೆ : 'ಇನ್ನೆಂದೂ ಇದು
ನನ್ನ ಕಣ್ಣಿಗೆ ಬೀಳದಂತೆ ನೋಡಿಕೋ.'
ಈಗ ಮನಸ್ಸು ನಿರಾಳ.

*　　*　　*

ಚಿಕ್ಕ ಮಕ್ಕಳು ಪುಸ್ತಕ ತೆರೆದು
ಓದುತ್ತಿದ್ದಾರೆ ಕವಿತೆಯ ಸಾಲುಹಿಡಿದು ಸರಾಗವಾಗಿ.
ಜುಳು ಜುಳು ಹರಿವ ಝರಿಯಂತೆ ಕಿವಿಗೆ
ಅದೆಷ್ಟು ಆಪ್ಯಾಯಮಾನ !

*　　*　　*

ಬಿರು ಬೇಸಗೆಯ ಮಧ್ಯಾಹ್ನ : ಹಸಿರು ಪಟ್ಟೆಗಳ
ಕಲ್ಲಂಗಡಿ ಹಣ್ಣು ಊಟದ ಮೇಜಿನ ಮೇಲೆ
ಹೆಚ್ಚಿ ಒಂದೊಂದೆ ಹೋಳು ಸವಿದಾಗ
ಕೆಂಪಿಗೂ ಎಂಥ ತನಿಗಂಪು !

*　　*　　*

ಬಹಳ ದಿನಗಳಿಂದಲೂ ಭೆಟ್ಟಿಯೇ ಇಲ್ಲದ
ಆತ್ಮೀಯ ಗೆಳೆಯನ ಕೈಬರೆಹದ ಪತ್ರ ಕಣ್ಣಿಗೆ ಬಿತ್ತು
ಹಳೆಯ ಟ್ರಂಕಿನ ತಳದಲ್ಲಿ !
ಇದಲ್ಲವೆ ಅಮೌಲ್ಯ ನಿಧಿ !

ಚೆನ್ನವೀರ ಕಣವಿ
'ಚೆಂಬೆಳಕು', ಕಲ್ಯಾಣನಗರ, ಧಾರವಾಡ - ೫೮೦ ೦೦೭

# ನಾಳಿನ ಸ್ಪರ್ಧಾತ್ಮಕ ಜಗತ್ತಿಗೆ ಇಂದಿನಿಂದಲೇ ನಿಮ್ಮ ತಯಾರಿ

## +2 ಹಂತದ ವಿಜ್ಞಾನದ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಉತ್ತಮ ತರಬೇತಿ ಕೇಂದ್ರ




ನಮ್ಮಲ್ಲಿ ನಡೆಯುವ ಕೋರ್ಸ್‌ಗಳು

I & II PUC
CBSE, XI & XII,
CET, AIEEE, IIT - JEE
VIII, IX & X.
Central & State Syllabus




THE SOUTHERN ACADEMY FOR FORMAL EDUCATION

Head Office: # 271/1, 14th Cross, CMH Road (Opp. Health & Glow), Indiranagar 2nd Stage, Bangalore - 560 038. Ph: 25286126 / 41523636.

BRANCHES

JEEVAN BHIMA NAGAR 41269333 ★ COX TOWN 41253888 ★ KORAMANGALA 41313888 ★ MALLESHWARAM 65336095 ★ HSR LAYOUT 65330797




# ಪುಟ್ಟಣ್ಣನ ಅಂಗಡಿ

ಶೈಲಾ ಛಬ್ಬಿ

**ಪು**ಟ್ಟಣ್ಣ ಶೆಟ್ಟಿ ಹೆಸರಿಗೆ ತಕ್ಕಂತೆ ಒಬ್ಬ ವ್ಯಾಪಾರಸ್ಥ. ಅವನ ಮಿತ್ರ ದೊಡ್ಡಣ್ಣ ಶೆಟ್ಟಿಯೂ ಅದೇ ಉದ್ಯೋಗದಲ್ಲಿದ್ದಾನೆ. ಇಬ್ಬರ ಕಿರಾಣಿ ಅಂಗಡಿಗಳೂ ಪೇಟೆಯ ಹೃದಯಭಾಗದಲ್ಲೇ – ಆದರೆ ಬೇರೆಬೇರೆ ಬೀದಿಗಳಲ್ಲಿವೆ. ಹಿಂದೆಲ್ಲ ಅವರಿಬ್ಬರ ವ್ಯಾಪಾರ-ವಹಿವಾಟು ಒಂದೇ ಗತಿಯಲ್ಲಿದ್ದು, ಈಗ ಬರಬರುತ್ತ ದೊಡ್ಡಣ್ಣನ ವ್ಯಾಪಾರ ಏರುಗತಿಯಲ್ಲಿ ಸಾಗಿದೆ. ಅಂಗಡಿ ಯಾವಾಗಲೂ ಗಿರಾಕಿಗಳಿಂದ ಗಿಜಿಗುಟ್ಟುತ್ತಿರುತ್ತದೆ. ಸದ್ಯ ಕೈಯಲ್ಲಿ ನಾಲ್ಕಾರು ಆಳುಗಳೂ ದುಡಿಯುತ್ತಿದ್ದಾರೆ. ಆದರೆ ಪುಟ್ಟಣ್ಣನ ಗ್ರಹಗತಿ ಯಾಕೊ ಸರಿಯಿಲ್ಲ. ವ್ಯಾಪಾರವೇಕೊ ಇಂಚಿಂಚಾಗಿ ಕುಸಿಯುತ್ತಿದೆ. ಗಂಡ-ಹೆಂಡತಿ ಇಬ್ಬರೂ ಮುಖ ಬಾಡಿಸಿಕೊಂಡಿದ್ದಾರೆ. ಹೀಗೇ ಮುಂದುವರಿದರೆ ಮುಂದೇನು ಗತಿ ಎಂಬ ಚಿಂತೆ. ತಮ್ಮ ವ್ಯಾಪಾರ ಹೀಗೆ ಇಳಿಮುಖ ಕೊಳ್ಳುತ್ತಿರುವಾಗ ದೊಡ್ಡಣ್ಣನದು ಗಗನಮುಖಿಯಾಗಿ ಸಾಗುತ್ತಿರುವುದು ಮನಸ್ಸಿಗೆ ಇನ್ನೂ ಕಿರಿಕಿರಿಯಾಗಿದೆ. ಒಂದು ದಿನ ಸಂಕಟ ತಡೆಯಲಾರದೆ ಪುಟ್ಟಣ್ಣನ ಹೆಂಡತಿ ಹೇಳಿದಳು ''ಅಲ್ರೀ ನಿಮ್ಮ ಗೆಳೆಯಾಂದು ಹಿಂಗ ದಿನೇದಿನೇ ಪ್ರಗತಿ ಆಗಲಿಕ್ಕೆ ಏನಾರು ದೊಡ್ಡ ಕಾರಣ ಇರಲೇಬೇಕು. ಕೇಳಿ ಬರ್ರಿ. ನಾವೂ ಹಂಗS ಮಾಡೋಣಂತ'' ಎಂದು ಹುರಿದುಂಬಿಸಿದಳು. ಅದರಂತೆ ಪುಟ್ಟಣ್ಣ ದೊಡ್ಡಣ್ಣನ ಅಭಿವೃದ್ಧಿಯ ರಹಸ್ಯ ಕೇಳಲಾಗಿ ಆತ, ''ನೋಡು ಪುಟ್ಟಣ್ಣ, ನಟ್ಟನಡು ಪ್ಯಾಟ್ಯಾಗ ನನ್ನ ಅಂಗಡಿ. ಗಿರಾಕಿಗಳ ಕೂಡಿ ಹಚಗೊಂಡು ಮಾತಾಡತೇನಿ. ಅಲ್ಲದೆ ಪ್ರಾಮಾಣಿಕತನ, ಪರಿಶ್ರಮ ಇವು ನನ್ನ ಯಶಸ್ಸಿನ ಗುಟ್ಟು. ಈಗ ನನ್ನ ಮಗನೂ ಕೈಕೂಡಸ್ಯಾನ. ಕೈ ನಾಲ್ಕಾಗ್ಯಾವ. ಅಲ್ಲದ ಬಾಜು ಅಂಗಡಿಯವ್ರು ಖಾಲಿ ಮಾಡಿದ್ದರಿಂದ ಅದನ್ನೂ ನಾನS ಖರೀದಿ ಮಾಡೇನಿ. ವ್ಯಾಪಾರ ವಿಸ್ತಾರ ಆಗೇದ'' ಎಂದು ವಿವರಿಸಿದ. ಈ ವಿವರಣೆ ಪುಟ್ಟಣ್ಣನ ಹೆಂಡತಿಗೆ ಸಮಾಧಾನ ತರಲಿಲ್ಲ.

''ಅಲ್ಲಾ, ಈಗ ಕೆಲವು ವರ್ಷದ ಹಿಂದ ಯಾವದೋ ಸೆಕೆಂಡ ಹ್ಯಾಂಡ ಸ್ಕೂಟರನಾಗ ಅಡ್ಡ್ಯಾಡತಿದ್ದವ ಹೊಸಾ ಮೊಟರ ಸೈಕಲ್ಲಿಗ ಬದಲಾಯಿಸಿ ಈಗ ಹೊಸ ಕಾರS ಕೊಳ್ಳುವಷ್ಟು ಬೆಳದಾನ. ನಾವು ಇನ್ನೂ ಬಾದರಾಯಣ ಕಾಲದ ಸ್ಕೂಟರನ್ಯಾಗS ತೇಕ್ಯಾಡಲಿಕ್ಕ ಹತ್ತೇವಿ. ದೊಡ್ಡಣ್ಣನ ಯಶಸ್ಸಿನ ಹಿಂದೆ ಬ್ಯಾರೆ ಏನೋ ಗುಟ್ಟು ಇರಬೇಕು. ನೀವು ಅವನ್ನ ಛಲೊ ಪುಸಲಾಯಿಸಿ ಕೇಳ್ರಿ'' ಎಂದು ಆಕೆ ಗಂಡನನ್ನು ಮತ್ತೆ ಅಟ್ಟಿದಳು.

''ಪುಟ್ಟಣ್ಣಾ, ಯಾರೋ ವಾಸ್ತುಶಾಸ್ತ್ರಜ್ಞರು ಕಿರಾಣಿ ಖರೀದಿಗ ಬಂದಾಗ ಅಂಗಡಿ ಮುಂಗಟ್ಟು ಎಡಗಡೆಯಿಂದ ಬಲಗಡೆ ಮತ್ತು ಗಲ್ಲೆಯ ಜಾಗಾನ್ನ ಪೂರ್ವದಿಕ್ಕಿಗ ಬದಲಿಸಲಿಕ್ಕ ಹೇಳಿದ್ರು. ಅಷ್ಟ ಮಾಡ್ಡೆ'' ಎಂದ ದೊಡ್ಡಣ್ಣ.

ಪುಟ್ಟಣ್ಣ ದಂಪತಿಗಳ ದಿಮಾಗ್‌ನಲ್ಲಿ ಈ ಮಾತು ಚೆನ್ನಾಗಿ ರಿಜಿಸ್ಟರ್ ಆಯಿತು. ''ನಾ ಹೇಳಲಿಲ್ರೀ ನಿಮಗ, ದೊಡ್ಡಣ್ಣ ಇಷ್ಟು ದೊಡ್ಡ ಮನಶ್ಯಾ ಆಗಲಿಕ್ಕ ಏನೋ ಪ್ರಬಲ ಕಾರಣದ ಅಂತ. ನೀವೂ ಆ ವಾಸ್ತುಪಂಡಿತರನ್ನು ಭೆಟ್ಟಿಯಾಗ್ರಿ. ನಮ್ಮದೂ ನಶೀಬ ತಗೀಲಿ'' ಎಂದು ವರಾತ ಹಚ್ಚಿದಳು. ಮಡದಿಯ ಮಾತಿನಲ್ಲಿ ತಥ್ಯವಿದೆ ಎಂದು ಪುಟ್ಟಣ್ಣ ಶೆಟ್ಟಿಗೆ ಅನಿಸದೆ ಇರಲಿಲ್ಲ. ತಕ್ಷಣ ಕಾರ್ಯತತ್ಪರನಾದ. ವಾಸ್ತುಪಂಡಿತರು ಇವನ ಅಂಗಡಿಯನ್ನು ಕೂಲಂಕಷವಾಗಿ ಪರಿಶೀಲಿಸಿ ''ದಕ್ಷಿಣ ದಿಕ್ಕಿಗ ನಿಮ್ಮ ಅಂಗಡಿ ಇದ್ದದ್ದS ಇವೆಲ್ಲಾ ಅವಘಡಗಳಿಗೆ ಮೂಲ. ನೀವು ಪ್ರವೇಶದ್ವಾರವನ್ನ ಪೂರ್ವಕ್ಕೆ ಮಾಡಕೋರಿ. ಹೆಂಗಿದ್ರೂ ನಿಮ್ಮ ಅಂಗಡಿ, ತುದಿಗ ಇರೋದರಿಂದ ದಕ್ಷಿಣದ ಬಾಗಿಲು ಮುಚ್ಚಿದರೂ ಪೂರ್ವಕ್ಕ ತಕ್ಕೊಳಲಿಕ್ಕ ಬರ್ತದ'' ಎಂದು ಸೂಚಿಸಿದರು. ''ಅಲ್ರೀ ಪಂಡಿತರ, ನಮ್ಮ ಸಾಲಿನ ಅಂಗಡಿಗಳೆಲ್ಲಾ ದಕ್ಷಿಣಕ್ಕS ಮಾರಿ ಮಾಡಿದಾಗ ನಾ ಒಬ್ಬನS ಬ್ಯಾರೆ ಕಡೆ ಮಾಡಿಕೊಳ್ಳೋದು ಯಾಕೋ ಗೈರ...'' ಎಂದು ರಾಗವೆಳೆದಾಗ ಶಾಸ್ತ್ರಿಗಳು ''ನೋಡ್ರಿ ಶೆಟ್ರ, ನಿಮಗ ಛಲೊ ಆಗಬೇಕು ಅಂತ ನಾ ಧಡಪಡಸಲಿಕ್ಕ ಹತ್ತೇನಿ. ಇದರಾಗ ನಂದೇನೂ ಸ್ವಾರ್ಥ ಇಲ್ಲಾ. ಬಾಕಿ ನಿಮಗ ಬಿಟ್ಟದ್ದು. ನೀವು ಬಿದ್ದರೆಷ್ಟು-ಗೆದ್ದರೆಷ್ಟು? ಇದ್ದರೆಷ್ಟು-ಎದ್ದರೆಷ್ಟು ನನಗೇನಾಗಬೇಕಾಗೇದ? ನಾ ಹೊಂಟೆ'' ಎಂದು ಧೋತರದ ತುದಿ ಎತ್ತಿ ಸರಸರನೆ ಹೊರಟುಬಿಟ್ಟರು. ''ಪಂಡಿತರ ಹಂಗ ಮಾಡಬ್ಯಾಡ್ರಿ. ನೀವು ಕಾಲಿಂದ ತೋರಿಸಿದ್ದನ್ನ ನಾ ತಲಿಮ್ಯಾಲ ಹೊತ್ತು ತಿರಗತೇನಿ'' ಎಂದು ಶರಣಾಗತನಾಗಿಬಿಟ್ಟ.

ಮುಂದಿನ ಕೆಲ ದಿನಗಳಲ್ಲಿ ಶೆಟ್ಟಿಯ ಅಂಗಡಿಯಲ್ಲಿ ಕೆಲ ಮಾರ್ಪಾಡುಗಳಾದವು. ಮುಖ್ಯಬೀದಿಯಿಂದ ಕಿರುರಸ್ತೆಗೆ ಅವನ ಅಂಗಡಿ ಬಾಗಿಲು ತೆರೆದುಕೊಂಡಿತು. ಷೆಲ್ಫ್‌ನ ಸ್ಥಳ ಬದಲಾಗುವುದರ ಜೊತೆಗೆ ನವೀಕರಣವೂ ಗೊಂಡಿತು. ಅದ್ದೂರಿಯ ಉದ್ಘಾಟನೆಯೊಂದಿಗೆ ವಾಸ್ತುಶಾಸ್ತ್ರಜ್ಞನ ಕಿಸೆಯೂ ತುಂಬಿತು.

ಹಳೆ ಗಿರಾಕಿಗಳು ಬಂದು ಏನೇನು ವ್ಯತ್ಯಾಸವಾಗಿದೆ, ಹೀಗೇಕೆ ಮಾಡಿದಿರಿ, ಎಂದೆಲ್ಲ ಕೇಳಿಕೊಂಡು ಹೋದರು. ಒಂದು ತಿಂಗಳು ವ್ಯಾಪಾರ ತುಸು ಚೆನ್ನಾಗಿಯೇ

ಕುದುರಿತು. ಹುರುಮಾಸದಿಂದ ಮತ್ತೆ ಹಳೆಯದೇ ಹಾಡು. ಪಿತೃಪಕ್ಷದ ಕಾರಣ ಹೀಗಾಗಿರಲು ಸಾಕು ಎಂದು ಸಮಾಧಾನಿಸಿಕೊಂಡ. ಆದರೆ ನವರಾತ್ರಿ ಬಂದರೂ ವಹಿವಾಟು ಸುಧಾರಣೆಯಾಗಲೊಲ್ಲೆ ಎನ್ನಬೇಕೆ ? ಬಹು ದಿನಗಳ ನಂತರ ಬಂದ ಗಿರಾಕಿ ಮಲ್ಲವ್ವನನ್ನು ಕುರಿತು ''ಏನ್‌ಬೇ, ಬಾಳ ದಿನಾ ಆದು, ಇತ್ತ ಹಾದೇ ಇಲ್ಲಲಾ'' ಎಂದು ಪ್ರಶ್ನಿಸಿದಾಗ ''ಏನ್ ಮಾಡುದ್ರಿ ಸಾವಕಾರ್ರ, ಈಗ ನೀವು ಗಟಾರ ಕಡೆ ಮಕಾ ತಿರುವಿ ಕುಂತೀರಿ. ಆ ಕಡೆ ಹೊಳ್ಳಿ ಬರಾಕ ತ್ರಾಸು. ಅದಕ್ಕ ಬ್ಯಾರೆ ಅಂಗಡಿ ಹಿಡದೀನು'' ಎಂದು ಸ್ಪಷ್ಟೀಕರಣ ನೀಡಿದರೆ ಬೇರೆ ಗಿರಾಕಿಯೊಬ್ಬ ''ಸಾವುಕಾರ್ರ ಈಗೀಗ ನಿಮ್ಮ ಸ್ವಾಮಾನು ಸುಮಾರು ಇರ್ತಾವ್ರಿ'' ಎಂದು ತಕರಾರು ಮಾಡಿದ. ಅಂತೂ ಇವು ಕೇವಲ ಒಂದಿಬ್ಬರ ಅನಿಸಿಕೆಯಲ್ಲ, ಬಹುತೇಕರ ಅಭಿಪ್ರಾಯವೂ ಹೌದು. ಏನೆಲ್ಲ ಮಾರ್ಪಾಡು ಮಾಡಿಕೊಂಡರೂ ವ್ಯಾಪಾರ ಕ್ಲಿಕ್ ಆಗುತ್ತಿಲ್ಲ. ಪಂಡಿತರ ಸಲಹೆಯಂತೆ ಗಲ್ಲೆಯ ಸ್ಥಾನವೂ ಬದಲಾಯಿತು. ಪರಿಣಾಮ ಮಾತ್ರ ಶೂನ್ಯ. ಬದಲಾವಣೆಯ ಮೇಲೆ ಬದಲಾವಣೆಗಳಾದವು. ಏನೂ ಉಪಯೋಗವಾಗಲಿಲ್ಲ. ಆಗ ವಾಸ್ತುಶಾಸ್ತ್ರಜ್ಞ ''ರೀ ಪುಟ್ಟಣ್ಣಾ, ನಿಮ್ಮ ಅಂಗಡಿಯ ವಾಸ್ತು ಅಗದಿ ಬರೋಬರಿ ಅದ. ಇಷ್ಟರಾಗ ನಿಮ್ಮ ಗ್ರಹಗತಿ ತಿರಗಬೇಕಾಗಿತ್ತು. ನನಗನಿಸೋ ಹಂಗ ನಿಮ್ಮ ಮನಿಯ ವಾಸ್ತುಶಾಸ್ತ್ರದಾಗ ಏನಾದರೂ ದೋಷ ಇರಬೇಕು. ನನಗೊಮ್ಮೆ ತೋರಸ್ರಿ'' ಎಂದು ಸಂಶಯದ ಕಿಡಿ ಹಚ್ಚಿದರು. ಮನೆ ನೋಡಿ ಆ ಪಂಡಿತರು

''ಹಾಂ ಕಳ್ಳ ಸಿಕ್ಕಿಬಿದ್ದಾ ನೋಡ್ರಿ. ಇಲ್ಲಿ ಅದ ಮಿಸ್‌ಟೇಕು. ನಿಮ್ಮ ಮನಿ ವಾಸ್ತು ಸಂಪೂರ್ಣ ತಪ್ಪದ. ಈ ಮುಂಚಿ ಬಾಗಿಲು ಇಲ್ಲಿರಲೇಬಾರ್ದು. ಇದನ್ನ ದಕ್ಷಿಣದಿಂದ ಉತ್ತರಕ್ಕೆ ಮಾಡಿಕೋರಿ. ಛೇ ಛೇ ಛೇ ಏನು ಅನಾಹುತ ! ಯಾರ್ರಿ ಈ ಮನಿ ಪ್ಲ್ಯಾನು ಮಾಡಿಕೊಟ್ಟವ್ರು ? ವಾಯವ್ಯಕ್ಕ ಅಡಗಿಮನಿ ಮಾಡೀರಿ. ಅದಕ್ಕ ನಿಮಗ ಕಂಟಕ ಬಿಡವಲ್ಲದು. ಆಗ್ನೇಯಕ್ಕ ಅರ್ಥಾತ್ ಈ ಮನಿಯ ಮುಂಭಾಗಕ್ಕ ಅಂದ್ರ ಹಾಲ್ ಇದ್ದಲ್ಲೆ ಅಡಗಿಮನಿ ಬರಲಿ. ಹಂಗ ಇನ್ನೂ ಕೆಲವು ಚೇಂಜಸ್ ಅವಶ್ಯ ಆಗಬೇಕು. ಈಶಾನ್ಯಕ್ಕಿರೋ ಈ ಹಲಸಿನ ಗಿಡಾ ಮದಲ ಕಡಸ್ರಿ. ಇಷ್ಟೆಲ್ಲಾ ಬದಲಾವಣೆ ಆದು ಅಂದ್ರ ಮಾತ್ರ ನಿಮಗೆ ಒಳ್ಳೇದಾಗ್ತದ. ಇಲ್ಲಾಂದ್ರ ಈ ಮನಿ ಏಳ್ಗಿ ಆಗೋ[illegible] ಎಂದು ಖಂಡತುಂಡವಾಗಿ ಹೇಳಿಬಿಟ್ಟರು.


## ಶುಭಾಶಯಗಳು

ಪುಟ : 336 ಬೆಲೆ : ರೂ. 80

ಬೆಲೆ : ರೂ. 60

ಪುಟ : 304 ಬೆಲೆ : ರೂ. 80

ಮಾನ್ಯ ಡಿ.ವಿ.ಜಿ.ಯವರ 'ಮಂಕುತಿಮ್ಮನ ಕಗ್ಗ'
ಹಾಗೂ 'ಮರುಳ ಮುನಿಯನ ಕಗ್ಗ' ಕೃತಿಗಳಿಗೆ
ತಾತ್ಪರ್ಯವನ್ನು ಬರೆದಿರುವ ಮತ್ತು 'ಮಂಕುತಿಮ್ಮನ ಕಗ್ಗ'
ತಾತ್ಪರ್ಯದ ಸಂಪೂರ್ಣ 945 ಕವನಗಳನ್ನು
ತಾತ್ಪರ್ಯ ಸಹಿತ 11.30 ತಾಸು ಹೇಳಿರುವ
ಎಂಪಿ-3 ಸಿಡಿಯನ್ನು ಹೊರತಂದಿರುವವರು :

**ಶ್ರೀಕಾಂತ್**

226, 8ನೇ ಕ್ರಾಸ್, 19ನೇ 'ಡಿ' ಮೈನ್
1ನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು - 560 010
ದೂರವಾಣಿ : 23373662


ಪುಟ್ಟಣ್ಣ ಅವರ ಮಾತನ್ನು ಶಿರಸಾವಹಿಸಿ ಪಾಲಿಸಿದ. ಪಾಕಗೃಹವಿದ್ದಲ್ಲಿ ಶೌ[illegible] ಬಂತು. ಶೌಚಾಲಯವಿದ್ದಲ್ಲಿ ದೇವಾಲಯ ಬಂತು. ಹಿತ್ತಲು ಹೋಗಿ ಮು[illegible] ಯಾಯಿತು. ಮುಂಭಾಗ ಹಿಂಭಾಗವಾಯಿತು. ಮನುಷ್ಯನ ಮುಖ ತಿರುಗಿಸಿ [illegible] ಇಟ್ಟಂತಾಯಿತು. ಸಮೃದ್ಧವಾಗಿ ಫಲ ನೀಡುವ ಕೆಂಪು ತೊಳೆಯ ಸಿಹಿ ಹಲಸು [illegible] ಮಲಗಿತು. ಏನು ಮಾಡುವುದು ? ಎಲ್ಲ ವಾಸ್ತುದೇವನ ಮಹಿಮೆ ! ಇಷ್ಟೆಲ್ಲ [illegible] ಯಾಗುತ್ತದೆಯೆ ? ಲಕ್ಷಾಂತರ ರೂಪಾಯಿ ಕೈಬಿಟ್ಟಿತು. ಉಪಾಯವಿಲ್ಲ. ಇನ್ನಾ[illegible] ಎಲ್ಲ ಸರಿಹೋಗುತ್ತದೆ ಎಂದು ಖುಷಿಪಟ್ಟರು ಶೆಟ್ಟಿ ದಂಪತಿಗಳು. ಆದರೆ ದಿ[illegible] ಉರುಳಿದಂತೆ ನೆಮ್ಮದಿಯೆಂಬುದು ಕನಸಿನ ಮಾತಾಯಿತು. ಸಾಲದ ಹೊರೆ ಹೆ[illegible] ಆಗಾಗ್ಗೆ ಬ್ಯಾಂಕಿಗೆ ಸಾಲ ಕಟ್ಟಬೇಕು. ಆದರೆ ಅಂಗಡಿಯಲ್ಲಿ ಸರಿ ಆದಾಯ ಇಲ್ಲ[illegible]

''ಈ ಪಂಡಿತರು ಶ್ಯಾಣ್ಯಾ ಇಲ್ಲಾ. ಇವನಿಂದಾಗಿ ಸಾವು ಮುಳುಗಿಹೋದ್ವಿ. ಛಲೋ ಪಂಡಿತರನ್ನ ಕೇಳ್ರಿ. ಬೆಂಗಳೂರಾಗ ಒಬ್ರು ಭಾಳ ಎಕ್ಸ್‌ಪರ್ಟ ಇದಾ[illegible] ನನ್ನ ಗೆಳತಿ ಹೇಳತಿದ್ದಳು'' ಶ್ರೀಮತಿ ಪುಟ್ಟಣ್ಣ ಸೂಚಿಸಿದಳು.

ಆ ಹೊಸ ವಾಸ್ತುಶಾಸ್ತ್ರಜ್ಞ ''ಏನನ್ಯಾಯ ಸ್ವಾಮಿ. ನಿಮ್ಮ ಸೈಟು ವಾಸ್ತು [illegible] ಇಲ್ಲವೇ ಇಲ್ಲಾ. ಇದೇ ನಿಮ್ಮ ದುಃಖಕ್ಕೆ ಮೂಲ. ಇದನ್ನ ಮಾರಿಬಿಡಿ'' [illegible] ಆದೇಶಿಸಿದರು. 'ಪಾಪಿ ಸಮುದ್ರ ಹೊಕ್ಕರೂ ಮೊಣಕಾಲು ತನಕ [illegible] ಎಂಬಂತಾಯ್ತು ಇವನ ಸ್ಥಿತಿ. ಮನೆ ಮಾರಿ ಸಾಲ ತೀರಿಸಿದ. ಬಾಡಿಗೆ ಮನೆ ಸೆ[illegible] ಇಷ್ಟಾದರೂ ಕುಡಿತದ ಚಟದಂತೆ ವಾಸ್ತುಶಾಸ್ತ್ರದ ಗೀಳು ಅವನನ್ನು [illegible] ಅಮರಿಕೊಂಡಿತ್ತು.

ಕಂತೆಗೆ ತಕ್ಕ ಬೊಂತೆ ಎಂಬಂತೆ ಇವನು ಬಾಡಿಗೆಗೆ ಹೊಕ್ಕ ಮ[illegible] ಮಾಲೀಕನೂ ಇದ್ದ. ಅವನ ಮಗ ಶ್ಯಾಮ ಪಿ.ಯು.ಸಿ.ಯಲ್ಲಿ ಪದೇ ಪದೇ ನ[illegible] ಜ್ಯೋತಿಷಿ - ಅವನಿಗೆ ಆಗದವರು ಮಾಟಮಂತ್ರ ಮಾಡಿಸಿದ್ದಾರೆ. ಪರಿಹಾ[illegible] ಹೋಮ ಹವನ ಮಾಡಿಸಿ ಎಂದು ಸಲಹೆ ಕೊಟ್ಟರು. ಆದರೆ ಏನೂ ಪ್ರಯೋ[illegible] ವಾಗಲಿಲ್ಲ. ವಾಸ್ತುಶಾಸ್ತ್ರಜ್ಞರ ಹೇಳಿಕೆಯಂತೆ ಮಗನ ಅಭ್ಯಾಸದ ಟೇಬಲ್-ಕುರ್ಚಿ[illegible] ದಿಕ್ಕು ಬದಲಾಯಿಸಿದರು. ಪುಸ್ತಕದ ಸ್ಥಾನ ಬದಲಾಯಿತು. ಫಲಶ್ರುತಿ ಶೂನ್ಯ. ಕೆ[illegible] ತಮ್ಮ ಬೆಡ್‌ರೂಂನ್ನೇ ಅವನ ಸ್ಟಡಿರೂಂ ಮಾಡಿ ತಾವು ಅವನ ಕೋಣೆಗೆ ವರ್ಗಾ[illegible] ಗೊಂಡರು. ಪುಟ್ಟಣ್ಣ ಹಾಗೂ ಮಾಲೀಕರಿಗೆ ಈ ವಿಷಯದಲ್ಲಿ ಜೀವಸ್ಯ ಕ[illegible] ದೋಸ್ತಿ ಆಯಿತು. ಇಬ್ಬರೂ ಸೇರಿ ತಮ್ಮ ಕಷ್ಟ ಪರಿಹಾರಕ್ಕಾಗಿ ವಾಸ್ತುಶಾಸ್ತ್ರಜ್ಞರ[illegible] ಜ್ಯೋತಿಷಿಗಳು, ಗಿಳಿಜ್ಯೋತಿಷಿಗಳು, ಹಸ್ತಸಾಮುದ್ರಿಕರನ್ನೆಲ್ಲ ಕಂಡುಬಂ[illegible] ಊರೂರು ಎಡತಾಕಿದರು. ಇಂದಲ್ಲ ನಾಳೆ ತಮ್ಮ ಉದ್ಧಾರ ಖಂಡಿತ ಆಗಲಿದೆ [illegible] ಅವರ ಆಶಾವಾದವನ್ನು ಯಾರಾದರೂ ಮೆಚ್ಚಲೇಬೇಕು.

ಮೊನ್ನೆ ಏನಾಯಿತೆಂದರೆ ಆಚೆ ಮನೆಯ ಮೆಣಸಿನಕಾಯಿ ಮಾಸ್ತರ್ರು ಪುಟ್[illegible] ಮನೆಗೆ ಬಂದಿದ್ದರು. ಮಾತುಮಾತಿನಲ್ಲಿ ಶ್ಯಾಮನ ವಿಷಯ ಬಂತು. ''ನೋ[illegible] ಮಾಸ್ತರ್ರ, ಮಗನ ಸಲುವಾಗಿ ಮಾಲಕರು ಎಷ್ಟು ಖಟಪಟಿ ಮಾಡಲಿಕ್ಕ ಹ[illegible] ಆದ್ರೂ ಮಗಾ ಪಾಸಾಗವಲ್ಲಾ'' ಎಂದು ಪುಟ್ಟಣ್ಣ ಕಳಕಳಿ ವ್ಯಕ್ತಪಡಿಸಿದರು. ಮಾಸ್ತರ್ರು ''ಅದೆಲ್ಲಾ ಖರೆ ಬಿಡ್ರಿ ಶೆಟ್ರ, ನಿಮ್ಮ ಮಾಲಕರು ಮಗಾ ಪಾಸಾಗವಲ್ಲಾ [illegible] ತಿಳಕೊಂಡು ಅವನ ಕುರ್ಚಿ-ಮೇಜು ಬದಲಾಯಿಸಿಗೋತ ಹೊಂಟಾರ. [illegible] ಪಾಸಾಗೋವಲ್ಲೆ ಕುರ್ಚಿ-ಟೇಬಲ್ಲಿನದೇನು ಪಾತ್ರ? ಅವೇನಾದ್ರು ಪ[illegible] ಬರೀತಾವ ಹೆಂಗ ? ಆ ಶ್ಯಾಮ್ಯಾ ನನ್ನ ಮಗಾ ಹಗಲು-ರಾತ್ರಿ ಮೋಟರಬೈಕ್ ಮ[illegible] ಗೆಳೆಯ-ಗೆಳತೇರ ಜೋಡಿ ಚೈನಿ ಮಾಡಕೋತ ಅಡ್ಯಾಡತಾನ. ಪ[illegible] ಪಾಸಾಗಬೇಕಾದ್ರ ಶ್ಯಾಮ್ಯಾ ಓದಬೇಕೋ ಅಥವಾ ಆ ಕುರ್ಚಿ-ಮೇಜೋ ? ಹೇ[illegible] ಎಂದು ಸವಾಲೆಸೆದರು.

ಮಾಸ್ತರರ ಮಾತಿನಿಂದ ಪುಟ್ಟಣ್ಣ ಆಲೋಚನಾಮಗ್ನನಾದ. ಹಾಗಾದರೆ ನಾ[illegible] ಇದೇ ಸಾಲಿಗೆ ಸೇರುತ್ತಿದ್ದೇನೆಯೆ? ವಾಸ್ತುವೇ ನನ್ನ ಉದ್ಧರಿಸಬೇಕು [illegible] ನಂಬಿಕೆಯಲ್ಲಿ ಮುಳುಗಿ ಪ್ರಯತ್ನವನ್ನೇ ಗಾಳಿಗೆ ತೂರಿದ್ದೇನೆಯೆ ? ನನ್ನ ಅಧೋ[illegible] ನಾನು ಜವಾಬ್ದಾರನೋ ಅಥವಾ ವಾಸ್ತುವೋ ?


ಶೈಲಾ ಛಬ್ಬಿ
೧೨, ಮೇಘನಂದನ, ತೇಜಸ್ವಿನಗರ, ಧಾರವಾಡ - ೫೮೦ ೦೦೨

# ಐಡೆಂಟಿಟಿ (ಅಸ್ಮಿತೆ) ರಾಜಕೀಯ ಒಂದು ಅವಲೋಕನ

ಡಾ|| ಮುಜಾಫರ್ ಅಸ್ಸಾದಿ

ಐಡೆಂಟಿಟಿ ರಾಜಕೀಯವು ಮೂಲತಃ ಸಮುದಾಯಗಳ, ಸಮಷ್ಟಿ ಅನ್ಯಾಯಗಳ ಅನುಭವದಲ್ಲಿದೆ. ಸಮುದಾಯಗಳು ಚಾರಿತ್ರಿಕ, ವಾಸ್ತವಿಕ ಹಾಗೂ ಪ್ರಸ್ತುತ ಅನುಭವಗಳ ಮುಖಾಂತರ ತಮ್ಮದೇ ಐಡೆಂಟಿಟಿಯನ್ನು ನಿರ್ಮಿಸಿಕೊಳ್ಳುತ್ತವೆ. ಸಮುದಾಯಗಳು ಐಡೆಂಟಿಟಿಯನ್ನು ಯಾವುದೇ ತತ್ವ ಅಥವಾ ರಾಜಕೀಯ ಪಕ್ಷದ ಸೆಲೆಗಟ್ಟಿನಲ್ಲಿ ನಿರ್ಮಿಸದೆ ಅಂಚಿನಲ್ಲಿರುವ ಅಥವಾ ಉಪೇಕ್ಷೆಗೊಳಗಾದ ಸಮುದಾಯಗಳ ವಿಮೋಚನೆಯನ್ನು, (ಮೂಲತಃ) ಬಲಾಢ್ಯ, ದೃಢ ಹಾಗೂ ಕುಶಾಲವಾಗಿರುವ ಶೋಷಣೆಯ ಚೌಕಟ್ಟನ್ನು ಪ್ರಶ್ನಿಸುವ ಮುಖಾಂತರ ನಿರ್ಮಿಸುತ್ತವೆ.

ಐಡೆಂಟಿಟಿ ರಾಜಕೀಯವು ೨೦ನೇ ಶತಮಾನದ ಅಂತ್ಯದಲ್ಲಿ ಪ್ರಮುಖವಾಗಿ ಪಾಶ್ಚಾತ್ಯ ದೇಶಗಳಲ್ಲಿ ಬೆಳೆದರೂ ಐಡೆಂಟಿಟಿ ವಿಷಯ ಹೊಸತೇನಲ್ಲ. ೨೦ನೇ ಶತಮಾನದಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಹುಟ್ಟಿಕೊಂಡ ಮಹಿಳಾ ಚಳುವಳಿ, ವರ್ಣ ಭೇದ ಮತ್ತು ಅದರ ವಿರುದ್ಧ ಭುಗಿಲೆದ್ದ ಕರಿಯರ ಮಾನವ ಹಕ್ಕುಗಳ ಚಳುವಳಿ, ಅಮೆರಿಕನ್-ಇಂಡಿಯನ್‌ರ ಚಳುವಳಿ ಮತ್ತು 'ಗೇ ಹಾಗೂ ಲೆಸ್‌ಬಿಯನ್' ಚಳುವಳಿಗಳಲ್ಲಿ ಈ ಬೆಳವಣಿಗೆ ಕಂಡುಬರುತ್ತದೆ. ಸಮುದಾಯಗಳು ಯಾವ ಸಾಂಸ್ಕೃತಿಕ ಸಾಮ್ರಾಜ್ಯಶಾಹಿಯಿಂದ ತುಳಿಯಲ್ಪಡುತ್ತಿವೆ, ದೌರ್ಜನ್ಯಗಳು ಹೇಗೆ ಪುನಃ ಪುನಃ ಉಪೇಕ್ಷಿತ ಸಮುದಾಯಗಳನ್ನು ಅಂಚಿಗೆ ತಳ್ಳುತ್ತಿವೆ, ಇದರಿಂದ ಉಂಟಾಗುವ ದೌರ್ಬಲ್ಯ ಹೇಗೆ ಆ ಸಮುದಾಯಗಳಿಗೆ ಮಾರಕವಾಗಿದೆ ಎಂಬಿತ್ಯಾದಿ ಪ್ರಶ್ನೆಗಳನ್ನು ಎತ್ತಿಕೊಂಡು ಐಡೆಂಟಿಟಿ ರಾಜಕೀಯ ಬೆಳೆಯಿತು. ಆದಕಾರಣ ಐಡೆಂಟಿಟಿಯಲ್ಲಿ ಶೋಷಣೆ ಪ್ರಾಥಮಿಕ ವಿಶ್ಲೇಷಣೆಗೆ ಒಳಪಟ್ಟಿದೆ. ಐಡೆಂಟಿಟಿಯ ನಿರ್ಮಾಣ ಮತ್ತು ಚೌಕಟ್ಟು ದ್ವಿತೀಯ ಹಾಗೂ ಗೌಣವಾದ ವಿಶ್ಲೇಷಣೆಯಾಗುತ್ತವೆ.

ವಾಸ್ತವದಲ್ಲಿ ಸಮುದಾಯಗಳಿಗೆ 'ಐಡೆಂಟಿಟಿ' ನಿರ್ಮಿಸಿಕೊಳ್ಳಲು ಅಸಾಧ್ಯವೆಂದಾದರೆ, ಇಲ್ಲವೇ ಅವಕಾಶವೇ ದೊರೆಯದೇ ಹೋದಲ್ಲಿ ಏನಾಗಬಹುದು ಎಂಬ ಪ್ರಶ್ನೆ ಮೂಡುವುದು ಸಹಜ. ಚಾರ್ಲ್ಸ್ ಟೇಲರ್ ಐಡೆಂಟಿಟಿ ರಾಜಕೀಯವನ್ನು ಮಾನ್ಯತೆಯ ರಾಜಕೀಯವೆಂದು ಕರೆದಿದ್ದಾನೆ. ವಿವಿಧ ಸಮುದಾಯಗಳು ವಿವಿಧ ಕಾಲಘಟ್ಟಗಳಲ್ಲಿ ತಮ್ಮ ಐಡೆಂಟಿಟಿಯನ್ನು ನಿರ್ಮಿಸಿಕೊಳ್ಳುವುದು ಒಂದು ಸಹಜ ಪ್ರಕ್ರಿಯೆ. ಒಂದು ವೇಳೆ ಸಮುದಾಯಗಳಿಗೆ ತಮ್ಮದೇ ಐಡೆಂಟಿಟಿಯನ್ನು ನಿರ್ಮಿಸಿಕೊಳ್ಳುವುದು ಅಥವಾ ಕಟ್ಟಿಕೊಳ್ಳಲು ಅವಕಾಶ ನೀಡದಿದ್ದರೆ ಅದು ಇನ್ನೊಂದು ರೀತಿಯ ಶೋಷಣೆಯಾಗುತ್ತದೆ. ಚಾರ್ಲ್ಸ್ ಟೇಲರ್ ಇಂತಹ ಶೋಷಣೆಯನ್ನು ಒಂದು ದೌರ್ಜನ್ಯದ ಸ್ವರೂಪವೆಂದು ಗುರುತಿಸುತ್ತಾನೆ. ಆ ದೌರ್ಜನ್ಯವು ಏಕರೂಪಿಯಲ್ಲ. ಅದು ಸಾಂಸ್ಕೃತಿಕ ರೂಪದಲ್ಲೂ, ಭಾಷೆಯ ರೂಪದಲ್ಲೂ ಇರಬಹುದು. ಲ್ಯಾಟಿನ್ ಅಮೆರಿಕಾದಲ್ಲಿ ನಶಿಸಿಹೋಗುತ್ತಿರುವ ಎಷ್ಟೋ ಸಮುದಾಯಗಳು ಇದಕ್ಕೆ ಸಾಕ್ಷಿಯಾಗಿವೆ. ವಸಾಹತುಶಾಹಿ ಜಗತ್ತು ವಿವಿಧ ದೇಶಗಳಲ್ಲಿ ನಡೆಸಿದ ಸಾಂಸ್ಕೃತಿಕ ದೌರ್ಜನ್ಯ ಇದಕ್ಕೆ ಉತ್ತಮ ಉದಾಹರಣೆ. ಅಲ್ಲೆಲ್ಲಾ ಮೂಲನಿವಾಸಿಗಳ ಐಡೆಂಟಿಟಿಯನ್ನು ನಾಶ ಮಾಡಿದ್ದು ಇವತ್ತಿಗೂ ಕಂಡುಬರುತ್ತದೆ. ಇದರಿಂದಾಗಿ ಎಷ್ಟೋ ಮೂಲನಿವಾಸಿಗಳು, ಸಮುದಾಯಗಳು ತಮ್ಮ ಮೂಲ ಭಾಷೆ ಮತ್ತು ಸಂಸ್ಕೃತಿಗಳನ್ನು ಕಳೆದುಕೊಂಡು ವಸಾಹತುಶಾಹಿಯ ಭಾಷೆ, ಸಂಸ್ಕೃತಿಗೆ ಜೋತುಬಿದ್ದಿರುವುದು ನಮ್ಮ ಮುಂದಿರುವ ಕಟು ಸತ್ಯ. ಇಂದು ಮೂಲನಿವಾಸಿಗಳ ಐಡೆಂಟಿಟಿ ವಸ್ತುಸಂಗ್ರಹಾಲಯಗಳ ಭಾಗವಾಗಿರುವುದು ವಾಸ್ತವ. ತಮ್ಮ ಭಾಷೆ ಮತ್ತು ಸಂಸ್ಕೃತಿಗಳನ್ನು ಕಳೆದುಕೊಂಡ ಸಮುದಾಯಗಳು ವಸ್ತುಸಂಗ್ರಹಾಲಯಗಳಲ್ಲಿ ದೊರಕುವ ಗತವೈಭವದಿಂದ ಅಥವಾ ಚಾರಿತ್ರಿಕ ಹಿನ್ನೆಲೆಯಿಂದ ಮತ್ತೊಮ್ಮೆ ತಮ್ಮ ಅಸ್ಮಿತೆಯನ್ನು ನಿರ್ಮಿಸಿಕೊಳ್ಳುವ ಯತ್ನಗಳನ್ನು ಮಾಡುತ್ತಿರುವುದು ವಾಸ್ತವ. ಚದುರಿಹೋಗಿರುವ ಸಮುದಾಯಗಳು, ಸಾಮಾಜಿಕ ವರ್ಗಗಳು ತಮ್ಮ ಐಡೆಂಟಿಟಿಯನ್ನು ನಿರ್ಮಿಸಲು ವಿವಿಧ ಮಾರ್ಗಗಳನ್ನು ಕಂಡುಹಿಡಿಯುತ್ತವೆ. ಇದನ್ನು 'ಕಲ್ಪಿತ ಇತಿಹಾಸ' ಅಥವಾ ಚಾರಿತ್ರಿಕ ಅವಶೇಷಗಳಲ್ಲಿ ಹಾಗೂ ಉತ್ಖನನದ ಸಂದರ್ಭದಲ್ಲಿ ದೊರೆಯುವ ಸಂಕೇತಗಳಲ್ಲಿ ಕಾಣಬಹುದು. ಇಸ್ರೇಲಿಗಳು ತಮ್ಮ ಸಮುದಾಯದ ಐಡೆಂಟಿಟಿಯನ್ನು ನಿರ್ಮಿಸಿದ್ದು 'ಕಲ್ಪಿತ ಇತಿಹಾಸ'ದಲ್ಲಿ. ಇದು ಚದುರಿದ ಸಮುದಾಯವನ್ನು ಒಟ್ಟುಗೂಡಿಸುವುದಕ್ಕೂ ರಾಷ್ಟ್ರ ನಿರ್ಮಾಣದ ಕಲ್ಪನೆಗೂ ಸಹಕಾರಿಯಾಯಿತು. ಇಂತಹ ಕಲ್ಪನೆಗಳಲ್ಲಿ ಒಂದು ಬಗೆಯ ಅಪಾಯವೂ ಅಡಗಿದೆ. ಕೆಲವೊಮ್ಮೆ ಈ ಅಪಾಯಗಳು ಚಾರಿತ್ರಿಕವಾಗಿ ಈಗಾಗಲೆ ಒಂದೆಡೆ ನೆಲೆನಿಂತ ಸಮುದಾಯಗಳ ಶೋಷಣೆ, ದೌರ್ಜನ್ಯ ಹಾಗೂ ಸ್ಥಾನಪಲ್ಲಟಕ್ಕೆ ದಾರಿಮಾಡಿಕೊಡುತ್ತವೆ. ಬಹುಮುಖ್ಯವಾಗಿ ಈ ರೀತಿಯ ಐಡೆಂಟಿಟಿ ಪ್ರಕ್ರಿಯೆ ಹಲವು ಘಟನೆಗಳಿಗೆ ಕಾರಣೀಭೂತವಾಗುತ್ತದೆ.

**ಐಡೆಂಟಿಟಿಯ ಪರಿಕಲ್ಪನೆ**

ಐಡೆಂಟಿಟಿ ನಿರ್ಮಿಸುವಾಗ ಅದಕ್ಕೆ ಸಹಜವಾದ ತನ್ನದೆ ಒಂದು ಪರಿಕಲ್ಪನೆ ಇರುತ್ತದೆ. ಐಡೆಂಟಿಟಿಯನ್ನು ನಿರ್ಮಿಸುವ ಸಮುದಾಯಗಳು ಆಂತರಿಕವಾಗಿ ಏಕರೂಪದಲ್ಲಿರುತ್ತವೆ. ಅವುಗಳ ಆಂತರ್ಯದ ಯಾವುದೇ ವಿಭಿನ್ನತೆಯಿಲ್ಲದಿರುವುದೇ ಒಂದು ಪರಿಕಲ್ಪನೆ. ಮುಖ್ಯವಾಗಿ ಪಶ್ಚಿಮದ ಸ್ತ್ರೀವಾದಿಗಳು ಈ ಪರಿಕಲ್ಪನೆಯನ್ನು

ಐಡೆಂಟಿಟಿ ರಾಜಕೀಯವು ೨೦ನೇ ಶತಮಾನದ ಅಂತ್ಯದಲ್ಲಿ ಪ್ರಮುಖವಾಗಿ ಪಾಶ್ಚಾತ್ಯ ದೇಶಗಳಲ್ಲಿ ಬೆಳೆದರೂ ಐಡೆಂಟಿಟಿ ವಿಷಯ ಹೊಸತೇನಲ್ಲ. ೨೦ನೇ ಶತಮಾನದಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಹುಟ್ಟಿಕೊಂಡ ಮಹಿಳಾ ಚಳುವಳಿ, ವರ್ಣಭೇದ ಮತ್ತು ಅದರ ವಿರುದ್ಧ ಭುಗಿಲೆದ್ದ ಕರಿಯರ ಮಾನವ ಹಕ್ಕುಗಳ ಚಳುವಳಿ, ಅಮೆರಿಕನ್-ಇಂಡಿಯನ್‌ರ ಚಳುವಳಿ ಮತ್ತು 'ಗೇ ಹಾಗೂ ಲೆಸ್‌ಬಿಯನ್' ಚಳುವಳಿಗಳಲ್ಲಿ ಈ ಬೆಳವಣಿಗೆ ಕಂಡುಬರುತ್ತದೆ. ಸಮುದಾಯಗಳು ಯಾವ ಸಾಂಸ್ಕೃತಿಕ ಸಾಮ್ರಾಜ್ಯಶಾಹಿಯಿಂದ ತುಳಿಯಲ್ಪಡುತ್ತಿವೆ, ದೌರ್ಜನ್ಯಗಳು ಹೇಗೆ ಪುನಃ ಪುನಃ ಉಪೇಕ್ಷಿತ ಸಮುದಾಯಗಳನ್ನು ಅಂಚಿಗೆ ತಳ್ಳುತ್ತಿವೆ, ಇದರಿಂದ ಉಂಟಾಗುವ ದೌರ್ಬಲ್ಯ ಹೇಗೆ ಆ ಸಮುದಾಯಗಳಿಗೆ ಮಾರಕವಾಗಿದೆ ಎಂಬಿತ್ಯಾದಿ ಪ್ರಶ್ನೆಗಳನ್ನು ಎತ್ತಿಕೊಂಡು ಐಡೆಂಟಿಟಿ ರಾಜಕೀಯ ಬೆಳೆಯಿತು. ಆದಕಾರಣ ಐಡೆಂಟಿಟಿಯಲ್ಲಿ ಶೋಷಣೆ ಪ್ರಾಥಮಿಕ ವಿಶ್ಲೇಷಣೆಗೆ ಒಳಪಟ್ಟಿದೆ. ಐಡೆಂಟಿಟಿಯ ನಿರ್ಮಾಣ ಮತ್ತು ಚೌಕಟ್ಟು ದ್ವಿತೀಯ ಹಾಗೂ ಗೌಣವಾದ ವಿಶ್ಲೇಷಣೆಯಾಗುತ್ತವೆ.

ಮುಂದಿಡುತ್ತಾರೆ. ತೃತೀಯ ಜಗತ್ತಿನ ಸ್ತ್ರೀವಾದಿಗಳು ಈ ವಾದವನ್ನು ಒಪ್ಪುವುದಿಲ್ಲ. ಪಾಶ್ಚಾತ್ಯ ಸ್ತ್ರೀಯರ ವಿಶ್ಲೇಷಣೆಯಲ್ಲಿ ಅವರ ಏಕರೂಪವಾಗಿ ನೋಡುವ ಯತ್ನ ಹಾಗೂ ಅದನ್ನೇ ಜಾಗತೀಕವಾಗಿಸುವ ವಿಶ್ಲೇಷಣಾವಿಧಾನವನ್ನು ತೃತೀಯ ಜಗತ್ತಿನ ಮಹಿಳಾ ವಾದಿಗಳು ವಿರೋಧಿಸುತ್ತಾರೆ ಮತ್ತು ಪ್ರಶ್ನಿಸುತ್ತಾರೆ. ವಾಸ್ತವವಾಗಿ ತೃತೀಯ ಜಗತ್ತಿನ ಸ್ತ್ರೀಯರು ಎದುರಿಸುವ ಪ್ರಶ್ನೆಗಳೇ ಬೇರೆ ಅಥವಾ ಅವರು ಮುಖಾಮುಖಿಯಾಗುವ ವೈರುಧ್ಯಗಳು ಪ್ರಾಥಮಿಕವಾಗಿ ಹಾಗೂ ಅಪ್ರಧಾನವಾಗಿ ಬೇರೆಬೇರೆ. ಭಾರತದ ಸಂದರ್ಭದಲ್ಲಿ ಸ್ತ್ರೀಯರು ತಮ್ಮ ಐಡೆಂಟಿಟಿಯನ್ನು ನಿರ್ಮಿಸುವ ಕಾಲಘಟ್ಟದಲ್ಲಿ ಎದುರಿಸುತ್ತಿರುವ ಸಮಸ್ಯೆಗಳು ಬೇರೆಬೇರೆ. ಸಾಮ್ರಾಜ್ಯಶಾಹಿ ಕಾಲದ ಅಸಹನೀಯವಾದ ಅನೇಕ ಹೊರೆಗಳು ಮತ್ತು ಅದರ ನಿರಂತರ ಶೋಷಣೆಯ ಹಿನ್ನೆಲೆಯಲ್ಲಿ ಭಾರತೀಯ ಮಹಿಳೆಯರ ಶೋಷಣೆಗೂ ಪಾಶ್ಚಾತ್ಯ ಮಹಿಳೆಯರ ಶೋಷಣೆಗೂ ಮೂಲಭೂತ ವಿಭಿನ್ನತೆ ಹಾಗೂ ಅಂತರ ಇದೆ. ಇವತ್ತಿನ ಸಂದರ್ಭದಲ್ಲಿ ಮಹಿಳೆಯರ ಐಡೆಂಟಿಟಿಯನ್ನು ಕೇವಲ ಲಿಂಗದ ಆಧಾರದ ಮೇಲೆ ನೋಡಲು ಸಾಧ್ಯವಿಲ್ಲ. ಪಾಶ್ಚಾತ್ಯ ಚಿಂತನೆಗಳು ಮೂಲತಃ ಲಿಂಗವನ್ನು ಆಧರಿಸಿವೆ. ಆ ದೃಷ್ಟಿಕೋನವನ್ನೇ ಜಾಗತೀಕರಿಸಲು ಅವು ಯತ್ನಿಸುತ್ತಿವೆ. ಭಾರತ ಮತ್ತು ಆಫ್ರಿಕಾಗಳ ಸಂದರ್ಭದಲ್ಲಿ ಧರ್ಮ, ಜಾತಿ, ಜನಾಂಗ ಹಾಗೂ ಸಾಮ್ರಾಜ್ಯಶಾಹಿ ಇತ್ಯಾದಿಗಳು ಪ್ರಮುಖ ವಿಷಯಗಳಾಗಿವೆ. 'ಲಿಂಗ' ಎಂಬುದು ಇದರಲ್ಲಿ ಪ್ರಮುಖವಾಗಿದ್ದರೂ ಉಳಿದ ಅಂಶಗಳೂ ಅಷ್ಟೇ ಪ್ರಾಮುಖ್ಯವಾಗಿವೆ. ಆದರೆ, ಪಾಶ್ಚಾತ್ಯ ಹಾಗೂ ಪೌರ್ವಾತ್ಯ ಸ್ತ್ರೀಯರ ಏಕರೂಪದ ವಿಶ್ಲೇಷಣೆಯಾಗಬೇಕಾದರೆ, ಅಂಥ ಐಡೆಂಟಿಟಿಯನ್ನು ನಿರ್ಮಾಣ ಮಾಡಬೇಕಾದರೆ, ಇವರಿಬ್ಬರ ನಡುವಿನ ಸಾಮ್ಯತೆ ಮತ್ತು ಐತಿಹಾಸಿಕ ಘಟ್ಟದ ಶೋಷಣಾ ವ್ಯವಸ್ಥೆ ಹಾಗೂ ಲಿಂಗಾಧಾರಿತ ಅಂಶಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಆದಕಾರಣ, ಇಲ್ಲಿ ವಿಶಾಲವಾದ ಒಂದು ವಿಶ್ಲೇಷಣಾತ್ಮಕ ಚೌಕಟ್ಟಿನ ಅವಶ್ಯಕತೆ ಇದೆ. ಉದಾಹರಣೆಗೆ, ಇಲ್ಲಿ ಬಂಡವಾಳಶಾಹಿ ಚೌಕಟ್ಟಿನೊಳಗೆ ಮಹಿಳಾ ಶೋಷಣೆಯ ಸಂಬಂಧವನ್ನು ಕಲ್ಪಿಸಬೇಕಾದರೆ ಬಂಡವಾಳಶಾಹಿ ವಿಶ್ವರೂಪಿಯಾಗಿ ಏಕರೂಪವಾಗಿ, ಅನಿಯಂತ್ರಿತವಾಗಿ, ಬಲಾಢ್ಯವಾಗಿ ಹಾಗೂ ದೃಢವಾಗಿ ಬೆಳೆದಿರಬೇಕು. ವಿಶ್ವವ್ಯಾಪಿಯಾಗಿ ಬಂಡವಾಳಶಾಹಿಯೇ ಇದ್ದರೂ, ಕೆಲವೆಡೆ ಅಥವಾ ಬ
ಕಡೆ ಅದು ಬುಡಕಟ್ಟು ಸಂಸ್ಕೃತಿಯೊಂದಿಗೆ, ಊಳಿಗಮಾನ್ಯಶಾಹಿಯೊಂದಿಗೆ
ಮಾಡಿಕೊಂಡಿರುವುದು ವಾಸ್ತವ ಸಂಗತಿ. ಆದಕಾರಣ, ವಿಶ್ವವ್ಯಾಪಿಯಾಗಿ ಏಕರ
ಐಡೆಂಟಿಟಿಯನ್ನು ನಿರ್ಮಿಸಲು ಅಸಾಧ್ಯವಾಗುವ ಸಂದರ್ಭಗಳು ಉಂಟಾಗು
ಇದು ಇಕ್ಕಟ್ಟಿನ ಸ್ಥಿತಿಯ ಸಂದರ್ಭವೂ ಹೌದು. ಈ ರೀತಿಯ ಇಕ್ಕಟ್ಟಿನ ಸ್ಥಿತಿ
ಬೇರೆ ಸಾಮಾಜಿಕ ವರ್ಗಗಳಿಗೂ ಅನ್ವಯವಾಗಬಹುದು.

ಐಡೆಂಟಿಟಿಯನ್ನು ನಿರ್ಮಿಸುವಾಗ ಎರಡು ಅಂಶಗಳು ಬಹಳ ಮುಖ್ಯ. ಅವೇ
ಗುಣಮಟ್ಟ ಮತ್ತು ಸಂಖ್ಯೆ. ಐಡೆಂಟಿಟಿ ಬದಲಾದಾಗ ಗುಣಾತ್ಮಕವಾಗಿ ವ್ಯಕ್ತಿ
ಸಮುದಾಯಗಳು ಬದಲಾಗುವುದನ್ನು ನಾವು ಕಾಣಬಹುದು. ಅದಷ್ಟರಿಂದಲೇ
ಹಾಗೂ ಸಮುದಾಯಕ್ಕೆ ಒಂದೇ ಐಡೆಂಟಿಟಿ ಇದೆ ಎನ್ನುವುದು ಮಿಥ್ಯೆ. ಪ್ರತಿಯೊ
ಸಮುದಾಯಕ್ಕೂ ಮತ್ತು ವ್ಯಕ್ತಿಗೂ ತಮ್ಮದೇ ಬಹುಮುಖೀ ಐಡೆಂಟಿಟಿ ಇರು
ವಾಸ್ತವ. ಅದೇ ರೀತಿ ಗುಣಾತ್ಮಕವಾಗಿ ಬದಲಾಗುತ್ತಾ ಹೋಗುವುದನ್ನು, ಬೇರೆ
ಸಂದರ್ಭಗಳಲ್ಲಿ ಅತ್ಯಂತ ಬಡ ವ್ಯಕ್ತಿ ತನ್ನ ಪರಿಸರ, ದುಡಿಮೆ, ಶ್ರಮದಿಂದ ಶ್ರೀವ
ನಾಗುವುದರಲ್ಲಿ ಬಹುಮುಖೀ ಐಡೆಂಟಿಟಿಯನ್ನು ಕಾಣಬಹುದು. ಅಂತೆಯೇ ಬ
ಕಾಲದಲ್ಲಿ ವ್ಯಾಪಾರಿಗಳಾಗಿದ್ದ ಸಮುದಾಯಗಳು ಬಹುದೊಡ್ಡ ಕೈಗಾರಿಕಾ ಬಂಡ
ಶಾಹಿಗಳಾಗಿರುವುದು; ಇತಿಹಾಸದಲ್ಲಿ ತಿರಸ್ಕೃತವಾಗಿರುವ ಸಮುದಾಯಗಳು ಇ
ರಾಜಕೀಯ ಅಧಿಕಾರದ ಚುಕ್ಕಾಣಿ ಹಿಡಿದಿರುವುದನ್ನು ನಾವಿಲ್ಲಿ ಉದಾಹರಿಸಬಹು

ಐಡೆಂಟಿಟಿಯಲ್ಲಾಗುವ ಬದಲಾವಣೆಯು ಸ್ವಂತಿಕೆಯ ಮೇಲೆ ಪರಿಣಾ
ಬೀರುವುದು ವಾಸ್ತವ. ಈ ಕಾಲಘಟ್ಟದಲ್ಲಿ 'ಸ್ವಂತಿಕೆ' ಹೊಸ ರೂಪವನ್ನು ಪಡೆಯು
ಐಡೆಂಟಿಟಿಯಲ್ಲಿ ಬಹಳ ಮುಖ್ಯವಾಗಿರುವುದು ಸಂಖ್ಯೆ. ಅಲ್ಲದೆ ಐಡೆಂಟಿ
ಪ್ರಕ್ರಿಯೆ ಆಂತರಿಕವಾಗಿಯೂ ಬರಬಹುದು, ಹೊರ ಚೌಕಟ್ಟಿನಿಂದಲೂ ಬರಬಹು
ಸಮುದಾಯಗಳು ಆಂತರಿಕವಾಗಿ ತಮ್ಮನ್ನು ತಾವೇ ಸಂಖ್ಯಾಧಾರಿತವಾಗಿ ನಿರ್ಮಿಸ
ಹೋಗುತ್ತವೆ. ಆದಕಾರಣವೇ ತಮ್ಮ ಸಮುದಾಯವನ್ನು 'ಹಿಂದುಳಿದ', 'ಬಲಹಿ
'ಅಲ್ಪಸಂಖ್ಯಾತ', 'ನಿರ್ಲಕ್ಷಿಸಲ್ಪಟ್ಟ' ಇತ್ಯಾದಿ ವಾಕ್ಯಗಳಲ್ಲಿ ವಾದಿಸುತ್ತಾ ಹೋಗು


## ನಮ್ಮ ಕೆಲವು ಪ್ರಕಟಣೆಗಳು



ರೂ. 325




ರೂ. 350



ರೂ. 275




ರೂ. 300




ರೂ. 250



# ಹೇಮಂತ ಸಾಹಿತ್ಯ

972–ಸಿ, 4ನೇ 'ಇ' ವಿಭಾಗ, 10–'ಎ' ಮುಖ್ಯರಸ್ತೆ
ರಾಜಾಜಿನಗರ, ಬೆಂಗಳೂರು – 560 010
ದೂರವಾಣಿ : 23354619

ಗೆಯೇ ಐಡೆಂಟಿಟಿಯನ್ನೂ ನಿರ್ಮಿಸುತ್ತಾ ಹೋಗುತ್ತವೆ. ಇದಕ್ಕೆ ಪೂರಕವಾದಂತೆ ವಸ್ಥೆ ಕೂಡ ಹೊರ ಚೌಕಟ್ಟಿನಿಂದ ಸಮುದಾಯಕ್ಕೆ ಐಡೆಂಟಿಟಿಯನ್ನು ಸಂಖ್ಯಾ ರಿತವಾಗಿ ನಿರ್ಮಿಸುತ್ತದೆ. ವಸಾಹತುಶಾಹಿ ಕಾಲದಿಂದಲೂ ಬಂದಿರುವ ಜನ ಣತಿಯನ್ನು ಇದಕ್ಕೆ ಉದಾಹರಣೆಯಾಗಿ ನೀಡಬಹುದು. ಇದನ್ನು ಜನಗಣತಿಯ ಜಕೀಯ ಎನ್ನಬಹುದು. ಜನಗಣತಿಯನ್ನು ವಿಶಾಲವಾದ ಚೌಕಟ್ಟಿನಲ್ಲಿ ನೋಡುವು ದರೆ ಜನಗಣತಿ ವಸಾಹತುಶಾಹಿಯ ಬಹುದೊಡ್ಡ ಹುನ್ನಾರವಾದರೂ, ಅದು ಧ ಜನಾಂಗಗಳಿಗೆ, ಜಾತಿಗಳಿಗೆ, ಧರ್ಮಗಳಿಗೆ, ಸಮುದಾಯಗಳಿಗೆ ಹೊಸ ಡೆಂಟಿಟಿಯನ್ನು ನೀಡಿದ್ದು ಸುಳ್ಳಲ್ಲ. ವಸಾಹತುಶಾಹಿಯ ಈ ರಾಜಕೀಯ ವಿವಿಧ ಮುದಾಯಗಳಿಗೆ 'ಬಹುಸಂಖ್ಯಾತ', 'ಅಲ್ಪಸಂಖ್ಯಾತ', 'ಹಿಂದುಳಿದ', 'ಬಲಹೀನ', ಲಶಾಲಿ' ಇತ್ಯಾದಿ ಐಡೆಂಟಿಟಿಗಳನ್ನು ನೀಡಿತ್ತು. ಈ ರಾಜಕೀಯದಲ್ಲಿ ಎರಡು ಾಯಗಳಿದ್ದವು. ಒಂದು : ಇದು ನೇರವಾದ ವೈರುಧ್ಯಗಳನ್ನು ಸೃಷ್ಟಿಸಿತ್ತು. ಇದರ ಶ್ರುತಿಯೇ 'ಅಲ್ಪಸಂಖ್ಯಾತ' ಮತ್ತು 'ಬಹುಸಂಖ್ಯಾತ' ಸಮುದಾಯಗಳ ಕಲ್ಪನೆ. ಡು : ವಸಹತುಶಾಹಿಯು, ಈ ಬಗೆಯ ಐಡೆಂಟಿಟಿ ಸಮುದಾಯಗಳನ್ನು ಸ್ತವವಾಗಿ ಮುಖಾಮುಖಿಯನ್ನಾಗಿಸಿತ್ತು. ಆದಕಾರಣವೇ ವ್ಯವಸ್ಥೆಯೊಳಗೆ ಮುದಾಯಗಳು ಮುಖಾಮುಖಿಯಾಗುವ ಸಂದರ್ಭಗಳನ್ನು ನಾವು ಕಾಣುತ್ತೇವೆ. ಮು ಕೆಲವೊಮ್ಮೆ ತೀವ್ರತೆರನಾದ ಘರ್ಷಣೆಗಳಿಗೆ ಕಾರಣೀಭೂತವಾಯಿತು. ಇದರ ವಾದ ಕೋಮುಗಲಭೆಗಳು, ಜನಾಂಗೀಯ ಘರ್ಷಣೆಗಳು ಮತ್ತು ಜಾತಿ ರ್ಷಣೆಗಳನ್ನು ಕಾಣಬಹುದು.

ವಾಸ್ತವವಾಗಿ, ಸಮುದಾಯಗಳು 'ತಮ್ಮ' ಐಡೆಂಟಿಟಿಯನ್ನು ನಿರ್ಮಿಸುವಾಗ ೕರೆ' ಒಂದು ಘಟಕದ ವಿರುದ್ಧವಾಗಿ ಅಥವಾ ಅದಕ್ಕೆ ಸಮಾನಾಂತರದಲ್ಲಿ ರ್ಮಿಸುತ್ತವೆ. ಅದಕ್ಕೆ ಬೇರೆ ಅಥವಾ ವಿಭಿನ್ನ ಸಮುದಾಯಗಳ ಪ್ರಸ್ತುತತೆ ಅತಿ ಅವಶ್ಯಕ. ೕರೆ' ಮುಖಾಂತರವೇ ಸಮುದಾಯಗಳು 'ತಮ್ಮ' ಶಕ್ತಿಯನ್ನು, ಸ್ಥಾನಮಾನವನ್ನು ಗೂ ವಾಸ್ತವತೆಯನ್ನು ಕಲ್ಪಿಸಿಕೊಳ್ಳುತ್ತಾ ವಾದ-ಸಂವಾದಗಳನ್ನು ಸೃಷ್ಟಿಸುತ್ತವೆ. ರತದ ಸಂದರ್ಭದಲ್ಲಿ ಎಷ್ಟೋ ಸಮುದಾಯಗಳು ತಮ್ಮ ಐಡೆಂಟಿಟಿಯನ್ನು ನಿರ್ಮಿಸುವ ದರ್ಭದಲ್ಲಿ ತಾವು 'ಬೇರೆ' ಸಮುದಾಯಗಳಿಂದ ಹೇಗೆ ವಿಭಿನ್ನವಾಗುತ್ತವೆ, ರಿತ್ರಿಕ ಸಂದರ್ಭದಲ್ಲಿ ಹೇಗೆ 'ಬೇರೆ' ಸಮುದಾಯಗಳು ತಮ್ಮನ್ನು ತಾವೇ ವಂಚಿಸಿ ಳ್ಳುತ್ತವೆ ಮತ್ತು 'ಬೇರೆ' ಸಮುದಾಯಗಳು ತಮ್ಮನ್ನು ವಂಚಿಸುತ್ತವೆ ಹಾಗೂ 'ಬೇರೆ' ವರು ತಮ್ಮನ್ನು ವ್ಯವಸ್ಥಿತವಾಗಿ ಹೇಗೆ ತುಳಿಯುತ್ತಾರೆ ಎಂಬಿತ್ಯಾದಿ ವಾದಗಳನ್ನು ವಾದಗಳನ್ನು ನಿರ್ಮಿಸುವುದನ್ನು ನಾವು ಕಾಣುತ್ತೇವೆ. ಈ ವಾದಗಳನ್ನು ನಾವು ಕೆಲವು ಮಾಜಿಕ ಚಳುವಳಿಗಳಲ್ಲಿ ಕಾಣಬಹುದಾಗಿದೆ. ಇದಕ್ಕೆ ಉತ್ತಮ ಉದಾಹರಣೆ ಂದರೆ ಮಹಿಳಾ ಚಳುವಳಿ. ಅದರಲ್ಲಿ ತಾವು ಪುರುಷ ಸಮುದಾಯಗಳಿಂದ ರಿತ್ರಿಕವಾಗಿ ಶೋಷಣೆಗೊಳಗಾದವರು ಎನ್ನುವ ವಾದದಲ್ಲಿ ಭಿನ್ನ ಅಥವಾ 'ಬೇರೆ' ವರನ್ನು ನೋಡುವ, ವಿಶ್ಲೇಷಿಸುವ ಯತ್ನವಿದೆ. ವಿಶ್ಲೇಷಣೆಯ ಕಾಲಘಟ್ಟದಲ್ಲಿ ೕರೆ'ಯವರು 'ಬಲಹೀನ'ರೆಂದು ಐಡೆಂಟಿಟಿ ನಿರ್ಮಿಸುವ ಸಮುದಾಯಗಳು ತ್ರಿಸುವುದಿಲ್ಲ. ಬದಲು ಅವುಗಳು 'ಬಲಾಢ್ಯ', 'ಶಕ್ತಿವಂತ', 'ಯಜಮಾನಿಕೆ' ಹಾಗೂ ಭುತ್ವ' ಎಂದೆಲ್ಲಾ ಚಿತ್ರಿಸುತ್ತವೆ. ಅಲ್ಲದೆ 'ಬೇರೆ' ಅಥವಾ 'other'ಗೆ ಬಹುದೊಡ್ಡ ಜೆಂಡಾ ಇರುವುದನ್ನು ಐಡೆಂಟಿಟಿ ನಿರ್ಮಿಸುವ ಸಮುದಾಯಗಳು ಗುರುತಿಸುತ್ತವೆ. ದರಿಂದಾಗಿ ಐಡೆಂಟಿಟಿ ನಿರ್ಮಿಸಲು ಹೊರಟ ಸಮುದಾಯಗಳ ಮೇಲೆ ತಮ್ಮ ಂತರ ಯಜಮಾನಿಕೆಯನ್ನು ಸಾಧಿಸುವ, ತಾತ್ವಿಕ ಹಾಗೂ ಬೌದ್ಧಿಕ ನೆಲೆಗಟ್ಟಿನಲ್ಲಿ ವು ಸಮುದಾಯಗಳನ್ನು ತುಷ್ಟೀಕರಿಸುವ, ಕೆಲವನ್ನು ತುಚ್ಛೀಕರಿಸುವ ಮತ್ತು ಮುದಾಯಗಳ ಐಡೆಂಟಿಟಿಗಳನ್ನು ನಾಶಮಾಡುವ ಬೃಹತ್ ಕಾರ್ಯಸೂಚಿ ರುವುದನ್ನು ಐಡೆಂಟಿಟಿ ನಿರ್ಮಿಸುವ ಸಮುದಾಯಗಳು ಗುರುತಿಸುತ್ತವೆ.

ಆದಕಾರಣ, ಐಡೆಂಟಿಟಿಯನ್ನು ನಿರ್ಮಿಸುವ ಸಂದರ್ಭದಲ್ಲಿ ಯಾವ ಮುದಾಯಗಳು 'ಬಲಶಾಲಿ' ಅಥವಾ 'ಬಲಹೀನ', 'ಶಕ್ತಿಶಾಲಿ/ಶಕ್ತಿಹೀನ' ಎಂಬ ಶ್ನೆಗಳು ಉದ್ಭವಿಸುತ್ತವೆ. ಇದು ಕೆಲವೊಮ್ಮೆ ಮಹತ್ತರವಾದ ದ್ವಂದ್ವಗಳಿಗೆ ಡೆಮಾಡಿಕೊಡುತ್ತದೆ. ತಾವು 'ಆರ್ಥಿಕವಾಗಿ', 'ರಾಜಕೀಯವಾಗಿ' ಬಲಾಢ್ಯ ಎನ್ನುವ ಮುದಾಯಗಳಲ್ಲಿ ಮತ್ತು ಸಾಮಾಜಿಕವಾಗಿ ಹಿಂದುಳಿದವುಗಳಲ್ಲಿ ಈ ರೀತಿಯ ಂದ್ವಗಳು ವ್ಯಕ್ತವಾಗುತ್ತವೆ. ಮೀಸಲಾತಿಯ ರಾಜಕಾರಣದಲ್ಲಿ ಈ ರೀತಿಯ ದ್ವಂದ್ವ ತಗಿದೆ. ಭಾರತದ ಸಂದರ್ಭದಲ್ಲಿ ಸಮುದಾಯಗಳು ಪ್ರತಿಪಾದಿಸುವ 'ಸಾಮಾಜಿಕ' ಯದಲ್ಲಿ ಈ ಪರಿಕಲ್ಪನೆ ಅಡಕವಾಗಿದೆ.



## ಪ್ರೀತಿ ತೀರ್ಥವಲ್ಲ, ಸಮುದ್ರ

ನಿನಗೆ ಸಾಗರದ ಧಾರಾಳತನದ ಬಗ್ಗೆ ಅಸೂಯೆಯೇ ?
ಏಕೆ ನೀನು ಈ ಪ್ರೀತಿಯನ್ನು ಯಾರಿಗೂ ಕೊಡಲು
ನಿರಾಕರಿಸುತ್ತೀಯ ?
ಮೀನುಗಳು ಪವಿತ್ರವಾದ ದ್ರವವನ್ನು ಲೋಟದಲ್ಲಿ
ಹಿಡಿಯುವುದಿಲ್ಲ.
ಅವು ಆ ಮಹಾ ನೀರಿನ ಸ್ವಾತಂತ್ರ್ಯದಲ್ಲಿ ಈಜುತ್ತವೆ.

ಮೂಲ : ಜಲಾಲುದ್ದೀನ್ ರೂಮಿ
ಅನು : ಅಂಕುರ್ ಬೇಟಗೇರಿ
ನಂ. ೨೦೩, ಹರ್ಷ ಅಪಾರ್ಟ್‌ಮೆಂಟ್ಸ್, ಸ್ನೇಹ ಕಾಲೋನಿ, ಚಿಕ್ಕಲಸಂದ್ರ, ಬೆಂಗಳೂರು - ೬೧

### ಐಡೆಂಟಿಟಿ ಮತ್ತು ವರ್ಗ

ಐಡೆಂಟಿಟಿಯನ್ನು ವಿಶ್ಲೇಷಿಸುವಾಗ ಸಹಜವಾಗಿ ವರ್ಗದ ಕುರಿತಾದ ವಾದಗಳು ಹುಟ್ಟಿಕೊಳ್ಳುತ್ತವೆ. ಐಡೆಂಟಿಟಿಯ ವಿಶ್ಲೇಷಣೆಯಲ್ಲಿ ವರ್ಗ ಸಹಜವಾಗಿ ಎಲ್ಲಿರುತ್ತದೆ ಎಂಬ ಪ್ರಶ್ನೆಯೂ ಇದೆ. ಮಾರ್ಕ್ಸ್‌ವಾದಿಗಳು ವರ್ಗವನ್ನು ಮುಂದಿಟ್ಟು ಐತಿಹಾಸಿಕ ಬದಲಾವಣೆಗಳನ್ನು ವಿಶ್ಲೇಷಿಸಿದವರು. ಆಧುನಿಕತೆ/ಆಧುನಿಕೋತ್ತರತೆಯನ್ನು ಪ್ರತಿಪಾದಿಸುವವರು 'ಐಡೆಂಟಿಟಿ'ಯ ವಿಷಯವನ್ನು ಮುಂದಿಟ್ಟು ಪ್ರತಿಪಾದಿಸಿದವರು. ಇವರ ಪ್ರತಿಪಾದನೆಯಲ್ಲಿ ಸಮುದಾಯಗಳನ್ನು 'ಸ್ವಂತಿಕೆ'ಯಿಂದ ವಿಶ್ಲೇಷಿಸಿ, ಅದರ ವಿವಿಧ ಸ್ವರೂಪಗಳನ್ನು ತೆರೆದಿಟ್ಟಿರುವ ಯತ್ನವೂ ಸೇರಿದೆ. ಮಾರ್ಕ್ಸ್‌ವಾದಕ್ಕೆ ಈ 'ಐಡೆಂಟಿಟಿ' ವಿಶ್ಲೇಷಣೆಯನ್ನು ಒಂದು ಪರ್ಯಾಯವೆಂದು ಒಪ್ಪಿಕೊಳ್ಳುವವರಲ್ಲಿ ಸಾಕಷ್ಟು ಉದಾರವಾದಿಗಳು, ಸಮುದಾಯವಾದಿಗಳು ಮತ್ತು ಆಧುನಿಕೋತ್ತರ ವಾದಿಗಳು ಇದ್ದಾರೆ. ಇವರೆಲ್ಲಾ 'ಐಡೆಂಟಿಟಿ' ಮಾರ್ಕ್ಸ್‌ವಾದಕ್ಕೆ ಪರ್ಯಾಯವೆಂದು ಕೂಡಲೆ ತೀರ್ಮಾನಿಸಿಬಿಡುತ್ತಾರೆ.

ವಾಸ್ತವದಲ್ಲಿ ಮಾರ್ಕ್ಸ್‌ವಾದಿಗಳು ಐಡೆಂಟಿಟಿ ವಿಷಯವನ್ನು ಅವಗಣನೆ ಮಾಡುವುದಿಲ್ಲ. 'ವರ್ಗ'ದ ವಿಷಯ ಮೂಲಭೂತವಾದರೂ ಮಾರ್ಕ್ಸ್‌ವಾದದಲ್ಲಿ 'ಐಡೆಂಟಿಟಿ' ವಿಷಯವನ್ನು ಚರ್ಚೆಗೆ ಹಾಗೂ ವಿಶ್ಲೇಷಣೆಗೆ ತೆಗೆದುಕೊಳ್ಳಲಾಗುತ್ತದೆ. ಮಾರ್ಕ್ಸ್‌ನ ಸಾಂಪ್ರದಾಯಿಕ, ಶಾಸ್ತ್ರೀಯ ತತ್ವಗಳ ಆಳದಲ್ಲೂ 'ಐಡೆಂಟಿಟಿ' ವಿಷಯಗಳು ಅಂತರ್ಗತವಾಗಿರುವುದನ್ನು ನಾವು ಗಮನಿಸಲೇಬೇಕು. ೧೮೪೮ರ ಫ್ರೆಂಚ್ ಕ್ರಾಂತಿಯ ಕಾಲದಲ್ಲಿ Neue Rheinische Zeitung ಪತ್ರಿಕೆಗೆ ಬರೆದ ಲೇಖನವೊಂದರಲ್ಲಿ ಹೀಗೆ ಹೇಳುತ್ತಾರೆ : "ಸಾಧಾರಣ ಜನತೆಯ ಪರಿಸ್ಥಿತಿಯಂತೂ ಹೇಳತೀರದು. ಅವರನ್ನು ಮೊದಲಿಗೆ ಹಸಿವು ಚಿತ್ರಹಿಂಸೆಗೆ ಒಳಪಡಿಸುತ್ತದೆ. ಅವರನ್ನು ಮಾಧ್ಯಮಗಳು ಖಂಡಿಸುತ್ತವೆ; ಸಮಾಜದ ಮರ್ಯಾದಸ್ಥರೆಂದೆನಿಸಿಕೊಂಡವರು ಕಳ್ಳರೆಂದು ಹಳಿಯುತ್ತಾರೆ. ನಿರಂತರ ದುಡಿತಕ್ಕೆ ಸಿಕ್ಕ ತೂತ್ತಿನವರು ಎನ್ನುತ್ತಾರೆ. ಆಸ್ತಿಪಾಸ್ತಿಗೆ ಬೆಂಕಿ ಇಕ್ಕುವವರು ಎಂದೆಲ್ಲಾ ಆಪಾದಿಸುತ್ತಾರೆ. ಅವರ ಹೆಂಡಿರು ಮಕ್ಕಳಂತೂ ಇನ್ನೂ

## ಪ್ರಶ್ನೆ

ವರ್ತಮಾನದ ಯಕ್ಷಪ್ರಶ್ನೆಯಿದು : ಲೋಕದಲಿ
ಹೇಗೆ ಬದುಕಿದ್ದಾರೆ ಜನ ಕೋಟಿಕೋಟಿಯಂ-
ಕಿಯಲಿ ? ಯಾವ ತಪಸ್ಸು ? ಗಾಳಿಯನು ಕುಡಿದು ಬದು-
ಕಿರುವರೇ ? ಬಡತನದ ಆಪ್ತಮಿತ್ರರು ರೋಗ
ರುಜಿನಗಳು : ಬಡವರಿಗೆಂದೇ ಹೇಳಿ ಮಾಡಿಸಿ-
ದಂತಹವು ! ಹುಲ್ಲು ಹುಳು ಹುಪ್ಪಟೆಗಳಸ್ತಿತ್ವ !
ತತ್ತ್ವದಿಂದೇನು ಉಪಯೋಗ ? ಯೋಗಕ್ಷೇಮ
ಮುಖ್ಯ : ತಾರಕ ಸತ್ತ್ವ ಅನ್ನ, ಬಟ್ಟೆಗಳೆರಡು.
(ಬೇಕು ಶೌಚವ್ಯವಸ್ಥೆ ಕೂಡ !) ಮೀಸಲು ಸೃಷ್ಟಿ
ಕೆಲವರಿಗೆ ; ಉಳಿದವರು ನೆಲದ ಮಲ-ತಾಯಿ ಮ-
ಕ್ಕಳೆ ? ಉರಿಯುವುದು ಹೊಟ್ಟೆ, ಕರಗುವುದು ಕರುಳು !
ಹೂತು ಹಣ್ಣಹುದೆಂದು ಸರ್ವೋದಯದ ತಿರುಳು ?

ಪಿ. ಪಿ. ಕೆ.
೨೨೬೫/೧೯, ೪ನೇ ಮುಖ್ಯರಸ್ತೆ, ೬ನೇ ಅಡ್ಡರಸ್ತೆ, ವಿನಾಯಕನಗರ, ಮೈಸೂರು-೧೨

ಹೆಚ್ಚಿನ ಸಂಕಟಕ್ಕೆ ಸಿಲುಕಿದವರು; ಇಷ್ಟೆಲ್ಲಾ ಆದರೂ ಅಚ್ಚರಿಯಿಂದ ಅವರ ಪೈಕಿ ಬದುಕುಳಿದವರು ಕೆಲವರಿದ್ದರೆ ಅವರನ್ನು ಕಡಲಾಚೆಗೆ ರವಾನಿಸಿಬಿಡುತ್ತಾರೆ.'' ಇಲ್ಲಿ ಕೆಳಸ್ತರದ ಜನರ ಐಡೆಂಟಿಟಿಯನ್ನು ಅವರ ಹಸಿವಿನ ಮಧ್ಯೆ ನೆಲೆಸಿ ಹೇಗೆ ತೀರ್ಮಾನಿಸಲಾಗುತ್ತದೆ ಎಂಬುದನ್ನು ವಿವರಿಸಿದ್ದಾರೆ. – ಕೆಳಸ್ತರದವರು ಹೇಗೆ ಕಳ್ಳರಾಗಿ ಕಂಡುಬರುತ್ತಾರೆ ಎಂಬುದು ಬಹುಮುಖ್ಯ. ಇದೇ ರೀತಿಯಾಗಿ ಮಾರ್ಕ್ಸ್‌ನ ಕೃತಿಗಳಲ್ಲಿ ಐಡೆಂಟಿಟಿಗೆ ಸಂಬಂಧಪಟ್ಟ ಚರ್ಚೆಯನ್ನು 'ಮನುಷ್ಯನ ಪ್ರಜ್ಞೆ' ಹಾಗೂ 'ಶ್ರಮ' ಎಂಬ ವಿಷಯಗಳ ಕುರಿತಂತೆ ವಿಶ್ಲೇಷಿಸುವಾಗ ಹಾಗೂ ಬಂಡವಾಳವನ್ನು ವಿಶ್ಲೇಷಿಸುವಾಗಲೂ ಕಾಣಬಹುದು. ಆದಕಾರಣ, ಇತ್ತೀಚಿನ ವರುಷಗಳಲ್ಲಿ, ನವ ಮಾರ್ಕ್ಸ್‌ವಾದಿಗಳು ತಮ್ಮ ವಾದಗಳನ್ನು 'ವರ್ಗ'ದಿಂದ ಆರಂಭಿಸಿ 'ಐಡೆಂಟಿಟಿ'ಯಲ್ಲಿ ಮುಕ್ತಾಯಗೊಳಿಸುವುದು ಸಹಜವಾಗಿದೆ. ಈ ರೀತಿಯ ವಾದಗಳು ೧೯೮೦ರ ದಶಕದ ನಂತರ, ಅದರಲ್ಲೂ 'ನವ ಸಾಮಾಜಿಕ ಚಳುವಳಿ'ಗಳ ಕಾಲಘಟ್ಟದಲ್ಲೂ, ತದನಂತರ ಸೋವಿಯತ್ ಯೂನಿಯನ್‌ನ ಪತನಾನಂತರವೂ ಬೆಳೆದುವು. 'ನವ ಸಾಮಾಜಿಕ' ಚಳುವಳಿಗಳನ್ನು 'ಐಡೆಂಟಿಟಿ' ರೂಪದಲ್ಲೂ ನೋಡಬೇಕಾದ ಅನಿವಾರ್ಯತೆಯನ್ನು, ಅಗತ್ಯವನ್ನು ಇಲ್ಲಿ ಕಾಣಬಹುದಾಗಿದೆ.

'ವರ್ಗ' ಮತ್ತು 'ಐಡೆಂಟಿಟಿ' ಎರಡೂ ಬೇರೆ ಬೇರೆ ಎಂದೆನಿಸಿದರೂ ಅಂತಿಮ ವಿಶ್ಲೇಷಣೆಯಲ್ಲಿ 'ಐಡೆಂಟಿಟಿ'ಯಲ್ಲಿ ವರ್ಗವನ್ನು ಕಾಣಬಹುದು. 'ವರ್ಗ'ವೆಂದರೆ 'ಆರ್ಥಿಕ' ವರ್ಗ. ಅದರರ್ಥ ಐಡೆಂಟಿಟಿಯಲ್ಲಿ ಇತರ ವರ್ಗದ ವಿಷಯಗಳಿಲ್ಲವೆಂದಲ್ಲ. ಐಡೆಂಟಿಟಿ ಅಂತರ್‌ಸ್ತರಗಳಲ್ಲಿ 'ಆರ್ಥಿಕ' ವಿಷಯಗಳೂ ಇರುತ್ತವೆ; ಸಾಮಾಜಿಕ ಶೋಷಣೆಯ ಹಿನ್ನೆಲೆ ಅಥವಾ ಸಾಂಸ್ಕೃತಿಕ ಪರಂಪರೆಯ ನಷ್ಟದಲ್ಲಿ ಆರ್ಥಿಕ ವಿಷಯಗಳೂ ಕೂಡ ಕೂಡಿಕೊಂಡಿರುತ್ತವೆ.

ಈ ಐಡೆಂಟಿಟಿ-ವರ್ಗ ಎರಡರಲ್ಲೂ ಪರಸ್ಪರ ವೈರುಧ್ಯವಿರದೆ, ವಾಸ್ತವವಾಗಿ ಅವುಗಳು ಒಂದಕ್ಕೊಂದು ಪೂರಕವಾಗಿರುತ್ತವೆ : ಜಾಗತೀಕರಣದ ಸಂದರ್ಭದಲ್ಲಿ ವ್ಯಕ್ತವಾಗುವ ವಿರೋಧಗಳಲ್ಲಿ ಈ ವರ್ಗ ಮತ್ತು ಐಡೆಂಟಿಟಿಗಳು ಬೆಸೆದುಕೊಂಡಿರುವುದು, ಬಂಡವಾಳಶಾಹಿ ಚೌಕಟ್ಟಿನಲ್ಲಿ 'ಶೋಷಣೆ' ಕುರಿತು ಪ್ರಶ್ನೆಗಳು ಎದುರಾದಾಗ ಇವರೆಡೂ ಅಂಶಗಳು ಜೊತೆ ಜೊತೆಯಾಗಿರುವುದನ್ನು ಹಾಗೂ ಪರಸ್ಪರ ಹೊಂದಾಣಿಕೆ ಮಾಡಿಕೊಂಡಿರುವುದನ್ನು ಕಾಣಬಹುದು. ಈ ನಿಟ್ಟಿನಲ್ಲಿ, 'ಐಡೆಂಟಿಟಿ'ಯನ್ನು ಕೇವಲ ಆಧುನಿಕೋತ್ತರ ವಾದಕ್ಕೋ ಅಥವಾ ಉದಾರ ವಾದಕ್ಕೋ ಸೀಮಿತಗೊಳಿಸುವುದು ಇಲ್ಲವೇ ಮಾರ್ಕ್ಸ್‌ವಾದವನ್ನು ಕೇವಲ 'ವರ್ಗ'ಕ್ಕೆ ಸೀಮಿತಗೊಳಿಸುವುದು ಬೌದ್ಧಿಕ, ಚಾರಿತ್ರಿಕ ಹಾಗೂ ವೈಚಾರಿಕ ನೆಲೆಗಟ್ಟಿನಲ್ಲಿ ಸರಿಯಾದ ಕ್ರಮವಲ್ಲ.

### ಐಡೆಂಟಿಟಿ ಹಾಗೂ ಶಕ್ತಿ ಸಂಬಂಧಗಳು

ಸಮುದಾಯಗಳು ತಮ್ಮ ಐಡೆಂಟಿಟಿಯನ್ನು ನಿರ್ಮಿಸುವಾಗ ವಿ... ಸಮುದಾಯಗಳ ನಡುವೆ ವಿಶಿಷ್ಟವಾದ ಶಕ್ತಿ ಸಂಬಂಧಗಳನ್ನು ಕಲ್ಪಿಸುತ್ತವೆ. ... ವಾದಗಳು ಪ್ರಮುಖವಾಗಿ ಬಹುಸಂಸ್ಕೃತಿ ವಾದಗಳಿಂದ ಬಂದಿವೆ. ವಿಲ್ ಕಿಮ್... ಅವರ 'ಥಿಯರಿ ಆಫ್ ಮಲ್ಟಿ ಕಲ್ಚರಲಿಸಂ' (೧೯೯೫) ಸಿದ್ಧಾಂತ ಮತ್ತು ಚಾಲ... ಟೇಲರ್ ಅವರ ಮನ್ನಣೆ ಸಿದ್ಧಾಂತ (೧೯೯೨) ಗಳಲ್ಲಿ ಪ್ರಮುಖವಾಗಿ ಈ ವಿಷಯಗ... ಚರ್ಚೆಗೊಳಪಟ್ಟಿವೆ. ಇವರಿಬ್ಬರೂ ವಿವಿಧ ಉದಾರವಾದಿ ನೆಲೆಗಟ್ಟಿನಿಂದ ಬಂದರ... ಐಡೆಂಟಿಟಿ ಕುರಿತು ತಮ್ಮ ವಾದವನ್ನು ಬಹು ಸಂಸ್ಕೃತಿಯ ರೂಪದಲ್ಲಿ ವಾದಿಸ... ಯತ್ನಿಸುತ್ತಾರೆ. ಬಹಳ ಮುಖ್ಯವಾಗಿ ಸಂಸ್ಕೃತಿಗಳಲ್ಲಿರುವ ವ್ಯತ್ಯಾಸಗಳನ್ನು ಗುರುತಿ... ಅವುಗಳು ಪ್ರತಿ ಸಂಸ್ಕೃತಿಗೆ ಹೇಗೆ ಭಿನ್ನ ಅಥವಾ 'ಬೇರೆ'ಗಳಾಗಲು ಪ್ರಯತ್ನಿಸುತ್ತ... ಎಂಬ ಅಂಶವನ್ನು ಕುರಿತು ವಾದಿಸುತ್ತಾರೆ. ಆದಕಾರಣ ಪ್ರತಿಯೊಂದು ಸಂಸ್ಕೃತಿಯ... ಇನ್ನೊಂದು ಸಂಸ್ಕೃತಿಗೆ 'ಬೇರೆ'ಗಳಾಗುವ ಸಾಧ್ಯತೆಗಳಿವೆ. ಇವುಗಳ 'ಬೇರೆ'... ವ್ಯತ್ಯಾಸ ಬರುವುದು ರಾಜಕೀಯ ಶಕ್ತಿಯ ವ್ಯತ್ಯಾಸಗಳಿಂದ. ಒಂದು ಸಂಸ್ಕೃತಿ ... ಇತಿಹಾಸದಲ್ಲಿ 'ಪ್ರಭಾವಶಾಲಿ' ಪ್ರಭುತ್ವವಾಗುವುದು ಅದರ ಆರ್ಥಿಕ ಮತ್ತು ಸಾಮಾಜಿಕ ಶಕ್ತಿಯಿಂದ. ಆಂಗ್ಲೋ-ಸ್ಯಾಕ್ಸನ್ ದೇಶಗಳು ತಮ್ಮ ಸಂಸ್ಕೃತಿಯನ್ನು ಬೇರ... ವಸಾಹತು ದೇಶಗಳ ಮೇಲೆ ಹೇರಲು ಸಾಧ್ಯವಾದುದು ಅವರ ಸಾಂಸ್ಕೃ... ವಸಾಹತುಶಾಹಿ ಶಕ್ತಿಯಿಂದ. ಕೆಲವೊಮ್ಮೆ ಸಾಮುದಾಯಿಕ ಮತ್ತು ಸಾಂಸ್ಕೃ... ಪರಂಪರೆಗಳು ಇನ್ನಷ್ಟು ಶಕ್ತಿಶಾಲಿಗಳಾಗುವುದು ಕೂಡ ಇಂತಹ ಸಂದರ್ಭದಲ್ಲಿಯೆ... ಅವು ಬೇರೆ ಸಾಂಸ್ಕೃತಿಕತೆಗಳೊಂದಿಗೆ ವಿಲೀನವಾದಾಗ, ಮೂಲ ಸಂಸ್ಕೃತಿ ಮತ್ತ... ಶಕ್ತಿಶಾಲಿಯಾಗುತ್ತದೆ. ಮಾತ್ರವಲ್ಲ, ಅದರೊಂದಿಗೆ ನಿಶ್ಚಿತ ಸಾಂಸ್ಕೃತಿಕ ನೆಲೆಗಟ್ಟಿನಿಂ... ಬರುವ ಸಮುದಾಯಗಳು ಹೊಸ 'ಐಡೆಂಟಿಟಿ'ಯನ್ನು ನಿರ್ಮಿಸುತ್ತ... ಈ ನಿರ್ಮಿಸುವಿಕೆಯ ಕ್ರಿಯೆ ಎರಡು ರೂಪಗಳಲ್ಲಿ ನಡೆಯುತ್ತದೆ : ಮೊದ... ಯದಾಗಿ, ಅದು ಘರ್ಷಣೆ ರೂಪದಲ್ಲೂ, ಎರಡನೆಯದಾಗಿ, ಯಾವು... ಪ್ರತಿರೋಧಗಳಿಲ್ಲದೆಯೂ ನಡೆಯಬಹುದು. ಎರಡನೆಯದನ್ನು ಐರೋಪ್ಯ ಅಥ... ಅಮೆರಿಕಾದ ಸಂದರ್ಭಗಳಲ್ಲಿ ನೋಡಬಹುದು. ಐರಿಶರು, ಸ್ಕಾಟ... ಸ್ಕಾಂಡಿನೇವಿಯನ್ನರು ಇತ್ಯಾದಿಗಳವರು ಬ್ರಿಟಿಷ್-ಐರೋಪ್ಯ ಸಂಸ್ಕೃತಿಯ... ತಮ್ಮದಾಗಿಸಿಕೊಂಡಿದ್ದರಿಂದಲೇ ಜಾಗತಿಕವಾಗಿ ಬ್ರಿಟಿಷ್-ಐರೋಪ್ಯ ಸಂಸ್ಕೃ... ಬಲಾಢ್ಯವಾಯಿತು. ಹೀಗೆ ಲಭಿಸಿದ ಬಲದಿಂದಲೇ ಅದು ಜನಾಂಗಗಳಲ್ಲಿ 'ಬೇ... ಅನ್ನು ಸೃಷ್ಟಿಸಲು ಸಾಧ್ಯವಾಯಿತು. ಈ ರೀತಿಯ ಐಡೆಂಟಿಟಿ ಎರಡು ರೀತಿ... ವಿರುದ್ಧಗಳನ್ನು ಅಂದರೆ 'ಉತ್ತಮ ಅರಿಮೆ' ಮತ್ತು 'ಕೀಳರಿಮೆ'ಗಳನ್ನು ಸೃಷ್ಟಿಸುತ್ತ... ಆದಕಾರಣ, ಬಲಾಢ್ಯವಾಗುವ ಸಂಸ್ಕೃತಿಗಳು ವಿವಿಧ ಅಥವಾ ಇನ್ನಿತರ ಸಂಸ್ಕೃತಿಗಳ... 'ತುಚ್ಛೀಕರಿಸುತ್ತವೆ'. ಈ ರೀತಿಯ ತುಚ್ಛೀಕರಣ ಪ್ರಕ್ರಿಯೆಯು ಸಮುದಾಯಗ... ತುಚ್ಛೀಕರಣಕ್ಕೆ ಕಾರಣವಾಗುತ್ತದೆ. ತುಚ್ಛೀಕರಣಗೊಂಡ ಸಮುದಾಯಗಳು ತ... ಸಾಂಸ್ಕೃತಿಕ ನೆಲೆಗಟ್ಟುಗಳನ್ನು ಕಂಡುಕೊಳ್ಳುವ ಸಂದರ್ಭದಲ್ಲಿ ಬಲಾಢ್ಯ ಸಂಸ್ಕೃತಿ... ವಿರುದ್ಧ ನಿರಂತರವಾದ ಅಘೋಷಿತ ಹೋರಾಟವನ್ನು ನಡೆಸುವ ಅನಿವಾರ್ಯ... ಇರುತ್ತದೆ. ಈ ಹೋರಾಟಗಳು ಸಾಂಸ್ಕೃತಿಕ, ವೈಚಾರಿಕ, ಬೌದ್ಧಿಕ ಹಾಗೂ ರಾಷ್ಟ್ರೀ... ಹೋರಾಟಗಳಾಗಿ ಪರಿವರ್ತಿತ ವಾಗುವ ಸಾಧ್ಯತೆಯಿದೆ. ಇದಕ್ಕೆ ಉತ್ತ... ಉದಾಹರಣೆಯೆಂದರೆ, ಭಾರತದ ರಾಷ್ಟ್ರೀಯ ಹೋರಾಟದ ಇತಿಹಾಸ. ಭಾರತ... ರಾಷ್ಟ್ರೀಯ ಹೋರಾಟವು ತನ್ನ ರಾಷ್ಟ್ರ ಕಳೆದುಕೊಂಡ 'ಐಡೆಂಟಿಟಿ'ಯ... ಪುನರ್‌ನಿರ್ಮಿಸುವ ಯತ್ನವಾಗಿತ್ತು. ಜಾಗತೀಕರಣದ ಸಂದರ್ಭದಲ್ಲಿ ಈ ರೀತಿ... ಹೋರಾಟಗಳು ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ನಡೆಯುತ್ತವೆ. ಸಾಂಸ್ಕೃತಿಕ ಆಧಾರ... 'ಐಡೆಂಟಿಟಿ'ಯನ್ನು ಉಳಿಸಿ ಕೊಳ್ಳಲು, ಹೊಸ ಹೊಸ ಐಡೆಂಟಿಟಿಗಳನ್ನು ನಿರ್ಮಿಸ... ವಿವಿಧ ಸಮುದಾಯಗಳು ಪರಸ್ಪರ ಹತ್ತಿರ ಬರುವುದು ಸ್ವಾಭಾವಿಕ. ಆದಕಾರ... ಐಡೆಂಟಿಟಿ ವಿಷಯವನ್ನು ಒಂದು ಸೀಮಿತ ನೆಲೆಗಟ್ಟಿನಿಂದ ನೋಡುವುದು ಸರಿಯ... ಅದಕ್ಕೂ ವಿಶಾಲವಾದ ತಳಹದಿಯಿದೆ. ಅದೊಂದು ನಿರಂತರ ಪ್ರಕ್ರಿಯೆ.

ಡಾ|| ಮುಜಾಫರ್ ಅಸ್ಸಾದಿ
ಪ್ರಾಧ್ಯಾಪಕರು- ಅಧ್ಯಕ್ಷರು,
ರಾಜ್ಯಶಾಸ್ತ್ರ ಅಧ್ಯಯನ ವಿಭಾಗ,
ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು-೫೭೦ ೦೦೬



ಸ್ಥಾಪನೆ: 1946

ಗಾಂಧೀಜಿಯವರ ಕರೆ, ನೆಹರೂರವರ ವೈಜ್ಞಾನಿಕ ದೃಷ್ಟಿಕೋನ
ಸ್ವಾತಂತ್ರ್ಯ ಹೋರಾಟಗಾರರ ಶ್ರಮ - ತ್ಯಾಗ
ಸಹ್ಯಾದ್ರಿ ಮಡಿಲಿನ ಮಲೆನಾಡು ಪ್ರಾಂತದ ವಿದ್ಯಾಕ್ಷೇತ್ರ.

# ರಾಷ್ಟ್ರೀಯ ಶಿಕ್ಷಣ ಸಮಿತಿ (ರಿ.)


ಬಾಲರಾಜ್ ಅರಸ್ ರಸ್ತೆ ಶಿವಮೊಗ್ಗ 577201

ಫೋನ್: 273469, 272178. ಫ್ಯಾಕ್ಸ್: 08182-222450

ವೆಬ್‌ಸೈಟ್:www.nes-shimoga.org www.jnnce.ac.in ಇ-ಮೈಲ್:nescec@sancharnet.in


| | | |
|---|---|---|
| 1. | ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಶಿವಮೊಗ್ಗ | 1946 |
| 2. | ಕಸ್ತೂರಬಾ ಬಾಲಿಕಾ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಶಿವಮೊಗ್ಗ | 1954 |
| 3. | ರಾಷ್ಟ್ರೀಯ ಹಿರಿಯ ಪ್ರಾಥಮಿಕ ಶಾಲೆ, ಶಿವಮೊಗ್ಗ | 1956 |
| 4. | ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಕೋಣಂದೂರು. | 1960 |
| 5. | ರಾಷ್ಟ್ರೀಯ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಬಿ.ಆರ್. ಪ್ರಾಜೆಕ್ಟ್. | 1962 |
| 6. | ಜಯಪ್ರಕಾಶ್‌ನಾರಾಯಣ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಶಿವಮೊಗ್ಗ | 1963 |
| 7. | ರಾಷ್ಟ್ರೀಯ ಶಿಕ್ಷಣ ಮಹಾವಿದ್ಯಾಲಯ, ಶಿವಮೊಗ್ಗ | 1963 |
| 8. | ರಾಷ್ಟ್ರೀಯ ಪ್ರೌಢಶಾಲೆ, ಚೀಲೂರು. | 1964 |
| 9. | ರಾಷ್ಟ್ರೀಯ ಪ್ರೌಢಶಾಲೆ, ಕುಂಸಿ. | 1964 |
| 10. | ಶ್ರೀ ತೀರ್ಥಲಿಂಗೇಶ್ವರ ರಾಷ್ಟ್ರೀಯ ಪ್ರೌಢಶಾಲೆ, ಬೆಳಗುತ್ತಿ. | 1964 |
| 11. | ಶ್ರೀ ಪದ್ಮಾಂಬ ಪ್ರೌಢಶಾಲೆ, ಹುಂಚ. | 1964 |
| 12. | ಕಮಲಾ ನೆಹರು ಸ್ಮಾರಕ , ರಾಷ್ಟ್ರೀಯ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಮಹಿಳಾ ಕಾಲೇಜು, ಶಿವಮೊಗ್ಗ | 1965 |
| 13. | ಆಚಾರ್ಯ ತುಳಸಿ ರಾಷ್ಟ್ರೀಯ ವಾಣಿಜ್ಯ ಕಾಲೇಜು, ಶಿವಮೊಗ್ಗ | 1966 |
| 14. | ರಾಷ್ಟ್ರೀಯ ಕಾನೂನು ಕಾಲೇಜು, ಶಿವಮೊಗ್ಗ | 1966 |
| 15. | ರಾಷ್ಟ್ರೀಯ ಸಂಜೆ ವಾಣಿಜ್ಯ ಕಾಲೇಜು, ಶಿವಮೊಗ್ಗ | 1968 |
| 16. | ರಾಷ್ಟ್ರೀಯ ಔಷಧ ಮಹಾವಿದ್ಯಾಲಯ, ಶಿವಮೊಗ್ಗ | 1969 |
| 17. | ಶರಾವತಿ ರಾಷ್ಟ್ರೀಯ ಪ್ರೌಢಶಾಲೆ, ಹರಿಗೆ. | 1969 |
| 18. | ಶಾರದಾದೇವಿ ಬಾಲಿಕ ಪ್ರೌಢಶಾಲೆ , ಶಿವಮೊಗ್ಗ | 1970 |
| 19. | ರಾಷ್ಟ್ರೀಯ ಪದವಿ ಪೂರ್ವ ಕಾಲೇಜು,ಶಿವಮೊಗ್ಗ | 1972 |
| 20. | ಕಸ್ತೂರಬಾ ಬಾಲಿಕಾ ಪದವಿ ಪೂರ್ವ ಕಾಲೇಜು. ಶಿವಮೊಗ್ಗ | 1972 |
| 21. | ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಕೋಣದೂಂರು. | 1972 |
| 22. | ಜವಾಹರಲಾಲ್‌ನೆಹರು ರಾಷ್ಟ್ರೀಯ ತಾಂತ್ರಿಕ ಮಹಾವಿದ್ಯಾಲಯ, ಶಿವಮೊಗ್ಗ | 1980 |
| 23. | ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಬಿ.ಆರ್.ಪ್ರಾಜೆಕ್ಟ್. | 1983 |
| 24. | ಶರಾವತಿ ಪ್ರಥಮ ದರ್ಜೆ ಕಾಲೇಜು, ಕೋಣಂದೂರು. | 1983 |
| 25. | ರಾಷ್ಟ್ರೀಯ ಕಿರಿಯ ಪ್ರಾಥಮಿಕ ಶಾಲೆ, ಶಿವಮೊಗ್ಗ | 1983 |
| 26. | ಇಂಡಿಯನ್ ಪ್ರೌಢಶಾಲೆ, ಶಿವಮೊಗ್ಗ | 1983 |
| 27. | ಜಯಪ್ರಕಾಶನಾರಾಯಣ ಪದವಿ ಪೂರ್ವ ಕಾಲೇಜು, ಶಿವಮೊಗ್ಗ | 1984 |
| 28. | ಎಸ್.ಆರ್.ನಾಗಪ್ಪಶೆಟ್ಟಿ ಸ್ಮಾರಕ ರಾಷ್ಟ್ರೀಯ ಅನ್ವಯಿಕ ವಿಜ್ಞಾನ ಕಾಲೇಜು, ಶಿವಮೊಗ್ಗ | 1991 |
| 29. | ಶ್ರೀ ತೀರ್ಥಲಿಂಗೇಶ್ವರ ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಬೆಳಗುತ್ತಿ | 1994 |
| 30. | ಎನ್.ಇ.ಎಸ್. ಕಂಪ್ಯೂಟರ್ ಶಿಕ್ಷಣ ಕೇಂದ್ರ, ಶಿವಮೊಗ್ಗ | 1998 |
| 31. | ರಾಷ್ಟ್ರೀಯ ಸ್ವತಂತ್ರ ವಸತಿ ವಿಜ್ಞಾನ ಕಾಲೇಜು, ಕೋಣಂದೂರು. | 2000 |



Ramadhyani / S.B.WEB-VISION

# ಸುರಕ್ಷತೆಯಿಂದಿರಿ...

ದೇಶದ ನೆಲ, ಜಲ ಮತ್ತು
ಬಾಹ್ಯಾಕಾಶವನ್ನು ಕಾಪಾಡುವಲ್ಲಿ
ಬಿಇಎಲ್ ಸಹಕರಿಸುತ್ತದೆ



ರಾಷ್ಟ್ರೀಯ ಭದ್ರತೆಗಾಗಿ ರಕ್ಷಣಾ ವಿದ್ಯುನ್ಮಾನ



ದೇಶದ ಪ್ರಧಾನ ರಕ್ಷಣಾ ವಿದ್ಯುನ್ಮಾನ ಸಂಸ್ಥೆಯಾದ ಭಾರತ್ ಎಲೆಕ್ಟ್ರಾನಿಕ್ಸ್ ಲಿಮಿಟೆಡ್ (ಬಿಇಎಲ್) ಬೃಹತ್ ಶ್ರೇಣಿಯ ರಾಡರ್‌ಗಳು, ರಕ್ಷಣಾ ಸಂವಹನ, ನಾವೆಯ ವ್ಯವಸ್ಥೆಗಳು, ವಿದ್ಯುನ್ಮಾನ ಸಂಗ್ರಾಮ, ಎಲೆಕ್ಟ್ರೋ ಆಪ್ಟಿಕ್ಸ್, ಟ್ಯಾಂಕ್ ಎಲೆಕ್ಟ್ರಾನಿಕ್ಸ್, ದೂರಸಂಪರ್ಕ ಮತ್ತು ಬಾನುಲಿ ಪ್ರಸಾರ, ಸೋಲಾರ್ ಫೋಟೊ ವೋಲ್ಟಾಯಿಕ್ಸ್, ವೃತ್ತಿಪರ ವಿದ್ಯುನ್ಮಾನ ಭಾಗಗಳು ಹಾಗೂ ಟರ್ನ್‌ಕೀ ವ್ಯವಸ್ಥೆಯ ಪರಿಹಾರಗಳನ್ನು ರಕ್ಷಣಾ ಮತ್ತು ನಾಗರಿಕ ಅನ್ವಯಕಗಳಿಗೆ ಸಮರ್ಪಿಸುತ್ತದೆ.

ರಾಷ್ಟ್ರೀಯ ಸರಹದ್ದನ್ನು ಕಾಪಾಡುವಲ್ಲಿ ಬಿಇಎಲ್‌ನ ಅತ್ಯಾಧುನಿಕ ತಂತ್ರಜ್ಞಾನ ಮಹತ್ವದ ಪಾತ್ರವಹಿಸುತ್ತದೆ.

**ಬಿಇಎಲ್ ಒಂದು ನವರತ್ನ ಸಂಸ್ಥೆ**

ಭಾರತ್ ಎಲೆಕ್ಟ್ರಾನಿಕ್ಸ್
भारत इलेक्ट्रॉनिक्स
BHARAT ELECTRONICS
ಗುಣಮಟ್ಟ. ತಂತ್ರವಿಜ್ಞಾನ. ನಾವೀನ್ಯತೆ

www.bel-india.com

ಇ-ಮೇಲ್: corpcomn@bel.co.in




'ದೇವರ ಅಸ್ತಿತ್ವ ಬಹು ಜನರಿಗಿರುವ ಒಂದು ಭ್ರಾಂತಿ; ದೈವಿಕ ಮತ ಗ್ರಂಥಗಳಲ್ಲಿನ ಜೀವಸೃಷ್ಟಿ ಮುಂತಾದ ಅನೇಕ ಕಲ್ಪನೆಗಳು, ಅಸತ್ಯಗಳು' ಎಂದು ಸರಳ ವಿಜ್ಞಾನದ ಹಿನ್ನೆಲೆಯಲ್ಲಿ ತಾತ್ವಿಕವಾಗಿ ಪ್ರತಿಪಾದಿಸುವ ಈ ಪುಸ್ತಕ, ವಿಚಾರವಾದಿಗಳಿಗೆ ಬೆಂಬಲ, ಪ್ರೋತ್ಸಾಹಗಳನ್ನು ನೀಡುತ್ತದೆ. ಜೊತೆಗೆ, ಎಲ್ಲರೂ ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಳ್ಳುವುದಕ್ಕೂ ಸಹಕಾರಿಯಾಗಬಲ್ಲದು. ಇದು, ಪೂರ್ವದೇಶಗಳ ಜನರಲ್ಲಿನ ದೈವಿಕ ಮತ್ತು ಮತೀಯ ಸಮಸ್ಯೆಗಳು ಪಾಶ್ಚಾತ್ಯರಲ್ಲಿ ಇಲ್ಲ ಎಂದು ಕೊಂಡಿರುವವರ ಕಣ್ತೆರೆಸುತ್ತದೆ. ಲೇಖಕನ ಲಕ್ಷ್ಯ, ಬಹುಮಟ್ಟಿಗೆ ಬೈಬಲ್ ಮತ್ತು ಕ್ಯಾಥೊಲಿಕ್ ಮತಗಳತ್ತಲೆ ಇದ್ದರೂ, ಅನ್ಯ ದೈವಿಕ ಮತಗಳ ಸಮಾನಾಂತರ ಸಮಸ್ಯೆಗಳಿಗೂ ಅವನ ವಾದ, ಚರ್ಚೆ ಮತ್ತು ವಿಶ್ಲೇಷಣೆಗಳನ್ನು ಅನ್ವಯಿಸಿ, ವೈಚಾರಿಕ ...ಯಗಳನ್ನು ತಲುಪಬಹುದು. ಈ ಕಾರಣಗಳಿಗೆಂದೇ ಈ ಪುಸ್ತಕ ಒಂದು ವರುಷದಲ್ಲೆ ಪ್ರಪಂಚದಲ್ಲೆಲ್ಲ ಇಷ್ಟು ... ಜನಪ್ರಿಯವಾಗಿರಬೇಕು ಮತ್ತು ಹತ್ತಾರು ಶೃಂಗಪ್ರಶಸ್ತಿಗಳನ್ನು ಗಳಿಸಿರಬೇಕು. (ಭಿನ್ನಮತೀಯರ ನಡುವಿನ ...ಬಾಳ್ವೆಗೆ ಅಡ್ಡಿಯಾಗಿ ವೈಮನಸ್ಯಗಳನ್ನು ತರುವ ಮತನೀತಿಗಳೆಲ್ಲವೂ, ಭಾರತದ ವಿಭಿನ್ನ ಜಾತಿನೀತಿಗಳಲ್ಲಿಯೂ ...ಷ್ಟು ಇರುವುದರಿಂದ, ನಮಗೂ ಈ ಪುಸ್ತಕದಿಂದ ಅನೇಕ ಪ್ರಯೋಜನಗಳಿವೆ.)

...ಈ ಪುಸ್ತಕದ ಲೇಖಕ ರಿಚರ್ಡ್ ಡಾಕಿನ್ಸ್, ಬ್ರಿಟನ್ನಿನ ಪ್ರತಿಷ್ಠಿತ ಜೀವ ವಿಜ್ಞಾನಿ. ಆಕ್ಸ್‌ಫರ್ಡ್ ...ವಿದ್ಯಾಲಯದಲ್ಲಿ, ದೀರ್ಘಕಾಲದಿಂದ ಪ್ರಾಣಿಶಾಸ್ತ್ರದ ಮತ್ತು ಹಲವು ವರ್ಷಗಳಿಂದ ತತ್ವದರ್ಶನಕ್ಕೂ ಪ್ರೊಫೆಸರ್ ...ರುವವನು. ಸಾಮಾನ್ಯ ಜನರಿಗೂ ವಿಜ್ಞಾನದ ಸೂಕ್ಷ್ಮಗಳನ್ನು ಮನಮುಟ್ಟುವಂತೆ ಪರಿಚಯ ಮಾಡಿಕೊಡಬಲ್ಲ ...ರ್ಥ್ಯದ ಶೈಲಿಯನ್ನು ಬೆಳೆಸಿಕೊಂಡು ಪ್ರಸಿದ್ಧನಾಗಿದ್ದಾನೆ.

...ಡಾಕಿನ್ಸ್ ಬರೆದಿರುವ ಹತ್ತಕ್ಕೂ ಹೆಚ್ಚು ಪುಸ್ತಕಗಳು, ಇತರ ಜೀವವಿಜ್ಞಾನ ಸಂಶೋಧಕರಿಗೆ ಮಾರ್ಗದರ್ಶಿಯಾಗಿ ...ದರೊಂದಿಗೆ, ಬುದ್ಧಿವಂತ ಓದುಗನಿಗೆ, ಈ ಜಗತ್ತಿನ ಪ್ರಕೃತಿಯ ಜೀವರಾಶಿಗಳಲ್ಲಿ ತನ್ನ ನೆಲೆಯನ್ನು ...ನಿಕವಾಗಿ ಅರಿತುಕೊಳ್ಳುವ ದರ್ಶನವನ್ನೂ ಕೊಡುತ್ತವೆ. ಡಾರ್ವಿನ್‌ನ ನಂತರ, ಬ್ರಿಟನ್ನಿನ ಜನತೆ ಮತ್ತು ಅವರ ...ೀಯ ನಂಬಿಕೆಗಳ ಮೇಲೆ ಜೀವವಿಕಸನ ಸಿದ್ಧಾಂತಗಳ ಪ್ರಭಾವವನ್ನು ಮೂಡಿಸುವುದರಲ್ಲಿ ಜೂಲಿಯನ್

# ...ವರಿರುವ ಭ್ರಾಂತಿ

...ಲಿ, ತನ್ನ ತಾತ ಥಾಮಸ್ ಹೆನ್ರಿ ಹಕ್ಸ್‌ಲಿ ಮತ್ತು ತಮ್ಮ ಆಲ್ಡಸ್ ಹಕ್ಸ್‌ಲಿಯ ಸಹಾಯ ಪಡೆದು, ಯಶಸ್ವಿಯಾದ. ...ನ್ಸ್ ಸಹ, ಡಾರ್ವಿನ್ ಸಿದ್ಧಾಂತದ ಮುಂದಿನ ಹಂತವಾದ ಡಿ.ಎನ್.ಎ. (ಜೀವತಂತುವಾಹಿ)ಯ ಆವಿಷ್ಕಾರದ ...ರದ ವೈಚಾರಿಕ ಕ್ರಾಂತಿಯನ್ನು, ಬಹು ದೇಶಗಳ ಬುದ್ಧಿಜೀವಿಗಳಲ್ಲೂ ಜನರಲ್ಲೂ ತರುವುದರಲ್ಲಿ ...ಸ್ವಿಯಾಗಿದ್ದಾನೆ. ಇವನಂತೆಯೆ ಬ್ರಿಟನ್‌ನಲ್ಲಿ ಜೀವಶಾಸ್ತ್ರ ವಿಜ್ಞಾನಿಯಾಗಿದ್ದು, ಡಿ.ಎನ್.ಎ. ಆವಿಷ್ಕಾರಕ್ಕೆ ...ರ್ಗದರ್ಶಿಯೆಂದು ಪ್ರಸಿದ್ಧನಾಗಿದ್ದ ಜೆ.ಬಿ.ಎಸ್. ಹಾಲ್ಡೇನ್ ಸಹ, ಭಾರತಕ್ಕೆ ಬಂದು ಇಲ್ಲಿಯ ನಾಗರಿಕನಾಗಿದ್ದು, ...ರಧಾನ್ಯಗಳ ಉತ್ಪತ್ತಿ ಹೆಚ್ಚಿಸಲು ತಳಿವಿಜ್ಞಾನವನ್ನು ಕಲಿಸಿಕೊಡುವುದರ ಜೊತೆಗೆ, ಭಾರತೀಯ ನಿರೀಶ್ವರವಾದಿ ...ನ ಸಾಂಖ್ಯವನ್ನೂ ಪ್ರಸಾರ ಮಾಡುತ್ತಿದ್ದುದನ್ನು ಇಲ್ಲಿ ನೆನೆಯಬಹುದು.

...ಯಾವುದೇ ವಿಜ್ಞಾನಿ, ದೇವರ ಅಥವಾ ಮತ ಧರ್ಮಗಳ ವಿಷಯ ಮಾತನಾಡಲು ತೊಡಗಿದಾಗ, ಮೊದಲು ...ರಿಸುವುದು, 'ಅನೇಕ ಪ್ರಸಿದ್ಧ ವಿಜ್ಞಾನಿಗಳು, ಐನ್‌ಸ್ಟೈನ್ ಸಹ, ದೇವರನ್ನು ನಂಬುತ್ತಿದ್ದ' ಎಂಬ ವಿವಾದ. ...ನ್ಸ್, ಈ ಟೀಕೆಗೆ ಐನ್‌ಸ್ಟೈನ್‌ನ ಹೇಳಿಕೆಗಳಲ್ಲೆ ಉತ್ತರಿಸುತ್ತಾನೆ:

''ನನಗೆ ದೈವಿಕ ಮತಗಳಲ್ಲಿ ನಂಬಿಕೆ ಇದೆಯೆಂದು ಮತ್ತೆ ಮತ್ತೆ ನೀವು ಓದಿರುವುದೆಲ್ಲ ಶುದ್ಧ ಸುಳ್ಳು ಆಧಾರಗಳ ...ಲಿನ ಹೇಳಿಕೆಗಳು. ನಾನು ಯಾವ ವ್ಯಕ್ತಿಗತ ದೈವವನ್ನೂ ನಂಬುವುದಿಲ್ಲ. ನಾನು ಈ ಮಾತನ್ನು ಎಂದೂ ...ಕರಿಸಿಲ್ಲ; ಹೀಗೆಂದು ನಾನು ಸ್ಪಷ್ಟೀಕರಿಸಿಯೂ ಇದ್ದೇನೆ. ನನ್ನಲ್ಲಿ ದೈವಿಕ ಮತೀಯತೆಯ ಕುರುಹುಗಳೇನಾದರೂ ...ಲ್ಲಿ, ಅದು ಸೀಮಿತ, – ವಿಜ್ಞಾನವು ನಮಗೆ ತೋರಿಸಿಕೊಟ್ಟಿರುವ ಈ ವಿಶ್ವದ ಸಂರಚನೆಯ ವಿಷಯವಾಗಿ ...ರುವ ಅಪಾರ ಆರಾಧನೆಯಷ್ಟಕ್ಕೆ ಮಾತ್ರ.''

''ನಾನೆಂದೂ ಈ ಪ್ರಕೃತಿಯಲ್ಲಿ ಒಂದು ಧ್ಯೇಯವನ್ನಾಗಲಿ, ಗುರಿಯನ್ನಾಗಲಿ ಹೇರಿಲ್ಲ; ಇದರಲ್ಲಿ ಮನುಷ್ಯನ ... ಸಂಬಂಧವೇನನ್ನೂ ಕಂಡಿಲ್ಲ. ಈ ವಿಶ್ವಪ್ರಕೃತಿಯ ಸಂರಚನೆಯ ಮಹತ್ವ, ನನ್ನ ಅರಿವಿಕೆಯಲ್ಲಿ ...ರ್ಣವಾಗಿದ್ದು, ನನ್ನಂತಹ ವಿಚಾರವಂತರಲ್ಲಿ ನಮ್ರತಾಭಾವವನ್ನು ತುಂಬುವಷ್ಟು ಅಮೋಘವಾಗಿದೆ ಮತ್ತು, ... ಮತಧರ್ಮಗಳಂತೆಯೆ ಆತ್ಮೀಯಾನುಭವವಾದರೂ, ಎಂತಹುದೆ ಆಧ್ಯಾತ್ಮವೇನೂ ಇದರಲ್ಲಿಲ್ಲ. ಯಾವುದೇ ...ಸಂಬಂಧಿತ ದೈವದ ಕಲ್ಪನೆ ನನಗೆ ಪರಕೀಯವಾಗಿರುವುದಷ್ಟೆ ಅಲ್ಲದೆ, ಭೋಳೆತನವಾಗಿಯೂ ಕಾಣುತ್ತದೆ.''

...ಹೀಗೆಯೆ ಕಾರ್ಲ್ ಸಾಗನ್, ಸ್ಟೀಫನ್ ಹಾಕಿಂಗ್, ಇನ್ನೂ ಅನೇಕ ವಿಜ್ಞಾನಿಗಳು ಸತ್ಯವನ್ನರಿತಾಗಿನ ಆನಂದದ

ಈ ಪುಸ್ತಕದ ಲೇಖಕ ರಿಚರ್ಡ್ ಡಾಕಿನ್ಸ್, ಬ್ರಿಟನ್ನಿನ ಪ್ರತಿಷ್ಠಿತ ಜೀವ ವಿಜ್ಞಾನಿ. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ, ದೀರ್ಘಕಾಲದಿಂದ ಪ್ರಾಣಿಶಾಸ್ತ್ರದ ಮತ್ತು ಹಲವು ವರ್ಷಗಳಿಂದ ತತ್ವದರ್ಶನಕ್ಕೂ ಪ್ರೊಫೆಸರ್ ಆಗಿರುವವನು. ಸಾಮಾನ್ಯ ಜನರಿಗೂ ವಿಜ್ಞಾನದ ಸೂಕ್ಷ್ಮಗಳನ್ನು ಮನಮುಟ್ಟುವಂತೆ ಪರಿಚಯ ಮಾಡಿ ಕೊಡಬಲ್ಲ ಸಾಮರ್ಥ್ಯದ ಶೈಲಿಯನ್ನು ಬೆಳೆಸಿಕೊಂಡು ಪ್ರಸಿದ್ಧನಾಗಿದ್ದಾನೆ. ದೈವಿಕ, ಮತೀಯ, ವಿಷಯಗಳ ಮುಕ್ತ ಚರ್ಚೆಗೆ ಸಾಮಾನ್ಯವಾಗಿ ಅಡ್ಡಿಯಾಗುವ ಪೂರ್ವಗ್ರಹಗಳನ್ನು ನಿವಾರಿಸುವ ಒಂದು ವಾದವನ್ನು ಡಾಕಿನ್ಸ್ ಇಲ್ಲಿ ಪ್ರಸ್ತಾಪಿಸುತ್ತಾನೆ. ಯಾವ ಮತವೂ ಪ್ರಜಾತಂತ್ರವನ್ನು ಪಾಲಿಸದೆ ಹೋದರೂ, ತನ್ನ ಮತವನ್ನು ಕಡ್ಡಾಯವಾಗಿ ನಡೆಸುವುದಕ್ಕೆ ಅವಶ್ಯಕವಾದ ರಕ್ಷಣೆಯನ್ನು ಪಡೆಯುವುದಕ್ಕೆ ಮಾತ್ರ ಅದನ್ನು ಹಿಂಡಿ ಬಳಸುತ್ತದೆ. ಮತಸ್ವಾತಂತ್ರ್ಯದ ಹೆಸರಿನಲ್ಲಿ ವ್ಯಕ್ತಿಸ್ವಾತಂತ್ರ್ಯಕ್ಕೆ ವಿರುದ್ಧ ಚಟುವಟಿಕೆಗಳನ್ನು ನಡೆಸಿಯೂ, ಯಾರೂ ತನ್ನ ಮತದ ಯಾವುದೇ ವಿಷಯವನ್ನು ಚರ್ಚಿಸಲು – ಕಡೆಗೆ ಸಾಹಿತ್ಯದಲ್ಲಿ ವಿಮರ್ಶಿಸಲು ಸಹ ಅರ್ಹರಲ್ಲವೆಂದು ಪ್ರಜಾಪ್ರಭುತ್ವವನ್ನೇ ಆದೇಶಿಸುತ್ತದೆ; ತನ್ನ ಸಂಘಬಲದಿಂದ ಸಮಾಜವನ್ನೆ ಹೆದರಿಸುತ್ತದೆ. ಬಹು ದೇಶಗಳ ಸಂವಿಧಾನಗಳು, ಸಮಾಜಗಳು ಇಂತಹ ಕುತರ್ಕದಲ್ಲಿ ಕುಂಠಿತವಾಗಿವೆ. ಮತದ ಅನುಯಾಯಿಗಳು, ಶೋಷಿತ ವ್ಯಕ್ತಿಗಳು ಸಹ ವಾಕ್‌ಸ್ವಾತಂತ್ರ್ಯವನ್ನು ಕಳೆದುಕೊಂಡಿರುವ ದೇಶಗಳಲ್ಲಿನ ನಿದರ್ಶನಗಳು ಇಲ್ಲಿವೆ.

**ಡಾ|| ಎಮ್. ಎಸ್. ಕೇಶವರಾವ್**

ಅನುಭವಗಳನ್ನು ಹೇಳಿಕೊಂಡ ಮಾತುಗಳಲ್ಲಿ, ಮತೀಯರು ತಾವು ದೇವರ ವಿಷಯದಲ್ಲಿ ಬಳಸುವ ಕಾವ್ಯಾತ್ಮಕ ರಸಾನುಭವದ ಉದ್ಗಾರಗಳಂತಹವನ್ನು ಮಾತ್ರ ಆಯ್ದು, ದೈವಭಕ್ತಿಯನ್ನು ವಿಜ್ಞಾನಿಗಳ ಮೇಲೆಯೂ ಹೇರಿ, ತಮ್ಮ ಭಕ್ತಜನರಲ್ಲಿ ವಿಶ್ವಾಸವನ್ನು ಹೆಚ್ಚಿಸಲು ಪ್ರಯತ್ನಿಸುತ್ತಾರೆ. ಐನ್‌ಸ್ಟೈನ್‌ನೇ ಇಂತಹ ಮತೀಯರನ್ನು ಖಂಡಿಸಿದಾಗ, ಅಮೆರಿಕಾದ ರ‍್ಯಾಬಿಗಳು, ಕ್ಯಾಥೊಲಿಕ್ ಪಾದ್ರಿಗಳು, ಐನ್‌ಸ್ಟೈನ್‌ನನ್ನೆ ನಿಂದಿಸಿದ ವಿವರಗಳೂ ಇಲ್ಲಿವೆ. ಅಮೆರಿಕಾದ ವಿಜ್ಞಾನಿಗಳಲ್ಲಿ ಪೂರ್ಣ ನಿರೀಶ್ವರ ವಾದಿಗಳನ್ನು ಬಿಟ್ಟರೆ, ಉಳಿದವರಲ್ಲಿ ಬಹಳ ಜನ ಪ್ರಕೃತಿಯ ಆರಾಧಕರಾಗಿರುವ ಬಹುದೈವವಾದಿಗಳಂತಹವರು. ಡಾಕಿನ್ಸ್ ಹೇಳುವಂತೆ, ''ಇವರ ಬಹುದೈವವಾದ, ವಾಸ್ತವದ ರಸಾಸ್ವಾದನೆಯ ತಾರಕಕ್ಕೇರಿದ ಒಂದು ತರಹೆಯ ನಿರೀಶ್ವರವಾದ; ಇದಕ್ಕೆ ವಿಪರೀತವಾಗಿ, ಮತೀಯರ ಅಧ್ಯಾತ್ಮ, ನೀರು ಬೆರೆಸಿ ಹದಗೊಳಿಸಿದ ಒಂದು ತರಹೆಯ ಸರ್ವೇಶ್ವರವಾದ.''

ದೈವಿಕ, ಮತೀಯ, ವಿಷಯಗಳ ಮುಕ್ತ ಚರ್ಚೆಗೆ ಸಾಮಾನ್ಯವಾಗಿ ಅಡ್ಡಿಯಾಗುವ ಪೂರ್ವಗ್ರಹಗಳನ್ನು ನಿವಾರಿಸುವ ಒಂದು ವಾದವನ್ನು ಡಾಕಿನ್ಸ್ ಇಲ್ಲಿ ಪ್ರಸ್ತಾಪಿಸುತ್ತಾನೆ. ಯಾವ ಮತವೂ ಪ್ರಜಾತಂತ್ರವನ್ನು ಪಾಲಿಸದೆ ಹೋದರೂ, ತನ್ನ ಮತವನ್ನು ಕಡ್ಡಾಯವಾಗಿ ನಡೆಸುವುದಕ್ಕೆ ಅವಶ್ಯಕವಾದ ರಕ್ಷಣೆಯನ್ನು ಪಡೆಯುವುದಕ್ಕೆ ಮಾತ್ರ ಅದನ್ನು ಹಿಂಡಿ ಬಳಸುತ್ತದೆ. ಮತಸ್ವಾತಂತ್ರ್ಯದ ಹೆಸರಿನಲ್ಲಿ ವ್ಯಕ್ತಿಸ್ವಾತಂತ್ರ್ಯಕ್ಕೆ ವಿರುದ್ಧ ಚಟುವಟಿಕೆಗಳನ್ನು ನಡೆಸಿಯೂ, ಯಾರೂ ತನ್ನ ಮತದ ಯಾವುದೇ ವಿಷಯವನ್ನು ಚರ್ಚಿಸಲು – ಕಡೆಗೆ ಸಾಹಿತ್ಯದಲ್ಲಿ ವಿಮರ್ಶಿಸಲು ಸಹ ಅರ್ಹರಲ್ಲವೆಂದು ಪ್ರಜಾಪ್ರಭುತ್ವವನ್ನೇ ಆದೇಶಿಸುತ್ತದೆ; ತನ್ನ ಸಂಘಬಲದಿಂದ ಸಮಾಜವನ್ನೆ ಹೆದರಿಸುತ್ತದೆ. ಬಹು ದೇಶಗಳ ಸಂವಿಧಾನಗಳು, ಸಮಾಜಗಳು ಇಂತಹ ಕುತರ್ಕದಲ್ಲಿ ಕುಂಠಿತವಾಗಿವೆ. ಮತದ ಅನುಯಾಯಿಗಳು, ಶೋಷಿತ ವ್ಯಕ್ತಿಗಳು ಸಹ ವಾಕ್‌ಸ್ವಾತಂತ್ರ್ಯವನ್ನು ಕಳೆದುಕೊಂಡಿರುವ ದೇಶಗಳಲ್ಲಿನ ನಿದರ್ಶನಗಳು ಇಲ್ಲಿವೆ. (ಭಾರತದ ಅನೇಕ ನಿದರ್ಶನಗಳನ್ನು ದಿನಪತ್ರಿಕೆಗಳಲ್ಲೆ ಕಾಣಬಹುದು.)

ದೈವವಾದವನ್ನು ಎದುರಿಸುವ ಪ್ರಾರಂಭದಲ್ಲೆ, ಯಾವ ದೇವರು ಎನ್ನುವ ಪ್ರಶ್ನೆ ಏಳುತ್ತದೆ. ಬೈಬಲ್‌ನ ಹಳೆಯ ಟೆಸ್ಟಮೆಂಟ್‌ನ (ಒಡಂಬಡಿಕೆಯ) ದೇವರು, – ಜಿಹೋವ ಎನ್ನೋಣ. ಜೀಸಸ್‌ನ ನಂತರದ ದೇವರಿಗೆ ಬಹಳ ಭಿನ್ನ. ಜಿಹೋವನಲ್ಲಿ ಹೇಳಲ್ಪಟ್ಟಿರುವ, ಒಳ್ಳೆಯ ದೇವರಲ್ಲಿ ಒಪ್ಪಲಾಗದ ಅವಗುಣಗಳ ಪಟ್ಟಿಯನ್ನೆ ಡಾಕಿನ್ಸ್ ಕೊಡುತ್ತಾನೆ: ಕ್ರೂರಿ, ಮಹಾಮಾತ್ಸರ್ಯದವನು, ಭಕ್ತರ ಪಕ್ಷಪಾತಿ, ನಂಬದವರನ್ನು ಅನ್ಯಾಯದಿಂದಲೇ ಸರ್ವನಾಶ ಮಾಡುವವನು, ಇತ್ಯಾದಿ. ನಮ್ಮ ವೇದ ಪುರಾಣಗಳ ದೇವರುಗಳು ಭಿನ್ನರಲ್ಲ; ಇಂತಹ ದೇವರನ್ನು ಟೀಕಿಸಿದರೆ ಹೆಚ್ಚು ಪ್ರಯೋಜನವಿಲ್ಲ. ಎಲ್ಲ ಮತಗಳೂ ಪರಸ್ಪರವಾಗಿ ಈ ಕೆಲಸವನ್ನು ಅರ್ಥವತ್ತಾಗಿಯೂ, ಬಲಪೂರ್ವಕವಾಗಿಯೂ ಯುದ್ಧಗಳಿಂದಲೂ ಸಹ, ನಡೆಸುತ್ತಲೆ ಬಂದಿವೆ. ಎಲ್ಲ ಮತಗಳಿಗೂ ಮುಖ್ಯವೆನಿಸಿರುವ ಆದರ್ಶಮಯ ದೇವರುಗಳನ್ನು ವಿಚಾರಣೆಗೆ ತೆಗೆದುಕೊಂಡು ತೀರ್ಮಾನಗಳನ್ನು ತಲಪುವುದು ಹೆಚ್ಚು ಫಲದಾಯಿ. ಎಲ್ಲ ಜೀವಿಗಳ ಸೃಷ್ಟಿಕರ್ತ, ಸಂರಕ್ಷಕ, ನಿಯಾಮಕ ಎನ್ನುವ ಗುಣಗಳಷ್ಟೆ ಸಾಕು, – ಚರ್ಚೆಗಳ ಪ್ರಾರಂಭಕ್ಕೆ; ಹಾಗೂ ದೇವರು ಒಂದು ಭ್ರಾಂತಿಯೆಂಬುದನ್ನೂ, ಅದರಿಂದಾಗುವ ಹಾನಿಗಳನ್ನೂ ತೋರಿಸಿಕೊಡುವುದಕ್ಕೆ.

'ಪ್ರಾಣಿಗಳ ದಿವ್ಯ (ಮಾಂತ್ರಿಕ) ಚೇತನಾಶಕ್ತಿಗಳ ಆರಾಧನೆ' ಎಲ್ಲ ಬುಡಕಟ್ಟುಗಳ ಪದ್ಧತಿಯಾಗಿತ್ತು, ಅಲ್ಲಿಂದ ಪ್ರಾರಂಭವಾದದ್ದು ದೇವರ ಕಥೆ. ನಂತರದಲ್ಲಿ ಗ್ರೀಕರು, ರೋಮನ್ನರು, ನಾರ್ವೆಯ ವೈಕಿಂಗ್ಸ್, ಅಮೆರಿಕಾದ ಇಂಡಿಯನ್ನರು, ಆಫ್ರಿಕಾ. ಭಾರತ ಮತ್ತು ಇತರ ಪೂರ್ವ ದೇಶಗಳ ಜನರು, ಇವರೆಲ್ಲ ಬೆಳೆಸಿಕೊಂಡದ್ದು ಬಹುದೈವವಾದ; ಇದನ್ನು ನಿರಾಕರಿಸಿ ಹುಟ್ಟಿಕೊಂಡ ಯೆಹೂದಿ, ಕ್ರೈಸ್ತ ಮತ್ತು ಇಸ್ಲಾಂ ಮತಗಳು ಏಕದೈವವಾದ ಮತಗಳು. ಇವೆಲ್ಲ ಇತಿಹಾಸ ಪ್ರಸಿದ್ಧವಾದವು. ಆದರೆ ಕ್ರೈಸ್ತಮತದ ಏಕದೈವ, ಆರಾಧಕರ ನಂಬಿಕೆಯಲ್ಲಿ ಮೂರು ದೇವರುಗಳು; ದೇವ, ದೇವರ ಮಗ ಮತ್ತು ಪವಿತ್ರ ಪ್ರೇತಾ... ಸಂದರ್ಭಗಳಲ್ಲಿ, ವರ್ಜಿನ್ ಮೇರಿಯೂ ಈ ಗುಂಪಿನಲ್ಲಿ ಸೇರಿಕೆ... ಹಾಗೆಯೆ, ಸುಮಾರು ೫೧೨೦ (ಸೆಯಿಂಟ್ಸ್) ದೇವತೆಗಳಿದ್ದಾರೆ. (ಮು... ಹೆಚ್ಚಬಹುದು; ಈಗಿನ ಪೋಪ್ ಇಮ್ಮಡಿ ಪಾಲ್ – ಸಂತರ ಜನಸಂಖ್ಯೆ... ಗೊಂಡಿರುವುದಕ್ಕೊ ಏನೊ, ಅನೇಕ ಹಳೆಯ ಸಂತರನ್ನು ದೇವತೆಗ... ಏರಿಸಿದ್ದಾರೆ.) ಈ ಎಲ್ಲ ದೇವತೆಗಳಿಗೆ ಅವರವರದೆ ವಿಶೇಷ ಕಾರ್ಯಾನು... ಗುಣಶಕ್ತಿಗಳಿವೆ. ಹೊಟ್ಟೆನೋವಿನ ಶಮನ, ಚಿತ್ತಭ್ರಮೆಗೆ ಚಿಕಿತ್ಸೆ, ... ವೃತ್ತಿಗಳಲ್ಲಿ ಸಾಫಲ್ಯ, ಮುರಿದ ಮೂಳೆಗಳ ಜೋಡಣೆ, ಕಮ್ಮಾರನ... ಅಭಿವೃದ್ಧಿ, ಇತ್ಯಾದಿ; ಶುಲ್ಕಗಳೂ ವಿಚಿತ್ರಗಳೇ; ನೂರು 'ಅವಾ ಮಾರಿಯಾ'... ಮೂರು ದಿನ ಚರ್ಚ್ ಗುಡಿಸಿ ಕೋಶ ತುಂಬುವುದು ಇತ್ಯಾದಿ. ಬಹು... ಥಾಮಸ್ ಜಫರ್‌ಸನ್, ''ಇಂತಹ ಏಕದೈವವಾದವನ್ನು ವಿನೋದವಲ್ಲದ... ತಾನೆ ಮಾಡುವುದು ಸಾಧ್ಯ ?'' ಎಂದನಂತೆ. ಬಹುದೇವತಾವಾದಿಗಳೆಂದ... ಗಳನ್ನು ಕೀಟಲೆ ಮಾಡುವ ಕ್ರಿಶ್ಚಿಯನ್ ಪಾದ್ರಿಗಳ ಮೇಲೆ ಮೊಕದ್ದಮೆ ಹ... ಹಿಂದುಗಳು ಗೆಲ್ಲುವುದು ಖಂಡಿತ ಎನ್ನುತ್ತಾನೆ ಡಾಕಿನ್ಸ್; ''ಎಲ್ಲ ಮತಗಳ... ಎನ್ನುತ್ತಿದ್ದ ಗಾಂಧಿ, ನಿರೀಶ್ವರವಾದಿ ನೆಹರು, ಮುಂತಾದವರು ಇ... ಸಂವಿಧಾನದಲ್ಲಿ ಮತ ನಿರಪೇಕ್ಷತೆಯನ್ನು ಸೇರಿಸಿರುವುದನ್ನು ಮೆಚ್ಚಿಕೆ... ''ಅಮೆರಿಕಾದ ರಾಷ್ಟ್ರ ನಿರ್ಮಾಣದ ಕಾಲದಲ್ಲಿದ್ದವರೂ ಇವರಂತೆಯೆ... ಯಾವ ಪಟ್ಟಭದ್ರರೂ, ಪೀಠಾಸಕ್ತರೂ ಮುಕ್ತವಾಗಿ ತಮ್ಮ ಮತೀಯ ಅ... ವ್ಯಕ್ತಪಡಿಸುವುದಿಲ್ಲ; ವ್ಯಕ್ತಪಡಿಸಿದರೆ ಆರಿಸಿ ಬರುವುದಿಲ್ಲ ಎಂಬ ಭಯ'' ...

ಹಾಗೆಂದು, 'ಅಗ್ನಾಸ್ಟಿಸಿಸಂ' ಅನ್ನೇನೂ ಇವನು ಮೆಚ್ಚಿಕೊಳ್ಳುವುದಿ... ಪ್ರಸಿದ್ಧಿಯಾಗಿರುವ ಈ ಇಂಗ್ಲಿಷ್ ಪದ, ಜೂಲಿಯನ್ ಹಕ್ಸ್‌ಲೀಯ ಸ್ವ... ಅಜ್ಞೇಯ ದೈವವಾದ, ''ಮನುಷ್ಯನ ತಿಳಿವಿಗೆ ದೇವರು ಎಂದಿಗೂ ಅ... ಆದ್ದರಿಂದ ಅವನ ಪ್ರಸ್ತಾವನೆ ಎಲ್ಲೂ ಬೇಡ'' ಎಂಬ ಅರ್ಥದಲ್ಲಿ... ವೈಚಾರಿಕರಿಗೂ ಬಹಳ ಪ್ರಿಯವಾಗಿತ್ತು. ಚರ್ಚೆಗಿಳಿಯಬಾರದ ಸಂದರ್ಭ... ವಾದದ ಉಪಯೋಗ ಬಹಳವಾಗಿದ್ದರೂ, ನಿಖರ ವೈಚಾರಿಕತೆಯಲ್ಲಿ ಈ... ಒಪ್ಪಲರ್ಹವಾದುದಲ್ಲ. ಈ ವಿಷಯದಲ್ಲೂ ಇಲ್ಲಿ ದೀರ್ಘ ಚರ್ಚೆಯಿದೆ. ''... ಇದ್ದಾನೆಂದು ಪ್ರಮಾಣವಾಗುವವರೆಗೆ ದೇವರಿಲ್ಲ ಎನ್ನುವುದೇ ತ... ದೇವರಿಲ್ಲದ ಪ್ರಮಾಣ ಸಿದ್ಧವಾಗುವವರೆಗೂ ಇರುವನೆಂದು ನ... ತರ್ಕಬಾಹಿರ'' ಎಂದು ಬರ್ಟ್ರಂಡ್ ರಸೆಲ್ ಮುಂತಾದ ಬುದ್ಧಿ... ವಾದಿಸುತ್ತಲೇ ಬಂದಿದ್ದಾರೆ. ''ಒಂದು ಅಂತರಿಕ್ಷ ಚಹಾ ಪಾತ್ರೆ, ಭೂಮಿ ಮ... ಗ್ರಹಗಳ ನಡುವೆ ಸೂರ್ಯನನ್ನು ಸುತ್ತುತ್ತಿದೆ'' ... ಯಾರಾದರೂ ಹೇಳಿದರೆ, ಪೂಜೆ ಮಾಡ... ಕಾಯುವವರು ಇರುತ್ತಾರೆಯೆ ? ''ನಂಬ... ಚಿತ್ರಹಿಂಸೆ ಮಾಡುತ್ತೇವೆ'' ಎನ್ನುವ ಮತನ... ಬೇಕು, ಎಂದು ಅಪಹಾಸ್ಯ ಮಾಡುತ್ತಾನೆ, (ಭಾರತದಲ್ಲಿ, ರಾಹು, ಕೇತುಗಳನ್ನು ನಂಬಿ ಭ... ಪೂಜಿಸಿ ವರ ಬೇಡುವವರೂ ಇದ್ದಾರೆ ಎಂದು ತಿಳಿದಿರಲಿಕ್ಕಿಲ್ಲ!) ಮಹಾಧನವಂತ ಮತ್ತು ಟೆಂಪಲ್‌ಟನ್ ಸಂಸ್ಥೆ, ದೇವರನ್ನು ಪ್ರಮಾಣಿಸಿ... ಸ್ಟಾಟಿಸ್ಟಿಕ್ಸ್‌ನ ಮೊರೆ ಹೊಕ್ಕಿತು. ಆಸ್ಪತ್ರೆಗಳಲ್ಲಿ ಅ... ಜನ ಹೃದಯ ರೋಗಿಗಳ ಪರವಾಗಿ ಮಾತ್ರ, ಸ... ರಾರಿಗೂ ತಿಳಿಯದಂತೆ, ಹಣ ಪಡೆದ ದೈವ... ದೀರ್ಘ, ತೀವ್ರ ಪ್ರಾರ್ಥನೆ ಮಾಡಿಸಿತು. ಪ್ರಾ... ಲಾಭ ಪಡೆದವರಲ್ಲಿ ಅರ್ಧ ಜನ ಸತ್ತರು! ... ದವರಲ್ಲಿ ಅರ್ಧ ಜನ ಉಳಿದರು! ರೋಗಿಗಳ ಹೆ... ಹೆಸರುಗಳನ್ನು ಮಾತ್ರ ಬಳಸಿದ್ದರಿಂದ ದೇವರಿಗೆ ಗ... ವಾಗಿರಬೇಕು! ಹಿಂದೆ, ಡಾರ್ವಿನ್‌ನ ದ... ಗಾಲ್ಟನ್ ಸಹ, ಸ್ಟಾಟಿಸ್ಟಿಕ್ಸ್ ಬಳಸಿ, ಬ್ರಿಟಿಷ... ರಾಜಮನೆತನದವರ ಆರೋಗ್ಯಕ್ಕಾಗಿ ಪ್ರತಿ ಭಾ... ಪ್ರಾರ್ಥನೆ ಮಾಡುವ ಪರಿಪಾಠ ಇಟ್ಟಿರುವು...

RICHARD DAWKINS
every day low price £4.97
THE GOD DELUSION

ುಗಿಂತ ಹೆಚ್ಚು ಆರೋಗ್ಯ ಮತ್ತು ದೀರ್ಘಾಯುಸ್ಸು ಅವರಲ್ಲಿದೆಯೆ ಎಂದು ಇಲ್ಲವೆಂದಿದ್ದ (ಭಾರತದಲ್ಲಿ, ಇಂತಹ 'ಪ್ರಯೋಗಗಳು' ವಿರಳ; ಪ್ರಕಟಿತ ಗಳಂತು ಪೂರ್ವಗ್ರಹಾನುಸಾರವಾಗಿಯೆ ನಂಬುವಷ್ಟು ಅಸ್ಪಷ್ಟವಾಗಿರುತ್ತವೆ.)

ರ ಅಸ್ತಿತ್ವದ ಬಗ್ಗೆ ಪೂರ್ಣ ಪ್ರಮಾಣಗಳೆಂದು ಅನೇಕರು ಕೊಟ್ಟಿರುವ ವಾದ ಕಿನ್ಸ್ ನಾಲ್ಕನೆಯ ಅಧ್ಯಾಯದಲ್ಲಿ ಚರ್ಚಿಸುತ್ತಾನೆ. ಹದಿಮೂರನೆಯ ರ ಸೇಯಿಂಟ್ ಥಾಮಸ್ ಅಕ್ವಿನಾಸ್‌ನ ಅವೇ ಐದು ಸಿದ್ಧಾಂತಗಳು ವಿವಿಧ ಇಂದಿಗೂ ಉಳಿದುಬಂದಿವೆ. ತರ್ಕದಲ್ಲಿ ಐದೂ ಒಂದೇ ಯುಕ್ತಿಯವೇ :

ತಿ ವಸ್ತುವು ಮತ್ತೊಂದರ ಚಲನೆಯಿಂದ ತನ್ನ ಚಲನೆಯನ್ನು ಪಡೆಯುತ್ತದೆ; ತ್ತಿನಲ್ಲಿ ಚಲನೆಯಿರುವುದು ಪ್ರತ್ಯಕ್ಷವಿರುವುದರಿಂದ ಒಂದು ಆದಿ ಚಾಲಕ ಬೇಕು; ಅವನೇ ದೇವರು.

ೀಗೆಯೇ, ಕಾರ್ಯಗಳು ನಡೆಯುತ್ತಿರುವುದರಿಂದ ಆದಿ ಕಾರಣ (ಅಥವಾ ಇರಲೇಬೇಕು.

ಸ್ತುಗಳು ಇಲ್ಲದ ಕಾಲದಿಂದ ಅಪಾರ ವಸ್ತುಗಳು ಉಂಟಾಗಿವೆ. ಶೂನ್ಯದಿಂದ ಅಸ್ತಿತ್ವಕ್ಕೆ ತಂದವನೇ ದೇವರು.

ಮೊದಲ ಭಾಗದ ಒಂದು ಪ್ರಾರಂಭಿಕ ಸಿದ್ಧಾಂತವನ್ನು ತರ್ಕಸರಣಿಯಲ್ಲಿ ವರೆಗೂ ಕೊಂಡೊಯ್ಯುವ ವಾದದಲ್ಲಿನ ತರ್ಕದ ಹುಳುಕು, ಮೂರರಲ್ಲೂ ಆ ಆದಿಚಾಲಕನೂ ಪ್ರಾರಂಭ ಸಿದ್ಧಾಂತದ ಒಳಗಿನ ನಿಯಮಿತ ವಸ್ತುವೇ ತಾರ್ಕಿಕವಾಗಿ ಅವನಿಗೂ ಒಬ್ಬ ಚಾಲಕನಿರಬೇಕು. ಹೀಗೆಯೇ, ಕು :

ಗತ್ತಿನಲ್ಲಿ ಒಂದಕ್ಕಿಂತ ಒಂದು ಒಳ್ಳೆಯದು; ಎಲ್ಲಕ್ಕಿಂತ ಒಳ್ಳೆಯದೆ ದೇವರು.

ತಿ ವಸ್ತುವಿಗೂ ರಚನಕಾರನೊಬ್ಬನಿರಬೇಕು; ಆದಿ ರಚನಕಾರನೆ ದೇವರು.

ತರ್ಕದಲ್ಲಿ, 'ಎಲ್ಲದಕ್ಕಿಂತ ಹೆಚ್ಚು ಕೆಟ್ಟ ಅಸಹ್ಯದ ವಸ್ತುವೇ ದೇವರು' ಹೇಳಬಾರದು? ಹೀಗೆಯೆ, ಅತ್ಯುತ್ಕೃಷ್ಟಗಳ ರಾಶಿಯಾದ ದೇವರಲ್ಲಿ ರೋಧಗಳಿರುವುದೂ ವೈಚಾರಿಕರು ಗಮನಿಸಿರುವ ವಿಷಯವೆ. ಸರ್ವೋಚ್ಚ ಸರ್ವಶಕ್ತನೆ ಎತ್ತಲಾಗದ ಬೆಟ್ಟವನ್ನು ಸೃಷ್ಟಿಸಬಲ್ಲನೇ? ಜೀವವಿಕಸನಕ್ಕೂ ರಚನಕಾರನಿರಬೇಕೆಂಬ ವಾದ ಜೀವವಿಜ್ಞಾನವನ್ನು ಅಲ್ಲಗಳೆಯುವುದಕ್ಕೆ ಹಲವರ ಆಯುಧವಾಗಿದೆ. ರಚನಾತಂತ್ರವಿರದೆಯೆ, ಜೀವಿಗಳಲ್ಲಿ ಅದ್ಭುತ, ರಚನಾವಿನ್ಯಾಸಗಳ ಸಂರಚನೆಯಾಗಿರುವ ವಿದ್ಯಮಾನಗಳನ್ನು ಡಾಕಿನ್ಸ್, ಲ್ಲಿಯೆ, ತನ್ನ 'ಕೈಗಡಿಯಾರದ ಅಂಧಕರ್ತಾರ' ಎಂಬ ಬಹು ಪ್ರಸಿದ್ಧ ಪುರಾವೆಗಳ ಸಹಿತ ಪುಷ್ಟೀಕರಿಸಿ, ವೈಚಾರಿಕ ಕ್ರಾಂತಿಯೊಂದಕ್ಕೆ ಕಾರಣನಾದ.

ಾಸ್ ಹೇಳುವಂತೆ 'ತರ್ಕಸರಣಿಯ ಆರಂಭಕ್ಕಾದರೂ ಪ್ರತ್ಯಕ್ಷಪ್ರಮಾಣತ ಳು ಇರಬೇಕು' ಎನ್ನುವುದನ್ನು ಸಹ ಯೋಚಿಸದೆ, 'ದೈವತ್ವ ಒಂದು ಮೂಲತತ್ವ' ಎಂದು ವಾದಿಸಿದವರ ಸಂಖ್ಯೆ ಅಪಾರ. ಸೇಯಿಂಟ್ ಎಂಬಾತ ೧೦೭೮ರಲ್ಲಿ ಈ ಮಾತನ್ನು ಹೀಗೆ ಬರೆದಿಟ್ಟು ಪ್ರಸಿದ್ಧಿಗೊಳಿಸಿದ : ರ್ಣತೆ, ಸರ್ವೋತ್ಕೃಷ್ಟತೆಗಳಂತಹ ಮೂಲ ತತ್ವಗಳು ವಾಸ್ತವವಲ್ಲದಿದ್ದರೆ ಗಳಾಗುವುದರಿಂದ ಅವುಗಳಿಗೆ ಅಸ್ತಿತ್ವವೂ ಇರಬೇಕು. ಇಂತಹ ಂದ ಒಳ್ಳೆಯ ಆದರ್ಶಗಳು ದೊರೆಯುವುದರಿಂದ, ಈ ನಂಬಿಕೆಯೂ ತ್ವವೆ; ಆದ್ದರಿಂದ, ಇಂತಹ ನಂಬಿಕೆಗಳು ಮನುಷ್ಯನ ಸಹಜ ಸ್ವಭಾವಗಳೆ.'' ಯೆ ಬರಿಯ ಚಿಂತನೆಗಳಿಂದಲೆ ಸತ್ಯವನ್ನು ಕಂಡುಕೊಳ್ಳಬಹುದೆಂಬ ವಾದ ಅನೇಕ ದಾರ್ಶನಿಕರಿಗೆ ಆಪ್ಯಾಯಮಾನವಾಗಿರುವುದು ಆಶ್ಚರ್ಯ (ಭಾರತೀಯ ದರ್ಶನಗಳಲ್ಲೂ ಇಂತಹ ನಿಲುವುಗಳು ಪ್ರಮಾಣಗಳೆನ್ನಿಸಿ ವುದು ಎಲ್ಲರಿಗೂ ತಿಳಿದ ವಿಷಯವೆ.) ಹದಿನೆಂಟನೆಯ ಶತಮಾನದಿಂದ ಹ್ಯೂಮ್, ಕ್ಯಾಂಟ್ ಮುಂತಾದ ದಾರ್ಶನಿಕರು ಇಂತಹ ಅಪ್ರಮಾಣಿತ ನ್ನು ಖಂಡಿಸುತ್ತ ಬಂದಿದ್ದಾರೆ. ಇಂಟರ್‌ನೆಟ್‌ನಲ್ಲಿ ವ್ಯಂಗ್ಯಕ್ಕಾಗಿ ಸಂಗ್ರಹಿಸಿರುವ ೦೦ ಆಶಾಮಾತ್ರ ಪ್ರಮಾಣಗಳಲ್ಲಿ ಎರಡು ಹೀಗಿವೆ: 'ಒಂದು ವಿಮಾನ ದಲ್ಲಿ ೧೪೩ ಜನ ಸತ್ತರು. ಆದರೆ ಒಂದು ಶಿಶು ಅರೆಬೆಂದ ದೇಹದೊಡನೆ ಉಳಿಯಿತು; ದೇವರು ಮಹಾಕರುಣಾಮಯಿ!'; ''ಈ ಜಗತ್ತು ಈಗಿರುವು ದೇರೆಯಾಗಿದ್ದರೆ, ಇನ್ನೂ ಕೆಟ್ಟದಾಗಿರುತಿತ್ತು: ಹೀಗೆ ಮಾಡಿದವ ದೇವರೇ .'' (ವಾಲ್ಟೇರ್‌ನ 'ಕ್ಯಾಂಡೀಡ್' ಕಾದಂಬರಿಯನ್ನು ಓದಿದವರು, ರ ಮೇಲಿನ ಇಂತಹ ಅನೇಕ ವ್ಯಂಗ್ಯ ಟೀಕೆಗಳನ್ನು ಮೆಲುಕುಹಾಕಬಹುದು.)

ನೀನು
ರಾಜನಾದೆ
ಧರ್ಮಗುರುವಾದೆ
ನಾಯಕನಾದೆ
ಮೆರೆದೆ
ನಗರದ
ಚೌಕದ ಮಧ್ಯೆ
ಶಿಲ್ಪವಾದೆ
ಹಕ್ಕಿಗಳ
ಹಿಕ್ಕೆಯ
ತೊಟ್ಟಿಯಾದೆ.

ಕಮಲಂ ಅರಸು
ನಂ. ೧೦, ೧೧ನೇ ಅಡ್ಡರಸ್ತೆ
ತ್ಯಾಗರಾಜನಗರ
ಬೆಂಗಳೂರು - ೫೬೦ ೦೨೮

ಹೀಗೆ ದೇವರಲ್ಲಿ ನಂಬಿಕೆ ಇರುವುದಕ್ಕೆ ಜನಗಳು ಕೊಡುವ ಹಲವಾರು ಕಾರಣಗಳನ್ನು ಡಾಕಿನ್ಸ್ ದೀರ್ಘವಾಗಿ ಚರ್ಚಿಸುತ್ತಾನೆ. ''ಶೇಕ್ಸ್‌ಪಿಯರ್‌ನಂತಹ ಸಾಹಿತಿ, ಬಿಥೋವನ್‌ನಂತಹ ಸಂಗೀತಗಾರ ಇವರೆಲ್ಲ ನಮಗೆ ದೇವರ ಕೊಡುಗೆಗಳು ತಾನೆ?'' ''ದೇವರಿಲ್ಲದಿದ್ದರೆ ಈ ಎಲ್ಲ ಸುಂದರ ದೇವಾಲಯ, ಶಿಲ್ಪಗಳು ಇರುತ್ತಿದ್ದವೆ?'' ''ದೇವರನ್ನು ನೆನೆದಾಗ ಸಿಕ್ಕುವ ಭವಮುಕ್ತಿ, ಶಾಂತಿ ಇನ್ನೇತರಿಂದ ತಾನೆ ಸಾಧ್ಯ?'' ''ಬೈಬಲ್‌ನಲ್ಲೆ ಹೇಳಿದ ಮೇಲೆ, ಇತಿಹಾಸಪ್ರಸಿದ್ಧ ಯೇಸುವನ್ನು ನಾವು ಒಪ್ಪಿದ ಮೇಲೆ, ಅವನೇ ಹೇಳಿದ ಅವನ ತಂದೆ ದೇವರನ್ನೇ ನಂಬದಿರುವುದು ತಿಳಿಗೇಡಿತನ.'' ಹೀಗೆಯೆ, ಇರದ್ದನ್ನೂ ಅನುಭವಿಸುವ, ಕನಸು ಕಾಣುವ ಭಕ್ತಾದಿಗಳು ಎಲ್ಲೆಲ್ಲಿಯೂ ಬಹು ಹೆಚ್ಚಿನ ಅಧಿಕಾಂಶ ಸಂಖ್ಯೆಯಲ್ಲಿ ಇರುತ್ತಾರೆ. ರಾಲ್ಫ್ ವಾಲ್ಡೊ ಇಮರ್ಸನ್ ಹೇಳಿರುವಂತೆ, ''ಒಂದು ಯುಗದ ಮತೀಯತೆ ಮುಂದಿನ ಯುಗಕ್ಕೆ ಸಾಹಿತ್ಯಕ ಮನರಂಜನೆಯಾಗುತ್ತದೆ.'' ಈಗ ಜಗತ್‌ಪ್ರಸಿದ್ಧವಾಗಿರುವ ಕಾದಂಬರಿ, 'ಡಾವಿಂಚಿ ಕೋಡ್'ನ ಕತೆ ನ್ಯೂ ಟೆಸ್ಟಮೆಂಟ್‌ನ ಕಾಲದಲ್ಲೇ ಪ್ರಚಲಿತವಾಗಿದ್ದ ಅನೇಕಾನೇಕ ಸುವಾರ್ತೆಗಳಲ್ಲಿಯೆ ಒಂದಾಗಿದ್ದರೂ, ಆಗಿನ ಬೈಬಲ್ಲಿನ ಸಂಪಾದಕರ ಮನಸ್ಸಿಗೆ ಒಗ್ಗದೆ ಬಿಟ್ಟುಹೋಗಿತ್ತು. ಆಗ ಸೇರಿಸಿದ್ದ ಕತೆಗಳಲ್ಲಿ ಸತ್ಯಾಂಶ ಹೆಚ್ಚಿನದಿತ್ತು ಎನ್ನುವ ಹಾಗೇನೂ ಇರಲಿಕ್ಕಿಲ್ಲ. ಬೈಬಲ್‌ಅನ್ನು ಒಟ್ಟುಗೂಡಿಸಿರುವುದರಲ್ಲಿ, ಅನೇಕ ವಿದ್ವಾಂಸರು ಪ್ರಮಾಣಿಸಿರುವ ಲೋಪದೋಷ ಮತ್ತು ಊಹಾಪೋಹಗಳು ಇವೆಯೆಂದು ಒಪ್ಪಿಕೊಂಡರೂ ಅವುಗಳಿಂದ ದೊರೆಯುವ ಲಾಭಗಳನ್ನು ಬಿಡದಿರುವ ಚರ್ಚುಗಳು, ಇವುಗಳೆಲ್ಲದರ ದಾಖಲೆ, ವಿವರ ಮತ್ತು ಸಂಬದ್ಧ ವಿಷಯಸೂಚಿಗಳು ಈ ಪುಸ್ತಕದಲ್ಲಿ ಬಹಳಷ್ಟಿವೆ.

ಪ್ರಸಿದ್ಧ ಮೇಧಾವಿಗಳಲ್ಲಿ ಹಲವರಿಗೆ ದೇವರಲ್ಲಿ ನಂಬಿಕೆಯಿತ್ತು ಎಂಬ ಕಾರಣಕ್ಕೆ ತಮ್ಮ ನಂಬಿಕೆ ಉಳಿಸಿಕೊಂಡಿರುವವರು ಬಹಳ ಜನ. ಐನ್‌ಸ್ಟೈನ್‌ನ ಮಾತು ಆಗಲೆ ಹೇಳಿಯಾಗಿದೆ. (ನ್ಯೂಟನ್ ತಾನು ಬರೆದ 'ದೈವಶಾಸ್ತ್ರ, ತನ್ನ ಭೌತಶಾಸ್ತ್ರಕ್ಕಿಂತ ಹೆಚ್ಚು ಕೀರ್ತಿಯನ್ನು ತರುವುದೆಂದುಕೊಂಡಿದ್ದ.) ಗೆಲಿಲಿಯೊ, ಫ್ಯಾರಡೆ, ಮ್ಯಾಕ್ಸ್‌ವೆಲ್, ಲಾರ್ಡ್ ಕೆಲ್ವಿನ್ ಇವರೆಲ್ಲ ಮೇಧಾವಿ ವಿಜ್ಞಾನಿಗಳಾಗಿದ್ದರೂ, ದೈವಿಕ ಮತೀಯರಾಗಿದ್ದರು. ಕೆಲ್ವಿನ್ ಅಂತೂ, ಬೈಬಲ್ ನಿಗದಿಗೊಳಿಸಿರುವ ಭೂಮಿಯ ಕಾಲಾವಧಿಯಲ್ಲಿ ವಿಕಸನ ಪ್ರಕ್ರಿಯೆಯ ಅಸಾಧ್ಯವೆಂದು ಹೇಳಿ, ಡಾರ್ವಿನ್‌ಗೆ 'ಸರ್' ಬಿರುದನ್ನು ತಪ್ಪಿಸಿದ್ದ. ಡಾರ್ವಿನ್‌ನ ಮಗನೇ ಕೆಲ್ವಿನ್‌ನ ಸಿದ್ಧಾಂತದ ಲೋಪಗಳನ್ನು ತೋರಿಸಿ ಡಾರ್ವಿನ್‌ನ ವಾದವನ್ನು ದೋಷಮುಕ್ತಗೊಳಿಸಿದ; ತಾನೆ 'ಸರ್' ಆದ. ಹೀಗೆ, ೧೯ನೆಯ ಶತಮಾನದ ಮತವಿಶ್ವಾಸಿ ವಿಜ್ಞಾನಿಗಳ ವಿಜ್ಞಾನದ ಫಲವಾಗಿ ೨೦ನೆಯ ಶತಮಾನದ ವಿಜ್ಞಾನಿಗಳಲ್ಲಿ ಮತೀಯತೆ ಬಹಳವಾಗಿ ಕ್ಷೀಣಿಸಿಹೋಯಿತು. ಡಿ.ಎನ್.ಎ.ಯ ಅನ್ವೇಷಣೆಗೆ ನೊಬೆಲ್ ಪುರಸ್ಕಾರ ಪಡೆದ ಫ್ರಾನ್ಸಿಸ್ ಕ್ರಿಕ್ ಅವನ ಕಾಲೇಜಿನಲ್ಲಿ ಬಹು-ಭಾರಿ ಧನ ದಾನ ಕೊಟ್ಟವನ ಹೆಸರಿನಲ್ಲಿ ಒಂದು ಚಾಪೆಲ್

ಟ್ಟಿದ್ದನ್ನು ವಿರೋಧಿಸಿ ರಾಜೀನಾಮೆ ಕೊಟ್ಟ. ಅಮೆರಿಕಾದಲ್ಲಿ ಶೇಕಡ ೯೦ ಜನ ಲ್ಪಸ್ವಲ್ಪವಾದರೂ ಮತೀಯ ನಂಬಿಕೆ ಇರುವವರೆ; ಆದರೆ, ಅಲ್ಲಿಯ ಜ್ಞಾನಿಗಳೆಂದು ಪರಿಗಣಿಸಲ್ಪಟ್ಟಿರುವವರಲ್ಲಿ ಶೇಕಡ ೯೩ ಜನಗಳಿಗೆ ದೇವರಲ್ಲಿ ಂತಹ ನಂಬಿಕೆಯೂ ಇಲ್ಲ; ಬ್ರಿಟನ್‌ನಲ್ಲೂ ಸ್ಥಿತಿ ಭಿನ್ನವಾಗಿಲ್ಲ.

ಡಾಕಿನ್ಸ್ ನಾಲ್ಕನೆಯ ಅಧ್ಯಾಯದಲ್ಲಿ, ಈಗ ಅಸ್ತಿತ್ವದಲ್ಲಿರುವ ಪ್ರಪಂಚದ ಜೀವ ರಾಶಿಗಳ ಅದ್ಭುತ ಮತ್ತು ಸಂಕೀರ್ಣ ಸಂರಚನೆಯ ಕುಶಲಕಾರ್ಯ ಸರಳವಾಗಿ, ಪ್ರೊಂದು ವೈವಿಧ್ಯಮಯವಾಗಿ, ಪ್ರಕೃತಿಯ ನಿಯಮಗಳಡಿಯಲ್ಲಿಯೆ ಮತ್ತು ಪರಕರ್ತ ಲ್ಲದೆಯೆ ಹೇಗೆ ನಡೆಯಿತೆಂದು ಹೇಳುತ್ತಾನೆ; ಮತ್ತು ಇವೆಲ್ಲವೂ ಹೀಗೆಯೆ ನಡೆದಿರ ಹುದಾದ ಕಷ್ಟಸಾಧ್ಯತೆಗೆ ಹೋಲಿಸಿದರೆ, ಹೊರಗಿನ ಕರ್ತಾರನೊಬ್ಬನಿಂದ ಚಿಸಲಪಟ್ಟಿರುವ ಅಸಾಧ್ಯತೆ ಇನ್ನೂ ಎಷ್ಟು ಹೆಚ್ಚೆಂದೂ ವಿವರಿಸುತ್ತಾನೆ. ''ಹಳೆಯ ಸ್ತುಗಳ ಒಂದು ಗುಜರಿಮಾಳದಲ್ಲಿ, ಸುಂಟರಗಾಳಿ ಬೀಸುತ್ತಿದ್ದಾಗ, ಸಾಮಾನುಗಳೇ ೋಡಿಗೊಂಡು ಬೋಯಿಂಗ್ ೭೪೭ ವಿಮಾನದಷ್ಟು ಅದ್ಭುತ ಯಂತ್ರವಾಗಿ ಲ್ಲುವುದು ಎಷ್ಟು ಸಂಭವನೀಯ?'' – ಈ ತಾತ್ವಿಕ ಪ್ರಶ್ನೆ ಹಾಕಿದವನು ಫ್ರೆಡ್ ಾಯಲ್. ಯಾವುದೇ ಪರಕರ್ತ, ದೇಹದ ಭಾಗಗಳ ಜೋಡಣೆಯಿಂದಾದ ಒಂದು ುಂಬಿಯಿಂದ ಸಹ, ದುಂಬಿಯ ಎಲ್ಲ ಕೆಲಸಗಳನ್ನು ಮಾಡಿಸುವುದು ಇನ್ನೂ ಹೆಚ್ಚು ಸಂಭವನೀಯ. ಮಹಾ ಮೇಧಾವಿಗಳೂ ದುಂಬಿಯಂತಹ ಅದ್ಭುತ ಹೇಗೆ ಾಧ್ಯವಾಯಿತೆಂದು ಆಶ್ಚರ್ಯಪಡುವಾಗ ಜೀವಿಗಳೆಲ್ಲವೂ ಹೇಗಾದವೆಂದು ತೋರಿಸಿ ೊಟ್ಟಿರುವುದೇ ಡಾರ್ವಿನ್‌ನ ಮಹಾಮಹತ್ವ! 'ಪ್ರಕೃತಿಯ ಆಯ್ಕೆಯ ನಿಯಮ'ದಲ್ಲಿ ಂತಹ ಅಸಂಭವಗಳೆನ್ನಿಸುವವು ಬಹು ಸಾಧ್ಯ. ಕಡೆಗೆ, ಈ ಸಂಕೀರ್ಣ ಸಂರಚನೆಗೆ ಧೀಮಂತ ಜ್ಞಾನ'ವನ್ನು ಒದಗಿಸುವುದಕ್ಕಾದರೂ ದೇವರಂತಹ ಕರ್ತಾರನೊಬ್ಬ ಬೇಕೆಂಬ ೃಷ್ಟಿವಾದಿಗಳಸ್ನೆಲ್ಲ, ''ಹೊರಗಿನಿಂದ ಬರುವ ಜ್ಞಾನವೇಕೆ? ಯಾವುದೇ ಹೊಸ ಮಾಹಿತಿ ಹ ಆ ಜೀವಿಗೆ ಈ ವಿಕಸನ ಪ್ರಕ್ರಿಯೆಯಲ್ಲಿ ಬೇಕಿಲ್ಲ'' ಎಂದು ಹೇಳಿ, ಹೊರಗಿಡಬಹುದು.

(ಹೀಗೆ ಜೀವಿಗಳ ಸೃಷ್ಟಿ, ಸ್ಥಿತಿಗಳ ಕೆಲಸವನ್ನು ಮತ್ತಾರೊ ಮಾಡುತ್ತಿದ್ದರೆ, ದೇವರ ಅವಶ್ಯಕತೆ ಏನಿದೆ? ಅವಶ್ಯಕತೆ ಇಲ್ಲದ್ದಕ್ಕೆ ಅಸ್ತಿತ್ವ ಇರುತ್ತದೆಯೆ?)

ಇಂತಹ ಸರಳ ಸತ್ಯ, ಜನಗಳಲ್ಲಿ ಸುಲಭದ ಒಪ್ಪಿಗೆ ಪಡೆಯದಿರುವುದಕ್ಕೆ ಕಾರಣ, ಮಗಿರುವ ಚಿರಭ್ರಮೆಯ ರೂಢಿಗತ ಪೂರ್ವಗ್ರಹಗಳು. ಅಮೆರಿಕಾದ ಬಾಹ್ಯಾಂತರಿಕ್ಷ ಯಾತ್ರಿಯೊಬ್ಬ ''ಭೂಮಿಯಲ್ಲಿ ಈಗ ವಸಂತಋತು'' ಎಂದು ವಿರಹಿಸಿದರೆ, ಭಾರತ ನವರೆಲ್ಲ ಯೋಚಿಸದೆ ಆ ಕ್ಷಣವೆ, ''ಹೌದು'' ಎಂದುಬಿಡುತ್ತೇವೆ! ಪ್ರಪಂಚದಲ್ಲಿನ ಎಷ್ಟು ಭಾಷೆಗಳಲ್ಲಿ ಮನುಷ್ಯ ಎನ್ನುವುದಕ್ಕೆ ಸರಿಸಮ ಸಂಖ್ಯೆಯಲ್ಲಿರುವ ಸ್ತ್ರೀಯರನ್ನೂ ಸಹ ಪ್ರತಿನಿಧಿಸುವ ವ್ಯವಧಾನವಿದೆ? ಎಷ್ಟು ಜನ ಮಕ್ಕಳಿಗೆ ಮತ್ತು ಚಿಂತನೆ ಮಾಡದವರಿಗೆ ಉತ್ತರ ದಕ್ಷಿಣಗಳು ನಿಜವಾಗಿಯೂ ಮೇಲು ಕೀಳುಗಳಲ್ಲವೆಂದು ೊತ್ತಿದೆ? ಈಗಲೂ, ''ಡಾರ್ವಿನ್ 'ಮಣ್ಣೇ ಕುಂಬಾರನನ್ನು ಮಾಡುತ್ತದೆ' ಎನ್ನುತ್ತಾನೆ'' ಎಂದು ಹಾಸ್ಯ ಮಾಡುವ ಮುಗ್ಧ ವಿದ್ವಾಂಸರಿದ್ದಾರೆ. (ಕಬೀರ್, ತ್ರಿಪದಿಯೊಂದರಲ್ಲಿ, ಡಾರ್ವಿನ್ ಮಾತನ್ನೇ ಹೇಳಿದ್ದಾನೆ.)

ಈಚೆಗೆ ಅಮೆರಿಕಾದ ಬೈಬಲ್ ಸೊಸೈಟಿ ಜೀವಸೃಷ್ಟಿಗೆ ಕರ್ತಾರನ ಅವಶ್ಯಕತೆ ಇರುವುದೆಂದು ೧೭ ಭಾಷೆಗಳಲ್ಲಿ ಪ್ರಸಾರಗೊಳಿಸಲು ಒಂದು ಕೋಟಿ ದಶಲಕ್ಷ ಪುಸ್ತಕಗಳನ್ನು ಉಚಿತವಾಗಿ ಹಂಚಿತು. ಅದರ ಸಂಚಿಗೆ ವಿರುದ್ಧವಾಗಿ ಈ ಪುಸ್ತಕದಿಂದ ನಿರೀಶ್ವರವಾದಕ್ಕೂ ಉಪಯೋಗವಾಗುತ್ತಿದೆ. ಇದರಲ್ಲಿ ಹವಳದ ಮಹಾರಾಶಿಗಳು, ಡಚ್ಮನ್ ಪೈಪ್ ಎಂಬ ಗಿಡ, ಬಹು ಎತ್ತರಕ್ಕೆ ಬೆಳೆಯುವ ರೆಡ್‌ವುಡ್ ಮರ, ಇಂತಹ ವಿಚಿತ್ರ, ಸಂಕೀರ್ಣ ಜೀವಿಗಳನ್ನು ವರ್ಣಿಸಿ, ಸಂರಚನಾಕಾರನಿಲ್ಲದೆ ಇವು ಹೇಗೆ ಆಗಿರುವುದು ಸಾಧ್ಯ ಎಂದು ಪ್ರಶ್ನಿಸಿದ ಮಾತ್ರಕ್ಕೆ ಬ್ರಹ್ಮನನ್ನು ಇಲ್ಲಿ ಸ್ಥಾಪಿಸಿದೆವು ಎಂದುಕೊಂಡಿದ್ದಾರೆ; ಇಂತಹವೆಲ್ಲ ಆಕಸ್ಮಿಕವಾಗಿಯೆ (ಛಾನ್ಸ್‌ನಿಂದಲೆ) ಸೃಷ್ಟಿಯಾಗಿ ಬಿಡುವ ಸಂಭವನೀಯತೆ ಎಷ್ಟು ಕಡಿಮೆಯೆಂದು ಹಾಸ್ಯ ಮಾಡುತ್ತಾರೆ. ನಿಜ; ಈ ವಿಚಿತ್ರಗಳಿಗೆ ಅತಿವಿಚಿತ್ರ ಕರ್ತಾರನಾಗಲಿ, ಆ ಅತಿವಿಚಿತ್ರನಿಗೊಬ್ಬ ಮಹಾವಿಚಿತ್ರ ಸಂರಚನಾಕಾರನಾಗಲಿ ಇರುವುದು ಇನ್ನೆಷ್ಟು ಹೆಚ್ಚು ಅಸಂಭವನೀಯ! – ಇನ್ನೆಷ್ಟು ಹೆಚ್ಚು ಹಾಸ್ಯಾಸ್ಪದ! ವಿಕಸನವಾದ, ''ಆ ಡಚ್ಮನ್ ಪೈಪ್ ಗಿಡ ಹೇಗೆ ಕೀಟಗಳನ್ನು ಸೆರೆ ಹಿಡಿದು ಪರಾಗವನ್ನು ಕಾಲಿಗಂಟಿಸಿ, ತನ್ನ ವಂಶೋದ್ಧಾರ ಮಾಡಲು ಕಳುಹಿಸುತ್ತದೆ'' ಎಂದು ಹೇಳುವುದರ ಜೊತೆಗೆ, ಅಗತ್ಯದ ಸಂಕೀರ್ಣ ಸಲಕರಣೆಗಳನ್ನು ಯಾವ ಕಾರಣಕ್ಕಾಗಿ, ಯಾವ ನೈಸರ್ಗಿಕ ಸಂದರ್ಭಕ್ಕೆ ಪೂರಕವಾಗಿ, ಯಾರೂ ಎಂತಹುದೆ ಯೋಜನೆಗಳನ್ನು ಹಾಕಿಕೊಳ್ಳದೆಯೆ, ಹಂತಹಂತವಾಗಿ ಹೇಗೆ ಬೆಳೆಸಿಕೊಳ್ಳುತ್ತದೆ, ಎಂಬುದನ್ನೂ ತೋರಿಸಿಕೊಡುತ್ತದೆ. ಹಾಗೆಯೆ, ಈ ಮೂರೂ ವಿಚಿತ್ರ ಜೀವಿಗಳು ಸರ್ವಸಮನ್ವಯ ಸಿದ್ಧಾಂತದಡಿಯಲ್ಲಿಯೆ ವಿಕಸಿಸಿರುವ ಸಮಾಧಾನವೂ ಸಿಕ್ಕುತ್ತದೆ.

ಸಂಕೀರ್ಣ ಸಂರಚನೆಯನ್ನು ಹಂತಹಂತವಾಗಿ ರಚಿಸಿಕೊಳ್ಳುವ ಬಗೆಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದ ಈಶ್ವರವಾದಿಗಳು, ''ಒಂದು ರೆಕ್ಕೆ ಅಥವಾ ಅರ್ಧ ರೆಕ್ಕೆಗಳಿಂದ ಯಾವ ಪ್ರಯೋಜನವನ್ನು ಪಡೆದು ತಾನೆ ಹಕ್ಕಿ ಎರಡು ರೆಕ್ಕೆಗಳ ಹಾರಾಟದ ಸಿದ್ಧಿಯನ್ನು ತಲಪುತ್ತದೆ?'' ಎಂದು ಕುಚೋದ್ಯ ಮಾಡುತ್ತಾರೆ. ಯಾವ ನೈಸರ್ಗಿಕ ಸಂರಚನೆಯೂ ಭಾಗ ಭಾಗವಾಗಿ ಬರುವುದಿಲ್ಲ; ಹಂತಹಂತವಾಗಿ ಬರುತ್ತದೆ, – ಮರಿಗಳಿಗೆ ಬರುವಂತೆ. ಆಂಶಿಕ ಜೋಡಿರೆಕ್ಕೆಗಳ ಪ್ರಯೋಜನಗಳು ಅನೇಕ; ಕುಪ್ಪಳಿಸಲಿಕ್ಕೆ, ಮರದಿಂದ ಜಾರಿದಾಗ ಜೀವ ಉಳಿಸಲಿಕ್ಕೆ, ಮರದಿಂದ ಮರಕ್ಕೆ ಹೋಗಲಿಕ್ಕೆ, ಚಿಕ್ಕ ಮರದ ಪರಿಸರದಿಂದ ದೊಡ್ಡ ಮರದ ಪರಿಸರಕ್ಕೆ ಒದಲುವುದಕ್ಕೆ, ಕ್ರಮಶಃ ಹಾರಾಟದ ವಲಯ ವಿಸ್ತರಣೆಗೆ, ಇತ್ಯಾದಿ. ನೈಸರ್ಗಿಕ ಆಯ್ಕೆಯಲ್ಲಿ ಇವೆಲ್ಲವಕ್ಕು ಹೊಂದಿಕೊಳ್ಳುವ ಅವಶ್ಯಕತೆಗಳು, ಅವಕ್ಕೆ ಅನುಗುಣ ವಾಗುವ ಪರಿಸರಗಳು ಇದ್ದುದಂತು ನಿಜವೆ. ಇದಕ್ಕೆ ಪುರಾವೆಯಾಗಿ ಅಲ್ಪ ಉದ್ದದ ರೆಕ್ಕೆಗಳಲ್ಲಿಯೆ ಸಿದ್ಧಿ ಪಡೆದ ವಿಧವಿಧ ಹಕ್ಕಿಗಳ ಪ್ರಭೇದಗಳು, ಅವಶೇಷಗಳು, ಈಗಲೂ ಉಳಿದುಬಂದಿವೆ. ಇಷ್ಟು ಸಮರ್ಪಕ ಕಾರ್ಯಕಾರಣ ಸಂಬಂಧಗಳು ದೈವಸೃಷ್ಟಿಯ ಸಮಾಧಾನಗಳಲ್ಲಿ ಕಾಣುತ್ತವೆಯೆ?

ವಿಕಸನವಾದದಲ್ಲಿ ಮಾಹಿತಿ ಪೂರ್ಣವಿರದ ಒಡಕುಗಳಿಲ್ಲವೇ ಎನ್ನುವ ಪ್ರಶ್ನೆ ಸಹಜವಾಗಿ ಏಳುತ್ತದೆ; ಒಡಕುಗಳು ಸಾಕಷ್ಟಿವೆ, ಸರ್ವೋತ್ಕೃಷ್ಟ ರಚನಾ ವಿನ್ಯಾಸಕಾರ ನೆನ್ನಿಸಿಕೊಳ್ಳುವ ದೇವರನ್ನು ಹೊರತೆಗೆದು ಹಿಗ್ಗುವುದಕ್ಕೆ. ಎಲ್ಲ ವಿಜ್ಞಾನ, – ಏಕೆ, ಎಲ್ಲ ಜ್ಞಾನ ಭಂಡಾರಗಳಲ್ಲೂ ತೊಡಕುಗಳಿವೆ. 'ಸೃಷ್ಟಿ ಏನೆಂದು ದೇವರಿಗಾದರೂ ಗೊತ್ತುಂಟೊ?' ಎಂಬ ಉದ್ಗಾರ ಋಗ್ವೇದದ ನಾಸದೀಯ ಸೂಕ್ತದಲ್ಲಿದೆ.) ವಿಜ್ಞಾನಿಗಳಾದರೊ ಒಡಕುಗಳನ್ನೆ ಆಸಕ್ತಿಯಿಂದ ಹುಡುಕುತ್ತಿರುತ್ತಾರೆ; – ಸುಲಭದ ಡಾಕ್ಟರೇಟ್ ಮಾತ್ರಕ್ಕಲ್ಲ! ದೈವವಾದಿಗಳೆಂದೂ ತಮ್ಮ ಒಡಕುಗಳನ್ನು ಹುಡುಕುವುದಿಲ್ಲ; ಹುಡುಕಿಕೊಂಡವರು, ದೈವವಾದಿಗಳಾಗಿ ಉಳಿಯುವುದಿಲ್ಲ. ಇನ್ನೂ ಈಗಲೂ ಬಗೆ ಹರಿಯುವುದರಲ್ಲಿರುವ ವಿಕಸನದ ತೊಡಕುಗಳು ಕೆಲವಿವೆ. ಹಂತಹಂತವಾಗಿರದೆ ಭಾಗಶಃ ಇರುವಂತೆ ಕಾಣುವ ದೇಹವಿನ್ಯಾಸದ ಕೆಲವು ಅಸಾಮಾನ್ಯ ಸಂಕೀರ್ಣತೆಗಳು ರೂಪುಗೊಂಡ ವಿಧಾನಗಳನ್ನು ತೋರಿಸಿಕೊಡುವ ಕಾರ್ಯ ಇನ್ನೂ ನಡೆಯುತ್ತಿದೆ. ಕೆಲವು ಬ್ಯಾಕ್ಟೀರಿಯಾಗಳು ತಮ್ಮ ಬೇಟೆಯಾಗಲಿರುವ ಬ್ಯಾಕ್ಟೀರಿಯಗಳ ಒಳಹೋಗುವಾಗ, ತಮ್ಮ ದೇಹದಲ್ಲಿರುವ ಮೋಟರ್‌ಡ್ರಿಲ್ ಅಥವಾ ಬೈರಿಗೆ (ಫ್ಲಾಜೆಲ್ಲಾರ್ ಮೋಟಾರ್)ಗಳನ್ನು ಬಳಸುತ್ತವೆ. ಈ ಬೈರಿಗೆ ಚಾಲಕನ ದೇಹದಿಂದ ಹೊರಚಾಚಿ ಬಂದಂತಿದ್ದು, ನಿಮಿಷಕ್ಕೆ ೨೦,೦೦೦ ಸುತ್ತು ತಿರುಗುತ್ತದೆ. ವಿಕಸನದ ಇಂತಹ ತೊಡಕುಗಳನ್ನು ಹುಡುಕಿ, ವಿಜೃಂಭಿಸುವ ಸೃಷ್ಟಿವಾದಿಗಳು ವಿಜ್ಞಾನಿಗಳಿಗೆ ಸಹಾಯವನ್ನೇ ಮಾಡಿದ್ದಾರೆನ್ನಬೇಕು. ಸಮಸ್ಯೆಗೆ ಸಮರ್ಪಕ ಉತ್ತರ ೨೦೦೩ರಲ್ಲಿ ಸಿಕ್ಕಿತು. ನ್ಯಾನೊ ತಂತ್ರಜ್ಞಾನದಲ್ಲಿ ಇದರ ಮಹತ್ವ ಈಗ ಅಪಾರ. ವಿಜೃಂಭಿತ ಪ್ರಶ್ನೆಗೆ ಜಯಭೇರಿಯ ಉತ್ತರ ಸಿಕ್ಕಾಗ ದೈವವಾದ ಮೆಟ್ಟಿಲುಗಳೆ ಕೆಳಕ್ಕಿಳಿದ ಹಾಗೆ ತಾನೆ?

ಚರ್ಚೆ ನಡೆಯುವಾಗಲೆಲ್ಲ ತರ್ಕದಲ್ಲಿ ತಾವು ಸೋತುಹೋದ ಅಂಶಗಳನ್ನು ಸಹ ಒಪ್ಪಿಕೊಳ್ಳದ ಹಠನೀತಿಯ ಮತೀಯರನ್ನು ಡಾಕಿನ್ಸ್, ಟೆಂಪಲ್‌ಟನ್ ಫೌಂಡೇಷನ್ ಸಮ್ಮೇಳನದಲ್ಲಾದ ತನ್ನ ಅನುಭವಗಳ ಮೂಲಕ ವಿನೋದ ಮಾಡುತ್ತಾನೆ. ವಿಜ್ಞಾನವನ್ನು ಪಳಗಿಸಿ ಮತೀಯ ಹಾದಿಗಳಲ್ಲಿ ಅದನ್ನು ಬಳಸುವ ಧ್ಯೇಯದ ಈ ಸಂಸ್ಥೆ ನೊಬೆಲ್ ಪಾರಿತೋಷಕಕ್ಕಿಂತ ಹೆಚ್ಚಿನ ಧನರಾಶಿಯ ಬಹುಮಾನಗಳನ್ನಿಟ್ಟು ಪ್ರಶಸ್ತಿ ನೀಡುತ್ತದೆ. ಮೇಲೆ ಹೇಳಿದ ಸಮ್ಮೇಳನದಲ್ಲಿ ಅದು ಕ್ರಿಸ್ತಮತದವನಾಗಿ ಉಳಿದಿದ್ದ ಬ್ರಿಟನ್ನಿನ ಪ್ರಸಿದ್ಧ ಭೌತಶಾಸ್ತ್ರ ವಿಜ್ಞಾನಿ ಫ್ರೀಮನ್ ಡೈಸನ್‌ಗೆ ಇಂತಹ ಪ್ರಶಸ್ತಿ ಕೊಟ್ಟು, ಬಂದಿದ್ದ ಪ್ರತಿ ವಿಜ್ಞಾನವರದಿಗಾರ ಪತ್ರಕರ್ತನಿಗೂ ಹದಿನೈದು ಸಾವಿರ ಡಾಲರ್ ಹಣದ ಕೊಡುಗೆಗಳನ್ನು ಕೊಟ್ಟಿತ್ತು. ಪ್ರಶಸ್ತಿ ಪಡೆದ ಮೇಲೆ ಡೈಸನ್ ಹೇಳಿದ್ದಿಷ್ಟೆ: ''ನೀವೇನು ಅಪೇಕ್ಷಿಸುತ್ತೀರಿ ಎಂದು ತಿಳಿದಿದ್ದರೂ ಹೇಳಿಬಿಡುತ್ತೇನೆ. ನಾನು 'ಟ್ರಿನಿಟಿ' (ಏಸು, ಪವಿತ್ರ ಪ್ರೇತಾತ್ಮ ಮತ್ತು ವರ್ಜಿನ್ ಮೇರಿ)ಯಲ್ಲಾಗಲಿ, ಬೈಬಲ್‌ನ ಸುವಾರ್ತೆಗಳ ಚಾರಿತ್ರಿಕ ತಥ್ಯದಲ್ಲಾಗಲಿ, ನಂಬಿಕೆಯಿರದ ಕ್ರಿಶ್ಚಿಯನ್ ಜನಸಾಗರದಲ್ಲೊಬ್ಬ, ಅಷ್ಟೆ...ನಾನು ದೇವರನ್ನು ನನ್ನ ಮನಸ್ಸಿನಿಂದ ಹೊರಗಡೆ ಎಲ್ಲೂ ಬೇರೆಯಾಗಿ ಕಂಡಿಲ್ಲ ...ನಿರೀಶ್ವರವಾದಿಗಳು ಮಹಾಕೇಡಿಗರಾಗುವರೆಂಬ ಜನಪ್ರತೀತಿ ಇರುವುದರಿಂದ, ದೈವಿಕಮತಗಳು ಜನರನ್ನು ಸ್ವಲ್ಪ ಉತ್ತಮ

ಗಿಸುವರೆಂದುಕೊಳ್ಳುತ್ತೇನೆ... ಇಷ್ಟು ಹೇಳಿದ್ದು ನಿಮಗೆ ತೃಪ್ತಿಯಾಯಿತೆ? ವಿಜ್ಞಾನವನ್ನು ಂತಿಯಿಂದ ಮುಂದುವರಿಸಿಕೊಂಡುಹೋಗಲು ನನ್ನನ್ನು ಬಿಡುವಿರಾ?'' ಅಲ್ಲಿ, ಕಿನ್ಸ್, ಜೀವಸೃಷ್ಟಿಯಲ್ಲಿ ದೇವರಿಗೆ ಕೊಡುವ ಮಹಾಪಾತ್ರಗಳಲ್ಲಿನ ತರ್ಕದ ಡಕುಗಳನ್ನು ತೋರಿಸಿಕೊಟ್ಟಾಗ ಯಾರೂ ಸ್ಪಂದಿಸಲೇ ಇಲ್ಲ. ದೈವವಾದಿಗಳ ದಾಸೀನತೆ ಮತ್ತು ಮೊಂಡುತನಗಳಿಗೆ ಕಾರಣವೂ ಇಲ್ಲದೇನಿಲ್ಲ; ಸರ್ವೋತ್ತಮ, ರ್ವಶಕ್ತ ಎಂಬ ಅತಿಶಯಗಳ ಆಧಾರದ ಮೇಲಷ್ಟೆ ಸಾಮ್ರಾಜ್ಯ ನಡೆಸುವ ದೇವರ ಲ್ಲನೆ, ಒಡಕುಗಳನ್ನು ತಾಳಿಕೊಂಡು ಉಳಿಯಲಾರದು.

ಡಾಕಿನ್ಸ್ ಈ ಪುಸ್ತಕದ ಕೇಂದ್ರ ವಿಷಯವನ್ನು ಹೀಗೆ ಸುಲಭದಲ್ಲಿ ಸಂಕ್ಷೇಪಿಸಿದ್ದಾನೆ:

೧. ನವೀನ ಉನ್ನತಮಟ್ಟದ ಅದ್ಭುತ ಸಂಕೀರ್ಣ ಸಂರಚನೆಯ ಒಂದು ಗಡಿಯಾರಕ್ಕೆ ಒಬ್ಬ ಬುದ್ಧಿವಂತ ಎಂಜಿನಿಯರ್‌ನ ಒಂದು ಯೋಜಿತ ವಿನ್ಯಾಸದ ವಶ್ಯಕತೆ ಇದೆ, ನಿಜ. ತಕ್ಷಣವೆ ಅತ್ಯದ್ಭುತ ಅತಿಸಂಕೀರ್ಣ ರಚನೆಗಳಾದ ಕಣ್ಣು, ಕ್ಕೆ, ಮಿದುಳು ಇತ್ಯಾದಿಗಳಿಗೂ ಇದೇ ತರ್ಕವನ್ನು ಅನ್ವಯಿಸುವ ಮೋಹ, ಒಂದು ಪು ಪ್ರೇರಣೆಯಾಗಿ ನಮ್ಮನ್ನು ಮುಸುಕುತ್ತದೆ.

೨. ಏಕೆಂದರೆ, ಈ ವಿನ್ಯಾಸಕಾರನ ಅವಶ್ಯಕತೆಯ ವಾದಸರಣಿ, ತಕ್ಷಣವೇ 'ಆ ನ್ಯಾಸಕಾರನ ರಚನೆಯ ವಿನ್ಯಾಸ ಹೇಗಾಯಿತು?' ಎನ್ನುವ ಇನ್ನೂ ಹೆಚ್ಚು ಕಠಿಣ ಮಸ್ಯೆಯನ್ನು ಹೇರುತ್ತದೆ. ಒಂದು ದುಸ್ಸಂಭವನೀಯ ತರ್ಕಾಂಶವನ್ನು ಇನ್ನೂ ಹೆಚ್ಚು ಸ್ಸಂಭವನೀಯ ತರ್ಕಾಂಶದಿಂದ ಪ್ರತಿಪಾದಿಸಲಾಗುವುದಿಲ್ಲ. ಬಹಳ ಎತ್ತರಕ್ಕೆ ರುವುದಕ್ಕೆ ಒಂದು ಕ್ರೇನ್ ಮಾಡಿಕೊಳ್ಳುವುದೆ ಕಷ್ಟವಾದಾಗ ಆಕಾಶಕ್ಕೇ ಒಂದು ಕ್ಕೆ ತಗುಲಿಸಿ (ಕ್ರೇನ್ ಇಲ್ಲದೆ ಹೇಗೆ ಸಾಧ್ಯ?) ಹತ್ತುವ ಕಲ್ಪನೆ ಆರಂಭಿಸಬಾರದು. ಧಾನವಾದರೂ ಕಷ್ಟಸಾಧ್ಯದ ಸರಳ ಕ್ರೇನ್‌ಗಳನ್ನೇ ಪೇರಿಸುತ್ತ ಮೇಲೇರಬೇಕು.

೩. ಈ ಮಹಾಪ್ರಶ್ನೆಯ ಉತ್ತರವನ್ನು ತಲುಪಲು ನಾವು ಇದುವರೆಗೂ ಕಂಡು ಂಡಿರುವ ಅತ್ಯುತ್ತಮ ಕ್ರೇನ್, ಡಾರ್ವಿನ್ ಸಿದ್ಧಾಂತದ 'ನೈಸರ್ಗಿಕ ಆಯ್ಕೆಯಿಂದಾಗುವ ಕಸನ'. ಮೊದಮೊದಲ ಸರಳ ಜೀವಿಗಳು, ಅತಿ ದರಿದ್ರ ಪ್ರಾರಂಭದಿಂದ, ನಿಧಾನದ ಗತಿಯಲ್ಲಿ, ಕೋಟ್ಯಂತರ ಸಣ್ಣ ಪುಟ್ಟ ಹಂತಗಳಲ್ಲಿ, ಸಂಕೀರ್ಣ ರಚನೆಗಳನ್ನು ಹೇಗೆ ಸಾಧಿಸಿದವು ಎಂಬುದನ್ನು ಡಾರ್ವಿನ್ ಮುಂತಾದವರು ತೋರಿಸಿಕೊಟ್ಟಿದ್ದಾರೆ. ''ಈಗ ಕಾಣಬರುವುದೆಲ್ಲವೂ ವಿಕಸನದಿಂದ ಆದವೇ ಹೊರತು ಯೋಜಿತ ವಿನ್ಯಾಸದಿಂದ ಅಲ್ಲ'' ಎಂದು ಈಗ ಎಲ್ಲರೂ ಪ್ರಮಾಣವಾಗಿ ಹೇಳಬಹುದು.

೪. ವಿಕಸನ, ಡಾರ್ವಿನ್ ಜೀವಶಾಸ್ತ್ರಕ್ಕೆ ಒದಗಿಸಿಕೊಟ್ಟ, ಎಷ್ಟು ಎತ್ತರಕ್ಕೆ ಬೇಕಾದರೂ ಕೊಂಡೊಯ್ಯಬಲ್ಲ ಕ್ರೇನ್. ಇಂತಹ ಸಾಕಷ್ಟು ಶಕ್ತ, ಸರ್ವಸಮನ್ವಯ ಸಿದ್ಧಾಂತ ಭೌತಶಾಸ್ತ್ರಕ್ಕೆ ಇನ್ನೂ ಒದಗಿಲ್ಲ.

೫. ಹಾಗೆಂದು ನಿರಾಶರಾಗಬೇಕಾಗಿಲ್ಲ; ಐನ್‌ಸ್ಟೈನ್‌ನ ಅಪೂರ್ಣ ಸಿದ್ಧಾಂತಗಳಂತಹ ಸಾಕಷ್ಟು ಶಕ್ತ ಕ್ರೇನ್‌ಗಳ ಸಹಾಯದಿಂದಲೆ ಸಮನ್ವಯ ಸಿದ್ಧಾಂತಗಳು ದೊರೆಯುವ ಸಂಭವ ಸಾಕಷ್ಟಿದೆ.

ಹೀಗೆ ಅಸ್ತಿತ್ವವಿರದ ದೇವರ ಆಧಾರದ ಮೇಲೆ ಮತಗಳು ನಡೆಯುತ್ತಿವೆ ಎಂದು ಒಪ್ಪಿಕೊಂಡರೆ, ಈ ಮತಗಳಿಂದ ಆಗುವ ಒಳ್ಳೆಯ ಅಥವಾ ಕೆಟ್ಟ ಪರಿಣಾಮಗಳ ಆಧಾರದ ಮೇಲಷ್ಟೆಯೇ ಅವುಗಳ ಬಗ್ಗೆ ತೀರ್ಮಾನಗಳನ್ನು ಮಾಡಬಹುದು. ಈ ಪುಸ್ತಕದ ಉಳಿದ ಭಾಗದಲ್ಲಿ ಈ ಚರ್ಚೆಯೆ ಇದೆ. ಇಷ್ಟು ವಿಶಾಲ ವ್ಯಾಪ್ತಿ ಇರುವ ಮತೀಯ ನಂಬಿಕೆಯ ಪ್ರವೃತ್ತಿ ನರಪ್ರಾಣಿಗಳಿಗೆ ಲಾಭಕರವಲ್ಲದಿದ್ದಲ್ಲಿ, ಏಕೆ ಉಂಟಾಯಿತೆಂಬ ಸಮಸ್ಯೆ ಕಾಡುತ್ತದೆ; ''ಪತಂಗಗಳು ಉರಿವ ದೀಪದತ್ತ ನುಗ್ಗಿ ಸಾಯುವುದೂ ಲಾಭಕರವೆ?'' ಎಂಬ ಪ್ರಾಣಿಶಾಸ್ತ್ರದ ಸಮಸ್ಯೆಯಂತೆ. ಯುಗಯುಗಗಳಿಂದ ಪತಂಗಗಳು ಆಕಾಶದ ಸಮಾನಾಂತರ ಕಿರಣಗಳ ನೆರವಿನಿಂದ ತಮ್ಮ ಅಲ್ಪ ದೃಷ್ಟಿಯಿಂದಲೆ ಸುಗಮವಾಗಿ ಹಾರಾಡುತ್ತಿದ್ದವು. ಈಗ ಹತ್ತಿರದ ಸುಡುವ ದೀಪಗಳ ಚದುರುವ ಕಿರಣಗಳಿಂದ ಕಂಗೆಟ್ಟು ಪ್ರಾಣತೆರುವುದು, ಹೊಸ ಪರಿಸರಕ್ಕೆ ತಕ್ಕ ಪ್ರವೃತ್ತಿ ವಿಕಸಿಸುವ ಕವಲೊಡೆವವರೆಗಷ್ಟೆ; ಅದೂ ಆದರೆ ಮಾತ್ರ.

ಮನುಷ್ಯರ ಮತೀಯ ನಂಬಿಕೆಗಳ ವ್ಯಾಪ್ತಿಗೆ ಅನುವು ಕೊಟ್ಟ 'ಪ್ರಾಕೃತಿಕ ಆಯ್ಕೆ' ಇಂತಹುದೆ. ಈ ವಿಶೇಷ ಪ್ರಾಣಿಯ ಬಾಲ್ಯಾವಸ್ಥೆ (ಸ್ವಯಂಭರನಾಗುವ ದೀರ್ಘಾವಧಿ)

## ಸೂರ್ಯನೇ ಬಾಕಿದಾರ...!

ಬಿಟ್ಟೂ ಬಿಡದೇ
ಜಿನುಗುತ್ತಲೇ ಇದೆ
ಬೆವರಹನಿ ಮಳೆ...

ಕೆಂಪು ಕುಡಿಯೊಡೆದ ಇಳೆತುಂಬ
ಖಾಲೀ ದುಗುಡದ ಬೆಳೆ
ಮೋರಿ ತುಂಬ ಸುಕ್ಕುಗೆರೆ
ಪೀಚು ಮೊಲೆ ಮೈ ಅರೆಬರೆ
ನರೆತ ಗಡ್ಡ ಮೀಸೆಯಡಿ
ನಿರಂತರ ಬೆವರಧಾರೆ...

ನಕ್ಷತ್ರಗಳಾದರೂ
ಕನಸ ಹೊಸೆಯುತ್ತವೆ ಅಂದರೆ
ಕತ್ತಲಾಗುತ್ತಲೇ ಇಲ್ಲ;
ಇಲ್ಲಿ ಎಲ್ಲ ಎಲ್ಲ ಸೆರೆ
ಕತ್ತ ಸುತ್ತಲೂ ಬರೆ
ಉಸಿರ ಸೂಲಿನ ಮೇಲೂ ಕೆಸರೆ!
ಮುಗಿಲ ಮೈ ಉರಿದು
ಸುರಿಯುತ್ತಲೇ ಇದೆ
ಝಳದ ಮಳೆ...

ಹಳ್ಳ ಕೊಳ್ಳ ನದಿಯಾದಿಯಾಗಿ
ನೆಲನಾಡ ತುಂಬೆಲ್ಲ ನಿಗಿ ನಿಗಿ ನೀರು
ಬಿರಿದ ತುಟಿಯಂಚಲ್ಲಿ
ಒಡೆದು ಒಸರುವ ಉದರರಾಗದ ಏರು...

ಕರುಳಬಳ್ಳಿಗು ಸುತ್ತಿಕೊಂಡಿದೆ ಬಾಲ;
ಬೆವರ ಹನಿ ಮೇಲಣ ಸಾಲ!
ತ್ರಿಶೂಲವಾಗಿ ತಿವಿಯುತ್ತಲಿದೆ
ಬಸಿಯುತ್ತಿಲ್ಲ ನೆತ್ತರು;
ಚಿಮ್ಮುತ್ತಿದೆ ಬಲಿಯ ಉಗಿ ಉಮರು...

ರಕ್ತ ಹರಿಸದೆ ಇರಿವ ಈ ಶಿಕಾರಿಗೆ
ಸಂದ ಪಾಲು ಎಷ್ಟೋ...!
ಜಮಾ ಯಾರ ಖಾತೆಗೆ?
ಸೂರ್ಯನೇ ಬಾಕಿದಾರ;
ಈ ಎಲ್ಲಕು ಹೊಣೆಗಾರ!

ವಿಜಯಕಾಂತ ಪಾಟೀಲ
ಚಿಕ್ಕಾಂಶಿ, ಹೊಸೂರು - ೫೮೧ ೧೦೪, ಹಾನಗಲ್ಲ, ಹಾವೇರಿ



ಯಲ್ಲಿ ಪ್ರಶ್ನಿಸದೆ ನಿಯಮಗಳನ್ನು ಪಾಲಿಸುವ ಪ್ರವೃತ್ತಿ ಇರುವುದು ಲಾಭಕರವೆ; ಇದು ಡಾರ್ವಿನ್ ವಿಕಸನದ ಅಂಶ ಆಗಿರಲಿಕ್ಕಿಲ್ಲ ಎನ್ನುವಂತಿಲ್ಲ. ಆದರೆ ಯುವಾವಸ್ಥೆಯಲ್ಲಿ ಇದು ಅವಶ್ಯಕವಲ್ಲ; ಇದು ಅಡ್ಡಿ. (ಈ ಶಿಸ್ತು ವೈಚಾರಿಕತೆಯನ್ನೆ ನಾಶಮಾಡುವ ಸ್ವಭಾವ ಆಗದಂತೆ ನೋಡಿಕೊಳ್ಳುವುದು ತಾಯಿತಂದೆ ಮತ್ತು ಸಮಾಜದ ಕರ್ತವ್ಯ. ಕುಟುಂಬಾಪೇಕ್ಷೆಯ ಮತನೀತಿಗಳಿಂದ ಸಮಾಜಾಪೇಕ್ಷೆಯ ಜನಮತ ನೀತಿಗಳತ್ತ ಪರಿಸರವನ್ನು ಕೊಂಡೊಯ್ಯುವಾಗ ಪ್ರವೃತ್ತಿ ಬದಲುವ ಸಂಭವತೆ ಬಹಳಷ್ಟಿದೆ.) "ಪ್ರತಿ ಹಳ್ಳಿಯಲ್ಲೂ ಮನದ ದೀಪ ಹಚ್ಚುವ ಒಬ್ಬ ಉಪಾಧ್ಯಾಯನಿರುತ್ತಾನೆ; ಹಾಗೆಯೆ, ಆ ದೀಪವನ್ನು ಆರಿಸುವುದಕ್ಕಾಗಿ ಒಬ್ಬ ಪಾದ್ರಿಯೂ ಇರುತ್ತಾನೆ" ಎಂದು ವಿಕ್ಟರ್ ಹ್ಯೂಗೊ ದುಃಖಿಸಿದ್ದಾನೆ. ಮತೀಯರು ಮುಗ್ಧರ ಶೈಶವದ ದುರುಪಯೋಗ ಪಡೆದುಕೊಳ್ಳುವ ವಿಧಿವಿಧಾನಗಳನ್ನು ಡಾಕಿನ್ಸ್ ಚರ್ಚಿಸುತ್ತ ಹೋಗುತ್ತಾನೆ. ಟೆನಿಸನ್ 'ಲೈಟ್ ಬ್ರಿಗೇಡ್' ಕಾವ್ಯದಲ್ಲಿ, ಕಾರಣ ಕೇಳದೆ ಆಜ್ಞೆ ಪಾಲಿಸಿ ಮುನ್ನುಗ್ಗಿ ಆಹುತರಾದ ೬೦೦ ಶಿಸ್ತಿನ ಸಿಪಾಯಿ ದಳದ ಆರಾಧನೆ (ಕೆಸಬಿಯಾಂಕನ ಪಿತೃಭಕ್ತಿ) ಇಂತಹವುಗಳ ಆದರ್ಶ, ಪ್ರಶಂಸೆಗಳು, ಹಿಂದಿನ ಪೀಳಿಗೆಗಳಲ್ಲಿ ಅಪಾರವಾಗಿತ್ತೆಂದರೆ, ಇವುಗಳ ಬಾಲಪಾಠವಾಗದ ಇಂದಿನವರಿಗೆ ಹಾಸ್ಯಾಸ್ಪದವೆನಿಸುತ್ತದೆ. ಹಾಗೆಯೆ, ಕ್ಯಾಥೊಲಿಕ್ ಪಾದ್ರಿಗಳು, ರ್‍ಯಾಬಿಗಳು, ಪರ್ಯಟನೆಗಳಲ್ಲಿ ಕಂಡ ಆದಿವಾಸಿ ತಂಡಗಳ ಮೂಢ ನಂಬಿಕೆಗಳನ್ನು ಗೇಲಿ ಮಾಡುತ್ತಾರೆ; ಆದರೆ ಇವರೇ ಹೇಳುವ ಬೈಬಲ್ ಕತೆಗಳು ಬೈಬಲ್‌ನ ಬಾಲಪಾಠವಾಗಿರದ ಇತರ ಮತಗಳವರಿಗೆ ಹೇಗಿರುತ್ತದೆ ಎಂದು ಡಾಕಿನ್ಸ್ ವರದಿ ಮಾಡುತ್ತಾನೆ: "ಪ್ರಾಚೀನ ಕಾಲದಲ್ಲಿ ಅಕ್ಷತಕನ್ಯೆಯೊಬ್ಬಳಿಗೆ ತಂದೆಯಿಲ್ಲದ ಮಗನೊಬ್ಬ ಹುಟ್ಟಿದ. ಅವನು ತನ್ನ ಸ್ನೇಹಿತ ಲಾಜರಸ್‌ನ ಹೆಣದ ಮುಂದೆ ನಿಂತು ಹೆಸರು ಕರೆದಾಗ ಲಾಜರಸ್ ಬದುಕಿ ಎದ್ದುನಿಂತ. ಈ ತಂದೆಯಿಲ್ಲದ ಮನುಷ್ಯ ಸತ್ತು ಗೋರಿಯಾದ ಮೂರನೆಯ ದಿನ ತಾನಾಗಿಯೆ ಬದುಕಿ ಎದ್ದ. ನಲವತ್ತು ದಿನಗಳ ನಂತರ ಇವನು ಒಂದು ಬೆಟ್ಟದ ತುದಿಯವರೆಗೂ ಹತ್ತಿ, ಶರೀರಸಮೇತ ಆಕಾಶಕ್ಕೆ ಹೋದ. ನೀವು, ಈ ತಂದೆಯಿಲ್ಲದ ಮನುಷ್ಯನ ಅಥವಾ ಅವನ 'ತಂದೆ'ಯ ನೆನಪು ಮಾಡಿಕೊಂಡು, ಮನಸ್ಸಿನಲ್ಲಿಯೆ ಏನನ್ನಾದರೂ ಬಯಸಿದರೆ, ಫಲಿಸುತ್ತದೆ; ಹೀಗೆಯೇ ಅವನು ಜಗತ್ತಿನ ಉಳಿದೆಲ್ಲರ ಮನದಾಸೆಗಳನ್ನು ಅದೇ ಸಮಯದಲ್ಲಿ ಅರಿಯುತ್ತಿರುತ್ತಾನೆ. ಈತ, ನಿಮಗೂ ಕಾಣದಂತೆ ನೀವು ಮಾಡುವ ತಪ್ಪು ಸರಿಗಳನ್ನು ನೋಡುತ್ತಿರುತ್ತಾನೆ: ನಿಮಗೆ ತಕ್ಕ ಬಹುಮಾನ, ಶಿಕ್ಷೆಗಳನ್ನು ಕೊಡುತ್ತಿರುತ್ತಾನೆ, ನೀವು ಸತ್ತಮೇಲೂ ಸಹ. ಈ ತಂದೆಯಿಲ್ಲದ ಮನುಷ್ಯನ 'ತಾಯಿ' ಸಾಯಲೇ ಇಲ್ಲ; ದೇಹ ಸಮೇತ ಸ್ವರ್ಗಕ್ಕೆ ಹೋದಳು. ಪಾದ್ರಿಯೊಬ್ಬ ಬ್ರೆಡ್ ಮತ್ತು ವೈನ್‌ಅನ್ನು ಮಂತ್ರಿಸಿದಾಗ ಅವು ಬಹಳ ಹಿಂದೆಯೆ ಸತ್ತು ಸ್ವರ್ಗಕ್ಕೆ ಹೋದ ಈ ತಂದೆಯಿಲ್ಲದ ಮನುಷ್ಯನ ದೇಹ ಮತ್ತು ರಕ್ತಗಳಾಗುತ್ತವೆ." ಇಂತಹ ಭ್ರಮೆಗಳಿಲ್ಲದ ದೈವಿಕಮತ ಯಾವುದಿದೆ ? ಹಿಂದೆ ಶಾರೀರಿಕ ಹಿಂಸಾಚಾರದಿಂದ ಮತನಿಯಮಗಳನ್ನು ಹೇರುವುದರಲ್ಲಿ ಪ್ರಸಿದ್ಧರಾಗಿದ್ದು, ಈಚೆಗೆ ಬಾಲ್ಯಶಿಕ್ಷಣಕ್ಕೆ ಪ್ರಸಿದ್ಧರಾಗಿರುವ ಜೆಸೂಟ್ ಸಂಪ್ರದಾಯಸ್ಥರು, "ಮಗುವನ್ನು ಮೊದಲ ಏಳು ವರ್ಷ ಕಾಲ ಮಾತ್ರ ನಮ್ಮ ಕೈಯಲ್ಲಿಡಿ; ಇಡೀ ಜೀವನಕ್ಕೆ ಶಿಕ್ಷಣವೇ ಬೇಕಾಗದ ಮನುಷ್ಯನನ್ನು ನಿಮಗೆ ಕೊಡುತ್ತೇವೆ" ಎಂದು ಹೇಳಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ಪೋಪ್‌ಗಳು ತಮ್ಮ ಅಧಿಕಾರಸೀಮೆಯಲ್ಲಿದ್ದ ರಾಜ್ಯಗಳಲ್ಲಿನ ಜ್ಯೂ ಶಿಶುಗಳನ್ನು ಮತಾಂತರಗೊಳಿಸಲು ತಂದೆತಾಯಿಯರನ್ನು ಹೇಗೆ ದಮನಿಸುತ್ತಿದ್ದರೆಂಬುದರ ವರದಿಗಳೂ ಇಲ್ಲಿವೆ. (ಹೊಸತು, ಅಕ್ಟೋಬರ್ ೨೦೦೩ರ 'ಜ್ಯೂ ವಿರೋಧಿ ಪೋಪ್‌ಗಳು' ಎಂಬ ಲೇಖನದಲ್ಲಿ ಹಲವು ವಿವರಗಳಿವೆ.) (ಅತಿ ಚಿಕ್ಕ ವಯಸ್ಸಿನಲ್ಲೆ ಸಾವಿರಾರು ಮಕ್ಕಳನ್ನು ಮತೀಯ ಮಠಗಳಲ್ಲಿ ಸೇರಿಸಿ, ಅತ್ಯಲ್ಪ ಪ್ರಾಪಂಚಿಕ ಜ್ಞಾನದೊಡನೆ, ಮತೀಯ ಗ್ರಂಥ ಪಠನ ಮುಂತಾದವನ್ನೆ ತಲೆಯಲ್ಲಿ ತೀವ್ರವಾಗಿ ತುಂಬಿಸಿಟ್ಟು, ಮುಂದಿನ ಮತನಾಯಕರಾಗುವ ಆಸೆಗಳನ್ನು ಅವರಲ್ಲಿ ಉತ್ತೇಜಿಸಿ, ಬ್ರಹ್ಮಚರ್ಯವನ್ನು ವಿಧಿಸಿ, ಅವರ ಮೂಲಕ ಸಂಚಿತವಾಗುವ ಐಶ್ವರ್ಯ ಕೋಶಗಳ ಪಾರುಪತ್ತೆ ವಹಿಸುವ ಗುರುಮಠಗಳು, ಎಲ್ಲ ಮತ, ಪಂಥ, ಜಾತಿಗಳಲ್ಲಿ, ಪ್ರಪಂಚದಲ್ಲೆಲ್ಲ ತುಂಬಿವೆ.)

ದೈವಿಕ ಮತಮೂಲಗಳನ್ನು ಡಾಕಿನ್ಸ್ ಹೀಗೆಯೇ ಅರಸುತ್ತ ಹೋಗುತ್ತಾನೆ. ಇವನಿಗಾಗಿ ಡೇವಿಡ್ ಅಟೆನ್‌ಬರೊ ಶಾಂತಸಾಗರದ ದ್ವೀಪಗಳ ಆದಿವಾಸಿಗಳಲ್ಲಿ ನಡೆಯುತ್ತಿರುವ ವಿಚಿತ್ರ ಕಲ್ಟ್ (ಮತಪಂಥ)ಗಳ ಹುಟ್ಟು ಮತ್ತು ಬೆಳವಣಿಗೆಗಳ ಅನೇಕ ಸಾಕ್ಷ್ಯಚಿತ್ರಗಳನ್ನು ತಯಾರಿಸಿದ್ದಾನೆ. ಈ ಕಲ್ಟ್‌ಗಳೊಡನೆ ಕ್ರೈಸ್ತಮತದಂತಹ ಮತಗಳಿಗಿರುವ ಸಾಮ್ಯಗಳನ್ನು ಚರಿತ್ರೆ ಮತ್ತು ಸಮಾಜಶಾಸ್ತ್ರಗಳ ಅನೇ ಅಧ್ಯಯನಗಳು ಈಗಾಗಲೇ ತೋರಿಸಿಕೊಟ್ಟಿವೆ.

ಕೆಟ್ಟವರು ಕೆಟ್ಟ ಕೆಲಸ ಮಾಡುವುದಿರಲಿ, – ಒಳ್ಳೆಯವರಿಂದಲೂ ಕೆಟ್ಟ ಕೆಲಸ ಮಾಡಿಸಬಲ್ಲ ಕೇಡಿಗ ಸಾಧನೆ ಮತಗಳಿಂದ ಮಾತ್ರ ಸಾಧ್ಯ; ಇದನ್ನು ಎಲ್ಲ ಮತಗಳೂ ಸಾಧಿಸಿವೆ. ಎಲ್ಲ ದೈವಿಕ ಮತವಾದಿಗಳೂ ತಮ್ಮ ತಮ್ಮ ಮತಗಳಿಲ್ಲದಿದ್ದರೆ ಮನುಷ್ಯರು ಕರ್ತವ್ಯಗಳನ್ನು ಪಾಲಿಸದೆ ಮೃಗಗಳಾಗಿಬಿಡುವರೆಂದು ಭಯ ಹುಟ್ಟಿಸುತ್ತಾರೆ. ರಕ್ತಬಾಂಧವ್ಯ, ಅದಕ್ಕಾಗಿ ಪ್ರೀತಿ ಮತ್ತು ತ್ಯಾಗ, ಸಹಕಾರ, ಸ್ನೇಹ, ಸಂವೇದನೆ, ಸಹನೆ, ದಯೆ, ಉಪಕಾರ ಮನೋಭಾವ, ಇವು ಮತದತ್ತ ಸದ್ಗುಣಗಳು; ಮತದೊಡನೆ ಇವೂ ನಾಶವಾಗಿಬಿಡುವುವು ಎಂದು ಹೆದರಿಸುತ್ತಿರುತ್ತಾರೆ. ಆದರೆ, ಆಜ್ಞೆಯನ್ನು ಪಾಲಿಸದವರೆದುರು ಈ ಮತನಾಯಕರ ವರ್ತನೆ ಎಲ್ಲ ಸದ್ಗುಣಗಳಿಗೆ ವಿರುದ್ಧವಾದ ಮಹಾಕ್ರೌರ್ಯದಲ್ಲೇ ನಡೆದಿರುವುದು ಚರಿತ್ರೆಗಳಲ್ಲಿ ದಾಖಲಾಗಿದೆ. ಬಹು ಮುಖ್ಯವಾಗಿ, "ಈ ಎಲ್ಲ ಸದ್ಗುಣಶೀಲತೆಗಳು ಡಾರ್ವಿನ್‌ನ ವಿಕಸನದ ಹಂತಗಳಲ್ಲಿಯೆ ಅನೇಕ ಪ್ರಾಣಿಭೇದಗಳಲ್ಲಿ, ಆಗಲೆ ಬೆಳೆದುಬರುತ್ತಿದ್ದ ವರ್ತನೆಗಳು" ಎಂಬುದನ್ನು ಡಾಕಿನ್ಸ್ ಅನೇಕ ರಂಜಕ ನಿದರ್ಶನಗಳೊಡನೆ ತೋರಿಸಿ ಕೊಡುತ್ತಾನೆ. ಪ್ರಕೃತಿಸಹಜ ಪ್ರೇಮದಂತಹ ಸಾಂಸ್ಕೃತಿಕ ಮಧುರಗುಣಗಳನ್ನು ಸಹ ಮತೀಯರು ವಿರೋಧಿಸುವುದು ಎಲ್ಲ ಇತಿಹಾಸ, ಕಾವ್ಯಗಳಲ್ಲೂ ಪ್ರಸಿದ್ಧ. ಸ್ಯಾಮ್ ಹ್ಯಾರಿಸ್ ನಡೆಸಿದ ಅಮೆರಿಕದ ಸಂಸ್ಥಾನಗಳ ಒಂದು ಸರ್ವೆ (ಸಮೀಕ್ಷೆ)ಯಲ್ಲಿ, ಕಡಿಮೆ ಮತೀಯ ನಂಬಿಕೆಯ ಡೆಮೊಕ್ರಾಟ್ ಸಂಸ್ಥಾನಗಳಿಗಿಂತ ಅತಿ ಹೆಚ್ಚು ನಂಬಿಕೆಯ ರಿಪಬ್ಲಿಕನ್ ಸಂಸ್ಥಾನಗಳಲ್ಲಿ ಹೀನ ಅಪರಾಧಗಳ ಸಂಖ್ಯೆ ಸುಮಾರು ಎರಡರಷ್ಟಿದೆ; "ಮತೀಯತೆ ದುರ್ಗುಣಗಳನ್ನು ಕಡಿಮೆ ಮಾಡುವುದಿಲ್ಲ ಮತ್ತು ಮತೀಯತೆ ಕಡಿಮೆಯಾಗಿರುವಲ್ಲಿ ದುರ್ಗುಣಗಳು ಹೆಚ್ಚುವುದಿಲ್ಲ" ಎನ್ನುವುದಂತೂ ಖಚಿತವಾಗುತ್ತದೆ. "ದೇವರೆಂಬ ಪೊಲೀಸನಿದ್ದಾನೆ ಎಂಬುದಕ್ಕಷ್ಟೆಯೆ ನಾವು ಗುಣವಂತರಾಗಿದ್ದರೆ, ಸುಳ್ಳು ಹೇಳದಿದ್ದರೆ, ಸಾಕೇ ?" ಎಂದು ಪ್ರಶ್ನೆ ಹಾಕುತ್ತಾನೆ ಡಾಕಿನ್ಸ್. (ನಮಗೂ ಒಂದು ಮುಖ್ಯ ಪ್ರಶ್ನೆ: ಸರಾಸರಿಗಿಂತ ಹೆಚ್ಚು ದೈವಭಕ್ತರಿರುವ ದೇಶಗಳಲ್ಲಿ ಮಿಕ್ಕವಕ್ಕಿಂತ ಅಪರಾಧ ಸಂಖ್ಯೆಗಳು ಏಕೆ ಕಡಿಮೆಯಲ್ಲ?)

ಎಲ್ಲ ಮತಗಳು ತಮ್ಮವೆ ಸಂಪ್ರದಾಯ ಮತ್ತು ಗ್ರಂಥಗಳು ಹೇಳುವ ಪೂಜ್ಯ ಪುರುಷರುಗಳನ್ನು ಬದುಕಿಗೆ ಆದರ್ಶವಾಗಿ ಅನುಸರಿಸಬೇಕೆಂದೂ ಆದೇಶಿಸುತ್ತವೆ. ಬೈಬಲ್‌ನ ಹಳೆಯ ಒಡಂಬಡಿಕೆಯ ಆದರ್ಶ ಪುರುಷರು: ಜೋನಾನ ಮಗ ಲಾಟ್, ಲೆವೈಟ್‌ಗಳು, ಅಬ್ರಹಾಮ್, ಜೆಫ್ಟ, ಮೋಸೆಸ್, ಜೋಷ್ವ ಮುಂತಾದವರು. ಬೈಬಲ್‌ನ ಕತೆಗಳಲ್ಲಿ ಇವರೆಲ್ಲ ಇಂದಿನ ಸಾಮಾಜಿಕ ಸಂಸ್ಕೃತಿ, ನ್ಯಾಯ, ಕಡೆಗೆ ನೀತಿಯಲ್ಲೂ ಸಹ ಹೀನ, ಘೋರ ಅಪರಾಧಗಳೆಂದು ಪರಿಗಣಿಸಲ್ಪಡುವ ಹಲವಾರು ಕೃತ್ಯಗಳನ್ನು ನಡೆಸಿದವರೆ; ನಡೆಸಿಯೇ ಪ್ರಸಿದ್ಧರಾದವರೇ. ಕೃತ್ಯಗಳಲ್ಲಿ ಹಲವು ಈ ರೀತಿಯವು; ಮತನೀತಿ ಪಾಲಿಸದ ನಗರವನ್ನು 'ಧರ್ಮ' ಯುದ್ಧಗಳ ವಿಜಯದ ನಂತರ ಶಿಕ್ಷಿಸಲು, ಹೆಂಗಸರು ಮಕ್ಕಳೆನ್ನದೆ ನಾಗರಿಕರೆಲ್ಲರ ಸಾಮೂಹಿಕ ಹಿಂಸಾಚಾರ, ಹತ್ಯೆ, ಅತ್ಯಾಚಾರ, ಲೂಟಿ, ದಾಸ್ಯತ್ವ; ಶತ್ರುಗಳ ಮೇಲೆ ಸಂಚಿಗೊ, ಮತಶ್ರೇಷ್ಠರ ರಕ್ಷಣೆಗೊ ಅಥವಾ ಸಮ್ಮಾನಕ್ಕೊ, ಪತ್ನಿ, ಉಪಪತ್ನಿ, ಪುತ್ರಿಯರ ಬಳಕೆ; ಪುತ್ರರನ್ನು ಬಲಿ ಕೊಡುವ ಬೆಂಕಿಯಲ್ಲಿ ಹುರಿದು ದೈವಪುರುಷರಿಗೆ ಅರ್ಪಿಸುವಷ್ಟು ಮತಶ್ರದ್ಧೆ, ಇತ್ಯಾದಿ. (ಬಹಳ ಮತಗಳ ಪುರಾಣ, ಪುಣ್ಯಕಥೆಗಳಲ್ಲೂ ಇಂತಹವು ಹುಡುಕಿದರೆ ಸಿಕ್ಕುತ್ತವೆ.) ಭಕ್ತರು ಮತ್ತೊಬ್ಬ ದೇವನಲ್ಲೂ ಆಸಕ್ತರೆಂಬ ಸಂದೇಹವಾದಾಗ ದೇವರು ಆದೇಶಿಸುವ ಕ್ರೂರಕೃತ್ಯಗಳು, ಸತಿ ಮತ್ತೊಬ್ಬನತ್ತ ಕಣ್ಣು ಹಾಯಿಸಿದಳೆಂದು ಸಂದೇಹಿಸುವ ವೀರನ ಉನ್ಮಾದವನ್ನೂ ಮೀರುವುದೆಂದು ಡಾಕಿನ್ಸ್ ಟೀಕಿಸುತ್ತಾನೆ. (ಒಥೆಲೊ ಕೊಂದದ್ದು ಸಂದೇಹಿತಳನ್ನು ಮಾತ್ರ; ಅವಳ ಊರಿನಲ್ಲಿ 'ಉಸಿರಾಡುವ ಎಲ್ಲ ಪ್ರಾಣಿಗಳನ್ನು ನಿಶ್ಶೇಷ ಮಾಡಲು' ಆಜ್ಞೆ ಮಾಡಲಿಲ್ಲ; ಅವಳನ್ನು ಊರಿನವರೆ ಕಲ್ಲೆಸೆದು ಕೊಲ್ಲಿರೆನ್ನಲಿಲ್ಲ) ಅರಬ್-ಇಸ್ರೇಲ್ ಹಗೆತನದ ಮೂಲವನ್ನರಿಯಲು ಟಾಮರಿನ್ ಎಂಬಾತ ಇಸ್ರೇಲ್‌ನಲ್ಲಿ ನಡೆಸಿದ ಮಕ್ಕಳ ಸಮೀಕ್ಷೆಯಲ್ಲಿ, "ಜೋಷುವಾ ಜೆರಿಕೊ ನಗರದಲ್ಲೆಲ್ಲರ ಹತ್ಯೆ ಇತ್ಯಾದಿ ಮಾಡಿದ್ದು ತಪ್ಪೆ, ಸರಿಯೆ ?" ಎಂಬ ಪ್ರಶ್ನೆಗೆ ಶೇಕಡ ೬೬ಕ್ಕೂ ಹೆಚ್ಚು ಮಕ್ಕಳು ಸರಿಯೆಂದು ಮೆಚ್ಚಿದರು. ಆದರೆ, ಇದೇ ವಿದ್ಯಮಾನಗಳು ಚೈನಾದಲ್ಲಿ ನಡೆದವೆಂದು ಬದಲಾಯಿಸಿ ಆ ಮಕ್ಕಳ ಸಹಪಾಠಿಗಳಿಗೆ ಹೇಳಿದಾಗ ಶೇಕಡ ೭೫ ಮಕ್ಕಳು ಅವನ್ನು ದುಷ್ಕೃತ್ಯಗಳೆಂದರು. ಎಲ್ಲ ಮತಗಳ ಉಗ್ರವಾದಿಗಳೂ ಬಾಲ್ಯದಿಂದಲೆ ಮತಗ್ರಸ್ತರಾದವರೇ ಎಂಬುದೂ ಇಲ್ಲಿ ಗಮನಾರ್ಹ

ಹೊಸ ಒಡಂಬಡಿಕೆಯ ಜೀಸಸ್, ಹಳೆಯ ಅತಿಕ್ರೌರ್ಯದ ದೇವರುಗಳ ಎದುರಿನಲ್ಲಿ, ಒಬ್ಬ ಒಳ್ಳೆಯ ಮಹಾಪುರುಷ. ಆದರೆ ಕ್ರೈಸ್ತಮತದ ಬುನಾದಿಯಲ್ಲೇ ಅತಿಮುಖ್ಯ ಸಮಸ್ಯೆಗಳನ್ನು ಒಡ್ಡುವ ಜೀಸಸ್‌ನ ನಂಬಿಕೆಗಳನ್ನು ಪ್ರಶ್ನಿಸಬೇಕಾಗುತ್ತದೆ. (ಪರಮತೀಯರಿಗಂತೂ ಇವೆಲ್ಲ ಎಂದಿಗೂ ಅರ್ಥವಾಗದ ಮೂಲಭೂತ ಸವಾಲುಗಳು. ಬೇಡವೆಂದಾಗ ಸೇಬನ್ನು ತಿಂದಮಾತ್ರಕ್ಕೆ ಈವ್‌ನ ಅಪರಾಧ, ಪ್ರಪಂಚದ ಎಲ್ಲ ಕಷ್ಟಗಳಿಗೆ ಮೂಲವಾಗುವಷ್ಟು ಮಹಾಪಾಪವಾಯಿತೆ ? ಕರುಣಾಮಯಿ ಆದ ಅವಳ ತಂದೆ ಕಠೋರ ಶಾಪವನ್ನು ಕೊಡಬೇಕಿತ್ತೆ? ಹಳೆ ಒಡಂಬಡಿಕೆಯ ಎಲ್ಲ ಅತ್ಯಾಚಾರದ ಕತೆಗಳನ್ನು ಜ್ಯೂ ಆದ್ದರಿಂದ ಬಲ್ಲ ಮಹಾದಯಾಳು ಜೀಸಸ್, ಈ ಆಜ್ಞಾಭಂಗವನ್ನ ಇಷ್ಟು ಅತಿಶಯಿಸಬೇಕಿತ್ತೆ? ಈವ್ ಆಡಮ್‌ನೊಂದಿಗೆ ಸಹಜವಾದ ಸಹಜೀವನ ನಡೆಸಲು ಪ್ರಾರಂಭಿಸಿದರೆ ಆ ಮಹಾಪಾಪಕ್ಕೆ ಆದ ಮಹಾಶಿಕ್ಷೆಯೆ ? 'ಲೈಂಗಿಕತೆಯೆ ಮಹಾಪಾಪ', 'ಪ್ರಪಂಚದ ಕ್ಲೇಶಗಳಲ್ಲಿ ಬದುಕುವುದೇ ಮಹಾಶಿಕ್ಷೆ', ಎಂಬ ಅಂದಿನ ರೂಢಿನೀತಿಯೆ ಅವನ ಈ ಅನಿಸಿಕೆಗಳಿಗೆ ಕಾರಣ ಆಗಿರಬಹುದೆ ? ತನ್ನ ತಾಯಿಯನ್ನು ವರ್ಜಿನ್ ಮೇರಿ ಎಂದದ್ದೂ ಇಂತಹುದೆ ಅನಿಸಿಕೆಯಿಂದಲೆ ? ಹೀಗೆ ಹಿಂದೆ ಹೊರೆಸಿದ ಬ್ರಹ್ಮಚರ್ಯೆಯೆ, ೨೦೦೦ ವರ್ಷಗಳ ನಂತರವೂ, ಹಲವು ಪಾದ್ರಿಗಳ ಪಾಪಹೊರೆಯನ್ನು ಇಳಿಸಲಿಕ್ಕೆಂದೆ ಶತಕೋಟಿ ಡಾಲರ್‌ಗೂ ಹೆಚ್ಚು ಜುಲ್ಮಾನೆ ಕೊಡುವ ಸಂಕಷ್ಟಕ್ಕೆ ಮತ್ತು ಪಾಪ ಮುಂದುವರಿಯುತ್ತಲೆ ಇದ್ದರೂ ಕಣ್ಣುಮುಚ್ಚಿರುವ ದುಃಸ್ಥಿತಿಗೆ ಕ್ಯಾಥೊಲಿಕ್ ಚರ್ಚನ್ನು ತಳ್ಳಿತೆ ?) ಈವ್, ತಂದೆ ಬೇಡವೆಂದ ಗಿಡದ ಹಣ್ಣನ್ನು ತಿಂದುದೆ ಮುಂದಿನ ಎಲ್ಲ ಜನರಿಗೂ ಪಾಪದ ಹೊರೆಯಾಯಿತೆ ? ಇದಕ್ಕಾಗಿ ಏಸುವೊಬ್ಬನೇ ಶಿಲುಬೆಯನ್ನು ಏರುವಂತಹ ಹಿಂಸೆಯನ್ನು ಹೇರಿಕೊಂಡು ಸಾಯಬೇಕಾಗಿತ್ತೆ? ಅವನು ಎಲ್ಲರ ಶಿಕ್ಷೆಯನ್ನೂ ಅನುಭವಿಸಿದ ಎನ್ನುವುದರಿಂದ ಯಾರು ಯಾರಿಗೆ (ಈವ್‌ನ ಪಾಪದ ಪರಿಣಾಮವಾಗಿ ಬಂದಂತಹ) ಯಾವ ಯಾವ ಕ್ಲೇಶಗಳು ಕಡಿಮೆಯಾಗಿವೆ? ಬೈಬಲ್‌ನ ಅನೇಕ ಕತೆಗಳು ನಂಬುವಿಕೆಯ ಮಾರಕಮಿತಿಯಲ್ಲಿವೆ, – ಎಲ್ಲ ಮತಗ್ರಂಥಗಳಲ್ಲೂ ಇರುವ ಹಾಗೆಯೆ.

ಜೀಸಸ್ ಸಹ ಒಬ್ಬ ಜ್ಯೂ ಆಗಿದ್ದರೂ ಅವನನ್ನು ಶಿಲುಬೆಗೇರಿಸಲು ಜ್ಯೂ[illegible] ಕಾರಣರೆಂದು ಅವನ ಶಿಷ್ಯಕೋಟಿ ನಿರ್ಧರಿಸಿದ್ದರಿಂದ ೨೦೦೦ ವರ್ಷ ಕಾಲ [illegible] ಮೇಲೆ ಕ್ರೈಸ್ತರಿಂದಲೇ ಹಲ್ಲೆ, ಹಿಂಸಾಚಾರಗಳು ನಡೆದವು. ನಂತರ, ಹಿಟ್ಲರ್ ಒಬ್ಬ[illegible] ದಶಲಕ್ಷಕ್ಕೂ ಹೆಚ್ಚು ಜ್ಯೂ ಗಂಡಸರು, ಹೆಂಗಸರು, ಮಕ್ಕಳಿಗೆ, ಶಿಲು[illegible] ಏರಿಸುವುದಕ್ಕೂ ಹೆಚ್ಚಿನ ಶಿಕ್ಷೆ ಕೊಟ್ಟು ಮುಯ್ಯಿ ತೀರಿಸಿದ; ಚರ್ಚ್ ಬೇಡವೆನ್ನಲಿ[illegible] ಹಿಟ್ಲರ್ ಮತ್ತು ಸ್ಟಾಲಿನ್ ಇಬ್ಬರೂ ನಿರೀಶ್ವರವಾದಿಗಳಾದ್ದರಿಂದ [illegible] ಕೆಟ್ಟವರಾಗಿದ್ದರೆಂಬ ಜನಸಾಮಾನ್ಯರ ನಂಬಿಕೆಯನ್ನು ಅಲ್ಲಗಳೆದು, ಹಿಟ್ಲರ್ ಮ[illegible] ಎಲ್ಲ ನಾಜಿಗಳಿಗೆ ಚರ್ಚ್ ಮತ್ತು ದೇವರು ತಮ್ಮ ಹಿಂದಿರುವರೆಂಬ ನಂಬಿಕೆ ಎ[illegible] ದೃಢವಾಗಿತ್ತೆಂದು ತೋರಿಸಿಕೊಡುತ್ತಾನೆ, ಡಾಕಿನ್ಸ್. ಕ್ರೈಸ್ತಮತೋದ್ಧಾರಕ್ಕಾಗಿ ನಡೆ[illegible] ಅನೇಕಾನೇಕ ಹಿಂಸಾಚಾರ, ಹತ್ಯೆಗಳನ್ನು ಉದಾಹರಿಸುತ್ತಾನೆ.

ಅಮೆರಿಕಾದಲ್ಲೆ, ೧೯೯೪ರಲ್ಲಿ, ಕ್ಯಾಥೊಲಿಕ್ ಪಾದ್ರಿಯೊಬ್ಬ, ಚರ್ಚ್ 'ಶಿಶುಹ[illegible] ಎಂದು ನಿಂದಿಸುವ ಗರ್ಭಪಾತವನ್ನು' ನಡೆಸಿದನೆಂಬ ಕಾರಣವಷ್ಟಕ್ಕೆ ಒಂ[illegible] ಆಸ್ಪತ್ರೆಯ ಒಬ್ಬ ಉತ್ತಮ ವೈದ್ಯ ಮತ್ತು ಸಂಗಡಿಗನನ್ನು ಗುಂಡಿಟ್ಟುಕೊಂದು, ಹುತಾ[illegible] ವೀರನೆನಿಸಿಕೊಂಡ. ಅಮೆರಿಕಾದಲ್ಲಿ ಕ್ರೈಸ್ತರಿಂದ 'ಜಿಹಾದ್' ಹೆಚ್ಚದಿರುವುದಕ್ಕೆ ಕಾರ[illegible] "ಮತೀಯ ಉನ್ಮಾದ ಅಲ್ಲಿ ಇಲ್ಲವೆಂದಲ್ಲ, ಅಲ್ಲಿಯ ಡೆಮೊಕ್ರಸಿ ಶಕ್ತವಾಗಿ[illegible] ಯೆಂದಷ್ಟೆ" ಎನ್ನುತ್ತಾನೆ. (ಹೀಗೆ ಎಂದು, ಯಾವ ನಿರೀಶ್ವರವಾದಿ, ತಾನು ನಂಬದ್ದ[illegible] ಇವರು ನಂಬುವರೆಂಬ ಕೋಪಕ್ಕೆ ಅವರನ್ನು ಹಿಂಸಿಸಿ ಕೊಂದಿದ್ದಾನೆ ?)

ಮತೀಯತೆಯನ್ನು ತ್ಯಜಿಸಿದ ನಂತರವೂ ಮತಗಳೊಡಗೂಡಿ ಬಂದಿರು[illegible] ಗ್ರಂಥ, ಕಾವ್ಯ, ಸಂಗೀತ, ಸೌಧ, ಶಿಲ್ಪ, ಕಲೆಗಳು ಮುಂತಾದವುಗಳನ್ನು ಸಂಸ್ಕೃತಿ[illegible] ರೂಪದಲ್ಲಿ ಹೇಗೆ ಉಳಿಸಿಕೊಳ್ಳಬೇಕು ಎನ್ನುವ ಪ್ರಸ್ತಾಪವೂ ಈ ಪುಸ್ತಕದಲ್ಲಿದೆ.


**ಡಾ|| ಎಮ್.ಎನ್. ಕೇಶವರಾವ್**

೩೮೮, ವೆಂಕಟೇಶದಾಸ್ ರಸ್ತೆ, ಪದ್ಮನಾಭನಗರ, ಬೆಂಗಳೂರು - ೫[illegible]೦





ASIAN EDUCATIONAL SERVICES



Comprehensive & Authoritative Dictionaries & Grammars in all South Indian Languages: Kannada, Malayalam, Telugu, Tamil, Oriya, and in most of the other Indian Languages.

Dictionaries by: Kittle • Bucher • Ziegler • Gundert • Zacharias • Fronhmeyer • Winslow • Fabricius • Visvanatha Pillai • Pope • Percival • Brown • Sankaranarayana • etc.

**Other Subjects :**

Travel • History • Anthropology • Social Science • Customs • Folk lore • Caste & Tribes • Numismatic • Gazetteers • 1857 • Proverbs • Biographies • etc.

All areas of the Indian subcontinent are dealt with in detail; along with comprehensive research material about the rest of the regions of Asia.

Antiquarian Reprints of books first published between the 17th and early 20th century

**Head Office**
6A Shahpur Jat, New Delhi - 110 049
Tel. : +91-11- 26491586, 26494059
Fax : 011-26494946
e-mail : aes@aes.ind.in

www.aes.ind.in

**Chennai Branch**
No.19 (New No.40), Balaji Nagar First Street,
Royapettah, Chennai - 600 014.
Tel. : +91-44-28133040, 28131391,
Mobile : +91-9382293487, Fax : +91-44-28131391,
e-mail : asianeds@md3.vsnl.net.in

ತನ್ನ ಮಕ್ಳುಮರಿ ಸುಖವಾಗಿರ್ಲಿ ಅಂತ ಗೆಜ್ಜೆಭಾವಿ ುಸ್ವಾಮಿ ತಾತನ ಫೋಟೊದ ಮುಂದ ಕುಂತ ಷ್ಯ ಹತ್ತಾರು ಬಾರಿ ಕೈಜೋಡಿಸಿ ನಮಸ್ಕಾರ ಿದ. ಅವತ್ತು ದೀಪ ಮುಡಿಸಿ ಪೂಜೆ ಮಾಡದಕ್ಕೆ ಕುಂತಿರಲಿಲ್ಲ. ದೀಪ ಕಣ್ಮುಚ್ಚಿತು. ತಿಪ್ಪಯ್ಯನ ಯಾಗ ನೂರಾಎಂಟು ನಮೂನೆ ಚಿಂತಿಯ ಾಡು ಹುಳಗಳು ಗುಂಯ್ಗುಟ್ಟತೊಡಗಿದವು. ಬಸವ... ಚಂಬಸವ' ಅನ್ನುತ್ತಾ ಮೇಲೆದ್ದು ೊತ್ತೊಮ್ಮೆ ದೀಪ ಮುಡಿಸಿ ಕೈಮುಗಿದು ಮನಸ್ಸಿನಲ್ಲಿ ನೊ ಬೇಡಿಕೊಂಡ.

ಹತ್ತಾರು ನಿಮಿಷ ನಿಂತುಕೊಂಡೇ ತನಗೆ ನೆನಪಿರೊ ತ್ರ, ಭಜನಿ ಪದ ಹೇಳಿದ. ಮನಸ್ಸಿಗೆ ಸೊಲುಪ ಾಧಾನವಾಗಿ ಕೆಳಗ ಕುಂತ. ನಡುಮನಿಯಿಂದ ಪ್ಪಾ' ಅಂತ ಹಿರಿಮಗ ಕೀರಲು ದನಿಯಲ್ಲಿ ಚೀರಿದ. ಯಿಂದ ಮಗ 'ಉಚ್ಚೆ' ಹೊಯ್ದಿಲ್ಲ, 'ಸಂಡಾಸು' ತಿಲ್ಲ ಅಂಬದು ನೆನಪಾಗಿ ಮಗ ಮಲಗಿದ್ದ ಕಡೆ ೀಡಿದ. ಸಣ್ಣ ಆನಿಮರಿ ಮಕ್ಕಂಡಂಗ ಕಂಡಿತು.

ಉಳ್ಯಾಡಲೂ ಆಗದೆ ಮಗ ಶರಣು ಮಕ್ಕಂಡಲ್ಲೆ ಕುತ್ತಿದ್ದ. ತಿಣುಕಿದಾಗೊಮ್ಮೆ 'ಯಪ್ಪಾ... ಯವ್ವಾ' ತ ಚೀರುತ್ತಿದ್ದ. ''ಇವತ್ತಾದರೂ ಮಗ ಸಂಡಾಸು ಸ್ಲಿ ಸಿವನೆ'' ಅಂತ ಬೇಡಿಕೊಂಡ. ''ಮಗ ಡಾಸು ಕುಂತ್ರನೇ ಇವತ್ತು ತಿನ್ನಾಕ 'ಫುಡ್ಡು' (ಫುಡ್) ತ್ತ... ಇಲ್ಲಂದ್ರ ಸಣ್ಣ ಮಗ ಮಲ್ಲೇಶಿಗೆ ಕೊಡೊ ನ್ನ ಶರಣುಗ ಸೊಲುಪ ಕೊಡಬೇಕು. ನಮ್ಗತೆ ನ್ವಾಸ ವನ್ವಾಸ ಅನುಭವಿಸಿ ಗೊತ್ತಿಲ್ಲ ಇವಕ್ಕ'' ಯುತ್ತಿದ್ದ ದೀಪಕ್ಕೆ ಕೈಮುಗಿಯುತ್ತಾ ಕುಳಿತಿದ್ದ.

ಹೊರಗಡೆ ಬಾಗಿಲು ಬಡಿದ ಸದ್ದಾಯ್ತು. 'ಫುಡ್ಡು ದೈತಿ ಬರ್ರಿ' ಎಂದು ಫುಡ್ಡು ಮಾರಲು ಬಂದವರು ಗಿದರು. ಬರೀ ಮೈಮೇಲೆ ಪೂಜೆಗೆ ಕುಂತಿದ್ದ ಯ್ಯ ದಿಗ್ಗನೆ ಎದ್ದು 'ಬರ್ತೀನಿ ನಿಂದ್ರಪೊ' ಅಂದ.

ಮಕ್ಕಳಿಬ್ಬರು ಕಳೆದ ಎರಡ್ಮೂರು ತಿಂಗಳಿಂದ ಲಗಿದ್ದಲ್ಲೇ ಮಲಗಿದ್ದರು. ಮೂರೊಪ್ಪತ್ತು ಕ್ಣೋದು, ಹೇಲೋದೆ ಕೆಲಸ ಆಗಿತ್ತು. ಗಾಮಿನಲ್ಲಿ ದುಡಿದು ರಾಜರಗತೆ ಮೆರಿಬೇಕಾದ ಕ್ಳು ಹೀಂಗ ಪಾರಮ್ಮು ಕೋಳಿಗಳಂತೆ ತಿನ್ನೋದು – ಲೋದು ಕಂಡು ತಿಪ್ಪಯ್ಯಗ ಜೀವ್ನ ಅಂಬದು ನರಕ ತ ಅನ್ನಿಸಾಕ ಹತ್ತಿತ್ತು. ಮಲ್ಲೇಶಿ ಕುಂಡೀನ ಸರಿಸಿ ೀಡಿದ. ಸಂಡಾಸು ಕೈಗೆ ಹತ್ತಿತು. ತನ್ನ ಸಂಡಾಸು ಬದು ಗಬ್ಬು ವಾಸನಿ ಹೊಡಿತಿದ್ರ... ಮಕ್ಕಳ ಡಾಸು 'ಊದಿನಕಡ್ಡಿಗತೆ ಘಮ ಘಮ ಅಂತೈತಿ. ಲ್ಲಾ ಅವ್ರ ತಿನ್ನೊ ಫುಡ್ಡಿನ ಮಹಿಮಾ ಅಂತ' ಯ್ಯಗ ಮನಸ್ಸಿನಲ್ಲಿ ಅಂದುಕೊಂಡ. ದೊಡ್ಡ ಮಗನ ಡಿ ಕೆಳಗೆ ಕೈಯಾಡಿಸಿದ. ಕೈಗೆ ಹಸಿ ಹತ್ತಲಿಲ್ಲ. ಯ್ಯಗ ಚಿಂತೆಯಾಯ್ತು. ಸಂಡಾಸು ಕೂಡ್ಲಿಲ್ಲಂದ್ರ ತ್ ಕೊಡಂಗಿಲ್ಲ. ಫುಡ್ ಸಿಗಲಿಲ್ಲ ಅಂದ್ರ ಮಕ್ಳ ಪವಾಸ. ಕಿರಿಮಗನ ಕೆಳಗಿದ್ದ ಸಂಡಾಸನ್ನು ಎರಡೂ ಳಿಂದ ನಾಜೂಕಾಗಿ ಬಳಕೊಂಡ ತಿಪ್ಪಯ್ಯ ಬಣ್ಣದ ್ಲಸ್ಟಿಕ್ ಡಬ್ಬಿಗೆ ತುಂಬಿದ. ಗಾಜಿನ ಸಾಮಾನು ಬಂತೆ ಸಂಡಾಸಿದ್ದ ಪ್ಲ್ಯಾಸ್ಟಿಕ್ ಡಬ್ಬಿನ ಹಿಡಕೊಂಡ. ೆ ಹೊರಗೆ ಪುಟ್ಟ ಗಾಡಿ ಸಮೀಪ ನಿಂತಿದ್ದ ಫುಡ್ಡು ತೂಗೋ ಹುಡಗನ ಕೈಗೆ ಕೊಟ್ಟ. ಇನ್ನೊಬ್ಬ ಸೂಟು ಬೂಟುಧಾರಿ ಯುವಕನನ್ನೆ ತಿಪ್ಪಯ್ಯ ದಿಟ್ಟಿಸಿ ನೋಡಿದ. ಪರಿಚಿತ ಮುಖ ಎನಿಸಿದರೂ ಉಟ್ಟ ಬಟ್ಟೆ ಆತನಲ್ಲ ಬುಡು ಅಂತ ಹೇಳಿತು.

''ಅಯ್ಯೋ ತಾತ... ಗುರುತು ಸಿಗಲಿಲ್ಲೇನು ಸಾಹುಕಾರ ಸಣ್ಣಗೌಡ್ರ ಮಗ ಮಹಾಂತೇಶ ನಾನು. ಈ ವರ್ಷದ 'ಫುಡ್ ಫಾರ್ ಸಂಡಾಸ್' ಬಿಜಿನಸ್ ಗುತ್ತಿಗೆ ನಮ್ಮಪ್ಪಗೆ ಸಿಕ್ಕೈತಿ. ೨೦ ಲಕ್ಷ ಕೊಟ್ಟು ಈ ಗುತ್ತಿಗಿ ಹಿಡಕಂಡೀವಿ. ಇಲ್ಲಿ ಬಿಸಿನೆಸ್ ಇಂಪ್ರೂವ್‌ಮೆಂಟ್ ನೋಡಿಕೊಂಡು ಬೇರೆ ಊರಿನ ಬಿಜಿನೆಸ್ ತಗೊಬ್ಬೇಕು ಅಂತ ಮಾಡೀವಿ. ನಮ್ಮ ಕೈಯಾಗ ನೂರು ಜನ ಕೆಲಸಗಾರರು ಅದ್ಯಾರ... ನಿನ್ನ ಮಕ್ಕಳನ್ನ ಬೇಕಾದ್ರ ಕಳಿಸು. ಒಳ್ಳೆ ಕೂಲಿ ಕೊಡ್ತೀವಿ'' ಅಂತ ಮಾತಾಡುತ್ತಾ ತಿಪ್ಪಯ್ಯ ಕೊಟ್ಟ ಸಂಡಾಸನ್ನ ಎಲೆಕ್ಟ್ರಾನಿಕ್ ವೇಯಿಂಗ್ ಮಶಿನ್ ಮ್ಯಾಲ ಇಟ್ಟು ತೂಗುತ್ತಿದ್ದನ್ನೇ ನೋಡಿದ. ಅವನ ಮಾತು ತಿಪ್ಪಯ್ಯಗ ಅರ್ಥ ಆದ್ವೋ ಇಲ್ಲೋ ಹಾಗೆ ದಿಟ್ಟಿಸಿ ನೋಡಿದ.

''ತಾತ, ಈ ಪ್ರಮಾಣ ಭಾಳ ಕಡಿಮೆ ಆಯ್ತು. ಇಷ್ಟಕ್ಕ ಫುಡ್ ಸ್ವಲ್ಪ ಸಿಗುತ್ತ. ಎಕ್ಸ್ಟ್ರಾ ಫುಡ್ ಅಂದ್ರ ನೂರಾರು ರೂಪಾಯಿ ಖರ್ಚು ಆಗ್ತಾವ. ಇನ್ನೂ ಒಬ್ಬರ್ದು ಸಂಡಾಸ್ ಇರಬೇಕಲ್ಲ...'' ಅಂತ ಮಹಾಂತೇಶ ಮೂಗಿನ ಮ್ಯಾಲ ಸ್ವಲ್ಪ ಇಳಿದ ಕೂಲಿಂಗ್ ಗ್ಲಾಸನ್ನ ಹಿಂದಕ್ಕೆ ಸರಿಸಿಕೊಂಡು ತನ್ನ ಕೈಯಲ್ಲಿದ್ದ ಪುಟ್ಟ ಲ್ಯಾಪ್‌ಟಾಪ್‌ನಲ್ಲಿ ನೋಡಿ, ಕೇಳಿದ.

''ಹಿರಿಮಗ ನಿನ್ನೆಯಿಂದ ಯಾಕೊ ಸಂಡಾಸು ಕುಂತಿಲ್ಲ'' ತಿಪ್ಪಯ್ಯ ಆತಂಕದಿಂದ ನುಡಿದ.

''ನಾಳಿ ಬರೊ ರವಿವಾರ ಅಮೆರಿಕಾದಿಂದ ನಮ್ ನೋಡ್ಕೋದ್ರಲ್ಲಿ ಕಂಪನಿಗೆ ಫೇಮಸ್ ಡಾಕ್ಟರುಗಳು ಬರ್ತಾರ. ಅವರು ಇಂತಾ ಪೇಶಂಟ್ ನೋಡ್ಕೋದ್ರಲ್ಲಿ ಎತ್ತಿದ ಕೈ. ಆವತ್ತು ತಪ್ಪದ ಕರ್ಕಂಡು ಬರ್ರಿ. ನೆಗ್ಲೆಕ್ಟ್ ಮಾಡಬಾರ್ದು ತಾತ. ಹೀಗೆ ಒಂದ್ವಾರ ತಿಂದ ಫುಡ್ ಸಂಡಾಸ್ ಆಗ್ಲಿಲ್ಲ ಅಂದ್ರ ಜೀವಕ್ಕನ ಅಪಾಯ. ಓರೇ ಕಾಲುವೆ ದಾಟಿ ಐತಲ್ಲ ಪರಾಪುರದ ಲಾಲಸಾಬನ ಇಬ್ಬರು ಮಕ್ಳು ಹತ್ತಾರು ದಿನ ತಿಂದ ಫುಡ್ ಅರಗದೆ, ಸಂಡಾಸು ಆಗದೆ ಮೊನ್ನಿ ಸತ್ತು ಹೋದ್ರಂತ.'' ತಿಪ್ಪಯ್ಯನ ಮೈಯೆಂಬೊ ಮೈಯಿಗಿ ಚೇಳು, ಹಾವು ಕಚ್ಚಿದಂತೆನಿಸಿತು.

ಸಂಡಾಸ್ ತೂಗಿದ ಪ್ರಮಾಣದಷ್ಟೇ ತೂಕದ ಫುಡ್ಡಿನ ಪ್ಯಾಕೆಟ್‌ನ್ನ ತಿಪ್ಪಯ್ಯಗ ಕೊಟ್ಟ ಮಹಾಂತೇಶ ''ಇಷ್ಟು ಕಡಿಮೆ ಫುಡ್ ತಿಂದ್ರ ಆರೋಗ್ಯ ಸರೀಗಿ ಇರಲ್ಲ. ಹೆಚ್ಚಿನ ಫುಡ್ ಕೊಡಂದೇನು? ಇಬ್ರು ಮಕ್ಕಳಿಗೆ ಇಷ್ಟು ಸಾಲಂಗಿಲ್ಲ.

# ಈ ದಾಹ ದೊಡ್ಡದು



■

ಕಲಿಗಣನಾಥ ಗುಡದೂರು

ಈ ಅಕೌಂಟಿನಲ್ಲಿ ನಿನ್ನ ಹೆಸರಿಲ್ಲ. ಯಾಕ ನಿನಗೆ ಈ ಫುಡ್ ಹಿಡಿಸಂಗಿಲ್ಲೇನು? ಇಡೀ ಊರು ಮಂದಿ ಇದೇ ಫುಡ್ ತಿನ್ನಾಕ ಹತ್ಯಾರ. ಈ ಫುಡ್ಡಿಗೆ ನೀವೇನು ರೊಕ್ಕಾ ಖರ್ಚುಮಾಡೋದು ಬೇಕಾಗಿಲ್ಲ. ನಿಮ್ಮ ಸಂಡಾಸಿಗೆ ಈ ಫುಡ್ಡು ಕೊಡ್ತೀವಿ.'' ಮಹಾಂತೇಶ ಕೊಟ್ಟ ಫುಡ್ಡಿನ ಪ್ಯಾಕೆಟ್ ಹಿಡಿದುಕೊಂಡು ನಿಂತಿದ್ದ ತಿಪ್ಪಯ್ಯ ಮನೆಯ ಒಳಗಡೆ ಇಣಿಕಿ ನೋಡಿದ. ಹಿರಿಮಗ ಶರಣು ಮತ್ತೆ ತಿಣುಕತೊಡಗಿದ. ತಿಪ್ಪಯ್ಯಗ ಒಳಗೊಳಗ ಖುಷಿಯಾಯ್ತು. ಈ ಸಲವಾದ್ರೂ ಸ್ವಲ್ಪ ಸಂಡಾಸು ಕುಂತ್ರ ಬೇಸು. ಹೆಂಗಾನೂ ಮನಿಮುಂದ ಫುಡ್ ಕೊಡಾಕ ಬಂದಾರ.

ಒಳಗೊಗಿ ಹಿರಿಮಗನ ಕುಂಡಿ ಸರಿಸಿ ಕೈಯಾಡಿಸಿದ. ಕೈಗೆ ಹಸಿ ಹತ್ತಿದಾಗ 'ಇವತ್ತು ಮಗನಿಗೆ ಫುಡ್ ಸಿಗುತ್ತ' ಅಂತ ತಿಪ್ಪಯ್ಯ ಹಸಿಯನ್ನೆ ಸವರಿಕೊಳ್ಳತೊಡಗಿದ. ಫುಡ್ ತಿನ್ನಾಕ ಶುರುಮಾಡಿದ ಹೊತ್ತಿನ್ಯಾಗ ಕೈಮುಗಿದು ಬೇಡಿಕೊಂಡ್ಯ . 'ಈ ಹುಡುಗ್ರು ಬಣ್ಣದ ಮಾತುಗಳಿಗೆ ಮರುಳಾಗಿ ಬುಡ್ತಾರ. ದುಡೇದು ಬ್ಯಾಡ ದುಕ್ಕಬಡೇದು ಬ್ಯಾಡ ಅಂದಕೂಡ್ಲೆ ಊರ್‍ಮಂದಿ ನಾ ಮುಂದು ತಾ ಮುಂದು ಅಂತ ಫುಡ್ ತಗಂಡು ತಿಂದು... ಫುಡ್ ತಿಂದ್ರ ಘಮಾಸೋ ಸಂಡಾಸ್ ಕುಂದ್ರುತಾರ ಅಂಬದು. ಸಂಡಾಸನ್ನ ಖರೀದಿಸ್ತಾರ ಅಂಬದಕ್ಕ ಜನ ಮಳ್ಳಾದ್ರು. ಭೂಮಿ ನೇಮ ಮೀರಿ ಹೋದ್ರ ಬದುಕೋದು ಅಷ್ಟು ಸುಲಭ ಅಲ್ಲ ಅಂಬದು ತಿಳಿಲಿಲ್ಲ' ಮನಸ್ಸಿನಲ್ಲಿ ಏನೇನೊ ನೆನೆಯುತ್ತಾ ಹಸಿಯಾದ ಕೈಯನ್ನ ದಿಟ್ಟಿಸಿ ನೋಡಿದ. ನೀರಿನಂತದ್ದು ಹತ್ತಿತ್ತು. ವಾಸ್ನಿ ನೋಡಿದ. ಕೆಟ್ ನಾತ ಬಂತು. ಧೋತರದ ಚುಂಗಿನಿಂದ ಮೂಗು ಮುಚ್ಚಿಕೊಂಡು ಡಬ್ಬಿಗೆ ತುಂಬಿದ. ಹಾಲಿನಂತಾ ಬಣ್ಣದ ಸಂಡಾಸು ಡಬ್ಬಿ ತಳ ಸೇರಿತು. ಆ ಡಬ್ಬೀನ ಮಹಾಂತೇಶನ ಮುಂದ ಹಿಡಿದು, ''ಹಿರಿಮಗ ಶರಣು ಈಗ ಒಂದು ಸೊಲುಪು ಸಂಡಾಸು ಕುಂತಾನ. ತಗಂಡು ಫುಡ್ ಕೊಡಪ'' ಅಂತ ಕೇಳಿದ.

ಮೂಗಿನ ಮುಂದ ಎರಡ್ಮೂರ ಸಲ ಗಾಳಿ ಬೀಸಿಕೊಂಡ ಮಹಾಂತೇಶ ''ಛೀ... ಥೂ... ಕೆಟ್ ವಾಸ್ನಿ'' ಅಂತ ಮೂಗು ಮುಚ್ಚಿಕೊಂಡ. ''ಇದು ನೋಡಾಕಷ್ಟ ಬಿಳಿ ಬಣ್ಣದ ಸಂಡಾಸು ಇದ್ದಂಗೈತಿ. ವಾಸ್ನಿ ಮಾತ್ರ ಹಳದಿ ಸಂಡಾಸಿನಗತೆ ಐತಿ. ಇಂತಾ ಸಂಡಾಸನ್ನ ತಗಂಡ್ರ ಲಕ್ಷಾಂತರ ರೂಪಾಯಿ ನಮ್ ವ್ಯವಹಾರ ಒಂದಾ ದಿವಸಕ್ಕ ದಿವಾಳಿಯಾಗಿ ಹೋಗುತ್ತ. ಸರಿ ತಾತ. ಮುಂದಿನ ಮನೆಗೆ ಹೋ... ಮಹಾಂತೇಶ ಪುಟ್ಟ ಗಾಡಿ ಹಿಂದೆ ಹೊರಟ.

ನೀರಿನಂತ ಬಿಳಿ ಸಂಡಾಸನ್ನ ಮನಿ ಮುಂದಿದ್ದ ಗಟಾರಕ್ಕ ಚೆಲ್ಲಿದ. ಗಾರಿಯಲ್ಲಿದ್ದ ನೀರಿನಿಂದ ಡಬ್ಬಿ ತೊಳೆದ. ಕಿರಿಮಗನ ಸಂಡಾಸು ಘಮಾಸು... ಮಗನ ಸಂಡಾಸು ತನ್ನ ಸಂಡಾಸಿನಗತೆ ನಾರುತ್ತ... ವಿಚಾರ ಮಾಡಿದಂತೆ ತಲೆಯಲ್ಲಿ ಸಂಡಾಸೀನ ಮೇಲೆ ಕೂಡಲು ಬರುವ ಹುಳುಗಳು ಗುಂಯ್ಯುಗುಟ್ಟತೊ...

ಒಮ್ಮಿಂದೊಮ್ಮೆಲೆ ಹೆಂಡತಿ ಬಸಮ್ಮ ಕಣ್ಮುಂದ ಬಂದು ನಿಂತಂತೆ... ಹೆಂಡತಿ ಅಡುಗಿ ಮನಿಯಾಗ ತನಗ ಮತ್ತು ಮಕ್ಕಳಿಗೆ ಅಡುಗಿ ಮಾಡಾಕ ಹ... ಸತ್ತು ಮೂರು ವರ್ಷ ಆದ್ವು ಅಂತ ಅನ್ನಿಸವಲ್ಲು. ಬರ ಬಿದ್ದು, ಬೆಂ... ದುಡಿಯಾಕ ಅದೆಂತಾ ಕೆಟ್ ಗಳಿಗೇಲಿ ಹೋಗಿದ್ವೊ ಏನೋ? ಹುಟ್ಟನಿಂ... ಸಗಣಿ, ಹೊಲದಾಗಿನ ಮಣ್ಣು, ಕೂರಿಗಿ, ಕುಂಟಿ ಮುಟ್ಟಿದ ಕೈಗಳಲ್ಲಿ ... ಕಂಕರಿನ ಪುಟ್ಟಿಗಳು ಬಂದಿದ್ವು. ಹೆಂಗಾದ್ರೂ ಮಕ್ಕಳು ಕೈಗೆ ಬಂದಾರ. ಹೊ... ಕೆಲಸ ನೋಡಿಕೊಂಡು ಹೋಗ್ತಾರ ಅಂತ ಗಂಡ ಹೆಂಡತಿ ದುಡಿಯಾಕೆ... ಕಟ್ಟಿದ ಬಲೀಸುಗಳ ಮ್ಯಾಲ ಸರ್ಕಸ್ ಮಾಡಿದಂತೆ ತಲೆ ಮ್ಯಾಲ ಸಿಮೆಂಟ... ಹೊತ್ಗಂಡು ಬಂದು ಇನ್ನೇನು ನಾ ಇಸ್ಕಬೇಕು ಅನ್ನೊತ್ಲೆ ಮೂರು ಅಂತಸ್ತಿನ... ಮ್ಯಾಲಿಂದ ಬಿದ್ಲು. ಕೆಳಗ ಇಳಿದು ನೋಡತ್ಲೆ ಹೆಂಡತಿ ಹೆಣವಾಗಿದ್ಲು. ... ಮಾತು ಕೇಳಿ ಗಂಟು ಮೂಟೆ ಕಟ್ಗೆಂಡು ಊರ್‍ಕಡಿ ಮುಖ ಮಾಡಿದೆ...

ತಿಪ್ಪಯ್ಯನ ಕಣ್ಣಂಚು ತೇವಗೊಂಡವು. ಬ್ಲೇಡಿನಿಂದ ಫುಡ್ಡಿನ ಪಾಕೀಟ... ಅದರೊಳಗಿದ್ದ ಕದಿರೆಂಟಿನಂತಾ ಫುಡ್ಡನ್ನ ಸ್ವಲ್ಪ ಮುರಿದು ಮಕ್ಕಳಂತೆ ... ಶರಣುನ ಬಾಯಾಗ ಒಂದಷ್ಟು, ಮಲ್ಲೇಶಿ ಬಾಯಾಗ ಒಂದಷ್ಟು, ... ಶರಣು, ಮಲ್ಲೇಶಿ ಫುಡ್ಡನ್ನ ನಿಧಾನವಾಗಿ ತಿನ್ನತೊಡಗಿದರು.

''ಈ ಸುಡುಗಾಡು ಫುಡ್ ತಿಂದ ಮಕ್ಳು ಕುಂಭಕರ್ಣಗತೆ ಆಗ್ಯಾರ. ... ಬರವಲ್ಲು. ನಿಂದ್ರೋದು ದೂರ ಉಳಿತ್ತು. ಹೊಲ ಎಲ್ಲ ಬೀಳು ಬಿಟ್ಟು ... ಮಂದಿ ದುಡಿಯೋದ ಮರ್‍ತು ಬುಟ್ಟಾರ. ಹೊಟ್ಟೆಗೆ ಹಿಟ್ಟು ಸಿಗಲಿಲ್ಲಂದ...




ರೂ. 25



ರೂ. 40



ರೂ. 40



ರೂ. 60


ರೂ. 30



ರೂ. 30



ಶ್ರೀ ಸರಸ್ವತಿ ಬುಕ್ಸ್

ನಂ.342, ಚಿತ್ರಮಾಲ ಅಪಾರ್ಟ್‌ಮೆಂಟ್ಸ್
ಬೈರಸಂದ್ರ, ಜಯನಗರ 1ನೇ ಬ್ಲಾಕ್ ಪೂರ್ವ
ಬೆಂಗಳೂರು - 560 011
ದೂರವಾಣಿ : 22441417, 98458 08500



ರೂ. 40

ಬೇಸು. ಈ ಪುಡ್ಡಿನ ಸಾವಾಸಕ್ಕ ಹೋಗಬಾರ್ದು. ಉತ್ತಿ ಬಿತ್ತಿ ಬೆಳೆಯೊ ಂತ ೫ ಎಕರೆ ಭೂಮ್ಯಾಗ ೩ ಎಕರೆ ಇಲಿಪಾಷಾಣದಂತ ಪುಡ್ಡು ೋರಿಗೆ ಮಾರಿಬುಟ್ಯ. ನನಗೇನು ಗೊತ್ತಿತ್ತು. ಬಿಸ್ಕಿಟ್, ಬ್ರೆಡ್ಡಿನಗತೆ ು ಅಂತ ತಿಳಿದಿದ್ದೆ. ಹೊಲ ಮಾರಿದ ಮ್ಯಾಲ ದನಕರು ಮಾರಿಬುಟ್ಯ. ಎಲ್ಲಾ ಾನಗೇಡಿ ಆದಂಗ ಆಗೀನಿ. ಆ ಸಾವಕಾರನ ಒತ್ತಾಯ ಮಾಡಿದ. ಹೆಚ್ಚಿಗೆ ಬರುತ್ತ ಕೊಟ್ಟುಬುಡು ಅಂತ. ಒಂದು ತಿಂಗಳು ಜನ ಕೇಳಿದಷ್ಟು ಪುಡ್ಡು ಜನ ಕದ್ದು ಮುಚ್ಚಿ ಸಂಡಾಸ್ ಮಾಡಾಕ ಸುರುಮಾಡಿದ್ರು. ಬೆಳ್ಳಿ ಬಂಗಾರ್ದಗತೆ ನ್ನ ಕಳ್ಳರ ಕಣ್ಣಿಗೆ ಕಾಣಲಾರ್ದಂಗ ಬಚ್ಚಿಡಾಕಹತ್ತಿದ್ರು. ಇಂತಾ ಕೆಟ್ಟ ಕಾಲ ತ ನನ್ನ ಕನಸಿನ್ಯಾಗೂ ನೆನಸಿಗೆಂಡಿರಲಿಲ್ಲ...

ು 'ವ್ಯಾಕ್... ವ್ಯಾಕ್...' ಅಂತ ವಾಂತಿ ಮಾಡಿಕೊಂಡಾಗಲೆ ತಿಪ್ಪಯ್ಯನಿಗೆ ಲ್ಲಿ ಅದೀನಿ ಅಂಬದು ನೆನಪಾಗಿ ಮಿಟಗಿಬಿದ್ದ. ಆವಾಗ ಕುಂತ ಸಂಡಾಸಿನಗತೆ ತ್ತು. ತಿಪ್ಪಯ್ಯನಿಗೆ ಒಮ್ಮಿಂದೊಮ್ಮೆಲೆ ಏನೋ ನೆನಪಾಗಿ ಕೇಳಿದ, ''ನಿನ್ನೆ ನಗ ಮಾಡಿಕೊಂಡಿದ್ದ ಅನ್ನ ತಿಂದ್ಯೇನು? ಪುಡ್ಡು ತಿಂದ ಮ್ಯಾಲ ಬ್ಯಾರೆ ಅನ್ನ ಹತ್ತಲ್ಲ ಅಂತ ಗೊತ್ತಿದ್ರೂ ಯಾಕ ತಿನ್ನಾಕಹೋದಿ. ಹಿರೇರು ಮಾತು ಅಂದ್ರ ಕಾಲ್ಕಸ...'' ವಟಗುಟ್ಟುತ್ತಾ ವಾಂತಿಯನ್ನು ಬಳದು ಎತ್ತುಗಳನ್ನು ಕಟ್ಟುತ್ತಿದ್ದ ಕ್ಕೆ ಚೆಲ್ಲಿದ. ಅಡುಗಿಮನ್ಯಾಕ ಹೋಗಿ ಒಂದು ಚೆಂಬು ತಂದು 'ನೀರು ಕುಡಿ' ಬಾಯಿ ಮುಂದ ಹಿಡಿದ. ''ಯಪ್ಪಾ ಆ ನೀರು ಕುಡಿಸಬ್ಯಾಡ. ಮತ್ತಿಟಲ್ಲ ಭೇದಿಯಾಗುತ್ತ. ಫುಡ್ಡಿನ ಕುಡ ಕೊಡ್ತಾರಲ್ಲ ಕಂಪನಿ ನೀರನ್ನ ಕುಡಿಸ್ಬೇಕು.'' ಮರುತ್ತುಬುಟ್ಟಿದ್ಯ...'' ಅಂತ ನಿನ್ನೆ ಖರೀದಿ ಮಾಡಿದ್ದ ಕಂಪನಿ ಮಿನರಲ್ ನ್ನ ಗ್ಲಾಸಿಗೆ ಹಾಕಿಕೊಂಡು ಶರಣುನ ಬಾಯಾಗ ಹಾಕಿದ.

ನ್ನೆ ಬ್ಯಾಡಂದ್ರೂ, ಹೊಟ್ಟಿ ಹಸದೈತಿ ಅಂತ ಅಣ್ಣ ನೀನು ಮಾಡಿಟ್ಟು ಹೋಗಿದ್ದ ದ್ದುಬುಟ್ಟ'' ಮಲ್ಲೇಶಿ ತೊದಲುತ್ತಾ ಮಾತಾಡಿದ. ಮೈಮುರಿದು ದುಡಿದು ತನ್ನ ಕಾಗಿದ್ದ ಮಕ್ಕು ಹೀಂಗ ರೋಗಿಗಳಂತೆ ಮಕ್ಕಂಡಿದ್ದು ನೆನೆದು ತಿಪ್ಪಯ್ಯ ಬೆಚ್ಚಿಬೀಳ್ತಿದ್ದ. 'ನಾವ್ ತಿನ್ನೊ ಅನ್ನಕ್ಕ ನಾವಾ ಬೆಳೆ ಬೆಳಿಬಕು. ಇನ್ನೊಬ್ರು ಅನ್ನಕ್ಕ ಬಾಯಿತೆರ್ದದ್ರ ಮುಗೀತಿ ನಮ್ ಕಥಿ. ಹದ್ದು ಕಾಗಿಗಳಿಗೆ ನಮ್ ತುಂಡು ಮಾಡಿ ಹಾಕಿದಂಗ. ಮುಂಜಾನಿಲಿಂದ ಮಕ್ಕಳ ಆರೈಕಿ ಮಾಡೋದ ಹೊಟ್ಟಿ ಹಸ್ದು ನಾಯಿ ಆದಾಂಗ ಆಗೈತಿ. ಏನನ ಮಾಡಿಕ್ಯಂಡು ತಿನಬೇಕು.' ಪ್ಲಸ್ಟಿಕ್ ಚೀಲದಲ್ಲಿ ಕೈಹಾಕಿ ನೋಡಿದ. ಎರಡ್ಮೂರು ಸೇರು ಅಕ್ಕಿ ಇದ್ದಿರಬೇಕು ಅಂದುಕೊಂಡ. ಎರಡು ಹಿಡಿ ಅಕ್ಕಿ ತಗಂಡು ಬೋಗೋಣಿಗೆ ಹಾಕಿದ.

ಯಾಣ್ಣಾ, ತಿಪ್ಪಯ್ಯಣ್ಣ ಮನ್ಯಾಗ ಅದಿಯೇನಪ'' ಅಂತ ಹೊರಗ ಯಾರೊ ರು. ಅಕ್ಕಿ ಹಾಕಿದ ಬೋಗೋಣಿ ಹಿಡಿದು ಹೊರಗ ಬಂದು ನೋಡಿ, ಬಸಣ್ಣ, ಬಾರಪ್ಪೊ ಒಳಗ ಬಾ'' ಅಂತ ಕರೆದ.

ಬೇಸು ಅದಿಯೇನಪ ಯಣ್ಣಾ?'' ''ಬೇಸು ಅಂದ್ರ ಬೇಸು'' ನಿರಾಸಕ್ತಿಯಿಂದ ದ. ''ಯಣ್ಣಾ ಒಂದು ಸೇರು ಅಕ್ಕಿ ಸಿಗ್ತಾವೇನು ಅಂತ ಕೇಳಾಕ ಬಂದ್ಯ. ದ ಅಕ್ಕಿ ಜೋಳ ಸಿಗಲಾರ್ದ ಉಪವಾಸ ಅದೀನಿ.''

ಂತಲ್ಲಿನೂ ಭಾಳ ಇಲ್ಲ. ಇದ ಇಲ್ಲಿ ಆದ್ಯಾವಲ್ಲ ಇಷ್ಟ. ಇಷ್ಟು ಅಕ್ಕಿ ಆದ್ದು ಮುಗೀತಿ ನಾ ಉಣ್ಣದು.'' ''ಆವಾಗ ಹೊಲದಾಗ ಬೆಳಿ ಬೆಳ್ತಿದ್ವಿ. ಬೆಳದದ್ದನ್ನು ನಿ ಮಂದಿ ವರ್ಷಪೂರ್ತಿ ತಿಂದು ಸುಖವಾಗಿ ಇರ್ತಿದ್ವಿ. ಎಲ್ಲಾ ಸುಡುಗಾಡು ಕಾಲ . ಅಕ್ಕೀಗಿ ಜ್ವಾಳಕ್ಕ ಸಾಮಾನು ಮಾರೋದನ್ನ ನೋಡಿದ್ವಿ. ಥೋ ಸಂಡಾಸಿಗೆ ಕೊಡ್ತಾರಂದ್ರ... ವಾಕರಿಕಿ ಬರುತ್ತ. ಉಪವಾಸ ಸತ್ರೂ ಚಿಂತಿಲ್ಲ... ಆ ಪುಡ್ಡನ್ನ ತಿನ್ನೋದಿಲ್ಲ...'' ಹಟ ಮಾಡೊ ಮಕ್ಕಳಂತೆ ಮಾತಾಡಿದ. ''ಯಾರೇನು ಡು ಸಾಯ್ತಾರೇನು ಬಸಣ್ಣ, ನನ್ತಲ್ಲಿ ಅಕ್ಕಿ ಇರೊಷ್ಟು ದಿನ ಇಬ್ರೂ ಕೂಡಿ ು, ಮುಗಿದ ಮ್ಯಾಲ... ಆ ಚಂಬಸವನ ಮ್ಯಾಲ ವಜ್ಜ ಹಾಕಿ ಇದ್ದುಬುಡಮು.'' ಾನು ಮುಂಜೇನಿ ದಡ್ಡಿ ಕುಂದ್ರಾಕಂತ ನಮ್ ಬೀಳು ಹೊಲಕ್ಕ ಹೋಗಿದ್ಯ. ್ಲಿ ನನ್ನ ಮಕ್ಕು ಕುಂತ ಸಂಡಾಸನ್ನ ಯಾರೊ ಕಳ್ಳತನ ಮಾಡಿಕಂಡು ಬುಟ್ಟಿದ್ರು. ಹೋಗುವಾಗ ಗಿಣಿಗೆ ಹೇಳಿದಂಗ ಹೇಳಿ ಹೋಗಿದ್ಯ. ಕುಂತ ನ್ನ ಮಂದಿ ಕಣ್ಣಿಗೆ ಕಾಣಲ್ಲಾರ್ದಂಗ ಬಚ್ಚಿ ಇಡ್ರಿ. ತಿಣಕದು ಕಂಡ್ರ ಸಾಕು... ಯಾರು ಇಲ್ಲದ್ದು ನೋಡಿ, ಕುಂಡಿಗೆ ಕೈ ಹಾಕಿ ತಗಂಡು ಹೋಗಿಬುಡ್ತಾರ ಮನುಸೇರನ್ನ ಕೊಲ್ಲಿ ಸಂಡಾಸು ತಕ್ಕಾಂತರೋ ಏನೋ ಮುಂದೊಂದು ಮಗ ಉಪವಾಸ ಮಕ್ಕಂಡಾನ. ಫುಡ್ ಖರೀದಿ ಮಾಡಬೇಕು ಅಂದ್ರ ಉಟ್ಟ ಬಟ್ಟೆ ಮಾರಿ ತಗಳಬಕು...'' ಬಸಣ್ಣ ಲೊಚ್ಚಗುಟ್ಟುತ್ತಾ ಹೇಳಿದಾಗ ಆತನ ಕಣ್ಣಗಳಿಂದ ಆತನಿಗರಿವಿಲ್ಲದಂತೆ ಕಣ್ಣೀರ ಸಾಲು ಸುಕ್ಕುಗಟ್ಟಿದ ಕಪಾಳದ ಮ್ಯಾಲಿಂದ ಹರಿಯಿತು.

ತಿಪ್ಪಯ್ಯ ಬೋಗೋಣಿನ ಒಲಿ ಮ್ಯಾಲಿಟ್ಟು ಅನ್ನ ಮಾಡತೊಡಗಿದ. ನಿಧಾನವಾಗಿ ಕಟ್ಟಿಗೆ ಉರಿಯತೊಡಗಿತು. ಉರಿಯುತ್ತಿದ್ದ ಒಲೆ ನೋಡಿದ ತಿಪ್ಪಯ್ಯಗ ಸುಗ್ಗಿ ಕಾಲದಾಗ ಜೋಳದ ಬೆಳಸಿ ಸುಡಲಾಕ ಹಚ್ಚುತ್ತಿದ್ದ ಉರಿ ಕಣ್ಮುಂದ ತೇಲಿ ಬಂತು. ''ಅದೇನು ಸಂಭ್ರಮ... ಹಾಲ್ತುಂಬಿದ ಬೆಳಸಿ, ಕಡಲೆಕಾಳು ಸುಟ್ಟು ತಿನ್ನೋದು ಅಂದ್ರ... ಅಂತಾ ಕಾಲ ಮತ್ತೆಂದೂ ಬರಂಗಿಲ್ಲೊ ತಮ್ಮಾ...'' ನಿಟ್ಟುಸಿರು ಬಿಟ್ಟು ಹೇಳಿದ.

''ಯಣ್ಣಾ ಮೊದ್ಲು ಗೊಬ್ಬರ ಕಸ್ಗಂಡ್ರು, ತಿಪ್ಪೆ ಗೊಬ್ರದ ಬದ್ಲಾಗಿ ಸುಡುಗಾಡು ಗೊಬ್ಬರ ಎಣ್ಣಿ ಹೊಡಿಲಾರ್ದ ಬೆಳಿ ಬರಲ್ಲ ಅಂತ ನಮ್ಮಂತಾ ಹಳ್ಳಿ ರೈತರನ್ನ ನಂಬಿಸಿದ್ರು. ಆ ಮ್ಯಾಲ ನಮ್ ಬೀಜಾನ ಸುಮಾರು ಅಂತ ಹೈಬ್ರಿಡ್ ಬೀಜ ಕೊಟ್ರು. ಹಾಲು, ಮಜ್ಜಿಗೆ, ಎಳನೀರು ಪಾನಕ ಕುಡುದ ಮಂದಿಗೆ ಕಂಪನಿ ಸೋಡಾ ಕೊಟ್ಟು ಕೋತಿಗತೆ ಕುಣಿಸಿದ್ರು. ಮಳ್ಳ ಮಂದಿ ಅಂಗೈಯಾಗ ಗಟ್ಟಿ ಬಂಗಾರ ಇಟಗಂಡು ಹಿತ್ತಾಳಿ ತುಣುಕಿಗೆ ಬಾಯಿ ಬಾಯಿ ಬಡಕಳ್ಳಾಕ ಹತ್ಯಾರ.'' ಬಸವಣ್ಣ ಸ್ವಲ್ಪ ಸಿಟ್ಟಿಲೆ ಮಾತನಾಡಿದ.

''ಈಗ ನೋಡು ಹೊಲ್ದಾಗ ಬೆಳಿ ಬೆಳೆಯೋದ ಬ್ಯಾಡ. ಮನ್ಯಾಗ ಕುಂತ್ಗಂಡೆ ತಿನ್ರಿ. ಪುಕ್ಕಟೆ ಪುಡ್ಡು ಕೋಡ್ತೀವಿ. ನೀವು ಕುಂತ ಸಂಡಾಸಷ್ಟ ನಮಗ ಮಾರಿದ್ರ ಸಾಕು ಅಂತ ಹೇಳಿ ನಮ್ಮ ಹೊಲಾ, ಮನಿ, ದುಡಿಯೋ ಶಕ್ತೀನ ಕಸಗೊಳ್ಳಾಕ ಸಂಚು ಮಾಡ್ಯಾರ.'' ''ಜನರ್ನ ಮಳ್ಳು ಮಾಡಾಕೆ ಇದೊಂದು ನಾಟಗಪೊ ಯಣ್ಣಾ... ರೊಕ್ಕಾ ಕೊಟ್ಟು ಫುಡ್ ತಗಳ್ರಿ ಅಂದ್ರ ಯಾರು ತಗಳ್ತಿದ್ರು. ಮೊದ್ಲು ಹೊಟ್ಟಿ ತುಂಬಷ್ಟು ಪುಕ್ಕಟೆ ಫುಟ್ ಕೊಡ್ತಿದ್ರು. ಈಗ ನೋಡಿದ್ರ ಸಂಡಾಸಿನ ತೂಕದಷ್ಟು ಕೊಡ್ತೀವಿ ಅಂತಾರ. ಇಲ್ಲಿ ಸಂಡಾಸನ್ನ ಅಮೆರಿಕಾಕ್ಕ ಕಳಿಸ್ತಾರಂತ. ಸಂಡಾಸ್ನಿಂದ ಅದ್ಯಾವುದೊ ಔಷಧ ತಯಾರಿಸ್ತಾರಂತ. ಇದೆಷ್ಟು ಖರವೊ... ಸುಳ್ಳೊ, ಬ್ರಿಟೀಷರ ಕಾಲದಾಗೂ ಇಷ್ಟು ಅತಂತ್ರ ಆಗಿರ್ಲಿಲ್ಲ ನಮ್ ಬದುಕು. ಹಲ್ಲಾಗ ಸಿಗಿಸಿಕೊಳ್ಳೊ ಕಡ್ಡಿ ಮೊದ್ಲು ಮಾಡಿ ಬ್ಯಾರೆ ದೇಶದಿಂದ ಬರಾಕ ಹತ್ಯಾವ. ಇವ್ರೆಲ್ಲಾ ಕೊಳ್ಳೆ ಹೊಡ್ಯಾಕ ಬಂದೋರು ಯಣ್ಣಾ... ನಮ್ಮನ್ನ ಸಾಯ್ಸಿ... ನಮ್ ಗೋರಿ ಮ್ಯಾಲ ತಮ್ಮ ಅರಮನಿಯಂತಾ ಫ್ಯಾಕ್ಟರಿ ಕಟ್ಟೋರು... ಇವ್ರು...'' ಕಣ್ಣಂಚಿನಿಂದ ಕಪಾಳದ ಮ್ಯಾಲ ಇಳೀತಿದ್ದ ಕಣ್ಣೀರನ್ನ ಬಸಣ್ಣ ಟವೆಲಿನಿಂದ ಒರೆಸಿಕೊಂಡ.

ಒಲಿ ಮ್ಯಾಲಿದ್ದ ಅನ್ನ ಕತಕತ ಕುದಿಯತೊಡಗಿತು. ಬೋಗೋಣಿ ಮ್ಯಾಲ ಮುಚ್ಚಿದ್ದ ಸಿಲವಾರದ ಪ್ಲೇಟು ಕೆಳಗ ಬಿತ್ತು. ಮಲ್ಲೇಶಿ ಮೆಲ್ಲನೆ ಎದ್ದುಕುಂತ. ಹೊರಗ ಹೋಗಿ ಬರ್ತೀನಿ ಅನ್ನುವಂತೆ ಕೈ ಸನ್ನೆ ಮಾಡಿ ಕೇಳಿದ. ''ದೂರ ಹೋಗ್ಬೇಡ. ಗಾಡಿ ಪಾಡಿ ಬಂದ್ರ ನಿನಗೆ ಸರ್ಕೊಳ್ಳಾಕ ಬರಲ್ಲ'' ಅಂತ ತಿಪ್ಪಯ್ಯ ಸಣ್ಣಮಗನಿಗೆ ಅಡುಗಿ ಮನಿಯಿಂದ ಕೂಗಿ ಹೇಳಿದ. ''ಈತ ಒಂದು ಸೊಲುಪ ತನಗ ತಿಳಿದಾಗ ಅಡ್ಯಾಡಕ ಹೋಗ್ತಾನ. ಹಿರೇಮಗ ಮಕ್ಕಂಡಲ್ಲೆ ಮಕ್ಕಂಡು ಬುಟ್ಟಾನ'' ಅಂತ ನಿಟ್ಟುಸಿರು ಬಿಡುತ್ತಾ ಅನ್ನದ ಬೋಗೋಣಿ ಒಲಿ ಮ್ಯಾಲಿಂದ ಕೆಳಗ ಇಳಿಸಿದ.

''ನನ್ ಮಕ್ಕಳದು ಇದಾ ಕಥಿ. ಮೊದ್ಲು ತೆಳ್ಳಗಿದ್ದ ಮಕ್ಕಳು ಫುಡ್ ತಿಂದ ಮ್ಯಾಲ ದಪ್ಪ ಅದ್ವು, ಬೇಸಾತಿ ಬುಡು ಅಂತ ಮಾಡಿದ್ಯ. ಬರೀ ಬೊಜ್ಜು ಬೇಳಿತೈತಿ ಅಂತ ಹಿಂದಾಗಡೆ ಗೊತ್ತಾತು. ಆಕಡೆ ಓಣಿ ಮಂದಿ ದನಕ್ಕ ಸಮೇತ ಜೋಳದ ಸೊಪ್ಪಿ, ನೆಲ್ಲು ಹುಲ್ಲಿನ ಬದ್ಲಾಗಿ ಈ ಪುಡ್ಡು ತಿನ್ನಾಕ ಹತ್ಯಾರ. ಬಡಕಲು ಎತ್ತುಗಳು ಗೂಳಿಗತೆ ಆಗ್ಯಾವಂತ. ಮಕ್ಳನ್ನ ಕರ್ಕಂಡು ಊರು ಬುಟ್ಟು ದೂರಹೋಗಿ ಬುಡಮು ಅಂತ ಅನ್ನುತ್ತ ಆದ್ರ ಮಕ್ಕಳು ನೋಡಿದ್ರ ಈ ಸುಡುಗಾಡು ಫುಡ್ ತಿನ್ನಾಕ ಸುರುಮಾಡ್ಯಾರ. ಬ್ಯಾರೆ ಅಡುಗಿ ನಡಿಯಂಗಿಲ್ಲ ಅಂಬದೇ ಚಿಂತೆ.'' ಬಸಣ್ಣ ತಿಪ್ಪಯ್ಯನ್ನ ಒಮ್ಮೆ ಅನ್ನದ ಬೋಗೋಣಿಯನ್ನ ಒಮ್ಮೆ ನೋಡಿ ಒಣಗುತ್ತಿದ್ದ ತುಟಿಗಳ ಮ್ಯಾಲ ನಾಲಿಗೆ ಆಡಿಸಿಕೊಂಡು ಮಾತನಾಡಿದ.

ಎರಡು ಗಂಗಾಳದಾಗ ಅನ್ನ, ಹುಣಿಸಿ ಚಿಟ್ನಿ ಪುಡಿ ನೀಡಿಕೊಂಡ ತಿಪ್ಪಯ್ಯ, ಬಸಣ್ಣನ ಮುಂದ ಒಂದು ಗಂಗಾಳ ಸರಿಸಿ 'ಉಣ್ಣಪ.. ' ಎಂದ. ಬಸಣ್ಣ ಚಕಮುಕ್ಕಿ ಹಾಕ್ಕಂಡು ಕುಂತು ಒಂದೊಂದೆ ತುತ್ತು ಕೈಯಾಗ ಹಿಡಿದು ಬಾಯಿಯಿಂದ ಊದಿ ಆರಿಸಿದ. ತುತ್ತು ಎತ್ತಿ ಬಾಯಾಗ ಇಟ್ಟುಕೊಳ್ಳುತ್ತಿದ್ದ ತಿಪ್ಪಯ್ಯನ ಮುಖವನ್ನೆ ದಿಟ್ಟಿಸಿ ನೋಡಿದ, ಮಾತು ಹೊರಡಲಿಲ್ಲ. ಕಣ್ಣು ತುಂಬಿ ಬಂದ್ವು. ತಲಿ ತಗ್ಗಿಸಿ ಉಣ್ಣತೊಡಗಿದ. ಒಂದೆರಡು ಹನಿಗಳು ಗಂಗಾಳದಲ್ಲಿ ಬಿದ್ದವು...

''ಸುತ್ತ ಹತ್ತು ಹಳ್ಳಿ ನೂರಾರು ಮಂದಿ ನಾ ಕೊಟ್ಟ ಔಷಧ ಕುಡುದು ಬದುಕ್ಯಾರ. ಸರ್ಪ ಕಚ್ಚಿದ ವಿಷಾ ಇಳಿಸೋ ಶಕ್ತಿ ಚಂಬಸವ ನನಗ ಕೊಟ್ಟಾನ. ಆದ್ರ ಈ ವಿದೇಶಿ ಪುಡ್ಡು ತಿಂದೋರಿಗೆ ತೊಂದ್ರಿ ಆದ್ರ... ಔಷಧ ಕೊಡಾಕ ಅಮೆರಿಕಾದೋರೆ

ಬರ್‍ಬಕಂತ...'' ಇಷ್ಟು ಅನ್ನುತ್ತಾ ತಿಪ್ಪಯ್ಯ ಬಿಕ್ಕತೊಡಗಿದ. ''ಮಲ್ಕ ಉಣ್ಣು ಯಣ್ಣಾ... ಎಲ್ಲಾ ನಮ್ ಹಣೆಬರಾ... ಕಾಲ ಹೆಂಗ ಬರುತ್ತ ಹಂಗ ಹೋಗ್ಬಕು'' ಬಸಣ್ಣ ಒಂದು ಗ್ಲಾಸ್ ನೀರು ಕುಡಿಯಲು ಕೊಟ್ಟ.

''ನಮ್ ಹಣೆಬರಾ ಅಂತ ಎಷ್ಟು ದಿವ್ಸಾ ಸುಮ್ನ ಕುಂದ್ರಾಕ ಆಗುತ್ತ. ಹಾದ್ಯಾಗಲ್ಲ... ಮುಗಿಲಾಗ ಹೋಗುತ್ತಿದ್ದ ದೆವ್ವನ್ನ ನಮ್ ಮನಿಯಾಗ ಹೊಗ್ಸಿ ಕೊಂಡೀವಿ. ನಮ್ಮಂತೋರು ನಾಕು ಮಂದಿ ಗಟ್ಟಿ ಇದ್ರ ಸಾಕು. ಈ ಊರಿಗೆ ಬಡಿದಿರೊ ದೆವ್ವ ಬುಡಸಾಕ. ಈ ದೆವ್ವದ ದಾಹ ದೊಡ್ಡದೈತಿ. ಆದಷ್ಟು ಜಲ್ದೀನ ಈ ದೆವ್ವನ್ನ ಹೊರ್‍ಗ ದಬ್ಬಬೇಕು...'' ಏನು ನೆನಪಾಯಿತೊ, ತಿಪ್ಪಯ್ಯ ಇನ್ನೂ ಅನ್ನವಿದ್ದ ಗಂಗಾಳದಾಗ ಕೈತೊಳೆದುಕೊಂಡ.

''ಅದೇಟನ ತೊಂದ್ರಿ ಆಗ್ಲಿ... ನೆಲದಾಗ ಹುದಿಗಿರೋ ಒಂದೊಂದೆ ಬೀಜ ಹುಡುಕ್ಯಾಡಿಯಾದ್ರೂ ಈ ವರ್ಷ ನನ್ ಎರ್‍ಡು ಎಕ್ರೆ ಜಮೀನಿನ್ಯಾಗ ಬಿತ್ತಬೇಕು. ಬೆಳೆ ತಗಬೇಕು. ಮತ್ತೆ ಮೊದಲಿನಗತೆ ಜೋಳ, ಕಾಳು ಬೆಳಿಬೇಕು, ಎತ್ತು ತಗಬೇಕು... ಸುಗ್ಗಿ ಮಾಡಬೇಕು... ಮಕ್ಕಳಿಗೂ ಒಕ್ಕಲತನ ಮಾಡಾಕ ಹಚ್ಚಬೇಕು. ರಾಜರಗತೆ ಇರ್ತಾರಂದ್ರೂ ಪುಡ್ದು ತಯಾರು ಮಾಡಾಕ ಕಳಿಸಲ್ಲ...'' ತಿಪ್ಪಯ್ಯನ ಮಾತು ಕೇಳಿ ಬಸಣ್ಣಗ ದಿಕ್ಕ ತೋಚದಂಗಾತು.

ಹೊರಗ ನಾಲ್ಕಾರು ಜನ ಮಲ್ಲೇಶಿನ್ನ ಹೊತಗಂಡು ಬಂದು, ಮನಿ ಮುಂದ ನಿಲ್ಲಿಸಿ, ಕೂಗಿದರು. ''ತಿಪ್ಪಯ್ಯಣ್ಣೊ ಮಕ್ಳನ್ನ ಹೊರಗ ಬುಡಬ್ಯಾಡಪೊ... ಕೆಟ್ಟ ಮಂದಿ ಹೆಚ್ಚಾಗ್ಯಾರ. ನಿಮ್ ಮಗ ಬಸ್ ಸ್ಟ್ಯಾಂಡ್ ಸಮೀಪ ಕುಂತಾಗ ಬೇಕು ಬ್ಯಾಡ ಅಂಬಂಗ ಕುಂಡಿ ವರ್‍ಸಿತಂತ. ಅದಕ್ಕೆ ಈತನ್ನ ಅಕ್ಕಡಿ ದಬ್ಬಿ, ಇಕ್ಕಡಿ ದಬ್ಬಿ ಮಂದಿ ಸಂಡಾಸನ್ನ ಬಳಕಂಡ್ರಂತ. ದಬ್ಯಾಡಿ ಹುಡಗನ ಅಂಗಿ, ಲುಂಗಿ ಹರಿದು ಕಳಿಸ್ಯಾರ.'' ತಿಪ್ಪಯ್ಯ ಮಲ್ಲೇಶಿ ಕೈಹಿಡಿಕಂಡು ಮೆಲ್ಲನೆ ಹೊಸ್ತಿಲ ದಾಟಿದ. ಮಕ್ಳಿಗೆ ತಾನು ತಿನ್ನೊ ಅನ್ನ ಕೊಟ್ಟುಬಿಡಬೇಕು. ಬ್ಯಾರೆ ಊರಿಗೋಗಿ ಭಿಕ್ಷೆ ಬೇಡಿ ತಂದ್ರ ಚಿಂತಿಲ್ಲ. ಈ ಪುಡ್ದಿನ ಸಾವಾಸ ಬುಡ್ಸಿಬುಡಬಕು ಅಂತ ಮನಸ್ಸಿನಲ್ಲೆ ಅಂದುಕೊಂಡ. ಕ್ಷಣದಾಗನ 'ಥೇ...' ಅಂತ ಲೊಚ್ಗುಟ್ಟಿ ನೆಲದ ಮ್ಯಾಲ ಕುಂತ...

ಹಿರಿಮಗ ಶರಣು ''ಹೊಟ್ಟೆ ಚುರುಗುಟ್ಟಾಕ ಹತ್ತೈತಿ. ಏನನ ತಿನ್ನಂಗ ಆಗೈತಿ. ಪುಡ್ದು ತಂದುಕೊಡಪ್ಪೊ...'' ಅಂತ ಕೇಳಿದ. ಬಸಣ್ಣ, ಶರಣು ಮತ್ತು ತಿಪ್ಪಯ್ಯನ ನೋಡುತ್ತಾ ಕುಂತ. ಮಲ್ಲೇಶಿ ಮಿನರಲ್ ಬಾಟ್ಲಿ ಎತ್ತಿ ಎರಡ್ಮೂರು ಗುಟುಕು ಕುಡಿದ. ಒಂದು ಗ್ಲಾಸಿನ್ಯಾಗ ಅದೇ ನೀರನ್ನೇ ಹಾಕ್ಕೊಂಡು ಬಂದು ಅಣ್ಣನ ಬಾ ಹಾಕಿದ. ಅಪ್ಪನ ಕಡೆ ಮುಖ ಮಾಡಿ ಖಾಲಿ ಬಾಟ್ಲಿ ತೋರಿಸಿದ. ತಿ ಬೋಗೋಣಿ ನೋಡಿದ. ಇನ್ನೂ ಒಬ್ರು ಉಣ್ಣುವಷ್ಟು ಅನ್ನ ಉಳಿದಿತ್ತು. ತಾನು ಗಂಗಾಳದಲ್ಲಿ ಉಳಿದಿದ್ದ ಒಂದೆರಡು ತುತ್ತು ಅನ್ನಾನ ನಾಯಿಗೋ, ಬೆಕ್ಕಿ ಹಾಕಬೇಕು ಅಂತ ವಿಚಾರಮಾಡಿದ.

ಹೋದ ವಾರ ತಮ್ಮ ಓಣಿ ಎರಡು ನಾಯಿಗಳು ಪುಡ್ದು ತಿಂದು, ಆಮ್ಯಾ ತಿಂದು ಕಾರ್‍ಕೆಂಡು ಸತ್ತು ಹೋಗಿದ್ದು ನೆನಪಾಯಿತು. ಮನಿಯಾಗ ಒಂದು ಬೆಕ್ಕು ಸ ಸುಳಿದಾಡಲಾರ್‍ದಂಗ ಆಗೈತಿ. ಏನು ತಿಳಿತೋ... ತಿಪ್ಪಯ್ಯ ತಾನು ಉಂಡ್ಬುಟ್ಟ ಗಂ ತೊಳದು ಎರಡು ಚಮಚ ಅನ್ನ ನೀಡಿಕೊಂಡ... ಬಾಯಾಗಿನಿಂದ ತಂದ ನೀ ತುಂಬಿಕೊಂಡು ಅಡುಗಿ ಮನಿಯಿಂದ ಹೊರಗ ನಡುಮನ್ಯಾಕ ಬಂದ. ಹೆಂಡತಿ ಇಪ್ಪತ್ತು ವರ್ಷದ ಹಿಂದೆ ಹಿರಿಮಗ ಶರಣ ಮೂರ್‍ನಾಲ್ಕು ವರ್ಷದ ಹುಡುಗ ಇ ಮಗಳು ಮಲ್ಲಮ್ಮನ್ನ ಬಸ್ರು ಇದ್ದಾಗ ಮಸ್ಕಿ ಮಲ್ಲಯ್ಯನ ಜಾತ್ರ್ಯಾಗ ತೆಗೆಸಿಕೊ ಫೋಟೊದ ಕಡೆ ನೋಡಿದ...

''ಅನ್ನ ಉಂಡುಬುಡು ಅದದ್ದು ಆಗ್ಲಿ...'' ಮೈಯಾಗ ದೆವ್ವ ಬಂದೋ ತಿಪ್ಪಯ್ಯ ಮಕ್ಕಳಿಬ್ಬರ ಮುಂದ ಕುಂತು ಸಿಟ್ಟಿನಿಂದ ತುತ್ತುಮಾಡಿ ಶರಣುನ ಬಾ ತುರುಕತೊಡಗಿದ. ಮಲ್ಲೇಶಿ, ಬಸಣ್ಣ ಕೈ ಅಡ್ಡ ಹಿಡಿದು ತಡೆದ್ರೂ ಕೇಳ್ಲಿಲ್ಲ. ಒಂದ ತುತ್ತು ಉಣ್ಣಿಸಿದ. ನೀರು ಕುಡಿಸಿದ. ಮುಸುರಿ ಹತ್ತಿದ ಕೈಗಳನ್ನು ದೋ ವರಿಸಿಕೊಳ್ಳುತ್ತಾ, ''ಬಸಣ್ಣ, ಸ್ವಾಮೇರ ತಾತನ ಗದ್ದಿಗೆ ಕಡೆ ಹೋಗಿ ಬರ್‍ತೀನಿ ಎಂದ. ತಿಪ್ಪಯ್ಯ ಸ್ವಾಮೇರ ತಾತನ ಗದ್ದಿಗಿ ಕಡೆ ಹೊಂಟಾನ ಅಂದ್ರ ಸಾಕು ಊರ್‍ಮಂದಿಗೆ ಗೊತ್ತಾಗಿ ಬುಡ್ತ. ಯಾರಾದ್ರೂ ಹುಳ ಮುಟ್ಸಿಗೊಂಡೋರು ಬಂ ಅಂತ. ''ನಾ ಮನಿ ಕಡಿ ಹೋಗಿ ಬರ್‍ತೀನಿ ಯಣ್ಣಾ...'' ಅನ್ನುತ್ತಾ ಬಸಣ್ಣ ತಿಪ್ಪ ಹಿಂದೆ ತಲಬಾಗ್ಲ ದಾಟಿದ. ತಿಪ್ಪಯ್ಯ ಯಾಕ ಸ್ವಾಮೇರ ತಾತನ ಗದ್ದಿಗಿ ಹೊಂಟಾನ ಅಂಬದೇ ಬಸಣ್ಣಗ ತಿಳಿಲಾರ್‍ದಂಗ ಆಯ್ತು.

ಊರು ದಾಟುತ್ತಿದ್ದಂತೆ ಸ್ವಾಮೇರ ತಾತನ ಗದ್ದಿಗಿ ಕಂಡಿತು. ತನ್ನ ಆರಾಧ್ಯ ಚೆಂಬಸ್ವಾಮಿ, ಮದ್ವಾನಿ ತಾತ ಒಂದೇ ಅಂತ ತಿಳಿದಿದ್ದ. ಬಸವ ಜಯಂತಿಗೆ ಮ ತಾತಂದು ಜಾತ್ರಿ. ಇಡೀ ಊರ್‍ಮಂದಿ ಸೇರಿ ಸಂಭ್ರಮದಿಂದ ಉಚ್ಛಯ್ಯ ಎಳಿಯೋ ಮನ್ಯಾಗ ಹೋಳಿಗಿ ಉಂಡು ಬರಿಕೈಲಿ ಜಾತ್ರಿ ಮಾಡ್ತಿದ್ವಿ ಮೊದ್ಲು. ಈ ವ ನೋಡಿದ್ರ ಕಣ್ಣು ಕುಕ್ಕಿಸೊ ಸಾಮಾನು ತಂದಿದ್ರು. ಸಣ್ಣ ಸಾಮಾನು ಮೊದ್ಲು ವ ಬಾಯಿಗೆ ಬಂದಂಗ ರೇಟು ಹೇಳ್ತಿದ್ರು. ಮಗಳು ಮಲ್ಲಮ್ಮನ ಇಬ್ಬರು ಮಕ್ಕ ಗೊಂಬಿ ಕೊಡಿಸಿದೆ. ನೂರು ರುಪ್ಯೆ ಕೈಬಿಟ್ಟು ಹೊದ್ವು. ತಿಂದದ್ದಲ್ಲ ಉಂಡಿದ್ದಲ್ಲ ಸ್ವಾಮೇರ ತಾತನ ಗದ್ದಿಗಿ ಮುಂದ ಕ್ಷಣದೊತ್ತು ನಿಂತ ತಿಪ್ಪಯ್ಯ ಕೈಜೋಡಿಸಿ ನಮ ಮಾಡಿದ. ಗದ್ದಿಗಿ ದಾಟಿ ಸ್ವಲ್ಪ ಜೋರಾಗಿ ಹೆಜ್ಜೆಯಿಟ್ಟ. ಹೊಸ ಬಾವಿ ಮುಂದ ನಿ ಒಂದು ಕಾಲಕ್ಕೆ ಇಡೀ ಊರಿಗೆ ಕುಡಿಯೊ ನೀರು ಕೊಡುತ್ತಿದ್ದ ಬಾವಿ ಒಣಗಿ ಕಾಣ್ತಿತ್ತು. ಊರಾಗ ರೊಕ್ಕ ಇದ್ದೋರು ಮನಿಗೊಂದು ಬೋರ್ ಹಾಕಿಸಿಕೊಂಡ ಬಾವಿ ಬತ್ತಿಹೋಯ್ತು. ಮಂದಿ ಯಾರ ಮಾತು ಯಾರು ಕೇಳಲಾರ್‍ದಂಗ ಆಗ್ಯಾ ಬಾವಿ ಸಮೀಪದ ಬೇವಿನ ಗಿಡದ ಕೆಳಗೆ ನಿಂತ ತಿಪ್ಪಯ್ಯನ ಬಲ ತೋಳಿನ ಮ್ಯಾಲ ಬಿದ್ದಂಗಾಗಿ ಎಚ್ಚರಗೊಂಡ. ಗಿಡದಾಗಿನ ಕಾಗೆಯೊಂದು ಹಿಕ್ಕೆ ಹಾಕಿತ್ತು. ಕೆಳ ಗೊಂದಲಿ ತೊಪ್ಪಲದಿಂದ ಹಿಕ್ಕೆ ಒರಗಿಸಿಗೊಂಡ.

ಊರ ಮುಂದಿನ ಹೊಲಗಳು ಅಂದ್ರ ಬಂಗಾರ ಬೆಳಿಯೋ ಭೂಮಿ. ಈ ನೋಡಿದ್ರ ಕಸ, ಕಡ್ಡಿ, ಕರಿಜಾಲಿ ಬೆಳೆದು ಗೋಮಾಳ ಆಗ್ಯಾವ. ಉತ್ತಿ ಬಿತ್ತಿ ಬೆಳಿ ಭೂಮಿನ ಊರಾಗಿನ ಬಹಳ ಮಂದಿ ಯಾವುದ್ಯಾವುದೋ ಕಾರಣಕ್ಕ ಮಾರ್‍ಯಾರ. ಇ ಕೆಲವರು ಇವತ್ತಲ್ಲ ನಾಳಿ ಬೆಳಿ ಬೆಳಿಬೋದು ಅಂತ ಮಾರಲಾರ್‍ದ ಬೀಳುಬಿಟಗ ಕುಂತಾರ. ನಾಲ್ಕಾರು ಹೊಲ ದಾಟಿ ಹಸಿರು ಕಾಣಿಸಿತು. ಮನಸ್ಸಿಗೆ ಹಿತವೆನಿಸಿ ಹೊಸೂರಿನ ಹನುಮಪ್ಪನ ಹೊಲ ಅದು. ಜೋಳ ಬಿತ್ಯಾನ ಪುಣ್ಯಾತ್ಮ. ಆತನ ಮನ ಯಾರೂ ಈ ಸುಡುಗಾಡು ಪುಡ್ದು ತಿನ್ನಲ್ಲ. ಆತನ ಮಕ್ಳು ತಂದಿ ಮಾತು ಪಾಲಿಸಾ ಹನುಮಪ್ಪನ ಕೈಕಾಲು ಹಿಡ್ಕಂಡು ಆದ್ರೂ ಒಂದು ಚೀಲ ಜೋಳ ಕಡಾ ಕೇಳ್ಲ ಮುಂದಿನ ವರ್ಷ ಹೆಂಗಾನು ನಾನೆ ಹೊಲ ಮಾಡ್ತೀನಿ. ಆವಾಗ ಕೊಡ್ತೀನಿ ಅ ಹೇಳ್ತಿನಿ. ತನ್ನಷ್ಟಕ್ಕೆ ತಾನು ಮಾತಾಡಿಕೊಂಡ ತಿಪ್ಪಯ್ಯ ಒಂದು ಹಸಿರು ಗಿಡದ ಮು

*With Best Compliments from*

**SREE SIDDAGANGA EDUCATION SOCIETY (REGD.)**
SREE SIDDAGANGA MATH
TUMKUR - 572 104
Phone : 2282411, 2282211, Fax : 2282511

SREE SIDDAGANGA EDUCATION SOCIETY (REGD.,) SREE SIDDAGANGA MATH WAS ESTABLISHED ON 17TH JULY 1963 WITH AN OBJECT PROMOTE EDUCATION AND CULTURE BY ESTABLISHING COLLEGES, SCHOOLS, INSTITUTIONS, TRAINING CENTRES, HOSTELS ETC.,

Sree Siddaganga Education Society is running about 122 institutions as on date right from Nursery to Engineering course spreading over the State of Karnataka and also FREE BOARDING AND LODGING HOME for 8000 students at Sree Siddaganga Math.

It is being run under the blessing and able guidance of Dr. Sree Sree Sivakumara Swamigalu the Hon'ble President of Sree Siddaganga Education Society, Sree Siddaganga Math.

Place : Sree Siddaganga Math
Date : 7.12.2007

Sd/-
T. K. Nanjundappa
Secretary

ಕ್ಕನೆ ನಿಂತ. ಗಿಡದ ಹೆಸರು ಹೇಳಲಾರ್ದ ತೊಪ್ಲ ಹರ್ಕಬೇಕು. ಅಂದ್ರ ಔಷಧ ಹತ್ತುತ್ತ. ಮನಸ್ಸಿನಲ್ಲಿ ದುಕೊಳ್ಳುತ್ತಾ ಹಿಡಿತುಂಬಾ ಎಲೆಗಳನ್ನು ಹರಿದುಕೊಂಡ. ಹಾವಿನ ವಿಷ ಅಂತದ್ರೇ ಈ ಗಿಡದ ತೊಪ್ಲಕ್ಕ ಇಳಿತೈತಿ. ಈ ಡುಗಾಡು ಪುಡ್ಡಿನ ವಿಷ ಹೊಟ್ಟಿಲಿಂದ ಇಳಿಸಂಗಿಲ್ಲೇನು ? ಪ್ರಶ್ನಿಸಿಕೊಂಡ ತಿಪ್ಪಯ್ಯ ಮನಿ ಕಡೆ ನಡೆದ.

ತಮ್ಮ ಓಣಿಗೆ ಬರುತ್ತಲೆ ನಾಲ್ಕಾರು ಮನಿಗಳ ಬಾಗಿಲು ಮುಂದಕ್ಕ ಮಾಡಿ ಮುಚ್ಚಿದ್ದವು. ಇಷ್ಟೊತ್ತಿನಲ್ಲಿ ಕದ ಕ್ಕೆಂಡು ಮಂದಿ ಎಲ್ಲಿಗೆ ಹೋಗ್ಯಾರ ಅಂತ ತಿಪ್ಪಯ್ಯ ತಲೆಕೆರೆದುಕೊಂಡ. ಮನಿ ಮುಂದೆ ಬರುತ್ತಲೆ ನೂರಾರು ಂದಿ ನಿಂತಿದ್ದು ಕಂಡಿತು. ಕೈಯಾಗಿನ ತೊಪ್ಲ ಬೆವರಿನಿಂದ ತೊಯ್ದುಹೋಗಿತ್ತು. ತನಗರಿವಿಲ್ಲದಂತೆ ತೊಪ್ಲಾನ ದ ಮ್ಯಾಲ ಹಾಕಿ ಮಂದೀನ ಸರಿಸಿ ಒಳಗೋಡಿದ. ನೆಲದ ಮ್ಯಾಲ ಹಿರಿಮಗ ಶರಣು ಅಲುಗಾಡಲಾರ್ದ ಬಿದ್ದಿದ್ದ. ತ್ತ ಕೆಂಪನ ವಾಂತಿ ಬಿದ್ದಿತ್ತು. ಮಲ್ಲೇಶಿ ಅಣ್ಣ ಮಾಡಿಕೊಂಡ ವಾಂತೀನ ಒಂದು ಡಬ್ಬ್ಯಾಗ ತುಂಬುತ್ತಿದ್ದ. ಸುತ್ತ ನಿಂತ ಂದಿ ಮೂಗಿಗೆ ದೋತ್ರ, ಸೀರಿ ಚುಂಗು ಹಿಡಿದು ತದೇಕಚಿತ್ತದಿಂದ ನೋಡುತ್ತಿದ್ದರು. ತಿಪ್ಪಯ್ಯ ವಾಂತ್ಯಾಗ ಲಿಟ್ಟು, ಜಾರಿಬಿದ್ದ. ಹಿಂದ ನಿಂತಿದ್ದ ನಾಲ್ಕಾರು ಮಂದಿ ಎತ್ತಿ ನಿಲ್ಲಿಸಿದ್ರು. ಕೆಳಗ ಕುಂತ ತಿಪ್ಪಯ್ಯ, ಶರಣುನ ಯಿಗೆ ಹತ್ತಿದ್ದ ಹಸಿಯನ್ನು ದೋತರದ ಚುಂಗಿನಿಂದ ಒರೆಸಿದ. ಮಗನ ಮ್ಯಾಲ ಬಿದ್ದು ಉರುಳಾಡತೊಡಗಿದ. ತ್ತ ನಿಂತ ಮಂದಿ ಕಣ್ಣು ತೇವಗೊಂಡವು.

''ಆ ಸುಡುಗಾಡು ಪುಡ್ಡು ತಿನ್ನಬಾರ್ದು ಅಂತ ಬೇಡಿಕೊಂಡಯ್ಯ. ಜನರ ಜೀವಾ ತೆಗೆಯಾಕನ ಇಂತಾ ಪುಡ್ಡು ಟ್ಯಾರ. ಹೊಲ, ಮನಿ ಕಸ್ಗಂಡು ನಮ್ಮನ್ನ ಪರದೇಶಿಗಳಂತೆ ಮಾಡ್ಯಾರ. ಥೂ ನಿನ್ನಾಡ... ಜನರ ಜೀವ ತೆಗೆಯೊ ಡ್ಡು ತಯಾರಿಸೊ ನಿಮಗೆ ಒಳ್ಳೆ ಸಾವು ಬರಂಗಿಲ್ಲ. ನಿಮ್ಮ ಫ್ಯಾಕ್ಟರಿಗಿ ಸಿಡ್ಲು ಬಡ್ಲಿ.ನನ್ ಕೈಯಾರ ಮಗನ ಜೀವ ಂಡು ಬುಟ್ಯ.'' ಅಂತ ಗೋಡೆಗೆ ತಲೆ ಆನಿಸಿ ಜೋರಾಗಿ ಅಳತೊಡಗಿದ. ಸುತ್ತಲಿನ ನಾಲ್ಕಾರು ಮಂದಿ ಡುಮನಿಯಲ್ಲಿ ಹಳೆ ಕೌದಿ ಹಾಸಿದರು. ಅದರ ಮ್ಯಾಲ ಶರಣುನ ಮಲಗಿಸಿದರು.

ಮಲ್ಲೇಶಿ ನೆಲಕ್ಕ ಉರುಳಾಡಿ 'ಯಣ್ಣೋ...' ಅಂತ ಜೋರಾಗಿ ಚೀರಿದ. ಮಂದಿ ಎದಿಗೆ ಈಟಿ ನಾಟಿದಂತೆ ಅನ್ನಿಸಿ ಸಿ ಮುಸಿ ಅತ್ತರು. ''ಪುಡ್ಡು ತಯಾರಿಸೊ ಆ ಫ್ಯಾಕ್ಟರಿನ ಕೂಡ್ಲೇ ಮುಚ್ಚಬೇಕ. ನಮ್ ಮಕ್ಕಳ ಜೀವ ಉಳಿಸ್ಬೇಕು. ಅನ್ನ ಟ್ಟಿ ತಿನ್ನದು ರೂಢಿ ಮಾಡ್ಬೇಕು. ಕೋಟಿ ರೂಪಾಯಿ ಕೊಟ್ರೂ ಇಂತಾ ಫ್ಯಾಕ್ಟರಿಗೆ ಹೊಲ ಮಾರೋದು ಬ್ಯಾಡ... ಈ ಡ್ಡು ತಿಂದದ್ದಕ್ಕೆ ಶರಣು ಸತ್ತಾನ ಅಂತ ಪೊಲೀಸ್ ಸ್ಟೇಷನ್ನಿಗೆ ಕಂಪ್ಲೇಂಟ್ ಕೊಡಬೇಕು'' ಜನ ಸ್ವಲ್ಪ ಸಿಟ್ಟಿಲೆ ತಮಗೆ ದಂತೆ ಮಾತಾಡತೊಡಗಿದರು.

ಸೂರ್ಯನ ಬಿಸಿಲು ತಗ್ಗಿತ್ತು. ಕೌದಿಯಲ್ಲಿ ಮಲಗಿದ್ದ ಶರಣುನ ನಾಲ್ಕು ಮಂದಿ ಒಂದೊಂದು ಕೌದಿ ಮೂಲೆ ಡಿದು ಊರಹೊರಗಿನ ಸುಡುಗಾಡಿ ಕಡೆ ನಡೆದರು. ಹುಸೇನಿ, ಲಚುಮ, ಯಮುನ ಕುಣಿ ತೋಡಿ ತಮ್ಮ ೀಕದಲ್ಲಿ ತಾವಿದ್ದರು. ''ಮೊದ್ಲು ಅರ್ಧ ತಾಸಿಗನೆ ಕುಣಿತೋಡ್ತಿದ್ವಿ. ಈ ಪುಡ್ಡು ತಿಂದಾಗಿನಿಂದ ಶಕ್ತಿ ಇಲ್ಲಂಗ ಆಗ್ಯೆತಿ. ಡು ತಾಸು ಬೇಕಾತಿ ಕುಣಿ ತೋಡದಕ್ಕ. ಈ ಪುಡ್ಡು ತಯಾರಿಸೊ ಮಂದಿಗನೂ ಈಗ್ಲೆ ಕುಣಿ ತೋಡಬೇಕು. ಉಪವಾಸ ಇದ್ರ ಚಿಂತಿಲ್ಲ ಪುಡ್ಡಿನ ಪಾಪಾನ ಬಿಡಸ್ಬೇಕು. ಒಂದೊಪ್ಪತ್ತು ತಿಂದ್ರ ಚಿಂತಿಲ್ಲ ಅನ್ನ ರೊಟ್ಟೀನ ತಿನ್ಬೇಕು'' ಅಂತ ಸಾರಾಯಿ ಪಾಕೀಟುಗಳನ್ನು ಹಲ್ಲಿನಿಂದ ಕಚ್ಚಿ ಕಣ್ಣುಮುಚ್ಚಿ ತೆರೆಯುವದರೊಳಗೆ ಕುಡಿದು ಖಾಲಿ ಪಾಕೀಟುಗಳನ್ನು ಆಕಾಶಕ್ಕೆ ತೂರಿದರು.



ಮಗನಿಗೆ ಮಣ್ಣು ಕೊಟ್ಟ ಮ್ಯಾಲ ಮೈತೊಳ್ಕಂಡು ತಿಪ್ಪಯ್ಯ ನಡು ಮನ್ಯಾಗ ಹಣೆಗೆ ಕೈಹಚ್ಚಿ ಕುಂತಿದ್ದ. ಊರ ಅಗಸಿ ಮುಂದಿನ ಈಶ್ವರ ಗುಡಿಯೊಳಗ ಸರಕಾರ ಕೊಡಿಸಿದ್ದ ಟಿ.ವಿ.ಯೊಳಗಿನಿಂದ ಜಾಹಿರಾತು ಕೇಳಿಬರುತ್ತಿತ್ತು 'ಯೇ ಪ್ಯಾಸ್ ಹೈ ಭಡಿ' ಎಂದು ಹೇಳಿದ ಮಾತು ಊರಿನ ಮೂಲೆ ಮೂಲೆಗೂ ಹಬ್ಬಿತು. ತಿಪ್ಪಯ್ಯ ನಡುಮನಿಯಲ್ಲಿ ಮಲಗಿದ್ದ ಮಲ್ಲೇಶಿ ತಲೆ ನೇವರಿಸಿದ. ''ಯಣ್ಣಾ...'' ಅನ್ನುತ್ತಾ ಬಸಣ್ಣ ಒಳಬಂದ. ''ಹನುಮಪ್ಪನ ಮನ್ಯಾಗಿನಿಂದ ಜೋಳ ಇಸ್ಗಂಡು ರೊಟ್ಟಿ ಮಾಡ್ಸೀನಿ. ಉಣ್ಣಪ್ಪೊ. ಹೋದ ಮಗ ಮತ್ತೆ ಬರಂಗಿಲ್ಲ. ಚಿಂತಿ ಮಾಡಬಾರ್ದು. ಎಲ್ಲರೂ ಒಂದಲ್ಲ ಒಂದು ದಿನ ಹೋಗ್ಬೇಕು'' ಅಂತ ತನ್ನ ಕೈಯಾರ ತಿಪ್ಪಯ್ಯನ ಬಾಯಿಗೆ ರೊಟ್ಟಿ ಚೂರು ಮುರಿದು ಉಣ್ಣಿಸತೊಡಗಿದ. ನಿಧಾನವಾಗಿ ಕತ್ತಲೆ ಆವರಿಸಿತು.

ಮಲ್ಲೇಶಿ ದೇವರ ಮುಂದೆ ಮುಡಿಸಿದ್ದ ದೀಪಾನ ಮೆಲ್ಲಕ ತಂದು ನಡುಮನಿ ಕೊನಿ ಕಟ್ಟೆ ಮ್ಯಾಲ ಇಟ್ಟ. ಐವತ್ತು ಅರವತ್ತು ಮಂದಿ ಕೈಯಾಗ ಚಿಮಣಿ ಎಣ್ಣೆ, ಪಂಜು, ಕುಡಗೋಲು, ಕೊಡಲಿ ಹಿಡ್ಕಂಡು ನಿಂತಿದ್ರು... ''ತಿಪ್ಪಯ್ಯಣ್ಣಾ ಹೊರಗ ಬಾರಪ್ಪೊ... ನಿನ್ನ ಮಗನ ಜೀವ ತಗೊಂಡ ನರಭಕ್ಷಕರಿಗೆ ಪಾಠ ಕಲಿಸ್ಬೇಕು ಇವತ್ತು'' ಅಂತ ಕೂಗಿದರು. ಬಸಣ್ಣ, ತಿಪ್ಪಯ್ಯ, ಮಲ್ಲೇಶಿ ಹೊರಬಂದರು. ಬಸಣ್ಣ ಕಚ್ಚೆ ಹಾಕಿ ಬ್ಯಾಗಾರ ಹನುಮನ ಕೈಯಲ್ಲಿದ್ದ ಪಂಜನ್ನ ಕಸ್ಗಂಡ. ಊರಹೊರಗಿದ್ದ ಪುಡ್ಡು ತಯಾರಿಸೊ ಕಂಪನಿ ಕಡೆ ಅವಸರದಲ್ಲಿ ನಡೆಯುತೊಡಗಿದರು.

ಮಲ್ಲೇಶಿ ಮನೆಯಲ್ಲಿದ್ದ ಒಂದು ಬಿದಿರಿನ ಬಂಬು ಹಿಡಿದು ಜನರ ಹಿಂದೆ ಅಡ್ಡೊಂದು ಬಡ್ಡೊಂದು ಕಾಲು ಇಡುತ್ತಾ ನಡೆದ. ತಿಪ್ಪಯ್ಯ ನಡುಮನೆಯಲ್ಲಿದ್ದ ದೀಪವನ್ನ ದಿಟ್ಟಿಸಿ ನೋಡುತ್ತಾ ಕುಂತ... ಕಂಬಕ್ಕ ತೂಗುಹಾಕಿದ್ದ ಫೋಟೊ ನೋಡಿದ. ತನ್ನ ತೊಡಿ ಮ್ಯಾಲ ಕುಳಿತಿದ್ದ ಶರಣು ತನ್ನನ್ನು ನೋಡಿದಂತಾಯಿತು. ಎದ್ದು ಹೊರಗ ಬಂದ ತಿಪ್ಪಯ್ಯ ಮಾಳಿಗೆ ಏರಿ ಸುತ್ತ ಕಣ್ಣಾಡಿಸಿದ. ನೂರಾರು ಜನ ಫ್ಯಾಕ್ಟರಿ ಸುತ್ತ ನಿಂತಿದ್ರು. ಕೂಗಾಟ ಚೀರಾಟ ಮುಗಿಲು ಮುಟ್ಟುತ್ತಿತ್ತು. ಎರಡು ಪೋಲೀಸ್ ಗಾಡಿಗಳು ಫ್ಯಾಕ್ಟರಿ ಮುಂದ ನಿಂತಿದ್ದು. ದೋತರ ಕಚ್ಚೆ ಹಾಕಿಕೊಂಡು ಇಳಿದ ತಿಪ್ಪಯ್ಯ ಅವಸರದಲ್ಲಿ ಕೈಯಿಗಿ ಸಿಕ್ಕ ಕಟ್ಟಿಗೆ ಹಿಡಿದು ಸುತ್ತ ಹರದಾರಿಗೆ ಕೇಳುವಂತೆ ಜೋರಾಗಿ 'ಕೇ ಕೇ' ಹಾಕಿದ... ಬಾಗಿಲು ಮುಚ್ಚುವದನ್ನೂ ಮರೆತು ಮಾರಿಗೊಂದು ಮೊಳಕ್ಕೊಂದು ಹೆಜ್ಜೆ ಇಡುತ್ತಾ ಫ್ಯಾಕ್ಟರಿಯತ್ತ ಓಡಿದ...

ಕಲಿಗಣನಾಥ ಗುಡದೂರು
ಇಂಗ್ಲಿಷ್ ಉಪನ್ಯಾಸಕ, ವೀರೇಶ್ವರ ಬಾಂಡೆ ಅಂಗಡಿ
ಗಜಾನನ ಆಸ್ಪತ್ರೆ ಹತ್ತಿರ. ಕುಷ್ಟಗಿ ರಸ್ತೆ, ಸಿಂಧನೂರು - ೫೮೪೧೨೮
ರಾಯಚೂರು ಜಿಲ್ಲೆ

## ನೀವು ನಿರೀಕ್ಷಿಸುತ್ತಿರುವ ಆ ಪುಸ್ತಕ ನಮ್ಮಲ್ಲಿದೆ


ರೂ. 125


ರೂ. 70


ರೂ. 95


ರೂ. 300


ರೂ. 35


ರೂ. 120


ರೂ. 120


ರೂ. 400


ರೂ. 120


ರೂ. 55

# ಸಪ್ನ ಬುಕ್ ಹೌಸ್

ಕನ್ನಡ ಮತ್ತು ಇಂಗ್ಲಿಷ್ ಪುಸ್ತಕಗಳ ಭಾರತದ ಅತಿ ದೊಡ್ಡ ಭಂಡಾರ




3ನೇ ಮುಖ್ಯರಸ್ತೆ, ಗಾಂಧಿನಗರ
ವಿಜಯ ರೆಸಿಡೆನ್ಸಿ ಹೋಟೆಲ್ ಎದುರು
ಬೆಂಗಳೂರು - 560 009
ದೂರವಾಣಿ: 40114455

e-mail: sapnabooks@vsnl.com, Shop online@www.sapnaonline.com

**ಪ್ರಚಲಿತ ಪುಸ್ತಕಕಾಶಿಯನ್ನು ನೋಡಲು ಒಮ್ಮೆ ಭೇಟಿ ಕೊಡಿ**

### ಶಾಖೆಗಳು

**ಸದಾಶಿವನಗರ**
ವೈಯಾಲಿಕಾವಲ್ ಮುಖ್ಯರಸ್ತೆ
ಭಾಷ್ಯಂ ವೃತ್ತದ ಬಳಿ
ಬೆಂಗಳೂರು - 560 003
ದೂ : 23446444/5/41328236
e-mail: sapna.sdn@sapnaonline.com

**ಜಯನಗರ**
ನಂ.14, 27ನೇ ಅಡ್ಡರಸ್ತೆ, 4ನೇ ಬ್ಲಾಕ್
ಹೋಟೆಲ್ ನಂದಿನಿ ಪಕ್ಕ
ಬೆಂಗಳೂರು - 560 011
ದೂರವಾಣಿ : 41307322
e-mail: sapna.jyn@sapnaonline.com

**ಇಂದಿರಾನಗರ**
2725, 80 ಅಡಿ ರಸ್ತೆ, ಇಂದಿರಾನಗರ
ಚಿನ್ಮಯ ಕೃಷ್ಣ ದೇವಸ್ಥಾನದ ಎದುರು
ಬೆಂಗಳೂರು - 560 038
ದೂರವಾಣಿ : 40455999
e-mail: sapna.ind@sapnaonline.com

**ಮೈಸೂರು**
ನಾರಾಯಣಶಾಸ್ತ್ರಿ ರಸ್ತೆ (ಫ್ಯಾಬ್‌ಸಿಟಿ ಹತ್ತಿರ) ದೇವರಾಜ ಮೊಹಲ್ಲಾ
ಮೈಸೂರು - 570 001
ದೂರವಾಣಿ : (0821) 4004499
e-mail: sapna.mys@sapnaonline.com

# ವಿಶ್ವಾತ್ಮಕ ಮೌಲ್ಯಗಳು

ಜಿ. ರಾಜಶೇಖರ

> ಜಗತ್ತಿನ ಬಡದೇಶಗಳ ಭ್ರಷ್ಟ ಅಧಿಕಾರಿಗಳು ತಮ್ಮ ದೇಶಗಳ ಸೀಮಿತ ಸಂಪನ್ಮೂಲಗಳನ್ನು ಕೊಳ್ಳೆ ಹೊಡೆಯುತ್ತಾರೆ ಎಂಬುದು ಸರಿ. ಆದರೆ ಆ ಸಂಪನ್ಮೂಲಗಳೇ ಸೀಮಿತವಾಗಿರುವುದಕ್ಕೆ ಈ ದೇಶಗಳು ಅನುಭವಿಸಿದ ವಸಾಹತುಶಾಹಿ ಆಳ್ವಿಕೆ ಮತ್ತು ಈಗ ಎದುರಿಸುತ್ತಿರುವ ಸಾಮ್ರಾಜ್ಯಶಾಹಿಯ ಆಕ್ರಮಣಕಾರೀ ಧೋರಣೆಗಳು ಕಾರಣ ಎಂಬುದನ್ನೂ ನಾವು ಗಮನಿಸಬೇಕು. ಹಾಗೆಂದು ನಾನು ಉದ್ಧರಿಸಿದ ಪತ್ರಿಕಾ ವರದಿಯ ಮಾಹಿತಿ ಪೂರ್ವಗ್ರಹಪೀಡಿತ ಎಂದಾಗಲೀ, ಅಮುಖ್ಯವೆಂದಾಗಲೀ ನಾನು ಹೇಳುತ್ತಿಲ್ಲ. ಲೋಕ ಜೀವನದ ನಿರೂಪಣೆ ಇಷ್ಟಕ್ಕೇ ಮುಗಿಯುವುದಿಲ್ಲ ಎಂಬುದು ಮಾತ್ರ ನನ್ನ ತಕರಾರು. ಭ್ರಷ್ಟಾಚಾರವೇ ಏಕೆ, ನೂರಾರು ಇತರ ವಿಷಯಗಳ ಬಗೆಗೂ ಇಂತಹದ್ದೇ ಸಮೀಕ್ಷೆ, ತಲೆ ಲೆಕ್ಕ ಮುಂತಾದುವನ್ನು ನಡೆಸಿ ಸೂಕ್ತ ಪಟ್ಟಿಕೆಗಳನ್ನು ಸಿದ್ಧಪಡಿಸಬಹುದು.

**ಈ** ಪ್ರಬಂಧದ ಶೀರ್ಷಿಕೆ 'ವಿಶ್ವಾತ್ಮಕ ಶಾಪಗಳು' ಎಂದಿದ್ದರೆ ಹೆಚ್ಚು ಸಮಂಜಸವಾಗಿರುತ್ತಿತ್ತು. ಆದಾಗ್ಯೂ ಶಾಪವಾಗಿರುವುದನ್ನು 'ಮೌಲ್ಯ' ಎಂದು ಕರೆದಿರುವುದು ಸದ್ಯಕ್ಕೆ ಚಾಲ್ತಿಯಲ್ಲಿರುವ ನಿರೂಪಣೆಯ ಸಂಸ್ಕೃತಿಗೆ ಅನುಗುಣವಾಗಿದೆ. 'ಆಕ್ರಮಣವೆಂದರೆ ಆತ್ಮರಕ್ಷಣೆ', 'ಯುದ್ಧವೇ ಶಾಂತಿ', 'ದಬ್ಬಾಳಿಕೆ ಪ್ರಜಾಪ್ರಭುತ್ವದ ಉಳಿವಿಗಾಗಿ' – ಇವೇ ಮುಂತಾದ ದಗಲ್‌ಬಾಜಿ ನುಡಿಗಟ್ಟುಗಳು ಅಥವಾ ಆರ್ವೆಲ್ ಹೇಳುವ 'ಡಬಲ್ ಸ್ಪೀಕ್'ನ ಉದಾಹರಣೆಗಳ ಸಾಲಿಗೇ ಸೇರುವಂತಹದ್ದು ಈ 'ವಿಶ್ವಾತ್ಮಕ ಮೌಲ್ಯ'ಗಳ ಪರಿಕಲ್ಪನೆ. ಮೌಲ್ಯಗಳ ಮಾತು ಒತ್ತಟ್ಟಿಗಿರಲಿ 'ವಿಶ್ವಾತ್ಮಕ' ಎಂಬ ಶಬ್ದದಲ್ಲಿ ಅಡಕವಾಗಿರುವ 'ವಿಶ್ವ' ಯಾವುದು? ಅದು, ಭೂಪಟದಲ್ಲೋ, ಭೂಗೋಳದಲ್ಲೋ ನಾವು ಗುರುತಿಸುವ ನೂರಾರು ದೇಶಗಳನ್ನು ಸಮಾನ ನೆಲೆಯಲ್ಲಿ ಒಳಗೊಳ್ಳುವುದಿಲ್ಲ. ಜ್ಞಾನ, ವಿಜ್ಞಾನ, ಪ್ರಜಾಪ್ರಭುತ್ವ, ಸ್ವಾತಂತ್ರ್ಯ, ನಾಗರಿಕತೆ, ಸಮಾನತೆ, ನ್ಯಾಯ – ಮುಂತಾದ 'ವಿಶ್ವಾತ್ಮಕ' ಮೌಲ್ಯಗಳಿಗೆ ಮಾದರಿ ಎನ್ನಿಸಿಕೊಂಡಿರುವ ಅಮೆರಿಕಾ ಮತ್ತು ಪಶ್ಚಿಮ ಯೂರೋಪ್‌ನ ದೇಶಗಳು ಹಾಗೂ ಈ ಮಾದರಿಯನ್ನು ಅನುಕರಿಸಲು ಹೆಣಗಾಡುತ್ತಿರುವ ವಿಶ್ವದ ಇತರ ದೇಶಗಳು – ಹೀಗೆ ವಿಶ್ವ ಎನ್ನುವಾಗ ನಮ್ಮ ಮನಸ್ಸಿನಲ್ಲಿರುವುದು ಒಂದು ಅಖಂಡ ವಿಶ್ವವಲ್ಲ; ಅದು ಯಾವತ್ತೋ ಛಿದ್ರಗೊಂಡಿದೆ. 'ಜಾಗತೀಕರಣ'ವೆನ್ನುವಾಗಲೂ ನಾವು ಒಂದು ಜಗತ್ತಿನ ಬಗ್ಗೆ ಹೇಳುತ್ತಿಲ್ಲ. ರಾಜಕೀಯ ಅಧಿಕಾರ ಮತ್ತು ಜಾಗತಿಕ ಸಂಪನ್ಮೂಲ ಹಾಗೂ ಮಾರುಕಟ್ಟೆಗಳ ಮೇಲೆ ಹಿಡಿತ ಹೊಂದಿರುವ ಅಮೆರಿಕಾ ಮತ್ತು ಪಶ್ಚಿಮ ಯೂರೋಪ್ ಒಂದೆಡೆ ಮತ್ತು ಈ ಬಣವನ್ನು ಅನುಸರಿಸಿಕೊಂಡು ಹೋಗಬೇಕಾಗಿರುವ ಅನಿವಾರ್ಯತೆಗೆ ಸಿಕ್ಕಿಕೊಂಡಿರುವ ಜಗತ್ತಿನ ಇತರ ದೇಶಗಳು – ಅಸಮಾನ ನೆಲೆಯ ಈ ಆರ್ಥಿಕ ರಾಜಕೀಯ ಹೊಂದಾಣಿಕೆಯನ್ನೇ ನಾವು ಜಾಗತೀಕರಣ ಎಂದು ಕರೆಯುತ್ತಿದ್ದೇವೆ. ಈ ಹೊಂದಾಣಿಕೆಯಲ್ಲಿ ತಮ್ಮ ಷರತ್ತುಗಳನ್ನು ಇತರ ದೇಶಗಳ ಮೇಲೆ ಒತ್ತಾಯದಲ್ಲಿ ಹೇರುತ್ತಿರುವ ಪಶ್ಚಿಮ ಯೂರೋಪ್‌ನ ದೇಶಗಳು ೧೯ನೆಯ ಶತಮಾನದ ವಸಾಹತುಶಾಹೀ ದೇಶಗಳಾಗಿದ್ದವು; ಇಂದು ಅಮೆರಿಕಾ ಜಗತ್ತಿನ ನವ ವಸಾಹತುಶಾಹೀ ಸಾಮ್ರಾಜ್ಯಶಾಹೀ ದೇಶಗಳ ಮುಂಚೂಣಿಯಲ್ಲಿದೆ. ಪಶ್ಚಿಮ ಯೂರೋಪ್ ಮತ್ತು ಅಮೆರಿಕಾದ ಆರ್ಥಿಕ ಷರತ್ತುಗಳಿಗೆ ತಲೆಬಾಗಲೇಬೇಕಾದ ದಯನೀಯ ಸ್ಥಿತಿಯಲ್ಲಿರುವ ಏಷ್ಯಾ, ಆಫ್ರಿಕಾ ಮತ್ತು ದಕ್ಷಿಣ ಅಮೆರಿಕಾ ದೇಶಗಳೆಲ್ಲ (ಭಾರತವೂ ಸೇರಿದಂತೆ) ೧೯ನೆಯ ಶತಮಾನದ ವಸಾಹತುಗಳಾಗಿದ್ದವು. ಈ ವಿದ್ಯಮಾನ ಕೂಡ ಜಗತ್ತು ಎರಡು ಅಸಮಾನ ಬಣಗಳಾಗಿ ಒಡೆದುಕೊಂಡಿರುವುದನ್ನೇ ಸೂಚಿಸುತ್ತದೆ. ಜಾಗತೀಕರಣವೆಂಬ ಪದ ಜಗತ್ತಿನ ಎಲ್ಲ ದೇಶಗಳನ್ನೂ ಸಮಾನ ನೆಲೆಯಲ್ಲಿ ಒಳಗೊಳ್ಳುವುದಿಲ್ಲ. ಹಾಗೆಯೇ ವಿಶ್ವ ಎಂಬ ಶಬ್ದ ಅಖಂಡ ವಿಶ್ವವನ್ನೂ ಸೂಚಿಸುವುದಿಲ್ಲ. ಯಾವುದನ್ನು ನಾವು ವಿಶ್ವಾತ್ಮಕ ಮೌಲ್ಯಗಳು ಎಂದು ಕರೆಯುತ್ತೇವೆಯೋ ಅವು ವಾಸ್ತವವಾಗಿ ಪಶ್ಚಿಮ ಯೂರೋಪ್ ಮತ್ತು ಅಮೆರಿಕಾದ ಮೌಲ್ಯಗಳು.

ಸ್ಥಳೀಯ ಸಮುದಾಯ ಮತ್ತು ಜ್ಞಾನ ಪರಂಪರೆಗಳಿಗೆ ಬದಲಿಯಾಗಿ ಬಂದ ಈ ಆಧುನಿಕ ವಿಶ್ವಾತ್ಮಕ ಮೌಲ್ಯಗಳು ಎಂತಹ ಅಸಂಗತ ಸನ್ನಿವೇಶಗಳಿಗೆ ಕಾರಣವಾಗಿವೆ ಎಂಬುದನ್ನು ಎರಡು ಪತ್ರಿಕಾ ವರದಿಗಳ ಆಧಾರದಲ್ಲಿ ವಿವರಿಸುತ್ತೇನೆ. ಇದಕ್ಕೆ ಸ್ಫೂರ್ತಿ ಮತ್ತು ಮಾದರಿಗಳನ್ನು ನೀಡಿದವನು ಖ್ಯಾತ ಎಡಪಂಥೀಯ ವಿಮರ್ಶಕ ವಾಲ್ಟರ್ ಬೆಂಜಮಿನ್. ಅವನಿಗೆ ಪತ್ರಿಕಾ ವರದಿಗಳ ತುಣುಕುಗಳು ಹಾಗೂ ಉದ್ಧೃತಗಳನ್ನು ಸಂಗ್ರಹಿಸುವ ವಿಲಕ್ಷಣ ಹವ್ಯಾಸವಿತ್ತು. ಅವನ ಬಳಿ ಸದಾ ಇರುತ್ತಿದ್ದ ಕಪ್ಪು ಬೈಂಡಿನ ಒಂದು ನೋಟ್‌ಬುಕ್ಕಿನಲ್ಲಿ ಅದನ್ನೆಲ್ಲ ಜೋಡಿಸಿ ಇಟ್ಟಿರುತ್ತಿದ್ದ. ಒಮ್ಮೊಮ್ಮೆ ತನ್ನ ಗೆಳೆಯರಿಗೆ ಅದನ್ನು ಓದಿ ಹೇಳುತ್ತಿದ್ದ. ಅವನ ಸಂಗ್ರಹದಲ್ಲಿ ಥರಹೇವಾರಿ ಸರಕುಗಳಿದ್ದವು. ಉದಾಹರಣೆಗೆ, ಅವನ ಒಂದು ನೋಟ್‌ಬುಕ್ಕಿನಲ್ಲಿ ೧೮ನೆಯ ಶತಮಾನದ ಅಜ್ಞಾತ ಕವಿಯೊಬ್ಬನ ಪ್ರೇಮಕವನದ ಕೆಳಗೆ ೧೯೩೯ರ ಒಂದು ಪತ್ರಿಕಾ ವರದಿ ಇತ್ತು. ಅದು ನಾಝಿಗಳು ವಶಪಡಿಸಿಕೊಂಡಿದ್ದ ಆಸ್ಟ್ರಿಯಾದ ರಾಜಧಾನಿ ವಿಯೆನ್ನಾಕ್ಕೆ ಸಂಬಂಧಿಸಿದ ಸುದ್ದಿ. ವಿಯೆನ್ನಾದ ಗ್ಯಾಸ್ ಕಂಪನಿಯೊಂದು ನಗರದ ಯಹೂದಿಗಳಿಗೆ ಗ್ಯಾಸ್ ಸಪ್ಲೈ ನಿಲ್ಲಿಸಿತ್ತು. ಯಹೂದಿಗಳಿಗೆ ಗ್ಯಾಸ್ ಕೊಡುವುದರಿಂದ ಕಂಪನಿಗೆ ನಷ್ಟವಾಗತೊಡಗಿತ್ತು. ನಗರದ ಯಹೂದಿಗಳು ಆತ್ಮಹತ್ಯೆಗೆ ಹೆಚ್ಚುಹೆಚ್ಚಾಗಿ ಬಳಸುತ್ತಿದ್ದುದು ಗ್ಯಾಸ್; ಮತ್ತು ಅಂತಹವರ ಗ್ಯಾಸ್ ಬಿಲ್ಲುಗಳು ಪಾವತಿಯಾಗುತ್ತಿರಲಿಲ್ಲ. ಆ ಪತ್ರಿಕಾ ವರದಿಯಲ್ಲಿ ಇದ್ದುದು ಇಷ್ಟೆ. ವರದಿ ಪ್ರಸ್ತಾಪಿಸದೆ ಬಿಟ್ಟ ನಗರದ ಯಹೂದಿಗಳ ಹತಾಶಸ್ಥಿತಿಯನ್ನು ನಾವು ವರದಿಯ ಸಾಲುಗಳೊಟ್ಟಿಗೆ ಅವುಗಳ ನಡುವೆ ಕೂಡ ಓದಿ ಊಹಿಸಿಕೊಳ್ಳಬೇಕು. ಬೆಂಜಮಿನ್‌ಗೆ ಇಂತಹ ವರದಿ, ಉದ್ಧೃತಗಳನ್ನೆಲ್ಲ ಒಂದೆಡೆ ಸೇರಿಸಿ ಸ್ವಂತದ ಒಂದು ಮಾತನ್ನೂ ಸೇರಿಸದೆ ಪುಸ್ತಕರೂಪದಲ್ಲಿ ಪ್ರಕಟಿಸಬೇಕು ಎಂಬ ಆಸೆ ಇತ್ತಂತೆ. ಅದೇ ಮಾದರಿಯಲ್ಲಿ ನನ್ನ ಗಮನಕ್ಕೆ ಬಂದ ಇತ್ತೀಚೆಗಿನ ಎರಡು ಪತ್ರಿಕಾ ವರದಿಗಳನ್ನು ಇಲ್ಲಿ ನಿಮ್ಮ ಮುಂದಿಡುತ್ತಿದ್ದೇನೆ. ಅದಕ್ಕೆ ವಿಶೇಷವಾದ ವ್ಯಾಖ್ಯೆ ವಿವರಣೆ ಬೇಕಿಲ್ಲ. ಅವುಗಳ ಸಂದರ್ಭ ಸೂಚಿಸಿದರೆ ಸಾಕು, ಅರ್ಥ ತನ್ನಿಂದ ತಾನೆ ಒಡಮೂಡುತ್ತದೆ. ಈ ವರದಿಗಳು ಕೇವಲ ವಾಸ್ತವದ ನಿರೂಪಣೆಯಷ್ಟೇ ಆಗಿರದೆ, ಯೂರೋಪು ಮತ್ತು ಅಮೆರಿಕಾ, ಜಗತ್ತಿನ ಇತರೆಡೆಗಳ ಜನರ ಮೇಲೆ ಹೇರಿದ ತನ್ನ 'ವಿಶ್ವಾತ್ಮಕ ಮೌಲ್ಯ'ಗಳ ಹಳವಂಡಗಳಿಗೆ ರೂಪಕ ಕೂಡ ಆಗಬಲ್ಲವು.

ಮೊದಲ ವರದಿ ಕಳೆದ ವರ್ಷ ಇಸ್ರೇಲ್, ಲೆಬೆನಾನ್ ಮೇಲೆ ನಡೆಸಿದ ಆಕ್ರಮಣಕ್ಕೆ ಸಂಬಂಧಿಸಿದ್ದು. ಲೆಬೆನಾನ್ ಮಧ್ಯಪ್ರಾಚ್ಯದ ಒಂದು ಪುಟ್ಟ ದೇಶ. ಸರಿಯಾಗಿ ಹೇಳಬೇಕೆಂದರೆ ಲೆಬೆನಾನ್ ಇರುವುದು ಪಶ್ಚಿಮ ಏಷ್ಯಾದಲ್ಲಿ; ಮಧ್ಯಪ್ರಾಚ್ಯದಲ್ಲಲ್ಲ, ಯಾಕೆಂದರೆ ಏಷ್ಯಾಖಂಡದ ಭಾರತದ

ನಮಗೆ ಅದು ಪಶ್ಚಿಮದಲ್ಲಿದೆ. ಪಶ್ಚಿಮ ಏಷ್ಯಾದಲ್ಲಿ ತೈಲ ಪತ್ತೆಯಾದ ಮೇಲೆ ಆ ಪ್ರದೇಶವನ್ನು ಯೂರೋಪ್ ಬಲಪ್ರಯೋಗದ ಮುಖಾಂತರ ಸ್ವಾಧೀನಪಡಿಸಿಕೊಂಡಿತು. ಯೂರೋಪ್‌ಗೆ ಅದು ಮಧ್ಯಪ್ರಾಚ್ಯ ; ಭಾರತ ಪ್ರಾಚ್ಯ ಮತ್ತು ಇಂಡೋನೀಸಿಯಾ, ವಿಯೆಟ್ನಾಂ, ಥೈಲ್ಯಾಂಡ್ ಮುಂತಾದವುಗಳು ದೂರಪ್ರಾಚ್ಯ ಫಾರ್‌ಈಸ್ಟ್. ೧೯ನೆಯ ಶತಮಾನ ವಸಾಹತುಶಾಹಿ ದೇಶಗಳ ಸರಕಾರೀ ಕಡತಗಳಲ್ಲಿ ಈ ಪ್ರದೇಶಗಳನ್ನು ನಮೂದಿಸುತ್ತಿದ್ದುದೇ ಹಾಗೆ. ಐರೋಪ್ಯರು ಆಳುವವರಾಗಿದ್ದುದರಿಂದ ಯೂರೋಪ್ ಜಗತ್ತಿನ ಕೇಂದ್ರ ಎಂದು ಅವರು ತಿಳಿದದ್ದು ಸಹಜ. ಆದರೆ ಅವರ ಆಕ್ಷಕೆಗೆ ಒಳಪಟ್ಟ ನಾವು ಕೂಡ, ನಮ್ಮದು 'ಈಸ್ಟ್' ಎಂದು ಭಾವಿಸಿದೆವು; ಅಂದರೆ ನಮ್ಮ ಬಗ್ಗೆ ಅವರು ತಮ್ಮ ಕಣ್ಣೋಟದಿಂದ ನೀಡಿದ ನಿರೂಪಣೆ ನಮ್ಮ ಆತ್ಮಜ್ಞಾನವೇ ಆಗಿಬಿಟ್ಟಿತು. ಲೆಬನಾನ್ ದೇಶವನ್ನು ಮಧ್ಯಪ್ರಾಚ್ಯವೆನ್ನುವುದು ಪೂರ್ವ ಯೂರೋಪಿನ ಸಮಯ ಸೂಚಿಸುವ ಕೈಗಡಿಯಾರವನ್ನು ಭಾರತದಲ್ಲಿ ಕಟ್ಟಿಕೊಂಡ ಹಾಗೆ. ದೇಶ, ಕಾಲ ಎರಡನ್ನೂ ಒಳಗೊಳ್ಳುವ ಈ ಉದಾಹರಣೆಯ ಮೂಲಕ ನಾನು ಒಂದು ಸಾಂಸ್ಕೃತಿಕ ದುರಂತವನ್ನು ವಿವರಿಸಲು ಯತ್ನಿಸುತ್ತಿದ್ದೇನೆ. ಯೂರೋಪ್ ಮತ್ತು ಅಮೆರಿಕಾ ''ಮುಂದುವರಿದಿವೆ''; ಭಾರತ ಮತ್ತು ಅಂತಹ ಇತರ ದೇಶಗಳು ''ಹಿಂದುಳಿದಿವೆ'' ಎನ್ನುವಾಗ ನಮ್ಮ ಮನಸ್ಸಿನಲ್ಲಿ ಇರುವುದು ಇಂತಹದ್ದೇ ಕಾಲಗಣನೆಯಲ್ಲವೆ ? ಒಮ್ಮೆ ಯೂರೋಪನ್ನು ಜಗತ್ತಿನ ಕೇಂದ್ರ ಎಂದು ಒಪ್ಪಿಕೊಂಡ ಮೇಲೆ, ನಾಗರಿಕತೆಯ ಕಾಲಮಾನದಲ್ಲಿ ನಾವು ಅವರಿಗಿಂತ ಹಿಂದಿದ್ದೇವೆ ಎಂಬುದನ್ನೂ ಒಪ್ಪಿಕೊಂಡಂತಾಯಿತು. ಅಭಿವೃದ್ಧಿಪಥದಲ್ಲಿ ಅವರು ಈಗಾಗಲೇ ಪ್ರೌಢಾವಸ್ಥೆ ತಲುಪಿದ್ದರೆ, ನಾವು ಇನ್ನೂ ಅಂಬೆಗಾಲಿಡುತ್ತಿದ್ದೇವೆ. ಕಾಲಗತಿಯಲ್ಲಿ ನಾವೂ ಬೆಳೆದು ದೊಡ್ಡವರಾಗುತ್ತೇವೆ; ಅವರ ಹಾಗೆ. ಅಂದರೆ ಯೂರೋಪ್ ಅಮೆರಿಕಾಗಳ ವರ್ತಮಾನವೇ ನಮ್ಮ ಭವಿಷ್ಯ.

ಯೂರೋಪ್ ೧೯ನೆಯ ಶತಮಾನದಲ್ಲಿ ಪಶ್ಚಿಮ ಏಷ್ಯಾವನ್ನು ಮಿಡ್ಲ್ ಈಸ್ಟ್ ಎಂದು ಕರೆಯಿತು. ಆ ನಾಮಕರಣದ ಹಕ್ಕು ಅದಕ್ಕೆ ದಕ್ಕಿದ್ದು ಅದರ ಮಿಲಿಟರಿ ಶಕ್ತಿಯ ಕಾರಣದಿಂದ. ದೇಶ ಮತ್ತು ನಾಗರಿಕತೆಗಳಿಗೆ ಹೆಸರುಗಳನ್ನು ಕೊಡುವುದು ಮತ್ತು ಗುಣಲಕ್ಷಣಗಳನ್ನು ನಿರೂಪಿಸುವುದು, ಎಲ್ಲ ಕಾಲದಲ್ಲೂ ಆಳುವವರೇ. ಹಾಗೆ ಮಧ್ಯಪ್ರಾಚ್ಯವೆನ್ನುವ ಭೂಪ್ರದೇಶ ಜಗತ್ತಿನ ಸಮಸ್ತರಿಗೂ ಮಧ್ಯಪ್ರಾಚ್ಯ... ಲೆಬನಾನ್ ಎಂದರೆ ಲೆಬನಾನ್ ಅಲ್ಲ; ೫೦ ವರ್ಷಗಳ ಹಿಂದೆ ಆ ಹೆಸರಿನ ದೇಶ... ಇರಲಿಲ್ಲ; ೭೦ ವರ್ಷಗಳ ಹಿಂದೆ ಹೇಗೆ ಪಾಕಿಸ್ತಾನ ಎಂಬ ದೇಶವಿರಲಿಲ್ಲವೋ ... ಅಷ್ಟೇ ಯಾಕೆ ಇರಾಕ್, ಇರಾನ್, ಸೌದೀ ಅರೇಬಿಯಾ, ಕುವೈತ್, ಎಮಿರೇ... ಮುಂತಾದ ಹೆಸರುಗಳ ಯಾವ ದೇಶವೂ ೫೦ ವರ್ಷಗಳ ಕೆಳಗೆ 'ಮಧ್ಯಪ್ರಾ... ದಲ್ಲಿರಲಿಲ್ಲ. ಇವುಗಳಲ್ಲಿ ಪ್ರತಿಯೊಂದು ರಾಷ್ಟ್ರ ಪ್ರಭುತ್ವದ ಹುಟ್ಟಿನ ಹಿಂದೆಯ... ಐರೋಪ್ಯ ವಸಾಹತುಶಾಹಿ ಮತ್ತು ಅಮೆರಿಕಾದ ಸಾಮ್ರಾಜ್ಯಶಾಹಿಯ ಒ... ಇರುವುದನ್ನು ಗುರುತಿಸಬಹುದಾಗಿದೆ.

೨೦೦೬ರಲ್ಲಿ ಲೆಬನಾನ್‌ನ ಹೆಜ್ಬುಲ್ಲಾ ಎಂಬ ಇಸ್ಲಾಮಿಕ್ ಗೆರಿಲ್ಲಾ ಪಡೆ ತನ್ನ ಇಬ್ಬ... ಸೈನಿಕರನ್ನು ಸೆರೆಹಿಡಿದು ಒತ್ತೆಯಾಳುಗಳಾಗಿ ಇರಿಸಿಕೊಂಡಿದ್ದಾರೆ ಎಂಬ ಕಾರಣ... ಇಸ್ರೇಲ್ ಲೆಬನಾನ್ ಮೇಲೆ ಆಕ್ರಮಣ ನಡೆಸಿತು. ರಾಜಧಾನಿ ಬೈರೂತ್ ಮತ್ತು ಇ... ನಗರಗಳ ಮೇಲೆ ಮಾತ್ರವಲ್ಲ, ಹಳ್ಳಿಗಳ ಮೇಲೆ ಕೂಡ ಇಸ್ರೇಲ್ ಬಾಂಬ್ ದಾ... ನಡೆಸಿತು. ಈ ದಾಳಿಯಲ್ಲಿ ಲೆಬನಾನ್‌ನ ೮೪೫ ನಾಗರಿಕರು ಮೃತರಾದರು... ೪೦೦೦ದಷ್ಟು ಜನ ಗಂಭೀರವಾಗಿ ಗಾಯಗೊಂಡರು, ೧೫೦೦೦ ಮನೆಗ... ಧ್ವಂಸವಾಗಿ ೯ ಲಕ್ಷದಷ್ಟು ಜನ ನಿರಾಶ್ರಿತರಾದರು. ಇಸ್ರೇಲ್‌ನ ಈ ಏಕಪಕ್ಷೀ... ದಾಳಿಯ ಬಗ್ಗೆ ವಿಶ್ವರಾಷ್ಟ್ರ ಸಂಸ್ಥೆ (ಇದೂ ಕೂಡ ಅಮೆರಿಕಾ ಮತ್ತು ಇತರ 'ಮುಂ... ವರೆದ' ರಾಷ್ಟ್ರಗಳ ಆಣತಿಗೆ ಒಳಪಟ್ಟ ಸಂಸ್ಥೆ) ಯಾವ ಕ್ರಮವನ್ನೂ ಕೈಗೊಳ್ಳಲಿ... ಯೂರೋಪ್‌ನ ದೇಶಗಳು ಈ ದಾಳಿಗೆ ಮೂಕಪ್ರೇಕ್ಷಕನಾಗಿದ್ದರೆ ಇಂಗ್ಲೆಂಡ್ ಮ... ಅಮೆರಿಕಾ ಇಸ್ರೇಲ್‌ಗೆ ತಮ್ಮ ಆರ್ಥಿಕ ಹಾಗೂ ಮಿಲಿಟರಿ ನೆರವನ್ನು ಈ ದಾಳಿ... ಸಂದರ್ಭದಲ್ಲಿ ಕೂಡ ಮುಂದುವರಿಸಿದವು. ಲೆಬನಾನ್ ಭೌಗೋಳಿಕವಾಗಿ ಅತ್ಯ... ಆಯಕಟ್ಟಿನ ಸ್ಥಳದಲ್ಲಿದ್ದು ಅಲ್ಲಿ ಇಸ್ಲಾಂ, ಕ್ರೈಸ್ತ ಮತ್ತು ಯಹೂದ್ಯ ಈ ಮೂ... ಧರ್ಮಗಳ ಪವಿತ್ರ ಕ್ಷೇತ್ರಗಳಿವೆ. ಇವು ಏಷ್ಯಾ ಖಂಡದ ಧರ್ಮಗಳು ಎಂಬುದ... ನಾವು ಗಮನಿಸಬೇಕು. ''ಕ್ರೈಸ್ತ ಧರ್ಮ ಯೂರೋಪ್ ಖಂಡದ...





ಹಿರಿಯ ಸಾಹಿತಿ ಶ್ರೀ ಶೇಷನಾರಾಯಣ ಬರೆದಿರುವ

**ಕಾವೇರಿ**

ಒಂದು ಚಿಮ್ಮು ಒಂದು ಹೊರಳು

**ಶತಮಾನಗಳಿಂದ ಇಂದಿನ ಸುಪ್ರೀಂ ಕೋರ್ಟ್ ತೀರ್ಪಿನವರೆಗೂ ಕಾವೇರಿ ಬಿಕ್ಕಟ್ಟಿನ ಬಗ್ಗೆ ಸಮಗ್ರ ಚಿತ್ರಣ. ಪ್ರತಿಯೊಬ್ಬ ಕನ್ನಡಿಗರೂ ಓದಬೇಕಾದ ಪುಸ್ತಕ**

**ಭಾಗ್ಯಲಕ್ಷ್ಮೀ ಪ್ರಕಾಶನ**

87, 3ನೇ ಕ್ರಾಸ್, 4ನೇ ಬ್ಲಾಕ್, ಬನಶಂಕರಿ 3ನೇ ಹಂತ,
3ನೇ ಫೇಸ್, ಬೆಂಗಳೂರು - 560 085
ದೂರವಾಣಿ : 26695715 ಮೊಬೈಲ್ : 94480 47735

ಿಶಿಸುವವರೆಗೆ ಅತ್ಯಂತ ಮಾನವೀಯವಾಗಿತ್ತು'' ಎಂದು ಗಾಂಧೀಜಿ ಹೇಳಿದ್ದರು. ಪಶ್ಚಿಮ ದ ಪ್ಯಾಲೆಸ್ತೀನ್‌ನಲ್ಲಿ ಸಾವಿರಾರು ವರ್ಷಗಳಿಂದ ನೆಲೆಗೊಂಡಿದ್ದ ಅರಬ್ಬರನ್ನು ಮತ್ತು ಯು ಕ್ರೈಸ್ತರು ಮತ್ತು ಯಹೂದಿಗಳನ್ನು ಅಲ್ಲಿಂದ ಬಲ ಪ್ರಯೋಗದಿಂದ ಓಡಿಸಿ, ಅಲ್ಲಿ ಲ್ ಎಂಬ ಪುರಾತನ ಹೆಸರಿನ ಹೊಸ ರಾಷ್ಟ್ರವೊಂದನ್ನು ೧೯೪೮ರಲ್ಲಿ ಅಮೆರಿಕಾ, ಇಂಗ್ಲೆಂಡ್ ಇತರ ಸಾಮ್ರಾಜ್ಯಶಾಹೀ ಶಕ್ತಿಗಳು ಒಟ್ಟಾಗಿ ಸ್ಥಾಪಿಸಿದ್ದನ್ನು ಸಹ ಗಾಂಧೀಜಿ ಖಂಡಿಸಿದ್ದರು. ಲ್ ಸ್ಥಾಪನೆಯಾದಂದಿನಿಂದ, ಸ್ಥಳೀಯ ಅರಬ್ಬರು ತಮ್ಮ ನೆಲದಲ್ಲೇ ನಿರಾಶ್ರಿತರಾಗಿದ್ದಾರೆ. ಲ್ ಸತತವಾಗಿ ಅರಬ್ಬರನ್ನು ಅವರ ಊರು ಮನೆಗಳಿಂದ ಓಡಿಸಿ, ಜಗತ್ತಿನ ವಿವಿಧ ಗಳಿಂದ ವಲಸೆ ಬಂದ ಯಹೂದಿಗಳನ್ನು ಅಲ್ಲಿ ನೆಲೆಗೊಳಿಸುತ್ತಿದೆ ಮತ್ತು ನಿರಂತರವಾಗಿ ತನ್ನ ಳನ್ನು ವಿಸ್ತರಿಸುತ್ತಿದೆ. ಹೀಗೆ ಪಶ್ಚಿಮ ಏಷ್ಯಾದಲ್ಲಿ ಇಸ್ರೇಲ್ ತನ್ನ ಹುಟ್ಟಿನಿಂದಲೇ ಒಂದು ಣಕಾರಿ ದೇಶ. ಲೆಬೆನಾನ್ ಮೇಲೆ ಅದು ನಡೆಸಿದ ದಾಳಿ ಕೂಡ ಅದರ ಈ ಧೋರಣೆಯ ದುವರಿಕೆ. ಈ ದಾಳಿ ಒಂದು ನಿಲುಗಡೆಗೆ ಬಂದ ಮೇಲೆ ಪ್ರಕಟವಾದ ಪತ್ರಿಕಾ ಯೊಂದು ಹೀಗಿದೆ : ''ವಿಶ್ವರಾಷ್ಟ್ರ ಸಂಸ್ಥೆಯ ಒಂದು ಅಂಗಸಂಸ್ಥೆ ಯುನೆಸ್ಕೊ. ಲೆಬೆನಾನ್‌ನ ೀನ ಅವಶೇಷಗಳು ಈಗ ಯಾವ ಸ್ಥಿತಿಯಲ್ಲಿವೆ ಎಂದು ಪರಿಶೀಲಿಸಲು ಪ್ರಾಚ್ಯವಸ್ತು ಶಾಸ್ತ್ರಜ್ಞರ ು ತಂಡವನ್ನು ಅಲ್ಲಿಗೆ ಕಳುಹಿಸಿದೆ. ಲೆಬೆನಾನ್‌ನಲ್ಲಿ ಇಸ್ಲಾಂ, ಕ್ರೈಸ್ತ ಮತ್ತು ಯಹೂದಿ ರ್ದ ಪ್ರಾಚೀನ ಅವಶೇಷಗಳ ಜೊತೆಗೆ ಪುರಾತನ ರೋಮ್ ಸಾಮ್ರಾಜ್ಯದ ಸ್ಮಾರಕಗಳೂ ಯುನೆಸ್ಕೋ ವಿಶ್ವಪರಂಪರೆಯ ತಾಣಗಳು ಎಂದು ಗುರುತಿಸುವ ಸ್ಥಳಗಳಲ್ಲಿ ಎರಡು – ಮತ್ತು ಬಿಬ್ಲೋಸ್ – ಲೆಬೆನಾನ್‌ನಲ್ಲಿವೆ. ಲಂಡನ್‌ನ ಬ್ರಿಟಿಷ್ ಮ್ಯೂಸಿಯಂನ ಡೈರೆಕ್ಟರ್ ಮೆಕ್‌ಗ್ರೆಗೋರ್ ಮತ್ತು ಇತರ ವಿದ್ವಾಂಸರು ಲೆಬೆನಾನ್ ಮೇಲೆ ಇಸ್ರೇಲ್ ನಡೆಸಿದ ಬ್ ದಾಳಿಯಲ್ಲಿ ಈ ತಾಣಗಳಿಗೆ ಆದ ಹಾನಿಯ ಬಗ್ಗೆ ತೀವ್ರ ಕಳವಳ ವ್ಯಕ್ತಪಡಿಸಿದ್ದಾರೆ. ಅದೂ ನ ಬಾಲ್‌ಬೆಕ್ ಎಂಬ ಊರಿನ ಪ್ರಾಚೀನ ಗ್ರೀಕ್ ದೇವಾಲಯಕ್ಕೂ ತುಂಬ ಹಾನಿಯಾಗಿದೆ. ಾನ್‌ನಲ್ಲಿ ೫೦೦೦ ವರ್ಷ ಗಳಷ್ಟು ಹಳೆಯ ಫಿನೀಷಿಯನ್ ನಾಗರಿಕತೆಯ ಅವಶೇಷಗಳಿದ್ದು ಹಾನಿಗೊಳಗಾಗಿವೆಯೆ ಎಂಬುದನ್ನು ಪರಿಶೀಲಿಸಬೇಕಾಗಿದೆ. ಯುನೆಸ್ಕೊ ತಂಡದ ಮುಖ್ಯಸ್ಥ ಸೆನಾಕಿ, ಫ್ರಾನ್ಸ್ ಸರಕಾರ ಸದ್ಯದಲ್ಲೇ ಲೆಬೆನಾನ್‌ಗೆ ಪುರಾತತ್ವ ಶಾಸ್ತ್ರಜ್ಞರ ಒಂದು ತಂಡವನ್ನು ಸುವುದಾಗಿಯೂ ಅವರು ೧೫ರಿಂದ ೨೦ ಲೆಬೆನಾನ್ ತರುಣರ ನೆರವಿನೊಂದಿಗೆ ಈ ೀಷಗಳ ದುರಸ್ತಿಯನ್ನು ಕೈಗೊಳ್ಳುವರು ಎಂಬುದಾಗಿಯೂ ತಿಳಿಸಿದ್ದಾರೆ. (*War Shatters non's Roman Legacy* – The Hindu - September 18, 2006, ಪುಟ ೧೪)

ಈ ಪತ್ರಿಕಾ ವರದಿ ದಾಖಲಿಸಿರುವ ಬ್ರಿಟಿಷ್ ಮ್ಯೂಸಿಯಂನ ನಿರ್ದೇಶಕ ಹಾಗೂ ಫ್ರೆಂಚ್ ತತ್ವ ಶಾಸ್ತ್ರಜ್ಞರ ಕಾಳಜಿ ನಿಜಕ್ಕೂ ಮೆಚ್ಚಬೇಕಾದ್ದು. ಭಗ್ನಗೊಂಡ ಪ್ರಾಚೀನ ಅವಶೇಷಗಳನ್ನು ಯೇ ಬಿಟ್ಟರೆ ಅವು ಪೂರ್ತ ನಾಶವಾದಾವು; ಅಥವಾ ಅಮೆರಿಕಾ ಇರಾಕ್‌ನ ಮೇಲೆ ನಡೆಸಿದ ಣದಲ್ಲಿ ಆದ ಹಾಗೆ ಲೂಟಿಯಾಗಿ ಕಾಲಕ್ರಮೇಣ ಲಂಡನ್, ಪ್ಯಾರಿಸ್, ನ್ಯೂಯಾರ್ಕ್, ನ್ ಇವೇ ಮುಂತಾದ ಪಾಶ್ಚಿಮಾತ್ಯ ನಗರಗಳ ಪ್ರತಿಷ್ಠಿತ ಮ್ಯೂಸಿಯಂಗಳಲ್ಲಿ ನೆಲೆಗೊಂಡಾವು. ುದ ಈ ಸಾಂಸ್ಕೃತಿಕ ದರೋಡೆ, ವಸಾಹತುಶಾಹಿಯ ಒಂದು ವಿವರವಷ್ಟೆ. ಹೀಗಿರುತ್ತ ಾನ್ ಪ್ರಾಚೀನ ಅವಶೇಷಗಳ ಬಗ್ಗೆ ಬ್ರಿಟಿಷ್ ಮತ್ತು ಫ್ರೆಂಚ್ ವಿದ್ವಾಂಸರು ತೋರಿಸಿದ ಜಿಯನ್ನು ತಾರೀಫು ಮಾಡಬೇಕು. ಆದರೆ ಲೆಬೆನಾನ್ ಮೇಲೆ ನಡೆದ ದಾಳಿಯಲ್ಲಿ ಸತ್ತ ರಿಕರ ಬಗ್ಗೆ ಯಾಕೆ ಈ ಕಾಳಜಿ ಕಾಣಿಸುವುದಿಲ್ಲ? ಏಷ್ಯಾ, ಆಫ್ರಿಕಾ ಮತ್ತು ದಕ್ಷಿಣ ಅಮೆರಿಕಾ ತಗಳ ದೇಶಗಳನ್ನು ವಶಪಡಿಸಿಕೊಂಡು ಆಳಿದ ಯೂರೋಪ್‌ನ ಪ್ರಭುತ್ವ-ವ್ಯವಸ್ಥೆಗಳಿಗೆ ಗಳ ಜನರ ಬಗ್ಗೆಯೂ ಕಾಳಜಿ ಇರಲಿಲ್ಲ; ಆ ಜನರ ಸಂಸ್ಕೃತಿಯ ಬಗ್ಗೆಯೂ ಕಾಳಜಿ ಿಲ್ಲ. ಅವರಲ್ಲಿ ಇದ್ದುದು, ಅವಶೇಷಗಳನ್ನು ಪ್ರದರ್ಶನಕ್ಕೆ ಅಣಿಗೊಳಿಸಿ ಇಡುವ ಹಪಾಪಿತನ ತ್ರ. ಶಿವ ವಿಶ್ವನಾಥನ್ ತನ್ನ ಒಂದು ಪ್ರಬಂಧದಲ್ಲಿ ಹೇಳುವಂತೆ ಜಗತ್ತಿಗೆ ವಸಾಹತುಶಾಹಿಯ ದೊಡ್ಡ ಸಾಂಸ್ಕೃತಿಕ ಕೊಡುಗೆ, ಮ್ಯೂಸಿಯಂ. ವಸಾಹತುಶಾಹಿ ಯೂರೋಪ್‌ಗೆ, ಹತುಗಳ ಮನುಷ್ಯರು (ಬಹುತೇಕ ಕರಿಯ ಮನುಷ್ಯರು) ಎಂದೂ ಮೌಲ್ಯವಾಗಿರಲಿಲ್ಲ. ರೆ ಈ ಜನಗಳ ಸಂಸ್ಕೃತಿಯ ಸರಕುಗಳು ರಕ್ಷಿಸಿ ಇಡಬೇಕಾಗಿದ್ದ ಮೌಲ್ಯಗಳಾಗಿದ್ದವು ರಶಃ ಸಹ). ಸಂಸ್ಕೃತಿ ಎಂದರೆ ಮ್ಯೂಸಿಯಂ, ಗೋಷ್ಠಿ, ಕಚೇರಿ, ಸಮಾರಂಭಗಳಲ್ಲಿ ೂ ರಿಪಬ್ಲಿಕ್ ಡೆ ಪರೇಡ್ ಮುಂತಾದ ಪ್ರಭುತ್ವದ ಪ್ರದರ್ಶನಗಳಲ್ಲಿ ಜಾಹೀರುಗೊಳ್ಳು ಹದು ಎಂಬ ವ್ಯಾಖ್ಯೆಯೂ ವಸಾಹತುಶಾಹಿಯದ್ದೇ ಬಳುವಳಿ. ವಿಪರ್ಯಾಸವೆಂದರೆ ರೋಪ್‌ನ ವಸಾಹತುಶಾಹಿ ನಮ್ಮ ಸಂಸ್ಕೃತಿಯ ಬಗೆಗೆ ಕಟ್ಟಿಕೊಟ್ಟ ಕಥನಗಳನ್ನು ನಾವೇ ತೊಡಗಿದ್ದೇವೆ. ತಮ್ಮ ಅಧೀನದಲ್ಲಿರುವ ದೇಶದ ಜನರನ್ನು, ಹೆಂಗಸರು, ಮಕ್ಕಳು, ುಕರು ಎಂದು ಸಹ ನೋಡದೆ ಕೊಲ್ಲುವುದು, ಸಮುದಾಯಗಳ ಆಸ್ತಿಪಾಸ್ತಿ ನಾಶಗೊಳಿಸಿ ರನ್ನು ಒಕ್ಕಲೆಬ್ಬಿಸುವುದು; ಜೊತೆಜೊತೆಗೆ ಅವರ ಕಲೆಯನ್ನು ಸರಕುಗಳಂತೆ ಓರಣವಾಗಿ ೋಡಿಸಿ ಪ್ರದರ್ಶನಕ್ಕೆ ಇಡುವುದು – ಈ 'ಸಂಸ್ಕೃತಿ ರಕ್ಷಣೆ'ಯ ಕೆಲಸವನ್ನು ಯೂರೋಪ್ ತನ್ನದಲ್ಲದ ವಸಾಹತುಗಳಲ್ಲಿಯೂ ನಡೆಸಿದೆ. ಸಂಸ್ಕೃತಿಯ ಈ ವ್ಯಾಖ್ಯೆಯನ್ನೂ, ಸಂಸ್ಕೃತಿಯನ್ನು ರಕ್ಷಿಸುವ ಈ ವಿಧಾನವನ್ನೂ ತಮ್ಮ ಮಾಜಿ ದಣಿಗಳಿಂದ ಕಲಿತ ಭಾರತದ ಪ್ರತಿಷ್ಠಿತರು ಈಗ ಆ ಮಾದರಿಯಲ್ಲೇ ಆದಿವಾಸಿಗಳ ಮತ್ತು ಗ್ರಾಮೀಣ ಜನರ ಕಲೆ, ಕಸುಬುಗಳನ್ನು ''ಸಂರಕ್ಷಿಸುತ್ತಿದ್ದಾರೆ''. ಆದಿವಾಸಿಗಳನ್ನೂ ಬಡರೈತರನ್ನೂ ನೆಲೆತಪ್ಪಿಸಿ, ಅಣೆಕಟ್ಟುಗಳಿಂದ ಅವರ ಊರುಮನೆಗಳನ್ನು ''ಮುಳುಗಡೆ'' ಮಾಡಿ, ಅವರು ಕೃಷಿ ಮಾಡಿಕೊಂಡಿದ್ದ ನೆಲವನ್ನು ಅದಿರಿಗಾಗಿ ಅಗೆದು, ಅವರ ಭೂಮಿಕಾಣಿಗಳ ಜೊತೆ ನೆನಪುಗಳನ್ನೂ ಸಂಸ್ಕೃತಿಯನ್ನೂ ಧ್ವಂಸ ಮಾಡಿ ಅವರ ಹಾಡು ಕುಣಿತಗಳನ್ನು ರಿಪಬ್ಲಿಕ್ ಡೇ ಪರೇಡುಗಳಲ್ಲಿ ಪ್ರದರ್ಶಿಸುವುದು ಮತ್ತು ಭೋಪಾಲ್‌ನ ಭಾರತ್ ಭವನದಂತಹ ಸಂಸ್ಕೃತಿ ಇಲಾಖೆ (!)ಯ ಕಟ್ಟಡಗಳಲ್ಲಿ ಅವರ ಚಿತ್ರ, ಶಿಲ್ಪಗಳನ್ನು ಜೋಡಿಸಿ ಇಡುವುದು – ಇದನ್ನು ನಮ್ಮ ಹೊಸ ಆಳುವ ವರ್ಗ ಕಲಿತದ್ದು ಈ ದೇಶವನ್ನು ಆಳಿದ ಬಿಳಿ ದೊರೆಗಳಿಂದಲೆ. ಲೆಬೆನಾನ್ ಸಾಂಸ್ಕೃತಿಕ ಅವಶೇಷಗಳ 'ರಕ್ಷಣೆ' ಕುರಿತ ಪತ್ರಿಕಾ ವರದಿ ಕೇವಲ ಲೆಬೆನಾನ್‌ನ ವಿದ್ಯಮಾನವೊಂದರ ನಿರೂಪಣೆಯಲ್ಲ; ಅದು ಜನರ ಸಂಸ್ಕೃತಿ, ಅವರ ಬದುಕಿನಿಂದ ಬೇರ್ಪಟ್ಟು ನಿರ್ಜೀವ ಸರಕುಗಳಾಗಿ ಮಾರ್ಪಟ್ಟ ದುರಂತಸ್ಥಿತಿಯ ರೂಪಕವೂ ಹೌದು.

ಇತ್ತೀಚೆಗೆ ಪತ್ರಿಕೆಗಳಲ್ಲಿ ಜಗತ್ತಿನ ಅತಿಭ್ರಷ್ಟ ಮತ್ತು ಪ್ರಾಮಾಣಿಕ ದೇಶಗಳ ಪಟ್ಟಿಯೊಂದು ಪ್ರಕಟವಾಗಿದೆ (ದಿ ಹಿಂದು – [illegible],

### ಭ್ರಷ್ಟಾಚಾರ ಸೂಚಿ

ವಿಶ್ವದಲ್ಲಿ ಮ್ಯಾನ್ಮಾರ್ ಮತ್ತು ಸೋಮಾಲಿಯ ಭ್ರಷ್ಟಾಚಾರದಲ್ಲಿ ಮೊದಲಿಗರೆಂದು ಹೇಳಲಾಗಿದೆ. ಎರಡೂ ದೇಶಗಳಲ್ಲಿ ಮಿಲಿಟರಿ ಆಡಳಿತ ಇದೆ. ಎರಡೂ ಕಡೆ ಇಪ್ಪತ್ತು ವರ್ಷಗಳಿಂದ ಸರ್ಕಾರ ವಿರೋಧಿ ಆಂದೋಲನಗಳು ಜರುಗುತ್ತಾ ಬಂದಿವೆ.

**ಅತಿ ಕಡಿಮೆ ಮಟ್ಟದ ಭ್ರಷ್ಟಾಚಾರವಿರುವ ಹತ್ತು ದೇಶಗಳು**

| | |
|---|---|
| ಡೆನ್ಮಾರ್ಕ್, ಫಿನ್‌ಲ್ಯಾಂಡ್, ನ್ಯೂಜಿಲ್ಯಾಂಡ್ | ೯.೪ |
| ಸಿಂಗಾಪುರ್, ಸ್ವೀಡನ್ | ೯.೩ |
| ಐಸ್‌ಲ್ಯಾಂಡ್ | ೯.೨ |
| ನೆದರ್‌ಲ್ಯಾಂಡ್ಸ್, ಸ್ವಿಟ್ಜರ್‌ಲ್ಯಾಂಡ್ | ೯.೦ |
| ಕೆನಡಾ, ನಾರ್ವೆ | ೮.೭ |
| ಆಸ್ಟ್ರೇಲಿಯಾ | ೮.೬ |
| ಲಕ್ಸೆಂಬರ್ಗ್, ಯು.ಕೆ. | ೮.೪ |
| ಹಾಂಗ್‌ಕಾಂಗ್ | ೮.೩ |
| ಆಸ್ಟ್ರಿಯಾ | ೮.೧ |
| ಜರ್ಮನಿ | ೭.೮ |
| ಐರ್ಲೆಂಡ್, ಜಪಾನ್ | ೭.೫ |
| ಫ್ರಾನ್ಸ್ | ೭.೩ |
| ಯು.ಎಸ್.ಎ. | ೭.೨ |
| ಬೆಲ್ಜಿಯಂ | ೭.೦ |

**ಅತಿ ಹೆಚ್ಚಿನ ಭ್ರಷ್ಟಾಚಾರ = ೦=ಅತ್ಯಂತ ಕಳಪೆ**

| | |
|---|---|
| ಆಫ್‌ಘಾನಿಸ್ತಾನ್, ಚಾಡ್, ಸೂಡಾನ್ | ೧.೮ |
| ಟೊಂಗಾ, ಉಜ್ಬೇಕಿಸ್ತಾನ | ೧.೭ |
| ಹೈಟಿ | ೧.೬ |
| ಇರಾಕ್ | ೧.೫ |
| ಮ್ಯಾನ್ಮಾರ್, ಸೋಮಾಲಿಯಾ | ೧.೪ |

ಆಧಾರ : ಟ್ರಾನ್ಸ್‌ಪರೆನ್ಸಿ ಇಂಟರ್‌ನ್ಯಾಷನಲ್
ಹಕ್ಕುಗಳು : ಗ್ರಾಫಿಕ್ ನ್ಯೂಸ್

ಪುಟ ೧೭). ಇಂತಹ ದಾಖಲೆಗಳಿಂದ ಯಾರಿಗೆ ಏನು ಪ್ರಯೋಜನವೋ ತಿಳಿಯದು. ಆದರೆ ಜಗತ್ತಿನ ಅತಿಶ್ರೇಷ್ಠ ಸಾಹಿತಿ, ಶ್ರೇಷ್ಠ ನಟ, ಅತಿ ಹೆಚ್ಚು ಮಾರಾಟವಾದ ಪುಸ್ತಕ, ಅತಿ ಗಿಡ್ಡ, ಅತಿ ಎತ್ತರ, ಅತಿಕಾಯಗಳ ವ್ಯಕ್ತಿಗಳು – ಹೀಗೆ ಪತ್ರಿಕೆಗಳಲ್ಲಿ ವಿಧವಿಧದ ಯಾದಿಗಳು ಪ್ರಕಟವಾಗುತ್ತಲೇ ಇರುತ್ತವೆ. ಜಗತ್ತಿನ ಒಂದನೇ, ಎರಡನೇ ಮತ್ತು ಮೂರನೆಯ ಅತಿ ಸುಂದರಿಯರನ್ನು ಆಯ್ಕೆಮಾಡುವುದಂತೂ ಒಂದು ವಾರ್ಷಿಕ ಅಂತರರಾಷ್ಟ್ರೀಯ ಆಚರಣೆಯೇ ಆಗಿಬಿಟ್ಟಿದೆ. ಜಗತ್ತಿನ ಸೌಂದರ್ಯವರ್ಧಕ ಉದ್ಯಮವೇ ಅದರ ಮೇಲೆ ನಿಂತಿದೆಯಂತೆ! ಮೇಲೆ ಹೇಳಿದ ಅತಿ ಭ್ರಷ್ಟ ಮತ್ತು ಪ್ರಾಮಾಣಿಕ ದೇಶಗಳ ಕುರಿತಾದ ವರದಿಯ ಜೊತೆಗೆ ಪ್ರಕಟವಾಗಿರುವ ಪಟ್ಟಿಕೆಗಳನ್ನು ಬಾರ್ ಚಾರ್ಟ್ ಸೂಕ್ಷ್ಮವಾಗಿ ಗಮನಿಸಿ. ಅದರಲ್ಲಿ ಜಗತ್ತಿನ ಅತಿ ಭ್ರಷ್ಟ ಎಂದು ಗುರುತಿಸಲಾಗಿರುವ ದೇಶಗಳು – ಮ್ಯಾನ್ಮಾರ್ (ಬರ್ಮ), ಸೋಮಾಲಿಯ, ಇರಾಕ್, ಹೈಟಿ, ಟೊಂಗಾ, ಉಜ್ಬೆಕಿಸ್ತಾನ್, ಅಫ್ಘಾನಿಸ್ತಾನ, ಚಾಡ್ ಮತ್ತು ಸುಡಾನ್‌ಗಳು ಭೂಗೋಳದ ಕೆಳಗಿನ ಅರ್ಧದಲ್ಲಿ ಇರುವಂತಹವು; ಎಲ್ಲವೂ ''ಹಿಂದುಳಿದಿರುವ'' ದೇಶಗಳು ಹಾಗೂ ಆರ್ಥಿಕವಾಗಿ ಅತೀವ ಬಡತನದಲ್ಲಿ ಇರುವಂತಹವು. ಈ ದೇಶಗಳಲ್ಲಿ ಹೆಚ್ಚಿನವು ಮಾಜಿ ವಸಾಹತುಗಳು; ಮತ್ತು ಈಗ ಬಹುತೇಕ ಎಲ್ಲವೂ ಅಮೆರಿಕಾದ ಸಾಮ್ರಾಜ್ಯಶಾಹಿಗೆ ಅಧೀನವಾಗಿರುವಂತಹವು. ಈ ಎಲ್ಲ ವೈಶಿಷ್ಟ್ಯಗಳೂ ಒಂದಕ್ಕೊಂದು ತಳಕುಹಾಕಿಕೊಂಡಿವೆ ಎಂಬುದನ್ನು ಅಲಾಯದ ಹೇಳಬೇಕಾಗಿಲ್ಲ.

ಈಗ ಇಂತಹ ಪಟ್ಟಿಕೆಗಳಲ್ಲಿರುವ ವಿಶ್ವದ ಸುರಸುಂದರಿಯರು – ಅರ್ಥಾತ್ ಅತಿ ಪ್ರಾಮಾಣಿಕ ದೇಶಗಳ ಹೆಸರುಗಳನ್ನು ಗಮನಿಸಿ. ಅವುಗಳಲ್ಲಿ ಹೆಚ್ಚಿನವು ಪಶ್ಚಿಮ ಯೂರೋಪ್ ಮತ್ತು ಉತ್ತರ ಅಮೆರಿಕಾ ಖಂಡದ ದೇಶಗಳು. ಎರಡನೆಯ ಸ್ಥಾನದಲ್ಲಿರುವ ಸಿಂಗಾಪುರ ಮತ್ತು ಎಂಟನೆಯ ಸ್ಥಾನದಲ್ಲಿರುವ ಹಾಂಗ್‌ಕಾಂಗ್ ಏಷ್ಯಾ ಖಂಡದಲ್ಲಿದ್ದರೂ, ಅವು ದೇಶಗಳೂ ಅಲ್ಲ; ನಾಗರಿಕತೆಗಳೂ ಅಲ್ಲ; ಕೇವಲ ನಗರಗಳು. ಹಾಗೆ ನೋಡಿದರೆ ಈ ಪ್ರಾಮಾಣಿಕತೆಯ ಪಟ್ಟಿಯಲ್ಲಿ ೮೩ನೆಯ ಸ್ಥಾನ (೧೩೩ ದೇಶಗಳಲ್ಲಿ) ಪಡೆದಿರುವ ಭಾರತದಲ್ಲಿ ಆ ಎರಡು ನಗರಗಳ ಒಟ್ಟು ಜನಸಂಖ್ಯೆಯಷ್ಟು ಪ್ರಾಮಾಣಿಕ ಜನ ಖಂಡಿತ ಇದ್ದಾರೆ! ಈ 'ಅತಿ ಪ್ರಾಮಾಣಿಕ' ಎಂಬ ಹೆಗ್ಗಳಿಕೆಯ ರಾಷ್ಟ್ರಗಳಲ್ಲಿ ಕೆಲವಂತೂ ಜಗತ್ತಿನ ಅತಿದೊಡ್ಡ ಶಸ್ತ್ರಾಸ್ತ್ರ ತಯಾರಕ ಮತ್ತು ರಫ್ತುದಾರ ರಾಷ್ಟ್ರಗಳೂ ಆಗಿವೆ. ಉದಾಹರಣೆಗೆ, ಸ್ವೀಡನ್, ಯು.ಕೆ. (ಇಂಗ್ಲೆಂಡ್), ಫ್ರಾನ್ಸ್, ಯು.ಎಸ್. (ಅಮೆರಿಕಾ). ಅಂದರೆ ಈ ರಾಷ್ಟ್ರಗಳು ಪ್ರಾಮಾಣಿಕವಾಗಿ ಜನರನ್ನು ಕೊಲ್ಲುವ ಸಾಧನಗಳ ಉದ್ಯಮಗಳನ್ನು ನಡೆಸಿ ಪ್ರಾಮಾಣಿಕವಾಗಿ ದುಡ್ಡು ಮಾಡುತ್ತಿವೆ ಎಂದು ಭಾವಿಸಬಹುದೆ? ಆದರೆ, ಜಗತ್ತಿನ ಭ್ರಷ್ಟದೇಶಗಳ ಭ್ರಷ್ಟಾಚಾರದ ಮೊತ್ತಕ್ಕೆ ಅತಿ ದೊಡ್ಡ ಪಾಲು ಸೇರಿಸುತ್ತಿರುವುದು ಈ ಪ್ರಾಮಾಣಿಕ ದೇಶಗಳಲ್ಲಿ ತಯಾರಾದ ಶಸ್ತ್ರಾಸ್ತ್ರಗಳ ವಹಿವಾಟು. ಉದಾಹರಣೆಗೆ, ಸ್ವಾತಂತ್ರ್ಯೋತ್ತರ ಭಾರತದ ಭ್ರಷ್ಟಾಚಾರದ ಎರಡು ಅತಿದೊಡ್ಡ ಪ್ರಕರಣಗಳು, 'ಮುಂದುವರಿದ', 'ಪ್ರಾಮಾಣಿಕ' ದೇಶಗಳಿಂದ ಶಸ್ತ್ರಾಸ್ತ್ರಗಳನ್ನು ಖರೀದಿಸುವುದಕ್ಕೆ ಸಂಬಂಧಿಸಿದವು. ಶ್ರೀ ರಾಜೀವ ಗಾಂಧಿಯವರು ಪ್ರಧಾನ ಮಂತ್ರಿಯಾಗಿದ್ದ ಕಾಲದಲ್ಲಿ ನಡೆದ ಬೊಫೋರ್ಸ್ ಹಗರಣ, ಸ್ವೀಡನ್ ದೇಶ (ಜಗತ್ತಿನ ಎರಡನೆಯ ಅತಿ ಪ್ರಾಮಾಣಿಕ ದೇಶ)ದಿಂದ ಆಮದು ಮಾಡಿಕೊಂಡ ಫಿರಂಗಿಗಳಿಗೆ ಸಂಬಂಧಿಸಿದ್ದು. ಇತ್ತೀಚೆಗೆ, ಎನ್.ಡಿ.ಎ. ಸರಕಾರದ ಅಧಿಕಾರಾವಧಿಯಲ್ಲಿ ತೆಹೆಲ್ಕಾ ಸಂಸ್ಥೆ ಪ್ರತ್ಯಕ್ಷ ಪ್ರಮಾಣಸಹಿತ ಹೊರಗೆಡವಿದ ಭ್ರಷ್ಟಾಚಾರ ಕೂಡ ವಿದೇಶಗಳಿಂದ ಶಸ್ತ್ರಾಸ್ತ್ರ ಖರೀದಿಗೆ ಸಂಬಂಧಿಸಿದ್ದು! ಜಗತ್ತಿನ ಅತಿ ಪ್ರಾಮಾಣಿಕ ರಾಷ್ಟ್ರಗಳ ಈ ಯಾದಿಯಲ್ಲಿ ಡೆನ್ಮಾರ್ಕ್, ಫಿನ್ಲೆಂಡ್, ನ್ಯೂಜಿಲ್ಯಾಂಡ್, ಐಸ್‌ಲ್ಯಾಂಡ್ ಮುಂತಾದ ದೇಶಗಳ ಜೊತೆಗೆ ಸ್ವೀಡನ್, ಆಸ್ಟ್ರೇಲಿಯಾ, ಇಂಗ್ಲೆಂಡ್, ಫ್ರಾನ್ಸ್ ಮತ್ತು ಅಮೆರಿಕಾಗಳು ಸ್ಥಾನ ಪಡೆದಿರುವುದರಿಂದ ಈ ಯಾದಿಯ ಪ್ರಾಮಾಣಿಕತೆಯೇ ಸಂದೇಹಾಸ್ಪದವಾಗಿದೆ.

ವ್ಯಕ್ತಿಗಳಿಗೆ ಹೇಗೋ ಹಾಗೆ ರಾಷ್ಟ್ರ ಪ್ರಭುತ್ವಗಳಿಗೂ ಪ್ರಾಮಾಣಿಕತೆ, ಭ್ರಷ್ಟಾಚಾರಗಳಂತಹ ಗುಣಾವಗುಣಗಳು ಇರಬಹುದು ಎನ್ನುವ ಕಲ್ಪನೆಯೇ ವಿನೂತನವಾದುದು. ಅದು ಹಾಗಿರುವುದೇ ಹೌದಾದರೆ ರಾಷ್ಟ್ರಗಳಿಗೆ ದಯೆ, ಔದಾರ್ಯ, ಪ್ರೀತಿ, ಪ್ರೇಮ ಮುಂತಾದ ಗುಣಗಳು ಅಥವಾ ಅದಕ್ಕೆ ವಿರುದ್ಧವಾದ ಅವಗುಣಗಳು ಇರಬಹುದಲ್ಲವೇ? ವಿವಿಧ ದೇಶಗಳ ಈ ಗುಣಾವಗುಣಗಳ ಸಮೀಕ್ಷೆಯೂ ನಡೆದು ಅವುಗಳ ತಖ್ತೆ, ಪಟ್ಟಿಕೆ ಯಾದಿಗಳೂ ಮುಂದೊಂದು ದಿನ ಪ್ರಕಟವಾಗಬಹುದು. ಪಶ್ಚಿಮ ಯೂರೋಪ್ ಮತ್ತು ಅಮೆರಿಕಾ ಈ ಸಮೀಕ್ಷೆಗಳಲ್ಲೂ ಅತ್ಯಂತ ದಯಾಳು, ಉದಾರಿ ಮತ್ತು ವಾತ್ಸಲ್ಯಭರಿತ ದೇಶಗಳು ಎಂದು ಗುರುತಿಸಲ್ಪಡುವ ಸಂಭವವೂ ಇದೆ! ಸಾಮ್ರಾಜ್ಯಶಾಹಿಯ ಅರಣ್ಯ ನ್ಯಾಯಕ್ಕೆ ಏಕಪಕ್ಷೀಯತೆ ಇದು! ಇಲ್ಲಿ ಕೊಟ್ಟಿರುವ ಪಟ್ಟಿಕೆಯನ್ನೂ, ಭ್ರಷ್ಟ ಹಾಗೂ ಪ್ರಾಮಾ ರಾಷ್ಟ್ರಗಳ ಸಮೀಕ್ಷೆಯನ್ನೂ ಸಿದ್ಧಪಡಿಸಿರುವುದು ಬರ್ಲಿನ್ ನಗರದ ಟ್ರಾನ್ಸ್ ಇಂಟರ್‌ನ್ಯಾಷನಲ್ ಎಂಬ ಸಂಸ್ಥೆ. ಬರ್ಲಿನ್ ಜರ್ಮನಿಯ ಮುಖ್ಯ ನಗರ ಜರ್ಮನಿ ಯೂರೋಪ್ ಖಂಡದ ಶ್ರೀಮಂತ ರಾಷ್ಟ್ರಗಳಲ್ಲಿ ಒಂದು ಎಂ ಸಂದರ್ಭದಲ್ಲಿ ನೆನಪು ಮಾಡಿಕೊಳ್ಳಬೇಕು. ಭ್ರಷ್ಟ ರಾಷ್ಟ್ರಗಳು ಯಾಕೆ ಭ್ರಷ್ಟವ ಎಂಬುದಕ್ಕೆ ಈ ಸಂಸ್ಥೆಯ ಮುಖ್ಯಸ್ಥ ಕೊಟ್ಟಿರುವ ವಿವರಣೆ ಹೀಗಿದೆ : ''ದಮನಕ ಪ್ರಭುತ್ವಗಳು ಹಿಂಸಾ ವಿಧಾನಗಳನ್ನೇ ಹೆಚ್ಚು ಹೆಚ್ಚಾಗಿ ಅನುಸರಿಸುತ್ತವೆ ಮಾತ್ರ ಅವು ಭ್ರಷ್ಟಾಚಾರದಲ್ಲೂ ತೊಡಗುತ್ತವೆ... ಅತಿ ಭ್ರಷ್ಟ ದೇಶಗಳಲ್ಲಿ ಹೆಚ್ಚಿನವು ಬಡತನದಲ್ಲಿರುವ ದೇಶಗಳೂ ಹೌದು. ಈ ದೇಶಗಳ ಸರಕಾರೀ ಅಧಿಕಾ ಲೂಟಿ, ಇವುಗಳ ಸಂಪನ್ಮೂಲಗಳ ಮೇಲೆ ಹೆಣಭಾರವಾಗಿದೆ.'' ಇದರಷ್ಟಕ್ಕೆ ಮಾತು ಸುಳ್ಳಲ್ಲ, ಹಾಗೆಂದು ಇದು ಪೂರ್ಣ ಸತ್ಯವೂ ಅಲ್ಲ. ದಮನಕ ಪ್ರಭುತ್ವಗಳಾಗಲೀ, ರಾಷ್ಟ್ರಗಳ ಬಡತನವಾಗಲೀ ಸಹಜ ವಿದ್ಯಮಾನವೂ ಅಲ್ಲ; ನಿಯಾಮಕವೂ ಅಲ್ಲ. ಈ ಜಗತ್ತಿನ ಹೆಚ್ಚಿನ ದಮನಕಾರೀ ಪ್ರಭುತ್ವಗಳು ಅಮೆ ಮತ್ತು ಪಶ್ಚಿಮ ಯೂರೋಪಿನ ದೇಶಗಳ ಶಸ್ತ್ರಾಸ್ತ್ರ ಸರಬರಾಜು, ಆರ್ಥಿಕ ನೆ ಮತ್ತು ರಾಜತಾಂತ್ರಿಕ ಬೆಂಬಲಗಳ ಕಾರಣದಿಂದಲೇ ಅಧಿಕಾರದಲ್ಲಿ ಇರುವಂತಹ ತಮ್ಮ ತಮ್ಮ ದೇಶಗಳ ಒಳಗೆ ಪ್ರಜಾಸತ್ತಾತ್ಮಕ ಹೋರಾಟ, ಭಿನ್ನಮತಗಳನ್ನು ಹ ಹಾಕಿ, ತಮ್ಮ ಸಂಪನ್ಮೂಲಗಳನ್ನು ಅಮೆರಿಕಾ ಮತ್ತು ಯೂರೋಪ್‌ನ ಅನುಭೋ ತೆರವು ಮಾಡಿಕೊಡಲೆಂದೇ ಈ ದಮನಕಾರಿ ನಿರಂಕುಶ ಪ್ರಭುತ್ವಗಳನ್ನು ಪೊ ಕೊಂಡು ಬರಲಾಗಿದೆ. ಉದಾಹರಣೆಗೆ, 'ಮಧ್ಯಪ್ರಾಚ್ಯ'ದಲ್ಲಿ ಇರಾನ್ ಮ ಸಿರಿಯಾ ಗಳನ್ನು ಹೊರತುಪಡಿಸಿ ಇತರ ಎಲ್ಲ ಇಸ್ಲಾಮಿಕ್ ದೇಶಗಳಲ್ಲೂ ಅಮೆರಿ ಕೈಗೊಂಬೆ ಸರಕಾರಗಳಿದ್ದು ಈ ದೇಶಗಳು ಅಮೆರಿಕಾದ ಮಿಲಿಟರಿ ನೆಲೆಗಳಾ ವುದರ ಜೊತೆಗೆ ಅಗ್ಗದ ಬೆಲೆ ತೈಲ ಸರಬರಾಜು ಕೂಡ ಮಾಡುತ್ತಿವೆ. ಸರಕಾರಗಳಲ್ಲಿ ಕೆಲವು ರಾಜಮನೆತನಗಳು ನಿರ್ವಹಿಸುವಂತಹವು, ಇನ್ನು ಕೆ ಮಿಲಿಟರಿ ಸರ್ವಾಧಿಕಾರಗಳು.

ಜಗತ್ತಿನ ಬಡದೇಶಗಳ ಭ್ರಷ್ಟ ಅಧಿಕಾರಿಗಳು, ತಮ್ಮ ದೇಶಗಳ ಸೀ ಸಂಪನ್ಮೂಲಗಳನ್ನು ಕೊಳ್ಳೆಹೊಡೆಯುತ್ತಾರೆ ಎಂಬುದು ಸರಿ. ಆದರೆ ಸಂಪನ್ಮೂಲಗಳೇ ಸೀಮಿತವಾಗಿರುವುದಕ್ಕೆ ಈ ದೇಶಗಳು ಅನುಭವಿ ವಸಾಹತುಶಾಹಿ ಆಳ್ವಿಕೆ ಮತ್ತು ಈಗ ಎದುರಿಸುತ್ತಿರುವ ಸಾಮ್ರಾಜ್ಯಶಾಹಿ ಆಕ್ರಮಣಕಾರೀ ಧೋರಣೆಗಳು ಕಾರಣ ಎಂಬುದನ್ನೂ ನಾವು ಗಮನಿಸಬೆ ಹಾಗೆಂದು ನಾನು ಉದ್ಧರಿಸಿದ ಪತ್ರಿಕಾ ವರದಿಯ ಮಾಹಿತಿ ಪೂರ್ವಗ್ರಹಪೀ ಎಂದಾಗಲೀ, ಅಮುಖ್ಯವೆಂದಾಗಲೀ ನಾನು ಹೇಳುತ್ತಿಲ್ಲ. ಲೋಕ ಜೀವ ನಿರೂಪಣೆ ಇಷ್ಟಕ್ಕೇ ಮುಗಿಯುವುದಿಲ್ಲ ಎಂಬುದು ಮಾತ್ರ ನನ್ನ ತಕರಾ ಭ್ರಷ್ಟಾಚಾರವೇ ಏಕೆ, ನೂರಾರು ಇತರ ವಿಷಯಗಳ ಬಗೆಗೂ ಇಂತಹದ್ದೇ ಸಮ ತಲೆಲೆಕ್ಕ ಮುಂತಾದುವನ್ನು ನಡೆಸಿ ಸೂಕ್ತ ಪಟ್ಟಿಕೆಗಳನ್ನು ಸಿದ್ಧಪಡಿಸಬಹು ಉದಾಹರಣೆಗೆ, ಕಳೆದ ೨೦೦ ವರ್ಷಗಳಲ್ಲಿ ಅತಿ ಹೆಚ್ಚು ನಾಗರಿಕರನ್ನು ಕೊ ದೇಶಗಳು, ಅತಿ ಹೆಚ್ಚು ಯುದ್ಧ/ಆಕ್ರಮಣಗಳನ್ನು ನಡೆಸಿದ ದೇಶಗಳು, ಹ ದೇಶಗಳಲ್ಲಿ ಅತಿ ಹೆಚ್ಚು ನೆಲಬಾಂಬು (landmines)ಗಳನ್ನು ಚೆಲ್ಲಿದ ದೇಶಗಳು, ಹೆಚ್ಚು ಶಸ್ತ್ರಾಸ್ತ್ರ ತಯಾರಿ ಮತ್ತು ರಫ್ತು ಮಾಡುತ್ತಿರುವ ದೇಶಗಳು – ಈ ಬಗ ಸಮೀಕ್ಷೆಗಳನ್ನು ನಡೆಸಬಹುದೆಂದರೆ, ಅದರಲ್ಲೂ ಅಮೆರಿಕಾ ಮತ್ತು ಪಶ್ಚಿ ಯೂರೋಪ್ ದೇಶಗಳೇ ಮೇಲುಗೈ ಪಡೆಯುತ್ತವೆ. ಈ ಕೊಲೆಗಡುಕ ದೇಶ ಪಟ್ಟಿಯಲ್ಲಿ ಏಷ್ಯಾ, ಆಫ್ರಿಕಾ ಮತ್ತು ದಕ್ಷಿಣ ಅಮೆರಿಕಾದ ದೇಶಗಳಿಗೆ ಪ್ರವೇಶ ಇರುವುದಿಲ್ಲ; ಭಯೋತ್ಪಾದನೆಯ ತವರು ಎಂದು ಭಾವಿಸಲಾಗಿರುವ ಇಸ್ಲಾ ದೇಶಗಳೂ ಅದರಲ್ಲಿ ಸ್ಥಾನ ಪಡೆಯಲಾರವು. ಅಮೆರಿಕಾ ಮತ್ತು ಪಶ್ಚಿ ಯೂರೋಪ್ ತಮ್ಮ ಜೀವ ಹಿಂಸೆಯ ಕರಾಳ ಚರಿತ್ರೆಯನ್ನು ಮುಚ್ಚಿಹಾಕ ''ವಿಶ್ವಾತ್ಮಕ ಮೌಲ್ಯಗಳ'' ಸೋಗಲಾಡಿತನದ ಭಾಷೆಯನ್ನು ಬಳಸುತ್ತಿದ್ದು, ಎಂದಿಗೂ ನಮ್ಮ ಭಾಷೆ ಆಗಕೂಡದು.

ಜಿ. ರಾಜಶೇಖರ
ವಿಷ್ಣುಚಂದನ್, ಚಾಕೊಲೇಟ್ ಫ್ಯಾಕ್ಟರಿ ಬಳಿ, ಕೋಳಂಜೆ, ಉಡುಪಿ

# ಗಾಳಿಯಲ್ಲಿ ನನ್ನ ಭಾವಚಿತ್ರ

ಚೆಲ್ಲಿದಂತೆ ಗಾಳಿಯನ್ನ ಬೊಗಸೆಯಲ್ಲಿ
ತುಂಬಿಸಿಕೊಂಡು ಕಾಯುತ್ತಿದ್ದೇನೆ.
ಹಸ್ತಾಂತರ ಮಾಡಿಕೊಳ್ಳಲು ವಾಯುಭಾರವನ್ನ
ಇಳಿಸಿ ನನ್ನಾಳದ ಚರಿತ್ರೆಯ ನಾಭಿಗೆ.

ಕೆಲಸ ಕೊಡಿ ನಿಮ್ಮ ಕಿವಿಗಳಿಗೆ ನಾನು ಹೇಳುವುದನ್ನ
ಒಂದೇ ರೀತಿಯ ಬುರುಡೆಗಳು ನನ್ನ ಕಣ್ಣುಗಳಿಗೆ,
ಆದರೂ ಅದರೊಳಗೆ ಊಸರವಳ್ಳಿಯ ಮೆದಳು ಒಳಗೊಳಗೆ
ಹಳಹಳಿಕೆಯಲ್ಲಿ ಕೆಲವರ ಬಗೆಗಿನ ಕಳಕಳಿಯಷ್ಟೇ.

ಅಗ್ನಿ ಮುತ್ತುಗಳಿವೆ ನನ್ನ ತುಟಿಗಳಲ್ಲಿ
ಒತ್ತಿ ಮುತ್ತು ಕೊಡಲಿಕ್ಕಿಲ್ಲಾ ಅವಳಿಗೆ
ಮುಕ್ಕಳಿಸಿ ಉಗಿಯಲಿಕ್ಕೆ ಎಂಜಲಾಗಲಿ
ಪವಿತ್ರ ಜಲವೆಲ್ಲಾ, ನದಿ ಸಾಗರಗಳ ಬಾಲಿಗಳಲ್ಲಿ.

ಓಲೈಸುವ ಉತ್ಸಾಹವಿಲ್ಲಾ ಈ ಲೋಕವನ್ನ
ಅದರ ಉದರದಲ್ಲೂ, ತಲೆ ಮೇಲೆ ಹೊತ್ತ ಕಸವೋ (ಮಲವೋ)
ಕಾದಾಡುತ್ತಿವೆ. ಎಲ್ಲದಕ್ಕೂ, ಮಕ್ಕಳು ಮಣ್ಣಿನವಂತೆ,
ಕಲ್ಲಿನವಂತೆ, ಶಾಸ್ತ್ರ ಕಕ್ಕಸಿ, ಮರದ ಕಾಲ ನಕ್ಕುತ್ತವಂತೆ.
ತಾಯಿಯ ಮಗ ನಾನು ತೊಳೆದ ಕೆಂಡದಂತಿದೆ ಆತ್ಮ.

ಬೇಡಿದ್ದೆನೆ ಎಷ್ಟೋ, "ಬಾ ಬೆಳಕೆ" ಎಂದು.
ಹರಿದು ಹೋಗಿದೆ ಎಷ್ಟೋ ಸಾರಿ, ಹರಾಜಿನಲ್ಲಿ ತಂದ
ಅಂಗಿ, ಚಡ್ಡಿ, ಅಪ್ಪನ ಕೋಟು, ಅವ್ವನ ಸಾಲೆಗಳಲ್ಲಿ.

ನೋಡಿದರ ಈ ಬೆಳಕಿನ ಕ್ರೌರ್ಯವನ್ನ
ಪರಿಚಯಕ್ಕೆ ಸಾಕ್ಷಿಯಾಗಿ, ಕದ್ದು ಕಾಣದಂತೆ
ತೆಳು ಪರದೆಯ ಹಾಗೆ.
ಕುಣಿಯುತಿದೆ ಹಂಗಿಲ್ಲದ ಬಿಳಿ ಕುದುರೆಯಂತೆ.

ಇಷ್ಟು ಕಗ್ಗತ್ತಲೆಯೆಂದರೆ
ನನ್ನೊಳಗಿನ ಕಳ್ಳನ ಹಾಗೆ
ಅಷ್ಟು ಸತ್ಯವಲ್ಲಾ ಈ ಬೆಳಕು, ಹೊತ್ತು ಗೊತ್ತಿಲ್ಲದ ಹಾಗೆ
ನಟಿಸುವ ಮಹಾನಟನ ಹಾಗೆ.

ಕಲಿತಿರಿ ಎಲ್ಲಿ ಇಂಥ ಮುದ್ದು ಮಾತುಗಳನ್ನು
ಆಭಾರಿ ನಾನು ನಿಮ್ಮ ಮುಗುಳ್ನಗೆಗೆ
[illegible]
[illegible]

ಅಗ್ಗದ ಕವಿ ನಾನು, ಈ ಗಾಳಿಯ ಹಾಗೆ.
ಶತಮಾನಗಳಿಂದ ಅಲೆದಾಡುತ್ತಿದ್ದೇನೆ ಎಲ್ಲೆಂದರಲ್ಲಿ
ನಿಲ್ಲುತ್ತೇನೆ ಏಕಾಕಿಯಾಗಿ
ಮಳೆ ನೀರ ಕುಡಿಯಲು.

ಎದೆ ಮಟ್ಟಕ್ಕೆ ನಿಂತಾಗ ಸವರುತ್ತೀರಿ
ಕೈ ಹಾಕುತ್ತೀರಿ ಹೆಗಲ ಮೇಲೆ
ಕುರಿಯ ಕೊರಳ ನಿಟ್ಟಿದಂತೆ. ಉಗುಳ ನುಂಗಿದ ನಾನು.
ಕೈ ಕುಲುಕುತ್ತೇನೆ, ಕಣ್ಣುಗಳು ಮಾತಾಡಿ
ಹೆಜ್ಜೆ ಹಾಕುವ ಹೊತ್ತಿಗೆ.

ಕೂದಲು ಗಾತ್ರದ ತಂತಿ, ಮುಲುಗುಟ್ಟುತ್ತಿದೆ
ಬೆವರು ಅಂಟಿಕೊಂಡಿತೆಂದು
ಅಂಜುತ್ತೀರಿ ಮನುಷ್ಯರಾಗುವುದಕ್ಕೆ.

ಹಾರಿ ಹೋಗುತದೆ
ಗಾಳಿಯಲ್ಲಿ ನನ್ನ ಭಾವ[illegible]
[illegible]
[illegible]

ಮಮ್ತಾ ಜೋಲಿಯೋರ್
[illegible]

# ಸಂಸ್ಕೃತಿಯ ಸೃಷ್ಟಿಗೆ ಐದು ಹೆಜ್ಜೆಗಳು

ಜೊಆನ್ನಾ ಕಡಿ



ಸಾಮಾನ್ಯವಾಗಿ ತಾತ್ವಿಕತೆ ಅಥವಾ ಸಿದ್ಧಾಂತವನ್ನು ರೂಪಿಸುವ ಬಳಸುವ ಭಾಷೆ ಪೆಡಸಾಗಿರುತ್ತದೆ. ಇದರಿಂದಾಗಿ ಅವು ಕೇವಲ ಸಣ್ಣ ಗುಂಪನ್ನು ತಲುಪುತ್ತಿರುತ್ತವೆ. ಉಳಿದವರೆಲ್ಲ ಅಂತಹ ತತ್ವ ಮತ್ತು ಸಿದ್ಧಾಂತದ ಬಗ್ಗೆ ನಿರ್ಲಕ್ಷ್ಯವಹಿಸುವುದು ಅಥವಾ ಅವುಗಳನ್ನು ತಮ್ಮ ಅರಿವಿಗೆ ದಕ್ಕಿದಂತೆ ಮರು ವ್ಯಾಖ್ಯಾನಕ್ಕೆ ಒಳಪಡಿಸುವುದು ನಡೆಯು ತ್ತಿರುತ್ತದೆ. ಇಂತಹ ಮರು ವ್ಯಾಖ್ಯಾನಗಳು ಆಯಾ ವ್ಯಕ್ತಿಯು ಮೂಲವನ್ನು ಗ್ರಹಿಸಿದ ಸಾಧ್ಯತೆ ಮತ್ತು ಪರಿಮಿತಿಗಳಿಂದ ಕೂಡಿರು ಕಾರಣ, ಮೂಲ ಆಶಯದಿಂದ ಹೆಚ್ಚು ಹೆಚ್ಚಾಗಿ ದೂ ಸರಿಯುವುದೂ ಕಂಡುಬರುತ್ತಿರುತ್ತದೆ. ಸ್ತ್ರೀವಾದಿ ತಾತ್ವಿಕತೆಯು ಮೇಲಿನ ಮಾತಿಗೆ ಹೊರತಾಗಿಲ್ಲ. ಸ್ತ್ರೀವಾದಿ ತಾತ್ವಿಕತೆಯನ್ನು ಸರಳವಾಗಿ ನಿರೂಪಿಸಿದ ಕೃತಿ/ಲೇಖನಗಳು ಇರುವಂತೆಯೇ ಅದನ್ನು ಪೆಡಸಾಗಿ ಮಾಡಿದ ಬರಹಗಳೂ ಇವೆ. ಚಿಂತನೆಯೊಂದನ್ನು ನಮ್ಮ ದೈನಂದಿನ ವಿವರಗಳ ಮೂಲಕವೇ ಸೈದ್ಧಾಂತಿಕ ನೆಲೆಗೆ ಹೇ ತರಬಹುದು ಎಂಬುದಕ್ಕೆ ಜೊಆನ್ನಾ ಕಡಿ ಅವರ ಈ ಮುಂದಿ ಲೇಖನ ಒಂದು ಉತ್ತಮ ನಿದರ್ಶನವಾಗಿದೆ. ಇಂತಹ ಪ್ರಯತ್ನಗಳು ಕನ್ನಡದಲ್ಲಿ ನಡೆದದ್ದು ತೀರ ವಿರಳ. ನಮ್ಮ ನಡುವಿನ ಎಲ್ಲರಿಗೂ ತಟ್ಟಬಹುದಾದ ಜೊಆನ್ನಾ ಕಡಿ ಅವರ ಚಿಂತನೆ ಮತ್ತು ಜೀವನಧೋರಣೆಯನ್ನು ಸಂಗ್ರಹವಾಗಿ ಇಲ್ಲಿ ನೀಡಲಾಗಿದೆ.

ಅಮೆರಿಕಾದಲ್ಲಿ ವಾಸಿಸುತ್ತಿರುವ ಅರಬ್ ಮೂಲದ ಜೊಆನ್ನಾ ಕಡಿ ಅವರು ಓರ್ವ ಸೃಜನಶೀಲ ಅರಬ್-ಅಮೆರಿಕನ್ ಲೇಖಕಿ ಹಾಗೂ ಸಂಪಾದಕಿ. ಅವರು ತಳಮಟ್ಟದ ಸಮುದಾಯಗಳನ್ನು ಸಂಘಟಿಸುವಲ್ಲಿ ಕೆಲಸಮಾಡುತ್ತಿದ್ದು, ಮಹಿಳೆಯರನ್ನು ಹಿಂಸೆಯಿಂದ ವಿಮೋಚಿಸುವಲ್ಲಿ ಕ್ರಿಯಾಶೀಲರಾಗಿದ್ದಾರೆ. ಅವರ ಬರವಣಿಗೆಯು ವಿವಿಧ ಸಂಕಲನಗಳಲ್ಲಿ ಮತ್ತು ನಿಯತಕಾಲಿಕೆ ಗಳಲ್ಲಿ ಪ್ರಕಟವಾಗಿವೆ. ಇದು ಅವರ Five Steps to Creating Culture ಎಂಬ ಲೇಖನದ ಭಾಗವಾಗಿದೆ. ಇಂಗ್ಲಿಷಿನಲ್ಲಿ culture ಎಂಬುದಕ್ಕೆ 'ಸಂಸ್ಕೃತಿ' ಎಂಬ ಅರ್ಥವಿರುವಂತೆ ಹೆಪ್ಪುಹಾಕುವುದು ಎಂಬ ಅರ್ಥವೂ ಇದೆ. ಲೇಖಕಿ ಈ ದ್ವಂದ್ವ ಅರ್ಥಗಳನ್ನು ಅತ್ಯಂತ ಸಮರ್ಪಕವಾಗಿ ಈ ಲೇಖನದಲ್ಲಿ ಬಳಸಿಕೊಂಡಿದ್ದಾರೆ. ಪ್ರತಿಯೊಬ್ಬರೂ ದಿನವೂ ಹಾಲಿಗೆ ಹೆಪ್ಪು ಹಾಕುವ ಕ್ರಿಯೆಯನ್ನು ಮತ್ತು ಮೊಸರನ್ನು ಉಂಡ ಅನುಭವಗಳನ್ನು ಹಾಗೂ ಸ್ವದೇಶದಿಂದ ದೂರ ಸಾಗಿ, ಭಿನ್ನ ದೇಶ-ಪರಿಸರಗಳಲ್ಲಿ ಬದುಕುತ್ತಿರುವ ಜನರ ತೊಳಲಾಟಗಳನ್ನು ಲೇಖಕಿಯು ಈ ಲೇಖನದಲ್ಲಿ ಹಿಡಿದಿಟ್ಟಿದ್ದಾರೆ. ಓದುಗರನ್ನು ಇದು ತಟ್ಟಿದರೆ, ಅಷ್ಟರಮಟ್ಟಿಗೆ ನಮ್ಮ ಶ್ರಮ ಸಾರ್ಥಕ ಎಂದು ಭಾವಿಸಿದ್ದೇವೆ.

ಪ್ರೊ॥ ಸಬಿಹಾ ಭೂಮಿಗೌಡ
ಪ್ರೊ॥ ಕಿಶೋರಿ ನಾಯಕ್ ಕೆ.

ನಾನು ಅಜ್ಜಿಯ ಪುಟ್ಟ ಅಡುಗೆಮನೆಯ ಕುರ್ಚಿಯ ತುದಿಯಲ್ಲಿ ಕುಳಿತು, ಯು ಮೊಸರು ಮಾಡುವ ರೀತಿಯನ್ನೇ ನೋಡುತ್ತಿದ್ದೆ. ಆಕೆ ಒಂದು ಬೋಗುಣಿಗೆ ತ್ರೆ ಮಾಡದೆಯೇ ಹಾಲನ್ನು ಸುರಿದಳು. ಎಷ್ಟು ಹಾಲು ಬೇಕೆಂದು ಆಕೆಗೆ ಖಚಿತವಾಗಿ ವಂತಿತ್ತು. ಅನಂತರ ಹಾಲನ್ನು ನಿಧಾನವಾಗಿ ಕಾಯಿಸಲು ಇಟ್ಟಳು. ಅದು ಬೆಚ್ಚಗಾಗು ಂತೆ, ಹಾಲಿನ ಪರಿಮಳ ನನ್ನ ಅರಿವಿಗೆ ಬಂತು. ಹಾಲು ಕುದಿದೊಡನೆ, ಅದನ್ನು ಯಿಂದ ಇಳಿಸಿ, ಒಂದು ಮರದ ಹಲಗೆಯ ಮೇಲೆ ಇಟ್ಟಳು. ಕೊಂಚ ಸಮಯದ ಕ ಅಜ್ಜಮ್ಮನು ತನ್ನ ಕಿರುಬೆರಳನ್ನು ಹಾಲಲ್ಲಿ ಅದ್ದಿ, ಹತ್ತರವರೆಗೆ ಎಣಿಸಿದಳು. ಲು ಸರಿಯಾದ ಹದಕ್ಕೆ ತಣಿದಿದೆ ಎಂಬುದು ಅದರರ್ಥ. ಹಾಲು ತಣಿಯುವ ದಲೇ ಅವಳು ತನ್ನ ಬೆರಳು ಅದ್ದಿದ್ದನ್ನು ನಾನು ಎಂದೂ ನೋಡಿಲ್ಲ. ಅನಂತರ ಳು ಆ ಹಾಲಿಗೆ ಹಿಂದಿನ ಮೊಸರಿನ ಒಂದಂಶವನ್ನು ಸೇರಿಸಿದಳು; ಅಂದರೆ ಲಿಗೆ ಹೆಪ್ಪು ಹಾಕಿದಳು/ಸಂಸ್ಕರಿಸಿದಳು. ಹಲವಾರು ಬಟ್ಟೆಗಳಿಂದ ಬೋಗುಣಿಯನ್ನು ರಿಕೆಯಿಂದ ಸುತ್ತಿ, ಇಡೀ ರಾತ್ರಿ ಅದನ್ನು ಗಟ್ಟಿಗೊಳ್ಳಲು ಇರಿಸಿದಳು.

ನಮ್ಮ ಸಾಂಸ್ಕೃತಿಕ ಸಾಧನೆಗಳನ್ನು ಗುರುತಿಸುವುದಕ್ಕೆ ಪುಸ್ತಕದ ಅಂಗಡಿಗಳು, ವಸ್ತು ಗ್ರಹಾಲಯಗಳು, ಕಲಾ ಪ್ರದರ್ಶನಾಲಯಗಳು, ಸಂಗೀತ ಸಭಾಮಂದಿರ ಂತಹ ಹಲವು ಸ್ಥಳಗಳಿಗೆ ಹೋಗಲು ಅರಬರಿಗೆ ಸಾಧ್ಯವಿದೆ. ಇದನ್ನು ನಾವು ನೆಯಲ್ಲೂ ಮಾಡಬಹುದು. ನಾವು ಮನೆಯಲ್ಲಿ ಅರಬ್ ಶೈಲಿಯ ಆಹಾರವನ್ನು ಯಾರಿಸುತ್ತೇವೆ, ಡರ್‌ಬೆಕ್‌ನಲ್ಲಿ ನುಡಿಸುವ ಸಾಂಪ್ರದಾಯಿಕ ಸಂಗೀತವನ್ನು ಸುತ್ತೇವೆ, ಅರಬರ ಹಾಸ್ಯಪ್ರಜ್ಞೆಯನ್ನು ಬಿಂಬಿಸುವ ನಗೆಹನಿಗಳನ್ನು ಹೇಳುತ್ತೇವೆ. ಲ್ಲವೂ ನಮ್ಮನ್ನು ಸುತ್ತುವರಿದಿರುವ ಮತ್ತು ನಮ್ಮ ಜೀವನಾಧಾರವಾಗಿರುವ ಸ್ಕೃತಿಯಾಗಿದೆ. ನಮ್ಮ ಸಂಸ್ಕೃತಿಯು ಸಾಮಾನ್ಯವಾದುದು, ಸುಲಭವಾಗಿ ಗುರುತಿಸ ಗುವಂಥದ್ದು ಮತ್ತು ದಿನನಿತ್ಯವೂ ಮರುಸೃಷ್ಟಿಯಾಗುವಂಥದ್ದು. ಆ ಸಾಮಾನ್ಯತ್ವ ತ್ತು ದಿನನಿತ್ಯತೆಗಳು ಎಂದಿಗೂ ನಮ್ಮ ಸಂಸ್ಕೃತಿಯ ಶಕ್ತಿ, ಚೆಲುವು ಮತ್ತು ಚಾರಿತ್ರಿಕ ರ್ಥಗಳನ್ನು ಕುಂದಿಸುವುದಿಲ್ಲ.

ನಮ್ಮ ಸಂಸ್ಕೃತಿಯನ್ನು ಹೆಚ್ಚಾಗಿ ನಮ್ಮ ಮುತ್ತಜ್ಜಿಯಂದಿರೇ ನಮಗೆ ಸ್ತಾಂತರಿಸಿದ್ದಾರೆ; ಅಡುಗೆಮನೆಯಲ್ಲಿನ ದೈನಂದಿನ ಚಾಕರಿಯನ್ನು ಮಾಡುವ ನಮ್ಮ ಮ್ಮಂದಿರು, ಅಜ್ಜಿಯಂದಿರು ಮತ್ತು ಚಿಕ್ಕಮ್ಮಂದಿರು/ಅತ್ತೆಯಂದಿರು ಸುಡುವ, ಯಿಸುವ, ಹಾಡುವ, ಕುಣಿಯುವ ಮತ್ತು ಕತೆ ಹೇಳುವ ಆಚರಣೆಗಳನ್ನು ಮುಂದು ಸಿಕೊಂಡು ಬಂದಿದ್ದಾರೆ. ಅವರ ಹೆಚ್ಚಿನ ಸಾಂಸ್ಕೃತಿಕ ಸಾಧನೆಗಳು ಯಾವುದೇ ಗೆಯ ಮೂರ್ತರೂಪದಲ್ಲಿ ದಾಖಲಾಗಿಲ್ಲ. ಆದರೆ ಅವರ ಒಂದೊಂದು ಧನೆಯೂ ಕೂಡ ಪುಸ್ತಕಗಳು ಮತ್ತು ಕಲಾಕೃತಿಗಳಷ್ಟೇ ಮಹತ್ವದ್ದಾಗಿದ್ದು, ವುಗಳಷ್ಟೇ ವಿವೇಕ, ಚೆಲುವು ಮತ್ತು ಅರ್ಥಗಳನ್ನು ಹೊಂದಿದೆ. ನಮ್ಮ ಅಜ್ಜಿಯಂದಿರ ಸಕಾರ್ಯಗಳನ್ನು ಪರಿಶೀಲಿಸುತ್ತಿದ್ದಂತೆ, ಅವುಗಳನ್ನು ನಾವು ಯಾವತ್ತೂ ಮನಿಸಿಲ್ಲವಲ್ಲ ಎಂದು ಅನ್ನಿಸಿತು. ಅವುಗಳು ನಮ್ಮ ಸಾಂಸ್ಕೃತಿಕ ಸಾಧನೆಗಳು ಎಂದು ಳೆಯುವುದೇ ಇಲ್ಲ. ಇದಕ್ಕೆ ಹಲವು ಕಾರಣಗಳಿರಬಹುದು; ಅವುಗಳಲ್ಲಿ ನಾನು ಖ್ಯವೆಂದು ಭಾವಿಸಿರುವ ಒಂದೆರಡನ್ನು ಹೇಳುತ್ತೇನೆ. ಮೊದಲನೆಯದು, ನಾವು ಮ್ಮ ಸಮುದಾಯವು ಮಹಿಳೆಯರನ್ನು ಮತ್ತು ಅವರು ಮಾಡುವ ಕೆಲಸಗಳನ್ನು ಾವತ್ತೂ ಗಮನಿಸಿಲ್ಲ ಅಥವಾ ದೃಢೀಕರಿಸಿಲ್ಲ. ಎರಡನೆಯದು, ನಮ್ಮ ಸಂಸ್ಕೃತಿಯ ಭಾಗವು ಎಷ್ಟು ಸರ್ವೇಸಾಮಾನ್ಯವಾಗಿದೆ ಮತ್ತು ಎಷ್ಟು ಸರ್ವವ್ಯಾಪಿಯಾಗಿದೆ ಂದರೆ ಅವುಗಳನ್ನು ನಿರ್ಲಕ್ಷಿಸುವುದು ನಮಗೆ ರೂಢಿಯಾಗಿಬಿಟ್ಟಿದೆ. ಮೊಸರು ಾಡುವ ಕಾರ್ಯವನ್ನು ನೀವು ವರ್ಷಗಟ್ಟಲೆಯಿಂದ ಗಮನಿಸುತ್ತಿದ್ದರೂ, ಅವರು ಾಡುತ್ತಿರುವ ಕೆಲಸದ ಮಹತ್ವವನ್ನು ನೀವು ಅರಿಯದೆ ಇರಬಹುದು.

ನನ್ನಷ್ಟಕ್ಕೇ ನಾನು ಆ ಅಡುಗೆಮನೆಯಲ್ಲಿ ಬಿಸಿಹಾಲಿನ ಪರಿಮಳವನ್ನು ಘ್ರಾಣಿಸುತ್ತ ಅಜ್ಜಿಯು ಸಾಂಸ್ಕೃತಿಕ ಕಾರ್ಯಕರ್ತೆ ಎಂದು ಯೋಚಿಸುತ್ತ ಕುಳಿತುಕೊಂಡೆ ದರೂ, ಅವಳಿರುವುದೇ ಹಾಗೆ. ಬೇರೊಂದು ಮಾಧ್ಯಮದಲ್ಲಿ ನಾನೀಗ ಓರ್ವ ಂಸ್ಕೃತಿಕ ಕಾರ್ಯಕರ್ತೆಯಾಗಿರುವುದರಿಂದ, ನನ್ನಜ್ಜಿಯ ಸೃಜನಶೀಲ ಪ್ರಕ್ರಿಯೆಯ ಶ್ಲೇಷಣೆಯು ನನ್ನ ಮಟ್ಟಿಗೆ ಅತ್ಯಂತ ಅರ್ಥವತ್ತಾದುದು.

* * *

ನನ್ನ ಅಜ್ಜಿಯು ತನ್ನ ಚೊಚ್ಚಲ ಮಗಳು, ಅಂದರೆ ನನ್ನ ದೊಡ್ಡಮ್ಮನೊಂದಿಗೆ, ಮ್ಮ ಮನೆಂಯಾಚೆಗಿನ ತಿರುವಿನಲ್ಲಿದ್ದ ಚಿಕ್ಕಮನೆಯಲ್ಲಿ ವಾಸಿಸುತ್ತಿದ್ದಳು. ಅಲ್ಲಿಂದ ಲವು ಬೀದಿಗಳ ಆಚೆಗೆ ಇನ್ನೋರ್ವ ಚಿಕ್ಕಮ್ಮ, ಚಿಕ್ಕಪ್ಪ ಹಾಗೂ ಅವರ ಮಕ್ಕಳು ವಾಸಿಸುತ್ತಿದ್ದರು. ನಮ್ಮ ನೆರೆಹೊರೆಯವರಲ್ಲಿ ಶ್ವೇತವರ್ಣೀಯರೂ ದುಡಿಯುವ ವರ್ಗದವರೂ ಇದ್ದು, ಅವರಲ್ಲಿ ನಾವು ಮಾತ್ರ ಲೆಬನಾನಿನ ಅರಬರು. ಈ ವಿಚಾರವನ್ನು ಕೆಲವೊಮ್ಮೆ ನಮ್ಮ ನೆರೆಹೊರೆಯವರು ಅವಗಣಿಸುತ್ತಿದ್ದರೆ, ಮತ್ತೆ ಕೆಲವೊಮ್ಮೆ ಜನಾಂಗವಾದಿಯಾದ, ಕ್ರೂರವಾದ ಹಾಗೂ ನೋವುಂಟುಮಾಡುವ ರೀತಿಯಲ್ಲಿ ಆ ವಿಚಾರಕ್ಕೆ ಒತ್ತುನೀಡುತ್ತಿದ್ದರು. ಇದು, ಇನ್ನೂ ಹಲವು ವಿಚಾರಗಳಂತೆಯೇ ಚಿಕ್ಕವಳಿದ್ದಾಗ ನನ್ನನ್ನು ಗೊಂದಲಕ್ಕೀಡುಮಾಡುತ್ತಿತ್ತು.

ನನ್ನ ಗೊಂದಲಗಳಲ್ಲಿ ಸುಸಂಸ್ಕೃತರಾಗುವುದು ಎಂದರೆ ಏನು ಎಂಬುದೂ ಒಂದಾಗಿತ್ತು. ನಾನು ಬೆಳೆಯುತ್ತ ಬಂದಂತೆ, ಸಂಸ್ಕೃತಿಯನ್ನು ಕುರಿತ ನನ್ನ ತಿಳುವಳಿಕೆಯು ಕೇವಲ ಶ್ವೇತವರ್ಣೀಯರ, ಮಧ್ಯಮ ಮತ್ತು ಮೇಲ್ವರ್ಗದ ಜನರ ಸಾಧನೆ ಮತ್ತು ಕೆಲಸಗಳಿಗೆ ಸೀಮಿತವಾಗಿತ್ತು. ಆ ತಿಳುವಳಿಕೆಯನ್ನು, ಅರಬಳಾಗಿ ಮತ್ತು ದುಡಿಯುವ ವರ್ಗದವಳಾಗಿ, ನನ್ನ ಅನನ್ಯತೆಗೆ ಅರ್ಥೈಸಿಕೊಳ್ಳಲಾಗಲಿಲ್ಲ. ಹೀಗೆ ನನ್ನ ಕುಟುಂಬವು ಅರಬ್ ಸಂಗೀತವನ್ನು ಆಲಿಸುತ್ತಿದ್ದರೂ, ಅರಬ್ ಜನಪದ ಕುಣಿತಗಳಲ್ಲಿ ಭಾಗವಹಿಸಿದ್ದರೂ ಮತ್ತು ಅರಬ್ ಆಹಾರವನ್ನು ತಿನ್ನುತ್ತಿದ್ದರೂ, ನಾನು ಇವುಗಳಲ್ಲಿ ಯಾವುದನ್ನೂ ಸಂಸ್ಕೃತಿ ಎಂದು ಗ್ರಹಿಸಿಕೊಂಡಿರಲಿಲ್ಲ. ಪ್ರಾಯಶಃ ಬಹುಸಂಖ್ಯಾತ ಅರಬ್ ಸಮುದಾಯದಿಂದ ನಾವು ಬೇರ್ಪಡದೆ ಇದ್ದಿದ್ದರೆ ಈ ಪರಿಸ್ಥಿತಿ ವಿಭಿನ್ನವಾಗಿರುತ್ತಿತ್ತು. ಆದರೆ ವಾಸ್ತವದಲ್ಲಿ, ಕೆಲವು ಕಾರಣಗಳಿಗಾಗಿ ನಮ್ಮ ಸುಸ್ಥಿತಿಯ ದಿನಗಳಂದು ನಮ್ಮ ಕುಟುಂಬವು ತೊಡಗಿಸಿಕೊಂಡ ಸಂಗೀತ ಮತ್ತು ಆಹಾರ ಪದ್ಧತಿಯನ್ನು ನಮ್ಮ ನೆರೆಹೊರೆಯವರು ಮತ್ತು ಸಮಾಜವು ಸಾಮಾನ್ಯವಾಗಿ ವಿಚಿತ್ರ, ವಿಭಿನ್ನ ಮತ್ತು ವಿಲಕ್ಷಣ ನಡವಳಿಕೆಗಳ ಸರಮಾಲೆ ಎಂದು ಗ್ರಹಿಸುತ್ತಿತ್ತು. ಹಾಗೆಯೇ ನಮ್ಮ ದಾರಿದ್ರ್ಯದ ದಿನಗಳಲ್ಲಿ ಅವರು ಅವುಗಳನ್ನು ಹೇವರಿಕೆಯ ಮತ್ತು ವಿಚಿತ್ರವಾದ ವರ್ತನೆಯೆಂದು ಗ್ರಹಿಸುತ್ತಿದ್ದರು.

ನಾನು ಅರಬ್ ಸಂಸ್ಕೃತಿಯಿಂದ ಆವೃತಳಾಗಿಯೇ ಬೆಳೆದಿದ್ದೆ ಎಂಬುದನ್ನು ಈಗ ನನಗೆ ದೊರೆತ ಹಿನ್ನೋಟದ ಅವಕಾಶದಿಂದಾಗಿ ಗ್ರಹಿಸಿಕೊಳ್ಳಬಲ್ಲೆ. ನನ್ನ ಅಜ್ಜಿಯ ಅಡುಗೆಮನೆಯಲ್ಲಿ ಏನು ನಡೆಯುತ್ತಿತ್ತೆಂದು ಈಗ ನಾನು ಅರ್ಥಮಾಡಿಕೊಂಡೆ. ಓರ್ವ ಸಾಂಸ್ಕೃತಿಕ ಕಾರ್ಯಕರ್ತೆಯಾಗಿ ನಾನೇನು ಮಾಡುತ್ತಿದ್ದೇನೆ ಮತ್ತು ನನ್ನಜ್ಜಿ ತಾನು ಮೊಸರು ಮಾಡುವಾಗ ಏನು ಮಾಡುತ್ತಿದ್ದಳೆಂಬುದರ ನಡುವಿನ ಸಂಬಂಧವನ್ನು ಈಗಷ್ಟೇ ನಾನು ಗ್ರಹಿಸಿಕೊಂಡೆ.

* * *

ಅಜ್ಜಮ್ಮ ಮೊಸರು ಮಾಡುತ್ತಿದ್ದಾಳೆ. ಎಂದಿನಂತೆಯೇ ಅವಳು ಅಡುಗೆಗೆ ತೊಡಗಿ, ಏನನ್ನಾದರೂ ಸುಡುವಾಗ, ಬೇಯಿಸುವಾಗ ಅಲ್ಲಿ ಯಾವುದೇ ಪಾಕಸೂತ್ರಗಳಿಲ್ಲ, ಅಲ್ಲಿ ಮೇಲ್ವಿಚಾರಣೆ ಇಲ್ಲ, ನೆನಪಿಸುವವರಿಲ್ಲ. ಆದರೂ, ಆಕೆಗೆ ತಾನು ನಿರ್ದಿಷ್ಟವಾಗಿ ಏನು ಮಾಡಬೇಕಾಗಿದೆ ಎಂಬುದು ತಿಳಿದಿದೆ. ಆ ತಿಳುವಳಿಕೆ ಅವಳ ಅಂತರ್ಯದಲ್ಲೇ ಇದೆ. ಕುಟುಂಬವನ್ನು ಹೇಗೆ ಸಂರಕ್ಷಿಸಬೇಕು ಎಂಬ ಈ ಬಹುಮುಖ್ಯ ತಿಳುವಳಿಕೆಯನ್ನು ಆಕೆ ಹೊಂದಿದ್ದಾಳೆ. ಅದನ್ನು ಆಕೆ ಲೆಬನಾನಿನ ಗುಡ್ಡಗಳಲ್ಲಿ ಕಲಿತಿದ್ದಾಳೆ. ಈಗ ಅವಳು ಅದೇ ಕೆಲಸಗಳನ್ನು ಮಾಡುತ್ತಾಳೆ; ಅವೇ ಕ್ರಮಗಳನ್ನು ಕಾರ್ಯರೂಪಕ್ಕೆ ತರುತ್ತಾಳೆ. ಅದು ಅಂತರ್ಯದಿಂದಲೇ ಬರುತ್ತದೆ. ಇದು ನಾನು ಕಲ್ಪಿಸಿಕೊಳ್ಳಲಾಗದಷ್ಟು ಹಿಂದಿನ ತಲೆಮಾರುಗಳಿಂದ ಸಾಗಿಬಂದಿದೆ. ತನ್ನ ಪ್ರೀತಿಪಾತ್ರರ ಉಳಿವಿಗಾಗಿ ಮಾತ್ರವಲ್ಲ, ಅವರ ಸಮೃದ್ಧಿಗಾಗಿಯೂ ಪದಾರ್ಥಗಳನ್ನು ಹೇಗೆ ನಿರ್ಮಿಸಬೇಕೆಂಬುದನ್ನೂ ಆಕೆ ಬಲ್ಲಳು.

ನಾನೋರ್ವ ಸಾಂಸ್ಕೃತಿಕ ಕಾರ್ಯಕರ್ತೆ. ನನ್ನ ಪ್ರೀತಿಪಾತ್ರರ ಉಳಿವಿಗಾಗಿ ಮಾತ್ರವಲ್ಲ, ಅವರ ಸಮೃದ್ಧಿಗಾಗಿಯೂ ಏನನ್ನಾದರೂ ಸೃಷ್ಟಿಸಬಯಸುತ್ತೇನೆ. ಆದರೆ ನನ್ನ ಹಾಗೂ ನನ್ನ ಅಜ್ಜಿಯ ನಡುವೆ ದೊಡ್ಡ, ಬಹುದೊಡ್ಡ ಅಂತರವಿದೆ. ಆ ತಿಳುವಳಿಕೆಯು ಅವಳ ಅಂತರ್ಯದಲ್ಲಿದೆ; ಅವಳಿಗೆ ತಿಳಿದಿರುವ ಪಾಕಸೂತ್ರವು ಒಂದು ಪೀಳಿಗೆಯಿಂದ ಮುಂದಿನ ಪೀಳಿಗೆಗೆ ಪರಂಪರಾಗತವಾಗಿ ಬಂದಿದೆ. ಏನು ಮಾಡಬೇಕಾಗಿದೆ ಎಂಬ ತಿಳುವಳಿಕೆಯಲ್ಲಿ ಅವಳು ಸುರಕ್ಷಿತಳಾಗಿದ್ದಾಳೆ. ನಾನು ಹಾಗಲ್ಲ. ಪೂರ್ವದಲ್ಲಿ ಹುಟ್ಟಿದ ಆದರೆ ಪಶ್ಚಿಮದಲ್ಲಿ ಬೆಳೆದ ನನಗೆ ಚೆನ್ನಾಗಿ ಉಪಯೋಗಕ್ಕೆ ಬರುವ ಒಂದು ಪಾಕಸೂತ್ರಕ್ಕಾಗಿ, ಒಂದು ಪರಂಪರೆಗಾಗಿ, ನಾನು ಹುಡುಕಾಡುತ್ತಿದ್ದೇನೆ. ನನಗೆ ಯಾವ ಕತೆಗಳನ್ನು ಹೇಗೆ ಬರೆಯಬೇಕು ಮತ್ತು ಏಕೆ ಬರೆಯಬೇಕು ಎಂಬುದನ್ನು ಹೇಳಲು ಹಿಂದಿನ ಪೀಳಿಗೆಯವರು ಇಲ್ಲ. ಹೀಗಾಗಿ ನಾನೀಗ ತಡಕಾಡುತ್ತಿದ್ದೇನೆ. ನಮಗೆ ಉಪಯೋಗಕ್ಕೆ ಬರುವ ಪಾಕಸೂತ್ರಗಳಿಗಾಗಿ ಹುಡುಕಾಡುತ್ತಿದ್ದೇನೆ. ನಾವು ಎಲ್ಲಿಂದ ಬಂದಿದ್ದೇವೆ ಮತ್ತು ಈಗ ಎಲ್ಲಿದ್ದೇವೆ ಎಂಬುದನ್ನು ಜನರಿಗೆ ಹೇಳುವ

## ಅತ್ರಿ ಬುಕ್ ಸೆಂಟರ್

ಮಂಗಳೂರು

ಇವರ ಲಭ್ಯ ಪ್ರಕಟಣೆಗಳು ರೂ.

| | | |
|---|---|---|
| ೧. ಅಕ್ಷಮಾಲಾ | ಜಿ. ಎ. ರುಕ್ಮಿಣಿ ಮಾಲಾ | ೨೦ |
| ೨. ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ | ಡಿ. ಎನ್. ಶಂಕರ ಭಟ್ಟ | ೧೪೦ |
| ೩. ಕನ್ನಡದ ಸರ್ವನಾಮಗಳು | ಡಿ. ಎನ್. ಶಂಕರ ಭಟ್ಟ | ೪೬ |
| ೪. ಕನ್ನಡನುಡಿ ನಡೆದುಬಂದ ದಾರಿ | ೦ | ೧೬೦ |
| ೫. ಕನ್ನಡ ಪದಗಳ ಒಳರಚನೆ | ಡಿ. ಎನ್. ಶಂಕರ ಭಟ್ಟ | ೧೨೦ |
| ೬. ಕನ್ನಡ ಬರಹವನ್ನು ಸರಿಪಡಿಸೋಣ | ಡಿ. ಎನ್. ಶಂಕರ ಭಟ್ಟ | ೧೨೦ |
| ೭. ಕನ್ನಡ ವಾಕ್ಯಗಳ ಒಳರಚನೆ | ಡಿ. ಎನ್. ಶಂಕರ ಭಟ್ಟ | ೧೨೦ |
| ೮. ದೀವಟಿಗೆ | ಕೆ. ಎಂ. ರಾಘವ ನಂಬಿಯಾರ್ | ೬೦ |
| ೯. ದುಃಖಾರ್ತರು | ಎ. ಪಿ. ಸುಬ್ಬಯ್ಯ | ೭೦ |
| ೧೦. ನನ್ನ ಬೆಲ್ಜಿಯಮ್ ಪ್ರವಾಸ | ಭಾರತೀ ಭಟ್ | ೫೦ |
| ೧೧. ನಮ್ಮ ಜಪಾನ್ ಪ್ರವಾಸ | ಗಂಗಾ ಬಿ. ರಾಜಪುರೋಹಿತ | ೬೦ |
| ೧೨. ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದು ? | ಡಿ. ಎನ್. ಶಂಕರ ಭಟ್ಟ | ೬೫ |
| ೧೩. ನೃತ್ಯಲೋಕ | ಕೆ. ಮುರಲೀಧರ ರಾವ್ | ೩೦೦ |
| ೧೪. ಭಾಷೆಯ ಬಗೆಗೆ ನೀವೇನು ಬಲ್ಲಿರಿ ? | ಡಿ. ಎನ್. ಶಂಕರ ಭಟ್ಟ | ೧೦೦ |
| ೧೫. ಮಾರಿಷಾ ಕಲ್ಯಾಣ | ಅಮೃತ ಸೋಮೇಶ್ವರ | ೧೮ |
| ೧೬. ಸಂಜೆ ಬಿಸಿಲು | ಎ. ಪಿ. ಮಾಲತಿ | ೬೦ |

### ಜಿ. ಟಿ. ನಾರಾಯಣರಾಯರ ಕೃತಿಗಳು

| | |
|---|---|
| ೧೭. ಆಲ್ಬರ್ಟ್ ಐನ್‌ಸ್ಟೈನ್ : ಮಾನವೀಯ ಮುಖ (ಅನುವಾದ) | ಮರುಮುದ್ರಣದಲ್ಲಿದೆ |
| ೧೮. ಉಲ್ಲೇಖನೀಯ ಐನ್‌ಸ್ಟೈನ್ (ಅನುವಾದ) | ೩೦ |
| ೧೯. ಋಷಿವಾಕ್ಯ ವಿಜ್ಞಾನ ಕಲೆ (ತತ್ವಶಾಸ್ತ್ರ-ವಿಜ್ಞಾನ ಜಿಜ್ಞಾಸೆ) | ೧೫ |
| ೨೦. ಎನ್‌ಸಿಸಿ ದಿನಗಳು (ಅನುಭವ ಕಥನ) | ೫೫ |
| ೨೧. ಐನ್‌ಸ್ಟೈನ್ ಬಾಳಿದರಿಲ್ಲಿ (ವೈಜ್ಞಾನಿಕ ಜೀವನಚರಿತ್ರೆ) | ೫೫ |
| ೨೨. ಕುವೆಂಪು ದರ್ಶನ ಸಂದರ್ಶನ (ಲೇಖನಗಳು) | ೪೫ |
| ೨೩. ಕೃಷ್ಣ ವಿವರಗಳು (Black Holes) | ೩೦ |
| ೨೪. ಕೋಪರ್ನಿಕಸ್ ಕ್ರಾಂತಿ (ಖಗೋಳ ವಿಜ್ಞಾನೇತಿಹಾಸ) | ೩೦ |
| ೨೫. ಜಾತಕ ಮತ್ತು ಭವಿಷ್ಯ (ನಾಳೆಯನ್ನು ಇಂದು ಅರಿಯಬಹುದೇ ?) | ೧೫ |
| ೨೬. ಧೂಮಕೇತು (ಅದೃಶ್ಯಲೋಕದ ಅನಾದಿಕಾಲದ ಅಪೂರ್ವ ಅತಿಥಿ) | ೩೦ |
| ೨೭. ನಕ್ಷತ್ರ ವೀಕ್ಷಣೆ (ಬಾನಿಗೆ ಹಿಡಿದ ನುಡಿ-ಚಿತ್ರ ದರ್ಪಣ) | ೪೦ |
| ೨೮. ನವಕರ್ನಾಟಕ ವಿಜ್ಞಾನ ಪದವಿವರಣ ಕೋಶ | ೫೦೦ |
| ೨೯. ಫರ್ಮಾ ಯಕ್ಷಪ್ರಶ್ನೆ ಮತ್ತು ಇತರ ವಿಜ್ಞಾನ ಲೇಖನಗಳು | ೬೦ |
| ೩೦. ಬಾನಬಯಲಾಟ ಗ್ರಹಣ (ಗ್ರಹಣದ ವಿಜ್ಞಾನ ವೃತ್ತಾಂತ) | ೧೦ |
| ೩೧. ಮುಗಿಯದ ಪಯಣ (ಆತ್ಮಕಥೆ) | ೧೨೦ |
| ೩೨. ರಾಮಾನುಜನ್ ಬಾಳಿದರಿಲ್ಲಿ (ಗಣಿತ ಮೇರುವಿನ ದುರಂತ ಜೀವನ) | ೫೦ |
| ೩೩. ವಿಜ್ಞಾನ ಸಪ್ತರ್ಷಿಗಳು | ೩೫ |
| ೩೪. ವಿಶ್ವದ ಕಥೆ (ಜಗತ್ತಿನ ಹುಟ್ಟು, ಬೆಳವಣಿಗೆ, ಮುಪ್ಪು, ಸಾವು) | ೨೧ |
| ೩೫. ವೈಜ್ಞಾನಿಕ ಮನೋಧರ್ಮ (Scientific Temper) | ೮೦ |
| ೩೬. ಸಪ್ತಸಾಗರದಾಚೆಯೆಲ್ಲೋ.... (ಚಂದ್ರಶೇಖರ್ ದರ್ಶನ, ಸಂವಾದ) | ೬೦ |
| ೩೭. ಸವಾಲನ್ನು ಎದುರಿಸುವ ಛಲ (ವ್ಯಕ್ತಿತ್ವ ವಿಕಾಸ) | ೩೦ |
| ೩೮. [illegible] (ವಿಜ್ಞಾನ, ಜೀವನ) | ೫೫ |
| ೩೯. [illegible] | ೨೪ |
| ೪೦. [illegible] | ೧೨ |
| ೪೧. [illegible] | ೬೦ |
| 42. Crossing the Dateline | 40 |
| 43. Scientific Temper | 15 |
| 44. With the Great Minds | 30 |

ಅತ್ರಿ ಬುಕ್ ಸೆಂಟರ್

[illegible]


ಸೂತ್ರಗಳಿಗಾಗಿ ನಾನು ಹುಡುಕುತ್ತಿದ್ದೇನೆ; ಹಳತು ಮತ್ತು ಹೊಸತನ್ನು ಬೆರೆ ಪ್ರಯತ್ನಿಸುತ್ತಿದ್ದೇನೆ; ಇದು ಎಂದಿಗೂ ಸುಲಭದ ಕೆಲಸವಲ್ಲ. ನಾನು ಸೃಷ್ಟಿ ಪ್ರಯತ್ನಿಸುತ್ತಿದ್ದೇನೆ; ನನ್ನ ಕುಟುಂಬವನ್ನು ಸಂರಕ್ಷಿಸಲು ಪ್ರಯತ್ನಿಸುತ್ತಿದ್ದೇನೆ.

ಮೊಸರು ಮಾಡುವುದು ಅಜ್ಜಮ್ಮನಿಗೆ ಸುಲಭದ ಕೆಲಸ. ಅದರ ಪ್ರತಿಹಂತ ರಕ್ತಗತವಾಗಿದೆ. ಬೋಗುಣಿಗೆ ಹಾಲನ್ನು ಬಗ್ಗಿಸಿ. ಅಳತೆಲೋಟದ ಅಗತ್ಯ ನಿಮಗೆಷ್ಟು ಬೇಕೆಂದು ನಿಮಗೇ ತಿಳಿದಿದೆ. ನಿಧಾನವಾಗಿ ಹಾಲನ್ನು ಕುದಿತದ ಹಂತಕ್ಕೆ ಇವುಗಳಿಗೆಲ್ಲ ನೀವು ಅವಸರ ಮಾಡಬಾರದು. ಅದು ತಣಿಯಲಿ, ಅದು ತಣಿದ ನಿಮಗೆ ತಿಳಿಯುತ್ತದೆ. ಏಕೆಂದರೆ, ನಿಮ್ಮ ಕಿರುಬೆರಳನ್ನು ಹಾಲಿನಲ್ಲಿ ಅದ್ದಿ ಹತ್ತರವ ಎಣಿಸಲು ನಿಮಗೆ ಸಾಧ್ಯವಾಗುತ್ತದೆ. ಆಗ ಮೊದಲಿನ ಮೊಸರಿನಿಂದ ಒಂದಂಶವ ಹಾಲಿಗೆ ಸೇರಿಸಿ; ಆಗಲೇ ನೀವು ಹೆಪ್ಪು ಹಾಕುವುದು/ಸಂಸ್ಕಾರ ನೀಡುವು ಬಟ್ಟೆಯನ್ನು ಜಾಗರೂಕತೆಯಿಂದ ಸುತ್ತಿ, ರಾತ್ರಿ ಇಡೀ ಗಟ್ಟಿಯಾಗಲು ಬಿಡಿ. ತಿನ್ನಿ

ಈ ಆಚರಣೆಯು ಎಷ್ಟು ಬಾರಿ ನಡೆದಿದೆಯೆಂದರೆ, ಅದರ ಬಗ್ಗೆ ಸುಮ ಯೋಚಿಸಿದರೂ, ಅದರ ಪರಿಮಳ ಮತ್ತು ಬಣ್ಣ ಅನುಭವಕ್ಕೆ ಬರುತ್ತದೆ ಮತ್ತು ಇ ಮನೆಯೆಂಬ ಬೆಚ್ಚಗಿನ ಭಾವನೆಯನ್ನು ಉಂಟುಮಾಡುತ್ತದೆ. ನಾನು ಕಾಲುಗಳ ಮಡಚಿಕೊಂಡು, ಕೈಗಳಿಂದ ಮೊಣಕಾಲುಗಳನ್ನು ಅಪ್ಪಿಹಿಡಿದು, ಅಜ್ಜಿ ಮನೆಯ ಆರಾಮ ಕುರ್ಚಿಯೊಂದರಲ್ಲಿ ಕುಳಿತಿದ್ದೇನೆ. ಕಿಟಕಿಯ ಮೇಲೆ ಮೃದುವಾಗಿ ವ ಹನಿಯುತ್ತಲಿದೆ. ನಾವು ಆರಾಮವಾಗಿ ಜೊತೆಯಾಗಿ ಮೌನದಿಂದಿದ್ದು ಆ ಬ ಮಾತಿಗೆ ತೊಡಗುತ್ತೇವೆ. ಅಡುಗೆಮನೆಯಲ್ಲಿ ದೊಡ್ಡಮ್ಮ ರೋಸ್‌ಳ ಸಿಗರೇ ವಾಸನೆಯು ಕ್ಷೀಣವಾಗಿದೆ. ಹಾಗೆಯೇ ಕಾಫಿಯ, ಅಜ್ಜಮ್ಮನ ಬೆವರಿನ, ಸಾಬೂ ಮತ್ತು ಕಠಿಣ ಪರಿಶ್ರಮದ ಸುಗಂಧ ಕೂಡ. ನಾನು ನಾಲ್ಕು ವರ್ಷದವಳು. ಎಂಟ ಹದಿನೈದು. ನನಗೆ ನನ್ನ ಮನೆಯಲ್ಲಿರುವ ಅಡುಗೆಮನೆ ಗೊತ್ತಿರುವಷ್ಟೇ ಅವಳ ಅಡು ಮನೆಯೂ ಗೊತ್ತು.

### ಮೊಸರು ಮಾಡುವುದು/ಕತೆಗಳನ್ನು ಬರೆಯುವುದು

**ಮೊದಲ ಹೆಜ್ಜೆ : ಹಾಲನ್ನು ಬಿಸಿ ಮಾಡಿ, ಅದು ಕುದಿಯುವ ಮಟ್ಟವನ್ನು ತಲುಪ** ನಾನೂ ಹಲವು ಬಾರಿ ಕುದಿಯುವ ಮಟ್ಟವನ್ನು ತಲುಪಿದ್ದೇನೆ. ನಾನು ಲೆಬನಾನಿ ಸಂಕಟಗಳನ್ನು, ಪ್ಯಾಲೆಸ್ತೀನಿಯನ್ನರ ನಿರ್ವೀರ್ಯೀಕರಣವನ್ನು, ಇರಾಕಿನ ನಾಶವ ಅರಿತಿದ್ದೇನೆ. ಅನೇಕ ಸಲ ನಾನು ಕುಚೇಷ್ಟೆಗೆ ಈಡಾಗಿದ್ದೇನೆ. ಅಮೆರಿಕಾ ಬೀದಿಗಳಲ್ಲಿ ಅದೆಷ್ಟು ಅರಬರು ಹೊಡೆತ ತಿಂದಿದ್ದಾರೆ ಎಂಬುದನ್ನು ನಾನು ಬ ಸಾಮ್ರಾಜ್ಯವಾದ ಹಾಗೂ ವಸಾಹತುವಾದಗಳು ಹೇಗೆ ಅರಬ್ ಜಗತ್ತನ್ನು ಛಿ ಗೊಳಿಸಿವೆ, ಭಗ್ನಗೊಳಿಸಿವೆ, ನಾವು ಆ ಜಾಗವನ್ನು ತೊರೆಯುವಂತೆ ಒತ್ತಡ ತಂದಿ ಎಂಬುದನ್ನು ನಾನು ಬಲ್ಲೆ. ಬೀದಿಯಲ್ಲಿ ನಡೆಯುವಾಗೆಲ್ಲ ನಮ್ಮನ್ನು ಅಪಮಾನಿಸಿ ನಮ್ಮ ಉಪಹಾರ ಗೃಹಗಳನ್ನು ಸುಟ್ಟು ಹಾಕಿದ, ನಮಗೆ ಫೆಡರಲ್ ಬ್ಯೂರೋ ಆ ಇನ್ವೆಸ್ಟಿಗೇಷನ್ (ಎಫ್.ಬಿ.ಐ.) ಕಿರುಕುಳ ನೀಡಿದ ಮತ್ತು ನಮ್ಮ ಮಸೀದಿಗಳ ನಾಶಮಾಡಿದ ಜಾಗಗಳಲ್ಲಿ ನಾವೀಗ ವಾಸಿಸುತ್ತಿದ್ದೇವೆ. ಈ ಎಲ್ಲ ಅರಿವು ನಾ ಕುದಿಯುವ ಮಟ್ಟವನ್ನು ತಲುಪಲು ಕಾರಣವಾಗಿವೆ. ಇದು ನನ್ನನ್ನು ಸಿಟ್ಟಿಗೆಬ್ಬಿಸುತ್ತ ಮತ್ತು ಸಿಟ್ಟಿಗೇಳುವುದು ಓರ್ವ ಸಾಂಸ್ಕೃತಿಕ ಕಾರ್ಯಕರ್ತೆಗೆ ಒಳ್ಳೆಯದೆಂದು ನಾ ತಿಳಿದಿದ್ದೇನೆ. ನಮ್ಮ ಅಂತರ್ಯವನ್ನು ವಿಷಪೂರಿತವಾಗಿಸುವ ಮತ್ತು ಜನರನ ಹೊರದಬ್ಬುವ ಬಗೆಯ ಸಿಟ್ಟಲ್ಲ, ಬದಲಾಗಿ, ನಮಗೆ ಶಕ್ತಿ ಮತ್ತು ಧೈರ್ಯ ನೀಡುವ ನಮ್ಮನ್ನು ಮುನ್ನುಗ್ಗುವಂತೆ ಮಾಡುವ, ಅನುಚಿತವಾದುದನ್ನು ನಿರಾಕರಿಸಲು ಸ್ಥೈರ್ಯ ನೀಡುವ, ತಿರುಗೇಟು ಕೊಡುವ, ಅತ್ಯಧಿಕ ನೋವಿನಲ್ಲೂ ಹಾಸಿಗೆಯಿಂದ ಏಳುವಂ ಮಾಡುವ ಸಾತ್ವಿಕ ಕ್ರೋಧವು ಒಳ್ಳೆಯದು.

**ಎರಡನೆಯ ಹೆಜ್ಜೆ : ಹಾಲು ಅಗತ್ಯವಿದ್ದಷ್ಟು ತಣಿದಿದೆಯೇ ಎಂದು ಪರೀ** ನೋಡಿ. ಹತ್ತು ಸೆಕೆಂಡುಗಳ ಕಾಲ ಹಾಲಿನಲ್ಲಿ ನಿಮ್ಮ ಬೆರಳನ್ನು ಅದ್ದಲು ಸಾಧ್ಯವಾದ ಅದು ಸೂಕ್ತ ಸಮಯ ಎಂದು ನೀವು ತಿಳಿಯುತ್ತೀರಿ. ಈ [illegible] ರಕ್ತಗ ವಾಗಿದೆ. [illegible] ಕತೆ ಹೇಳಬೇಕು ಮತ್ತು [illegible] ಹೇಳಬೇಕು [illegible] ರಕ್ತಗತವಾಗಿದೆ. ಅವರಲ್ಲಿ ಆಂತರಿಕ ತಾಪಮಾನದ ಪ್ರಮಾಣವಿದೆ. ಅಜ್ಜಮ್ಮ ತ ಬೆರಳುಗಳನ್ನು ಬಳಸಿಕೊಳ್ಳುವಂತೆ, ನಾನೂ ಬೆರಳುಗಳನ್ನು ಬಳಸಿ ಕೈಯಲ್ಲಿ ಪೆನ್ ಹಿಡಿದು, [illegible] ಕುಳಿತುಕೊಳ್ಳುವ ಮೊದಲು [illegible] ಕಡಿಮೆಯಾಗುವ ತ [illegible]

ಮುತ್ತೇನೆ. ವಿಚಾರಪೂರ್ಣ ಹೊಳಹುಗಳು, ಪ್ರೀತಿ ಮತ್ತು ವಿನೋದಗಳು ಪವನ್ನು ಸೆಳೆದುಕೊಂಡು ಅವೆಲ್ಲವೂ ಪರಸ್ಪರ ಬೆರೆಯುವಂಥ ಕಾಲವೇ ಇದಕ್ಕೆ ಲವಾಗಿರುತ್ತದೆ. ನಾವು ಸಿಟ್ಟಿನ ಉತ್ತುಂಗ ಸ್ಥಿತಿಯಲ್ಲಿ ಇರುವ ಸಮಯವು ಗಳನ್ನು ಸೃಷ್ಟಿಸುವುದಕ್ಕೆ ಸೂಕ್ತವಲ್ಲ, ತಾಪವು ಆರುವವರೆಗೆ ಕಾಯಬೇಕು.

**ಮೂರನೆಯ ಹೆಜ್ಜೆ : ಹೆಪ್ಪುಹಾಕಿ/ಸಂಸ್ಕಾರ ನೀಡಿ ಮತ್ತು ಕದಡಿ. ಹಿಂದಿನ ಮೊಸರಿನ ವಂಶವನ್ನು ತೆಗೆದು ತಣಿದ ಹಾಲಿಗೆ ಸೇರಿಸಿ.** ಈ ಹೆಪ್ಪು ಹಾಕುವಿಕೆ/ಸಂಸ್ಕಾರ ಕುವಿಕೆಯು ತುಂಬ ಸುದೀರ್ಘವಾದ ಹಾದಿಯನ್ನು ಕ್ರಮಿಸಿದೆ. ಇದು ಲೆಬನಾನಿನ ತಗಳಿಂದ ಸಾಗಿಬಂದ ಹೆಜ್ಜೆ ಗುರುತನ್ನು ಉಳಿಸಿದೆ. ಸಾಗರವನ್ನು ದಾಟಿ, ವಲಯದ ಹೊಸ ದೇಶದಲ್ಲಿ ಹಲವಾರು ಬಾರಿ ಕಸಿಗೊಳಗಾದರೂ, ಅದು ಗೋ ಉಳಿದುಕೊಂಡಿದೆ, ಬದುಕುಳಿದಿದೆ ಮತ್ತು ನಿರಂತರವಾಗಿ ಜೀವನಾಧಾರ ತು ಪೋಷಣೆಯನ್ನು ನೀಡುತ್ತದೆ. ಮತ್ತೆ ಮತ್ತೆ ಕೊಡುತ್ತಲೇ ಇರುತ್ತದೆ.

**ಹೆಪ್ಪು ಹಾಕಿ/ಸಂಸ್ಕಾರ ನೀಡಿ ಮತ್ತು ಕದಡಿ :** ಸಾಂಸ್ಕೃತಿಕ ಕಾರ್ಯಕರ್ತೆ ಗಿರುವುದೆಂದರೆ ಜೀವ ನೀಡುವುದು, ಸಮುದಾಯಕ್ಕೆ ಹಿಂತಿರುಗಿಸುವುದು, ಕತೆಗಳನ್ನು ಹೇಳುವುದು, ಪಾಕಸೂತ್ರಗಳನ್ನು ದಾಟಿಸುವುದು, ನಾವು ರೆಂಬುದನ್ನು ನಮಗೆ ಹೇಳುವುದು. ಪೂರ್ವದಿಂದ ಪಶ್ಚಿಮಕ್ಕೆ, ಪಶ್ಚಿಮದಿಂದ ರ್ವಕ್ಕೆ ಹೋಗುವ ತಿರುವುಗಳ ಜಾಡಿನ ಗುರುತು ಹಚ್ಚುವುದು. ಸಾಂಸ್ಕೃತಿಕ ರ್ಯಕರ್ತೆಯಾಗಿರುವುದೆಂದರೆ ಬದುಕು ನೀಡುವುದು, ಜೀವನಾಧಾರ ಹಾಗೂ ಷಣೆಯನ್ನು ನೀಡುವುದು. ಮತ್ತೆ ಮತ್ತೆ ಕೊಡುತ್ತಲೇ ಇರುವುದು.

ಸಾಂಸ್ಕೃತಿಕ ಕಾರ್ಯಕರ್ತೆಗೆ ಹಲವು ಜವಾಬ್ದಾರಿಗಳಿವೆ. ಸರಿಯಾದ ುಯದಲ್ಲಿ ಹೆಪ್ಪನ್ನು/ಸಂಸ್ಕಾರವನ್ನು ಸೇರಿಸಬೇಕು. ಇದು ವ್ಯಕ್ತಿಗತ ಮನೋ ವದಲ್ಲಿ ಕಾಣಿಸಿಕೊಳ್ಳದೆ ಸಮುದಾಯದಲ್ಲಿ ಬೇರೂರಿರುವುದನ್ನು ಖಾತ್ರಿಪಡಿಸಿ ಳ್ಳಬೇಕು. ನಮಗೆಲ್ಲರಿಗೂ ನಿರೋಧಕ ಶಕ್ತಿಯನ್ನೋ, ನಗುವನ್ನೋ, ದುಃಖವನ್ನೋ ಭ್ರಮಾಚರಣೆಯನ್ನೋ ಅಥವಾ ಹೆಮ್ಮೆಯನ್ನೋ ಇನ್ನೇನನ್ನಾದರೂ ಮರಳಿ ಡುತ್ತದೆಂಬ ಆಶಯದಲ್ಲಿ ಹೆಪ್ಪನ್ನು/ಸಂಸ್ಕಾರವನ್ನು ಸೇರಿಸಬೇಕು. ಇದೇ ಂಸ್ಕೃತಿಕ ಕಾರ್ಯಕರ್ತೆಯ ಕೊಡುಗೆ ಆಗಬೇಕು.

**ನಾಲ್ಕನೆಯ ಹೆಜ್ಜೆ : ಜಾಗರೂಕತೆಯಿಂದ ಬಟ್ಟೆ ಸುತ್ತಿ ರಾತ್ರಿ ಇಡೀ ಅದನ್ನು ಟ್ಟಿಯಾಗಲು ಬಿಡಿ. ಆಗ ಮಾತ್ರ ಹಾಲು ಮೊಸರಾಗುತ್ತದೆ.** ಆಗ ತ್ರ ಹೆಪ್ಪು / ಸಂಸ್ಕಾರವು ತನ್ನ ಕೆಲಸವನ್ನು ಮಾಡುತ್ತದೆ.

ಸಾಂಸ್ಕೃತಿಕ ಕಾರ್ಯಕರ್ತೆಯಾಗಿ ನಾನು ಕೆಲಸಗಳನ್ನು ಗೆ ಮಾಡುತ್ತೇನೆ ಎಂಬುದು ಮುಖ್ಯವಾಗುತ್ತದೆ. ಕೃತಿ ನ್ನು ಜಾಗರೂಕತೆಯಿಂದ ಪರಿಭಾವಿಸುವುದು, ಅದನ್ನು ಾಗಿ ಸುತ್ತುವುದು, ರಕ್ಷಿಸಿಡುವುದು, ಅದರಲ್ಲಿನ ಬಿಸುಪನ್ನು ಳಿಸುವುದು ಎಲ್ಲವೂ ನಿರ್ಣಾಯಕವಾಗುತ್ತದೆ. ತವಣಿಗೆಗೆ ಪರಿಸ್ಥಿತಿಯು ಸಮರ್ಪಕವಾಗಿರಬೇಕು. ಸುಪು ಅಲ್ಲಿದ್ದರೆ, ಸಮಯವು ಸೂಕ್ತವಾದುದಾಗಿದ್ದರೆ ತ್ತು ಆ ಕೋಮಲ ಅಸ್ತಿತ್ವವು (ಮೊಸರಿನ/ಸಂಸ್ಕೃತಿಯ) ಣಾತ್ಮಕ ಆವರಣವನ್ನು ಹೊಂದಿದ್ದರೆ, ಆಗ ಇದು ಲವರನ್ನು ಸಂರಕ್ಷಿಸುತ್ತದೆ.

ಪ್ರತೀ ಪಂಕ್ತಿಯ ಬಗೆಗೂ ನಾನು ಕಾಳಜಿ ವಹಿಸ ೕಕು. ಬರೆದ ಅಕ್ಷರದಲ್ಲಿ ಅಧಿಕಾರವಿದೆ ಹಾಗೂ ಪ್ರಕಟಿತ ದದಲ್ಲಿ ಶಕ್ತಿಯಿದೆ. ಯಾರಿಗಾಗಿ ನಾನು ಮಾತಾಡು ತ್ತೇನೆ ? ನನ್ನೊಳಗಿನ ನಂಬಿಕೆಗಳೇನು ? ನಾನು ಯಾರಿಗೆ ವಾಬ್ದಾರಳು ? ಯಾರ ಕತೆಗಳನ್ನು ಹೇಳಲಾಗುತ್ತದೆ ತ್ತು ಯಾರದ್ದನ್ನು ಹೇಳಲಾಗುವುದಿಲ್ಲ? ಶ್ವೇತ ರ್ಣೀಯ ಪುರುಷರ ಲೋಕದಲ್ಲಿ ಸಾಧನೆ ಾಡಿದ ಅರಬರ ಕತೆಗಳನ್ನು ನಾನು ಹೇಳ ೕಕೇ ? ಇಲ್ಲವೇ ಅಮೆರಿಕನ್ ಸರಕಾರದ ಆಶ್ರಯ ಡೆದ ಒಬ್ಬಂಟಿ ಅರಬ್ ಮಾತೆಯರ ಕತೆಗಳನ್ನು ೕಳಬೇಕೇ ? ಏಡ್ಸ್‌ನಿಂದ ಸಾಯುತ್ತಿರುವ ಸಲಿಂಗ ರುಷರ ಅಥವಾ ಬೀದಿಗೆ ಬಿದ್ದಿರುವ ಯುವ ಅಮಲು ವ್ಯಸನಿಗಳ ಯಾ ಏಕಾಂಗಿತನದಿಂದ ಎದೆ ಬಿರಿಯುತ್ತಿರುವ ವೃದ್ಧರಾದ ಅರಬರ ಕತೆಗಳನ್ನು ನಾನು ಹೇಳಬೇಕೇ ? ಯಾರ ಕತೆಗಳು ನಮಗೆ ಅಗತ್ಯವಾಗಿವೆ ? ಯಾರ ಕತೆಗಳನ್ನು ಹೇಳಲಾಗುತ್ತದೆ ?

ಪದಗಳು ತಳವೂರಲು ಬಿಡಿ, ಕತೆಗಳನ್ನೂ ಕೂಡ. ಮುಖ್ಯವಾದ ಎಲ್ಲವೂ ಬೆಳೆಯಲು ಸಮಯದ ಅಗತ್ಯವಿದೆ ಮತ್ತು ಅದರಲ್ಲಿ ಸಂಸ್ಕೃತಿಯೂ ಸೇರಿದೆ. ಪದಗಳು ಸಮರ್ಪಕವಾಗಿ ತಳವೂರಲು ಅವುಗಳನ್ನು ಒತ್ತಟ್ಟಿಗೆ ಇಡಬೇಕು. ಅದರಿಂದ ನಿರ್ದಿಷ್ಟ ವಿಚಾರಗಳು ಹೊರಾವರಣಕ್ಕೆ ಬರುತ್ತವೆ ಮತ್ತು ಉಳಿದವು ಆಳಕ್ಕೆ ಇಳಿಯುತ್ತವೆ. ತಳವೂರಲು ಅವು ಸರಿಯಾದ ಪದಗಳೇ, ಅರ್ಥವನ್ನು ಕೊಡುತ್ತವೆಯೇ ಎಂಬುದನ್ನು ನೋಡಲು ಸಮಯ ಕೊಡಿ. ಪದಗಳನ್ನು ಪುನಃ ಓದಿ. ಅವುಗಳನ್ನು ಜಾಗರೂಕತೆಯಿಂದ ಪರೀಕ್ಷಿಸಿ. ಈ ಕ್ಷಣದಲ್ಲಿ ಬಳಸಲು ಅವು ಅತ್ಯುತ್ತಮ ಎಂಬುದನ್ನು ಖಚಿತಪಡಿಸಿಕೊಳ್ಳಿ.

**ಐದನೆಯ ಹೆಜ್ಜೆ :** ತಿನ್ನಿ. ತಾಜಾ ಮೊಸರನ್ನು ತಿನ್ನುವುದು ನನಗೆ ಬಹಳ ಇಷ್ಟವಾದುದರಿಂದ ನಾನು ನನ್ನಜ್ಜಿಯು ಮೊಸರು ಮಾಡಿದ ಮರುದಿನ ಅವಳ ಮನೆಗೆ ಹೋದೆ. ನಾನು ಅದರ ತಣ್ಣನೆಯ, ನುಣ್ಣಗಿನ, ಜಾರಿಕೆಯ ನೇಯ್ಗೆಯನ್ನು ಅದರ ದೃಢವೂ ಗಾಢವೂ ಆದ ರುಚಿಯನ್ನು ಇಷ್ಟಪಡುತ್ತೇನೆ. ಅದು ನನ್ನ ಗಂಟಲಿನಲ್ಲಿ ನಿಧಾನವಾಗಿ ಜಾರುತ್ತ ಇಳಿಯುತ್ತದೆ. ಅಕ್ಕರೆ ಹಾಗೂ ಮೃದುತ್ವದೊಂದಿಗೆ ನನ್ನಜ್ಜಿ ಇದನ್ನು ಮಾಡಿರುವಳೇ ಹೊರತು ಇದು ತನ್ನ ಕರ್ತವ್ಯವೆಂಬ ದೃಷ್ಟಿಯಿಂದಲ್ಲ ಎಂಬುದನ್ನು ನಾನು ಬಲ್ಲೆ. ಅವಳ ಅಕ್ಕರೆ ಹಾಗೂ ಮಾರ್ದವತೆಯು ಇದಕ್ಕೆ ಬಹಳಷ್ಟನ್ನು ಸೇರಿಸಿದೆ. ಅವಳು ನನಗೆ ''ತಿನ್ನು'' ಎಂದಳು ಮತ್ತು ನಾನು ತಿಂದೆ. ಅವಳು ಮಾಡಿದ ಹೇರಳವಾದ ಮೊಸರು, ದ್ರಾಕ್ಷಿ ಎಲೆಗಳು ಮತ್ತು ಬೇರೆಲ್ಲಾ ಅದ್ಭುತ ತಿನಿಸುಗಳನ್ನು ತಿಂದೆ.

ಅವಳು ನನಗೆ ''ತಿನ್ನು'' ಎಂದಳು. ಅವಳ ಮಾತಿನ ಅರ್ಥ, 'ನಾನು ನಿನಗೆ ಆಧಾರವಾಗುತ್ತೇನೆ, ನಾನು ನಿನ್ನ ಆರೈಕೆ ಮಾಡುತ್ತೇನೆ, ನೀನು ಬದುಕಲು ಮಾತ್ರವಲ್ಲ ಸಮೃದ್ಧಿ ಹೊಂದಲು ನಾನು ನಿನಗೆ ಸಹಾಯ ಮಾಡುತ್ತೇನೆ, ನೀನು ನನ್ನ ಪ್ರೀತಿ



ಪಾತ್ರರು ಮತ್ತು ನಾನಿದನ್ನು ನಿನಗೆ ಕೊಡಬಯಸುತ್ತೇನೆ' ಎಂಬುದಾಗಿದೆ. ಅವಳು ನನಗೆ ''ತಿನ್ನು'' ಎಂದಳು. ಏಕೆಂದರೆ ನಾನು ಹಾಗೆ ಮಾಡುವುದು ನನ್ನ ಬೆಳವಣಿಗೆ ಮತ್ತು ಅಭಿವೃದ್ಧಿಗೆ ನಿಸ್ಸಂಶಯವಾಗಿ ಅವಶ್ಯವಾಗಿತ್ತು.

ನಾನೋರ್ವ ಸಾಂಸ್ಕೃತಿಕ ಕಾರ್ಯಕರ್ತೆ. ನಾನು ಕತೆಗಳನ್ನು ಮತ್ತು ಪ್ರಬಂಧಗಳನ್ನು ಬರೆಯುತ್ತೇನೆ. ಅವುಗಳಲ್ಲಿ ಪ್ರತಿಯೊಂದೂ ವಿಭಿನ್ನ ಅಭಿರುಚಿ ಮತ್ತು ವಿಭಿನ್ನ ವಿನ್ಯಾಸಗಳನ್ನು ಹೊಂದಿದೆ. ನೀವು ಆ ಪ್ರತಿಯೊಂದನ್ನೂ ಅನುಭವಿಸಬೇಕು, ಪ್ರತಿಯೊಂದನ್ನೂ ಆಸ್ವಾದಿಸಬೇಕು, ಪದಗಳು ಮೈಗೂಡಲು ಅನುವು ನೀಡಬೇಕು. ಇವುಗಳನ್ನು ನಾನು ಕರ್ತವ್ಯ ಪ್ರಜ್ಞೆಯಿಂದ ಬರೆದಿಲ್ಲ, ಅವು ಪ್ರೀತಿ, ಮೃದುತ್ವ, ಸಿಟ್ಟು ಮತ್ತು ಭಾವೋದ್ವೇಗದೊಂದಿಗೆ ಬರೆದಂಥವು ಎಂಬ ನಿಖರವಾದ ತಿಳುವಳಿಕೆ ನಿಮಗಿರಬೇಕು ಎಂದು ಬಯಸುತ್ತೇನೆ.




''ತಿನ್ನು'' ಎಂದು ನನ್ನ ಪ್ರೀತಿಪಾತ್ರರಿಗೆ ಹೇಳುತ್ತೇನೆ; ಬೆಟ್ಟದಷ್ಟು ನಗು ಮತ್ತು ಕಣ್ಣೀರು, ಭರವಸೆ ಮತ್ತು ದುಃಖ ಹಾಗೂ ಸಿಟ್ಟು ಮತ್ತು ಅದರ ಉಪಶಮನವನ್ನು ನೀವು ''ತಿನ್ನು''ತ್ತೀರಿ ಎಂದು ಆಶಿಸುತ್ತೇನೆ; ನಾನು ಬರೆದ ಪದಗಳು, ಅಷ್ಟೇ ಮೊತ್ತದ ಪ್ರೀತಿ, ಕೋಮಲತೆ, ಸಿಟ್ಟು ಮತ್ತು ಭಾವೋದ್ವೇಗದಿಂದ ಇತರರು ಬರೆದ ಪದಗಳನ್ನು. ನನ್ನ ಪ್ರೀತಿಪಾತ್ರರಿಗೆ ''ತಿನ್ನು'' ಎಂದು ನಾನು ಹೇಳುವುದರ ಅರ್ಥ 'ನಿಮ್ಮನ್ನು ಆಧರಿಸುತ್ತೇನೆ, ನಿಮ್ಮನ್ನು ಪೋಷಿಸುತ್ತೇನೆ, ನೀವು ಬದುಕಿ ಉಳಿಯುವುದಕ್ಕೆ ಮಾತ್ರವಲ್ಲ, ಏಳಿಗೆ ಹೊಂದುವುದಕ್ಕೆ ಸಹಾಯ ಮಾಡುವುದಕ್ಕೆ ನಾನಿದನ್ನು ನಿಮಗೆ ಕೊಡಬಯಸುತ್ತೇನೆ' ಎಂದಾಗಿದೆ. ನನ್ನ ಪ್ರೀತಿಪಾತ್ರರಿಗೆ ''ತಿನ್ನು'' ಎನ್ನುವುದು, 'ನಮ್ಮ ಬೆಳವಣಿಗೆ ಮತ್ತು ವಿಕಾಸಕ್ಕೆ ಸಂಸ್ಕೃತಿಯು ನಿಸ್ಸಂಶಯವಾಗಿ ಅಗತ್ಯವಾಗಿದೆ; ಆಹಾರದಷ್ಟೇ ಅ... ವಾಗಿದೆ; ನೀರಿನಷ್ಟೇ ನಿರ್ಣಾಯಕವಾಗಿದೆ; ಗಾಳಿಯ... ಕಡ್ಡಾಯವಾಗಿದೆ; ಸೂರ್ಯ-ಚಂದ್ರರ ಬೆಳಕಿ... ಅನಿವಾರ್ಯವಾಗಿದೆ' ಎಂದರ್ಥ.

ಎಂದಿನಿಂದಲೂ ನಾವಿದನ್ನು ತಿಳಿದಿದ್ದೇವೆ. ನಮ್ಮ ... ಸುಸ್ಥಿತಿಯ ಮತ್ತು ದಾರಿದ್ರ್ಯದ ದಿನಗಳಲ್ಲೂ ನ... ನಗೆಹನಿಗಳು, ನಮ್ಮ ಕಥೆಗಳು, ನಮ್ಮ ನಗು, ನಮ್ಮ ಆಹ... ನಮ್ಮ ಸಂಗೀತ, ನಮ್ಮ ಕಲೆಯ ಮೂಲಕ ಯಾವಾಗ... ನಮ್ಮನ್ನು ನಾವೇ ಪೋಷಿಸಿಕೊಂಡಿದ್ದೇವೆ. ಪ್ರಾಯಶಃ ನ... ದೈನಂದಿನ ಬದುಕಿನಲ್ಲಿ ಅವುಗಳನ್ನು ಹೆಣೆದುಕೊಂಡಿದ್ದೇ... ಬಹುಶಃ ಅವು ಸಾಮಾನ್ಯವಾದ ಚಟುವಟಿಕೆಗಳಾಗಿರಬಹು... ಅವುಗಳಲ್ಲಿ ಹೆಚ್ಚಿನವು ನಮ್ಮ ದೈನಂದಿನ ಬದುಕಿನವಾ... ಬಹುದು. ಅದಕ್ಕಾಗೇ ಅವುಗಳನ್ನು ಗಮನಿಸುವಲ್ಲಿ ನಾ... ವಿಫಲರಾಗಿರಬಹುದು. ಆದರೆ ಅವುಗಳ ಸಾಮಾನ್ಯತ್ವ ಹಾ... ದಿನನಿತ್ಯತೆಗಳು, ಅವುಗಳ ಶಕ್ತಿ, ಅವುಗಳ ಚಾರಿತ್ರಿಕ ಅ... ಮತ್ತು ಚೆಲುವುಗಳನ್ನು ಕುಂದಿಸುವುದಿಲ್ಲ. ನಮ್ಮ ಅದ್ಭುತ ಸಂಸ್ಕೃತಿಯನ್ನು ಕಂಡು... ಅದನ್ನು ನಾವು ತಿನ್ನುವ ಮೊಸರಲ್ಲೇ ಕಾಣಬಹುದು ಅಥವಾ ನಾವು ಓದು... ಕತೆಗಳಲ್ಲೇ ಕಾಣಬಹುದು – ಸಂಭ್ರಮಿಸುವುದು, ನಾವು ನಮಗೆ, ನ... ಪೂರ್ವಜರಿಗೆ, ನಮ್ಮ ಉತ್ತರಾಧಿಕಾರಿಗಳಿಗೆ ಸಲ್ಲಿಸುವ ಋಣವಾಗಿದೆ.

**ಪ್ರೊ|| ಸಬಿಹಾ ಭೂಮೀಗೌಡ**, ಕನ್ನಡ ವಿಭಾಗ, ಮಂಗಳ ಗಂಗೋತ್ರಿ
**ಪ್ರೊ|| ಕಿಶೋರಿ ನಾಯಕ್ ಕೆ.**, ಇಂಗ್ಲಿಷ್ ವಿಭಾಗ, ಮಂಗಳ ಗಂಗೋತ್ರಿ
ಮಂಗಳೂರು

With Best Compliments from



INTACT BOOK HOUSE PVT. LTD.

240, Ground Floor, 13th Main, BSK 1st Stage, Bangalore - 560 050
Phone : 26611963 Telefax : 26611448
e-mail : idb@satyam.net.in website : www.inbooks.net

# Innovation Concepts for MIL-GRADE Solutions



Concept Shapers has a full fledged design & manufacturing setup for Rugged Systems and Integrated Solutions for Defense and Industry.

*Rugged solutions for Defense & Industry*



The one stop computing solution for mission critical applications. Available in single, dual and multi-display configurations. VME, CPCI or any other industrial architecture can be customised.

eVIEW



6.4" to 24" diagonal sizes of MIL-GRADE TFT LCD solutions with multiple Video signal input options. High resolutions and luminiscence are featured.



Small display, low-power, Fanless systems for 'On-the-Move' Harsh Environmental applications. Most effective rugged solutions in its category!

eRACK



All-Integrated VME based compact size system for multi-level processing applications. Can be offered with or without integrated displays.



Open Mind Creative Solutions...

**CONCEPT SHAPERS®**
*& Electronics Pvt. Ltd.*
An ISO 9001 : 2000 Company

Head Office : 103, Veena Industrial Estate, Behind Monginis Factory, Off Link Road, Andheri (W), Mumbai-400 053. India.
Phone : + 91-22-2673 6545/6591/6737 Fax : + 91-22-2673 6635
Branch Office : Hyderabad & Bangalore
contactus@conshape.com • www.conceptshapers.com

# ಗಾಂಧಿ ಟೊಪ್ಪಿಗಿ ಗೇಟ್ ಪಾಸಾದದ್ದು

ರಪ್ಪ ಎಂ. ಕಂಬಳಿ

ಪ್ರಪಂಚದ ತುಂಬ ಹಿಂಸೆಯೇ ಹೊಂಚುಹಾಕುತ್ತಿದ್ದರೂ ಕಳೆದ ಬರ್ ಎರಡನ್ನು 'ಅಂತರರಾಷ್ಟ್ರೀಯ ಅಹಿಂಸಾ ದಿನ' ಎಂದು ಸ್ಥೆ ಘೋಷಣೆ ಮಾಡಿದ್ದೂ ಒಂದು ಅಣಕವೇ. ಮಾಧ್ಯಮಗಳ ಮತ್ತೊಮ್ಮೆ ರಾಷ್ಟ್ರಪಿತ ಮೋಹನದಾಸ ಕರಮಚಂದ ಗಾಂಧಿ ಬಿರ್ರಿ ಮಿಂಚಿ ಮಾಯವಾಗಿದ್ದ. ಇತ್ತೀಚಿನ ವರ್ಷಗಳಲ್ಲಿ ಜನರ ಗಳನ್ನು ಹಿಂಸೆ ಮತ್ತು ಕಾಮುಗಳೇ ಆಳುತ್ತಿದ್ದರೂ ಅಹಿಂಸೆಯ ಯಿತಲ್ಲ ಅದು ಮುಖ್ಯ. ಅದರ ಪ್ರತಿಪಾದಕ ನಮ್ಮ ನೆಲದ ನೆಸ್ನುವ ಅಭಿಮಾನವಷ್ಟೇ ನಮ್ಮ ಹೆಗ್ಗಳಿಕೆ.

ನಪಿನ ಚುಂಗು ಹಿಡಿದು ಬಾಲ್ಯದಂಗಳಕ್ಕೆ ಹಿಂಜಿಗಿದು ನಿಂತು ತಲಾಗಿ ಗಾಂಧಿ ಅಜ್ಜ ಮತ್ತೆ ಕಾಡಲಾರಂಭಿಸಿದ್ದ. ಸ್ವಾತಂತ್ರ್ಯ ವ ಅದೆಷ್ಟೋ ಜನ ಗಾಂಧಿ ವ್ಯಕ್ತಿತ್ವಕ್ಕೆ ಮಾರುಹೋಗಿ ತಮ್ಮ ಮಗನಿಗೆ ಮೋಹನ ಎಂದು ಹೆಸರಿಟ್ಟು ಕರೆದದ್ದು; ಗಾಂಧಿ ಗಳನ್ನು ತಮ್ಮ ವ್ಯಕ್ತಿತ್ವದಲ್ಲಿ ಉಳಿಸಿಕೊಳ್ಳಲು ಪ್ರಯತ್ನಿಸು ಇವತ್ತು ಇತಿಹಾಸ. ಇತ್ತೀಚಿನ ಪೀಳಿಗೆಯಾದ ನಮಗೆ ವೂ ಅರ್ಥವಿಲ್ಲದ ಬಾಬತ್ತುಗಳಾಗಿದ್ದವು. ಆದರೆ, ನನಗೆ ಆ ಟೊಪ್ಪಿಗೆಯೊಂದೇ ಕಣ್ಣಿಗೆ ಕಟ್ಟಿದಂತಿದೆ. ಗಾಂಧೀ ಆದರ್ಶ ಧೂಳೀಪಟವಾದ ಮೇಲೂ ಆ ಕಾಲದ ನಮ್ಮ ರಾಜಕೀಯ ರಿಗಳ ತಲೆಯ ಮೇಲೆ ಕೂತ ಆ ಟೊಪ್ಪಿಗೆ ಮಾತ್ರ ಒಂದು ಸವಾಗಿ ಈಗಲೂ ಕಾಡುತ್ತಿದೆ ನನಗೆ.

ಜಾಮ ಸರಕಾರದಲ್ಲಿ ಬೆಂದು ಬಸವಳಿದದ್ದಕ್ಕೋ ಏನೋ ನಮ್ಮ ಈಗಲೂ ಪೂಜೆ ಪ್ರಾರ್ಥನೆಗೆ ತೊಡಗಿದವರು ಥೇಟ್ ಲ್ಮಾನರಂತೆ ತಲೆಯ ಮೇಲೆ ಟೊಪ್ಪಿಗೆ, ಟವಲು, ಏನಾದರೊಂದು ಬೇಕೆಂದು ತಾಕೀತು ಮಾಡುವುದುಂಟು. ಬಾಲ್ಯದಲ್ಲಿ, ಗೆ ಬರುತ್ತಿದ್ದ ಹುಡುಗರು ಬಹುತೇಕರ ತಲೆಯ ಮೇಲೆ ತರವೇವಾರಿ ಟೊಪ್ಪಿಗೆಗಳು ರಾರಾಜಿಸುತ್ತಿದ್ದದ್ದು ಸಾಮಾನ್ಯ ದೃಶ್ಯ. ಸಹಪಾಠಿ ಗಿಡ್ಡನೊಬ್ಬನಿದ್ದ. ಅವನನ್ನು ನಗೆಚಾಟಿಕೆಯಿಂದ 'ಬುಟುವಾ' ಎಂಬ ಹೆಸರಿಟ್ಟು ಕರೆಯುತ್ತಿದ್ದೆವು. ಅವನ ತಲೆಯ ಮೇಲಿರುತ್ತಿದ್ದ ಗಾಂಧಿ ಟೊಪ್ಪಿಗೆಯನ್ನು ಯಾರಾದರೂ ಮುಟ್ಟಿದರೂ ಸಾಕು ಅವ ಅಸಾಧ್ಯ ಸಿಟ್ಟಿಗೇಳುತ್ತಿದ್ದ. ದೊಡ್ಡ ಧಾಂಡಿಗರು ಅವನನ್ನು ರೇಗಿಸುವುದಕ್ಕೋಸ್ಕರವೇ ಅವನ ತಲೆಗೆ ಜಾರು ಹೊಡೆದು ಟೊಪ್ಪಿಗೆ ನೆಲಕ್ಕೆ ಬೀಳುವಂತೆ ಮಾಡುತ್ತಿದ್ದರು. ಆಗ ಅವನು ಹಾಗೆ ಹೊಡೆದವರೊಡನೆ ತೆಕ್ಕೆ ಮುಕ್ಕಿ ಬೀಳುತ್ತಿದ್ದ. "ನೋಡೂ, ಟೊಪ್ಪಿಗಿ ಅಂದ್ರ ಅದು ನನ್ನ ತಲೀ ಮ್ಯಾಲಿನ ಕಳಸ. ಅದು ನೆಲಕ್ಕೆ ಬಿತ್ತೂ ಅಂತಂದ್ರ ನನ್ನ ರುಂಡಾನೇ ಉರುಳಿ ಬಿದ್ದಂಗ. ಹುಷಾರು. ನನ್ನ ತಡವ ಬ್ಯಾಡ, ನಿನ್ನ ಕುತ್ತಿಗೆಗೆ ಹಾರತೇನಿ" ಎಂದು ಸದಾ ಗುರುಗುಟ್ಟುತ್ತಿದ್ದ.

"ಚೋಟಿದ್ದಾನ ಮಗಾ, ನನ್ನ ಕುತ್ತಿಗೆಗೆ ಬಾಯಿ ಹಾಕತಾನಂತ" ಎಂದು ಜೋರಾಗಿ ನಕ್ಕು, ಮುಸುವನಂಥ ಅಸಡ್ಡಾಳರು, ಒಂದು ದಿನ ಅವನ ಟೊಪ್ಪಿಗೆ ಕಿತ್ತು ಥ್ರೋಬಾಲ್ ತರಹ ಎಸೆದಾಡಿದಾಗ, ಸಹನೆ ಮೀರಿದ ಬುಟುವ ಎತ್ತರವಾಗಿದ್ದ ಆ ಪುಂಡರ ಕತ್ತು ತನ್ನ ಕೈಗೆ ಎಟುಕುವುದಿಲ್ಲವೆಂದು ಮನಗಂಡು, ಹೊಂಚುಹಾಕಿ ಹೋಗಿ ಒಬ್ಬನ ಬೀಜಗಳನ್ನು ಗಟ್ಟಿಯಾಗಿ ಅದುಮಿ ಹಿಡಿದುಕೊಂಡುಬಿಟ್ಟ – ಇಕ್ಕಳದಂಥ ಕೈಗಳಿಂದ. ಅಟ್ಟಿಸಿಕೊಂಡು ಬಂದ ನಾಯಿಗಳಿಂದ ಪಾರಾಗಣದೆ, ಬೆಕ್ಕು ಪಂಜ ತೋರಿಸಿ, ವಿಕಾರವಾಗಿ ಶಬ್ದ ಹೊರಡಿಸಿ ತಿರುಗಿಬಿದ್ದು, ಆಕ್ರಮಣಕ್ಕೆ ಸಿದ್ಧವಾಗುವ ತೆರದಲ್ಲಿಯೇ ಥೇಟು. ಬುಟುವನ ಎರಡು ಪಟ್ಟು ದೊಡ್ಡವನಾಗಿದ್ದವನೂ ಈಗ ಲಬೋ ಲಬೋ ಎಂದು ಬಾಯಿ ಬಡಿಮಕೊಳ್ಳುವ ಹೊತ್ತಿಗೆ, ಹುಡುಗರೆಲ್ಲ ಚದುರಿ ಅವನ ನೆರವಿಗೆ ಬಾರದೇ ಓಡಿದ್ದರು. ಮಾಸ್ತರರೇ ಬಂದು ಬಿಡಿಸಿದ್ದರು. ಅವೊತ್ತಿನಿಂದ ಬುಟುವನ ತಲೆಯ ಮೇಲಿದ್ದ ಟೊಪ್ಪಿಗೆಯನ್ನು ಯಾರೂ ಮುಟ್ಟುವ ಗೋಜಿಗೆ ಹೋಗುತ್ತಿದ್ದಿಲ್ಲ. ಈ ಕತ್ತೆಕಿರುಬರಿಗೆ ಸರಿಯಾಗೇ ಬುದ್ಧಿಗಲಿಸಿದೆನೆನ್ನುವಂತೆ ಬುಟುವ ಬೀಗುತ್ತಿದ್ದ.



ಕುದುರೆ ಸವಾರಿಯಲ್ಲಿದ್ದ (ಈ ಕಾಲದ ಮೋಟಾರು ಬೈಕಿನಲ್ಲಿ) ಇಬ್ಬರು ಆಂಗ್ಲರು ಪರಸ್ಪರ ಎದುರಾದರೆ ಹ್ಯಾಟು ಮೇಲಕ್ಕೆತ್ತಿ 'ಹೇ' ಎಂದು ಅರಚಿ ಪರಸ್ಪರ ಗೌರವ ತೋರ್ಪಡಿಸುತ್ತಿದ್ದದ್ದು ಅವರ ಶಿಷ್ಟಾಚಾರ. ಮುಂದುವರಿದು ಇನ್ನೂ ಹತ್ತಿರವಾದ ಮೇಲೆ ತೊಟ್ಟಿದ್ದ ಕೈಗವಸು ಕಿತ್ತು ಕೈ ಕುಲುಕಲು ಮುಂದಾಗುತ್ತಿದ್ದರು. ಚಾಕು, ಚೂರಿಯಂಥ ಅಪಾಯಕಾರಿ ಆಯುಧವನ್ನು ಬಚ್ಚಿಟ್ಟುಕೊಂಡಿಲ್ಲವೆಂಬುದನ್ನು ಮನವರಿಕೆ ಮಾಡಿಕೊಡಲು ಹಾಗೆ ಮಾಡುವುದು ಒಂದು ಕಾಲದ ನಡವಳಿಕೆ. ಮುಂದುವರೆದ ನಾಗರಿಕ ಜಗತ್ತಿನಲ್ಲೂ ಅದು ಸೌಜನ್ಯದ ನಡವಳಿಕೆಯಾಗಿ ಅವರಲ್ಲಿ ಈಗಲೂ ಮುಂದುವರಿದಿದೆ. ಆದರೆ, ನಮ್ಮಲ್ಲಿ ಅದರ ತದ್ವಿರುದ್ಧ. ತಲೆಯ ಮೇಲೆ ಟೊಪ್ಪಿಗೆ ಯಾ ರುಮಾಲು ಇಲ್ಲದಿದ್ದರೆ ಪ್ರಾರ್ಥನೆಗೂ ಅವಕಾಶವಿಲ್ಲ. ನಮ್ಮ ಬಾಲ್ಯ ಕಾಲದಲ್ಲಿ ಬಕ್ಕತಲೆಯಲ್ಲಿರುವವನು ಅನಾಗರಿಕನಂತೆ, ಬೇವಾರ್ಸಿಯಂತೆ ಕಾಣುತ್ತಿದ್ದ ದಿನಗಳವು. ಸಭೆ ನಡೆಯುತ್ತಿರುವಾಗ ಮೈಸೂರು ದರಬಾರು ಹಾಲಿನಲ್ಲಿ ಹಾಗೆ ಬರಿ ತಲೆಯಲ್ಲಿ ಪ್ರವೇಶಿಸುವುದನ್ನು ಕಟ್ಟುನಿಟ್ಟಾಗಿ ನಿಷೇಧಿಸಲಾಗಿತ್ತಂತೆ. ಹೀಗಾಗಿ, ಆ ಕಾಲದಲ್ಲಿ ಮೈಸೂರು ರುಮಾಲಿಗೆ ವಿಶೇಷ ಗೌರವ.

ಆ ಕಾಲದ ಜಂಟಲಮ್ಯಾನ್ ಅಂದರೆ ತಲೆಯ ಮೇಲೆ ರುಮಾಲು ಧರಿಸಿರುವುದು ಅಲಂಕಾರಿಕವಾಗಿ ಮಾತ್ರವಲ್ಲ ಗೌರವಾನ್ವಿತ ವ್ಯಕ್ತಿತ್ವಕ್ಕಾಗಿ. ಇಂಗ್ಲಿಷರು ಹ್ಯಾಟ್ಸ್ ಅಪ್ ಮಾಡಿ ವಿಶ್ ಮಾಡುವ ಬಗೆಯನ್ನು ಆಗಲೇ ಹೇಳಿದೆನಷ್ಟೆ. ನಮ್ಮಲ್ಲೂ ಗಾಂಧಿ ಟೊಪ್ಪಿಗೆಯನ್ನು ಹಾಗೆ ತಲೆಯಿಂದ ಎತ್ತಿ ಗೂಟಕ್ಕೋ ಇಲ್ಲಾ ಮಡಿಚಿ ಜುಬ್ಬಾ ಜೇಬಿಗೂ ಸೇರಿಸಿ ಮುಚ್ಚಿಟ್ಟುಕೊಳ್ಳುವ ಮಹಾಶಯರಿದ್ದಾರೆ



# ಕರ್ನಾಟಕ ಗೃಹ ಮಂಡಳಿ

ಕರ್ನಾಟಕ ಗೃಹಮಂಡಳಿಯು
ಅಭಿವೃದ್ಧಿ ಪಡಿಸಿರುವ ನಿವೇಶನ/ಮನೆಗಳನ್ನು ಪಡೆಯಲು

## ಸುವರ್ಣಾವಕಾಶ!

● ಡಾಂಬರು ಹಾಕಿದ ಅಗಲವಾದ ರಸ್ತೆಗಳು ● ಬೀದಿ ದೀಪ ವ್ಯವಸ್ಥೆ ● ನೀರು ಸರಬರಾಜು
● ಒಳಚರಂಡಿ ವ್ಯವಸ್ಥೆ ● ಉದ್ಯಾನವನ ● ವಾಣಿಜ್ಯ ಮಳಿಗೆ ಇತ್ಯಾದಿ

ರಾಜ್ಯದ ವಿವಿಧ ಸ್ಥಳಗಳಲ್ಲಿ ಹಂಚಿಕೆಗೆ ಲಭ್ಯವಿರುವ ವಿವಿಧ ವರ್ಗಗಳ ನಿವೇಶನ/ಮನೆಗಳ ವಿವರ

ಹಳೆಯ ವಸತಿ ಯೋಜನೆ -

| ಕ್ರ. ಸಂ. | ಸ್ಥಳ | ಜಿಲ್ಲೆ | ಖಾಲಿ ನಿವೇಶನ | | | ಖಾಲಿ ಮನೆಗಳು | | |
|---|---|---|---|---|---|---|---|---|
| | | | ಎಲ್‌ಐಜಿ | ಎಂಐಜಿ | ಹೆಚ್‌ಐಜಿ | ಎಲ್‌ಐಜಿ | ಎಂಐಜಿ | ಹೆಚ್‌ಐಜಿ |
| 1. | ಅಥಣಿ | ಬೆಳಗಾಂ | 20 | 84 | 30 | 0 | 0 | 0 |
| 2. | ಚಿಕ್ಕಮಗಳೂರು | ಚಿಕ್ಕಮಗಳೂರು | 24 | 21 | 0 | 0 | 1 | 0 |
| 3. | ಮೊಳಕಾಲ್ಮೂರು | ಚಿತ್ರದುರ್ಗ | 29 | 49 | 0 | 0 | 0 | 0 |
| 4. | ಸತ್ತೂರು | ಧಾರವಾಡ | 89 | 1 | 0 | 0 | 0 | 0 |
| 5. | ಶಾಹಪುರ | ಗುಲ್ಬರ್ಗ | 73 | 10 | 1 | 0 | 1 | 0 |
| 6. | ಗಂಡಸಿ | ಹಾಸನ | 37 | 41 | 0 | 0 | 0 | 0 |
| 7. | ಕುಷ್ಟಗಿ | ಕೊಪ್ಪಳ | 107 | 23 | 0 | 41 | 9 | 0 |
| 8. | ಯಲಬುರ್ಗಾ | ಕೊಪ್ಪಳ | 46 | 29 | 0 | 10 | 1 | 0 |
| 9. | ಪೋತಗಲ್ | ರಾಯಚೂರು | 60 | 294 | 48 | 187 | 105 | 1 |
| 10. | ಭದ್ರಾವತಿ | ಶಿವಮೊಗ್ಗ | 1 | 49 | 15 | 0 | 0 | 0 |
| 11. | ಬಾಡ್ ಕಾರವಾರ | ಉತ್ತರ ಕನ್ನಡ | 84 | 7 | 37 | 7 | 0 | 0 |
| 12. | ದಾಂಡೇಲಿ | ಉತ್ತರ ಕನ್ನಡ | 37 | 104 | 12 | 0 | 3 | 0 |

ನೂರು ವಸತಿ ಯೋಜನೆ -

| ಕ್ರ. ಸಂ. | ಸ್ಥಳ | ಜಿಲ್ಲೆ | ಖಾಲಿ ನಿವೇಶನ | | | ಖಾಲಿ ಮನೆಗಳು | | |
|---|---|---|---|---|---|---|---|---|
| | | | ಎಲ್‌ಐಜಿ | ಎಂಐಜಿ | ಹೆಚ್‌ಐಜಿ | ಎಲ್‌ಐಜಿ | ಎಂಐಜಿ | ಹೆಚ್‌ಐಜಿ |
| 1. | ಜಮಖಂಡಿ | ಬಾಗಲಕೋಟೆ | 74 | 175 | 34 | 9 | 1 | 0 |
| 2. | ಹುಕ್ಕೇರಿ | ಬೆಳಗಾಂ | 13 | 0 | 0 | 0 | 0 | 0 |
| 3. | ತಾಳಿ | ಬಿಜಾಪುರ | 60 | 36 | 1 | 0 | 5 | 0 |
| 4. | ಹೊಸದುರ್ಗ | ಚಿತ್ರದುರ್ಗ | 58 | 118 | 17 | 0 | 0 | 0 |
| 5. | ಗದಗ - ಕಳಸಾಪುರ | ಗದಗ | 838 | 422 | 42 | 7 | 6 | 0 |
| 6. | ಹುಲಕೋಟಿ | ಗದಗ | 56 | 70 | 6 | 30 | 34 | 0 |
| 7. | ಲಕ್ಷ್ಮೇಶ್ವರ | ಗದಗ | 103 | 27 | 5 | 0 | 0 | 0 |
| 8. | ಜೇವರ್ಗಿ - ಗುಲ್ಬರ್ಗ | ಗುಲ್ಬರ್ಗ | 272 | 2 | 0 | 0 | 0 | 0 |
| 9. | ಬಂಕಾಪುರ | ಹಾವೇರಿ | 23 | 34 | 2 | 0 | 1 | 0 |
| 10. | ಅಸ್ಕಿಹಾಳ್ | ರಾಯಚೂರು | 66 | 63 | 17 | 4 | 7 | 0 |
| 11 | ಬೊಮ್ಮನಕಟ್ಟೆ-ಭದ್ರಾವತಿ | ಶಿವಮೊಗ್ಗ | 4 | 51 | 0 | 0 | 0 | 0 |
| 12. | ಕಲ್ಲಹಳ್ಳಿ | ಶಿವಮೊಗ್ಗ | 0 | 14 | 0 | 0 | 0 | 0 |
| 13. | ಸಾಗರ-ಅಣಲೆಕೊಪ್ಪ | ಶಿವಮೊಗ್ಗ | 0 | 0 | 0 | 10 | 14 | 0 |
| 14. | [illegible] | ಉತ್ತರ ಕರ್ನಾಟಕ | 0 | 32 | 0 | 0 | 0 | 0 |
| 15. | [illegible] | ಉತ್ತರ ಕರ್ನಾಟಕ | 0 | 49 | 9 | 5 | 1 | 0 |

| ವರ್ಗ | ನೋಂದಣಿ ಶುಲ್ಕ | [illegible] | [illegible] |
|---|---|---|---|
| [illegible] | ರೂ. 550 | ರೂ. 10,000 | ರೂ. 20,000 |
| [illegible] | ರೂ. 1,050 | ರೂ. 15,000 | ರೂ. 30,000 |
| [illegible] | ರೂ. 1,550 | ರೂ. 20,000 | ರೂ. 40,000 |

*ಕರ್ನಾಟಕ ಗೃಹ ಮಂಡಳಿ - ವಸತಿ ಕ್ರಾಂತಿಯ ಹರಿಕಾರ*







ನಿವೇಶನ/ಮನೆಗಳ ಹಂಚಿಕೆ ಬಯಸುವವರು ಜಿಲ್ಲಾ ಯೋಜನಾ ಕಛೇರಿಯಲ್ಲಿ ಅರ್ಜಿ ಪಡೆದು ನೋಂದಣೀಕರಿಸಬೇಕು. ನಿವೇಶನ/ಮನೆಗಳ ಹಂಚಿಕೆಗಾಗಿ ಈಗಾಗಲೇ ನೋಂದಣಿ ಮಾಡಿರುವವರು ಮತ್ತೆ ನೋಂದಣಿ ಮಾಡಬೇಕಾದ ಅವಶ್ಯಕತೆಯಿಲ್ಲ




3ನೇ ಮಹಡಿ, ಕಾವೇರಿ ಭವನ, ಕೆ. ಜಿ. ರಸ್ತೆ, ಬೆಂಗಳೂರು-9
ದೂರವಾಣಿ : 22273511-16, ಫ್ಯಾಕ್ಸ್ : 22250976
ಏಪಿಬಿಎಕ್ಸ್ ಸಂಖ್ಯೆ : 22100733-38
ಈ-ಮೇಲ್ : khb@khbonline.com


– 'ವಿಶೇಷ ಸಂದರ್ಭಗಳಲ್ಲಿ'. ಅಂದರೆ ಆ ಮೂಲಕ ಗಾಂಧೀಜಿಗೆ ಅಗೌ
ಬಾರದೆಂಬ ಅವ್ಯಕ್ತ ಭೀತಿಗೋ ಇಲ್ಲಾ ಗಾಂಧಿ ಟೊಪ್ಪಿಗೆ ಈಗಾಗಲೇ
ಆದರ್ಶದಂತೆಯೇ ಔಟ್‌ಡೇಟೆಡ್ (ಬಣ್ಣಗೆಟ್ಟ) ಎಂಬ ಕಾರಣಕ್ಕೋ ಇರ
'ದಂಡಿ ಯಾತ್ರೆ' ಮೊದಲಾದ ಚಳುವಳಿ ಸಂದರ್ಭಗಳಲ್ಲಿ ರಾಷ್ಟ್ರಪಿತನ
ಮೇಲಿದ್ದ ಟೋಪಿ ನಂತರ ಮಾಯವಾಯಿತು. ಸ್ವಾತಂತ್ರ್ಯ ಸಿಕ್ಕ ಹೊಸ
ರಾಷ್ಟ್ರಪಿತ ಪ್ರಾರ್ಥನಾ ಸಭೆಯಲ್ಲಿ ಬಹಿರಂಗವಾಗಿಯೇ ಕಾಂಗ್ರೆಸ್ ಸರ್ಕಾರದ
ಅಧಿಕಾರ ಹಿಡಿದವರ ಬಗ್ಗೆ "ದೇಶಕ್ಕಾಗಿ ಅಪಾರ ಕಷ್ಟ-ನಷ್ಟ ಅನುಭವಿಸಿದ ತ್ಯಾ
ಈಗ ಭ್ರಷ್ಟಾಚಾರದಲ್ಲಿ ತೊಡಗಿದ್ದಾರೆ" ಎಂದು ಕನಲಿದ್ದರು. ಹೀಗಾಗಿ ಕಾಲಕ್ರ
ಕಾಂಗ್ರೆಸ್ಸು ಎಷ್ಟೇ ಜನಹಿತ ಕೆಲಸ ಮಾಡಿದರೂ ಕಾಂಗ್ರೆಸ್ಸೂ, ಕಾಂಗ್ರೆಸ್ಸಿಗರೂ
ಹೆಸರು ಗಳಿಸಿದರು, ಗಾಂಧಿ ಟೊಪ್ಪಿಗೆಯಂತೇ ಥೇಟು!

ನಮ್ಮ ದೇಶದಲ್ಲಿ ಗಾಂಧಿ ಹೆಸರು ಬೇಕಾಬಿಟ್ಟಿ ಬಳಕೆಯಾದಷ್ಟು ಬೇರಾರ ಹೆ
ಬಳಕೆಯಾಗಲಿಲ್ಲ. ತಲೆ ಬೋಳಿಸಿದರೂ ಗಾಂಧೀ ಕಟ್ಟಿಂಗ್; ರೈಲಿನಲ್ಲಿ ಮೂ
ದರ್ಜೆ (ಈಗಿಲ್ಲ) ಪ್ರಯಾಣಿಸಿದರೂ ಅದು ಗಾಂಧಿ ಕ್ಲಾಸು; ಸರಳ ಬದುಕಿನ
'ಗಾಂಧೀ ತುಂಡು' ಎನ್ನುವಂಥ ಅಣಕ ಬೇರೆ. ನಾವೆಲ್ಲ ಸ್ವಾತಂತ್ರ್ಯೋತ್ತರ – ಇಂ
ಗಾಂಧಿಯುಗದ ಪೀಳಿಗೆಯವರು. ಗಾಂಧಿವಾದಿಗಳೆಂದು ಸಮಾಜ ಯಾ
ಗೌರವದಿಂದ ನೋಡುತ್ತಿತ್ತೋ ಅವರೆಲ್ಲ ಒಂದಲ್ಲ ಒಂದು ಕಾರಣಕ್ಕೆ ನಮ್ಮೆದು
ಕಳಂಕಿತರಾದುದನ್ನು ನೋಡಿದವರು. ಇಂಥವರ ನಡುವೆಯೂ ಶುಭ್ರ ಗಾ
ಟೊಪ್ಪಿಗೆಯನ್ನು ಸಾಯುವವರೆಗೂ ಧರಿಸಿಕೊಂಡು ಬಂದ ಎಚ್. ನರಸಿಂಹ
ಎಸ್. ಕೆ. ಕರೀಂಖಾನ್‌ರಂಥ ಅಪರೂಪದ ಮಹಾನುಭಾವರನ್ನೂ ನಾವು ಕಂಡಿ
– ಓಯಸಿಸ್ ಹಾಗೆ!

'ತಲೆ ತೆಗೆದು ನಿಂತವನೆಂದರೆ' ನಮ್ಮ ಕಡೆಗೆ ಮೂರೂ ಬಿಟ್ಟವನೆಂದೇ ಅರ್ಥ.
ಹೈಸ್ಕೂಲು ದಿನಗಳೆಂದರೆ ವಿಪರೀತ ಬರಗಾಲಪೀಡಿತ ದಿನಮಾನ. 'ಮುಂಜಾನೆ
ಮಣ್ಣಿಗಿಲ್ಲ, ಸಂಜೀಕ ಸತ್ತರೆ ಎಣ್ಣಿಗಿಲ್ಲ' ಎನ್ನುವ ಕಷ್ಟದ ದಿನಗಳು. ಕಡು ಬಡವರ
ಗಳಲ್ಲಿ ಇನ್ನು ತಲೆಗೆ ಹಾಕಲು ಕೊಬ್ಬರಿ ಎಣ್ಣೆ ಎಲ್ಲಿಂದ ತರುತ್ತಾರೆ? ತಲೆಗೂ
ನೀರು ಸವರಿ ಬಾಚಿಕೊಂಡು ಹೋಗಿ ಶಾಲೆಯ ಬಯಲಲ್ಲಿ ಪ್ರಾರ್ಥನೆಗೆ ನಿ
ಹೊತ್ತಿಗೆ ಗಾಳಿ ಬಿಸಿಲಿಗೆ ತಲೆ ಒಣಗಿದ ಕರಡವಾಗಿ ಕೆದರಿರುತ್ತಿತ್ತು. ಹಾಸನ ಕಡ
ಪ್ರಾಚಾರ್ಯರು "ತಲೆಗೆ ಎಣ್ಣೆ ಹಾಕಿ ನೀಟಾಗಿ ಬಾಚಿಕೊಂಡು ಬರಬೇಕ್ರ
ಅದಾಗದಿದ್ದರೆ ಗಾಂಧಿ ಟೋಪಿಯನ್ನಾದರೂ ಇಕ್ಕಿಕೊಂಡು ಬನ್ನಿ" ಎಂದು ಆ
ಗೊಣಗುತ್ತಲೇ ಇದ್ದರು. ಹೈಸ್ಕೂಲು ಕೊನೆಯ ವರ್ಷದಲ್ಲಿದ್ದ ನಾವೆಲ್ಲ ಮರು
ಪ್ರತಿಯೊಬ್ಬರೂ ಹೇಗೋ ಸಂಪಾದಿಸಿಕೊಂಡು, ಇಲ್ಲಾ ಬೇರೊಬ್ಬರಿಂದ ಕಡ ತ
'ಗಾಂಧಿ' ಟೊಪ್ಪಿಗೆ ಹಾಕಿಕೊಂಡು ಬಂದು ಪ್ರಾರ್ಥನೆಗೆ ನಿಂತಾಗ ಎಲ್ಲರ ಕಣ್ಣು
ತಲೆಗಳ ಮೇಲೇ ಇತ್ತು. ಐವತ್ತು ವರ್ಷದ ಹಿಂದೆ ಸ್ವಾತಂತ್ರ್ಯ ಹೋರಾಟಗಾ
ಗಾಂಧೀಜಿಯ ಸಬರಮತಿ ಆಶ್ರಮದಲ್ಲಿ ಹಾಗೂ ಹೋರಾಟದ ಶಿಬಿರಗಳಲ್ಲಿ
ಹಾಗೆ ಕಾಣಿಸುತ್ತಿದ್ದಿರಬೇಕು ಎಂದೆಲ್ಲ ಪ್ರಾಚಾರ್ಯರು ಅವೊತ್ತು ಚರಿತ್ರೆಯನ್ನು ನೆನೆದು
ನಾವೆಲ್ಲ ಒಂದು ದಿನದ ಮಟ್ಟಿಗಾದರೂ ಗಾಂಧಿವಾದಿಗಳಾದೆವೆಂದು ಬೀಗಿದ್ದವು.
ಒಂದು ದಿನಕ್ಕಾಗೆ ಮನೆಯಲ್ಲಿ ಕಾಡಿ ಬೇಡಿ, ಸಂತೆಯ ದಿನದಂದು ಐದು ಪಾ
ಕೊಟ್ಟು ಬಿಳಿಯ ಗಾಂಧಿ ಟೊಪ್ಪಿಗೆ ಕೊಂಡದ್ದು ಸಾರ್ಥಕವಾಯ್ತೆಂದುಕೊಂಡೆವು.

ಬೇಂದ್ರೆಯವರ 'ಒಲವೆ ನಮ್ಮ ಬದುಕು'ನಂತೆ ಬಳಸಿಕೊಂಡೆವದನೆ ನಾವು ಅ
ಇದಕು ಎದಕು. – ಸದರೀ ಗಾಂಧೀ ಟೊಪ್ಪಿಗೆಯನ್ನು ಬಳಸಿಕೊಂಡ ಪರಿಯ
ನೋಡಿರಿ. ಮಳೆಗಾಲದಲ್ಲಿ ನೆತ್ತಿ ನೆನೆಯದಂತೆ; ಚಳಿಗಾಲದಲ್ಲಾದರೆ ಕಣ್ಣು-ಕಿ
ಮೂಗು ಮುಚ್ಚುವಂತೆ ಅದರ ಮಡಿಕೆ ಬಿಚ್ಚಿ ಕೆಳಗಿಳಿಸಿ ರಕ್ಷಣೆ ಪಡೆಯುವು
ಬೇಸಿಗೆಗೂ ಸೈ ಅದು ಬೇಕೇ ಬೇಕು. ಬಿಸಿಲ ಸೀಮೆಯ ಜನ – ಅಂಗಳದಲ್ಲಿ
ಚಾಪೆ ಹರಡಿ ಆಕಾಶದಲ್ಲಿರುವ ಅಸಂಖ್ಯಾತ ಚುಕ್ಕೆಗಳನ್ನು ಎಣಿಸುತ್ತಲೇ ನಿದ್ದೆಯ ತೆ
ಜಾರುತ್ತಿದ್ದಾಗ, ಹಿಂದೂಸ್ತಾನಿ ಶಾಸ್ತ್ರೀಯ ಗಾಯನದ ಚೀಜಿನಲ್ಲಿ
ಸೊಳ್ಳೆಗಳಿಂದಲೋ, ಇಲ್ಲಾ ಕತ್ತಲೆಯಲ್ಲಿ ಹರಿದು ಬರುವ ಜರಿ ಹುಳು ಕಿವಿಯೊ
ಪ್ರವೇಶಿಸದಂತೆ ಭದ್ರ ಕೋಟೆಯಂತೆಯೋ ಗಾಂಧೀ ಟೊಪ್ಪಿಗೆ ಮೂರು ಕಾಲ
ನಮ್ಮ ತಲೆ ಕಾಯುತ್ತಿತ್ತು. ರಾಷ್ಟ್ರೀಯ ಹಬ್ಬದ ಪ್ರಭಾತ ಫೇರಿಗೆ ಎರಡು ದಿನ ಮೊದ
ಈಚಲು ಗಿಡದ ಕಾಲಬುಡದಲ್ಲಿ ಹುಟ್ಟುವ ಬೈಪ್ರಾಡಕ್ಟ್ ಕೆನೆಸವುಳು ಸವ
ಟೊಪ್ಪಿಗೆಯನ್ನು ಇಡೀ ದಿನ ನೀರಲ್ಲಿ ನೆನೆ ಹಾಕುತ್ತಿದ್ದೆವು. ಚರ್ಮ ಹದ ಮಾಡುವ ತೆರದ
ತಿಂಗಳಾನುಗಟ್ಟಲೆ ನಮ್ಮ ತಲೆಯ ಬೆವರೆಣ್ಣೆ ಕಮಟು ಕಿತ್ತು ಬರಬೇಕಾದರೆ

ುಸಲೇಬೇಕು. ಒಣಗಿದ ನಂತರ ಚೊಂಬಿಸ್ತ್ರಿಯಿಂದ ತೀಡಿಸಿಕೊಂಡು ಕಲಶ ವಾಗಿ ಮರುದಿನ ತಲೆಯೇರಿರುತ್ತಿತ್ತು. ಚೌಳುಮಣ್ಣು ಹಾಕಿ ತೊಳೆದದ್ದಕ್ಕೆ ನಮ್ಮ ಗೆ ಬೇರೆಯವರದಕ್ಕಿಂತ ತುಸು ನಸುಗೆಂಪು ಬಣ್ಣಕ್ಕೆ ತಿರುಗಿರುತ್ತಿದ್ದವು, ಸಹಿಸಬೇಕು. ಕಾಲದಲ್ಲಿ, ಅಪರೂಪವಾಗಿ ದಿನಕ್ಕೊಂದು ಬಾರಿ ಬಂದು ಹೋಗುತ್ತಿದ್ದ ಾರು ವಾಹನದಲ್ಲಿ ಪ್ರಯಾಣಿಸುವದೆಂದರೆ ತಿರುಗು ತೊಟ್ಟಿಲಲ್ಲಿ ಕೂತಂತೆ. ಸರು-ಮಕ್ಕಳಿಗೆ ತಲೆಸುತ್ತಿ ಬಂದು, ವಾಂತಿ ಮಾಡಿಕೊಳ್ಳುವ ದೃಶ್ಯ ಸಾಮಾನ್ಯ ುತ್ತಿದ್ದವು. ಹೆಂಗಸರೇನೋ ತಲೆಯ ಮೇಲಿರುತ್ತಿದ್ದ ಸೀರೆ ಸೆರಗನ್ನು ಮುಖದ ಕ್ಕೂ ಎಳೆದು ಮುಸುಕು ಹಾಕಿಕೊಂಡು ಕಣ್ಮುಚ್ಚಿ ನಿಯಂತ್ರಿಸಿಕೊಳ್ಳಲು ಪ್ರಯತ್ನಿಸು . ಆದರೂ ತಡೆಯದಾದಾಗ ವಾಂತಿ ಮಾಡಿದ ಬಾಯನ್ನು ಸೆರಗಿನಿಂದಲೇ ಕೊಳ್ಳುತ್ತ ಪ್ರಯಾಣಿಸುತ್ತಿದ್ದರು. ಆದರೆ, ಹುಡುಗರಿಗೆ ಆ ದುಃಸ್ಥಿತಿ ಎದುರಾದರೆ ಮಾಡಿಯಾರು ? ಕರವಸ್ತ್ರ ಹಿಡಿಯುವ ನಾಗರಿಕತೆ – ನಯ ನಾಜೂಕುತನವೂ ರಲಿಲ್ಲ. ಆಗ ಆಪದ್ಬಾಂಧವನಂತೆ ಮತ್ತದೇ ತಲೆಯ ಮೇಲಿದ್ದ ಟೊಪ್ಪಿಗೆ ಗಾತ್ರ ಕೊಂಡು ಕಣ್ಣು-ಕಿವಿಗಳವರೆಗೂ ಕವುಚಿ, ಶಿರಸ್ತ್ರಾಣದಂತೆ ರಕ್ಷಣೆ ನೀಡುತ್ತಿತ್ತು. ು ಮೀರಿ ವಾಂತಿ ಉಮ್ಮಳಿಸಿ ಬಂತೆಂದರೆ, ಆಗ ಆಸ್ಪತ್ರೆಯಲ್ಲಿ ಬಳಸುವ ಅಗಲ ಯ ಬಿಳಿ ಬೋಗುಣಿಯಂತೆ ಟೊಪ್ಪಿಗೆಯನ್ನೇ ಅಂಗಾತವಾಗಿ ಮುಖದ ಮುಂದೆ ುಲಾಗುತ್ತಿತ್ತು. ಗಟ್ಟಿಯಾದ ಎರಡು ಪದರ ಇರುತ್ತಿದ್ದ ಟೊಪ್ಪಿಗೆಯಲ್ಲಿ ಬಸಿದು ುವ ಪ್ರಮೇಯವೇ ಇರುತ್ತಿರಲಿಲ್ಲ. ಪಾತ್ರೆಯಂತೆಯೇ ಥೇಟು ಬಳಸಿ, ಾಚೆ ಚೆಲ್ಲುತ್ತಿದ್ದರು. ನಂತರ, ಅದನ್ನೇ ಮಡಿಸಿ ಒಣಗಿದ್ದ ಭಾಗದಿಂದ ಸ್ತ್ರದಂತೆ ಬಾಯೊರಸಲೂ ಆಗುತ್ತಿತ್ತು. ಊರು ತಲುಪಿದ ತಕ್ಷಣ, ಮನೆಯ ಳದಲ್ಲಿಯೇ ಇರುತ್ತಿದ್ದ ದೋಣಿಯಲ್ಲಿ ನೆನೆಸಿ, ಟೋಪಿ ತೊಳೆಯುತ್ತಿದ್ದರು.

ಾವು ನಮ್ಮ ಹೊಲಗಳಿಗೆ ತೆರಳಿದರೆ ಗಾಂಧಿ ಟೊಪ್ಪಿಗೆ ಸಹಜವಾಗೇ ನಮ್ಮ ನ್ನೇರಿರುತ್ತಿತ್ತು. ಅಕಸ್ಮಾತ್ ಹುಲ್ಲಿನ ಹೊರೆಯನ್ನೋ ಕಟ್ಟಿಗೆ ಹೊರೆಯನ್ನೋ ಾಗ ತಲೆಗೆ ತುಸು ರಕ್ಷಣೆ ನೀಡುತ್ತಿತ್ತು. ಅದಾವ ಪ್ರಮೇಯವೂ ಇಲ್ಲದಿರುವಾಗ, ಂದೆ, ಅವರೆಕಾಯಿ ಸೀಜನ್ ಆದರೆ ಹೋಗುವಾಗ ತಲೆಯ ಮೇಲಿರುತ್ತಿದ್ದ ುಗೆ ಬರುವಾಗ ಕೈಗೆ ಇಳಿದು, ತನ್ನ ಮಡಿಕೆ ಬಿಚ್ಚಿ ಗಾತ್ರ ಹಿಗ್ಗಿಸಿಕೊಳ್ಳುತ್ತಿತ್ತು. ಯ ಸೊಗಡು ಸೂಸುವ ಹಸಿ ಅವರೆಕಾಯಿ ಇಲ್ಲಾ ಶೇಂಗಾ ಹರಗುವ ಾದರೆ ಸುಟ್ಟ ಶೇಂಗಾಕಾಯಿಗಳನ್ನು ತುಂಬಿ ಸಾಕ್ಷಾತ್ ಕಮಂಡಲು ಹಿಡಿದು ಡು ಬರುವಂತೆ ಮನೆಗೆ ಮರಳುತ್ತಿದ್ದೆವು. ಒಂದು ಅರ್ಥದಲ್ಲಿ ಗಾಂಧಿ ಿಗೆಗೂ ನಮಗೂ ಆಗ ಅವಿನಾಭಾವ ಸಂಬಂಧವಿತ್ತು ಎಂದು ಈಗಲೂ ಕೊಳ್ಳಲು ನನಗಾವ ಹಿಂಜರಿಕೆಯೂ ಇಲ್ಲವೆನ್ನಿರಿ.

ುತ್ತಿ, ನೀರಲ, ಕಾರಿ, ಬೋರೆ ಹಣ್ಣುಗಳ ಹಂಗಾಮದಲ್ಲೋ ಇಲ್ಲಾ ಬಲಿತು ರೆಗಾಯಿಗೆ ತಿರುಗುತ್ತಿದ್ದ ಹುಣಸೆಕಾಯಿಗಳ ಸೀಜನ್ನಿನಲ್ಲೋ ಮಡಿಕೆ ಬಿಚ್ಚಿದ ು ಟೊಪ್ಪಿಗೆಯೇ ಹಾಗೆ ತುಂಬಿ ತರಲು ಆಗ ನಮಗೆ ನೆರವಾಗುತ್ತಿತ್ತು. ಮನೆಗೆ ತರುವ ುಗೆ ತುಟಿಯೊಡೆದುಕೊಂಡ ನೀರಲಹಣ್ಣಿನ ಜಾಂಬಳಿ ಬಣ್ಣ ಬಿಳಿ ಟೊಪ್ಪಿಗೆಯನ್ನು ಮಾಡುತ್ತಿದ್ದುದುಂಟು. ಅಷ್ಟಕ್ಕೆಲ್ಲ ನಾಚಿಕೊಂಡರಾಗುತ್ತದೆಯೇ ? ಕಲೆ ಯುವುದು, ತಲೆಗೇರಿಸಿಕೊಳ್ಳುವುದು, ಇದೇ ದಿಪಿನಾದ ಜೀವನ ಕಲೆ ( ಆರ್ಟ್ ಲೀವಿಂಗ್') ನನ್ನಂತಹವರ ಪಾಲಿಗೆ. ಅಷ್ಟೇ ಅಲ್ಲ, ಸಂತೆಯ ದಿನ ಹನುಮತ್ತೆಯ ನಾಯಿಬಾಲದಂತೆ ಬೆಂಬತ್ತಿ ಬೆಲ್ಲದ ಪಸಿಗೆ ಸಂಗ್ರಹಿಸಲು ಮತ್ತು ದೇವಸ್ಥಾನ ಮಂಗಳಾರತಿ ಎತ್ತಿದ ನಂತರ ಹಸಿ ತೆಂಗಿನಕಾಯಿ ಚೂರು, ಬೆಲ್ಲದ ತುಂಡು ಮಿಶ್ರ ಮಾಡಿರುತ್ತಿದ್ದ ಚುರಮರಿದಾಣಿ ಪ್ರಸಾದವನ್ನು ಬೊಗಸೆಗಳಲ್ಲಿ ಧಾರಾಳವಾಗಿ ುವಾಗ ನಮ್ಮ ಪುಟ್ಟ ಕೈಗಳು ಸಾಲುತ್ತಿದ್ದಿಲ್ಲ. ತಕ್ಷಣ ನಮ್ಮ ತಲೆಯ ಮೇಲಿರುತ್ತಿದ್ದ ಟೊಪ್ಪಿಗೆ ಭಿಕ್ಷೆಗೆ ಹೊರಟ ಶಿವನ ಕೈಯೊಳಗಿನ 'ಬ್ರಹ್ಮ ಕಪಾಲ'ದಂತೆ ನಮ್ಮ ಯಲ್ಲಿರುತ್ತಿತ್ತು. ಹೀಗಾಗಿ 'ಗಾಂಧಿ ಟೊಪ್ಪಿಗೆ' ಒಂದಲ್ಲ ಒಂದು ಕಾರಣಕ್ಕೆ ಬಾಲ್ಯ ದಲ್ಲಿ ನಮ್ಮನ್ನು ಎತ್ತಿ ಆಡಿಸಿದ ಸಂಸ್ಕೃತಿಯ ತೊಟ್ಟಿಲಾಗಿತ್ತು ; ಬೆಳೆಯುತ್ತ ಬಂದಂತೆ ಕತೆಯ ಮೆಟ್ಟಿಲಾಗಿತ್ತು ; ಚರಿತ್ರೆಯನ್ನು ನೆನಪಿಸುವ ಚಾವಡಿ ಕಟ್ಟೆಯಾಗಿತ್ತು.

ಅರವತ್ತರ ದಶಕದಲ್ಲಿ ನಮ್ಮೂರಿನಲ್ಲಿ 'ಅಸುಂಡಿ ಕಂಪನಿ' ಎಂಬ ವೃತ್ತಿ ನಾಟಕ ವೊಂದು ಬೀಡುಬಿಟ್ಟಿತ್ತು. ನಾಟಕ ವಿಮರ್ಶಕ ಹೇಳಿದಂತೆ 'ಕಾವ್ಯೇಷು ನಾಟಕಂ ಂ' ಸತ್ಯವಾದ ಮಾತು. ನಾಟಕ ನಾಟಕಾನೇ. ನಾವೆಲ್ಲ ಇಂದು ಸಾಹಿತ್ಯಾ ಿಗಳೂ, ಕಲಾಭಿಮಾನಿಗಳೂ ಆಗಿ ರೂಪುಗೊಳ್ಳುವುದಕ್ಕೆ ಬೀಜರೂಪದಲ್ಲಿ ಮನಸ್ಸುಗಳಲ್ಲಿ ನೆಲೆಯೂರಿದ್ದೇ ಈ ಕಂಪನಿ ನಾಟಕಗಳು ಪ್ರಯೋಗಿಸುತ್ತಿದ್ದ ಸಾಮಾಜಿಕ ಮತ್ತು ಪೌರಾಣಿಕ ನಾಟಕಗಳು.

ಟೆಂಟು ಹೊಡೆದಿದ್ದ ಅಸುಂಡಿ ಕಂಪನಿ ತನ್ನ ಕೊನೆಯ ದಿನಗಳನ್ನು ಎಣಿಸುತ್ತಿತ್ತೆಂದು ಕಾಣಿಸುತ್ತದೆ. ಮಾಸಿದ್ದ ಹಳೆಯ ಸೀನರಿಗಳು; ಮಾಲಕ, ಮಾಲಕನ ಪತ್ನಿಯೂ ಸೇರಿ ಒಂಬತ್ತು ಜನ ಕಲಾವಿದರು ಮಾತ್ರ ಇದ್ದರು. ಬಿಸಿಲ ಸೀಮೆಯ ನಮ್ಮ ಕಡೆಯ ಜನರಲ್ಲಿ ಶೇಂಗಾ ಸುಗ್ಗಿಯಲ್ಲಿಯೇ ಕೈಯಲ್ಲಿ ನಾಕು ಕಾಸು ಆಡುವ ದಿನಗಳು. ಆ ವೇಳೆಯಲ್ಲಿಯೇ ಅಸುಂಡಿ ಕಂಪನಿ ತುಸು ಜೀವ ಹಿಡಿದುಕೊಂಡಂತೆ ನಮ್ಮೂರಲ್ಲಿ ಅಂಡೂರಿತ್ತು. ನಲವಡಿ ಶ್ರೀಕಂಠಶಾಸ್ತ್ರಿಗಳಿಂದ ವಿರಚಿತ, ಎರಡು ದಿನ ಭರ್ತಿ ಆಡಬಹುದಾದ 'ಸಂಪೂರ್ಣ ಹೇಮರಡ್ಡಿ ಮಲ್ಲಮ್ಮ' ನಾಟಕವನ್ನು ಒಂದು ದಿನಕ್ಕೆ ಇಳಿಸಿ ಅದನ್ನು ಪ್ರಯೋಗಿಸುತ್ತಿದ್ದರು. ದುಂಡುಮುಖದ ಸ್ಫುರದ್ರೂಪಿ ಸಾಬರ ಹುಡುಗ ಮಲ್ಲಮ್ಮನ ಪಾತ್ರ ನಿರ್ವಹಿಸುತ್ತಿದ್ದ ಪರಿಗೆ ಮರುಳಾಗಿ ಮ್ಯಾಗಳ ಓಣಿಯ ಹುಡುಗಿಯರಿಬ್ಬರು ಆತನ ಬೆನ್ನು ಹತ್ತಿ ಹೋಗಿದ್ದು, ಆಗ ದೊಡ್ಡ ಸುದ್ದಿಯಾಗಿತ್ತು. ಕಲೆಕ್ಷನ್ನು ತಗ್ಗಿತು ಅಂದಾಗ ವೇಮನನ ಪಾತ್ರಕ್ಕೆ ಡಿ. ದುರ್ಗಾದಾಸರನ್ನು ಅತಿಥಿ ನಟನಾಗಿ ಕರೆಸಿದ್ದುಂಟು. ಶಾಸ್ತ್ರಿಗಳ ಪುಟಗಟ್ಟಲೇ ಇರುತ್ತಿದ್ದ ಡೈಲಾಗುಗಳನ್ನು ಅದರ ಭಾವ ಕೆಡದಂತೆ, ಆ ಏರಿಳಿತಗಳ ಸಮೇತ ಸಂಭಾಷಣೆ ಒಪ್ಪಿಸುವ ಚಾಕಚಕ್ಯತೆ ದುರ್ಗಾದಾಸರಿಗಿತ್ತು. ಅವರ ಮಗಳೇ ರಂಗಾಯಣದ ಹನುಮಕ್ಕ ಎಂಬ ಸಂಗತಿ ಇತ್ತೀಚೆಗೆ ನನಗೆ ಗೊತ್ತಾದದ್ದು.

ಮಲ್ಲಮ್ಮನ ನಂತರ, ಧುತ್ತರಗಿಯವರ 'ಮಲಮಗಳು' ನಾಟಕ ಕೈಗೆತ್ತಿಕೊಂಡರು. ಅದು ಅತ್ಯಂತ ಯಶಸ್ವೀ ನಾಟಕ. ಸಾಮಾನ್ಯವಾಗಿ, ಅಂಗಳದಲ್ಲೋ ನಮ್ಮ ಮಣ್ಣಿನ ಮನೆಯ ಮಾಳಿಗೆಯ ಮೇಲೋ ಮಲಗುತ್ತಿದ್ದ ನಮಗೆ ನಾಟಕದ ಗೀಳು ಹತ್ತಿದ್ದರಿಂದ ಮನೆಯವರ ಕಣ್ಣು ತಪ್ಪಿಸಿ ನಿತ್ಯವೂ ನಾಟಕ ನೋಡಬೇಕೆಂಬ ತುಡಿತ. ಅಸುಂಡಿ ಕಂಪನಿಯಲ್ಲಿ ಬೆರಳೆಣಿಕೆಯಷ್ಟು ಜನ ಕಲಾವಿದರು ಉಳಿದಿದ್ದರೆಂದು ಆಗಲೇ ಹೇಳಿದೆ. ಒಂದು ಖುರ್ಚಿ ಮತ್ತೊಂದು ಚಾಪೆ – ಎರಡೇ ಕ್ಲಾಸು. ಹೀಗಾಗಿ ಪ್ರವೇಶಕ್ಕೆ ಎರಡೇ ಗೇಟುಗಳು. ನಾಂದಿ ಹಾಡಿ, ಮೊದಲ ಸೀನು ಮುಗಿಯುವ ಹೊತ್ತಿಗೆ ಹೊರಗಡೆ ಟೇಬಲ್ ಹಾಕಿಕೊಂಡು ಟಿಕೇಟು ಹರಿಯುತ್ತಿದ್ದಾತ ಹಾಗೂ ಎರಡೂ ಗೇಟುಗಳಲ್ಲಿ



## ರಾತ್ರಿಗಳ ಕಳೆಯುವುದು

ಕೆಲವು ರಾತ್ರಿಗಳು ಮುಂಜಾವಿನ ತನಕ ಎದ್ದಿದ್ದರು,
ಚಂದ್ರ ಹೇಗೆ ಸೂರ್ಯನಿಗೋಸ್ಕರ ಕೆಲವೊಮ್ಮೆ
ಎದ್ದಿರುತ್ತಾನೋ ಹಾಗೆ.

ಆಗಿರು ಬಾವಿಯ ಕತ್ತಲ ದಾರಿಯಿಂದ
ಬೆಳಕಿನೊಳಕ್ಕೆ ಎತ್ತಿಕೊಂಡಂಥಾ ತುಂಬಿದ ಕೊಡ.

ಮೂಲ : ಜಲಾಲುದ್ದೀನ್ ರೂಮಿ
ಅನು : **ಅಂಕುರ್ ಬೆಟಗೇರಿ**

ನಂ. ೨೦೨, ಹರ್ಷ ಅಪಾರ್ಟ್‌ಮೆಂಟ್, [illegible]
ಚಿಕ್ಕಲಸಂದ್ರ, ಬೆಂಗಳೂರು - [illegible]

ನಿಂತಿದ್ದವರು, ಅವರೂ ಕಲಾವಿದರೇ ಆಗಿದ್ದು, ಲೇಟಾಗಿ ಬರುವ ಕಲಾಭಿಮಾನಿಗಳಿಗಾಗಿ ಒಂದು ಸೀನು ಮುಗಿಯುವವರೆಗೆ ಕಾದಿದ್ದು, ನಂತರ ಗೇಟು ಮುಚ್ಚಿ ಕಸೆ ಕಟ್ಟಿ, ಸಾಕಷ್ಟು ಬಂದೋಬಸ್ತು ಮಾಡಿ ಮೇಕಪ್ಪಿಗಾಗಿ ಹಿಂದಕ್ಕೆ ಓಡುತ್ತಿದ್ದರು.

ಚಳಿಯಿಂದ ರಕ್ಷಣೆ ಪಡೆಯುವುದಕ್ಕೂ ಆಯಿತು, ಗುರ್ತಿನವರು ನಮ್ಮನ್ನು ಗುರುತಿಸದೇ ಇರುವುದಕ್ಕೂ ಆಯಿತು ಎನ್ನುವಂತೆ ತಲೆಯ ಮೇಲಿದ್ದ ಗಾಂಧಿ ಟೊಪ್ಪಿಗೆಯನ್ನು ಕಿವಿಯವರೆಗೂ ಬಿಚ್ಚಿ ಎಳೆದುಕೊಂಡು, ಹೈದರಾಲಿಯ ಸೈನಿಕರಂತೆ ಟೆಂಟಿನ ಹೊರಗಡೆಯೇ ಹೊಂಚುಹಾಕುತ್ತಿದ್ದೆವು. ರಸ್ತಾ ಸೀನು ಬಿತ್ತು. ಕಂಪನಿ ಮಾಲಿಕನೇ ಗುಮಾಸ್ತ ಶೇಷಣ್ಣನ ಪಾತ್ರವಹಿಸಿದ್ದರು. ರಟ್ಟಿನ ಟೊಪ್ಪಿಗೆ, ಕಿವಿಯಲ್ಲಿ ಒಂದು ಪೆನ್ನು, ಕಂಕುಳಲ್ಲಿ ಕೆಂಪು ವಹಿ. ಗದುಗಿನ ವರ್ತಕರ ಮಂಡಿ-ವಖಾರಗಳಲ್ಲಿ ಲೆಕ್ಕ ಬರೆಯುವವರ ತದ್ರೂಪು. ಮಾಲಿಕನಿಗೆ ಅದೇನು ಖಯಾಲಿಯೋ, ರಸ್ತಾ ಪರದೆಯ ಮುಂದೆ ನಿಂತಿರುತ್ತಿದ್ದ ಮೈಕಿಗೆ ಬಾಯಿ ಹೆಟ್ಟಿ ನಿಂತು ಏನಿಲ್ಲೆಂದರೂ ಕನಿಷ್ಠ ಅರ್ಧ ತಾಸು ಪುರಂದರದಾಸರ 'ನೀನ್ಯಾಕೋ ನಿನ್ನ ಹಂಗ್ಯಾಕೋ' ಕೀರ್ತನೆಯನ್ನು ಹಿಂದೂಸ್ತಾನಿ ಶೈಲಿಯಲ್ಲಿ ಹಾಡುತ್ತಿದ್ದ. ಮುಂದೆ ಖುರ್ಚಿಗಳಲ್ಲಿ ಕುಕ್ಕರ ಬಡಿದಿದ್ದ ಕೆಲವೇ ಕೆಲವು ಕ್ಲಾಸ್ ಆಡಿಯನ್ಸ್ ಆತನ ಹಾಡಿಕೆಗೆ ತಲೆದೂಗಿ ವಾಹ್! ವಾಹ್! ಎಂದು ಶಭಾಶ್‌ಗಿರಿ ಕೊಡುತ್ತಿದ್ದರೆ, ಹಿಂದೆ ತಂತಮ್ಮ ಮನೆಯಿಂದ ಚಾಪೆ ತಂದು ಹಾಸಿಕೊಂಡು ಆಸೀನರಾಗಿರುತ್ತಿದ್ದ ಎರಡನೇ ದರ್ಜೆ ಪ್ರೇಕ್ಷಕರು ''ಈ ಮುದೇವ (ಮೂದೇವ ಅಲ್ಲ ಮುದುಕ, ಮುದಿಯ) ಬಾಯಿ ಮುಚ್ಚಾಕ ಏನ್ ತಗೋತಾನು, ಏಟೊತ್ತು ಹಾಡತಾನ, ಏನಕತಿ?'' ಎಂದು ಗೊಣಗುತ್ತಿದ್ದರು. ಅವರಿಗೆ ಅದು ಶುರುವಿನಲ್ಲೇ ನಾಯಿ ಮುಗಿಲಿಗೆ ಊಳಿಟ್ಟಂತೆ ಕೀಸರಿಡಿಸಿ, ಬೋರು ತರಿಸುತ್ತಿತ್ತು.

ನಾಟಕದಲ್ಲಿ ಬರುವ ಸಾಹುಕಾರ ರಂಗಣ್ಣನ ಖಾಸಾ ಗುಮಾಸ್ತ ಶೇಷ, ನಾಟಕದಲ್ಲಿ ಸಾಹುಕಾರನನ್ನು ಉಪಾಯವಾಗಿ ಖೆಡ್ಡಕ್ಕೆ ಬೀಳಿಸುವ ಕ್ಲೈಮ್ಯಾಕ್ಸ್ ಸೀನಿದೆ. ಅದರ ಮುನ್ಸೂಚನೆಯೆನ್ನುವಂತೆ ಶೇಷಣ್ಣ 'ನೀನ್ಯಾಕೋ ನಿನ್ನ ಹಂಗ್ಯಾಕೋ ರಂಗಾ' ಎಂದು ಸೇರಿಸಿಕೊಂಡು ಹಾಡುತ್ತಿದ್ದ. ಮೂಲ ಕೀರ್ತನೆಯಲ್ಲಿ 'ರಂಗ' ಇಲ್ಲದಿದ್ದರೂ, ಅರ್ಥಪೂರ್ಣವಾಗುವಂತೆ ಒಗ್ಗಿಸಿಕೊಂಡಿದ್ದರು ಅದನ್ನು. ಸರಿ, ಕೋಲಿಗೆ ಸುತ್ತಿರುತ್ತಿದ್ದ ಗುಲಾಬಿ ಬಣ್ಣದ ಬಂಬೈ ಮಿಠಾಯಿ ಜಗ್ಗುವಂತೆ ಸದರಿ ಕೀರ್ತನೆಯನ್ನು ಒಂದೇ ಸಮ ಎಳೆದುಕೊಂಡು ಹೋಗುತ್ತಿದ್ದ – ಸೈಡ್ ವಿಂಗಿನಿಂದ ಸೂಚನೆ ಬರುವವರೆಗೆ. ಇಷ್ಟೊಂದು ಯಾಕೆ ಈ ಮುದುಕ ಹಾಡುತ್ತಾನೆನ್ನುವುದರ ಗುಟ್ಟು ನಂತರ ಗೊತ್ತಾಯಿತು. ಪುಟ್ಟ ಸಂಸಾರದಂತಿದ್ದ ಕಂಪನಿಯದು. ಗಲ್ಲೆಯಲ್ಲಿದ್ದವ ಹಾಗೂ ಎರಡೂ ಗೇಟ್‌ಗಳಲ್ಲಿದ್ದ ಕಲಾವಿದರು ಗೇಟು ಮುಚ್ಚಿ, ಒಳ ಬಂದು ತಮ್ಮ ಮೇಕಪ್ ಮುಗಿಸಿ ಮುಂದಿನ ಸೀನಿಗೆ ಅಣಿಯಾಗುವವರೆಗೂ ಆ ಮುದುಕ ಮಾಲಿಕ ಕಂ ಶೇಷಣ್ಣನ ಪಾತ್ರಧಾರಿ ಹಾಗೆ ಕಂಠ ಶೋಷಣೆ ಮಾಡಿಕೊಳ್ಳುವುದು ಆತನ ನಿತ್ಯ ಕರ್ಮವಾಗಿತ್ತು. ಅವರವರ ಕಷ್ಟ ಅವರವರಿಗೆ. ಹೊರಗಿನ ನಮ್ಮ ಕಷ್ಟ ಕೇಳುವವರಾರು?

ಸೀಟಿ ಊದಿ, ಲೈಟಾರಿಸಿ, ಪರದೆ ಎಳೆದ ಹಿಂದೆಯೇ ಮನೆಯ ಸೀನು ರಂಗದ ಮೇಲೆ ಶುರುವಾಯಿತು. ಒಳಗಡೆ ಸೇರಿಕೊಳ್ಳುವ ಉಪಾಯಗಾಣದೆ ಕೋಟೆಗೋಡೆ ಸುತ್ತುವಂತೆ ನಾವು ಆರೇಳು ಜನ ಬೇವಾರ್ಸಿ ಪ್ರೇಕ್ಷಕರು ಸುಮ್ಮನೆ ಸುಳಿದಾಡಿಕೊಂಡಿದ್ದೆವು – ರಂಗದ ಮೇಲಿಂದ ಬರುವ ಸಂಭಾಷಣೆ – ಸಂಗೀತಕ್ಕೆ ಕಿವಿಗೊಟ್ಟವರಿಗಾಗಿ. ನಮ್ಮಲ್ಲಿಯೇ ಒಬ್ಬ ಲೀಡ್ ಮಾಡಿ, ಕೊನೆಯ ತುದಿಯ ನಿರ್ಜನ ಪ್ರದೇಶದ ಮೂಲೆಗೆ ಕರೆದೊಯ್ದು, ನಿಲ್ಲಿಸಿದ್ದ ಬೊಂಬಿಗೆ ಜಗಿದಿದ್ದ ದಪ್ಪನೆಯ ಟೆಂಟು ಬಟ್ಟೆ ಹಳಕಲಾಗಿ ಅಲ್ಲಲ್ಲಿ ಹರಿದು ಕಿಂಡಿ ಬಿದ್ದಿದ್ದವು. ಮೂಲೆಯಲ್ಲಿ ಒಂದು ಕಿಂಡಿಯನ್ನು ಪರ್‍ರನೆ ಹರಿದು ಒಬ್ಬ ಮನುಷ್ಯ ತೂರುವಷ್ಟು ಅಗಲ ಮಾಡಿಕೊಂಡು ಒಳ ಹೋದವನೇ ಕಪ್ಪೆಯಂತೆ ಕುಪ್ಪಳಿಸುತ್ತ ಓಡಿ ಹೋಗಿ ಚಾಪೆ ಪ್ರೇಕ್ಷಕರ ಸಮುದಾಯದಲ್ಲಿ ಲೀನನಾದ. ಅವನ ಸಾಹಸಕ್ಕೆ 'ಅಬ್ಬಾ ಇವನ' ಅಂದುಕೊಂಡು, ಹಿಂದಿದ್ದ ನಾವೆಲ್ಲ ಒಬ್ಬೊಬ್ಬರಾಗಿ ಅವನನ್ನೇ ಅನುಸರಿಸಿ, ಪ್ರೇಕ್ಷಕ ಗಡಣ ಸೇರಿಕೊಂಡು ನಾಟಕ ನೋಡುವ ರಸಾನಂದದಲ್ಲಿ ಮೈಮರೆತಿದ್ದೆವು.

ಮನೆಯ ಸೀನು ಮುಗಿದು ರಸ್ತಾ ಸೀನು ಅಡಿಯಿಟ್ಟಿತ್ತು. ಕೆಲವೇ ನಿಮಿಷಗಳಲ್ಲಿ ಚಾಪೆ ಸಮುದಾಯದಲ್ಲಿ ಸಣ್ಣ ಗಲಾಟೆ ಶುರುವಾಗಿತ್ತು. ತಲ್ಲೀನವಾಗಿ ನೋಡುವ ಹೊತ್ತಿಗೆ, ತಲೆಯ ಮೇಲೆ ಟವಲು ಹಾಕಿಕೊಂಡು ಬಂದ ಹೆಂಗಸೊಂದು ನನ್ನ ರಟ್ಟೆಗೆ ಕೈ ಹಾಕಿ ಎಳೆಯಿತು. ಅದರ ಕೈ ಗಂಡಸರ ಒರಟು ಚಕ್ಕಳ ಕೈಯಂತಿದ್ದುದಕ್ಕೆ ಬೆಚ್ಚಿ, ತಕರಾರು



ಮಾಡದೆ ಅದರೊಂದಿಗೆ ಹೊರಗೆ ನಡೆದೆವು. ಟೆಂಟಿನ ಹೊರಗೆ ಒಟ್ಟು ಒಂ
ಜನರನ್ನು ಹಾಗೆ ಎಳೆದು ತಂದು ನಿಲ್ಲಿಸಿ ವಿಚಾರಣೆ ಶುರು ಮಾಡಿದ್ದರು. ನ
ಇಬ್ಬರು ಹುಡುಗರು ಟಿಕೀಟು ತೆಗೆದುಕೊಂಡು ಬಂದಿರುವುದಾಗಿ ಸಮಜಾಯಿಷಿ
ಅವರನ್ನು ಒಳಗೆ ಕಳಿಸಿದ್ದರು. ಮಲ್ಲಮ್ಮನ ಪಾತ್ರ ಮಾಡುತ್ತಿದ್ದಾತನೇ ಮಲಮ
ಕಲ್ಯಾಣಿಯ ಪಾತ್ರ ಮಾಡುತ್ತಿದ್ದ.

ರಂಗದ ಮೇಲಿದ್ದ ಕಲ್ಯಾಣಿ ನಮ್ಮನ್ನು ಹೇಗೆ ಕರಾರುವಾಕ್ಕಾಗಿ ಗುರುತಿಸಿ
ಎನ್ನುವುದು ಮೊದಲು ನಮಗೆ ಹೊಳೆಯಲಿಲ್ಲ. ಆತ ಡೈಲಾಗ್ ಹೇಳಿಕೊಂಡೇ,
ದೂರದಲ್ಲಿ ಟೆಂಟು ಹರಿದು ಒಳತೂರಿ ಕುಪ್ಪಳಿಸುತ್ತಿದ್ದ ಒಂದೊಂದೇ ಕಪ್ಪೆಗ
ಎಣಿಸಿಕೊಂಡಿದ್ದ. ತಮ್ಮ ಸೀನು ಮುಗಿದ ಕೂಡಲೇ ಸಹಕಲಾವಿದನೊಂದಿಗೆ ಪ್ರೇಕ್ಷ
ಗ್ಯಾಲರಿಗೆ ಬಂದಿದ್ದರು. ಇಲ್ಲಿಯೂ ಗಾಂಧಿ ಟೊಪ್ಪಿಗೆಯೇ ನಮ್ಮನ್ನು ಪತ್ತೆಹ
ನೆರವಾಗಿತ್ತು. ನುಗ್ಗಿದ ನಾವು ಏಳು ಜನರೊಂದಿಗೆ ಇಬ್ಬರನ್ನು ಎಳೆತಂದದ್ದು
ಇಬ್ಬರೂ ನಮ್ಮಂತೆಯೇ ಶಿರಸ್ತ್ರಾಣ ಧರಿಸಿದ್ದರಿಂದಾಗಿ ಅದೇ ಎಡವಟ್ಟಾಗಿದ್ದು. ರಂ
ಮೇಲೆ ಜಗಮಗಿಸುವ ಬೆಳಕಿನಲ್ಲಿ ಎದ್ದು ಕಾಣುವ ನಾಯಕಿ ಅರೆಗತ್ತಲಿನಲ್ಲಿ ಸ
ಮುಂದೆ ಹಳಕಲು ಸೀರೆಯ ಜೋಗತಿಯಂತೆ ಪೇಲವವಾಗಿ ತೋರುತ್ತಿದ್ದ
ಅವರಿಬ್ಬರೂ ನಮ್ಮನ್ನು ಹೊರಗೆ ಬಿಟ್ಟು ರಂಗದ ಕಡೆ ಅವಸರಿಸಿದ್ದರು.

ಅಷ್ಟು ದೂರದಲ್ಲಿ ಯಾರೋ ಹೊತ್ತಿಸಿದ್ದ, ಇನ್ನೇನು ಆರುವ ಹಂತದ
ಬೆಂಕಿಗೆ, ಚುಪಡಾ ತಿಂದು ಎಸೆದಿದ್ದ ಚಿಂದಿ ಕಾಗದದ ತುಂಡುಗಳನ್ನು ಆರಿಸಿ ತ
ನಮ್ಮಲ್ಲಿಯೇ ಒಬ್ಬ, ಬೆಂಕಿಯನ್ನು ಎತ್ತರಿಸಿದ್ದ. ಮತ್ತೊಬ್ಬ ಹತ್ತಿರದಲ್ಲಿಯೇ ನಿಲ್ಲಿ
ಎತ್ತಿನ ಗಾಡಿಯ ಬಳಿ ಹೋಗಿ, ಎತ್ತು ತಿಂದು ಮಿಗಿಸಿದ್ದ ಜೋಳದ ದಂಟನ್ನು ತ
ಬೆಂಕಿಯ ಪಕ್ಕ ಒಟ್ಟಿದ. ಎಲ್ಲರೂ ಮಧ್ಯರಾತ್ರಿ ಮೀರಿದ್ದ ಚಳಿಗೆ ಮೈ ಕಾಯಿಸಿಕೊಳ್ಳ
'ಕ್ಯಾಂಪ್-ಫೈರ್' ಸುತ್ತಲೂ ದುಂಡಗೆ ಕುಳಿತೆವು. ಹತ್ತಿರದಲ್ಲಿಯೇ ಬಿದ್ದುಕೊಂ
ಬೀದಿನಾಯಿಗಳು ನಮ್ಮ ಗದ್ದಲಕ್ಕೆ ಡಿಸ್ಟರ್ಬ್ ಆದಂತಾಗಿ ಎದ್ದುನಿಂತು ಕಿವಿಗ
ಚಟಪಟ ಕೊಡವಿ, ಬೆಂಕಿಯ ಬಳಿ ನಾವಿದ್ದ ತಾವಿಗೇ ಬಂದವು - ನಿಮ್ಮ ಪಾ
ನನ್ನದಕ್ಕಿಂತ ಭಿನ್ನವಾಗೇನೂ ಇಲ್ಲವೆನ್ನುವಂತೆ ನಮ್ಮೆಡೆ ನೋಡುತ್ತ.

ಮಧ್ಯರಾತ್ರಿ ಮೀರಿ, ಇಬ್ಬನಿ ಬೀಳಲಾರಂಭಿಸಿತ್ತು. ಬೆಂಕಿಯನ್ನು ಬಡಾ

ರದಲ್ಲಿ ಒಣಪುರಲೆಗಳೇನೂ ಸಿಗದೆ ಪರದಾಡುವ ಹೊತ್ತಿಗೆ, ಸರಿಯಾಗಿ ನಾಟಕ ರ್‌ವೆಲ್ ಕೊಟ್ಟ ಬೆಲ್ಲು ಹೊಡೆದಿತ್ತು. ಆ ಹೊತ್ತಿಗೆ ನಾಕಾರು ಕಡೆ ಟೆಂಟು ಪ್ರೇಕ್ಷಕರಿಗೆ ಹೊರ ಹೋಗಲು ಅನುವು ಮಾಡಿಕೊಟ್ಟರು. ನಮ್ಮ ಸಹನೆ ಮೆಚ್ಚಿದ, ರಲ್ಲಿಯೇ ಒಬ್ಬ ಒಳಗೆ ಹೋಗಿ ಕೂರಲು ಸೂಚಿಸಿದ. ಜನಗಳ ನಡುವೆ ಂಡು ಕೂತರೆ ಚಳಿಯ ಅನುಭವ ಆಗುತ್ತಿದ್ದಿಲ್ಲ. ದುಪ್ಪಟ್ಟಿ ಹೊದ್ದವರ, ರ ಹೊದ್ದವರ ನಡುವೆ ತೂರಿಕೊಂಡು ಉಳಿದ ನಾಟಕ ನೋಡಿ ಆನಂದಿಸುವಲ್ಲಿ ನರಾಗಿದ್ದೆವು.

ಕದ್ದು ನಾಟಕ ನೋಡುವುದಕ್ಕೆ ಇನ್ನು ಮಂಗಳ ಹಾಡಿದಂತೆಯೇ ಎಂದು ಸಿದ್ದೆ. ಮರುದಿನ ಮತ್ತೆ ರಾತ್ರಿ, ನಾಟಕದ ತಂಬೂದಿಂದ ಧ್ವನಿಮುದ್ರಿತ ಟಗಳು ಒಂದರ ಮೇಲೊಂದು ಅರಚುತ್ತಿದ್ದವು. ಅದನ್ನು ಕೇಳುತ್ತಿದ್ದ ಹಾಗೆ ಗೆ ಮೇಲೆ ಮಲಗಿದ್ದ ಮನಸ್ಸು ಮತ್ತೆ ಗರಿಗೆದರಿತು. ರಾತ್ರಿ ಹತ್ತೂವರೆ ಗುತ್ತಿದ್ದಂತೆ ಗೆಳೆಯನೊಬ್ಬ ನನ್ನ ಮನೆಯ ಬಳಿ ಬೀದಿಯಲ್ಲಿ ನಿಂತು ಸಿಳ್ಳು ಹಾಕಿದ್ದ ದು ನನಗೆ ಸದ್ದಾಗದಂತೆ ಇಳಿದು ಬರುವಂತೆ ನೀಡಿದ ಸೂಚನೆಯಾಗಿತ್ತು. ಕರ ಕಾಲುಗಳು ತಮಗರಿವಿಲ್ಲದಂತೆ ಸಾರಾಯಿ ಅಂಗಡಿಯತ್ತ ಚಲಿಸುವ ವೇ. ಏಳೂ ಜನ ನಾಟಕದ ಟೆಂಟಿನ ಪಕ್ಕ ಆಗಲೇ ಜಮಾಯಿಸಿದ್ದೆವು.

ನಾಟಕ ನಾಂದಿ ಹಾಡಿತು. ಗಲ್ಲೇದಾರ ಮತ್ತು ಗೇಟು ಕೀಪರರು ಮೇಕಪ್ಪಿಗಾಗಿ ಗೋಡಿದರು. ನಾವು ಟೆಂಟಿನ ಮೂಲೆಗೆ ಹೋಗಿ ಹೇಗೆ ತೂರಬೇಕೆಂಬ ರ್ಚೆಯಲ್ಲಿ ಮುಳುಗಿದೆವು. ಈ ಬಾರಿ ಬಟ್ಟೆ ಹರಿಯುವುದು ಬೇಡ. ಮೊದಲೇ ಕಂಪನಿ. ಕಟ್ಟಿದ್ದ ಕಸೆಗಳನ್ನು ಬಿಚ್ಚಿ ಲಕ್ಷಣವಾಗಿ ಡೇರೆಯೊಳಕ್ಕೆ ನುಗ್ಗೋಣ ಎಂದು ರ್ಮಾನಿಸಿ ಕಾರ್ಯಪ್ರವೃತ್ತರಾದೆವು. ನಿರ್ಭಯವಾಗಿ, ನಿರ್ಲಜ್ಜತೆಯಿಂದ ಹೋಗಿ ಗಳ ನಡುವೆ ಚದುರಿದಂತೆ ಕೂತೆವು. ನಮ್ಮ 'ಲಾಂಛನ' ಗಾಂಧಿ ಟೊಪ್ಪಿಗೆಯನ್ನು ಚಿ, ಕರವಸ್ತ್ರದಂತೆ ಕೈಯಲ್ಲಿ ಹಿಡಿದುಕೊಂಡು ಕೂತಿದ್ದೆವು. 'ಬಾ ಗೆಣೆಯಾ, ಈ ಹೇಗೆ ನಮ್ಮನ್ನು ಪತ್ತೆ ಹಚ್ಚುತ್ತೀ ನೋಡೇ ಬಿಡೋಣ' ಎಂದು ಮನಸ್ಸಿನಲ್ಲಿಯೇ ಮಾಡಿಕೊಂಡು ನಾಟಕದಲ್ಲಿ ಮೈಮರೆತಿದ್ದೆವು.

ಎರಡು ಸೀನು ಮುಗಿದಿದ್ದವು. ಅದಾವ ಮಾಯದಲ್ಲೋ ಯಮಕಿಂಕರರಂತೆ ದು, ಸರಿಯಾಗೇ ನಮ್ಮನ್ನು ಗುರುತಿಸಿ ಹಿಡಿದುಕೊಂಡು ಹೊರಗೆ ನಡೆದೇಬಿಟ್ಟರು. ಲ್ಲಿಯೇ ಒಬ್ಬ ಗೌಡರ ಮಗ ಜಗಭಂಡ ''ಬರ್ರೆಲೇ, ನಮ್ಮನ್ ಏನ್ ಗಲ್ಲೀಗೇರ ನ್ ನೋಡೇ ಬಿಡಾಣ. ಅವರು ನಾಟಕ ಆಡೂ ಜಾಗ ನಮ್ಮ ಹೆಣ್ಣಜ್ಜಂದು'' ದು ಅವನು ಧೈರ್ಯವಾಗೇ ಸಿಂಧೂರ ಲಕ್ಷ್ಮಣನಂತೆ ಎದೆಸೆಟೆಸಿ ನಡೆದ. ಹಿಂದಿನ ಯ ಪ್ರಹಸನದ ಪುನರಾವರ್ತನೆಯಾಯಿತು. ಮರುದಿನ ರಾತ್ರಿಯೂ ಹಾಗೇ ದೆವು. ರಾತ್ರಿಯ ಹೊತ್ತು ಹೊಲಕ್ಕೆ ನುಗ್ಗುತ್ತಿದ್ದ ಹಂದಿಗಳ ಕಾಟದಂತೆ ಆ ನಿಗೆ ತಲೆನೋವಾಗಿದ್ದದ್ದು ದಿಟ. ಹೇಳೀ ಕೇಳೀ ಪರಸ್ಥಳದ ವಲಸೆ ಕಲಾವಿದ ರು. ನಾವು ಏನೇ ಮಾಡಲಿ, ಸ್ಥಳೀಯ ಜೂನಿಯರ್ ಕಲಾಭಿಮಾನಿಗಳಾದ ನಮ್ಮ ಲೆ ಕೈ ಮಾಡಲು ಅವರಿಗೆ ಧೈರ್ಯ ಸಾಲಬೇಕಲ್ಲ. ಅವರಿಗೆ ಪರಸ್ಥಳ ಸಂಕಟ. ನಮಗದೇ ದಿವಿನಾದ ವರದಾನ, ಹುಂಬತನದ ಹುಡುಗಾಟ.

ಆರೇಳು ದಿನ ಅದೇ ಅರ್ಧಚಂದ್ರ ಪ್ರಯೋಗ ರಿಪೀಟ್ ಆಯಿತು. ನಮ್ಮ ಟಳ ತಡೆಯುವುದು ಅವರಿಗೂ ಅಸಾಧ್ಯವೆಂದು ತೋರಿರಬೇಕು. ಇಂಥ ಚಿಲ್ಲರೆ ತಿಯನ್ನು ಮಾಲಿಕನ ಗಮನಕ್ಕೆ ತಾರದೇ, ಅವರ-ನಮ್ಮ ನಡುವೆ ಒಪ್ಪಂದ ಟ್ಟಿತು. ಅದೇನಪಾ ಅಂದರೆ, ಮೊದಲೇ ಬಡ ಕಂಪನಿ ಎಂದು ಹೇಳಿದ್ದೆ. ಹಳೇ ರದಲ್ಲಿದ್ದ ಉಡುಪಿ ಅಣ್ಣಾರಾಯರ ಹೋಟೆಲಿನಲ್ಲಿದ್ದ ಮೂವತ್ತೈದೂ ಕುರ್ಚಿ ನ್ನು ರಾತ್ರಿ ಒಂಬತ್ತೂವರೆ ಹೊತ್ತಿಗೆ ಹೋಟೆಲಿನ ಗಿರಾಕಿಗಳು ಕಮ್ಮಿಯಾದೊಡನೆ, ವಿದರೇ ಹೋಗಿ ಅವನ್ನು ಹೊತ್ತು ತಂದು ರಂಗದ ಮುಂದಿನ ತಗ್ಗಿನಲ್ಲಿ ಸಾಲಾಗಿ ಡಿಸಿಕೊಳ್ಳುತ್ತಿದ್ದರು. ಹಾಗೆಯೇ ನಾಟಕ ಬಿಟ್ಟ ಮೇಲೆ, ಬೆಳಕು ಹರಿಯುವ ದಲೇ ಆ ಕುರ್ಚಿಗಳು ಮತ್ತೆ ಹೋಟೆಲು ಸೇರಿಕೊಳ್ಳಬೇಕು. ನಾಟಕ ಆಡಿ ಗಿಸಿ, ಮೇಕಪ್ಪು ಅಳಿಸಿಕೊಂಡು, ಊಟ ಮಾಡಿ ಮಲಗುವ ತಯಾರಿಯಲ್ಲಿರುತ್ತಿದ್ದ ವಿದರಿಗೆ ಕುರ್ಚಿ ಮರಳಿ ಸಾಗಿಸುವದೊಂದು ಆ ಸರು ಹೊತ್ತಿನಲ್ಲಿ ಕಿರಿಕಿರಿಯ ತಿಯಾಗಿತ್ತು. ಆ ಹೊಣೆಯನ್ನು ನಮ್ಮ ತಲೆಗೆ ಹೊರಿಸಿದ್ದರು.

ಮರುದಿನದಿಂದ ರಾತ್ರಿ, ನಾವು ಏಳೂ ಜನ ಎಲ್ಲರೆದುರೇ, ರಾಜಾರೋಷವಾಗಿ ಟೊಪ್ಪಿಗೆಯನ್ನು ಮಡಿಚಿ ಗೇಟ್‌ಕೀಪರ್‌ನ ಕೈಗಿಕ್ಕಿ, ಕೈ ಬೀಸಿಕೊಂಡು ಒಳ ಯುತ್ತಿದ್ದೆವು. ನಾಟಕ ಮುಗಿದ ಕೂಡಲೇ, ಎಲ್ಲರಂತೆ ಹೊರ ಬಂದು ಜಲಬಾಧೆ ತೀರಿಸಿಕೊಂಡವರಾಗಿ, ಕಂಪನಿಗೆ ಸೇರಿದ ಮಂದಿಯ ತೆರದಲ್ಲಿಯೇ ಟೆಂಟಿನೊಳಗೆ ಹೋಗಿ, ತಗ್ಗಿನಲ್ಲಿರುತ್ತಿದ್ದ ಕುರ್ಚಿಗಳನ್ನು ಮಡಿಚಿ ತಲಾ ಐದೈದು ಕುರ್ಚಿಗಳನ್ನು ಹೊತ್ತು ಸಾಲಾಗಿ ಹೋಟೆಲಿನತ್ತ ನಡೆಯುತ್ತಿದ್ದೆವು. ನಮ್ಮನ್ನು ಕಾರವಾನಿನಂತೆ ನಡೆಸಿಕೊಂಡು ಬರುವ ಕಲಾವಿದನೊಬ್ಬ ನಮ್ಮೆಲ್ಲರ ಟೊಪ್ಪಿಗಳನ್ನು ಹಿಡಿದುಕೊಂಡು ಬರುತ್ತಿದ್ದ. ಅಷ್ಟು ಹೊತ್ತಿನಲ್ಲಿ ನಮ್ಮನ್ನು ಗುರುತಿಸುವ ಪ್ರೇಕ್ಷಕರ್‍ಯಾರೂ ಇಲ್ಲದೆ, ರಸ್ತೆಯಲ್ಲಿ ಸರಸರ ನಡೆದು, ಕುರ್ಚಿಗಳನ್ನು ಇಳಿಸಿ, ಬೀದಿ ದೀಪದ ಬೆಳಕಿನಲ್ಲಿ ನಮ್ಮ ನಮ್ಮ ಟೊಪ್ಪಿಗೆಗಳನ್ನು ಹುಡುಕಿ ಆರಿಸಿಕೊಳ್ಳುತ್ತಿದ್ದೆವು. ಶಾಲಾ ಟೈಮ್ ಟೇಬಲ್‌ನಲ್ಲಿ ಮಾಸ್ತರರ ಇನಿಶಿಯಲ್ ಬರೆದಿರುತ್ತಾರಲ್ಲಾ, ಹಾಗೆ ನಮ್ಮ ಹೆಸರುಗಳ ಸಂಕ್ಷಿಪ್ತ ರೂಪವನ್ನು ನಮಗಷ್ಟೇ ಗೊತ್ತಾಗುವಂತೆ ನಮ್ಮನಮ್ಮ ಟೊಪ್ಪಿಗೆಯ ಅಂಚಿನಲ್ಲಿ ಒಂದು ಕಡೆ ನಮೂದಿಸಿರುತ್ತಿದ್ದೆವು.

ಸ್ವಾತಂತ್ರ್ಯ ಹೋರಾಟದ ದಿನಗಳು. ಗುಜರಾತಿನಲ್ಲಿ ಸಾರ್ವಜನಿಕ ಭಾಷಣ ಮಾಡಿದ ಗಾಂಧೀಜಿಯ ಮಾತುಗಳಿಗೆ ಪ್ರಭಾವಿತಳಾದ ಶ್ರೀಮಂತ ಮಹಿಳೆಯೊಬ್ಬಳು ತತ್‌ಕ್ಷಣ ತನ್ನ ಮೈಮೇಲಿದ್ದ ಬೆಲೆಯುಳ್ಳ ಆಭರಣಗಳನ್ನೆಲ್ಲ ಕಳಚಿ, ಅಲ್ಲೇ ಇದ್ದ ಕಾರ್ಯಕರ್ತನೊಬ್ಬನನ್ನು ಕರೆದು ''ಇವನ್ನಷ್ಟು ನನ್ನ ಮನೆಗೆ ಮುಟ್ಟಿಸಿಬಿಡಿರಿ. ನಾನು ಈ ಕ್ಷಣದಿಂದಲೇ ಸ್ವಾತಂತ್ರ್ಯ ಚಳುವಳಿಗೆ ಧುಮುಕುತ್ತೇನೆ'' ಅಂದಳಂತೆ. ಆತ ''ಗುರುತು ಪರಿಚಯವಿಲ್ಲದ ನನ್ನ ಮೇಲೆ ಯಾವ ವಿಶ್ವಾಸವಿಟ್ಟು ಈ ಆಭರಣ ಕೊಟ್ಟಿರಿ ತಾಯಿ ?'' ಎಂದಾಗ, ''ನಿಮ್ಮ ತಲೆಯ ಮೇಲಿನ ಟೊಪ್ಪಿಗೆಯೊಂದೇ ಸಾಕು ನಾನು ನಂಬುವುದಕ್ಕೆ'' ಅಂದಳಂತೆ ಆಕೆ. ವಾಹ್ ! ಒಂದು ಕಾಲದಲ್ಲಿ ಮುಡಿಗೇರಿದ್ದ ಗಾಂಧಿ ಟೋಪಿ ಅತುಳ ವಿಶ್ವಾಸದ ಕುರುಹಾಗಿತ್ತು, ದೇಶ ಪ್ರೇಮದ ಕಳಸವಾಗಿತ್ತು.

ಮೊನ್ನೆ, ಜಯನಗರದ ಅಮರಾವತಿಯಲ್ಲಿ ಸಮಾನಮನಸ್ಕ ಸುರಾಪ್ರಿಯರೆಲ್ಲ ಕುಳಿತು ಸುಖ ಸಂಕಥಾ ವಿನೋದದಲ್ಲಿ ಮುಳುಗಿರುತ್ತಿರಲಾಗಿ, ಬಾರಿನ ಹುಡುಗರು 'ಗಾಂಧಿ ಬಂದ, ಗಾಂಧೀ ಬಂದ' ಎಂದು ಅರಚಿದರು. ಅವಾಕ್ಕಾಗಿ, ತುಸು ಬೆಚ್ಚಿ ಬಿದ್ದು ಕತ್ತು ತಿರುಗಿಸಿ ನೋಡುತ್ತೇವೆ. ವಯಸ್ಸಾದ, ಹಸನ್ಮುಖೀ ವ್ಯಕ್ತಿಯೊಬ್ಬ ಬಾರಿನೊಳಗಡೆ ಪ್ರವೇಶಿಸುವುದಕ್ಕೆ ಮೊದಲು ತಲೆಯ ಮೇಲಿದ್ದ ಟೊಪ್ಪಿಗೆ ತೆಗೆದು, ಮಡಚಿ ಜುಬ್ಬಾ ಜೇಬಿನೊಳಕ್ಕೆ ಇಳಿಸಿ, ಸಾವಧಾನವಾಗಿ ಪ್ರಾರ್ಥನಾ ಮಂದಿರವನ್ನು ಪ್ರವೇಶಿಸುವವರಂತೆ ಒಳಬಂದು ಅಮೃತ ಸೇವನೆಗೆ ಅಣಿಯಾದ ಪರಿಯೇ ಅಚ್ಚರಿ ಹುಟ್ಟಿಸಿತ್ತು. ಮದ್ಯಪಾನ ನಿಷೇಧಿಸಿದ್ದ ಗಾಂಧಿ ಆತ್ಮಕ್ಕೆ (ಆದರ್ಶಕ್ಕೆ) ಅಪಚಾರ ಎಸಗಬಾರದೆಂಬ ನೀತಿ ಸಂಹಿತೆ ಆತನದ್ದಿರಬಹುದೇನೋ – ಹ್ಯಾಟ್ಸ್ ಆಫ್. ಹೀಗೇ ಕನಸಿನಲ್ಲಿ ಎಂಬಂತೆ, ಗಾಂಧಿ ಟೊಪ್ಪಿಗೆ ನಾನಾ ಬಗೆಯಲ್ಲಿ ತಕಪಕ ಕುಣಿಯುತ್ತ ಬಂದು ನನ್ನನ್ನು ಹುಚ್ಚೆಬ್ಬಿಸುತ್ತಿದೆ ಬಿಡದೆ ಆಗೀಗ.

ಮತ್ತೆ ಚರಿತ್ರೆ ಕಣ್ಣಿಗೆ ಕಟ್ಟುತ್ತದೆ. 'ಗಾಂಧಿ ತಪ್ಪಿಗೆ' ಪಾಕಿಸ್ತಾನಕ್ಕೆ ಗೇಟ್‌ಪಾಸು ಸಿಕ್ಕಿತೋ ಯಾ ಪಾಕಿಸ್ತಾನದಿಂದ ಭಾರತಕ್ಕೆ ಮುಕ್ತಿ ಸಿಕ್ಕಿತೋ ಇಲ್ಲಾ ಸ್ವತಂತ್ರ ಭಾರತದಿಂದ ಗಾಂಧಿಗೇ ಸಾಫ್‌ಸೀದಾ ಗೇಟ್‌ಪಾಸ್ ಸಿಕ್ಕಿತೋ ಹೇಳುವುದು ಕಷ್ಟ. ಗಾಂಧಿ ಟೊಪ್ಪಿಗೆಯಂತೆ ಗಾಂಧಿ ವಿಚಾರಗಳೂ ನಮ್ಮ ದೇಶಕ್ಕೀಗ ಔಟ್‌ಡೇಟೆಡ್ ಆದವೇ ಎಂಬ ದಿಗ್ಭ್ರಾಂತಿ ಕವಿಯಿತು. ಆ ಕಾಲಘಟ್ಟವನ್ನು ನೆನೆಸಿಕೊಂಡರೇ ಸಾಕು ಕ್ಯಾನವಾಸಿನ ಮೇಲೆ ಚಿತ್ರಿಸಬೇಕೆಂದು ಅಣಿ ಮಾಡಿಕೊಂಡಿದ್ದ ಬಣ್ಣಗಳೆಲ್ಲ ಕಲಸಿ ಹೋದಂತೆ, ಎಲ್ಲವೂ ಇಲ್ಲಿ ಅಯೋಮಯ. ದೂರದಲ್ಲೆಲ್ಲೋ ಕ್ಷೀಣ ಸ್ವರದಲ್ಲಿ ಕೇಳಿಬರುತ್ತಿದೆ – ಅಹಿಂಸಾ ಪರಮೋ ಧರ್ಮಃ ॥



ಈರಪ್ಪ ಎಂ. ಕಂಬಳಿ
ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ಕಾವೇರಿ ಭವನ 'ಎಫ್' ಬ್ಲಾಕ್, ಬೆಂಗಳೂರು

# ನೆನಪುಗಳ ಬಂಡಿಯ ಮೇಲೆ ಮಾಲತಮ್ಮ ಎಂಬ ರಂಗನಾಯಕಿ

ಕನ್ನಡ ರಂಗಭೂಮಿಯಲ್ಲಿ ದಂತಕಥೆಯಾಗಿಹೋದ ಗುಬ್ಬಿ ವೀರಣ್ಣನವರು ...ತ್ತು ಗುಬ್ಬಿ ಕಂಪನಿಯ ಆಧಾರಸ್ತಂಭಗಳಲ್ಲೊಬ್ಬರಾದ ಸುಂದ್ರಮ್ಮನವರು – ಈ ...ದಂಪತಿಗಳ ಮೂವರು ಮಕ್ಕಳಾದ ಶಿವರುದ್ರಮ್ಮ, ಮಹಾಲಕ್ಷ್ಮಿ, ಇಂದ್ರಜಿತ್ ...ರುಗಳು, ತಮ್ಮ ತಾಯಿ ಸುಂದ್ರಮ್ಮನವರು 'ಮಾಲತಿ ಮಾಧವಿ' ಸಿನೆಮಾ ...ಡಿದ ನಂತರ ಸ್ವರ್ಣಮ್ಮ, ಮಾಲತಮ್ಮ ಮತ್ತು ಶಿವಾನಂದರಾಗಿ ಮಾರ್ಪಟ್ಟರು. ...ವರು ಮಕ್ಕಳೂ ತಮ್ಮ ಬಾಲ್ಯದಿಂದಲೂ ಗುಬ್ಬಿ ಕಂಪನಿಯಲ್ಲಿ ಆಟವಾಡುತ್ತ, ...ಕದಲ್ಲಿ ಪಾತ್ರ ವಹಿಸುತ್ತಲೇ ದೊಡ್ಡವರಾದರು. ಕನ್ನಡ ವೃತ್ತಿರಂಗಭೂಮಿಯ ...ಕೆಯಲ್ಲಿ ದೊಡ್ಡ ಹೆಜ್ಜೆಗಳನ್ನಿಟ್ಟವರು. ಸ್ವರ್ಣಮ್ಮ ಮತ್ತು ಶಿವಾನಂದ ಅವರು ...ಮಿಸಿ ನೆನಪುಗಳನ್ನು ಬಿಟ್ಟುಹೋಗಿದ್ದಾರೆ. ಇಂದು ಮಾಲತಮ್ಮ ಎಂಬ ...ನಾಯಕಿ ರಾಜರಾಜೇಶ್ವರಿ ನಗರದ ತನ್ನ 'ಗುಬ್ಬಿ' ಮನೆಯಲ್ಲಿ ನೆನಪುಗಳ ...ಡಿಯ ಮೇಲೆ ಹೀಗೆ ಚಲಿಸುತ್ತಾರೆ.

ಈಕೆ ಮಾತು ಪ್ರಾರಂಭಿಸುವುದೇ ತನ್ನ ತಾಯಿ ಸುಂದ್ರಮ್ಮನನ್ನು ನೆನಸುತ್ತಾ; ತಂದೆ ... ವೀರಣ್ಣನವರ ಬಗ್ಗೆ ಹೆಮ್ಮೆಯಿಂದ ಮಾತನಾಡುತ್ತಾ. ಗುಬ್ಬಿ ಕಂಪನಿಯ ...ದ್ರಣ್ಣನವರು ಖರೀದಿಸಿದ ಹೆಣ್ಣು ಜಿ. ಸುಂದರಮ್ಮ. ಅಂದರೆ, ಮೂವರು ...ಣ್ಣುಮಕ್ಕಳನ್ನು ಹೆತ್ತು ತಂದೆ ತಾಯಿಯರಿಗೆ ಊಟ ಕೊಡೋದೆ ಕಷ್ಟಕರವೆನಿಸಿದಾಗ ...ಂದೆ ತಾಯಿಗಳು ಬಂದು ಚಂದ್ರಣ್ಣನವರನ್ನು, ತಮ್ಮ ಒಂದು ಹೆಣ್ಣು ಕೂಸನ್ನು ...ಡುಕೊಳ್ಳಿ ಎಂದು ಬೇಡಿ ಕೊಂಡರಂತೆ, ಅದೂ ಕೇವಲ ಒಂದು ಮೊರ ಅಕ್ಕಿ ...ತ್ತು ೨೫ ರೂ.ಗಳಿಗೆ. ಹೀಗೆ ಮಾರಾಟವಾದ ಸುಂದರಮ್ಮನವರನ್ನು ಅದೇ ...ನಿಯಲ್ಲಿದ್ದ ಕರಿಸುಂದ್ರಮ್ಮನವರು ಆಕೆಯ ಬಟ್ಟೆ ಬಿಚ್ಚಿಸಿ ಮೈಮೇಲಿದ್ದ ಸುಳಿಗಳ ... ಮಾಡಿ ಈಕೆಯಿಂದ ತಮಗೆ, ತಮ್ಮ ಕಂಪನಿಗೆ ಒಳ್ಳೆಯದಾಗುತ್ತದೆಂದು ...ಫಿಕೇಟ್ ಕೊಟ್ಟ ಮೇಲೆಯೇ ಚಂದ್ರಣ್ಣನವರು ಸುಂದ್ರಮ್ಮನವರನ್ನು ತಮ್ಮ ...ನಿಗೆ ಸೇರಿಸಿಕೊಂಡು ನಾಟಕಾಭ್ಯಾಸ ಮಾಡಿಸುತ್ತಾ ತಮ್ಮ ಕಂಪನಿಯ ಅತ್ಯುತ್ತಮ ...ಯನ್ನಾಗಿ ಮಾರ್ಪಾಡು ಮಾಡಿದ್ದು. ಅದೇ ಸುಂದ್ರಮ್ಮನವರೇ ಗುಬ್ಬಿ ...ರಣ್ಣನವರನ್ನು ಮದುವೆಯಾಗಿ ಇಡೀ ಕಂಪನಿಯ ಆಧಾರಸ್ತಂಭವಾಗಿ ನಿಂತಿದ್ದು, ...ರಡು ಹೆಣ್ಣುಮಕ್ಕಳನ್ನು ರಂಗಭೂಮಿಗೆ ಧಾರೆಯೆರೆದದ್ದು. ಇಂಥ ...ಗದಂಪತಿಗಳ ಮಗಳು ತಾನೆಂದು ಮಾಲತಮ್ಮನವರು ಹೆಮ್ಮೆಯಿಂದ ಬೀಗುತ್ತಾರೆ.

ತನ್ನ ನಾಲ್ಕನೆಯ ವಯಸ್ಸಿಗೆ ರಂಗಪ್ರವೇಶ ಮಾಡಿದ ಈಕೆಗೆ ಮೊದಮೊದಲು ...ಯಾಗಿ ಮಾತನಾಡಲು ಬರುತ್ತಿರಲಿಲ್ಲವಂತೆ. ರಾಜಭಕ್ತಿ ನಾಟಕದಲ್ಲಿ ಚಂದ್ರಶೇಖರ ...ತ್ರ ಮಾಡುತ್ತಿದ್ದ ಇವರು 'ವಿಕ್ರಾಂತ ಮಹಾರಾಜ' ಎಂದು ಹೇಳುವಾಗ 'ಇಕ್ಲಾಂತ ...ಹಾರಾಜ' ಎಂದು ಹೇಳಿ ಇಡೀ ಪ್ರೇಕ್ಷಾಂಗಣ ನಗೆಗಡಲಿನಲ್ಲಿ ಮುಳುಗುವಂತೆ ...ತ್ತಿತ್ತು. ಈ ಕಾರಣಕ್ಕಾಗಿ ಇವರಿಗೆ ಹೆಚ್ಚು ಮಾತಿರದ ಕೇವಲ ಒಂದೆರಡು ಮಾತುಗಳಿರುವಂತಹ ಪಾತ್ರಗಳನ್ನಷ್ಟೆ ನೀಡುತ್ತಿದ್ದರಂತೆ. ಇವರ ಅಕ್ಕ ಸ್ವರ್ಣಮ್ಮ ಚೆನ್ನಾಗಿ ಮಾತನಾಡುತ್ತಿದ್ದು ಆಕೆಗೆ ಮಾತನಾಡುವ ಪಾತ್ರಗಳನ್ನು ಕೊಡುತ್ತಿದ್ದರಂತೆ. ಆದರೆ, ಇವರಿಗೆ ನೃತ್ಯದ ಬಗ್ಗೆ ಹೆಚ್ಚು ಒಲವು. ಅಪ್ಪ ಊಟದ ಸಂದರ್ಭದಲ್ಲಿ ಕೆಳಗೆ ತೆಗೆದಿಡುತ್ತಿದ್ದ ಪೇಟ, ಶಲ್ಯಗಳನ್ನು ತೆಗೆದು ತಾವು ಧರಿಸಿಕೊಂಡು ತನ್ನ ನೆರಳನ್ನೇ ನೋಡುತ್ತಾ ನೃತ್ಯ ಮಾಡುತ್ತಿದ್ದರಂತೆ. ಇದನ್ನು ಗಮನಿಸಿದ ಗುಬ್ಬಿ ವೀರಣ್ಣನವರು ಮಾಲತಮ್ಮನವರನ್ನು ನೃತ್ಯ ಮಾಡುವ ದೃಶ್ಯಗಳಿಗೆ ಸೇರಿಸಿಕೊಳ್ಳುತ್ತಿದ್ದರಂತೆ. ಹೀಗೆ ಕಂಪನಿಯಲ್ಲಿ ಎಲ್ಲಾ ಮಕ್ಕಳೊಂದಿಗೆ ಸಂತೋಷದಿಂದ ಕಳೆದ ಬಾಲ್ಯದ ನೆನಪುಗಳನ್ನು ನೆನೆಯುವಾಗ ಈಗಲೂ ಅವರ ಕಣ್ಣು ಮಿಂಚುತ್ತದೆ. ಯಾವಾಗಲೂ ಸುತ್ತಾಟವೇ ಆಗಿದ್ದುದರಿಂದ ಇವರ ವಿದ್ಯಾಭ್ಯಾಸಕ್ಕೆ ತೊಡಕಾಗಿತ್ತು. ವೀರಣ್ಣನವರು ಶಾಲೆಯ ಮುಖ್ಯಸ್ಥರೊಂದಿಗೆ ಮಾತನಾಡಿ ಕೇಳಿಕೊಳ್ಳುತ್ತಿದ್ದ ಕಾರಣ ಹಾಗೂ ಹೀಗೂ ನಾಲ್ಕನೆಯ ಇಯತ್ತೆಯವರೆಗೂ ಓದಿದರು. ನಂತರ ಕಂಪನಿಗೇ ಮೇಷ್ಟ್ರೊಬ್ಬರನ್ನು ನೇಮಿಸಿದರು. ಜೊತೆಯಲ್ಲಿ ಸಂಗೀತದ ಗುರುಗಳು ಕೀರ್ತನೆಗಳನ್ನು ಹೇಳಿಕೊಟ್ಟರು. ಇನ್ನು ಅಭಿನಯಕ್ಕೆ ಸಂಬಂಧಪಟ್ಟಂತೆ ಅಪ್ಪನೇ ಗುರು. ಆಗೆಲ್ಲ ನಿರ್ದೇಶಕರೇ ಅಭಿನಯ ಗುರುಗಳೂ ಆಗಿರುತ್ತಿದ್ದರು. ಸರಿಯಾಗಿ ನಿಲ್ಲುವುದನ್ನು, ರಂಗದ ಮೇಲೆ ಓಡಾಡುವುದನ್ನು,



ಆ ಕಾಲದಲ್ಲಿಯೇ ತನ್ನ ವ್ಯಕ್ತಿತ್ವವನ್ನು ಪ್ರತಿಪಾದಿಸಿಕೊಂಡ ಛಾತಿ, ಬದುಕಿನ ಸಂಕಷ್ಟಗಳನ್ನು ಎದುರಿಸಿದ ಎದೆಗಾರಿಕೆ, ಬದುಕಿನ ಕಹಿ ಅನುಭವಗಳ ಮಧ್ಯೆಯೂ ಮನಸ್ಸನ್ನು ಕಹಿಯಾಗಿಸಿಕೊಳ್ಳದೆ ಮಗುವಿನಂತೆ ನಗುನಗುತ್ತಲೇ ಮಾತನಾಡುವ ಅವರ ಉತ್ಸಾಹ, ಎಲ್ಲವೂ ಮುಂದಿನ ಪೀಳಿಗೆಯವರಿಗೆ ಅವರು ತೋರಿಸುವ ದಾರಿದೀಪ. ಆ ದೀಪದ ಮಂದ ಬೆಳಕಿನಲ್ಲಿಯೇ ಜೀವನೋತ್ಸಾಹದ ಬಣ್ಣ ಹಚ್ಚಿ ಪತಿಯನ್ನು ನೆನೆಯುತ್ತಾ . ತಾವು ತುಂಬ ಇಷ್ಟಪಡುತ್ತಿದ್ದ 'ತೊರೆದನೆನ್ನ ಪತಿ ನಿರ್ದಯದೀ...' ಹಾಡನ್ನು ಮನಸ್ಸಿನೊಳಗೇ ಹಾಡಿಕೊಳ್ಳುತ್ತ ಮಾಲತಮ್ಮನವರು ತನ್ನ ನೆನಪಿನ ಬಂಡಿಯ ಮೇಲೆ ಚಲಿಸುತ್ತಿದ್ದಾರೆ. ■

ಮಂಗಳಾ ಎನ್.



ಗುಬ್ಬಿ ವೀರಣ್ಣ - ಮಾಲತಮ್ಮ

ನೆ ತರಗತಿಯ ಪ್ರೇಕ್ಷಕರಿಗೆ ಕೇಳುವಂತೆ ದೊಡ್ಡ ಧ್ವನಿ ತೆಗೆದು ಮಾತು ಹೇಳುವ ಎಲ್ಲ ಗಳನ್ನು ವೀರಣ್ಣನವರು ಹೇಳಿಕೊಡುತ್ತಿದ್ದರಂತೆ. ಅಮ್ಮ ಸುಂದರಮ್ಮ ಮಕ್ಕಳ ಗಕ್ಷೇಮ, ಊಟ, ಉಪಚಾರ, ನಾಟಕಕ್ಕೆ ಸಿದ್ಧಪಡಿಸುವುದು, ನಾಟಕದಲ್ಲಿ ಸರಿಯಾದ ಕ್ಕೆ ಪ್ರವೇಶ ಮಾಡಿಸುವುದು, ಆಕಳಿಸಿದಾಗ ಅಲ್ಲಿಯೇ ಜಮಖಾನ ಹಾಸಿ ಮಲಗಿಸಿ ಪ್ರವೇಶ ಬಂದಾಗ ಎಬ್ಬಿಸಿ ಕಳಿಸುವುದು ಮೊದಲಾದ ಜವಾಬ್ದಾರಿಗಳನ್ನು ಯಿಸುತ್ತಿದ್ದರಂತೆ.

ಹೀಗೆಯೇ ರಂಗಮನೆಯಲ್ಲಿ ಬೆಳೆದ ಇವರಿಗೆ ಕಂಪನಿ, ಮನೆ ಅಂತ ಭೇದವಿಲ್ಲದೆ ನಾಟಕವೇ ಆಗಿಬಿಟ್ಟಿತ್ತು. ಹೆಣ್ಣು, ಗಂಡು ಪಾತ್ರಗಳ ಭೇದವಿಲ್ಲದೆ ಬಣ್ಣ ಹಚ್ಚಿದರು. ರದ ಪಾತ್ರಗಳನ್ನು ನಿಭಾಯಿಸುತ್ತಿದ್ದರು. ಗೋಪಿಯರು, ಸಖಿಯರು, ದ್ರೌಪದಿ, ರುಕ್ಮಿಣಿ, ತ್ರಿ, ದೇವಯಾನಿ, ಕೈಕೇಯಿ ಹೀಗೆ ಅಭಿನಯಿಸಿದ ಪಾತ್ರಗಳ ಪಟ್ಟಿ ಬೆಳೆಯುತ್ತಲೇ ಗುತ್ತದೆ. ಮಾಲತಮ್ಮ ಮತ್ತು ಸ್ವರ್ಣಮ್ಮನರವರಿಲ್ಲದ ನಾಟಕಗಳೇ ಇರುತ್ತಿರಲಿಲ್ಲ. ವತಾರ'ದ ಜಯವಿಜಯರ ಪಾತ್ರ, 'ಅಡ್ಡದಾರಿ' ನಾಟಕದ ಚಿಕ್ಕ ಸೊಸೆಯ ಪಾತ್ರ, ಚಕ್ರ' ನಾಟಕದಲ್ಲಿನ ಮುಗ್ಧ ಹುಡುಗಿಯ ಪಾತ್ರ, 'ರಾಜಾ ಗೋಪಿಚಂದ್' ನಾಟಕದ ಪ್ ಪಾತ್ರ, ಕರಿಹುಡುಗಿ ಪಾತ್ರ, ಸಾವಿತ್ರಿ ಪಾತ್ರ, ಲವಕುಶದ ಸೀತೆಯ ಪಾತ್ರಗಳನ್ನು ೂ ಕಣ್ಣು ಮುಂದೆ ತಂದುಕೊಂಡು ತಾವು ಅಭಿನಯಿಸುತ್ತಿದ್ದ ವೈಖರಿಯನ್ನು ಸುತ್ತಾರೆ. 'ರಾಜಾ ಗೋಪಿಚಂದ್' ನಾಟಕದಲ್ಲಿ ಅಭಿನಯಿಸುತ್ತಿದ್ದ ವ್ಯಾಂಪ್ ಪಾತ್ರದ ಶನಕ್ಕೆ ಜನ ರೊಚ್ಚಿಗೆದ್ದು ಹೊಡೆಯಲೆಂದೇ ಬಂದಾಗ ಹೆದರಿ ಓಡಿ ಸೈಡ್‌ವಿಂಗ್‌ನಲ್ಲಿ ಕೊಂಡ ಕಥೆಯನ್ನು, ನಂತರ ಅಪ್ಪ "ನಿನ್ನ ಅಭಿನಯ ಪರಿಣಾಮಕಾರಿಯಾಗಿದೆ, ದೆ ಹೋಗಿ ಅಭಿನಯಿಸು" ಎಂದು ಧೈರ್ಯ ತುಂಬಿ ಕಳಿಸಿದ್ದನ್ನು ನೆನೆಯುತ್ತಾರೆ. ಸೀತೆಯ ಅಭಿನಯಿಸುವಾಗ ಸೀತೆಯ ಪ್ರಲಾಪಕ್ಕೆ ನಾಕಾಣೆ ಕ್ಲಾಸ್‌ನಲ್ಲಿ ಕುಳಿತು ನಾಟಕ ತುತ್ತಿದ್ದ ಗರ್ಭಿಣಿಗೆ ಹೆರಿಗೆನೋವು ಪ್ರಾರಂಭವಾಗಿ, ಕಂಪನಿಯ ಕಾರ್‌ನಲ್ಲೇ ಆಕೆಯನ್ನು ಗ ಸೇರಿಸಿದಾಗ ಹುಟ್ಟಿದ ಅವಳಿ-ಜವಳಿ ಮಕ್ಕಳಿಗೆ ಲವ-ಕುಶ ಎಂದೇ ಹೆಸರಿಟ್ಟ ನ್ನು ಸಂಭ್ರಮದಿಂದ ಹೇಳುತ್ತಾರೆ. ಇಷ್ಟೆಲ್ಲ ಅನುಭವದ ಇವರಿಗೆ ಸಿನಿಮಾದಿಂದಲೂ ನವಿತ್ತು. ಆದರೆ ಗುಬ್ಬಿ ವೀರಣ್ಣನವರು ಇವರನ್ನು ಕಳಿಸಿರಲಿಲ್ಲವಂತೆ. ಇವರಿಗೆ ಸಿನಿಮಾ ಮ್ಮೆ ಅಭಿನಯಿಸಬೇಕೆಂಬ ಆಸೆಯಿತ್ತು. ಕೊನೆಗೊಮ್ಮೆ 'ಸುಭದ್ರ' ಸಿನಿಮಾದಲ್ಲಿ ಉಲೂಪಿ ನನ್ನು ಮಾಡಿದ್ದರಂತೆ. ಅಲ್ಲಿಗೆ ಅವರ ಸಿನಿಮಾ ಆಸೆ ಮುಗಿಯಿತು. ರಂಗಭೂಮಿ ವ ಸಂತೋಷ ಮತ್ತು ಸ್ವಾತಂತ್ರ್ಯ ಎರಡನ್ನೂ ಸಿನಿಮಾ ಕೊಡುವುದಿಲ್ಲ ಎಂಬ ರಕ್ಕೆ ಬಂದವರೇ ನಾಟಕಕ್ಕೆ ಮೀಸಲಾದರು. "ನಾವು ಆಗರ್ಭ ಶ್ರೀಮಂತರಲ್ಲ ೂ ಆಗರ್ಭ ಕಲಾವಿದರಮ್ಮ" ಎಂದು ಹೆಮ್ಮೆಯಿಂದ ಹೇಳುತ್ತಾರೆ.

ಹೀಗೆ ರಂಗಭೂಮಿಯನ್ನೇ ಉಸಿರು, ಅದೇ ಜೀವನ, ಅಲ್ಲಿಯೇ ಸಾಯಬೇಕು ಅಂತೆಲ್ಲ ಂಕೊಳ್ಳುತ್ತಿದ್ದ ಮಾಲತಮ್ಮನನ್ನು, ಅವರಪ್ಪ ಆಕೆ ಒಲ್ಲದ ಗಂಡೊಬ್ಬನೊಡನೆ ಮದುವೆ ಸಲು ಹೇಳುತ್ತಾರೆ. ತನಗೆ ಮನಸ್ಸಿಲ್ಲ ಎಂಬುದನ್ನು ವ್ಯಕ್ತಪಡಿಸಿದರೂ "ನಿನ್ನನ್ನು ಅವನಿಗೆ ವೆ ಮಾಡಿಕೊಡುವುದಾಗಿ ಮಾತು ಕೊಟ್ಟಿದ್ದೇನೆ. ಮಾನ ಉಳಿಸು" ಎಂದೊಡನೆ ಅಪ್ಪನ ಕ್ಕಿಂತಲೂ ನನ್ನ ಜೀವನ ದೊಡ್ಡದಲ್ಲ ಎಂದು ಆತನನ್ನೇ ಮದುವೆಯಾಗುತ್ತಾರೆ. ನೆನಿಸಿಕೊಂಡವನು ಮದುವೆಯ ನಂತರ ಬಣ್ಣ ಹಚ್ಚಕೂಡದೆಂಬ ಷರತ್ತು ಹಾಕಿದೊಡನೆ ಮಾಲತಮ್ಮನವರು ದುಃಖಿಸುತ್ತಾ ಅನಿವಾರ್ಯವಾಗಿ ಗಂಡನ ಜೊತೆಯಾಗುವರು. ಆತ ಹೇಳಿದಂತೆಯೇ ಬದುಕುತ್ತಾರೆ. ಮತ್ತೆ ಬಣ್ಣ ಹಚ್ಚಲಾರೆ ಎಂಬ ವಾಸ್ತವವನ್ನು ಒಪ್ಪಿಕೊಳ್ಳುತ್ತಾರೆ.

ಪ್ರತಿ ದಸರಾ ಹಬ್ಬಕ್ಕೂ ಮೈಸೂರಿನ ಅರಮನೆಯಲ್ಲಿ ಗುಬ್ಬಿ ಕಂಪನಿಯ ನಾಟಕ ಇರುತ್ತಿತ್ತು. ಅಕ್ಕಮಹಾದೇವಿ ನಾಟಕ ಎಂಬುದಾಗಿ ತಿಂಗಳ ಮೊದಲಿನಿಂದಲೇ ಪ್ರಚಾರ ಕಾರ್ಯವೂ ಭರದಿಂದ ಸಾಗಿತ್ತು. ಇನ್ನೇನು ನಾಟಕದ ದಿನ ಹತ್ತಿರ ಬರುತ್ತಿದ್ದ ಹಾಗೆ ಅಕ್ಕಮಹಾದೇವಿ ಪಾತ್ರ ಅಭಿನಯಿಸುತ್ತಿದ್ದ ಸ್ವರ್ಣಮ್ಮನವರು ಅನಾರೋಗ್ಯದ ನಿಮಿತ್ತ ಪಾತ್ರ ವಹಿಸದಂತಾದರು. ದಿಕ್ಕು ತೋಚದಂತಾದ ಕಂಪನಿ ಮಾಲತಮ್ಮನವರನ್ನು ಆ ಪಾತ್ರ ವಹಿಸಬೇಕೆಂದು ಕೇಳಿಕೊಂಡಿತು. ಗಂಡನ ಅಪ್ಪಣೆ ಇಲ್ಲದೆ ಅಭಿನಯಿಸಲಾರೆ ಎಂದ ಮಾಲತಮ್ಮನವರ ಮಾತಿಗೆ ಗಂಡನ ಅಪ್ಪಣೆಗಾಗಿ, ಕಾರ್ಯನಿಮಿತ್ತ ಬೇರೆ ಊರಿನಲ್ಲಿದ್ದ ಗಂಡನಿಗೆ ತಂತಿ ಕಳಿಸಿದರು. ಆದರೆ ಆತ ಉತ್ತರಿಸಲಿಲ್ಲವಾಗಿ, ಮಾಲತಮ್ಮನವರು ಸ್ವರ್ಣಮ್ಮನನ್ನು ಕಾಣುವ ಸಲುವಾಗಿ ಊರುಬಿಟ್ಟು ಮೈಸೂರಿಗೆ ಬಂದರು. ಗಂಡನಿಂದ ಉತ್ತರ ಬಾರದೆ ಅವರು ಮನಸ್ಸಿನಲ್ಲಿಯೇ ನಿರ್ಧರಿಸಿಕೊಂಡರು. ಏನಾದರಾಗಲೀ ಗುಬ್ಬಿ ವೀರಣ್ಣನವರ ಮರ್ಯಾದೆಯ ಮುಂದೆ ಎಲ್ಲವೂ ಗೌಣವೆಂದೆನಿಸಿ, ಅಪ್ಪನ ಪೇಟವನ್ನು ಕೆಳಗಿಳಿಸಲಾರೆ ಎಂದುಕೊಂಡರು. ಅಪ್ಪನ ಮಾನ ಉಳಿಸಬೇಕೆಂಬ ಯಾವ ಕಾರಣಕ್ಕೆ ಅವರು ಹಿಂದೆ ಒಲ್ಲದ ಗಂಡಿನೊಡನೆ ಮದುವೆಯಾಗಿದ್ದರೋ ಈಗಲೂ ಅದೇ ಕಾರಣಕ್ಕೆ ನಟಿಸಿಬಿಡುವ ನಿರ್ಧಾರ ತೆಗೆದುಕೊಂಡು ತಾಲೀಮು ಪ್ರಾರಂಭಿಸಿಯೇಬಿಟ್ಟರು. ನಾಟಕದ ದಿನ ಅಲ್ಲಿಗೆ ಬಂದ ಆಕೆಯ ಗಂಡ ಹೇಳಿದ್ದು ಒಂದೇ ಮಾತು – "ನಿನಗೆ ಗಂಡ ಬೇಕೋ, ನಾಟಕ ಬೇಕೋ ಇಂದೇ ಆರಿಸಿಕೊ" ಎಂದು. ಪ್ರೇಕ್ಷಾಂಗಣದಲ್ಲಿ ಜನ ಕಿಕ್ಕಿರಿದು ತುಂಬಿದ್ದರು. ಅದನ್ನೊಮ್ಮೆ ಕಂಡ ಮಾಲತಮ್ಮನವರು ಗಟ್ಟಿ ಮನಸ್ಸು ಮಾಡಿ, ಹೊಟ್ಟೆಯೊಳಗೆ ಕಂದಮ್ಮನಿದ್ದರೂ ಧೈರ್ಯಗೆಡದೆ ಏನಾದರಾಗಲಿ ಎಂಬಂತೆ "ನನಗೆ ಇವತ್ತಿನ ನಾಟಕ ಮುಖ್ಯ. ಅದನ್ನು ಮುಗಿಸಿ ಬಣ್ಣವನ್ನು ತೆಗೆಯದೆ ನಿಮ್ಮೊಡನೆ ಬರುತ್ತೇನೆ, ಅದಕ್ಕೆ ಅವಕಾಶ ಮಾಡಿಕೊಡಿ" ಎಂದು ಕೇಳಿಕೊಂಡರು. ಗಂಡ ಒಪ್ಪಲಿಲ್ಲ. ಆದರೆ ನಾಟಕದೊಳಗೆ ಪಾತ್ರ ಮಾಡಿಯೇ ತೀರುವೆನೆಂದು ನಿರ್ಧರಿಸಿಕೊಂಡಿದ್ದ ಮಾಲತಮ್ಮನವರು ನಾಟಕದಲ್ಲಿ ಗಂಡನನ್ನು ಬಿಟ್ಟು ಚೆನ್ನಮಲ್ಲಿಕಾರ್ಜುನನನ್ನು ಅರಸುತ್ತಾ ಹೋಗುವ ಅಕ್ಕಮಹಾದೇವಿ ಪಾತ್ರವನ್ನು ಅಭಿನಯಿಸಿದರು. ಒಂದರ್ಥದಲ್ಲಿ ಗಂಡನನ್ನು ಬಿಟ್ಟು ಅವರ ಬದುಕಿನ ಉಸಿರಾದ ರಂಗಭೂಮಿಯನ್ನು ಅರಸುತ್ತಾ ನಡೆದು ಬಿಟ್ಟಿದ್ದರು. ಬದುಕಿನ ಒಂದು ಅಧ್ಯಾಯ ಮುಗಿದಿತ್ತು.



ನಂತರ ತಮ್ಮ ಜೀವನವನ್ನು ಮತ್ತೆ ಗುಬ್ಬಿ ಕಂಪನಿಯಲ್ಲೇ ಮುಂದುವರಿಸಿದರು. ಆಗ ಲವ-ಕುಶ ನಾಟಕ ಹೆಚ್ಚು ಹೆಸರು ಮಾಡಿತ್ತು. ಆ ನಾಟಕದಲ್ಲಿ ಸೀತೆ ಪಾತ್ರ ಅಭಿನಯಿಸುತ್ತಿದ್ದ ಮಾಲತಮ್ಮನವರನ್ನು ಮತ್ತು ರಾಮನ ಪಾತ್ರ ಮಾಡುತ್ತಿದ್ದ ಬಸವರಾಜು ಅವರನ್ನು ಜನರು ರಾಮ-ಸೀತೆ ಎಂದೇ ಗುರುತಿಸುವಷ್ಟು ಜನಪ್ರಿಯವಾಗಿತ್ತು. ಇದೇ ಸಂದರ್ಭದಲ್ಲಿ ತಂದೆಯವರ ಆಶೀರ್ವಾದದೊಂದಿಗೆ ಮಾಲತಮ್ಮನವರು ಬಸವರಾಜು ಅವರನ್ನು ಮದುವೆಯಾದರು. ಈ ಮೂಲಕ ಬದುಕಿನ ಎರಡನೇ ಅಧ್ಯಾಯ ಪ್ರಾರಂಭವಾಗಿತ್ತು. ಲವ-ಕುಶ ನಾಟಕವಂತು ಅವರಿಬ್ಬರಿಗೂ ಕೀರ್ತಿ ತಂದುಕೊಟ್ಟಿತ್ತು. ಹೀಗಿರುವಾಗ್ಗೆ, ನವೆಂಬರ್ ೪, ೧೯೬೪ರ ದಿವಸ ಗಾಂಧಿನಗರದಲ್ಲಿ 'ಲವ-ಕುಶ' ನಾಟಕ ಪ್ರದರ್ಶನ ಇತ್ತು. ನಾಟಕದಲ್ಲಿ ಸೀತೆ ರಾಮನಿಂದ ತ್ಯಕ್ತಳಾಗುವ ದೃಶ್ಯದಲ್ಲಿ ಪ್ರಲಾಪಿಸುತ್ತ, ಕೊನೆಗೆ ಆತ್ಮಹತ್ಯೆ ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ರಂಗದಿಂದ ನಿರ್ಗಮಿಸುವ ದೃಶ್ಯ. ಹೀಗೆ ನಿರ್ಗಮಿಸಿದ ಮಾಲತಮ್ಮನವರು ರಂಗದ ಮತ್ತೊಂದು ಕಡೆಯಿಂದ ಪ್ರವೇಶ ತೆಗೆದುಕೊಳ್ಳಲು ಒಳಗಡೆ ಬರುವಾಗ್ಗೆ ನೆಲದ ಮೇಲಿದ್ದ ವೈರ್ ಮೇಲೆ ಕಾಲಿಟ್ಟ ಕಾರಣ ಕರೆಂಟು ಹೊಡೆಯಿತು. ಪ್ರಾಣವೇ ಹೋದಂತಾಗಿ ಚೀರತೊಡಗಿದರು. ಅವರನ್ನು ಅಪಾಯದಿಂದ ಪಾರುಮಾಡಲು ಎಲ್ಲರೂ ಎಲ್ಲಕಡೆ ಓಡಾಡಿದರು. ಸ್ವಿಚ್‌ಗಳನ್ನು ಹುಡುಕಾಡಿದರು. ನಂತರ ಮೈನ್ ಸ್ವಿಚ್ ಆರಿಸಿದ ತಕ್ಷಣ ಎಲ್ಲ ಕಡೆ ಕತ್ತಲು, ಹೊರಗಡೆ ಪ್ರೇಕ್ಷಕರ ಗಾಬರಿ, ಹಾರಾಟ, ಚೀರಾಟ, ಭೀಕರ ಶಬ್ದಗಳು – ಇವು ಸಂದರ್ಭವನ್ನು ಮತ್ತಷ್ಟು ಭೀಕರಗೊಳಿಸಿದ್ದವು. ಮಾಲತಮ್ಮನವರ ಸ್ಥಿತಿಯಂತೂ ಚಿಂತಾಜನಕವಾಗಿತ್ತು. ಕರೆಂಟು ಹೊಡೆದು ಆಕೆಯ ಎರಡೂ ಕಾಲುಗಳು ಒಂದಕ್ಕೊಂದು ಸುತ್ತಿಕೊಂಡು ಮೂಳೆಗಳು ಮುರಿದಿದ್ದವು. ಸುತ್ತಿಕೊಂಡ ಕಾಲುಗಳನ್ನು ಬಿಡಿಸಿ ಆಸ್ಪತ್ರೆಗೆ ಒಯ್ದಿದ್ದರು. ತನ್ನ ನಾಲ್ಕನೆಯ ವಯಸ್ಸಿನಿಂದಲೂ ರಂಗದ ಮೇಲೆ ಬಗೆ ಬಗೆಯ ಪಾತ್ರಗಳನ್ನು ನಿರ್ವಹಿಸಿ ಸತತವಾಗಿ ಮೂವತ್ತೈದು ವರ್ಷಗಳ ಕಾಲ ಒಂದೇ ಸಮ ವಿಶ್ರಾಂತಿಯೆಂಬುದಿಲ್ಲದೆ ರಂಗಭೂಮಿಯಲ್ಲಿ ಕೆಲಸ ಮಾಡುತ್ತಿದ್ದ ಆಕೆಗೆ ವಿದ್ಯುಚ್ಛಕ್ತಿಯ ಸೋಂಕಿನ ದೆಸೆಯಿಂದ ಬಲವಂತ ನಿವೃತ್ತಿ ದೊರಕಿದಂತಾಗಿತ್ತು. ಒಂಬತ್ತು ತಿಂಗಳ ಕಾಲ ಸತತವಾಗಿ ಆಸ್ಪತ್ರೆಯಲ್ಲಿಯೇ ಇದ್ದು ಗಂಡ ಬಸವರಾಜ ಅವರ ನಿರಂತರ ಆರೈಕೆಯಿಂದಾಗಿ ಮನೆಗೆ ಬಂದರು. ಮರುಜನ್ಮ ಪಡೆದು ಮನೆಗೆ ಬಂದ ಮಾಲತಮ್ಮನವರು ತನ್ನ ಮಹಡಿ ಮನೆಯ ದೊಡ್ಡ ಕಿಟಕಿಯ ಮುಂದೆ ಕುರ್ಚಿಯ ಮೇಲೆ ಕುಳಿತು ಹೊರಗಡೆ ಪ್ರಪಂಚಕ್ಕೆ ತೆರೆದುಕೊಂಡರು. ಕಿಟಕಿಯ ಚೌಕಟ್ಟಿನಿಂದ ಕಾಣುವ ಪ್ರಪಂಚವಷ್ಟೆ ಅವರದಾಯಿತು.

ಈ ದುರಂತದಿಂದಾಗಿ ಕೇವಲ ಮಾಲತಮ್ಮನವರಷ್ಟೇ ಅಲ್ಲ, ಪತಿ ಬಸವರಾಜ ಕೂಡ ಅಭಿನಯದಿಂದ ಬಿಡುವು ತೆಗೆದುಕೊಂಡಿದ್ದರು. ರಾಮನ ಪಾತ್ರವನ್ನು ಮೈದುನ ಚೆನ್ನಬಸವಣ್ಣನವರು ಮಾಡುತ್ತಿದ್ದರು. ಚಿಕ್ಕನಾಯಕನಹಳ್ಳಿಯಲ್ಲಿ ನಾಟಕ ನಡೆಯುತ್ತಿತ್ತು. ಗುಬ್ಬಿ ವೀರಣ್ಣನವರ ನಾಲ್ಕನೆಯ ಮಗ ಶಿವರಾಜ ಮತ್ತು ಬಸವರಾಜ ಅವರು ಆ ನಾಟಕವನ್ನು ನೋಡಲು ಹೊರಟರು. ಮಾಲತಮ್ಮನವರಿಗೆ ತಾವು ಬೇಗನೇ ಬಂದುಬಿಡುವುದಾಗಿ ಹೇಳಿ ಹೊಸ ಸ್ಕೂಟರಿನಲ್ಲಿ ಅವರಿಬ್ಬರೂ ಪ್ರಯಾಣ ಬೆಳೆಸಿದರು. ಕಿಟಕಿಯ ಚೌಕಟ್ಟಿನಿಂದಲೇ ಕೈ ಬೀಸಿ ಮಾಲತಮ್ಮನವರು ಅರ್ಧ ಮನಸ್ಸಿನಿಂದಲೇ ಪತಿಯನ್ನು ಬೀಳ್ಕೊಟ್ಟರು. ಹಾಗೆ ಕೈ ಬೀಸಿ ಕಳಿಸಿಕೊಟ್ಟದ್ದೇ ಕೊನೆ, ಮತ್ತೆ ತನ್ನ ಪತಿಯನ್ನು ಅವರು ಜೀವಂತವಾಗಿ ನೋಡಲಾಗಲಿಲ್ಲ. ನಾಟಕ ಮುಗಿಸಿ ವಾಪಸ್ಸು ಬರುವಾಗ ಸ್ಕೂಟರ್ ಸ್ಕಿಡ್ ಆಗಿ ಅವರಿಬ್ಬರೂ ತೀವ್ರ ಸ್ವರೂಪದಲ್ಲಿ ಗಾಯಗೊಂಡಿದ್ದರು. ತಲೆಗೆ ಪೆಟ್ಟು ಬಿದ್ದಿದ್ದು, ಬಸವರಾಜ ಅವರು ಮಾಲತಮ್ಮನವರನ್ನು ಬಿಟ್ಟು ತಮ್ಮ ಅಂತಿಮ ಪ್ರಯಾಣ ಮುಗಿಸಿದ್ದರು.

ದುರಂತಗಳ ಮಾಲೆ ರಂಗನಾಯಕಿ ಮಾಲತಮ್ಮನವರ ಕೊರಳಿಗೆ ಬೀಳತೊಡಗಿತ್ತು. ಆಗ ಅಕ್ಕ ಸ್ವರ್ಣಮ್ಮನವರು ಬೆನ್ನಿಗೆ ನಿಂತರು. ಅಪ್ಪನೊಡನೆ ಮಾಲತಮ್ಮನವರಿಗೊಂದು ವ್ಯವಸ್ಥೆ ಮಾಡುವಂತೆ ಹೋರಾಡಿದರು. ಪರಿಹಾರ ನೀಡುವಂತೆ ಒತ್ತಾಯಿ... ಆಗ ಕಂಪನಿ ಈಕೆಗೆ ತಿಂಗಳಿಗೆ ೧೦೦ ರೂ. ಕೊಡಲು ಒಪ್ಪಿಗೆ ನೀಡಿತು. ತನ್ನ ಜೀವನವನ್ನು ಈ ಕಂಪನಿಗಾಗಿ ಮುಡಿಪಾಗಿಟ್ಟು, ದುಡಿದಿದ್ದಕ್ಕೆ ಕೇವಲ ... ರೂ.ಗಳನ್ನು ಕೊಡಲು ಒಪ್ಪಿಕೊಂಡ ಸಂದರ್ಭವನ್ನು ... ಕೊಂಡು ಈಗಲೂ ಕಣ್ಣೀರಿಡುವ ಮಾಲತಮ್ಮನವ... ಹಣ ಮಕ್ಕಳ ಹಾಲಿಗಾದರೂ ಆಯಿತೆಂದುಕೊ... ಸುಮ್ಮನಾದೆ ಎಂದು ಮರುಗುತ್ತಾರೆ. ಅಕ್ಕ ಸ್ವರ್ಣ... ಸಹಾಯ ಸಂಪೂರ್ಣ ದೊರೆತು ತನ್ನ ಮ... ಜಯಶ್ರೀ, ಪದ್ಮಶ್ರೀ ಅವರನ್ನು ದೊಡ್ಡವ... ಮಾಡಿದರು. ಇಬ್ಬರು ಹೆಣ್ಣುಮಕ್ಕಳೂ ... ಭೂಮಿಯಲ್ಲೇ ತಮ್ಮನ್ನು ಗುರುತಿಸಿಕೊ... ಅಲ್ಲಿಯೇ ಕೆಲಸ ಮಾಡುತ್ತಿರುವುದು ಅ... ಹೆಮ್ಮೆಯ ಸಂಗತಿ. ನಂತರದ ದಿನಗಳಲ್ಲಿ ... ಶಿವಾನಂದನೊಂದಿಗೆ, ಮಗಳು ಜ... ಯೊಂದಿಗೆ ಕೆಲವು ನಾಟಕಗಳಲ್ಲಿ ಅಭಿ... ದರಾದರೂ ಮತ್ತೆ ಮೊದಲಿನಂತೆ ರಂಗಭೂ... ಯಲ್ಲಿ ತೊಡಗಿಸಿಕೊಳ್ಳಲಾಗಲಿಲ್ಲ. ಒಡವೆ ... ಮಾಡಿಕೊಡುವುದು, ಉಡುಪು ಧರಿಸು... ಹೇಳಿಕೊಡುವುದು ಮುಂತಾದ ಕೆಲಸ... ಭಾಗಿಯಾದರೂ ತಮ್ಮ ನಾಟಕಗಳೇ ಬೇರೆ, ಈಗಿನವು ಬೇರೆಯಾದ್ದರಿಂದ ಪ್ರೇಕ್ಷಕಿಯಾಗಿ ಉಳಿದರು. ಹಳೆಯ ದಿ... ನೆನಪುಗಳಲ್ಲಿಯೇ ಜೀವನ ಸವೆಸಿದ ಈ ಹಿರಿಯ ಜೀವಕ್ಕೆ ಈಗ ಎ... ಆಸುಪಾಸು. ಜೀವನ ಹೀಗಾಗಿ ಹೋಯಿತೆಂದು ಕೊರಗದೆ ತನ್ನೆರಡು ಮ... ರಂಗಭೂಮಿಗೆ ನೀಡಿದೆ ಎಂಬ ಸಮಾಧಾನದಲ್ಲಿದ್ದಾರೆ. ಈಗಲೂ ತಮ್ಮ ... ನಾಟಕಗಳನ್ನು ನೋಡಲು ಗಾಲಿ ಕುರ್ಚಿಯ ಮೇಲೆ ಸಾಗುತ್ತಾರೆ.

ಇವರ ಮೂವತ್ತೈದು ವರ್ಷಗಳ ಸಾಧನೆಗೆ ಸಿಕ್ಕ ಪ್ರಶಸ್ತಿಗಳು ಹಲವು. ಹಲ... ಸಂಘ ಸಂಸ್ಥೆಗಳು ಈಕೆಯ ಸಾಧನೆಗೆ ಗೌರವ ಸಲ್ಲಿಸಿವೆ. ಕರ್ನಾಟಕ ... ಅಕಾಡೆಮಿ ಪ್ರಶಸ್ತಿ ಮತ್ತು ಗುಬ್ಬಿ ವೀರಣ್ಣ ಪ್ರಶಸ್ತಿಗಳು ಇವರ ಪಾಲಾಗಿವೆ. ಇತ್ತೀ... ಪುಣೆಯಲ್ಲಿ ಅಮೋಲ್ ಪಾಲೇಕರ್ ಮತ್ತು ಮಿತ್ರರು ಮಾಲತಮ್ಮನ... ಅದ್ದೂರಿಯ ಸನ್ಮಾನ ಮಾಡಿದ್ದಾರೆ.

ಆ ಕಾಲದಲ್ಲಿಯೇ ತನ್ನ ವ್ಯಕ್ತಿತ್ವವನ್ನು ಪ್ರತಿಪಾದಿಸಿಕೊಂಡ ಛಾತಿ, ಬದುಕಿನ ಸ... ಗಳನ್ನು ಎದುರಿಸಿದ ಎದೆಗಾರಿಕೆ, ಬದುಕಿನ ಕಹಿ ಅನುಭವಗಳ ಮಧ್ಯೆಯೂ ಮ... ಕಹಿಯಾಗಿಸಿಕೊಳ್ಳದೆ ಮಗುವಿನಂತೆ ನಗುನಗುತ್ತಲೇ ಮಾತನಾಡುವ ... ಉತ್ಸಾಹ, ಎಲ್ಲವೂ ಮುಂದಿನ ಪೀಳಿಗೆಯವರಿಗೆ ಅವರು ತೋರಿಸುವ ದಾರಿದೀ... ದೀಪದ ಮಂದ ಬೆಳಕಿನಲ್ಲಿಯೇ ಜೀವನೋತ್ಸಾಹದ ಬಣ್ಣ ಹಚ್ಚಿ, ಪತಿ... ನೆನೆಯುತ್ತಾ, ತಾವು ತುಂಬ ಇಷ್ಟಪಡುತ್ತಿದ್ದ 'ತೊರೆದನೆನ್ನ ಪತಿ ನಿರ್ದಯದ... ಹಾಡನ್ನು ಮನಸ್ಸಿನೊಳಗೇ ಹಾಡಿಕೊಳ್ಳುತ್ತ ಮಾಲತಮ್ಮನವರು ತನ್ನ ನೆ... ಬಂಡಿಯ ಮೇಲೆ ಚಲಿಸುತ್ತಿದ್ದಾರೆ.



ಮಂಗಳಾ ಎನ್.
೯೦/೨, ೨ನೇ ಮುಖ್ಯ ರಸ್ತೆ, ೨ನೇ ಕ್ರಾಸ್, ಮಾರೇನಹಳ್ಳಿ, ಮಾರುತಿ ಲೇಔಟ್
ವಿಜಯನಗರ, ಬೆಂಗಳೂರು - ೪೦



# ಂದು ಗುಳಿಗೆಯ ಕ್ರಾಂತಿ

ಸಂಕುಲಜೀವ

ಈ ಬದುಕು ಒಂದು ಹರಿಯುವ ನದಿ. ಅದು ಎಂದೂ ನಿಂತ ನೀರಲ್ಲ ಎಂಬ
ು ಹೇಳಲು ಬಲು ಸುಲಭ. ಅಥವಾ ತಾರ್ಕಿಕ ಮಟ್ಟದಲ್ಲಿ ಇದನ್ನು ಒಪ್ಪಿ
್ಳುವದೂ ಕಷ್ಟವಲ್ಲ. ಆದರೆ ಈ ಬದುಕಿನ ಈ ಪ್ರವಾಹದ ಒಂದು ಭಾಗವೇ
ದ್ದುಕೊಂಡು ಈ ಬದುಕು ನಿಶ್ಚಲವಲ್ಲ; ಸದಾ ಚಲಿಸುವ ಮಹಾ ಸತ್ಯ ಎಂಬುದನ್ನು
ರಂಗದ ಆಂತರ್ಯದಲ್ಲಿ ಮನಗಾಣುವದು; ನಿತ್ಯ ಜೀವನದ ಹತ್ತು ವಿದ್ಯಮಾನ
, ಅದನ್ನು ಅನುಭವಿಸುವದು – ಹಾಗೆ ಒಂದೊಂದು ಘಟನೆ – ಅನುಭವದ
ವಾಗಿದ್ದಾಗಲೂ ಒಟ್ಟಂದದ ಗ್ರಹಿಕೆಯನ್ನು ಗಟ್ಟಿಯಾಗಿರಿಸಿಕೊಳ್ಳುವದು ಇದು
ಕಷ್ಟದ ಕೆಲಸ. ಇದನ್ನು ಸರಿಯಾಗಿ ತಿಳಿದುಕೊಂಡು ಶಕ್ಯವಾಗಿಸಿಕೊಳ್ಳದೆ
ದರೆ ನಮ್ಮ ಕಣ್ಣೆದುರಿಗೆ ಬದುಕಿನ ಅನೇಕ ತೆರೆಗಳು ಮುಂದೆ ಹೋಗಿ ನಮ್ಮ
ಮಾನದಲ್ಲಯೇ ಅನೇಕ ಬದಲಾವಣೆಗಳು ಘಟಿಸಿ ಯಾವಾಗಲೋ ಒಮ್ಮೆ
ಲ್ಲ ನಮ್ಮ ಅರಿವಿಗೆ ಬಂದು ನಮಗೆ ಆಶ್ಚರ್ಯ ಆಘಾತ ಉಂಟುಮಾಡುವವು.
ಹೌದಲ್ಲ, ಇದು ಇಲ್ಲಿಯೇ ನನ್ನ ಕಣ್ಣ ಮುಂದೆಯೇ ನಡೆಯುತ್ತಿದ್ದರೂ ನನ್ನ
ನಕ್ಕೇ ಬರಲಿಲ್ಲವಲ್ಲ' ಎಂದು ತಲೆ ಹೊಡೆದುಕೊಳ್ಳುವ ಹಾಗಾಗುತ್ತದೆ.

ಗರ್ಭ ಪ್ರತಿಬಂಧದ ವಿಷಯದಲ್ಲಿಯೂ ಹೀಗೆಯೇ ಆಗುತ್ತಿದೆ. ಗರ್ಭ ನಿರೋಧ
ುದು ಒಂದು ಸಾಮಾಜಿಕವಾಗಿ ಸ್ವೀಕೃತವಾದ ಸಂಗತಿಯಾಗಿ ನಮ್ಮ ಜತೆ ಕಳೆದ
ವರ್ಷಗಳಿಂದ ಇದ್ದರೂ ಅದು ವ್ಯಕ್ತಿ ವ್ಯಕ್ತಿಗಳಾಗಿ ನಮ್ಮನ್ನು, ನಮ್ಮ ದಾಂಪತ್ಯ
ೀವನವನ್ನು, ನಮ್ಮ ಕೌಟುಂಬಿಕ ಬದುಕನ್ನು, ನಮ್ಮ ಸಾಮಾಜಿಕ ಸಾಂಸ್ಕೃತಿಕ
ಕೀಯ ಬದುಕನ್ನು ಹೇಗೆ ಪ್ರಭಾವಿಸುತ್ತಿದೆ, ಹೇಗೆಲ್ಲ ಬದಲಾಯಿಸುತ್ತಿದೆ ಎಂಬುದು
ಗೆ ಇನ್ನೂ ಸರಿಯಾಗಿ ಗೊತ್ತಿಲ್ಲವೆಂಬುದು ನನ್ನ ಅಭಿಮತ. ಇದೇಕೆ ಹೀಗೆ
ುದಕ್ಕೆ ಬೇರೆ ಕಾರಣಗಳಿದ್ದರೂ ಇರಬಹುದು. ಆದರೆ ಇದರ ಒಂದು ಮುಖ್ಯ
ಣವೆಂದರೆ ಗರ್ಭ ನಿರೋಧವೆಂಬುದು ಕಾಮ, ಲೈಂಗಿಕತೆ ಹಾಗೂ ಬಹಳಷ್ಟು
ಟ್ಟಿಗೆ ಮಹಿಳೆಗೆ ಸಂಬಂಧಿಸಿದ ವಿಷಯವಾಗಿದೆ. ನಮ್ಮ ಸಮಾಜದಲ್ಲಿ ಇಂದಿಗೂ
ು, ಲೈಂಗಿಕತೆ ಹಾಗೂ ಮಹಿಳೆಯರ ಸಮಸ್ಯೆಗಳ ಕುರಿತಾದ ಚರ್ಚೆಯೆಂದರೆ
ದು ವಿಚಿತ್ರ ಮಡಿವಂತಿಕೆ, ಒಂದು ರೀತಿಯ ತಾತ್ಸಾರ. 'ಛೆ, ಅದು ಈಗ ಬೇಡ,
ಬೇಡ' ಅನ್ನುವ ಮನೋಭಾವ ವ್ಯಾಪಕವಾಗಿ ಮನೆ ಮಾಡಿಕೊಂಡಿದೆ. ಇವುಗಳ
ಕಡಿಮೆ ಚರ್ಚಿಸಿದಷ್ಟೂ ತಾವು ಹೆಚ್ಚು ಸುಸಂಸ್ಕೃತರು ಹಾಗೂ ಸಭ್ಯರು ಎಂದು
ಗಟ್ಟಿಯಾಗಿ ನಂಬಿ ಆ ಪ್ರಕಾರ ಬಾಳುತ್ತಿರುವವರೇ ಹೆಚ್ಚು ಜನ. ಹೌದು ಇದು
ಇಂದಿನ ನಮ್ಮ ಸ್ಥಿರ ವಾಸ್ತವ. ಆದರೆ ಬದುಕಿನ ನದಿ ಜಂಗಮ. ಅದು ಹರಿಯುತ್ತಲೇ
ಇದೆ. ಆದುದರಿಂದ ಬನ್ನಿ, ನಾವೂ ಕಣ್ಣು ಮುಚ್ಚಿದ ಬೆಕ್ಕುಗಳಾಗದೆ ಈ ಗರ್ಭ
ನಿರೋಧದ ದೂರಗಾಮಿ ಪರಿಣಾಮಗಳ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸೋಣ.

ಆದರೆ ನೇರವಾಗಿ ವಿಷಯಕ್ಕೇ ಹೋಗದೆ ಹಿನ್ನೆಲೆಯಾಗಿ ಕೆಲವು ಸಂಗತಿಯನ್ನು
ನೋಡೋಣ.

ನಾವು ಮನುಷ್ಯರೂ ಪ್ರಾಣಿಗಳು; ಆದರೂ ನಾವು ಪ್ರಾಣಿಗಳಲ್ಲ, ಮನುಷ್ಯರು!
ವಿಚಿತ್ರವಾಗಿದೆಯಲ್ಲವೆ ಈ ಮಾತು? ಆದರೆ ಲೈಂಗಿಕತೆಗೆ ಸಂಬಂಧಿಸಿದಂತೆ ಮಾತ್ರ
ಈ ಮಾತು ಸಂಪೂರ್ಣ ನಿಜ. ಬೇರೆ ಎಲ್ಲ ಪ್ರಾಣಿಗಳಂತೆಯೇ ಮನುಷ್ಯರಿಗೂ
ಕಾಮವೆಂಬುದು ಒಂದು ಸಹಜ ಹಸಿವು. ಆದರೆ ನಮ್ಮ ಕಾಮ-ಲೈಂಗಿಕತೆ ಮಾತ್ರ ಬೇರೆ
ಎಲ್ಲ ಪ್ರಾಣಿಗಳಿಗಿಂತಲೂ ತೀರ ಭಿನ್ನವಾದುದು. ಬಹತೇಕ ಬೇರೆಲ್ಲ ಪ್ರಾಣಿಗಳಿಗೂ
ಕಾಮ-ಮೈಥುನವೆಂಬುದು ವರ್ಷದ ಕೆಲವು ದಿನಗಳಿಗೆ ಸೀಮಿತವಾದ ಬೆದೆಯ
ಸಂದರ್ಭದಲ್ಲಿ ಮಾತ್ರ ಉದ್ದೀಪನಗೊಳ್ಳುವ ಹಸಿವು : ಬಾಕಿ ದಿವಸಗಳಲ್ಲಿ ಪ್ರಾಣಿಗಳದ್ದು
ಹೆಚ್ಚು ಕಡಿಮೆ ಅಲೈಂಗಿಕ ಬದುಕು. ಆದರೆ ನಾವು ಮನುಷ್ಯರು ಮಾತ್ರ ವರ್ಷ
ದುದ್ದಕ್ಕೂ ಕಾಮ-ಮೈಥುನ ಮಾಡಬಲ್ಲೆವು; ಫಲೀಕರಣ-ಗರ್ಭಧಾರಣೆ ಸಾಧಿಸ
ಬಲ್ಲೆವು. ನಿಸರ್ಗದ ಈ ವಿನ್ಯಾಸದ ಹಿಂದಿನ ಕಾರಣವೇನೋ ತಿಳಿಯದು. ಆದರೂ
ಇದು ದಿಟವಂತೂ ಹೌದು. ಅಲ್ಲದೆ ಬೇರೆ ಎಲ್ಲ ಪ್ರಾಣಿಗಳೂ ತಮ್ಮ ಕಾಮ-
ಲೈಂಗಿಕತೆಗೆ ಸಹಜ ಅಭಿವ್ಯಕ್ತಿ ಕೊಡುತ್ತವೆ. ಆದರೆ ನಾವು ಮನುಷ್ಯರು ಹಾಗಲ್ಲ.
ನಾವು ನಮ್ಮ ಲೈಂಗಿಕತೆಯನ್ನು ನಿಯಂತ್ರಿಸಿಕೊಳ್ಳುತ್ತೇವೆ-ಬದಲಾಯಿಸಿಕೊಳ್ಳುತ್ತೇವೆ.

ಬಹುಶಃ ನಾಗರಿಕತೆಯ ವಿಕಾಸದಲ್ಲಿ ಮನುಷ್ಯರು ಮೊಟ್ಟಮೊದಲು ನಿಯಂತ್ರಿಸಿ
ರೂಪಾಂತರಿಸಿಕೊಳ್ಳಲು ಪ್ರಾರಂಭಿಸಿದ್ದು ತಮ್ಮ ಕಾಮಜೀವನವನ್ನೇ ಎಂದು
ತೋರುತ್ತದೆ. ಅಂದರೆ ಸಾವಿರಾರು ವರ್ಷಗಳ ಹಿಂದೆ, ಮನುಷ್ಯರು ಇನ್ನೂ ಕಾಡು
ಮನುಷ್ಯರೇ ಆಗಿದ್ದಾಗ ಅವರ ಕಾಮಜೀವನವೂ ಸಂಪೂರ್ಣವಾಗಿ ಅನಿರ್ಬಂಧಿತ
ಹಾಗೂ ಸಹಜವಾದುದಾಗಿತ್ತು. ಆದರೆ ನಾಗರಿಕತೆಯ ಹಾದಿಯಲ್ಲಿ ಹೆಜ್ಜೆಯಿಡುತ್ತ
ಹೋದಂತೆ ಮನುಷ್ಯರು ಮನೆ, ಮದುವೆ, ಮನೆತನ, ಒಡಹುಟ್ಟಿದ ಸಂಬಂಧಗಳು,
ಆಸ್ತಿ ಇತ್ಯಾದಿಯೆಲ್ಲ ಮಾಡಿಕೊಳ್ಳುತ್ತ ಅದಕ್ಕನುಗುಣವಾಗಿ ತಮ್ಮ ಕಾಮಜೀವನವನ್ನೂ

ಬದಲಿಸುತ್ತ ಬಂದರು. ಗರ್ಭನಿರೋಧವೂ ಈ ಬದಲಾವಣೆಯ ಪ್ರಯತ್ನದ ಒಂದು ಭಾಗವಾಗಿತ್ತು. ಅರ್ಥಾತ್ ಗರ್ಭನಿರೋಧವೆಂಬುದೂ ನಾಗರಿಕತೆಯಷ್ಟೇ ಹಳೆಯದು. ಈ ಮಾತಿನಿಂದ ಬಹಳಷ್ಟು ಜನರಿಗೆ ಅಚ್ಚರಿಯಾಗಬಹುದು. ಯಾಕೆಂದರೆ ''ನಮ್ಮ ಅಜ್ಜನ ಕಾಲದಲ್ಲಿ ಗರ್ಭನಿರೋಧ ಇರಲೇ ಇಲ್ಲ; ನಮ್ಮ ಅಜ್ಜಿಗೆ ಹನ್ನೆರಡು ಮಕ್ಕಳು ; ಗರ್ಭನಿರೋಧ ಎಂಬುದು ತೀರ ಇತ್ತೀಚಿನ ವಿಷಯ'' ಎಂದು ವಾದಿಸುವವರೇ ಹೆಚ್ಚು. ಹಾಗಾದರೆ ಸತ್ಯ ಯಾವದು ?

ಹೌದು, ಇತ್ತೀಚಿನವರೆಗೂ ಬಹುಸಂಖ್ಯಾತ ದಂಪತಿಗಳು 'ದೇವರು ಮಕ್ಕಳನ್ನು ಕೊಡುತ್ತಾನೆ; ಆತ ಕೊಟ್ಟಷ್ಟನ್ನು ಉಡಿಯಲ್ಲಿ ತುಂಬಿಕೊಳ್ಳುವದಷ್ಟೇ ನಮ್ಮ ಕೆಲಸ' ಎಂದೇ ನಂಬಿದ್ದರು. ಆದರೆ ಅನಾದಿ ಕಾಲದಿಂದಲೂ ಜಗತ್ತಿನ ಎಲ್ಲ ಸಂಸ್ಕೃತಿಗಳಲ್ಲೂ ಶೇಕಡ ಒಂದರಷ್ಟು ಸಣ್ಣ ಪ್ರಮಾಣದ ಮಹಿಳೆಯರು ತಮ್ಮದೇ ಆದ ಅಗತ್ಯ ಅನಿವಾರ್ಯತೆಗಳಿಗಾಗಿ ಗರ್ಭನಿರೋಧ ಹಾಗೂ ಅನಿಚ್ಛಿತ ಗರ್ಭ ಸಂಭವಿಸಿದಾಗ ಗರ್ಭಪಾತ ಎರಡನ್ನೂ ಅನುಸರಿಸುತ್ತಿದ್ದರು. ಹಾಗಾದರೆ ಪರಿಚಿತ ಚರಿತ್ರೆಯಲ್ಲಿ ಇದರ ವಿವರಗಳು ಯಾಕೆ ದಾಖಲಾಗಿಲ್ಲ? ಯಾಕೆಂದರೆ, ದಾಖಲಾಗಿರುವ ಬಹುತೇಕ ಚರಿತ್ರೆ ಪುರುಷರ ದೃಷ್ಟಿಕೋನದಿಂದ ದಾಖಲಾಗಿದೆ ಹಾಗೂ ಗರ್ಭನಿರೋಧ ಹಾಗೂ ಗರ್ಭಪಾತ ಇವು ಮಹಿಳೆಯರಿಗೇ ಸೀಮಿತವಾದ, ಅಷ್ಟೇ ಅಲ್ಲ, ಮಹಿಳೆಯರ ಅಂತರಂಗ ಲೋಕದ ಗುಟ್ಟಿನ ಸಂಗತಿಗಳಾಗಿದ್ದವು. ಜಗತ್ತಿನ ಬೇರೆ ಬೇರೆ ಸಂಸ್ಕೃತಿಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ಮಹಿಳೆಯರು ತಮಗೆ ಲಭ್ಯವಿದ್ದ ಜ್ಞಾನದ ಆಧಾರದ ಮೇಲೆ ಗರ್ಭನಿರೋಧ ಹಾಗೂ ಗರ್ಭಪಾತದ ವಿಧಾನಗಳನ್ನು ರೂಪಿಸಿಕೊಂಡರು.

ಇದೆಲ್ಲ ಹಳೆಯ ಕಾಲದ ಒಂದು ಲೆಕ್ಕದಲ್ಲಿ ಅಜ್ಜಿಯರ ಅಲ್ಲ, ಕ್ಷಮಿಸಿ, ಅವರು ಹರೆಯದವರಾಗಿದ್ದಾಗಿನ ಕತೆಯಾಯಿತು. ಇದನ್ನು ಪ್ರಾಚೀನ ಗರ್ಭನಿರೋಧ ಎಂದು ಕರೆಯೋಣ. ಇದಕ್ಕೆ ಪ್ರತಿಯಾಗಿ ಆಧುನಿಕ ಗರ್ಭನಿರೋಧ ಎಂಬುದಿದೆಯಲ್ಲ ಅದು ತೀರ ಇತ್ತೀಚಿನದು. ಕೇವಲ ೫೦-೬೦ ವರ್ಷಗಳಷ್ಟು ಹಳೆಯದು. ಪ್ರಾಚೀನ, ಆಧುನಿಕ ಎಂದು ವಿಂಗಡಿಸುವ ಮೊದಲು ಗರ್ಭನಿರೋಧ ಎಂಬುದರ ಸರಿಯಾದ ವ್ಯಾಖ್ಯಾನ ಏನು ಎಂಬುದನ್ನು ನೋಡೋಣ.

ಗರ್ಭನಿರೋಧ ಅಂದರೆ ಬೇಡವಾದ ಬಸಿರನ್ನು ತಡೆಯುವುದು.
ಮೈಥುನವನ್ನು ಪುನರುತ್ಪಾದನೆ ಅಥವಾ ಗರ್ಭಧಾರಣೆಯಿಂದ ಪ್ರತ್ಯೇಕಿಸುತ್ತದೆ
ಮೂಲಕ ಒಬ್ಬ ವ್ಯಕ್ತಿಗೆ ತನ್ನ ಮೈಥುನದ ಮತ್ತು ಪುನರುತ್ಪಾದನಾ ಸಾಮರ್ಥ್ಯದ
ಹೆಚ್ಚಿನ ನಿಯಂತ್ರಣ ದೊರಕಿಸಿಕೊಡುತ್ತದೆ. ಹಾಗೂ ಇದರಿಂದಾಗಿ ವ್ಯಕ್ತಿಗೆ ತನ್ನ
ಬದುಕಿನ ಮೇಲೆ ಹೆಚ್ಚು ನಿಯಂತ್ರಣ ಮತ್ತು ಸ್ವಾತಂತ್ರ್ಯವನ್ನು ದೊರಕಿಸಿಕೊಡುತ್ತ

ಪ್ರಾಚೀನ ಗರ್ಭನಿರೋಧವೆಂಬುದು ಬಹುತೇಕವಾಗಿ ಮಹಿಳೆ
ಮಹಿಳೆಯರಿಗಾಗಿ ಮಹಿಳೆಯರಿಂದ ನಡೆಸುವ ಸಂಗತಿಯಾಗಿತ್ತು. ಮೈಥುನ ಗ
ಮತ್ತು ಹೆಂಗಸು ಇಬ್ಬರಿಗೂ ಬೇಕು, ಹೌದು. ಆದರೆ ಅದನ್ನು ಹಿಂಬಾಲಿಸಿ ಬ
ಬಸಿರು, ಹೆರಿಗೆ, ಬಾಣಂತನ ಇದನ್ನೆಲ್ಲ ಅನುಭವಿಸುವದು ಮಹಿಳೆ ಮಾತ್ರ. ಹೀ
ಸಹಜವಾಗಿಯೇ ಬೇಡವಾದ ಬಸಿರನ್ನು ತಡೆಗಟ್ಟುವ ಪ್ರಶ್ನೆ ಪುರುಷನಿಗಿಂತ ಸ
ದಷ್ಟು ಹೆಚ್ಚು ಮಹಿಳೆಯರನ್ನು ಕಾಡುತ್ತಿತ್ತು. ಆದರೆ ಆಧುನಿಕ ಗರ್ಭನಿರೋ
ಪ್ರಚಾರಕ್ಕೆ ಬಂದ ಕಾರಣ, ಸನ್ನಿವೇಶಗಳೇ ಬೇರೆ. ಹೋದ ಶತಮಾನದ
ಭಾಗದಲ್ಲಿ ಈ ಆಧುನಿಕ ಗರ್ಭಪ್ರತಿಬಂಧವು ಪ್ರಚುರಗೊಳ್ಳುತ್ತಿದ್ದಾಗ ಅದರ
ಮಹಿಳೆಯರ ಅಗತ್ಯದ ಕಾರಣ ಇರಲೇ ಇಲ್ಲವೆಂದಲ್ಲ. ಆದರೆ ಅದಕ್ಕಿಂತ
ಮುಖ್ಯವಾಗಿ ಜನಸಂಖ್ಯಾ ನಿಯಂತ್ರಣವೆಂಬುದು ಇದರ ಹಿಂದಿನ ಹೇತುವಾಗಿ
ಹಾಗೂ ಜನಸಂಖ್ಯಾ ನಿಯಂತ್ರಣ ಉದ್ದೇಶಕ್ಕೆ ಆ ಕಾಲಘಟ್ಟದಲ್ಲಿ ನಡೆದ ವೈದ್ಯವಿ
ದೊಳಗಿನ ಮುನ್ನಡೆಯೂ ಪೂರಕವಾಗಿ ಒದಗಿಬಂದಿತು.

ಪ್ರಾಚೀನ ಕಾಲದಲ್ಲಿ ತನ್ನ ಮದುವೆ ಯಾವ ವಯಸ್ಸಿಗೆ, ಯಾವಾಗ ಮಕ್ಕ
ಹಡೆಯುವದು, ಎಷ್ಟು ಮಕ್ಕಳು, ಯಾವ ಅಂತರದಲ್ಲಿ ಹೀಗೆ ಈ ಯಾವ ವಿ
ದೊಳಗೂ ಮಹಿಳೆಗೆ ನಿರ್ಣಯದ ಅನುಕೂಲ ಅಧಿಕಾರ ಇರಲಿಲ್ಲ. ಹೀಗಾಗಿ
ಬಸಿರು ಬೇಡ ಎನ್ನುವ ಅಗತ್ಯ ತೋರಿದಾಗ ಅವಳು ಗುಟ್ಟಾಗಿ ತನಗೆ ದೊರ
ಯಾವದೋ ರೀತಿಯ ಗರ್ಭನಿರೋಧದ ವಿಧಾನವನ್ನು ಬಳಸುತ್ತಿದ್ದಳು ಅ




PROLIGHT SYSTEMS

# 22, 6th Cross, 8th Main, Ganesha Block, Mahalaxmi Layout, Bangalore - 560 086. Telefax : 23493757 Ph : 6596 436
E-mail : prolightsystems@sify.com Web : www.prolightsystems.com



Manufacturers of

Solar Street Lights
Solar Lantern
Solar Water Pump
Solar Water Heater

Solar Home Lights
Solar Power Plant
Wind Generators



MNES Approved









Total Solutions to Renewable Energy

ರ್ಭಧಾರಣೆ ಆಗಿಯೇಬಿಟ್ಟದ್ದರೆ ಹಾಗೂ ಈಗ ಮಗು ಬೇಡ, ಇನ್ನು ಮಕ್ಕಳು ಬೇಡವೇ ಬೇಡ ಅನ್ನುವ ಸನ್ನಿವೇಶ ಇದ್ದರೆ ಯಾವದೋ ಕತ್ತಲಮೂಲೆಯಲ್ಲಿ ರ್ಭಪಾತ ಮಾಡಿಸಿಕೊಳ್ಳುವದಕ್ಕೆ ಮೊರೆಹೋಗುತ್ತಿದ್ದಳು. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಗರ್ಭನಿರೋಧ ಹಾಗೂ ಇಚ್ಛಿತ ಗರ್ಭಪಾತ ಇವು ಕೇವಲ ವಿವಾಹಬಾಹಿರ ಸಂಬಂಧಗಳಿಗೆ ಮೀಸಲಾಗಿರಲಿಲ್ಲ. ಸಮಾಜಶಾಸ್ತ್ರಜ್ಞರು ಹೇಳುವ ಪ್ರಕಾರ ಎಲ್ಲ ಕಾಲ, ಎಲ್ಲ ದೇಶಗಳಲ್ಲಿ ಗರ್ಭನಿರೋಧ ಮತ್ತು ಗರ್ಭಪಾತಗಳನ್ನು ಬಳಸುವವರಲ್ಲಿ ನೂರಕ್ಕೆ ಎಂಬತ್ತು ಪಾಲು ಮಹಿಳೆಯರು ವಿವಾಹದ ಚೌಕಟ್ಟಿನೊಳಗೆ ಬಾಳುತ್ತಿರುವ ಸಂಸಾರಸ್ಥ ಸಭ್ಯ ಸದ್‌ಗೃಹಿಣಿಯರೇ. ಅಂದರೆ ನಮ್ಮ ದೇಶದಲ್ಲಿ ಶತಶತಮಾನಗಳಿಂದಲೂ ಪ್ರತಿವರ್ಷ ಲಕ್ಷಾವಧಿ ಮಹಿಳೆಯರು – ಇತ್ತೀಚಿನ ಅಧಿಕೃತ ಮತ್ತು ಸರ್ವಸ್ವೀಕೃತ ವರದಿಗಳ ಪ್ರಕಾರ ಈಗ ಪ್ರತಿವರ್ಷ ಭಾರತದಲ್ಲಿ ಸುಮಾರು ಐವತ್ತು ಲಕ್ಷ ಮಹಿಳೆಯರು – ಸದ್ಯ ಈ ಬಸಿರು ತಮಗೆ ಬೇಡ ಎಂದು ಣವಾಗಿಯೇ ಹೋಗಿ ಗರ್ಭಪಾತ ಮಾಡಿಸಿಕೊಳ್ಳುತ್ತಾರೆ.

ಪ್ರತಿವರ್ಷ ಲಕ್ಷಾವಧಿ ಮಹಿಳೆಯರು ಗರ್ಭಪಾತ ಮಾಡಿಸಿಕೊಳ್ಳುತ್ತಾರೆ ಹಾಗೂ ಇವರಲ್ಲಿ ಬಹುಪಾಲು ಮಹಿಳೆಯರು, ಸಭ್ಯ ವಿವಾಹಿತ ಗೃಹಿಣಿಯರು ಎಂಬ ವಿಷಯವು ಒಂದು ಗಂಭೀರ ತಾತ್ವಿಕ-ಪ್ರಶ್ನೆಯ ಉದ್ಭವಕ್ಕೆ ಕಾರಣವಾಗುತ್ತದೆ. ಹಿಂಸೆಯೆಂದರೆ ಏನು ? ಮಾಂಸಾಹಾರವನ್ನು ಹಿಂಸೆ ಎಂದು ಪರಿಗಣಿಸುವವರು ಇದನ್ನು ಹೇಗೆ ವ್ಯಾಖ್ಯಾನಿಸುತ್ತಾರೆ ? ಆದರೆ ಕ್ಷಮಿಸಬೇಕು, ನಿಮ್ಮ ತಲೆಯೊಳಗೊಂದು ಪ್ರಶ್ನೆಯ ಹುಳ ಹಾಕುವದಕ್ಕಾಗಿ ಮಾತ್ರ ಇದನ್ನು ಇಲ್ಲಿ ಎತ್ತಿದ್ದೇ ಹೊರತು ಅದರ ವಿವರವಾದ ವಿಶ್ಲೇಷಣೆಗೆ ನಾನಿಲ್ಲಿ ತೊಡಗುವದಿಲ್ಲ.

ಪ್ರಾಚೀನ ಗರ್ಭನಿರೋಧಕ್ಕೆ ಅದರದ್ದೇ ಆದ ಮಿತಿಗಳಿದ್ದವು. ತೀರ ಸೀಮಿತ ಜ್ಞಾನದ ಆಧಾರದ ಮೇಲೆ ರೂಪುಗೊಂಡಿದ್ದುವಾದ್ದರಿಂದ ಈ ವಿಧಾನಗಳು ಬಳಕೆಯಲ್ಲಿ ಸುಲಭವಾಗಿರಲಿಲ್ಲ, ಸುರಕ್ಷಿತವಾಗಿರಲಿಲ್ಲ ಹಾಗೂ ಸಮಾಧಾನಕರವೆನ್ನುವಷ್ಟು ಪ್ರಮಾಣದಲ್ಲಿ ಪರಿಣಾಮಕಾರಿಯಾಗಿರಲಿಲ್ಲ. ಬಹಳ ಮುಖ್ಯವಾಗಿ ಅಂದು ಗರ್ಭನಿರೋಧಕ್ಕೆ ಸಾಮಾಜಿಕ ಮಾನ್ಯತೆಯಿರಲಿಲ್ಲ. ಆದುದರಿಂದ ಅದು ಅತ್ಯಂತ ಗುಟ್ಟಾಗಿ ಗುಪ್ತವಾಗಿ ನಿರ್ವಹಿಸಬೇಕಾದ ಸಂಗತಿಯಾಗಿತ್ತು.

ಆಧುನಿಕ ಗರ್ಭನಿರೋಧ ಹೀಗಿಲ್ಲ. ಆಧುನಿಕ ವಿಧಾನಗಳು ಬಳಕೆಗೆ ಹೆಚ್ಚು ಸುಲಭ, ಹೆಚ್ಚು ಪರಿಣಾಮಕಾರಿ ಹಾಗೂ ಹೆಚ್ಚು ಸುರಕ್ಷಿತ. ಮೇಲಾಗಿ ಇಂದು ಗರ್ಭ ನಿರೋಧಕ್ಕೆ ದಿನೇ ದಿನೇ ಹೆಚ್ಚುತ್ತಿರುವ ಸಾಮಾಜಿಕ ಮಾನ್ಯತೆಯಿದೆ. ಅದು ಕತ್ತಲ ಕೋಣೆಯಿಂದಾಚೆಗೆ ಊರಿನ ಮುಖ್ಯ ವರ್ತುಳ ಚೌಕಗಳಿಗೇ ಬಂದುಬಿಟ್ಟಿದೆ. ಕಾಂಡೋಮ್, ಗುಳಿಗೆಗಳ ಕುರಿತಾದ ಜಾಹೀರಾತು, ಘೋಷಣೆಗಳು ಗೋಡೆ ಗೋಡೆಗಳ ಮೇಲೆ ಕಾಣಿಸುತ್ತಿವೆ. ಗರ್ಭನಿರೋಧಕ್ಕೆ ಇನ್ನೊಂದು ಹೆಸರಿನಂತಿರುವ ಕುಟುಂಬ ಯೋಜನೆಯ ಲಾಂಛನವಾದ ಕೆಂಪು ತ್ರಿಕೋಣವಂತೂ ಎಲ್ಲೆಲ್ಲೂ ರಾರಾಜಿಸುತ್ತಿದೆ. ಗರ್ಭನಿರೋಧಕ ಸಾಧನಗಳ ಜಾಹೀರಾತುಗಳು ರೇಡಿಯೊ, ಟಿವಿಗಳ ಮೂಲಕ ಮನೆಯ ಒಳಗೂ ಬಂದುಬಿಟ್ಟಿವೆ.

ಅಂದ ಹಾಗೆ ಕುಟುಂಬ ಯೋಜನೆಯ ಲಾಂಛನವಾಗಿ ಈ ಕೆಂಪು ತ್ರಿಕೋಣವೇ ಏಕೆ, ಅದರ ಅರ್ಥವೇನು ಎಂಬ ಪ್ರಶ್ನೆಯನ್ನು ಯಾವಾಗಲಾದರೂ ನಿಮಗೆ ನೀವೇ ಕೇಳಿಕೊಂಡಿದ್ದೀರಾ ?

ಆಧುನಿಕ ಗರ್ಭನಿರೋಧದ ಚರಿತ್ರೆಯ ಮೊದಲ ಕಿ.ಮೀ. ಕಲ್ಲು ೧೯೬೦. (ಮೈಲು ಹೋಗಿಬಿಟ್ಟಿರುವದರಿಂದ ಮೈಲಿಗಲ್ಲಿಗೂ ವಿದಾಯ ಹೇಳೋಣವೆ ?) ಆ ವರ್ಷದಲ್ಲಿ ಮೊಟ್ಟಮೊದಲ ಬಾರಿಗೆ ಗರ್ಭನಿರೋಧಕ ಗುಳಿಗೆ ಮಾರುಕಟ್ಟೆಗೆ ಬಂತು. ಕೆಲವೇ ವರ್ಷಗಳ ನಂತರ ಗರ್ಭಾಶಯ ಆಂತರಿಕ ಸಾಧನ – ಆಡುಮಾತಿನಲ್ಲಿ ಹೇಳುವದಾದರೆ ವಂಕಿ – ಬಳಕೆಯಲ್ಲಿ ಬಂದಿತು. ಇಂದು ಗರ್ಭನಿರೋಧದ ಬುಟ್ಟಿಯಲ್ಲಿ ಗುಳಿಗೆ, ಐಯುಸಿಡಿ ಅಥವಾ ವಂಕಿ, ಕಾಂಡೋಮ್, ಇಂಜಕ್ಷನ್‌ಗಳು, ಪೊರೆ ಅಥವಾ ಡಯಾಫ್ರಾಮ್, ನಾರ್‌ಪ್ಲಾಂಟ್, ತತ್ಕಾಲ್ ಗರ್ಭ ನಿರೋಧ ಹಾಗೂ ಅತಿ ಮುಖ್ಯವಾಗಿ ಸಂತಾನ ಶಕ್ತಿ ಹರಣ ಶಸ್ತ್ರಚಿಕಿತ್ಸೆ ಹೀಗೆ ಅನೇಕ ಸಾಧನಗಳಿವೆ.

ಈಗ ಲಭ್ಯವಿರುವ ಈ ಎಲ್ಲ ಸಾಧನಗಳ ಸುದೀರ್ಘ ವಿವರಣೆ, ಅವುಗಳ ಸಾಧಕ-ಬಾಧಕಗಳ ಕುರಿತು ಹೇಳುತ್ತ ಹೋಗುವದು ಇಲ್ಲಿ ಶಕ್ಯವೂ ಇಲ್ಲ, ಅವಶ್ಯವೂ ಇಲ್ಲ. ಮುಖ್ಯವಾಗಿ ಹೇಳಬೇಕಾದುದೇನೆಂದರೆ ಸದ್ಯ ಅನೇಕ ಗರ್ಭ ನಿರೋಧಕ ಸಾಧನಗಳು ಬಳಕೆಯಲ್ಲಿವೆಯಾದರೂ ಯಾವದೂ ಸರ್ವಪರಿಪೂರ್ಣ ಆದರ್ಶ ಪ್ರಾಯ ಸಾಧನವೆಂಬುದಿಲ್ಲ. ಪ್ರತಿಯೊಂದಕ್ಕೂ ಏನೇನೋ ಮಿತಿಗಳಿವೆ. ಎಲ್ಲ ಅಂಶಗಳನ್ನೂ ಗಮನಿಸಿದಾಗ ಬಹುಶಃ ಅತ್ಯಂತ ಹೆಚ್ಚು ಅಂಕಗಳನ್ನು ಪಡೆದು ಮೊದಲ ಸ್ಥಾನದಲ್ಲಿ ನಿಲ್ಲುವದು ಗರ್ಭನಿರೋಧಕ ಗುಳಿಗೆ.

ಇತರ ಸಾಧನೆಗಳಿಗೆ ಹೋಲಿಸಿದಾಗ ಗುಳಿಗೆಗೆ ಇರುವ ಅನುಕೂಲಗಳೆಂದರೆ ಮೊದಲನೆಯದಾಗಿ ಅದರ ಬಳಕೆಯಲ್ಲಿ ಇಂಜಕ್ಷನ್‌ನಂತೆ ಇನ್ನೊಬ್ಬರನ್ನು ಅವಲಂಬಿಸ ಬೇಕಾಗಿಲ್ಲ. ಎರಡನೆಯದಾಗಿ, ಅದು ಲೈಂಗಿಕ ಚಟುವಟಿಕೆ (ಕಾಂಡೋಮ್‌ನಂತೆ) ಹಾಗೂ ಲೈಂಗಿಕ ಅವಯವಗಳು (ವಂಕಿ, ಡಯಾಫ್ರಾಮ್ ಇತ್ಯಾದಿಗಳಂತೆ) ಇವುಗಳಿಂದ ಸ್ವತಂತ್ರವಾದುದು; ಹಾಗಾಗಿ ಅದರ ಬಳಕೆ ಹೆಚ್ಚು ಸುಲಭ. ಮೇಲಾಗಿ ಕಾಮದ ಹಸಿವು ಹೆಚ್ಚಿಗೆ ಇರುವ ನವವಿವಾಹಿತರಿಗೆ ಅದು ಸರಿಹೊಂದುತ್ತದೆ.

ಆದುದರಿಂದಲೇ ಗರ್ಭನಿರೋಧದ ದೂರಗಾಮಿ ಪರಿಣಾಮಗಳನ್ನು ಅಭ್ಯಸಿಸುವಾಗ ಗುಳಿಗೆಯನ್ನು ಇತರ ಎಲ್ಲ ಸಾಧನಗಳ ಪ್ರತಿನಿಧಿಯಾಗಿ ಪರಿಗಣಿಸಿ ಈ ಲೇಖನಕ್ಕೆ ಒಂದು ಗುಳಿಗೆಯ ಕ್ರಾಂತಿ ಎಂಬ ಶಿರೋನಾಮೆ ಕೊಟ್ಟಿರುವದು.

ಗರ್ಭನಿರೋಧದ ದೂರಗಾಮಿ ಪರಿಣಾಮಗಳನ್ನು ನೋಡುತ್ತ ಹೋದಂತೆ ಒಂದು ಮಾತು ಸ್ಪಷ್ಟವಾಗುತ್ತದೆ. ಈ ಪರಿಣಾಮಗಳ ಹಿಂದೆ ಹೆಚ್ಚುತ್ತಿರುವ ಮಹಿಳೆಯರ ಶಿಕ್ಷಣ, ಬದಲಾಗುತ್ತಿರುವ ಜೀವನಶೈಲಿ, ರಾಜಕೀಯ ಸ್ಥಿತ್ಯಂತರಗಳು - ಹೆಚ್ಚುತ್ತಿರುವ ಪ್ರಜಾಧಿಕಾರದ ಪ್ರಭಾವ, ಐಟಿ ಕ್ರಾಂತಿ ಮುಂತಾದವುಗಳ ಪಾಲೂ ಇದೆ. ಆದರೆ ಗರ್ಭನಿರೋಧ ಹಾಗೂ ಇವೆಲ್ಲ ಪರಸ್ಪರ ಪೂರಕವಾದ ಸಂಗತಿಗಳೇ ಸರಿ.

ಗರ್ಭನಿರೋಧದ ಅತ್ಯಂತ ಮುಖ್ಯ ಪರಿಣಾಮವೆಂದರೆ ಮಹಿಳೆ ಪುರುಷ ಆಗುವದು. ಇದೆಂಥ ವಿಚಿತ್ರ ಮಾತು ಅಂದಿರಾ? ವಿಚಿತ್ರವೆನಿಸಿದರೂ ಈ ಮಾತಿನಲ್ಲಿ ಹಿಮಾಲಯದಷ್ಟು ಅರ್ಥವಿದೆ. ಸ್ವಲ್ಪ ಮುಂದೆ ಓದಿ. ನಿಸರ್ಗದ ವಿನ್ಯಾಸದ ಪ್ರಕಾರ ಪುನರುತ್ಪಾದನೆಯ ಕ್ರಿಯೆಯಲ್ಲಿ ಪುರುಷನ ಪಾಲೆಂದರೆ ಕಾಮ ಮೈಥುನದಲ್ಲಿ ತೊಡಗುವದಷ್ಟೇ, ಅದರ ಫಲಿತಾಂಶಗಳಾದ ಬಸಿರು, ಹೆರಿಗೆ, ಬಾಣಂತನಗಳನ್ನು ನಿಭಾಯಿಸುವ ಜವಾಬ್ದಾರಿ ಮಾತ್ರ ಸಂಪೂರ್ಣವಾಗಿ ಮಹಿಳೆಯದೇ. ಗರ್ಭ ನಿರೋಧ ವೆಂಬುದೇ ಇರದಿದ್ದಾಗ ಮಹಿಳೆ ತನ್ನ ಬದುಕಿನ ಬಹಳ ಮಹತ್ವದ ಭಾಗವನ್ನು ಈ ಬಸಿರು, ಹೆರಿಗೆ, ಬಾಣಂತನಗಳ ಚಕ್ರದಲ್ಲಿಯೇ ಕಳೆಯಬೇಕಾಗುತ್ತದೆ. ಆದರೆ ಗರ್ಭ ನಿರೋಧದ ಸೌಲಭ್ಯ ದೊರಕಿದ್ದಾದರೆ, ಮಹಿಳೆ ಕೂಡ ಪುರುಷನಂತೆಯೇ ಕಾಮ ಮೈಥುನದಲ್ಲಿ ತೊಡಗಿಯೂ ಬಸಿರು-ಹೆರಿಗೆ-ಬಾಣಂತನಗಳಿಂದ ದೂರ ಇರಬಲ್ಲಳು. ಈ ಅರ್ಥದಲ್ಲಿ ಮಹಿಳೆ ಪುರುಷ ಆಗುತ್ತಾಳೆ.

ಸರಿ, ಹೆಂಗಸು ಗಂಡಸಾದಳು. ಆದರೇನಂತೆ – ಇದು ಮುಂದಿನ ಪ್ರಶ್ನೆ.

ನಾಗರಿಕತೆಯ ವಿಕಾಸದಲ್ಲಿ ನಾವು ನೋಡುವದೇನೆಂದರೆ ಮಹಿಳೆಗೆ ಪುನರುತ್ಪಾದನೆಯ ಶಕ್ತಿಯಿದೆ; ಅವಳಿಗೆ ಮಾತ್ರ ತಾಯ್ತನದ ಸಾಮರ್ಥ್ಯವಿದೆ ಎಂಬ ಕಾರಣಕ್ಕಾಗಿಯೇ ಅವಳಿಗೆ ಸಮಾಜ ಸಂಸ್ಕೃತಿಯಲ್ಲಿ ಗೌರವದ ಸ್ಥಾನ ಸಿಕ್ಕಿದೆ; ಮಾತೃದೇವೋಭವ; ಜನನೀ ಜನ್ಮಭೂಮಿಶ್ಚ... ಹೀಗೆ ಅವಳು ದೇವಿಯೆಂದು ಪೂಜಿಸಲ್ಪಟ್ಟಿದ್ದಾಳೆ. ಆದರೆ ನಿಖರವಾಗಿ ಇದೇ ಕಾರಣಕ್ಕಾಗಿ – ಮಹಿಳೆಯ ಈ ಪುನರುತ್ಪಾದನಾ ಸಾಮರ್ಥ್ಯದ ಇನ್ನೊಂದು ಮುಖವನ್ನು – ಅವಳ ಯೋನಿಶೀಲ, ಅವಳು ಬಸಿರು ಹೆರಿಗೆ ಬಾಣಂತನದ ಸಂದರ್ಭಗಳಲ್ಲಿ ತಾತ್ಕಾಲಿಕವಾಗಿ ಒಂದಿಷ್ಟು 'ಅಸಹಾಯಕ' ಳಾಗುತ್ತಾಳೆ. 'ಮೃದು'ವಾಗುತ್ತಾಳೆ. 'ಪರಾವಲಂಬಿ'ಯಾಗುತ್ತಾಳೆ ಎಂಬುದನ್ನೇ ಅಸ್ತ್ರವನ್ನಾಗಿಸಿಕೊಂಡು ಇತಿಹಾಸದುದ್ದಕ್ಕೂ ಪುರುಷ ಅವಳಿಗೆ ಅನ್ಯಾಯ ಮಾಡುತ್ತ ಬಂದಿದ್ದಾನೆ. ಸೀತೆಯನ್ನು ಒಮ್ಮೆ ನೆನೆಪಿಸಿಕೊಳ್ಳಿ ಅಥವಾ ಅಹಲ್ಯೆ ರೇಣುಕೆಯರನ್ನು.

ಸುರಕ್ಷಿತ, ಸುಲಭ ಹಾಗೂ ಸಫಲ ಗರ್ಭನಿರೋಧದ ಸಹಾಯದಿಂದ ಮಹಿಳೆ ಈ ಚಕ್ರದಿಂದ ಮುಕ್ತಳಾಗುತ್ತಾಳೆ. ಇದರಿಂದ ಉಂಟಾಗುವ ಪರಿಣಾಮಗಳನ್ನು ನಾವು ನಮ್ಮ ಗ್ರಹಿಕೆಯ ಅನುಕೂಲಕ್ಕಾಗಿ ಎರಡು ನೆಲೆಗಳಲ್ಲಿ ಅರ್ಥೈಸಿಕೊಳ್ಳಲು ಪ್ರಯತ್ನಿಸೋಣ. ಮೊದಲನೆಯದು, ಮನೆಯ ಒಳಗೆ ಗಂಡ-ಹೆಂಡತಿಯ ಸಂಬಂಧದಲ್ಲಿ ಉಂಟಾಗುವ ಬದಲಾವಣೆ; ಎರಡನೆಯದು, ಮನೆಯ ಹೊರಗೆ ವಿಸ್ತೃತ ಸಾಮಾಜಿಕ ಬದುಕಿನಲ್ಲಿ ಆಗುವ ಬದಲಾವಣೆಗಳು.

ಇಷ್ಟು ದಿನಗಳವರೆಗೂ ದಾಂಪತ್ಯ ಜೀವನದಲ್ಲಿ ಗಂಡ ತಾನು ಗಂಡಸು ಅನ್ನುವ ನೈಸರ್ಗಿಕ ಹಾಗೂ ಅದರ ಆಧಾರದ ಮೇಲೆ ರೂಪಿತಗೊಂಡ ಸಾಂಸ್ಕೃತಿಕ ಮೌಲ್ಯಗಳ ಕಾರಣದಿಂದ ಹೆಂಡತಿಯ ಮೇಲೆ ಅಧಿಕಾರ ಚಲಾಯಿಸುತ್ತಿದ್ದ. ಅರ್ಥೇ ಚ ಕಾಮೇ ಚ... ನಾತಿಚರಾಮಿ ಎಂದು ಏಳು ಹೆಜ್ಜೆ ಇಟ್ಟರೂ ಲೈಂಗಿಕ ಸಂಬಂಧದಲ್ಲಿ ಆ ನಿಷ್ಠೆಯನ್ನು ಕಾಪಾಡಿಕೊಳ್ಳುತ್ತಿರಲಿಲ್ಲ. ಗಂಡಸಾದವನಿಗೆ ಕಚ್ಚೆಹರುಕತನದ ಅಂದರೆ ಸೂಳೆಯರು, ರಂಡೆಯರು, ಸಾನಿಯರು, ದೇವದಾಸಿಯರು, ಬಹುಪತ್ನಿತ್ವ... ಹೀಗೆ ಉದ್ದ ಪಟ್ಟಿಯೇ

ಲಭ್ಯವಿತ್ತು. ಆದರೆ ಹೆಂಡತಿಗೆ ಇದೆಲ್ಲ ನಿಷಿದ್ಧ. ಅವಳು ಸದಾಕಾಲ ಪತಿವ್ರತೆಯಾಗಿ -ಪತ್ನೀವ್ರತ ಎಂಬ ಶಬ್ದವೇ ನಮ್ಮ ಭಾಷೆಯೊಳಗಿಲ್ಲ! – ಯೋನಿಶೀಲದ ಕವಚ ದೊಳಗೇ ಬಾಳಬೇಕಾಗುತ್ತಿತ್ತು. ಆದರೆ ಗರ್ಭನಿರೋಧ ದೊರೆತ ಬಳಿಕ ಗಂಡ – ಹೆಂಡತಿಯ ನಡುವಿನ ಲೈಂಗಿಕ ಸಂಬಂಧ ಹಾಗೂ ಅದರ ಆಧಾರದ ಮೇಲೆ ರೂಪಿತಗೊಂಡ ದಾಂಪತ್ಯ ಮತ್ತು ಕೌಟುಂಬಿಕ ಸಂಬಂಧಗಳಲ್ಲೂ ಆಮೂಲಾಗ್ರ ಬದಲಾವಣೆಗಳಾಗುತ್ತ ಹೋಗುತ್ತವೆ.

ಈಗ ಹೆಂಡತಿಯೂ ಗಂಡನೊಂದಿಗೆ ಸಮಪಾತಳಿಯ ಮೇಲೆ ನಿಲ್ಲುತ್ತಾಳೆ. ಸ್ವಲ್ಪ ನಿಷ್ಠುರವಾಗಿಯೇ ಹೇಳುವದಾದರೆ ಯಾವುದನ್ನೆಲ್ಲ ಒಬ್ಬ ಅಪ್ರಾಮಾಣಿಕ ಗಂಡ ಮಾಡುತ್ತಿದ್ದನೋ – ವಿವಾಹೇತರ ಲೈಂಗಿಕ ಸಂಬಂಧಗಳು, ಕ್ಯಾಜುಯಲ್ – ಸುಮ್ಮನೆ ಒಂದು ರಾತ್ರಿಯ ವಿವಾಹಬಾಹಿರ ಲೈಂಗಿಕತೆ, ಇದೆಲ್ಲವನ್ನೂ ಹೆಂಡತಿಯೂ ಮಾಡಬಲ್ಲವಳಾಗುತ್ತಾಳೆ. ಊರಿಗೊಂದು ಸೂಳೆಗೇರಿ ಎಂಬ ಮಾತು ಹೇಗೆ ಸಾಮಾನ್ಯವಾಗಿತ್ತೋ ಹಾಗೆಯೇ ಗಂಡು ಸೂಳೆಗಾರಿಕೆಯೂ ಪ್ರಾರಂಭವಾಗುತ್ತದೆ.

ದಯವಿಟ್ಟು ಗಮನಿಸಿರಿ : ಇದೆಲ್ಲ ಆಗುವದು ಸರಿ; ಇದು ಆಗಬೇಕು ಎಂದು ನಾನು ಹೇಳುತ್ತಿಲ್ಲ. ಇದು ಸುಲಭವಾಗಿ ಶಕ್ಯ ಎಂದು ಮಾತ್ರ ಹೇಳುತ್ತಿದ್ದೇನೆ. ಆದುದರಿಂದ ಈಗ ಗಂಡ ಹೆಂಡತಿಯರ ಮಧ್ಯೆ ಇರುವ ಪರಸ್ಪರ ದೃಷ್ಟಿಕೋನ, ಸಂಬಂಧ – ಹೆಂಡತಿ ಮಾತ್ರ ಗಂಡನಿಗೆ ಗೌರವಾರ್ಥಕ ಬಹುವಚನದಲ್ಲಿ ರೀ ಹಾಕುವದು, ಮದುವೆಯೆಂಬ ಸಂಪ್ರದಾಯ ಹಾಗೂ ಅದರ ಆಚರಣೆಗಳು – ಹುಡುಗಿಯ ಅಪ್ಪ ಮದುಮಗನ ಪಾದ ತೊಳೆಯುವದು, ಮದುವೆಯ ನಂತರ ಹೆಂಡತಿ ಮಾತ್ರ ತನ್ನ ಹೆಸರು – ಅಡ್ಡ ಹೆಸರು ಬದಲಾಯಿಸಿಕೊಳ್ಳುವದು, ದಾಂಪತ್ಯದ ಕುರುಹಾಗಿ ಹೆಂಡತಿ ಮಾತ್ರ ತಾಳಿ ಧರಿಸುವದು ಇತ್ಯಾದಿ. ಇವುಗಳ ಹಿಂದಿನ ಅಲಿಖಿತ ನಿಯಮಗಳು, ಶೀಲ-ಪಾತಿವ್ರತ್ಯದ ಪರಿಕಲ್ಪನೆ, ಕೌಮಾರ್ಯ-ಬ್ರಹ್ಮಚರ್ಯದ ಪರಿ ಕಲ್ಪನೆ, ವಿಧವೆತನ (ತಲೆ ಬೋಳಿಸುವದು, ಧಾರ್ಮಿಕ ಕಾರ್ಯಗಳಿಂದ ಬಹಿಷ್ಕಾರ), ವಿವಾಹ ವಿಚ್ಛೇದನ – ಹೇಯವಾದ ಈ ತ್ರಿವಳಿ ತಲಾಖ್, ಮರು ಮದುವೆಗೆ ಸಂಬಂಧಿಸಿದ ನಿರ್ಬಂಧನೆಗಳು – ಹೀಗೆ ದಾಂಪತ್ಯ ಜೀವನಕ್ಕೆ ಸಂಬಂಧಿಸಿದ ನಿರ್ಬಂಧನೆಗಳು – ಹೀಗೆ ದಾಂಪತ್ಯ ಜೀವನಕ್ಕೆ ಸಂಬಂಧಿಸಿದ ಪ್ರತಿಯೊಂದು

ಅಂಶವೂ ಆಳವಾಗಿ ಹಾಗೂ ಮತ್ತೆ ಮತ್ತೆ ಪರೀಕ್ಷೆಗೊಳಪಡುತ್ತದೆ ಹಾಗ
ನಿಧಾನವಾಗಿ ನಿಶ್ಚಿತವಾಗಿ ಸಮಾನತೆಯತ್ತ ಅಂದರೆ ಮಹಿಳೆಯರ ಪರ
ಬದಲಾಗುತ್ತ ಹೋಗುತ್ತದೆ.

ಇದೆಲ್ಲದರ ಫಲಿತಾಂಶವಾಗಿ ಗಂಡ ಹೆಂಡಿರ ನಡುವಿನ ಲೈಂಗಿಕ ಸಂಬ
ದೊಳಗೂ ಹೌದು ಮತ್ತು ಕೌಟುಂಬಿಕ ಜವಾಬ್ದಾರಿಯೊಳಗೂ ಹೌದು ಈವರೆಗ
ಇದ್ದ ಪುರುಷ ಶ್ರೇಷ್ಠತೆ ಕಡಿಮೆಯಾಗುತ್ತ ಬರುತ್ತದೆ. ಗಂಡನಿಗೆ ಹೆಂಡತಿಯ ಮ
ಕುಟುಂಬದ ಮೇಲಿದ್ದ ಆ ಪ್ರಶ್ನಾತೀತ ಸ್ವಾಮಿತ್ವ ಶಿಥಿಲಗೊಳ್ಳುತ್ತದೆ. ನಿಧಾನವ
ಯಾದರೂ ಸರಿ ಹೆಂಡತಿ ನಿಜವಾದ ಅರ್ಥದಲ್ಲಿ ಸಂಗಾತಿ-ಸಹಧರ್ಮಿಣಿಯಾಗುತ್ತಾ

ಇದೆಲ್ಲ ಕೇವಲ ಕಾಲ್ಪನಿಕ; ವಾಸ್ತವದಲ್ಲಿ ಆಗುವಂಥದಲ್ಲ ಎಂದು ಕೆಲವ
ವಾದಿಸಬಹುದು. ಆದರೆ ಈ ವಿಷಯಕ್ಕೆ ಸಂಬಂಧಿಸಿದಂತೆ ನಮ್ಮ ಸಮಾಜದ
ಈಗಾಗಲೇ ಗಂಭೀರ ಮಂಥನ ಶುರುವಾಗಿದೆ. ಹಾಗೂ ಅದರ ಒಳ್ಳೆಯ ಮತ್ತು ಕೆ
ಪರಿಣಾಮಗಳೆರಡೂ ಕಾಣುತ್ತಿವೆ. ಇದೆಲ್ಲ ದಿಗಿಲು ಮತ್ತು ಖೇದ ಉಂಟುಮಾಡುತ್ತ
ಯೆಂಬುದು ನಿಜ. ಆದರೆ ಇನ್ನೊಂದು ಕಡೆ ಹೊಸ ಯುಗದ ಗಂಡನ ರೂಪದ
ಬಹಳ ಒಳ್ಳೆಯ ಹರ್ಷದಾಯಕ ಬೆಳವಣಿಗೆಗಳೂ ಕಾಣುತ್ತಿವೆ. ಈ
ಬದಲಾವಣೆಗಳು ಈಗಾಗಲೇ ಪಶ್ಚಿಮ ದೇಶಗಳಲ್ಲಿ ಹೆಚ್ಚು ವ್ಯಾಪಕವಾಗಿ ಕಂ
ಬರುತ್ತಿವೆ. 'ಹೊಸಯುಗದ ಗಂಡ !?' ಹಾಗಂದರೇನು ?

ಗರ್ಭನಿರೋಧದ ಸೌಲಭ್ಯ ತನಗಿದೆ ಎಂಬ ಧೈರ್ಯ ವಿಶ್ವಾಸದ ಮೇಲೆ
ಅಂತರಂಗದ ಅಂದರೆ ಲೈಂಗಿಕ – ದಾಂಪತ್ಯ ಜೀವನ ಹಾಗೂ ಬಹಿರಂಗದ ಅಂದ
ಸಾಮಾಜಿಕ ಬದುಕು, ಇವೆರಡನ್ನೂ ರೂಪಿಸಿಕೊಳ್ಳುವ ಹುರುಪು ಹುಮ್ಮಸ್ಸು ಇರುವ ತರು
ಬಾಳಸಂಗಾತಿಯಾಗಿ ದೊರಕುವ ಅನುರೂಪ ತರುಣನೇ ಹೊಸಯುಗದ ಗಂಡ.

ಈ ಹೊಸಯುಗದ ಗಂಡ ಸಂವೇದನಾಶೀಲ ಹಾಗೂ ಲಿಂಗಸಮಾನತೆಯ
ಆಳವಾದ ಮತ್ತು ಗಟ್ಟಿ ನಂಬಿಕೆಯಿರುವ ವ್ಯಕ್ತಿ. ಅಲ್ಲದೆ ಇವನಿಗೆ ಈ ಲಿ
ಸಮಾನತೆಯ ಮೌಲ್ಯದ ಇತರ ಶಾಖೋಪಶಾಖೆಗಳ ಬಗ್ಗೆ ಸರಿಯಾದ ಅರಿ
ಇದೆ. ಅವುಗಳ ಬಗ್ಗೆ ಗೌರವವೂ ಇದೆ. ಆತ ಈ ದಾಂಪತ್ಯ ಸಮಾನತೆಯನ್ನು ಸರಿಯಾ
ಆಚರಣೆಯಲ್ಲಿ ತರುತ್ತಾನೆಯಷ್ಟೆ ಅಲ್ಲ, ಗರ್ಭನಿರೋಧದಲ್ಲಿ ತನ್ನ ಪಾತ್ರ, ಮ


With Best Compliments from

VEERA
B U S




VEERA VAHANA Udyog PRIVATE LTd.

Plot No. 16 to 19, Bommasandra-Jigani Link Road, Industrial Area
Hennagara Post, Anekal Taluk, Bangalore - 562 106
Ph : 080-7835602, 7834662, 7834663, Fax : 080 - 7835803
E-mail : veera@bgl.vsnl.net.in



ಗೆಲಸದಲ್ಲಿ ತನ್ನ ಪಾಲು, ಮುಖ್ಯ ವಿಷಯಗಳ ಚರ್ಚೆ, ವಿಚಾರ ವಿನಿಮಯ, ಆಸ್ತಿಯ ಹಕ್ಕು, ಭಿನ್ನತೆಯನ್ನು ಗೌರವಿಸುವದು... ಇತ್ಯಾದಿ ಅಲ್ಲದೆ ದಾಂಪತ್ಯದಲ್ಲಿ ಸರಿಸಮಾನ ಸಂಗಾತಿಯಾಗಿರುವದನ್ನು ಆತ ಪೂರ್ತಿ ಆನಂದಿಸುತ್ತಾನೆ. ಈ ನವಯುಗದ ಗಂಡಂದಿರು ಕೇವಲ ಕಾಲ್ಪನಿಕ ವ್ಯಕ್ತಿಗಳಲ್ಲ: ಈಗಾಗಲೇ ಈ ನವಯುಗದ ಗಂಡನ ಅನೇಕ ಮೌಲ್ಯ ಮತ್ತು ಗುಣಲಕ್ಷಣಗಳನ್ನು ಆಂತರೀಕರಿಸಿಕೊಂಡಿರುವ ಅನೇಕ ಗಂಡಂದಿರು ನಮಗೆ ಅಲ್ಲಲ್ಲಿ ಕಾಣಸಿಗುತ್ತಿದ್ದಾರೆ.

ಮುಂದಿನ ದಿನಗಳಲ್ಲಿ ಇಂತಹ ದಾಂಪತ್ಯಗಳಲ್ಲಿ ಹೆಂಡತಿಗೆ ಬೇಡವಾದ ಬಸಿರಿನ ಭಯವಿರು ವದಿಲ್ಲ. ಗಂಡ ಹೆಚ್ಚು ಸಂವೇದನಾಶೀಲನಾಗಿರುವದರಿಂದ ಹೆಂಡತಿಗೆ ಅನಗತ್ಯವಾದ ದೈಹಿಕ ಮತ್ತು ಮಾನಸಿಕ ತೊಂದರೆಗಳಾಗದ ಹಾಗೆ ಎಚ್ಚರ ವಹಿಸುತ್ತಾನೆ. ಇದರಿಂದಾಗಿ ಇಬ್ಬರೂ ಒತ್ತಡರಹಿತ ಹಾಗೂ ಸಂಪೂರ್ಣ ತೃಪ್ತಿದಾಯಕ ಲೈಂಗಿಕ ಜೀವನವನ್ನು ಆನಂದಿಸುತ್ತಾರೆ. ತತ್ಫಲವಾಗಿ ಅವರಿಬ್ಬರ ಜೀವನದ ಗುಣಮಟ್ಟವೂ ಗಣನೀಯವಾಗಿ ಸುಧಾರಿಸುತ್ತದೆ. ಇದು ಸಾಧ್ಯವಾದಾಗ ದಾಂಪತ್ಯಗಳು ಸಹಜವಾಗಿಯೇ ಹೆಚ್ಚು ಗಟ್ಟಿಯಾಗುತ್ತವೆ. ಇಂತಹ ದಾಂಪತ್ಯದಲ್ಲಿ ಹುಟ್ಟುವ ಮಕ್ಕಳು ಸಮಾನತೆ, ಶಾಂತಿ, ಪ್ರೀತಿ ಮತ್ತು ವಾತ್ಸಲ್ಯಗಳ ವಾತಾವರಣದಲ್ಲಿ ಬೆಳೆಯುತ್ತಾರೆ ಹಾಗೂ ಈ ಮಕ್ಕಳು ಮುಂದೆ ಜವಾಬ್ದಾರಿಯುತ ಕಳಕಳಿಯುಳ್ಳ ವ್ಯಕ್ತಿಗಳಾಗಿ ಬೆಳೆಯುತ್ತಾರೆ.

ಇದೆಲ್ಲ ಮನೆಯೊಳಗಿನ ಮಾತಾಯಿತು. ಸಾಮಾಜಿಕ ಬದುಕಿನಲ್ಲಿ? ಗರ್ಭ ನಿರೋಧದ ಅನುಕೂಲ ದಿಂದಾಗಿ ಮಹಿಳೆ ಬದುಕಿನ ಎಲ್ಲ ಕ್ಷೇತ್ರಗಳಲ್ಲೂ ಹೆಚ್ಚು ಹೆಚ್ಚು ಕಾಣಿಸಿಕೊಳ್ಳಲಾರಂಭಿಸುತ್ತಾಳೆ. ಇದರ ಪರಿಣಾಮವಾಗಿ ನಾವಾಡುವ ಭಾಷೆ, ನಮ್ಮ ರಾಜಕೀಯ, ಮತಧರ್ಮ, ಅಧ್ಯಾತ್ಮ, ಸಮಾಜ, ಸಂಸ್ಕೃತಿ ಎಲ್ಲದರಲ್ಲೂ ಗುರುತರವಾದ ಬದಲಾವಣೆಗಳಾಗುತ್ತವೆ.

ಬಸಿರು - ಬಾಣಂತನಗಳ ಜಂಜಡದಿಂದ ಪಾರಾಗುವ ಮಹಿಳೆ ಸಹಜವಾಗಿಯೇ ಹತ್ತು ಹಲವು ಉದ್ಯೋಗ ಕ್ಷೇತ್ರಗಳನ್ನು ಪ್ರವೇಶಿಸುತ್ತಾಳೆ. ಮೊದಮೊದಲು ಮಹಿಳೆಯರು 'ಮೃದು' ವೃತ್ತಿಗಳಲ್ಲಿ ಹೆಚ್ಚು ಕಾಣಿಸಿಕೊಳ್ಳುತ್ತಾರೆ. 'ಮೃದು' ವೃತ್ತಿಗಳೆಂದರೆ ಬ್ಯಾಂಕು, ಕಚೇರಿ, ಶಿಕ್ಷಣ ಕ್ಷೇತ್ರ, ಆರೋಗ್ಯ ಕ್ಷೇತ್ರ (ಆರೋಗ್ಯ ಸೇವಕರು, ದಾದಿಯರು, ವೈದ್ಯರು), ಕಲೆ/ಮನರಂಜನೆ (ಸಂಗೀತ, ನೃತ್ಯ, ಟಿವಿ/ಸಿನೆಮಾ), ಪತ್ರಿಕೋದ್ಯಮ ಮುಂತಾದವು. ಕಳೆದ ಮೂವತ್ತು ವರ್ಷಗಳಲ್ಲಿ ಈ ವೃತ್ತಿಗಳಲ್ಲಿ ಮಹಿಳೆಯರ ಸಂಖ್ಯೆ ಎಷ್ಟು ಹೆಚ್ಚಾಗಿದೆ ಎಂಬುದನ್ನು ನಾವು ಕಣ್ಣಾರೆ ನೋಡುತ್ತಿದ್ದೇವೆ. ನಂತರದ ಹಂತದಲ್ಲಿ ಮಹಿಳೆಯರು ಹೆಚ್ಚು 'ಕಠಿಣ' ವೃತ್ತಿಗಳಾದ ಪೊಲೀಸ್, ಸೈನ್ಯ, ಸಂಶೋಧನಾ ವೃತ್ತಿಗಳು ಮುಂತಾದವುಗಳನ್ನೂ ಪ್ರವೇಶಿಸುತ್ತಾರೆ.

ಇದರಿಂದಾಗಿ ನಿದನಿಧಾನವಾಗಿ ಮಹಿಳೆಯರು ಸಮಾಜದ ಎಲ್ಲ ವಲಯಗಳಲ್ಲಿ ಕಾಣಿಸಿಕೊಳ್ಳಲು ಆರಂಭಿಸುತ್ತಾರೆ. ಅಷ್ಟೇ ಅಲ್ಲ ಅವಳ ಇರುವಿಕೆ ಸ್ಪಷ್ಟವಾಗಿ ಲಕ್ಷ್ಯಕ್ಕೆ ಬರಲಾರಂಭಿಸುತ್ತದೆ. ಮಹಿಳೆಯರ ಸಾಧನೆಗೆ ಸಂಬಂಧಿಸಿದಂತೆ 'ಕಾಜಿನ ಛಾವಣಿ'ಯ ಪರಿಕಲ್ಪನೆಯಿದೆಯಲ್ಲ ಅದು ಕರಗಿಹೋಗುತ್ತದೆ.

ಇಂದಿನ ಕಟುವಾಸ್ತವವೆಂದರೆ ಜಾಹೀರಾತು, ಸಿನೆಮಾ, ಟಿವಿ ಧಾರಾವಾಹಿಗಳಲ್ಲಿ ಮಹಿಳೆಯನ್ನು ಒಂದೋ ಭೋಗ ವಸ್ತುವಾಗಿ ಅಥವಾ ಅಳುವ ಅಸಹಾಯಕ ದುರ್ಬಲ ವ್ಯಕ್ತಿಯನ್ನಾಗಿ ತೋರಿಸ ಲಾಗುತ್ತದೆ. ಆದರೆ ಕ್ರಮೇಣವಾಗಿ ಮತ್ತು ನಿಶ್ಚಿತವಾಗಿ ಇದು ಬದಲಾಗುತ್ತ ಹೋಗುತ್ತದೆ.

ಹಿಂದೆಯಾದರೆ ಮಹಿಳೆಯ ಜಗತ್ತು ಕೇವಲ ಮನೆಗೇ ಸೀಮಿತವಾಗಿತ್ತು; ಆದುದರಿಂದ ಅವಳಿಗೆ ಹೊರಜಗತ್ತಿನ ಜ್ಞಾನವಿರಲಿಲ್ಲ; ಲೋಕಾನುಭವ ಬಹಳ ಕಡಿಮೆಯಾಗಿತ್ತು ಎಂದು ಹೇಳಬಹುದಿತ್ತು; ಆದರೆ ಇನ್ನು ಮುಂದೆ ಮಹಿಳೆ ಹಲವಾರು ಕ್ಷೇತ್ರಗಳಲ್ಲಿ ದುಡಿಯ ಲಾರಂಭಿಸಿದಾಗ ಅವಳಿಗೂ ವ್ಯಾಪಕವಾದ ಲೋಕಾನುಭವ ದೊರಕುತ್ತದೆ ಹಾಗೂ ಅವಳಿಗೆ ಇದರ ಆಧಾರದ ಮೇಲೆ ಹೆಚ್ಚು ನೈಜವಾದ ಮತ್ತು ಸಮಗ್ರವಾದ ಜೀವನ ದೃಷ್ಟಿಕೋನವನ್ನು ರೂಪಿಸಿಕೊಳ್ಳಲು ಶಕ್ಯವಾಗುತ್ತದೆ.

'ಮಹಿಳೆಯರು ಅರ್ಧ ಆಕಾಶವನ್ನೇ ಎತ್ತಿ ಹಿಡಿದಿದ್ದಾರೆ' ಎಂಬ ಚೀನಿ ಗಾದೆಯೊಂದಿದೆ. ಅರ್ಥಾತ್ ಈ ಬದುಕಿನಲ್ಲಿ ಅವರದ್ದೂ ಅರ್ಧ ಪಾಲಿದೆ. ಹತ್ತು ಹಲವು ಶಕ್ತಿಗಳು ಈ ಸತ್ಯವನ್ನು ನಿರಾಕರಿಸುತ್ತಲೇ ಬಂದಿವೆ. ಆದರೆ ಇನ್ನು ಮುಂದೆ ಇದು ಶಕ್ಯವಿಲ್ಲ. ಮಹಿಳೆಯರು ತಮ್ಮ ಅವಕಾಶಗಳಿಗಾಗಿ ಹಕ್ಕುಗಳಿಗಾಗಿ ಹೆಚ್ಚು ಹೆಚ್ಚು ಗಟ್ಟಿಯಾಗಿ ಕೇಳಲಾರಂಭಿಸುತ್ತಾರೆ. ಯಾವದು ಇಂದು ಮಹಿಳಾ ಮೀಸಲಾತಿ ಎಂಬ ಹೆಸರಿನಡಿ ವ್ಯವಸ್ಥೆಯು ಮಹಿಳೆಯರಿಗೆ ಮಾಡಿ ಕೊಡುವ ಸೌಲಭ್ಯ ಎಂದು ಪರಿಗಣಿಸಲ್ಪಟ್ಟಿದೆಯೋ ಅದು ನಿಜ ವಾಗಿಯೂ ಅವರ ಹಕ್ಕು ಎಂಬುದು ನಿಚ್ಚಳವಾಗುತ್ತ ಹೋಗುತ್ತದೆ. ಇದು ಬಸ್‌ನಲ್ಲಿಯ ಸೀಟುಗಳಿಂದಾರಂಭಿಸಿ ಸಂಸತ್ತಿನಲ್ಲಿಯ ಸ್ಥಾನಗಳವರೆಗೂ ವಿಸ್ತರಿಸುತ್ತದೆ.

ಬಹಿರಂಗ ಅಂದರೆ ಸಾಮಾಜಿಕ ಬದುಕಿನಲ್ಲಿ ಮಹಿಳೆಯ ಪಾಲು ಹೆಚ್ಚುತ್ತ ಹೋದಂತೆ ನಾವು ಆಡುವ ಭಾಷೆಯೊಳಗೂ ಗಣನೀಯ ಬದಲಾವಣೆಗಳಾಗುತ್ತವೆ. ಈ ವರೆಗೂ ನಾವು ರೂಪಿಸಿಕೊಂಡಿರುವ ಭಾಷೆ, ಬಳಸುತ್ತಿರುವ ಭಾಷೆ ಬಹುಮಟ್ಟಿಗೆ ಪುರುಷಪ್ರಧಾನ ವಾದುದು; ಪುರುಷಕೇಂದ್ರಿತವಾದುದು. ನಮ್ಮ ಭಾಷೆಯಲ್ಲಿ ಈ ಪುರುಷ ಪ್ರಾಧಾನ್ಯತೆ ಎಂಬುದು ಎಷ್ಟು ಸೂಕ್ಷ್ಮವಾಗಿ ಹಾಗೂ ಯಾವೆಲ್ಲ ಸ್ತರಗಳಲ್ಲಿ ಕೆಲಸ ಮಾಡುತ್ತದೆಯೆಂಬುದು ನಿಜಕ್ಕೂ ಒಂದು ಪ್ರತ್ಯೇಕ ಅಧ್ಯಯನದ ವಿಷಯವೇ ಸರಿ. ಮಕ್ಕಳು ಆಡುವ ಗೋಲಿಗುಂಡದ ಆಟದಲ್ಲಿ ಗೋಲಿ ಹೊಡೆಯುವವರು 'ಗಂಡು', ಹೊಡೆಸಿಕೊಳ್ಳು ವವರು 'ಹೆಣ್ಣು'. ಏನಾದರೂ ಪೆಟ್ಟಾಗಿ ಒಬ್ಬ ಹುಡುಗ ಅಳಲಾರಂಭಿಸಿದರೆ 'ಏನೋ ನೀ ಹೆಂಗಸರಂಗ ಅಳ್ತೀಯಲ್ಲೋ' ಅನ್ನುವ ಮಾತು; ಒಬ್ಬ ಗಂಡಸು ಒಂದು ಕೆಲಸ ಮಾಡಲು ಹಿಂದೇಟು ಹಾಕಿದರೆ 'ನೀ ಏನ್ ಕೈಯಾಗ್ ಬಳಿ ಇಟಗೊಂಡಿಯೇನು' ಎನ್ನುವ ಮೂದಲಿಕೆ. 'ಹೆಂಗಸರ ಬುದ್ಧಿ ಮೊಳಕಾಲ ಕೆಳಗೆ' ಎಂದು ಹೀಯಾಳಿಸುವ ಗಾದೆಗಳು, 'ಅಮ್ಮಾವ್ರ ಗಂಡ' ಎಂಬ ಅಪಹಾಸ್ಯದ ಪರಿಕಲ್ಪನೆ, ಪ್ರತ್ಯೇಕವಾಗಿ ಪರೋಕ್ಷವಾಗಿ ಮಹಿಳೆಯರನ್ನು ಮೂದಲಿಸುವ ಜೋಕುಗಳು, ಎರಡರ್ಥದ ಮಾತು/ಹಾಡುಗಳು, ರಾಷ್ಟ್ರದ ಅತ್ಯುಚ್ಚ ಸ್ಥಾನದ ವ್ಯಕ್ತಿ 'ರಾಷ್ಟ್ರಪತಿ', ನೀವು ಮಹಿಳೆ ಯಾಗಿದ್ದೂ ನಿಮ್ಮ ಕತೆಯನ್ನು ನೀವೇ ಹೇಳಿದರೆ ಅದು 'ಪ್ರಥಮ ಪುರುಷ' ನಿವೇದನೆ, ವಿಜಾಪುರದ ಕನ್ನಡ 'ಗಂಡು ಮೆಟ್ಟಿನ ಕನ್ನಡ', ಸಣ್ಣ ಮಕ್ಕಳ ಕಾಯಿಲೆಗೆ ಕಾರಣವಾದ 'ಮುಟ್ಟು ದೋಷ'... ಹೀಗೆ ಈ ಪಟ್ಟಿ ಗುಜರಾತ್ ಕೋಮುಗಲಭೆಯ ಸಂತ್ರಸ್ತರ ಅಳಲಿನಂತೆ ಉದ್ದೂ ಉದ್ದವಾಗಿ ಬೆಳೆಯುತ್ತವೆ. ಆದರೆ ಈ ಸ್ತ್ರೀ ನಿಂದಕ ಗಾದೆ, ನುಡಿಗಟ್ಟು, ಧ್ವನ್ಯಾರ್ಥಗಳು, ಪರಿಕಲ್ಪನೆಗಳು ಎಲ್ಲ ಬದಲಾಗುತ್ತ ಹೋಗುತ್ತವೆ.

ಗರ್ಭನಿರೋಧದ ಸೌಕರ್ಯದಿಂದ 'ಮುಕ್ತ'ಳಾಗುವ ಮಹಿಳೆ ಸಾಮಾಜಿಕ ಬದುಕಿನಲ್ಲಿ ಹೆಚ್ಚು ಹೆಚ್ಚು ಜಾಗವನ್ನು ಆವರಿಸುತ್ತ ಹೋದಂತೆ ಬದುಕಿನ ಬಹುಮುಖ್ಯ ಸಂಗತಿಗಳಾದ ಜಾತಿಮತಗಳ ವಿಷಯದಲ್ಲಿಯೂ ತಲಸ್ಪರ್ಶಿ ಬದಲಾವಣೆಗಳಾಗುತ್ತವೆ. ಬ್ರಾಹ್ಮಣ, ಕ್ಷತ್ರಿಯ, ಜೈನ, ಇಸ್ಲಾಮ್, ಕ್ರೈಸ್ತ ಮುಂತಾದ ಬಹುತೇಕ ಎಲ್ಲ ಸಾಂಸ್ಥೀಕೃತ ಜಾತಿಮತಗಳೂ ಬಹುಮಟ್ಟಿಗೆ ಪುರುಷಮನಸ್ಸಿನ ಸೃಷ್ಟಿಗಳೇ. ಹಾಗಾಗಿಯೇ ಅವೆಲ್ಲ ಸ್ವಲ್ಪ ಹೆಚ್ಚು ಸ್ವಲ್ಪ ಕಡಿಮೆ ತತ್ವ-ಆಚರಣೆ ಎರಡೂ ನೆಲೆಗಳಲ್ಲಿ ಸ್ಪಷ್ಟವಾಗಿ ಸ್ತ್ರೀವಿರೋಧಿಯಾಗಿವೆ.

ಬ್ರಾಹ್ಮಣರಿಗೆ ಮಹಿಳೆಯ ಮಾಸಿಕ ಸ್ರಾವವೇ ಅಶುದ್ಧ, ಅಸ್ಪೃಶ್ಯ- ಬ್ರಾಹ್ಮಣ ಮಹಿಳೆ ತಿಂಗಳಿಗೆ ನಾಲ್ಕು ದಿನ ಹೊರಗಾಗುವದು ನಿಮಗೆ

'ಹೊಸತು' ವಾಚಕ ವೃಂದಕ್ಕೆ
ಹೊಸ ವರುಷ ಶಾಂತಿ ನೆಮ್ಮದಿ ತರಲಿ



# ಶ್ರೀಮತಿ ಜಿ. ಸಿಂಧೂಬಾಯಿ

## ಗುಲ್ಬರ್ಗಾ

(ನೀರಾವರಿ ಇಲಾಖೆಯಲ್ಲಿ ಅಧೀಕ್ಷಕ ಅಭಿಯಂತರರಾಗಿದ್ದ
ಕೀರ್ತಿಶೇಷ ಶ್ರೀ ವಾಸುದೇವರಾವ್ ಅವರ ಧರ್ಮಪತ್ನಿ)

## ಓದುಗರಿಗೆ ಹೊಸ ವರ್ಷದ ಶುಭಾಶಯಗಳು

1. ಸೀಸ ಮಕ್ಕಳ ಬೌದ್ಧಿಕ ಸಾಮರ್ಥ್ಯವನ್ನು ಕುಗ್ಗಿಸುತ್ತದೆ ಎಂದು ಅರಿತಿದ್ದ ಬಹಳಷ್ಟು ಮುಂದುವರಿದ ರಾಷ್ಟ್ರಗಳು, ಒಂದು ನೂರು ವರ್ಷದಷ್ಟು ಹಿಂದೆಯೇ ಬಣ್ಣದಲ್ಲಿ ಸೀಸ ಬೆರೆಸುವುದನ್ನು ನಿಷೇಧಿಸಿದ್ದವು. ಭಾರತದಲ್ಲಿ, ಮನೆಗಳಲ್ಲಿ ಬಳಸುವ ಪೇಂಟ್‌ಗಳ ಶೇ. 91ರಷ್ಟರಲ್ಲಿ ಇನ್ನೂ ಸೀಸವನ್ನು ಬೆರೆಸುತ್ತಾರೆ.

2. ಬಹುವಾಗಿ ನಮ್ಮ ಸಾಂಪ್ರದಾಯಿಕ ಔಷಧಿಗಳಲ್ಲಿ ಸೀಸ ಬೆರೆತಿದೆ. ರೋಗಿಯ ಕಾಯಿಲೆಯನ್ನು ವಾಸಿ ಮಾಡಬೇಕಾದ ಔಷಧಿ ವಿಷಮಯವಾಗಿದೆ.

3. ನಿರುಪಯೋಗಿಯಾದ ಬ್ಯಾಟರಿಗಳನ್ನು ಒಡೆದು, ಸೀಸವನ್ನು ಕರಗಿಸುವ ಅಸಂಘಟಿತ ಬ್ಯಾಟರಿ ರಿಪೇರಿಯ ಅಂಗಡಿಗಳು, ಎಲ್ಲೆಲ್ಲೂ ಹರಡಿಕೊಂಡು, ಸೀಸದ ಕಣಗಳನ್ನು ವಾತಾವರಣಕ್ಕೆ ಹರಡಿ ಕಲುಷಿತಗೊಳಿಸುತ್ತಿವೆ. ನಿರುಪಯೋಗಿ ಬ್ಯಾಟರಿಗಳನ್ನು ಬ್ಯಾಟರಿ ವ್ಯಾಪಾರಿಗೆ ಹಿಂತಿರುಗಿಸಿ, ಹೊಸ ಬ್ಯಾಟರಿಯ ಬೆಲೆಯಲ್ಲಿ ಸೋಡಿ ಪಡೆದುಕೊಳ್ಳುವ ಪರಿಪಾಟಲು ನಮಗೆ ಬರಬೇಕು.


**ಡಾ|| ತೂಪ್ಪಿಲ್ ವೆಂಕಟೇಶ್**
ಕ್ವಾಲಿಟಿ ಕೌನ್ಸಿಲ್ ಆಫ್ ಇಂಡಿಯಾದ ಸಲಹೆಗಾರ
ನ್ಯಾಷನಲ್ ರೆಫರಾಲ್ ಸೆಂಟರ್ ಫಾರ್ ಲೆಡ್ ಪಾಯಿಸನಿಂಗ್ ಇನ್ ಇಂಡಿಯಾ
ಸೇಂಟ್ ಜಾನ್ಸ್ ಮೆಡಿಕಲ್ ಕಾಲೇಜ್, ಬೆಂಗಳೂರು
ಫೋನ್ : 80-25532146 (ಮನೆ), 80-22065058 (ಕಛೇರಿ)
9341242430 (ಮೊಬೈಲ್), 80-25502341 (ಫ್ಯಾಕ್ಸ್)

# ಬಯಲು ಆಲಯದಲ್ಲಿ



ಏಳೇಳು ಜನುಮವ ದಾಟಿಬಂದ ಗುರುವೆ
ಈ ಹೆಣ್ಣು ಜೀವವ ಗೆಳತಿಯೆಂದೆ
ಲೋಕ ಮರೆತ ಮಾತಲ್ಲಿ
ನಿನ್ನ ನೋವಿನ ಆ ಹಾಡೆ
ದಾರಿ ತೋರಿಸಿತು
ಸಮಾನ ದುಃಖಿಗಳು ನಾವು
ನೀನು ಕಟ್ಟಲೆಗಳು ಒಡೆದ ದಾರಿಯಲ್ಲಿ
ನಾನಿನ್ನು ಕಟ್ಟಿಕೊಂಡ ಈ ಲೋಕದಲ್ಲಿ.

ಇಲ್ಲಿ ನೋವಿತ್ತು, ಅಪಮಾನವಿತ್ತು
ಸಂತೈಸುವ ಹಲವು ಕೈಗಳಿತ್ತು
ಹಾರೊಡೆದ ಒಂದು ಕತೆಗೆ
ಎಷ್ಟೊಂದು ಹೆಸರುಗಳು.

ಡಾ|| ಎಚ್. ಎಲ್. ಪುಷ್ಪ
ನಂ. ೩೭/೨ಎ, ನಿಸರ್ಗ, ಸಾಗರಬಾವಿ ರಸ್ತೆ
ವಿಜಯನಗರ, ಬೆಂಗಳೂರು - ೫೬೦ ೦೪೦

ಗೆಲ್ಲಲೆಂದೇ ಹುಟ್ಟದಿದ್ದರೂ
ನಂಬಿ ನೋವನ್ನೇ ಪಡೆದರೂ
ಏಳು ಬೆಟ್ಟಗಳ ಮುಳ್ಳು ತುಳಿದರೂ
ನೀನೆಲ್ಲಾದರೂ ಸಿಗಬಹುದೆಂಬ ಭರವಸೆಯಿರಲಿಲ್ಲ
ಪ್ರತಿಬಿಂಬವಿಲ್ಲದ ಆ ಕನ್ನಡಿ ಬೇರೆ ಅಣಕಿಸುತ್ತಿತ್ತು.

ಎಲ್ಲರೊಡನಿದ್ದಾಗಲೂ ನೆರಳಾಗಿ ಕಾಡುತ್ತಾ
ಕ್ಷಣಕಾಲ ಬಿಡಲಿಲ್ಲ ಆ ಕೂಸು
ಒಂದೇ ಸಮನೆ ಎದೆಯಲ್ಲಿ ಅಳುತ್ತಿತ್ತು
ನೀನು ಸರಿಯಾಗಿ ಗ್ರಹಿಸುತ್ತಿಲ್ಲ,
ಎಲ್ಲಿದೆ ನಿನ್ನ ಮನ ಎಂದು ಹಂಗಿಸಿದರೂ
ದೇವರೇ ಹೇಗೆ ಹೇಳಲಿ
ಸಾಮಾನು ಸರಂಜಾಮು ತುಂಬಿದ
ಒಬ್ಬಂಟಿ ಹಡಗಿದು, ಬಂದರುಗಳೇ ಇಲ್ಲದ
ಬರಿ ನೀರ ದಾರಿಯ ನಂಬಿದೆಯೆಂದು.

ಕಾಯುತ್ತಿರು ಗುರುವೆ ಅಲ್ಲಿ ಆ ಲೋಕದಲ್ಲಿ
ಎಲ್ಲ ರಹದಾರಿಗಳ ತೊರೆದು ದಾಖಲಾಗುತ್ತೇನೆ
ರಸೀದಿ ಇರಲಿ ಹಾಗೆ ಜೋಪಾನ.

ಕಾದ ಬೆಂಗಾಡಲ್ಲಿ ಅರೆ ಬೆಂದ ಶವಗಳ
ನಡುವೆ ಕಣ್ಣೊಂದು ಕಾಯುತಿದೆ
ಜೀವದ ಹಂಗು ತೊರೆದು

ತಾಯಿಯಲ್ಲ, ಹೆಂಡತಿಯಲ್ಲ, ಹೆಂಗೂಸಲ್ಲ
ಇಲ್ಲಿಯೂ ನಿಲ್ಲದ, ಅಲ್ಲಿಯೂ ಸಲ್ಲದ
ಯಾತರ ವ್ಯಾಪಾರವಿದು, ಲಾಭ ನಷ್ಟಗಳಿಲ್ಲದೆ.

ಈ ಜಾಲಿ ಮರದ ಕೆಳಗೆ ಬೆನ್ನಟ್ಟಿ
ಅವರು ನೆರಳ ಅರಸುತ್ತಾರೆ
ತಮ್ಮದೇ ಬೆನ್ನು ಕಾಣದವರಿಗೆ
ನೆರಳೆನ್ನುವುದು ಎಲ್ಲಿಯ ಮಾತು.

ನೀನಿಲ್ಲವೆಂದರೂ ಇದ್ದೀಯೆ
ನೀನೇ ಬರೆದ ಕವಿತೆಗಳಲ್ಲಿ
ನರಳಿ ನಿಟ್ಟುಸಿರು ಬಿಡುತ್ತಾ
ನೀನು ತೋರಿದ್ದು ಅದು ದಾರಿಯೇ
ಇದೆಂಥ ಪಯಣವೆಂದು ಅವರೆಲ್ಲ ನಕ್ಕರು.

ಎಲ್ಲಿಯ ಗುರು, ಎಲ್ಲಿಯ ಶಿಷ್ಯೆ
ಎಲ್ಲಿ ಎಲ್ಲಿಯದೋ ಸೇರಿಯಲ್ಲವೇ
ಮತ್ತೊಂದು, ಮಗದೊಂದು ಆಗುವುದು

ಸಮುದ್ರದೊಳಗಣ ಉಪ್ಪು, ಬೆಟ್ಟದ ನೆಲ್ಲಿ
ಎಲ್ಲಿಂದೆಲ್ಲಿಯ ಸಂಬಂಧ ಗುರುವೇ
ಅರಿವೆನ್ನುವ ಮೊಟ್ಟೆ ಒಡೆದಲ್ಲದೆ
ಹಿಂಗದು ಈ ಕೌತುಕ
ನಿನ್ನ ಕರುಣೆಯ ಕಣ್ಣು ತೆರದಲ್ಲದೆ
ಈ ತನು, ತನುವಿನ ಭವ ಹಿಂಗದು
ಆನು, ನೀನೆಂಬ ಉಭಯವಳಿಯದು.

ಗೊತ್ತಿರಬಹುದು. ಆದರೆ ಇದಕ್ಕೆ ಶಿಖರಪ್ರಾಯವಾದ ಪರಮಪವಿತ್ರ ಋಷಿಪಂಚಮಿ ವ್ರತದ ಬಗ್ಗೆ ಗೊತ್ತಿದೆಯೆ? ಇಸ್ಲಾಮಿನಲ್ಲಿ ಬಹುಪತಿತ್ವ ನಿಷಿದ್ಧ, ಆದರೆ ಬಹುಪತ್ನಿತ್ವ ಮಾನ್ಯ! ಇಸ್ಲಾಮಿನಲ್ಲಿ ತ್ರಿವಳಿ ತಲಾಖ್ ಇದೆಯೆಂದರೆ ಕ್ರೈಸ್ತ ಮತದಲ್ಲಿ ಸಮಾಗಮವೆಂಬುದೇ ಒಂದು ಲೆಕ್ಕಕ್ಕೆ ಅಪವಿತ್ರವಾಗಿ ಮದುವೆಯೇ ಆಗದ ಮದರ್ ತೆರೆಸಾ ಆಗುತ್ತಾಳಾದರೂ, ಜೋಸೆಫ್‌ನೊಂದಿಗೆ ಮದುವೆಯಾಗಿ ಯೇಸುವಿಗೆ ಜನ್ಮ ಕೊಟ್ಟರೂ ತಾಯಿ ಮೇರಿ ಮಾತ್ರ ಕನ್ಯೆಯೇ! – ಹೀಗೆ ಪ್ರತಿಯೊಂದು ಜಾತಿ, ಪ್ರತಿಯೊಂದು ಮತದಲ್ಲೂ ಇಂತಹ ಅದೆಷ್ಟೋ ನಿದರ್ಶನಗಳನ್ನು ಪಟ್ಟಿ ಮಾಡಬಹುದು. ಬ್ರಾಹ್ಮಣರಲ್ಲಿ ವಿಧವೆ ಬಹುತೇಕ ಧಾರ್ಮಿಕ ವಿಧಿಗಳಿಂದ ಬಹಿಷ್ಕೃತಳಾದರೆ, ಇಸ್ಲಾಮಿನಲ್ಲಿ ರಜಸ್ವಲೆಯಾಗುವ ವಯಸ್ಸಿನ ಮಹಿಳೆ ಬುರ್ಖಾ ಹಾಕದೆ ಮನೆಯ ಹೊರಗೆ ಬೀಳಬಾರದು. ಇನ್ನು ಮಠಾಧಿಪತಿಯಾಗುವ ಅವಕಾಶವಂತೂ ಪುರುಷರಿಗೇ ಮಾತ್ರ.

ಆದರೆ ಮಹಿಳೆಯರ ಪಾಲು ಹೆಚ್ಚುತ್ತ ಹೋದಂತೆ ಅವರ ದನಿ ಗಟ್ಟಿಯಾಗುತ್ತ ಹೋದಂತೆ ಈ ಎಲ್ಲ ಸ್ತ್ರೀ ವಿರೋಧಿ ಮೌಲ್ಯ, ನಿಯಮ, ಸಂಪ್ರದಾಯ, ಆಚರಣೆಗಳು ಚಳಿಗಾಲದಲ್ಲಿ ನಿಂತ ಅರಳಿಯ ಮರದ ಒಣಗಿದ ಎಲೆಗಳಂತೆ ಒಂದೊಂದಾಗಿ ಉದುರಿಹೋಗುತ್ತವೆ.

ಇದರ ಜೊತೆಗೇ ಬಹುಶಃ ಇನ್ನೂ ಒಂದು ಮಾತು ಹೇಳುವದೊಳಿತು. ಬಹುತೇಕ ಎಲ್ಲ ಮತಧರ್ಮಗಳ ತಾತ್ವಿಕ ನೆಲೆಗಟ್ಟಾಗಿ ಹಾಗೂ ಅದರಿಂದ ಪ್ರತ್ಯೇಕವಾಗಿ ಕೂಡ ಅಧ್ಯಾತ್ಮವೆಂಬುದಿದೆ ಹಾಗೂ ಈ ಅಧ್ಯಾತ್ಮದ ಒಂದು ಅತಿ ಮುಖ್ಯ ಲಕ್ಷಣವೆಂದರೆ ಪರಮಾತ್ಮ ಸಾಧನೆಗಾಗಿ, ಆತ್ಯಂತಿಕ ಮನಶ್ಶಾಂತಿಗಾಗಿ ಲೌಕಿಕ ಭೋಗಲಾಲಸೆಗಳನ್ನು ಜಯಿಸುವದು/ತ್ಯಜಿಸುವದು. ಇದೇನೋ ಸರಿಯೇ. ಆದರೆ ಈ ಲೌಕಿಕ ಭೋಗಲಾಲಸೆಗಳನ್ನು ಇವರು ಗುರುತಿಸುವದು ಹೇಗೆ ಗೊತ್ತೆ? ಹೆಣ್ಣು ಹೊನ್ನು ಮಣ್ಣು ಎಂದು. ಹೆಣ್ಣು ಯಾಕೆ ಸ್ವಾಮಿ? ಎಂಬ ಪ್ರಶ್ನೆಗೆ ಅವರ ಉತ್ತರ 'ಅದು ಹಾಗಲ್ಲ, ನಾವು ಜಯಿಸಬೇಕಾದುದು ಕಾಮವನ್ನು, ಕಾಮವನ್ನು ನಾವು ಹೆಣ್ಣು ಎಂದು ಕರೆದಿದ್ದೇವಷ್ಟೇ'. ಇದನ್ನೇ ಸ್ವಾಮಿ, ನಾವು ಪುರುಷಕೇಂದ್ರಿತ ಪರಿಕಲ್ಪನೆ, ಪುರುಷಕೇಂದ್ರಿತ ಭಾಷೆ ಎಂದು ಹೇಳುವದು. ಮಹಿಳೆಗೂ ಅಧ್ಯಾತ್ಮದ, ಆತ್ಮಸಾಕ್ಷಾತ್ಕಾರದ ಹಂಬಲವಿರಬಹುದಲ್ಲ. ಅಕ್ಕ, ಮೀರಾ, ರಾಬಿಯಾಳಂಥವರು ಇದ್ದಾರಲ್ಲ, ಅಂದ ಬಳಿಕ ಯಾಕೆ ನೀವು ಒಂದು ಸಲವೂ ಅಪ್ಪಿತಪ್ಪಿ ಕೂಡ ಗಂಡು ಹೊನ್ನು ಮಣ್ಣು ಎಂದು ಹೇಳುವುದಿಲ್ಲ? ಯಾಕೆ ಯಾವಾಗಲೂ ಹೆಣ್ಣು ಹೊನ್ನು ಮಣ್ಣು? ಇದಕ್ಕೆ ಗಾಢ ಮೌನದ ಉತ್ತರ ನಡೆಯುವದಿಲ್ಲ. ಅಧ್ಯಾತ್ಮದ ಸಾಧಕರೂ ತಮ್ಮ



ದೃಷ್ಟಿಕೋನ, ಭಾಷೆ ಬದಲಾಯಿಸಿಕೊಳ್ಳುವದು ಅನಿವಾರ್ಯವಾಗುತ್ತದೆ. ಪಾ ದೇಶಗಳಲ್ಲಿ ಹರಡುತ್ತಿರುವ ಬೌದ್ಧಮತದ ಒಂದು ಶಾಖೆಯಾದ ಝೆನ್‌ನಲ್ಲಿ ಮಹಿಳೆ ಸಂಖ್ಯೆ ಹೆಚ್ಚುತ್ತಿದ್ದು ಈ ತರದ ಬದಲಾವಣೆಗಳು ಆಗಲೇ ಕಾಣುತ್ತಿವೆ.

ಬಹುಶಃ ಇಷ್ಟೆಲ್ಲ ಹೇಳಿಯಾದ ಬಳಿಕ ರಾಜಕೀಯದಲ್ಲೂ ಆಮೂ ಬದಲಾವಣೆಗಳು ಘಟಿಸುತ್ತವೆ ಎಂಬುದನ್ನು ವಿವರಿಸಿ ಹೇಳಬೇಕಾದ ಅಗತ್ಯವಿಲ್ಲ. ಗ್ರಾ ಪಂಚಾಯತ್ ವ್ಯವಸ್ಥೆಯಲ್ಲಿ ರಾಜಕೀಯ ಪಕ್ಷಗಳ ಆಂತರಿಕ ಸಂರಚನೆಯಲ್ಲಿ ಹಾ ಶಾಸನಸಭೆ ಲೋಕಸಭೆಗಳಲ್ಲಿ ಗಾಳಿ ಎತ್ತ ಬೀಸುತ್ತಿದೆ ಎಂಬುದು ನಾವು ನೋಡುತ್ತಿ ವಿಷಯವೇ ಆಗಿದೆ.

ಕೊನೆಗೆ ಒಂದು ಮಾತು. ಈ ಎಲ್ಲ ಬದಲಾವಣೆಗಳು ಸಹಜವಾಗಿ ಸರಳವಾಗಿ ವ ಶೀಘ್ರವಾಗಿ ಆಗಿಬಿಡುತ್ತವೆ ಎಂದಲ್ಲ. ಪುರುಷಪ್ರಧಾನ ವ್ಯವಸ್ಥೆಯು ಬೇರೆ ಬೇರೆ ಕ್ಷೇತ್ರಗ ಬೇರೆ ಬೇರೆ ರೀತಿಯಲ್ಲಿ ಈ ಬದಲಾವಣೆಗಳಿಗೆ ಪ್ರತಿರೋಧ ಒಡ್ಡಿಯೇ ಒಡ್ಡುತ್ತದೆ. ಆದ ಗರ್ಭನಿರೋಧದ ಸೌಲಭ್ಯದಿಂದಾಗಿ ಮುಕ್ತಳಾದ ಮಹಿಳೆ ಧರ್ಮಚಕ್ರವನ್ನು ಸತತ ಉರುಳಿಸುತ್ತ ಎಲ್ಲವನ್ನೂ ಬದಲಿಸುತ್ತ ತನ್ನ ಜೊತೆಗೆ ಹೊಸಯುಗದ ಪುರುಷನ ಕರೆದುಕೊಂಡು 'ಕುಣಿಯೋಣು ಬಾರಾ ಕುಣಿಯೋಣು ಬಾ' ಎಂದು ಗಟ್ಟಿಯಾಗಿ ಹಾ ಮುಂದೆ ಸಾಗುತ್ತಾಳೆ ದೂರ ದಿಗಂತದ ಹಸಿರಿನತ್ತ.

ಸಂಕುಲಜೀವ
ನಂ.೧೯/೨, ನಗೆ ಮಲ್ಲಿಗೆ, ಮಹಿಷಿ ರಸ್ತೆ, ಮಾಳಮಡ್ಡಿ, ಧಾರವಾಡ - ೫೮೦ ೦೦೭

# ಸಾದರ ಸ್ವೀಕಾರ

**ಗಾಂಧಿ ಕಗ್ಗೊಲೆ – ಕಾರಣ-ಪರಿಣಾಮ** ಕೋ. ಚೆನ್ನಬಸಪ್ಪ
**ಪುಟ :** ೧೫೨ **ಬೆಲೆ : ರೂ.** ೮೫
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಜಾತಿ – ಕೆಲವು ಟಿಪ್ಪಣಿಗಳು** ಜಿ. ಶಿವರಾಮಕೃಷ್ಣನ್
**ಪುಟ :** ೪೮ **ಬೆಲೆ : ರೂ.** ೪೦
**ಪರಸ್ಪರ ಪ್ರಕಾಶನ,** ಚಿಕ್ಕನಹಳ್ಳಿ, ಸುಲಿಕೆರೆ ಅಂಚೆ, ಬೆಂಗಳೂರು - ೫೬೦ ೦೬೦

**ಗಾದೆಯ ಮಾತು** ಸಂ.: ಪ್ರೊ|| ಮಲ್ಲೇಪುರಂ ಜಿ. ವೆಂಕಟೇಶ
**ಪುಟ :** ೬೪ **ಬೆಲೆ : ರೂ.** ೨೫

**ಸಖಿ ಸಖಿ** – (ಗಜಲ್‌ಗಳ ಸಂಕಲನ) ರವಿ ಹಂಪಿ
**ಪುಟ :** ೮೦ **ಬೆಲೆ : ರೂ.** ೫೦

**ಭಾವರಶ್ಮಿ** (ವೈಚಾರಿಕ ಸಾಹಿತ್ಯ) ಬಿ. ಪಿ. ಶಿವಾನಂದ ರಾವ್
**ಪುಟ :** ೧೦೬ **ಬೆಲೆ : ರೂ.** ೬೫
**ಜಾಗೃತಿ ಪ್ರಿಂಟರ್,** ನಂ. ೧೯೬/೧, ೨ನೇ ಮುಖ್ಯರಸ್ತೆ, ಹೆಚ್. ವಿ. ಆರ್. ಬಡಾವಣೆ, ಬೆಂಗಳೂರು - ೭೯

**ನೀಲಿ** (ಪದ್ಯ ಸಂಕಲನ) ಹರ್ಷಾದ್ ವರ್ಕಾಡಿ
**ಪುಟ :** ೬೪ **ಬೆಲೆ : ರೂ.** ೫೦
**ಹೇಮಾಂಶು ಪ್ರಕಾಶನ,** ದೇರೆಬೈಲು, ಮಂಗಳೂರು - ೫೭೫ ೦೦೬

**ಭ್ರಮೆ ಮತ್ತು ವಾಸ್ತವ** (ಅಂಕಣ ಬರಹ) ಗೋಪಾಲ ಬಿ. ಶೆಟ್ಟಿ
**ಪುಟ :** ೨೦೮ **ಬೆಲೆ : ರೂ.** ೧೦೦

**ಭಾವನಾ** (ಸಮಗ್ರ ಕಾವ್ಯ : ೧೯೭೮-೧೯೯೪)
ಗೋಪಾಲ ಬಿ. ಶೆಟ್ಟಿ
**ಪುಟ :** ೨೩೩ **ಬೆಲೆ : ರೂ.** ೧೩೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ನೂತನ ಪಬ್ಲಿಕೇಷನ್ಸ್,** 'ಆರಾಧನಾ', ಇಂದ್ರಾಳಿ, ೩ನೇ ಅಡ್ಡರಸ್ತೆ, ಕುಂಜಿಬೆಟ್ಟು, ಉಡುಪಿ - ೫೭೬ ೧೦೨

**ಬಿಸ್ಲು ಬಾಳೇಹಣ್ಣು** (ಪ್ರಬಂಧಗಳು) ಕೃಷ್ಣಮೂರ್ತಿ ಬಿಳಿಗೆರೆ
**ಪುಟ :** ೧೪೪ **ಬೆಲೆ : ರೂ.** ೮೦
**ಕ್ರೈಸ್ಟ್ ಕಾಲೇಜು ಕನ್ನಡ ಸಂಘ,** ಬೆಂಗಳೂರು - ೨೯

**ಯಾರದೀ ಅಮೇರಿಕ ?** (ಪ್ರವಾಸ ಕಥನ)
ಪ್ರೊ|| ಶಿವರಾಮಯ್ಯ
**ಪುಟ :** ೧೬೦ **ಬೆಲೆ : ರೂ.** ೮೫
**ಧಾತ್ರಿ ಪುಸ್ತಕ,** ನಂ. ೧೭೦, ೩ನೇ 'ಸಿ' ಅಡ್ಡರಸ್ತೆ, ೯ ಬ್ಲಾಕ್, ವಿನಾಯಕ ಬಡಾವಣೆ, ನಾಗರಬಾವಿ ೨ನೇ ಹಂ ಬೆಂಗಳೂರು - ೫೬೦ ೦೭೨

**ತ್ರಸ್ತ** (ಕಾದಂಬರಿ) ರೇಖಾ ಕಾಖಂ
**ಪುಟ :** ೨೨೪ **ಬೆಲೆ : ರೂ.** ೧
**ಮನೋಹರ ಗ್ರಂಥ ಮಾಲಾ,** ಲಕ್ಷ್ಮೀಭವನ, ಸುಭಾ ರಸ್ತೆ, ಧಾರವಾಡ - ೫೮೦ ೦೦೧

**ಹೂ ಬಾಣ** (ಹನಿಗವನ ಸಂಕಲನ) ಎಚ್. ಎ. ಭಿಕ್ಷಾವರ್ತಿ
**ಪುಟ :** ೭೨ **ಬೆಲೆ : ರೂ.**
**ಪರಂಜ್ಯೋತಿ ಪ್ರಕಾಶನ,** ವಿದ್ಯಾನಗರ, ಹರಿಹರ - ೫೭೭ ೬೦

**ಆಕಾಶದ ಹಾಡು** (ಕಾದಂಬರಿ) ಅನಸೂಯಾದೇ
**ಪುಟ :** ೨೬೮ **ಬೆಲೆ : ರೂ.** ೧

**ದೂಸ್ರಾ** (ಲೇಖನ ಸಂಗ್ರಹ) ರವಿಕುಮಾ
**ಪುಟ :** ೧೦೪ **ಬೆಲೆ : ರೂ.**
ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಸೃಷ್ಟಿ ಪಬ್ಲಿಕೇಷನ್ಸ್,** ನಂ. ೨/೨, ೧ನೇ ಅಡ್ಡರಸ್ತೆ, ೧ ಮುಖ್ಯರಸ್ತೆ, ಗೋವಿಂದಪ್ಪ ಲೇಔಟ್, ನಾಗಶೆಟ್ಟಿಹ ಬೆಂಗಳೂರು - ೯೪

# ಹಿನ್ನಡೆಯ ಉದಾಹರಣೆಗಳು

**ಹೊ**ಸವರ್ಷದ ಶುಭಾಶಯಗಳು. ಚಳಿಗಾಲದ ಶುಭ್ರರಾತ್ರಿಗಳಲ್ಲಿ ನಿಮ್ಮನ್ನು ಆಕರ್ಷಿಸುವುದು ಪೂರ್ವ ದಿಕ್ಕು. ಅಲ್ಲಿ ಥಳಗುಟ್ಟುವ ಕಿತ್ತಲೆ ಬಣ್ಣದ ಚುಕ್ಕೆಯೇ ಮಂಗಳ. ಯಾವುದೇ ನಕ್ಷೆಯ ಸಹಾಯವೂ ಇಲ್ಲದೆ ...ನ್ನು ಗುರುತಿಸಬಹುದು. ಆದರೆ ಅದರ ಆಚೀಚೆ ಯಾವುದೇ ನಕ್ಷತ್ರವೂ ಇಲ್ಲವೇ ...ಬ ಅನುಮಾನವೂ ಬರಬಹುದು. ಗಮನಿಸಿ ನೋಡಿದಾಗ ಅದರ ಪಕ್ಕದ ಮಹಾ...ಧ (ಒರೈಯನ್) ಸ್ವಲ್ಪ ದಕ್ಷಿಣಕ್ಕೆ ಮಹಾಶ್ವಾನ (ಕ್ಯಾನಿಸ್ ಮೇಜರ್) ಇವುಗಳ ...ೂಲಕ ಹಾದುಹೋಗುವ ಆಕಾಶಗಂಗೆಯ ಭಾಗ ಗೋಚರಿಸುವುದು. ಇದನ್ನು ...ದ್ರನಿಲ್ಲದ (ತಿಂಗಳ ಮೊದಲರ್ಧ) ರಾತ್ರಿಗಳಲ್ಲಿ ದಟ್ಟವಾದ ನಕ್ಷತ್ರ ...ದಣಿ ಎಂದು ಗುರುತಿಸಬಹುದು. ಉತ್ತರಕ್ಕೆ ಹರಿಯುವ ಇದು ಸ್ವಲ್ಪ ...ಗಿ ಪಾರ್ಥ ಮತ್ತು ಕುಂತಿಪುಂಜಗಳ ಮೂಲಕ ಹಾದು ...ೀಗುವುದನ್ನೂ ಗಮನಿಸಬಹುದು. ಇದರ ಆಚೀಚೆ ...ಷಭ, ಲಘುಶ್ವಾನ (ಕ್ಯಾನಿಸ್ ಮೈನರ್), ವಿಜಯಸಾರಥಿ ...ರಿಗಾ) ಈ ಪುಂಜಗಳನ್ನೂ ಕಾಣಬಹುದು. ಅತಿ ...ಾಶಮಾನವಾದ ನಕ್ಷತ್ರ ಸಿರಿಯಸ್; ದಿಗಂತದ ...ಿನ್ನೊಂದು ಅಂಚಿನಲ್ಲಿ ಬಕ ಪುಂಜದ ಎರಡು ...ತ್ರಗಳು ಕಂತುತ್ತಿರುತ್ತವೆ. ಸುಮಾರು ಎಂಟು ...ಟೆಯ ಹೊತ್ತಿಗೆ ಶನಿಗ್ರಹ ಪೂರ್ವದ ಅಂಚಿನಲ್ಲಿ ಪೂ...ಣುತ್ತದೆ. ಸಿಂಹರಾಶಿಯಲ್ಲಿರುವ ಇದು ...ಲಿರುವ ತಿಂಗಳುಗಳಲ್ಲಿ ಇನ್ನೂ ಪ್ರಕಾಶ ಪಡೆಯಲಿದೆ.

ಹಿನ್ನಡೆ ಎಂದರೇನು ಎಂದು ತಿಳಿಯುವ ಕುತೂಹಲ ...ುವವರಿಗೆ ಈ ತಿಂಗಳಲ್ಲಿ ಅನೇಕ ಅವಕಾಶಗಳಿವೆ. ...ಾಶ ಶುಭ್ರವಾಗಿರುವುದರಿಂದ ಪ್ರತಿರಾತ್ರಿ ಗ್ರಹಗಳ ...ನಗಳನ್ನು ಮತ್ತು ಹಿನ್ನೆಲೆಯ ನಕ್ಷತ್ರಗಳನ್ನು ಮುಖ್ಯವಾಗಿ ...ಯಾಗಿ ಗುರುತು ಮಾಡಿಕೊಳ್ಳಬೇಕು.

ಈಗಾಗಲೇ ಹಿನ್ನಡೆಯಲ್ಲಿರುವ ಮಂಗಳಗ್ರಹದ ಚಲನೆ ...ಮೇಣ ನಿಧಾನವಾಗಿ ೨೦ರಂದು ಅದು ನಿಂತೇ ಬಿಟ್ಟಿದೆಯೇನೋ ...ನ್ನಿಸುವುದು. ಆ ಮುಂದೆ ನೇರನಡೆ ಅಂದರೆ ಇದುವರೆಗೂ ವೃಷಭ ದಿಕ್ಕಿನತ್ತ ...ಲಿಸುತ್ತಿದ್ದ ಅದು ಇನ್ನು ಮುಂದೆ ಮಿಥುನದತ್ತ ಚಲಿಸುವುದು.

ಬುಧ ಸಂಜೆಯ ಹೊತ್ತು ಕಾಣುವುದು. ೨೨ರಂದು ಗರಿಷ್ಠ ಎತ್ತರದಲ್ಲಿ ಕಾಣುವ ...ಂದರ್ಭ ಬಳಸಿ ಆ ದಿನಕ್ಕೆ ಸ್ವಲ್ಪ ಮುಂಚೆ ಮತ್ತು ಆಮೇಲೆ ಅದರ ಚಲನೆಯನ್ನು ಗಮನಿಸ...ಹುದು. ಇದರ ಸ್ಥಾನ ಸಾಕಷ್ಟು ವೇಗವಾಗಿಯೇ ಬದಲಾಯಿಸುತ್ತದೆ. ಸಂಜೆಗೆಂಪಿನಲ್ಲಿ ...ರಗಿಹೋಗುವುದರಿಂದ ದುರ್ಬೀನು, ದೂರದರ್ಶಕ ಅವಶ್ಯಕವಾಗಬಹುದು. ...ಪ್ಚೂನ್ ಅನ್ನು ದಾಟಿ ಮೇಲೆ ಬಂದಿರುವ ಇದು ೨೮ರಂದು [illegible]ವಾಗುತ್ತದೆ. ಆ ಮುಂದೆ ...ನಡೆ ಆರಂಭ ಮುಂದಿನ ತಿಂಗಳ ಮೊದಲ ವಾರ ಪುನಃ ನೆಪ್ಚೂನ್ ಅನ್ನು ಹಾದು ಹಿಂದಕ್ಕೆ ...ರಡುತ್ತದೆ. ಹಿನ್ನಡೆ ಆರಂಭಿಸಿರುವ ಇನ್ನೊಂದು ಗ್ರಹ ಶನಿ. ಆದರೆ ಅದರ ಚಲನೆ ಬಹಳ ನಿಧಾನ. ಮೇ ೩ರವರೆಗೂ ಅದು ಹಿನ್ನಡೆಯುತ್ತದೆ. ಆದರೂ ಬರಿಗಣ್ಣಿನಿಂದ ಈ ಚಲನೆಯನ್ನು ಗುರುತಿಸುವುದು ಕಷ್ಟ.

ಗುರುಗ್ರಹ ಮತ್ತು ಶುಕ್ರಗ್ರಹಗಳು ಬೆಳಗಿನ ಜಾವ ಪೂರ್ವದಂಚಿನಲ್ಲಿ ಕಾಣುತ್ತವೆ. ತಿಂಗಳ ಕೊನೆಗೆ ಎರಡೂ ಜೋಡಿಯಾಗುವುದನ್ನು ಕಾಣಬಹುದು. ಗ್ರಹಗಳ ಪರಸ್ಪರ ಚಲನೆಯ ಪ್ರಾತ್ಯಕ್ಷಿಕೆ ಇದು. ಕ್ರಿ.ಪೂ. ೭೪ರಲ್ಲಿ ಇವೆರಡೂ ಹೀಗೆ ಸಮೀಪಿಸಿದ್ದವಂತೆ; ಅದನ್ನೇ ಕ್ರಿಸ್ತನ ಜನ್ಮದ ಸೂಚಿ "ಬೆತ್ಲೆಹೆಮ್ ನಕ್ಷತ್ರ" ಎಂದು ಕೆಲವು ಇತಿಹಾಸಕಾರರು ವಾದಿಸುತ್ತಾರೆ.

ಹೋಮ್ಸ್ ಧೂಮಕೇತು ಮಂಕಾಗಿ ಬಿಟ್ಟಿದೆ. ಆದರೆ ಬೇರೆ ಯಾವುದಾದರೂ ಇದ್ದಕ್ಕಿದ್ದಂತೆ ಸುದ್ದಿ ಮಾಡಬಹುದು.

ಉ
ವಿಜಯಸಾರಥಿ
ಕುಂತಿ
ಪಾರ್ಥ
ಮಿಥುನ
ದ್ರೌಪದಿ
ಮಂಗಳ
ವೃಷಭ
ನಕುಲ
ಮೇಷ
ಮೀನ
ಮಹಾವ್ಯಾಧ
ತಿಮಿಂಗಿಲ
ಕುಂಭ
ಬುಧ
ಮಹಾಶ್ವಾನ
ಬಕ
ಪ
ದ

ತಿಂಗಳ ಮೊದಲವಾರದಲ್ಲಿ ಕ್ವಾಡ್ರಾಂಟಿಡ್ಸ್ ಎಂಬ ಹೆಸರಿನ ಉಲ್ಕಾವೃಷ್ಟಿ ಇದೆ. ೪ರ ಬೆಳಗ್ಗೆ ಗಂಟೆಗೆ ಸುಮಾರು ೩೦-೪೦ ಉಲ್ಕೆಗಳನ್ನು ನೋಡಬಹುದು. ಇವೆಲ್ಲಾ ಬೂಟಿಸ್ (ಸಹದೇವ) ಪುಂಜದಿಂದ ಹೊರಟಂತೆ ಕಾಣುತ್ತವೆ. ೨೦೦೩EH೧ ಎಂಬ ಚಿಕ್ಕ ಧೂಮಕೇತು ತನ್ನ ಕಕ್ಷೆಯಲ್ಲಿ ಉಳಿಸಿಹೋದ ದೂಳಿನ ಕಣಗಳೇ ಹೀಗೆ ಉಲ್ಕಾ ವೃಷ್ಟಿಯಾಗಿ ಭೂಮಿಯನ್ನು ಸೇರುತ್ತವೆ.

ಭೂಮಿ ದೀರ್ಘವೃತ್ತದ ಕಕ್ಷೆಯಲ್ಲಿ ಸೂರ್ಯನನ್ನು ಸುತ್ತುವ ಕಾರಣ ಅದರ ದೂರ ಸತತವಾಗಿ ಬದಲಾಗುತ್ತಿರುತ್ತದೆ. ೩ನೆಯ ತಾರೀಖು ಈ ದೂರ ಕನಿಷ್ಠ ೧,೪೭,೦೯೮,೦೦೦ ಕಿ.ಮೀ. (ಮಾತ್ರ!)

## ಖಗೋಳ ದಿನಚರಿ

ಜನವರಿ ೩ ಭೂಮಿ-ಸೂರ್ಯ ಅಂತರ ಕನಿಷ್ಠ (೧೪೭,೦೯೮,೦೦೦ ಕಿ.ಮೀ.)

- ೪ ಕ್ವಾಡ್ರಾಂಟಿಡ್ಸ್ ಉಲ್ಕಾವೃಷ್ಟಿ
- [illegible] ಚಂದ್ರ-ಶುಕ್ರ ನಡುವೆ ಕನಿಷ್ಠ ಕೋನ*
- [illegible] ಅಮಾವಾಸ್ಯೆ [illegible]ಕ್ಕೆ
- [illegible] ಬುಧ-ಚಂದ್ರರ ನಡುವೆ ಕನಿಷ್ಠ ಕೋನ (ಕಾಣುವುದು ಕಷ್ಟ)
- [illegible] ನೆಪ್ಚೂನ್ ಆಚ್ಛಾದನೆ (ಭಾರತಕ್ಕೆ ಕಾಣುವುದಿಲ್ಲ)
- [illegible] ಚಾಂದ್ರಮಾಸದ ಮೊದಲ ವಾರ (ಚಂದ್ರಾಸ್ತ ನಡುರಾತ್ರಿಗೆ)
- [illegible] ಮಂಗಳ-ಚಂದ್ರ ನಡುವೆ ಕನಿಷ್ಠ ಕೋನ* (ಆಚ್ಛಾದನೆ ಭಾರತಕ್ಕೆ ಕಾಣುವುದಿಲ್ಲ)
- [illegible] ಬುಧ ಗ್ರಹದ ಗರಿಷ್ಠ ಕೋನೋನ್ನತಿ* [illegible]
- [illegible] ಬುಧ ನೆಪ್ಚೂನ್ ನಡುವೆ ಕನಿಷ್ಠ ಕೋನ
- [illegible] [illegible] ನಡುವೆ ಕನಿಷ್ಠ ಕೋನ*
- [illegible] [illegible] ಆರಂಭ
- [illegible] [illegible] (ಚಂದ್ರೋದಯ [illegible]) [illegible]

ಫೆಬ್ರವರಿ [illegible] [illegible] ನಡುವೆ ಕನಿಷ್ಠ ಕೋನ* [illegible] ನಡುವೆ ಕನಿಷ್ಠ ಕೋನ

[illegible] [illegible] - [illegible] - ಗುರುಗಳ [illegible]*

* [illegible]

ಡಾ|| ಬಿ. ಎಸ್. ಶೈಲಜಾ

[illegible]

ಎಡಭಾಗ: ಜನವರಿ ೨೦ರಂದು ಸುಮಾರು ರಾತ್ರಿ [illegible] ಗಂಟೆಗೆ ಪೂರ್ವದತ್ತ ನೋಡಿದಾಗ ಮಹಾವ್ಯಾಧ ಮತ್ತು ವಿಜಯಸಾರಥಿ ನಡುವೆ ಮಂಗಳ ಮತ್ತು ಚಂದ್ರ

With Best Compliments From




AUTHORISED DEALERS FOR :

Nokia, Samsung, Motorola, Sony Ericsson, LG, Panasonic, PDA Mobile, CDMA Mobiles, Original Accessories

K. MAHAVEER RANKA

# 16, K. H. Road, (Double Road, Next to Canara Bank, Bangalore - 560 027

Ph : 22236481, Fax : 22236481, Mob : 98860 17888

E-mail : pickspeak@hotmail.com



APPAM CHATTY



MILK BOILER



BIRYANI POT



SS IDLY BOILER



SAUCE PAN

With Best Compliments From

KAVIRAJ INCORPORATION

MANUFACTURES & EXPORTERS

#99, 8th main, 3rd Phase, Peenya Industrial Area

Bangalore - 560 058

Fax : 91 - 080 - 28379110

E-mail : rohit@kaviraj.com

Visit us : www.kaviraj.com



DELUXE FLAT/CURVED TAWA



FRY PAN WITH GLASS LID



GIFT SET



TEA PAN

# ಧರ್ಮದ ಬಗೆಗೆ ಗಾಂಧೀಜಿಯವರ ಮನೋಧರ್ಮ



ಡಾ|| ಎಂ. ವಿ. ನಾಡಕರ್ಣಿ

**ನಾ**ವು ಇಲ್ಲಿ ಚರ್ಚಿಸುತ್ತಿರುವ ವಿಷಯ ಧರ್ಮದ ಬಗೆಗೆ ಗಾಂಧೀಜಿಯವರ ಮನೋಧರ್ಮ ನಾಗಿದ್ದಿತು ಎಂಬುದು. ಗಾಂಧೀಜಿಯವರ ಧರ್ಮವೇ ಏನಾಗಿದ್ದಿತು ಎಂಬುದಲ್ಲ, ಏಕೆಂದರೆ ಅವರಿಗೆ ವರದೇ ಯಾವ ಹೊಸ ಧರ್ಮವೂ ಇರಲಿಲ್ಲ. ಗಾಂಧೀಜಿಯವರು ಖಂಡಿತ ಯಾವುದೇ ಧರ್ಮದ ಸಂಸ್ಥಾಪಕ ೇನಲ್ಲ. ಹಾಗೆಂದೇ ಅವರನ್ನು ಬುದ್ಧ, ಮಹಾವೀರ, ಏಸು, ಮಹಮ್ಮದರೇ ಮುಂತಾದ ಧಾರ್ಮಿಕ ಾಯಕರ ಸಾಲಿನಲ್ಲಿ ಇರಿಸದೇ ಇರುವುದು ಅರ್ಥಗ್ರಾಹ್ಯ. ಆದರೆ, ಅವರು ಆ ನಾಯಕರುಗಳಿಗಿಂತ ಳಮಟ್ಟದವರೇನಲ್ಲ. ಏಕೆಂದರೆ, ಅವರು ಧರ್ಮವನ್ನು ಆಧುನಿಕ ಕಾಲಕ್ಕೆ ಸರಿಹೊಂದುವಂತೆ ಹೊಸ ಬೆಳಕಿನಲ್ಲಿ ್ಯಾಖ್ಯಾನಿಸಿದರು. ಅವರು ಪರಸ್ಪರ ವಿರುದ್ಧವೆಂದು ತೋರುವ ಆಧ್ಯಾತ್ಮಿಕ ಮಾರ್ಗಗಳ ನಡುವೆ ಸಾಮರಸ್ಯ ಂಡುಹಿಡಿಯಲು ಯತ್ನಿಸಿದರು. ಇದರಲ್ಲಿ ಅವರು ಕೃಷ್ಣನನ್ನು ಹೋಲುತ್ತಾರೆ. ಅವರು ತಮ್ಮದೇ ಯಾವ ೂಸ ಧರ್ಮವನ್ನು ಪ್ರಾರಂಭಿಸಲು ಹವಣಿಸಲಿಲ್ಲ. ಆದರೆ ಅಸ್ತಿತ್ವದಲ್ಲಿರುವ ಧರ್ಮಗಳಿಂದಲೇ ಸ್ಫೂರ್ತಿ ಡೆದರು, ಅವುಗಳನ್ನು ಶಾಸ್ತ್ರಾಂಧತೆಯ ಕಶ್ಮಲದಿಂದ ಕೂಡಿರದಂತೆ ಸ್ವಚ್ಛಗೊಳಿಸಲು ಯತ್ನಿಸಿದರು. ಸತ್ಯ-ೋಧಕನ ಮನೋಧರ್ಮಕ್ಕೆ ಸರಿಹೊಂದುವಂಥ ಯಾವುದೇ ಮಾರ್ಗವಾದರೂ ಸರಿಯೆ, ಅದು ಸತ್ಯ ಹಿಂಸೆಗಳಿಗೆ ನಿಷ್ಠೆಯಿಂದ ಕೂಡಿರಬೇಕಷ್ಟೆ ಎಂದವರು ತೋರಿಸಿಕೊಟ್ಟರು. ಇದರಲ್ಲಿ ಅವರು ಗೀತೆಯಲ್ಲಿ ್ಷ್ಣನು ಹೇಳುವ 'ಯೇ ಯಥಾ ಮಾಮ್ ಪ್ರಪದ್ಯಂತೇ ತಾನ್‌ಸ್ತಥೈವ ಭಜಾಮ್ಯಹಮ್' (ನೀವು ನನ್ನನ್ನು ಲುಪಲು ಯಾವುದೇ ರೀತಿಯಲ್ಲಾದರೂ ಹವಣಿಸಿ, ನಾನು ನಿಮ್ಮನ್ನು ತಲುಪುತ್ತೇನೆ) ಎಂಬ ವಚನವನ್ನು ್ಞಾಪಕಕ್ಕೆ ತರುತ್ತಾರೆ. ತಾನು ಸತ್ಯದ ಗುತ್ತಿಗೆ ಪಡೆದಿದೆ ಎಂಬ ಯಾವುದೇ ಒಂದು ಮತಧರ್ಮದ ಹಕ್ಕು ಮರ್ಥನೆಯನ್ನು ಅವರು ಭಗ್ನಗೊಳಿಸಿದರು.

ಮತ್ತೆ ಅವರು ಕೃಷ್ಣನಂತೆಯೇ ಧಾರ್ಮಿಕ ವ್ಯಕ್ತಿಯಾಗಿರಲಿಲ್ಲ. ಗಾಂಧೀಜಿಯವರು ರಾಜಕಾರಣದಲ್ಲಿ, ುರ್ಬಲರಿಗೆ, ಹಕ್ಕುವಂಚಿತರಿಗೆ ಹಾಗೂ ಮರ್ದಿತ ಜನರಿಗೆ ಶಕ್ತಿ ದೊರಕಿಸಿಕೊಡುವ ಕಾರ್ಯಭಾರದಲ್ಲಿ ಾಢವಾಗಿ ತಲ್ಲೀನರಾಗಿದ್ದರು. ತಮ್ಮ ಧರ್ಮಕ್ಕೂ ತಮ್ಮ ಇತರ ಕಾರ್ಯಭಾರಗಳಿಗೂ ನಡುವೆ ಅವರು ಯಾವುದೇ ಘರ್ಷಣೆಯನ್ನು ಕಾಣಲಿಲ್ಲ. ಅವರು ಧರ್ಮವನ್ನು ರಾಜಕೀಯಗೊಳಿಸಹೋಗಲಿಲ್ಲ. ಅದೇ ೊತ್ತಿನಲ್ಲಿ ಅವರು ರಾಜಕಾರಣವನ್ನೂ ನಮ್ಮ ದೈನಂದಿನ ಜೀವನವನ್ನೂ ಅಧ್ಯಾತ್ಮೀಕರಿಸಲು ತಮ್ಮ ಶಕ್ತಿಮೀರಿ ುತ್ನಿಸಿದರು. ಆಧ್ಯಾತ್ಮಿಕತೆಯ ವಲಯಕ್ಕೂ ರಾಜಕಾರಣ ಹಾಗೂ ಐಹಿಕ ಜೀವನ ವಲಯಕ್ಕೂ ನಡುವೆ ಅವರು ಯಾವುದೇ ಪ್ರತ್ಯೇಕತೆಯನ್ನು ಕಾಣಲಿಲ್ಲ. ಅವರು ಧಾರ್ಮಿಕ ಹಾಗೂ ಐಹಿಕ, ಆಧ್ಯಾತ್ಮಿಕ ಹಾಗೂ ಾಜಕೀಯ ಈ ಎಲ್ಲ ವಲಯಗಳನ್ನೂ ಒಳಗೊಂಡಂಥ ಜೀವನದ ಅಖಂಡ ದೃಷ್ಟಿಯನ್ನು ಪಡೆದಿದ್ದರು.

ಗಾಂಧೀಜಿಯವರು ಒಂದು ರೀತಿಯಲ್ಲಿ ಏಸುಕ್ರಿಸ್ತನನ್ನೂ ಹೋಲುತ್ತಾರೆ. ಹಾಗಾಗಿ ಅವರನ್ನು ಕ್ರಿಸ್ತ ಂತರದ ಏಕೈಕ ಕ್ರಿಶ್ಚಿಯನ್ ಎಂದು ಹೇಳಲಾಗುತ್ತದೆ. ಏಸುವಿನಂತೆ ಅವರು ಹಿಂಸೆ ಮೃಗೀಯತೆಗಳನ್ನು ದುರಿಸಲು ಪ್ರೀತಿಯ ಆಯುಧವನ್ನು ಬಳಸುವಂತೆ ಬೋಧಿಸಿದರು. ಮತ್ತೆ ಏಸುವಿನಂತೆಯೇ ಅವರೂ ತಮ್ಮ ್ಯೇಯಕ್ಕಾಗಿ ಪ್ರಾಣ ತೆತ್ತು ಹುತಾತ್ಮರಾದರು. ಅಷ್ಟೇ ಅಲ್ಲ, ಅವರಲ್ಲಿ ನೀವು ಕೃಷ್ಣ ಹಾಗೂ ಏಸು ಮಾತ್ರವಲ್ಲ, ತರ ಧಾರ್ಮಿಕ ನಾಯಕರುಗಳ ಲಕ್ಷಣಗಳನ್ನೂ ಕಾಣಬಲ್ಲಿರಿ.

ಆದಾಗ್ಯೂ, ಗಾಂಧೀಜಿಯವರ ಧಾರ್ಮಿಕತೆಯು ಅಸದೃಶವಾಗಿದ್ದಿತು. ಏಕೆಂದರೆ, ಅವರು ಧರ್ಮಾನು ಾಯಿಗಳ ನಡುವೆಯೇ ವಿಚಾರಪರರಾಗಿದ್ದರು, ವಿಚಾರಪರರ ನಡುವೆ ಧರ್ಮಾನುಯಾಯಿಯಾಗಿದ್ದರು. ವರ ನಂಬಿಕೆ, ಅವರ ಧರ್ಮಶ್ರದ್ಧೆಗಳು, ವಿಚಾರಪರತೆಯನ್ನು ಹೊರಗಿರಿಸಲಿಲ್ಲ, ಅಂತೆಯೇ ಅವರ ಚಾರಪರತೆಯು ಧರ್ಮಶ್ರದ್ಧೆಯನ್ನು ಹೊರತಾಗಿಸಲಿಲ್ಲ. ಪಾರಂಪರಿಕ ಧಾರ್ಮಿಕ ನಾಯಕರು ಯಾವತ್ತೂ ಂಬಿಕೆಗೆ ಹೆಚ್ಚು ಒತ್ತುಕೊಟ್ಟು ವಿಚಾರಪರತೆಯನ್ನು ಶಿಥಿಲಗೊಳಿಸುತ್ತಾರೆ. ಮತ್ತೊಂದು ಕಡೆ, ವಿಚಾರಪರರು ಯಾವತ್ತೂ ವೈಚಾರಿಕತೆಯನ್ನೇ ಎತ್ತಿ ಹಿಡಿದು ನಂಬಿಕೆ-ಶ್ರದ್ಧೆಗಳಿಗೆ ಎಷ್ಟು ಮಾತ್ರವೂ ಅವಕಾಶ ನೀಡುವುದಿಲ್ಲ. ಾಂಧೀಜಿಯವರು ಈ ಯಾವುದೇ ಗುಂಪಿಗೂ ಸೇರಲಿಲ್ಲ. ಬದಲು ಅವರು ಎರಡನ್ನೂ ಮೇಳೈಸಲು

ಯತ್ನಿಸಿದರು. ಅವರು ಸೃಜನಾತ್ಮಕ ಏಕತೆಯಲ್ಲಿ ವಿಚಾರಪರತೆ ಹಾಗೂ ನಂಬಿಕೆ ಎರಡಕ್ಕೂ ಒತ್ತು ನೀಡಿದರು.

ಉದಾಹರಣೆಗೆ, ಅವರು ಎಲ್ಲ ಧರ್ಮಗಳ ಧಾರ್ಮಿಕ ಗ್ರಂಥಗಳನ್ನೂ ಏಕ ರೀತಿಯಲ್ಲಿ ಗೌರವಿಸುತ್ತ, ತಮ್ಮ ದೈನಂದಿನ ಪ್ರಾರ್ಥನಾ ಕೂಟಗಳಲ್ಲಿ ಅವುಗಳ ಸ್ಫೂರ್ತಿಯುತ ಹಾಗೂ ಉದಾತ್ತ ಭಾಗಗಳನ್ನು ಉದ್ಧರಿಸಿ ಪಠಿಸುತ್ತಿದ್ದರು. ಎಲ್ಲ ಧರ್ಮಗಳ ಧಾರ್ಮಿಕ ಗ್ರಂಥಗಳೂ ಮಾನವ ಸೃಷ್ಟಿತವಲ್ಲದಿದ್ದರೂ ಮಾನವ-ಮಧ್ಯಸ್ಥಿಕೆಯವು ಎಂದು ಭಾವಿಸಿದ್ದರು ಮತ್ತು ಆದ್ದರಿಂದಾಗಿ ಅವು ದೋಷರಹಿತ ಎಂದು ಪರಿಗಣಿಸಲು ನಿರಾಕರಿಸಿದರು. ಈ ನಿಟ್ಟಿನಲ್ಲಿ ಗಾಂಧೀಜಿಯವರು ಕೃಷ್ಣ ಹಾಗೂ ಬುದ್ಧನಂತಿದ್ದರು. ಕೃಷ್ಣನು ಅರ್ಜುನನಿಗೆ ಗೀತೆಯನ್ನು ಬೋಧಿಸಿದ ನಂತರ ತಾನು ಹೇಳಿದುದೆಲ್ಲವುಗಳ ಬಗೆಗೂ ಪೂರ್ಣವಾಗಿ ಹಾಗೂ ವಿಮರ್ಶಾತ್ಮಕವಾಗಿ ಪುನರಾಲೋಚಿಸಿ ಅನಂತರವಷ್ಟೇ ಕಾರ್ಯಪ್ರವೃತ್ತನಾಗುವಂತೆ ಕರೆ ನೀಡಿದ (ವಿಮೃಶ್ಯೈ‌ತತ್ ಅಶೇಷೇಣ ಯಥೇಚ್ಛಸಿ ತಥಾ ಕುರು). ಬುದ್ಧನೂ ಹೀಗೆಯೇ ಬೋಧಿಸಿದ – ಯೋಚನೆ ಮಾಡಿ, ವಿಚಾರ ಮಾಡಿ, ಅನಂತರವಷ್ಟೇ ಮನವೊಪ್ಪಿದರೆ ಒಪ್ಪಿಕೊಳ್ಳಿ.

ಗಾಂಧೀಜಿಯವರು ವಿಚಾರಪರತೆ ಹಾಗೂ ವಿವೇಕ ಪರಿಜ್ಞಾನಕ್ಕೆ ಒತ್ತುಕೊಟ್ಟರೂ ಮಾನವಕುಲದ ಸಂಕ್ಷೇಮ, ಉಳಿಕೆ ಹಾಗೂ ಪ್ರಗತಿಗೆ ಸುಸಂಗತವಾದಂಥ ಮೂಲ ಮೌಲ್ಯಗಳಲ್ಲಿ ನಂಬಿಕೆಯನ್ನೇನೂ ಬಿಟ್ಟುಕೊಡಲಿಲ್ಲ. ಅವರು ಈ ಮೌಲ್ಯಗಳನ್ನು ಕೇವಲ ಎರಡು ಮಾತುಗಳಲ್ಲಿ ಕ್ರೋಡೀಕರಿಸಿದರು – ಸತ್ಯ ಹಾಗೂ ಅಹಿಂಸೆ. ಈ ಮೌಲ್ಯಗಳಲ್ಲಿ ನಂಬಿಕೆಯು ಒಂದು ತಿರುಗಾಣಿ ಇದ್ದಂತೆ, ಅದರ ಸುತ್ತ ಇಡೀ ಮಾನವ ಜೀವನ ಸುತ್ತುಹಾಕುತ್ತದೆ ಮತ್ತು ವಿಚಾರಪರತೆಯು ಈ ಬಾಳಚಕ್ರಕ್ಕೆ ಹತ್ತಿಕೊಂಡು ನಯವಾಗಿ ಕಾರ್ಯ ಜರುಗಿಸುವಂತೆ ಮಾಡುವ ಎಣ್ಣೆ ಇದ್ದಂತೆ, ಎಂದು ಅವರು ಪ್ರತಿಪಾದಿಸುತ್ತಿದ್ದರು. ಸತ್ಯ ಹಾಗೂ ಅಹಿಂಸೆ ಅವರ ಆಧ್ಯಾತ್ಮಿಕತೆಯ ನಿರೂಪಣೆಯಾಗಿದ್ದಿತು. ಅವರ ಆಧ್ಯಾತ್ಮಿಕತೆಯೇ ಅವರ ಖಾಸಗಿ ಹಾಗೂ ಸಾರ್ವಜನಿಕ ಜೀವನವನ್ನು – ಅವರ ಇಡೀ ಬಾಳನ್ನು ರೂಪಿಸಿದ್ದಿತು.

ಅವರ ದೃಷ್ಟಿಯಲ್ಲಿ, ಸತ್ಯವು ಧರ್ಮಗ್ರಂಥಗಳಲ್ಲಿ ಬೇರೂರಿದ ಪಳೆಯುಳಿಕೆಯಂಥದಾಗಿರಲಿಲ್ಲ. ಆದರೆ ನಿರಂತರ ಅನ್ವೇಷಣೆಗೆ ಸಹಕಾರಿಯಾದಂಥದ್ದಾಗಿ ಅಂಥ ಅನ್ವೇಷಣೆಗೆ ಒಳಗಾಗಬಲ್ಲಂಥದ್ದಾಗಿದ್ದಿತು. ಹಿಂದೂ, ಕ್ರಿಶ್ಚಿಯನ್ ಅ ಮುಸ್ಲಿಮ್ ಯಾವುದೇ ಧರ್ಮಗ್ರಂಥ ಹೇಳುವುದೇ ಕೊನೆಯ ಮಾತು ಒಪ್ಪಿಕೊಳ್ಳಲು ಅವರು ನಿರಾಕರಿಸಿದರು. ಸತ್ಯ ಅನ್ನುವುದು ನಾವು ಒಬ್ಬೊಬ್ಬ ಪ್ರತ್ಯೇಕವಾಗಿ ಶೋಧಿಸಿ ಕಂಡುಕೊಳ್ಳಬೇಕಾದಂತಹುದು. ಈ ಕಾರ್ಯಭಾರ ನಾವು ನಾನಾ ಧರ್ಮಗ್ರಂಥಗಳಿಂದ ಮಾರ್ಗದರ್ಶನ ಹಾಗೂ ಸ್ಫೂರ್ತಿ ಪಡೆದುಕ ಬಹುದಷ್ಟೆ. ಯಾವುದೇ ಧರ್ಮವಾಗಲಿ, ಅದರ ಪ್ರತಿಯೊಂದು ಧರ್ಮಗ್ರಂಥ ಒಂದು ಸಂದರ್ಭ ಇರುತ್ತದೆ, ಕೆಲವು ಮಿತಿಗಳಿರುತ್ತವೆ, ನ್ಯೂನತೆಗಳಿರುತ್ತವೆ, ಕೆ ಕೊರತೆಗಳಿರುತ್ತವೆ – ಅದರಲ್ಲೂ ಅವನ್ನು ಆಧುನಿಕ ಕಾಲಕ್ಕೆ ಹೊಂದುವ ವ್ಯಾಖ್ಯಾನಿಸಲು ಹೊರಟಾಗ ಯಾವುದು ಮೂಲ ಹಾಗೂ ನಿಷ್ಕಪಟ ಸತ್ಯ ಹಾ ಅಹಿಂಸೆ ಎಂದು ನಾವು ಭಾವಿಸುತ್ತೇವೋ, ಯಾವುದು ಎಲ್ಲರಿಗೂ ನ್ಯಾಯಪರ ರುತ್ತದೋ ಅದಕ್ಕೆ ಅಸಂಗತವಾದುದನ್ನು ತಿರಸ್ಕರಿಸುವುದು ಮತ್ತು ಈ ಮೌಲ್ಯಗ ಸುಸಂಗತವಾದವನ್ನಷ್ಟೆ ಒಪ್ಪಿಕೊಳ್ಳುವುದು ನಮಗೆ ಬಿಟ್ಟದ್ದು. ಯಾವುದೇ ಧ ಗ್ರಂಥವನ್ನೂ ತೀರ ಅಕ್ಷರಶಃ ವ್ಯಾಖ್ಯಾನಿಸುವುದನ್ನು ಗಾಂಧೀಜಿ ತಿರಸ್ಕರಿಸಿದ ಮೂಲಭೂತವಾದ (fundamentalism)ವೆಂದರೆ ಧರ್ಮ ಗ್ರಂಥಗಳನ್ನು ತ ಅಕ್ಷರಶಃವಾಗಿ ವ್ಯಾಖ್ಯಾನಿಸುವುದು, ಎಂದು ಕರೆನ್ ಆರ್ಮ್‌ಸ್ಟ್ರಾಂಗ್ ನಿರೂಪಿಸಿದ ಗಾಂಧೀಜಿಯವರು ಮೂಲಭೂತವಾದಕ್ಕೆ ನೇರವಾಗಿ ವಿರುದ್ಧವಾಗಿದ್ದರು. ಅ ವಿಚಾರವಾದಿಗಳಂತೆ ಧರ್ಮಕ್ಕೂ ಧರ್ಮಗ್ರಂಥಗಳಿಗೂ ಯಾವುದೇ ಪಾತ್ರ ನಿರಾಕರಿಸಲಿಲ್ಲ; ಅವುಗಳನ್ನು ಒಪ್ಪಿಕೊಂಡರು. ಆದರೂ ವಿಚಾರವಾದಿಗಳು ಯ ವೈಚಾರಿಕತೆಯ ವಿಧಾನವನ್ನು ಅನುಸರಿಸಬೇಕೆಂದು ಆಶಿಸುತ್ತಾರೋ ಅ ವೈಚಾರಿಕತೆಯ ವಿಧಾನವನ್ನು ಗಾಂಧೀಜಿಯವರು ಧರ್ಮಕ್ಕೂ ಧರ್ಮಗ್ರಂಥಗಳಿ ಅನ್ವಯಿಸಿದರು. ಇದೇ ಗಾಂಧೀಜಿಯವರ ಪ್ರತಿಭೆಯಾಗಿದ್ದಿತು. ಆದ್ದರಿಂದ ಗಾಂಧೀಜಿಯವರು ವಿಚಾರವಾದಿಗಳ ನಡುವೆ ಧರ್ಮ ಶ್ರದ್ಧಾವಂತರಾಗಿದ್ದರು, ಧ ಶ್ರದ್ಧಾವಂತರ ನಡುವೆ ವಿಚಾರವಾದಿಗಳಾಗಿದ್ದರು. ಈ ಎರಡು ನಿಲುವುಗಳೂ ಅವ


Wish Best Compliments From






KMS COACH BUILDERS PVT. LTD.

Specialists in Construction of Luxury Coach, Sleeper Coach & A/c Buses
Conforming to International Standards

No. 125/1B, Industrial Area, Mysore Road, Near BMTC Bus Stop
KENGERI, BANGALORE - 560 060

For Enquiries Please Contact
Ph : 080-28486838/39, Fax : 080 - 28486487
Mobile : 99458 88833, 98458 02851
E-mail : kmscoach@gmail.com

ರಸ್ಪರ ವಿರುದ್ಧವಾದವುಗಳಾಗಿರಲಿಲ್ಲ. ತೋರಿಕೆಗೆ ರಸ್ಪರ ವಿರುದ್ಧವೆಂದು ಕಾಣುವ ಎರಡು ನಿಲುವುಗಳನ್ನು ವೈಚಾರಿಕತೆ ಹಾಗೂ ಧರ್ಮಶ್ರದ್ಧೆಗಳನ್ನು– ಂದುಗೂಡಿಸುವುದರಲ್ಲೇ ಅವರ ಕಲೆ ಅಡಗಿದ್ದಿತು.

ವೈಚಾರಿಕತೆಯನ್ನೂ ಧರ್ಮಶ್ರದ್ಧೆಯನ್ನೂ ಸಮನ್ವಯ ೂಳಿಸುವುದು ಗಾಂಧೀಜಿಯವರಿಗೆ ಹೇಗೆ ಸಾಧ್ಯ ಯಿತು ? – ಕೇವಲ ಸತ್ಯವನ್ನು ಅತ್ಯುನ್ನತ ಮೌಲ್ಯ ಂದು – ದೇವರೇ ಎಂದು – ಪರಿಗಣಿಸುವ ಮೂಲಕ. ವರಿಗೆ ಸತ್ಯವೇ ದೇವರು. ಬೇರೆ ದೇವರೇ ಇರಲಿಲ್ಲ. ಾನು ದೇವರನ್ನು ನನ್ನ ಪರಂಪರೆಯನ್ನನುಸರಿಸಿ ಹೇಗೇ ್ರರ್ಥಿಸಲಿ, ರಾಮ, ಅಲ್ಲಾಹ್ ಅಥವಾ ಫಾದರ್ – ನು ಅವನಿಗೆ ಪ್ರಾರ್ಥನೆ ಸಲ್ಲಿಸುವುದು ನನ್ನ ಆಂತರಿಕ ಕ್ತಿಯನ್ನು ನನ್ನ ಆಂತರಿಕ ನೈತಿಕ ಧೈರ್ಯವನ್ನು, ೂರಹೊಮ್ಮಿಸಲಿ ಎಂಬ ಮೂಲ ಆಶಯದಿಂದಷ್ಟೇ. ೇವರು ಎಲ್ಲ ನೈಸರ್ಗಿಕ ನಿಯಮಗಳನ್ನೂ ತಿರೋಧಿಸುವ ಹಾಗೂ ಮನಸ್ಸಿಗೆ ಬಂದಂತೆ ವಾಡಗಳನ್ನು ಎಸಗುವ ಯಾವುದೋ ಶಕ್ತಿ ಎಂಬ ರಣದಿಂದಾಗಿ ಅಲ್ಲ ನಾನು ಪ್ರಾರ್ಥನೆ ಸಲ್ಲಿಸುವುದು. ನ್ನನ್ನು ಸತ್ಯದತ್ತ ಕರೆದೊಯ್ಯುವ ನನ್ನ ಆಂತರಿಕ ನಸ್ಸಾಕ್ಷಿಯೇ ದೇವರು. ಅವನು ಎಲ್ಲರಲ್ಲೂ ಲ್ಲದರಲ್ಲೂ ಇದ್ದಾನೆ. ನಮಗೆ ಹೊರತಾದವನಲ್ಲ. ತ್ಯಾನ್ವೇಷಣೆ ನಮ್ಮ ಸ್ವಂತ ಮಾರ್ಗ.'' ಗಾಂಧೀಜಿಯವರ ಷಯದಲ್ಲಿ ಸತ್ಯಾನ್ವೇಷಣೆ ಎಂಬ ಪ್ರಕಲ್ಪನೆಯು ಕೇವಲ ೈಚಾರಿಕತೆಗೂ ಮೀರಿ ಮುಂದೆ ಹೋಯಿತು. ಅದು ೈಚಾರಿಕತೆಗೂ ಅತೀತವಾಗಿದ್ದಿತು. ಏಕೆಂದರೆ, ಸತ್ಯವು ಲವು ನೈತಿಕ ಮೌಲ್ಯಗಳನ್ನೂ – ತನ್ನ ಹಾಗೂ ಇತರರ ಷಯದಲ್ಲಿ ನಿರುಪಾಧಿಕ ಪ್ರಾಮಾಣಿಕತೆ, ಅಹಿಂಸೆ, ಪ್ರೇಮ, ಾರುಣ್ಯ, ಸಹಚರ ಮಾನವಜೀವಿಗಳಿಗೆ ನಿಸ್ವಾರ್ಥ ಸೇವೆ, ಷ್ಪಕ್ಷಪಾತ ವರ್ತನೆ, ನ್ಯಾಯಪರತೆ ಮುಂತಾದ ೌಲ್ಯಗಳನ್ನೂ – ಒಳಗೊಂಡಿರುವಂತಹುದು. ಗಾಂಧೀಜಿ ುವರಿಗೆ ಈ ಮೌಲ್ಯಗಳು ಯಾಂತ್ರಿಕ ತರ್ಕಕ್ಕಿಂತ ಅಥವಾ ಚಾರ ಪರತೆಗಿಂತ ಹೆಚ್ಚು ಮುಖ್ಯವಾಗಿದ್ದವು. ಮೌಲ್ಯ ್ಯವಸ್ಥೆಯಿಂದ ವಿಚ್ಛೇದನಗೊಂಡ ಕೇವಲ ವಿಚಾರ ರತೆಯು ಸತ್ಯಾನ್ವೇಷಣೆಯಾಗಿರಲಿಲ್ಲ. ಆದರೆ ಮೌಲ್ಯಾ ್ವೇಷಣೆಯು ಸತ್ಯಾನ್ವೇಷಣೆಯಾಗಿದ್ದಿತು – ಗಾಂಧೀಜಿ ುವರಿಗೆ ಧರ್ಮವು ಸತ್ಯಾನ್ವೇಷಣೆಯನ್ನು ಪ್ರತಿನಿಧಿಸುವ ಂದು ಮೌಲ್ಯವ್ಯವಸ್ಥೆಯಾಗಿದ್ದಿತು. ವಿಚಾರಪರತೆಯು ದಕ್ಕೆ ನೆರವಾಗುವ ಅಂಶವಾಗಿದ್ದಿತು.

ಹೀಗೆ ಧರ್ಮದ ಬಗೆಗೆ ಗಾಂಧೀಜಿಯವರ ಮನೋಧರ್ಮವು ಸಂಪೂರ್ಣವಾಗಿ ೈತಿಕವಾಗಿದ್ದಿತು, ಮಾನವೀಯವಾಗಿದ್ದಿತು. ಅದಕ್ಕೆ ಯಾವುದೇ ಧಾರ್ಮಿಕ ವಿಧಿಗಳ ಅವಶ್ಯಕತೆ ಇರಲಿಲ್ಲ. ಅವರಿಗೆ ಯಾವುದೇ ರೀತಿಯ ಮತಾಚರಣೆ ಅಥವಾ ಮೂರ್ತಿಪೂಜೆ ಬೇಕಿರಲಿಲ್ಲ. ಆದರೆ ಮತಾಚರಣೆ ಹಾಗೂ ಮೂರ್ತಿಪೂಜೆಗೆ ದ್ಧರಾಗಿದ್ದವರನ್ನು ಅವರು ಖಂಡಿಸಹೋಗಲಿಲ್ಲ. ಅವುಗಳ ಮೂಲಕ ಕೆಲವು ್ಯಕ್ತಿಗಳು ಮಾನಸಿಕ ನೆಮ್ಮದಿ ಹಾಗೂ ಶಾಂತಿ ಕಂಡುಕೊಂಡಲ್ಲಿ, ಅದಕ್ಕೆ ಗಾಂಧೀಜಿ ುವರ ಆಕ್ಷೇಪಣೆ ಇರಲಿಲ್ಲ. ಆದರೆ ಅವು ಸತ್ಯಾನ್ವೇಷಣೆಗೆ ತುಂಬ ಂಗತವಾಗಿದ್ದವೆಂದೇನೂ ಅವರು ಪರಿಗಣಿಸಿರಲಿಲ್ಲ. ವಿಚಾರಪರತೆಯಲ್ಲಿ ನಂಬಿಕೆ ಟ್ಟುಕೊಂಡಿದ್ದಾಗಲೇ ಅವರು ವಿಗ್ರಹ ಭಂಜಕರೇನೂ ಆಗಿರಲಿಲ್ಲ. ಅವರು ಾಗಾಗದಂತೆ ತುಂಬ ಸಹಿಷ್ಣುಗಳೂ ಅರ್ಥಗ್ರಾಹಿಗಳೂ ಆಗಿದ್ದರು.

ಅಹಿಂಸೆಯು ಅವರ ಮೌಲ್ಯವ್ಯವಸ್ಥೆಯಲ್ಲಿ ಅತ್ಯಂತ ಮೇಲಿನ ಮಟ್ಟದಲ್ಲಿದ್ದಿತು. ಾಗಾಗಿ ಅವರ ಧರ್ಮವನ್ನು ಅಹಿಂಸೆಯ ಮಾತುಗಳಲ್ಲೇ ನಿರೂಪಿಸುವುದು ಸಾಧ್ಯವಿದೆ. ಅದರ ಎಲ್ಲೆ ಅವರಿಗೆ ಸರ್ವವ್ಯಾಪಿ ಯಾಗಿದ್ದಿತು, ಖಾಸಗಿ ಹಾಗೂ ಸಾರ್ವಜನಿಕ ಜೀವನ ವಲಯಗಳೆಲ್ಲವನ್ನೂ ಒಳಗೊಂಡಿದ್ದಿತು. ಬಾಳಿನಲ್ಲಿ ಅನುಸರಿಸಲು ಅತ್ಯಂತ ಸೂಕ್ತ ಸೂತ್ರವಾಗಿ ಅಷ್ಟೇ ಅಲ್ಲ, ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆಯನ್ನು ಜಾರಿಗೆ ತರಲು ಒಂದು ಸಾಧನ ವಾಗಿಯೂ, ಶಾಂತಿ-ಅಹಿಂಸೆಗಳನ್ನು ಪ್ರತಿಪಾದಿಸಿದವ ರೆಲ್ಲರಿಗಿಂತ ಹೆಚ್ಚು ಯಶಸ್ವಿಯಾಗಿದ್ದರು ಗಾಂಧೀಜಿ. ಮುನ್ನಿನ ಧಾರ್ಮಿಕ ನಾಯಕರು ಅಹಿಂಸೆಯನ್ನು ವೈಯಕ್ತಿಕ ಬಾಳಿನಲ್ಲಿ ಆಚರಣೆಗೆ ತರಬೇಕಾದ ಅತ್ಯಂತ ಮುಖ್ಯ ಮೌಲ್ಯವೆಂದೇನೋ ಒತ್ತಿ ಹೇಳಿದ್ದರು. ಆದರೆ ಗಾಂಧೀಜಿ ಯವರು ಅದನ್ನು ನ್ಯಾಯ ಸಾಧನೆಗಾಗಿ, ದುರ್ಬಲರ ನಮ್ಯರ ಶೋಷಿತರ ವಿಮೋಚನೆಗಾಗಿ, ಬದಲಾವಣೆಯನ್ನು ಜಾರಿಗೆ ತರಲು ಒಂದು ಆಯುಧವನ್ನಾಗಿ ಉಪಯೋಗಿಸಿದ ಪ್ರಪ್ರಥಮ ಹಾಗೂ ಖ್ಯಾತ ವ್ಯಕ್ತಿ. ಅವರು ಖಾಸಗಿ ಜೀವನದಲ್ಲೂ ಸಂಪೂರ್ಣವಾಗಿ ಶ್ರದ್ಧೆ, ಸತ್ಯಸಂಧತೆ ಹಾಗೂ ಅಹಿಂಸೆಗಳನ್ನು ಆಚರಿಸಿದ ವ್ಯಕ್ತಿಯಾಗಿದ್ದರಿಂದಲೇ ಇದು ಸಾಧ್ಯವಾಯಿತು. ಅವರ ಪಾರಮಾರ್ಥಿಕತೆಯು ಇತರರನ್ನು ಹೊರತಾಗಿಸಿದ ವ್ಯಕ್ತಿಗತ, ಅಥವಾ ಮೋಕ್ಷ ಸಾಧನೆಯ ಸಂಕುಚಿತ ಉದ್ದೇಶದ್ದಾಗಿರಲಿಲ್ಲ. ಅಹಿಂಸೆಯು ಕೇವಲ ಇತರರ ಜೀವಹರಣವನ್ನು ತಪ್ಪಿಸುವುದಾಗಿರಲಿಲ್ಲ. ಆದರೆ ಸತ್ಯಾನ್ವೇಷಣೆಯ ಅತ್ಯಂತ ಮೂರ್ತರೂಪದ ಅಭಿವ್ಯಕ್ತಿ ಯಾಗಿದ್ದಿತು. ಅದು ಕ್ರಿಯಾಶೀಲತೆ, ಉದಾತ್ತ ಧ್ಯೇಯಕ್ಕಾಗಿ ತೊಡಗಿಕೊಳ್ಳುವುದು, ಅದಕ್ಕಾಗಿ ನೈತಿಕ ಹಾಗೂ ವಸ್ತು ಬದ್ಧತೆ, ಇವೆಲ್ಲವುಗಳ ಅರ್ಥ ನೀಡಿದ್ದಿತು. ಅವರ ಸತ್ಯಾಗ್ರಹ ಪ್ರಕಲ್ಪನೆಯು ಸತ್ಯ ಹಾಗೂ ನ್ಯಾಯದ ಸಲುವಾಗಿ ಅಹಿಂಸಾ ಸೂತ್ರವನ್ನು ಮೂರ್ತರೂಪದಲ್ಲಿ ಹಾಗೂ ಪ್ರಾಯೋಗಿಕವಾಗಿ ಅನ್ವಯಿಸುವುದಾಗಿದ್ದಿತು. ಇದರ ನೆರವಿನಿಂದ ಅವರು ವರ್ಣಭೇದದ ಪ್ರಬಲ ವ್ಯವಸ್ಥೆಯನ್ನು, ದುರ್ಭೇದ್ಯ ಬ್ರಿಟಿಷ್ ಸಾಮ್ರಾಜ್ಯವನ್ನೂ ಸಹ ನಡುಗಿಸಿದರು. ಅಹಿಂಸೆಯು ಅಂಜುಬುರುಕರ ಆಯುಧವಾಗಿರಲಿಲ್ಲ. ಆದರೆ ಧೈರ್ಯವಂತರಲ್ಲಿ ಅತ್ಯಂತ ಧೈರ್ಯವಂತರಾದವರ ಆಯುಧವಾಗಿದ್ದಿತು ಎಂಬುದನ್ನು ಅವರು ಆಚರಣೆಯಲ್ಲಿ ಸಾಧಿಸಿ ತೋರಿದರು. ಹಿಂಸೆಯು ಅನೈತಿಕವಷ್ಟೇ ಅಲ್ಲ, ಅಪರಿಣಾಮಕಾರಿಯೂ ಹೌದು, ಅದು ಪ್ರತಿ ಪರಿಣಾಮವನ್ನು ಉಂಟುಮಾಡುವಂತಹುದು ಕೂಡ. ಅದು ಉತ್ತಮ ರಾಜಕಾರಣವೂ ಅಲ್ಲ ಎಂಬುದನ್ನು ಅವರು ದೃಷ್ಟಾಂತ ಸಹಿತ ಸಾಧಿಸಿ ತೋರಿದರು. ಅವರ ಈ ಬೋಧೆಯು ಇಂದಿನ ಜಗತ್ತಿನ ಸಮಕಾಲೀನ ಪರಿಸ್ಥಿತಿಗೆ ಎಷ್ಟು ಅತ್ಯಂತ ಪ್ರಸ್ತುತವಾದುದು !

ಗಾಂಧೀಜಿಯವರು ಅಹಿಂಸೆಗೆ ಹೆಚ್ಚು ಒತ್ತುಕೊಟ್ಟರೂ ಸತ್ಯವನ್ನು ಅಹಿಂಸೆಗೂ ಮೇಲೆ ಇರಿಸಿದರು. ಅಹಿಂಸೆಯು ಅವರ ಅರ್ಥದಲ್ಲಿ ಸತ್ಯಕ್ಕೆ ಅಧೀನವಾದುದು ಅಥವಾ ಸತ್ಯವನ್ನು ಆಧರಿಸಿದುದು. ಉದ್ದೇಶವು ನೈತಿಕವಾಗಿರದಿದ್ದಲ್ಲಿ ನ್ಯಾಯಪರ ವಾಗಿರದಿದ್ದಲ್ಲಿ ಅವರು ಅಹಿಂಸಾತ್ಮಕ ಸತ್ಯಾಗ್ರಹವನ್ನು ಒಂದು ಆಯುಧವನ್ನಾಗಿ ಬೆಂಬಲಿಸುತ್ತಿರಲಿಲ್ಲ. ಆದರೆ ಹಿಂಸೆಯ ವಿಷಯ ಹೇಗೆ ? ಹಿಂಸೆಯು ನೈತಿಕವಾಗಿದ್ದಲ್ಲಿ ನ್ಯಾಯಪರವಾಗಿದ್ದಲ್ಲಿ ಅದಕ್ಕೆ ಬೆಂಬಲ ನೀಡುವುದು ಸರಿಯೆ ? ಖಂಡಿತ ಇಲ್ಲ! ಅಂಥ ಪ್ರಸಂಗದಲ್ಲೂ ಅವರು ಹಿಂಸೆಗೆ ಬೆಂಬಲ ನೀಡುತ್ತಿರಲಿಲ್ಲ. ಏಕೆಂದರೆ, ಅವರು ಗುರಿಯಷ್ಟೆ ಅಲ್ಲ ಗುರಿಸಾಧನೆಗಾಗಿ ಬಳಸುವ ಸಾಧನವೂ ಪರಿಶುದ್ಧವಾಗಿರಬೇಕೆಂದು ನಂಬಿದ್ದರು. ವಾಸ್ತವವಾಗಿ, ನ್ಯಾಯಯುತವಾದ ಗುರಿ ಸಾಧನೆಗಾಗಿಯೂ ಹಿಂಸೆಯನ್ನು ಒಂದು ಸಾಧನವನ್ನಾಗಿ ಬಳಸುವುದನ್ನು ತಿರಸ್ಕರಿಸುವುದಕ್ಕೇ ಅವರು

> ಗಾಂಧೀಜಿಯವರು ವಿಚಾರಪರತೆ ಹಾಗೂ ವಿವೇಕ ಪರಿಜ್ಞಾನಕ್ಕೆ ಒತ್ತುಕೊಟ್ಟರೂ ಮಾನವಕುಲದ ಸಂಕ್ಷೇಮ, ಉಳಿಕೆ ಹಾಗೂ ಪ್ರಗತಿಗೆ ಸುಸಂಗತವಾದಂಥ ಮೂಲ ಮೌಲ್ಯಗಳಲ್ಲಿ ನಂಬಿಕೆಯನ್ನೇನೂ ಬಿಟ್ಟುಕೊಡಲಿಲ್ಲ. ಅವರು ಈ ಮೌಲ್ಯಗಳನ್ನು ಕೇವಲ ಎರಡು ಮಾತುಗಳಲ್ಲಿ ಕ್ರೋಡೀಕರಿಸಿದರು – ಸತ್ಯ ಹಾಗೂ ಅಹಿಂಸೆ. ಈ ಮೌಲ್ಯಗಳಲ್ಲಿ ನಂಬಿಕೆಯು ಒಂದು ತಿರುಗಾಣಿ ಇದ್ದಂತೆ, ಅದರ ಸುತ್ತ ಇಡೀ ಮಾನವ ಜೀವನ ಸುತ್ತು ಹಾಕುತ್ತದೆ, ಮತ್ತು ವಿಚಾರ ಪರತೆಯು ಈ ಬಾಳಚಕ್ರಕ್ಕೆ ಹತ್ತಿಕೊಂಡು ನಯವಾಗಿ ಕಾರ್ಯ ಜರುಗಿಸುವಂತೆ ಮಾಡುವ ಎಣ್ಣೆ ಇದ್ದಂತೆ, ಎಂದು ಅವರು ಪ್ರತಿಪಾದಿಸುತ್ತಿದ್ದರು. ಸತ್ಯ ಹಾಗೂ ಅಹಿಂಸೆ ಅವರ ಆಧ್ಯಾತ್ಮಿಕತೆಯ ನಿರೂಪಣೆಯಾಗಿದ್ದಿತು. ಅವರ ಆಧ್ಯಾತ್ಮಿಕತೆಯೇ ಅವರ ಖಾಸಗಿ ಹಾಗೂ ಸಾರ್ವಜನಿಕ ಜೀವನವನ್ನು – ಅವರ ಇಡೀ ಬಾಳನ್ನು ರೂಪಿಸಿದ್ದಿತು.

ಹೆಚ್ಚು ಒತ್ತುಕೊಟ್ಟಿದ್ದರು. ಯಾವ ಗುರಿಸಾಧನೆಗಾದರೂ ಸರಿಯೆ ಅಹಿಂಸೆಗೇ ಆದ್ಯತೆ ನೀಡಬೇಕು ಎಂದು ಅವರು ನಿಸ್ಸಂಶಯವಾಗಿ ಒತ್ತಿಹೇಳಿದರು. ಇದು ಆಧ್ಯಾತ್ಮಿಕತೆಗೂ ರಾಜಕಾರಣಕ್ಕೂ ಅವರು ನೀಡಿದ ಅಸದೃಶ ಕಾಣಿಕೆಯಾಗಿದ್ದಿತು. ಹಾಗಿದ್ದರೆ, ಅವರು ಬ್ರಿಟಿಷರಿಗೆ ಅವರ ಕೆಲವು ಯುದ್ಧಗಳಲ್ಲಿ ಬೆಂಬಲ ನೀಡಿದುದೇಕೆ? ಭಾರತಕ್ಕೆ ಸ್ವಾತಂತ್ರ್ಯ ತಂದು ಕೊಡುವ, ದಕ್ಷಿಣ ಆಫ್ರಿಕದಲ್ಲಿ ವರ್ಣಭೇದ ನೀತಿಯನ್ನು ತೊಡೆದುಹಾಕುವ ಮಹೋನ್ನತ ಗುರಿಸಾಧನೆಗಾಗಿ ಇದು ಅವರು ಬಳಸಿದ ವ್ಯೂಹತಂತ್ರ ಮಾತ್ರವಾಗಿದ್ದಿತೆ? ಹಾಗೇನೂ ಇಲ್ಲ. ಈ ನಿಟ್ಟಿನಲ್ಲಿ ಅವರನ್ನು ಬಹುಶಃ ಮಹಾಭಾರತ ಯುದ್ಧದಲ್ಲಿ ಕೃಷ್ಣನಿಗೆ ಹೋಲಿಸಬಹುದೇನೋ. ಅವರು ಖಂಡಿತ ಹಾಗೂ ಯಾವತ್ತೂ ಹಿಂಸೆಯ ಬದಲು ಅಹಿಂಸೆಗೇ ಆದ್ಯತೆ ನೀಡುತ್ತಿದ್ದರು ಮತ್ತು ಅಹಿಂಸೆ ಗೆಲ್ಲಲು ಸಾಧ್ಯವಿರುವ ಎಲ್ಲ ಅವಕಾಶಗಳನ್ನೂ ಒದಗಿಸಿಕೊಡುತ್ತಿದ್ದರು. ಆದರೆ ಹಿಂಸೆಯು ಅನಿವಾರ್ಯವಾದಾಗ ಅಥವಾ ಅದನ್ನು ಅವರ ಮೇಲೆ ಹೊರಿಸಿದಾಗ, ಅವರು ನ್ಯಾಯವು ಯಾರ ಪರವಾಗಿದ್ದಿತೋ ಅವರ ಹೋರಾಟಕ್ಕೆ ಬೆಂಬಲ ನೀಡುತ್ತಿದ್ದರು. ಉದಾಹರಣೆಗೆ, ಹಿಟ್ಲರನಂಥ ದುಷ್ಟ ಶಕ್ತಿಯೊಂದಿಗೆ ರಾಜಿಮಾಡಿಕೊಂಡಲ್ಲಿ ಯುದ್ಧ ತಪ್ಪಿಸಬಹುದು ಎನ್ನುವಂಥ ಪರಿಸ್ಥಿತಿಯಲ್ಲಿ ಅವರು ಖಂಡಿತ ಹಿಟ್ಲರನ ವಿರುದ್ಧ ಯುದ್ಧದ ಪರವಾಗಿಯೇ ನಿಲುವು ತಳೆಯುತ್ತಿದ್ದರು. ಹೇಡಿತನ ಹಾಗೂ ಹಿಂಸೆ ಇವುಗಳ ನಡುವೆ ಆಯ್ಕೆ ಮಾಡಿಕೊಳ್ಳಬೇಕಾಗಿಬಂದಾಗ ಅವರು ಹಿಂಸೆಯನ್ನೇ ಆಯ್ಕೆ ಮಾಡಿಕೊಳ್ಳುತ್ತಿದ್ದರು ನಿಜ. ಆದರೆ ಅದು ಸತ್ಯದ ಪರವಾಗಿದ್ದಾಗಲಷ್ಟೆ. ಸತ್ಯವನ್ನು ಒಪ್ಪಿಕೊಳ್ಳುವುದಕ್ಕೆ ನೈತಿಕ ಧೈರ್ಯ ಇಲ್ಲದಿದ್ದಾಗ ಅಹಿಂಸೆಯನ್ನು ಒಂದು ಮುಖವಾಡವನ್ನಾಗಿ ಬಳಸುವುದನ್ನು ಅವರು ಒಪ್ಪುತ್ತಿರಲಿಲ್ಲ. ಆದರೆ ಗಾಂಧೀಜಿಯವರ ಅಹಿಂಸೆಯ ನೈತಿಕತೆಯನ್ನು ಅಲ್ಪಾನುಕೂಲತೆಗೆ ಅವಕಾಶ ಮಾಡಿಕೊಡುವ ಹಾಗೂ ಚಪಲಚಿತ್ತತೆಗೆ ಅವಕಾಶ ಮಾಡಿಕೊಡುವ ಸಾಪೇಕ್ಷತಾವಾದ (relativism)ವೆಂದು ಹೇಳಲಾಗುವುದಿಲ್ಲ. ಅದು ನಮ್ಮ ಕ್ರಿಯೆಯ ಅಂತಿಮ ಫಲಿತಾಂಶವನ್ನು ಅವಲಂಬಿಸಿ ಇರುತ್ತದೆ. ಮಾನವ ಸಂಕ್ಷೇಮವನ್ನೂ ಅವಲಂಬಿಸಿರುತ್ತದೆ. ಗೀತೆ ಹೇಳುವಂತೆ 'ಲೋಕಹಿತ'ವನ್ನು, ಅದರ ಪರಿಣಾಮಗಳನ್ನು, ಅವಲಂಬಿಸಿರುತ್ತದೆ. ಗಾಂಧೀಜಿಯವರು ಸಂಕುಚಿತ ಸ್ವಾರ್ಥಹಿತಗಳನ್ನು ಆಧರಿಸಿದ ಸಾಪೇಕ್ಷತಾವಾದವನ್ನು ಖಂಡಿತ ವಿರೋಧಿಸುತ್ತಿದ್ದರು. ಅದೇ ಹೊತ್ತಿನಲ್ಲಿ ಅವರು ಮಾನವಕುಲದ ಹೆಚ್ಚಿನ ಒಳಿತಿಗಾಗಿ, ಶಾಸ್ತ್ರಾಂಧತೆ ಹಾಗೂ ಜಿಗುಪುತನವನ್ನೂ ವಿರೋಧಿಸುತ್ತಿದ್ದರು. ಆದರೆ ಎಲ್ಲ ಸಾಧನಗಳೂ ವ್ಯೂಹತಂತ್ರಗಳೂ ಸತ್ಯ ಅಹಿಂಸೆಗಳಿಗೆ ಅಧೀನವಾಗಿರಬೇಕೆಂದು ಅವರು ಸುಸ್ಪಷ್ಟವಾಗಿ ಹೇಳುತ್ತಿದ್ದರು. ಗಾಂಧೀಜಿಯವರು ನಂಬಿದ್ದಂತೆ ಹಿಂಸೆಯು ಎಂದೂ ಉದಾತ್ತವಾಗಿರಲಾರದು. ಅದು ಯಾವತ್ತೂ ಪೂರ್ವಗ್ರಹ, ತಪ್ಪುಗ್ರಹಿಕೆ, ತಾಳ್ಮೆರಾಹಿತ್ಯ, ಸಂಕುಚಿತ

ಸ್ವಾರ್ಥಹಿತಗಳು ಇವುಗಳ ಮೇಲೆಯೇ ಆಧ
ಇರುತ್ತದೆ. ಆದ್ದರಿಂದಲೇ ಅವರು ಪ್ರೇಮ ಅಹಿ
ಗಳಿಗೆ ಯಾವತ್ತೂ ಆದ್ಯತೆ ನೀಡಿದರು.

ಹೀಗೆ ಗಾಂಧೀಜಿಯವರಿಗೆ ಧರ್ಮವು
ಶೋಧನೆಯ ಹಾಗೂ ಮಾನವ ಕುಲದ ಒಳಿತಿಗ
ನೆರವಾಗುವ ಅರ್ಥ ನೀಡುತ್ತಿದ್ದಿತೇ ಹೊರ
ಏಕಾಂತದಲ್ಲಿ ಗಳಿಸಬಹುದಾದ ಯಾವುದೇ
ಗೂಢಾನುಭವದ ಅನುಸರಣೆಯ ಅರ್ಥ ನೀ
ತ್ತಿರಲಿಲ್ಲ. ಇಹ ಜಗತ್ತನ್ನೇ ಸ್ವರ್ಗವನ್ನಾಗಿ ಪರಿವ
ಸುವುದು ಅವರ ಗುರಿಯಾಗಿದ್ದಿತು. ಪ್ರತಿಯೊ
ಮಾನವ ವ್ಯಕ್ತಿಯೂ ತಿನ್ನಲು ಸಾಕಷ್ಟು ಹೊಂದಿರು
ಸುಖವಾಗಿ ಜೀವಿಸಬಲ್ಲ, ಪ್ರಾಮಾಣಿಕ ಜೀ
ನಡೆಸಲು ಸಾಕಷ್ಟು ಕೆಲಸ ಪಡೆದಿರುವ, ಇತ
ಹಾಗೂ ಭವಿಷ್ಯತ್ತಿನ ಪೀಳಿಗೆಗಳ ಖರ್ಚಿನಲ್ಲಿ ತಾ
ಸಿರಿವಂತನಾಗುವ ದುರಾಸೆ ಇಲ್ಲದವರು ಇರು
ಜಗತ್ತನ್ನು ಇಲ್ಲೇ ಸೃಷ್ಟಿಸುವುದು ಅವರ ಗುರಿಯಾಗಿದ್ದಿತು

ಜೀವನದ ಬಗೆಗಿನ ಈ ಪೂರ್ಣ ನೋಟದ
ಅರ್ಥಶಾಸ್ತ್ರವೂ ಅವರ ಧರ್ಮದ ಒಂ
ಭಾಗವಾಗಿದ್ದಿತು. ಏಕೆಂದರೆ, ಅರ್ಥವ್ಯವಸ್ಥೆಯನ್ನ
ಅಧ್ಯಾತ್ಮೀಕರಿಸಬೇಕಿದ್ದಿತು, ನೈತಿಕೀಕರಿಸಬೇಕಿದ್ದಿ
ಆರ್ಥಿಕ ಬೆಳವಣಿಗೆಯು ಅಹಿಂಸಾತ್ಮಕವಾಗಿರಬೇಕಿದ್ದಿ
ಅದು ಎಂದೂ ಮಾನವ ಕಲ್ಯಾಣಕ್ಕೆ ಅಪಾ
ತರುವಂಥದ್ದಾಗಿರಬಾರದಿದ್ದಿತು. ಆದ್ದರಿಂದ
ಗಾಂಧೀಜಿಯವರು ಯಂತ್ರಗಳ ಬಗೆಗೂ ಕೈಗಾರಿ
ಕರಣದ ಬಗೆಗಿನ ಯಾವುದೇ ರೀತಿಯ ಗೀಳ
ಜರಿದರು. ಯಂತ್ರಗಳಿಗೆ ಹಾಗೂ ಕೈಗಾರಿಕೀಕರಣ
ಯಾವ ಪಾತ್ರವೂ ಇಲ್ಲವೆಂದೇನೂ ಅವರು ಹೇಳಲಿ
ಅವರು ಜರಿದುದು ಅವುಗಳ ಬಗೆಗೆ ಇರುವ ಗೀಳನ್ನು
ಮಾನವ ಕಲ್ಯಾಣದ ಬದಲು ಕೈಗಾರಿಕೀಕರಣವ
ನಮ್ಮ ಬಾಳ ಗುರಿಯನ್ನಾಗಿ ಪರಿಭಾವಿಸುವ ಮನೋ
ವೃತ್ತಿಯನ್ನು. ಏಕೆಂದರೆ, ಅದು ಗುರಿ ಹಾಗೂ ಸಾಧನಗ
ಬಗೆಗೆ ಗೊಂದಲ ಉಂಟುಮಾಡುತ್ತಿದ್ದಿತು. ಗಾಂಧೀ
ಯವರ ಆದರ್ಶ ಸೂತ್ರ ಹೀಗಿದ್ದಿತು: ಜನರ
ಪ್ರೀತಿಸಿ, ಯಂತ್ರಗಳನ್ನು ಮಾನವ ಕಲ್ಯಾಣ ಸಾಧನಗ
ನ್ನಾಗಿಯಷ್ಟೇ ಬಳಸಿ, ಜನತೆಯನ್ನು ಅನುಕೂಲವಿದ್ದಾ
ಬಳಸಿಕೊಳ್ಳಬಹುದಾದ, ಇಲ್ಲದಿದ್ದಾಗ ತ್ಯಜಿಸಬಹುದಾ
ಸಾಧನವನ್ನಾಗಿ ಭಾವಿಸಬೇಡಿ. ಗಾಂಧೀಜಿಯವ
ಧರ್ಮವು ಹೀಗೆ ಅವರಿಗೆ ಅರ್ಥಶಾಸ್ತ್ರ ಹಾಗ
ಆರ್ಥಿಕೋನ್ನತಿಯ ಬಗೆಗೆ ತೀವ್ರತರ ಮಾನವೀ
ಹಾಗೂ ಪರಿಸರ ಸ್ನೇಹಿ ಮನೋಭಾವ ಬೆಳೆಸಿಕೊಳ್ಳ
ಸಾಧ್ಯ ಮಾಡಿಕೊಟ್ಟಿತು. ಧರ್ಮ, ಅರ್ಥಶಾಸ್ತ್ರ
ರಾಜಕಾರಣ ಹಾಗೂ ಪರಿಸರದ ಬಗೆಗಿನ ತ
ಮನೋಧರ್ಮದಲ್ಲಿ ಯಾವ ಘರ್ಷಣೆಯನ್ನು
ಅವರು ಕಾಣಲಿಲ್ಲ. ಅವೆಲ್ಲ ಒಂದೇ ಜೀವನ ಸಿದ್ಧಾಂತ
ವಿವಿಧ ಸ್ವರೂಪಗಳಾಗಿದ್ದವು, ಭಾಗವಾಗಿದ್ದವು.

ಈ ಬೆಳಕಿನಲ್ಲೇ ನಾವು ಯಾವುದೇ ಗು
ಸಾಧನೆಗಾಗಿ ಬಳಸುವ ಸಾಧನಗಳ ಪರಿಶುದ್ಧತೆಯ
ಬಗೆಗೆ ಗಾಂಧೀಜಿ ಒತ್ತಿಹೇಳುತ್ತಿದ್ದುದನ್ನು ಸರಿಯಾ
ಅರ್ಥಮಾಡಿಕೊಳ್ಳಬಹುದಾಗಿದೆ. ಗುರಿ ಪರಿಶು
ವಾಗಿದ್ದಲ್ಲಿ ಸಾಧನವೂ ಪರಿಶುದ್ಧವಾಗಿರಬೇಕೆಂದ


**'ಹೊಸತು' ಚಂದಾ ನೋಂದಣಿಗೆ ಮತ್ತು ಸದಭಿರುಚಿಯ ಪುಸ್ತಕಗಳಿಗೆ ಕೆಳಕಂಡ ನವಕರ್ನಾಟಕ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ**

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಸರ್ಕಾರಿ ಉರ್ದು ಶಾಲೆ ಆವರಣ, ಐ. ಬಿ. ಎದುರು, ಚಿತ್ರದುರ್ಗ - ೫೭೭ ೫೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಎಂ. ಜಿ. ಸ್ಟೇಡಿಯಂ ಆವರಣ, ಅಂಬೇಡ್ಕರ್ ವೃತ್ತ, ರಾಯಚೂರು - ೫೮೪ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ನಗರ ಕೇಂದ್ರ ಗ್ರಂಥಾಲಯದ ಆವರಣ, ಆರ್. ಪಿ. ರಸ್ತೆ, ಮಂಡ್ಯ - ೫೭೧ ೪೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಜೀರಲಿಂಗೇಶ್ವರ ದೇವಸ್ಥಾನದ ಆವರಣ, ಪಿ.ಬಿ. ರಸ್ತೆ, ದಾವಣಗೆರೆ - ೫೭೭ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ನಗರ ಕೇಂದ್ರ ಗ್ರಂಥಾಲಯ ಆವರಣ, ಜಗತ್ ಸರ್ಕಲ್, ಗುಲ್ಬರ್ಗಾ - ೫೮೫ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಜಿಲ್ಲಾ ಕೇಂದ್ರ ಗ್ರಂಥಾಲಯದ ಆವರಣ, ಬಿ. ಎಚ್. ರಸ್ತೆ, ತುಮಕೂರು - ೫೭೨ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಿತ್ತೂರ ಕಾಂಪ್ಲೆಕ್ಸ್, ದೇನಾ ಬ್ಯಾಂಕ್ ಬಳಿ, ಜೂಬಿಲಿ ಸರ್ಕಲ್, ಧಾರವಾಡ - ೫೮೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ವಿಶ್ವೇಶ್ವರಯ್ಯ ವಸ್ತು ಸಂಗ್ರಹಾಲಯದ, ಮೊದಲನೇ ಮಹಡಿ, ಕಸ್ತೂರಬಾ ರಸ್ತೆ, ಬೆಂಗಳೂರು - ೫೬೦ ೦೦೧

# Filtrex

TECHNOLOGIES PVT LTD

An ISO 9001:2000 Company

We manufacture complete range of standard carbon blocks for water purification both for POE & POU systems.

We also custom manufacture to your specifications.




Filtrex Carbon Blocks as a component is tested by WQA against ANSI / NSF Standard 53




36/4, Raghavendra Nagar
Near Ring Road, 4th Cross
HRBR Layout, Bangalore 560043
Tel : (91) 80-2544 2331
Fax : (91) 80-2544 8514
e-mail : filtrex@singnet.com.sg
http://www.filtrextechnologies.com



ಶ್ರೀ ಸದಾಶಿವ ಯೋಗಿಗಳು
ಸಂಸ್ಥಾಪಕ ಅಧ್ಯಕ್ಷರು

# ಶ್ರೀ ಸದಾಶಿವ ಯೋಗ ಪ್ರತಿಷ್ಠಾನ, ಭಾರತ (ರಿ)

ಶ್ರೀ ಶಿವಾನಂದ ಯೋಗಾಶ್ರಮ, ಹಂಪಿ-583 239, ಹೊಸಪೇಟೆ ತಾ||, ಬಳ್ಳಾರಿ ಜಿಲ್ಲೆ

ಕಳೆದ 50 ವರ್ಷಗಳಿಂದ ಆಧ್ಯಾತ್ಮಿಕತೆಯ ವೈಜ್ಞಾನಿಕ ಹಿನ್ನೆಲೆಯನ್ನು ತರ್ಕಬದ್ಧವಾಗಿ ವಿಶ್ಲೇಷಣೆ ಮಾಡುತ್ತ ಬಂದಿರುವ ಶ್ರೀ ಸದಾಶಿವ ಯೋಗಿಗಳು ಮೂಢನಂಬಿಕೆಗಳ ವಿರುದ್ಧ ಅವಿರತ ಹೋರಾಟದಲ್ಲಿ ತೊಡಗಿದ್ದಾರೆ. ತಮ್ಮ ವಿಚಾರಗಳನ್ನು 'ಸದಾಶಿವ ಸೂತ್ರಗಳು' ಎಂಬ ಹೆಸರಲ್ಲಿ ಜನಪ್ರಿಯಗೊಳಿಸಿರುವ ಯೋಗಿಗಳು ಹಲವಾರು ವೈಚಾರಿಕ ಗ್ರಂಥಗಳನ್ನು ಕೂಡ ರಚಿಸಿದ್ದಾರೆ. ಓರ್ವ ಸಾಧಾರಣ ಯತಿಯಾಗಿ ಹಂಪಿಯಲ್ಲಿ ನೆಲೆಸಿರುವ ಶ್ರೀಯುತರು ಹೋಮಿಯೋ ವೈದ್ಯರಾಗಿಯೂ ಜನಸಾಮಾನ್ಯರ ಕಷ್ಟ ಕಾರ್ಪಣ್ಯಗಳಲ್ಲಿ ನೆರವಾಗುತ್ತಿದ್ದಾರೆ.

## ಮುಖ್ಯ ಸದಾಶಿವ ಸೂತ್ರಗಳು

1. ಮನುಜ ಜೀವಿಯ ಬದುಕು ಉಚ್ವಾಸ - ನಿಶ್ವಾಸಗಳೆಂಬ ಎರಡು ವಿಧ ಉಸಿರಾಟಗಳಿಂದ ಕೂಡಿದೆ. ಈ ಎರಡು ಕ್ರಿಯೆಗಳಿಗೆ ಅಂತರಂಗದ ಪ್ರಾಣವೇ ಮೂಲಾಧಾರವಾಗಿರುತ್ತದೆ.
2. ಸಂಕಲ್ಪ - ವಿಕಲ್ಪಗಳೇ ಜನನ - ಮರಣಗಳು; ಸಂಕಲ್ಪ-ವಿಕಲ್ಪ ನಾಶವೇ ಜನನ-ಮರಣ ನಾಶ.
3. ಜೀವನದಲ್ಲಿ ಎಲ್ಲರ ಸರ್ವವಿಧ ಹುಡುಕಾಟ - ತಡಕಾಟಗಳೆಲ್ಲಾ ತಾನು ಸುಖ-ಶಾಂತಿಯನ್ನು ಹೊಂದುವ ಉದ್ದೇಶವೇ ಹೊರತು ಮತ್ತೇನು ಅಲ್ಲವೇ ಅಲ್ಲ. ಸುಖವು ಸ್ವರ್ಗದಲ್ಲಿದೆ ಎನ್ನುವುದರ ಅರ್ಥ - ಮನಸ್ಸು ಸ್ವಸ್ಥಾನಾಭಿಮುಖವಾಗಿ ಗಮನಿಸುವುದರಿಂದ ಉಂಟಾಗುವ ತನ್ಮಯಾನಂದವೇ ಸ್ವರ್ಗ.
4. ಜೀವನವೆಂಬುದು ನೀರ ಮೇಲಣ ಗುಳ್ಳೆಯಂತೆ. ದೊಡ್ಡವು ಮತ್ತು ಚಿಕ್ಕವುಗಳ ನಡುವೆ ಎಂಬ ಯಾವುದೇ ವ್ಯತ್ಯಾಸವಿಲ್ಲ; ಎಲ್ಲವೂ ಕ್ಷಣಿಕ.
5. ಜ್ಞಾನವೇ ಬೆಳಕು. ಜ್ಞಾನವನ್ನು ಬಳಸಿಕೊಂಡು ಯಾವುದೇ ವಸ್ತು ಅಥವಾ ವಿಷಯವನ್ನು ಕುರಿತಂತೆ ಸತ್ಯವನ್ನು ಅರಿಯಬಹುದು.
6. ದೇವರು ಒಬ್ಬನೇ ಎಂದು ಎಲ್ಲ ಧರ್ಮಗಳು ಪ್ರತಿಪಾದಿಸುತ್ತವೆ. ಭಕ್ತರು ದೇವಸ್ಥಾನಗಳಿಗೆ, ಚರ್ಚುಗಳಿಗೆ, ಮಸೀದಿಗಳಿಗೆ ಹೋಗುತ್ತಾರೆ. ಆದರೆ, ತಮ್ಮ ದೇವರೇ ಶ್ರೇಷ್ಠ ಎಂದು ಅವರು ಜಗಳಾಡುತ್ತಾರೆ. ಎಂಥ ವಿಪರ್ಯಾಸ!
7. ದೇವರು, ಧರ್ಮ ಹೆಸರಿನಲ್ಲಿ ಅದೆಷ್ಟು ಯುದ್ಧಗಳು, ರಕ್ತಪಾತ, ಲೂಟಿ ಇವೆಲ್ಲ ಘಟಿಸಿವೆ. ಆದರೆ, ದೇವರು ಎಂದಾದರೂ ತನ್ನ ಭಕ್ತರ ಬಗ್ಗೆ ಕಾಳಜಿ ವ್ಯಕ್ತಪಡಿಸಿದ್ದಾನೆಯೇ?

## ಶ್ರೀ ಸದಾಶಿವ ಯೋಗಿಯವರು ರಚಿಸಿರುವ ಗ್ರಂಥಗಳು

ರೂ. 35


ರೂ. 95



ರೂ. 70



ರೂ. 120



ರೂ. 115


ರೂ. 80


ರೂ. 100


ಶ್ರೀ ಸದಾಶಿವ ಯೋಗ ಪ್ರತಿಷ್ಠಾನ, ಭಾರತ (ರಿ) ಸಂಸ್ಥೆಗೆ ನೀಡುವ ದೇಣಿಗೆಗೆ 'ಸೆಕ್ಷನ್ 80ಜಿ' ಅನ್ವಯ ಆದಾಯ ತೆರಿಗೆ ವಿನಾಯಿತಿ ಇದೆ.

ರು ನಂಬಿದ್ದರು. ಅಮಾನವೀಯ ಸಾಧನಗಳು ನವೀಯ ಗುರಿಗಳನ್ನು ಸಾಧಿಸಲಾರವು. ದಾಹರಣೆಗೆ, ಆರ್ಥಿಕ ಬೆಳವಣಿಗೆಯು ಮಾನವ ೋಷಣೆಯ ಆಧಾರದ ಮೇಲೆ ಆಗಲಾರದು. ತಹ ಬೆಳವಣಿಗೆಯು ಕೆಲವರ ಉನ್ನತಿ ಹಾಗೂ ರರ ಅವನತಿಗೆ ದಾರಿಮಾಡಿಕೊಡುತ್ತದಷ್ಟೆ. ರ್ಥಿಕೋನ್ನತಿಯು ಮಾನವರಿಗೆ ಕುಂದುತರುವ ತ್ತಗಳನ್ನು ದೂರೀಕರಿಸಬೇಕು. ಕೆಲವು ಪ್ರಸಂಗ ಲ್ಲಿ, ಸ್ಥಳಾಂತರಣವು ಅನಿವಾರ್ಯವಾದಾಗ, ಂತರಿಸುವ ಜನರಿಗೆ ಹೇಗೆ ಪುನರ್ವಸತಿ ಕಲ್ಪಿಸಿ ಡಬೇಕೆಂದರೆ, ನಷ್ಟ ಪರಿಹಾರ ಒದಗಿಸಬೇಕೆಂದರೆ, ರು ಹಿಂದಿಗಿಂತ ಹೆಚ್ಚು ಉತ್ತಮ ಸ್ಥಿತಿಯಲ್ಲಿರು ತಾಗಬೇಕು, ಹೀನಸ್ಥಿತಿಯಲ್ಲಿ ಇರುವಂತಾಗ ರದು. ಹಾಗಾಗಿ ಅವರೂ ಆರ್ಥಿಕೋನ್ನತಿಯ ಯೋಜನದಲ್ಲಿ ಪಾಲ್ಗೊಳ್ಳುವಂತಾಗಬೇಕು. ಜಕಾರಣದಲ್ಲೂ ಇದೇ ಮಾತು ಸತ್ಯ. ಜಕಾರಣವು ಸಾಮರಸ್ಯದ ಕಲೆ, ಪರಸ್ಪರ ವಿರುದ್ಧದ ಡು ಪಕ್ಷಗಳೂ ಲಾಭಗಳಿಸಿ ಯಾರೂ ಹೀನಸ್ಥಿತಿ ಪದಿದ್ದಾಗಲಷ್ಟೇ ಸಾಮರಸ್ಯ ಸಾಧ್ಯ. ಈ ಕಲೆಯಲ್ಲಿ ಬ್ಬನ ತೇಜೋವಧೆಯಿಂದ ಇನ್ನೊಬ್ಬನಿಗೆ ಗೌರವ ಕೂಡದು. ಗಾಂಧೀಜಿಯವರ ರಾಜಕಾರಣ ಎಷ್ಟು ಶುದ್ಧವಾಗಿದ್ದಿತೆಂದರೆ, ಅಹಿಂಸಾತ್ಮಕ ಸತ್ಯಾಗ್ರಹದ ೂಲಕ ಅವರು ಬ್ರಿಟಿಷರ ವಿರುದ್ಧ ಹೋರಾಟ ನಡೆಸಿ ಗಲೂ ಅವರ ಮನಸ್ಸಿನಲ್ಲಿ ಬ್ರಿಟಿಷರಿಗೆ ವಿರುದ್ಧವಾಗಿ ಷಭಾವನೆ ಲವಲೇಶವೂ ಇರಲಿಲ್ಲ. ಹಾಗಾಗಿಯೇ ರತವು ಸ್ವಾತಂತ್ರ್ಯ ಗಳಿಸಿದಾಗ ಭಾರತ, ಗ್ಲೆಂಡ್‌ಗಳು ಮಿತ್ರದೇಶಗಳಾಗಿ ಅಗಲಿದವು.

ಸತ್ಯ ಅಹಿಂಸೆಗಳಿಗೆ ಬದ್ಧವಾಗಿದ್ದುಕೊಂಡು ಂಧೀಜಿಯವರು ವ್ಯಕ್ತಿಯ ಸ್ವಾತಂತ್ರ್ಯ ಹಾಗೂ ನತೆಯನ್ನು ಅಪಾರವಾಗಿ ಗೌರವಿಸುತ್ತಿದ್ದರು. ಆದರೆ ತಿಯೊಬ್ಬ ವ್ಯಕ್ತಿಯೂ ಇತರ ವ್ಯಕ್ತಿಗಳ ಸ್ವಾತಂತ್ರ್ಯ ಗೂ ಘನತೆಯನ್ನು ಗೌರವಿಸಬೇಕಿದ್ದಿತಷ್ಟೇ. ಹಾಗಾಗಿ ವರು ಬಂಡವಾಳವಾದದಲ್ಲಿ ಶ್ರಮಜೀವಿಗಳ ೋಷಣೆಯ ಬಗೆಗೆ ವ್ಯಸನ ವ್ಯಕ್ತಪಡಿಸಿದಾಗಲೇ ದೇ ಹೊತ್ತಿನಲ್ಲಿ ಮಾನವರ ಸೃಜನಾತ್ಮಕ ಉದ್ಯಮ ಲ ಒತ್ತಾಸೆಯನ್ನು ತೃಪ್ತಿಗೊಳಿಸುವ ಅಗತ್ಯತೆಗೂ ತಲೆ ಗಿದರು. ಆದ್ದರಿಂದಲೇ ಅವರು ಬಂಡವಾಳವಾದ ಗೂ ರಾಜ್ಯ ಸಮಾಜವಾದ/ಕಮ್ಯುನಿಸಂಗಳ ನಡುವೆ ದು ಸುವರ್ಣ ಮಾಧ್ಯಮವನ್ನು ಆಯ್ಕೆ ಡಿಕೊಂಡರು. ಬಂಡವಾಳವಾದದಲ್ಲೂ ರಾಜ್ಯ ಮಾಜವಾದದಲ್ಲೂ ಹಿಂಸೆ ಇದ್ದಿತೆಂದು ಅವರು ವಿಸಿದ್ದರು. ಟ್ರಸ್ಟೀಶಿಪ್ ಆರ್ಥಿಕ ವ್ಯವಸ್ಥೆಯು ಾರವು ಅವರು ಕಂಡುಕೊಂಡ ಸುವರ್ಣ-ಾಧ್ಯಮವಾಗಿದ್ದಿತು. ಸಂಪತ್ತನ್ನು ಸೃಜಿಸುವ ಮಾನವ ತ್ತಾಸೆಯನ್ನು ನಿಗ್ರಹಿಸಬೇಕಿಲ್ಲ (ಅಹಿಂಸೆಯ ಸೂತ್ರಕ್ಕೆ ದ್ಧವಾಗಿದ್ದಾಗಲಷ್ಟೆ). ಆದರೆ ಸಂಪತ್ ಸೃಜಕನು ನು ಸೃಷ್ಟಿಸಿದ ಎಲ್ಲ ಅಥವಾ ಹೆಚ್ಚಿನ ಭಾಗವನ್ನು ತಾನೇ ಳಿಸುವ ಸಾಧ್ಯತೆಯನ್ನು ನಿಗ್ರಹಿಸಬೇಕು ಎಂಬುದು ವರ ಭಾವನೆಯಾಗಿದ್ದಿತು. ಮಾನವ ಜೀವಿಯೊಬ್ಬ ಹಿತ ಚಿಂತಕನಾಗಿರಲು ಸಾಧ್ಯವಿದೆ, ಅದರಲ್ಲೂ



ಕವಿತೆ

ಕವಿ
ತಾಳಲಾಗದೆ
ಸೀಳಿದ
ಕಾಗುಣಿತದ
ಕಂತೆ.

ಕಮಲಂ ಅರಸು
ನಂ. ೧೦, ೧೧ನೇ ಅಡ್ಡರಸ್ತೆ, ತ್ಯಾಗರಾಜನಗರ
ಬೆಂಗಳೂರು - ೫೬೦ ೦೨೨

ಅವನ/ಅವಳ ಆವಶ್ಯಕತೆ ಮತ್ತು ಸುಖ ಸೌಲಭ್ಯಗಳು ತೃಪ್ತಿಗೊಂಡಾಗ ಅನ್ನುವುದು ಅವರ ಸಂಬಿಕೆಯಾಗಿದ್ದಿತು. ಇದರಿಂದ ಸಂಪತ್ ಸೃಜಕನು ತಾನು ಸೃಜಿಸಿದ ಸಂಪತ್ತನ್ನು ಬೃಹತ್ ಜನಕಲ್ಯಾಣಕ್ಕಾಗಿ ನ್ಯಾಸವಾಗಿ ಇರಿಸುವುದಕ್ಕೆ ಸಾಧ್ಯವಾಗುತ್ತಿದ್ದಿತು. ಗಾಂಧೀಜಿಯವರು ಮುಂದಿಟ್ಟ ಪರ್ಯಾಯ ಆರ್ಥಿಕ ವ್ಯವಸ್ಥೆಯಲ್ಲಿ ಕೇವಲ ಪರೋಪಕಾರಿಗಳು ಒಂದು ಕಡೆ, ದಾನ ಸೌಲಭ್ಯ ಸ್ವೀಕರಿಸುವುದನ್ನು ಬಿಟ್ಟು ಬೇರಾವ ಪಾತ್ರವನ್ನೂ ಹೊಂದಿರದ ಬಡಬಗ್ಗರು ಇನ್ನೊಂದು ಕಡೆ ಎಂದೇನೂ ಇರಲಿಲ್ಲ. ಅಂತಹುದು ವ್ಯಕ್ತಿ ಸ್ವಾತಂತ್ರ್ಯ ಹಾಗೂ ಘನತೆಯ ಬಗೆಗೆ ಅವರಲ್ಲಿದ್ದ ನಂಬಿಕೆಗೆ ಸರಿಹೊಂದುತ್ತಿರಲಿಲ್ಲ. ಅವರು ಆದ್ಯತೆ ನೀಡಿದ ಆರ್ಥಿಕ ವ್ಯವಸ್ಥೆಯಲ್ಲಿ ಸ್ವಯಂ-ನೇಮಿತರದೇ ಅಥವಾ ಪುಟ್ಟ ಉದ್ಯಮಗಳದೇ ಮೇಲುಗೈ ಆಗಿದ್ದಿತು. ಈ ಉದ್ಯಮಗಳು ಬೃಹತ್ ಕಾರ್ಯಾಚರಣೆಗಳ ಹಾಗೂ ಸಮಾಚಾರ ವ್ಯವಸ್ಥೆಗಳ ಅಧಿಕಾನುಕೂಲಗಳನ್ನು ಪಡೆಯಲು ಅಂತರ-ಸಂಬಂಧಿತವಾಗಿರಬಹುದಿದ್ದಿತು. ಹೀಗೆ ಪರ್ಯಾಯ ಆರ್ಥಿಕ ವ್ಯವಸ್ಥೆಯ ಅವರ ವಿಚಾರವೂ ಮೌಲ್ಯಾಧಾರಿತವಾಗಿದ್ದಿತು. ಧರ್ಮದ ಬಗೆಗೆ ಅವರ ಮನೋಧರ್ಮದಿಂದ ಹೊರಹೊಮ್ಮಿದ್ದುದಾಗಿದ್ದಿತು.

ಗಾಂಧೀಜಿಯವರ ಧರ್ಮವನ್ನು ಈ ರೀತಿಯಲ್ಲಿ ಅವಲೋಕಿಸಿದಾಗ, ಅದು ದೇವಸ್ಥಾನಗಳ ಕರ್ಮಾಚರಣೆಗಳ ಸದ್ದುಗದ್ದಲಗಳಿಂದ, ಹಿಮಾಲಯದಲ್ಲಿ ಯೋಗಿ ಏಕಾಂತದಲ್ಲಿ ನಡೆಸುವ ಧ್ಯಾನ ಆಚರಣೆಗಳಿಂದ, ಅಗ್ನಿಕುಂಡದಲ್ಲಿ ಹಾಕುವ ಉರಿಯುತ್ತಿರುವ ತುಪ್ಪದ ಘಮಘಮದಿಂದ ಅಥವಾ ಗಂಗಾನದಿಯ ಸ್ನಾನದಘಟ್ಟಗಳ ಗಡಿಬಿಡಿ ನೂಕುನುಗ್ಗಲುಗಳಿಂದ, ತೀರ ದೂರವೇ ಇದ್ದಿತು ಎಂಬುದನ್ನು ಕಾಣಬಹುದು. ಆದರೂ ಅವರು ಆಗಾಗ್ಗೆ ತಾವೊಬ್ಬ ಹಿಂದೂ ಅದರಲ್ಲೂ ಒಬ್ಬ ಸನಾತನಿ ಹಿಂದೂ ಎಂದೇ ಒತ್ತಿ ಹೇಳುತ್ತಿದ್ದರು. ಇದು ಗೊಂದಲಗೊಳಿಸುತ್ತದಲ್ಲವೆ? ಅವರು ಅಹಿಂಸೆಯ ಆಚರಣೆಯನ್ನು ಒತ್ತಿ ಒತ್ತಿ ಹೇಳುತ್ತಿದ್ದುದನ್ನು ಗಮನಿಸಿದಾಗ ಅವರು ಬೌದ್ಧ ಧರ್ಮಕ್ಕೆ, ಜೈನ ಧರ್ಮಕ್ಕೆ, ಕ್ರಿಶ್ಚಿಯನ್ ಧರ್ಮಕ್ಕೂ ಸಹ ಹೆಚ್ಚು ಹತ್ತಿರವಾಗಿದ್ದರೆಂದೇ ಕಂಡುಬರಬಹುದಲ್ಲವೆ? ಆದರೂ ಅವರು ತಾವೊಬ್ಬ ಹಿಂದೂ ಎಂದೇ ಉದ್ಘೋಷಿಸುತ್ತಿದ್ದರು. ಭಗವದ್ಗೀತೆಯು ತಮಗೆ ತಾಯಿ ಸ್ವರೂಪ, ಅದರ ಮೌಲ್ಯಗಳಲ್ಲಿ ತಮ್ಮ ದೃಢ ವಿಶ್ವಾಸವಿದೆ ಎಂದು ಅವರು ಸಮರ್ಥಿಸಿ ನುಡಿಯುತ್ತಿದ್ದರು. ಇದು ಯಾಕೆ ಹೀಗೆ? ಹೆಚ್ಚಿನ ಭಾರತೀಯರು ಹಿಂದೂಗಳಾಗಿದ್ದುದರಿಂದ ತಾವೂ ಹಿಂದೂ ಎಂದು ಹೇಳಿಕೊಳ್ಳುತ್ತಿದ್ದರೆ? ಅಧಿಕ ಹಿಂಬಾಲಕರನ್ನು ಗಳಿಸಲು ಅವರು ಹಿಂದೂ ಧರ್ಮವನ್ನು ಬಳಸಿಕೊಳ್ಳುತ್ತಿದ್ದರೆ? ಹಾಗೆ ಮಾಡಿದ್ದಲ್ಲಿ ಅದು ಆಷಾಢಭೂತಿತನವಾಗುತ್ತಿತ್ತು. ಆಷಾಢಭೂತಿತನವು ಗಾಂಧೀಜಿಯವರ ದೌರ್ಬಲ್ಯಗಳಲ್ಲೊಂದಾಗಿರಲಿಲ್ಲ. ಅವರ ಮನಸ್ಸು ಒಂದು ತೆರೆದ ಪುಸ್ತಕವಾಗಿದ್ದಿತು. ತಾವು ಹಿಂದೂವಾಗಿ ಹುಟ್ಟಿದ್ದುದರಿಂದಷ್ಟೇ ತಾವು ಹಿಂದೂ ಎಂದು ಕರೆದುಕೊಳ್ಳುತ್ತಿದ್ದರೆ? ಖಂಡಿತ ಇಲ್ಲ. ಅವರೊಬ್ಬ ಮಹೋನ್ನತ ಚಿಂತಕರಾಗಿದ್ದರು, ಅತ್ಯಂತ ಕ್ರಿಯಾಶೀಲ ವ್ಯಕ್ತಿಯಾಗಿದ್ದರು. ಅಂಥ ವ್ಯಕ್ತಿ ತಾವೊಬ್ಬ ಹಿಂದೂ ಎಂದು ಹೇಳಿಕೊಳ್ಳಲು ಹುಟ್ಟಷ್ಟೇ ಏಕೈಕ ಅಥವಾ ಮುಖ್ಯ ಕಾರಣವಾಗಿರಲು ಸಾಧ್ಯವೇ ಇಲ್ಲ.

ತಾವು ತಮ್ಮನ್ನು ಒಬ್ಬ ಹಿಂದೂ ಎಂದು, ಒಬ್ಬ ಸನಾತನ ಹಿಂದೂ ಎಂದೂ ಏಕೆ ಪರಿಗಣಿಸಿಕೊಳ್ಳುತ್ತಿದ್ದರು ಅನ್ನುವುದಕ್ಕೆ ಅವರೇ ವಿವರಣೆ ನೀಡಿದ್ದಾರೆ. 'ಸನಾತನ' ಎಂಬ ಪದವು ಅವರಿಗೆ ಸಾಂಪ್ರದಾಯಿಕತೆಯ, ಬದಲಾಗದ ಅಥವಾ ಕಟ್ಟುನಿಟ್ಟಿನ ಅರ್ಥ ನೀಡುತ್ತಿರಲಿಲ್ಲ. ಅವರು ಅವೆಲ್ಲವುಗಳಿಂದ ದೂರವೇ ಉಳಿದಿದ್ದರು. ಅವರಿಗೆ 'ಸನಾತನ' ಎನ್ನುವುದು ಚಿರಂತನ ಸಾರ್ವತ್ರಿಕ ಮೌಲ್ಯಗಳ ಅರ್ಥ ನೀಡುತ್ತಿದ್ದಿತು. ಈ ಮೌಲ್ಯಗಳನ್ನು ಕಾಲಕಾಲಕ್ಕೆ ಭಿನ್ನವಾಗಿ ಅರ್ಥೈಸಲು, ಪುನಃ ಪುನಃ ಭಿನ್ನವಾಗಿ ವ್ಯಾಖ್ಯಾನಿಸಲು ಸಾಧ್ಯವಿದ್ದಿತು. ಅವು ಅನಾದಿಕಾಲದ ಪುರಾತನ ಪವಿತ್ರ ಗ್ರಂಥಗಳಲ್ಲಿ ಪಳೆಯುಳಿಕೆಗಳಾಗಿ ಉಳಿದಂಥವುಗಳಾಗಿರಲಿಲ್ಲ. ಅವರು ಹಿಂದೂ ಧರ್ಮವನ್ನು ಸತತ ಸತ್ಯಾನ್ವೇಷಣೆಯ ಧರ್ಮವೆಂದು ನಿರೂಪಿಸಿದರು. ಇದು ಧರ್ಮಾಂಧತೆಯ ಸಂಪೂರ್ಣ

# ನಮ್ಮ ಪ್ರಕಟಣೆಗಳು



ರೂ. 110



ರೂ. 140



ರೂ. 40



ರೂ. 55



ರೂ. 100



ರೂ. 120



ರೂ. 35




ಸುರಾ ಬುಕ್ಸ್ ಪ್ರೈವೇಟ್ ಲಿಮಿಟೆಡ್
ಸುರಾ ಕಾಲೇಜ್ ಆಫ್ ಕಾಂಪಿಟಿಶನ್
ಚೆನ್ನೈ ❑ ಬೆಂಗಳೂರು ❑ ಕೊಲ್ಕತ್ತಾ ❑ ಎರ್ನಾಕುಲಂ

**SURA BOOKS PVT LTD**
(An ISO 9001. 2000 : Certified Company)
H.O : 1620, 'J' BLOCK, 16TH MAIN ROAD,
ANNANAGAR CHENNAI - 600 041
Phone : 044-26162173, 26161099, 26162173
e-mail : surabooks@eth.net website : www.surabooks.com




ರೂ. 50

ಾಕರಣೆಯಾಗಿದ್ದಿತು, ಮೌಲ್ಯಗಳಲ್ಲಿ ನಂಬಿಕೆ ಹಾಗೂ ವಿಚಾರಪರ ಚಿಂತನೆ ೆರಡನ್ನೂ ಸತ್ಯಾನ್ವೇಷಣೆಯಲ್ಲಿ ಬಳಸಿಕೊಳ್ಳುವುದಕ್ಕೆ ಒಪ್ಪಿಗೆ ಸೂಚಿಸುವುದಾಗಿದ್ದಿತು. ಂದೂ ಧರ್ಮವು ಅವರಿಗೆ ಈ ಅಂತಸ್ಸಾಕ್ಷಿ ಸ್ವಾತಂತ್ರ್ಯವನ್ನೂ ಸತ್ಯಾನ್ವೇಷಣೆ ತಂತ್ರ್ಯವನ್ನೂ ಒದಗಿಸಿದ್ದಿತು. ಎರಡನೆಯದಾಗಿ, ಮೊದಲನೆಯದರ ಅನುಸರಣೆ ಾಗಿಯೇ, ಹಿಂದೂ ಧರ್ಮವು ಅಸದೃಶವಾದ ತಾಳ್ಮೆಯ, ಎಲ್ಲ ವಿಚಾರಗಳಿಗೂ, ಬಿಕೆಗಳಿಗೂ ವೈಜ್ಞಾನಿಕ ಆವಿಷ್ಕರಣೆಗಳಿಗೂ ತೆರೆದುಕೊಂಡ ಧರ್ಮವಾಗಿದ್ದಿತು. ್ಮನ್ನು ಹಿಂದೂ ಎಂದು ಸಮರ್ಥಿಸಿ ನುಡಿಯುವಾಗಲೇ ಅವರಿಗೆ ಹಿಂದೂ ರ್ಮವು ಕೆಲವೊಮ್ಮೆ ಇತರೆಲ್ಲ ಧರ್ಮಗಳ... ಅದು ಇಸ್ಲಾಮ್ ಧರ್ಮ ಆಗಿರಲಿ, ್ಯಯನ್ ಆಗಿರಲಿ, ಭಾರತದಲ್ಲಿ ಜನ್ಮ ತಾಳಿದುದಾಗಿರಲಿ ಹಾಗಲ್ಲದಾದುದಾಗಿರಲಿ, ದಾತ್ತ ಭಾವನೆಗಳನ್ನು ಬಳಸಿಕೊಳ್ಳಲು ಸ್ವಾತಂತ್ರ್ಯ ನೀಡಿದ್ದಿತು. ಈ ಮನೋ ಾಲ್ಯವೇ ಹಿಂದೂ ಧರ್ಮದಲ್ಲಿ ಹೆಚ್ಚು ಒತ್ತಿ ಹೇಳಲ್ಪಟ್ಟಿರುವುದನ್ನು ಅವರು ಕಂಡು ಂಡರು. ಇದೇ ಅವರಿಗೆ ಹಿಂದೂ ಧರ್ಮವನ್ನು ಅಂಗೀಕಾರಾರ್ಹವನ್ನಾಗಿ ಡಿದ್ದುದು. ಗಾಂಧೀಜಿಯವರ ಹಿಂದೂ ಧರ್ಮವು ಪ್ರತ್ಯೇಕತಾವಾದಿ ಧರ್ಮ ಗಿರಲಿಲ್ಲ. ಅದು ಸಾರ್ವಲೌಕಿಕ, ಅನೇಕತ್ವವಾದಿ, ಸಾರ್ವತ್ರಿಕ, ಮುಕ್ತ ಮನಸ್ಕ ಸ್ತ್ರಾಂಧರಿಕ್ತ ಹಾಗೂ ಮಾನವೀಯ ಭರಿತ ಧರ್ಮವಾಗಿದ್ದಿತು. ಹಿಂದೂ ಧರ್ಮವು ಂದೂ ಇತರ ಧರ್ಮಗಳನ್ನು ಹುಸಿಯಾದವುಗಳೆಂದು ಜರಿದಿಲ್ಲ, ಅದು ಎಲ್ಲ ರ್ಮಗಳನ್ನೂ ಸಮಾನವಾಗಿ ಗೌರವಿಸುತ್ತದೆ ಎಂದು ಗಾಂಧೀಜಿ ಮತ್ತೆ ಮತ್ತೆ ಪಿಗೆ ತರುತ್ತಿದ್ದರು. ಸರ್ವಸಾಮಾನ್ಯ ಸತ್ಯಾನ್ವೇಷಣೆಯಲ್ಲಿ ಹಿಂದೂ ಧರ್ಮವು ರ ಎಲ್ಲ ಧರ್ಮಾನುಯಾಯಿಗಳನ್ನೂ ಸೋದರರರೆಂದು ಪರಿಭಾವಿಸಿದೆ. ವರನ್ನೆಂದೂ ದ್ವೇಷಿಸಿಲ್ಲ ಎಂದವರು ಒತ್ತಿ ಹೇಳುತ್ತಿದ್ದರು. ನಿಜ, ಗಾಂಧೀಜಿಯವರ ಂದೂ ಧರ್ಮವು ಸಾಮಾನ್ಯ ಜನರು ವಾಸ್ತವವಾಗಿ ಆಚರಿಸುತ್ತಿರುವ ಹಿಂದೂ ರ್ಮವಾಗಿರಲಿಲ್ಲ. ಆದ್ದರಿಂದ ಅವರು ತಮ್ಮ ಇಡೀ ಜೀವಮಾನ ಹಿಂದೂ ಧರ್ಮವು ಗ್ರಹಿಸಿಕೊಂಡಿದ್ದ ಕೊಳಕು ಕಶ್ಮಲಗಳನ್ನು ಅಸ್ಪೃಶ್ಯತೆ, ಜಾತಿ ಶ್ರೇಣಿ ವ್ಯವಸ್ಥೆ, ೂಢನಂಬಿಕೆ, ಧರ್ಮಾಂಧತೆ ಅಥವಾ ಕೋಮುವಾರು ಭಾವನೆ ಇತ್ಯಾದಿ ಆ ರ್ಮದ ಮೂಲ ಸ್ವಭಾವ ವ್ಯತಿರಿಕ್ತವಾದಂಥ, ಅದರ ಭಾಗವಾಗಿರದಿದ್ದಂಥ ಳಕು ಕಶ್ಮಲಗಳನ್ನೂ... ಹೋಗಲಾಡಿಸಿ ಆ ಧರ್ಮವನ್ನು ಸ್ವಚ್ಛಗೊಳಿಸಲು ರಸಾಹಸಪಟ್ಟರು. ಪ್ರತಿಯೊಂದು ಧರ್ಮವೂ ತನ್ನದೇ ಇತಿಮಿತಿಗಳನ್ನು ೆದಿದ್ದಿತೆಂಬುದನ್ನು ಗಾಂಧೀಜಿ ಕಾಣಬಲ್ಲವರಿದ್ದರು. ಆದರೂ ಎಲ್ಲ ಧರ್ಮ ಲ್ಲೂ ಕಾಣಬರುವಂಥ ನ್ಯೂನತೆಗಳಿಂದ ಮುಕ್ತವಾದ ತಮ್ಮದೇ ಧರ್ಮವೊಂದನ್ನು ಸ್ಥಾಪಿಸುವ ಅಥವಾ ಪ್ರಾರಂಭಿಸುವ ಉದ್ದೇಶ ಅವರಿಗೆಂದೂ ಇರಲಿಲ್ಲ. ಅಂಥ ತ್ನವು ಮತ್ತೊಂದು ಧರ್ಮದ – ತನ್ನದೇ ಇತಿಮಿತಿಗಳುಳ್ಳ, ಕಾಲಕ್ರಮೇಣ ಹೆಚ್ಚುತ್ತ ೋಗುವ ಇತಿಮಿತಿಗಳುಳ್ಳ ಮತ್ತೊಂದು ಧರ್ಮದ – ಸ್ಥಾಪನೆಗೆ ದಾರಿ ಮಾಡಿ ಡುತ್ತಿದ್ದಿತಷ್ಟೆ ಎಂಬುದನ್ನು ಅವರು ಕಾಣಬಲ್ಲವರಿದ್ದರು. ಎಲ್ಲ ಧರ್ಮಗಳನ್ನೂ ಂದುಗೂಡಿಸಿ ಒಂದು ಕೃತಕ ಧರ್ಮ ಸ್ಥಾಪಿಸುವುದೂ ಅವರ ಗುರಿಯಾಗಿರಲಿಲ್ಲ. ಂದು ಧರ್ಮವು ತಾನು ಇತರೆಲ್ಲ ಧರ್ಮಗಳಿಗಿಂತ ಉಚ್ಚತರ ಎಂದು ತಿಪಾದಿಸುತ್ತ ಅವೆಲ್ಲವುಗಳನ್ನೂ ಮೂಲೋತ್ಪಾಟನೆ ಮಾಡುವ ಹಕ್ಕು ಗಿದೆಯೆಂದು ಹೇಳುತ್ತ, ಗುತ್ತಿಗೆ ಸ್ಥಾಪಿಸಿಕೊಳ್ಳುವುದನ್ನೂ ಅವರು ತಿರಸ್ಕರಿಸಿದ್ದರು. ್ದರಿಂದಲೇ ಅವರು ಮತಾಂತರದ ವಿಚಾರವನ್ನು ಪಟ್ಟುಹಿಡಿದು ವಿರೋಧಿಸಿದರು. ಂದು ಧರ್ಮದವರನ್ನು ಮತ್ತೊಂದು ಧರ್ಮಕ್ಕೆ ಪರಿವರ್ತಿಸುವುದನ್ನು ಅವರು ಷ್ಟು ಮಾತ್ರವೂ ಅಂಗೀಕಾರಾರ್ಹವೆಂದು ಪರಿಗಣಿಸಿರಲಿಲ್ಲ.

ಹುಟ್ಟಿನಿಂದ ಬಂದ ಧರ್ಮ ಯಾವುದೇ ಆಗಿದ್ದರೂ ಅವನು/ಅವಳು ಇತರ ರ್ಮೀಯರೊಂದಿಗೆ ಸಾಮರಸ್ಯದಿಂದ ಬಾಳಬೇಕಷ್ಟೆ ಅಲ್ಲ, ಅವರಿಂದ ಕಲಿಯ ೇಕು ಕೂಡ ಎಂಬ ತಿಳಿವಳಿಕೆ ಪಡೆದಿರುವಾಗಲೇ ತನ್ನ ಧರ್ಮಕ್ಕೆ ನಿಷ್ಠೆಯಿಂದಿರ ೇಕು ಎಂಬುದು ಗಾಂಧೀಜಿಯವರ ಭಾವನೆಯಾಗಿದ್ದಿತು. ಪರಸ್ಪರ ಸಹನೆಗಾಗಿ ಅಷ್ಟೇ ಲ್ಲ, ಪರಸ್ಪರ ಅರಿವು, ಪ್ರೀತಿ ಹಾಗೂ ಗೌರವಗಳಿಗಾಗಿಯೂ ಅವರು ಹಾತೊರೆದರು. ಂದು ಧರ್ಮವನ್ನು ಇನ್ನೊಂದರ ವಿರುದ್ಧ ಎತ್ತಿಕಟ್ಟುವುದು, ಒಂದು ಧರ್ಮ ವರನ್ನು ಮತ್ತೊಂದು ಧರ್ಮಕ್ಕೆ ಸ್ಪರ್ಧಾತ್ಮಕವಾಗಿ ಪರಿವರ್ತಿಸುವುದು, ತಮ್ಮ ಧರ್ಮವೇ ಚ್ಚತರ ಎಂದು ಹಕ್ಕು ಸಾಧಿಸುವುದು – ಇವೆಲ್ಲ ಪರಸ್ಪರ ಸಾಮರಸ್ಯ ಹಾಗೂ ಿವನ್ನು ಹಾಳುಗೆಡವುತ್ತಿದ್ದವು. ಮಾನವ ಜೀವಿಗಳು ಧರ್ಮಗಳ ವಿಭಜನಾತ್ಮಕ ್ಷಣಗಳನ್ನು ಪಕ್ಕಕ್ಕೆ ಸರಿಸಿ, ವಿವಿಧ ಧರ್ಮಗಳ ನಡುವೆ ಭಿನ್ನಾಭಿಪ್ರಾಯಗಳಿಲ್ಲದಂಥ ಮೂಲಭೂತ ಮಾನವ ಮೌಲ್ಯಗಳನ್ನು ಅನುಸರಿಸಬೇಕು ಎಂದು ಅವರು ಭಾವಿಸಿದ್ದರು.

ಧರ್ಮಗಳಲ್ಲಿ ಕಂಡುಬರುವ ವಿಭಜಕ ಲಕ್ಷಣವು ಅವುಗಳ ಸಾರಭೂತ ಲಕ್ಷಣ ವೇನಲ್ಲ. ಆದರೆ ಸಂಕುಚಿತ ಮನಸ್ಕರು ಅವುಗಳೊಳಕ್ಕೆ ಹೊರಗಿನಿಂದ ಹೊರಿಸಿದ ಲಕ್ಷಣ ಎಂದವರು ಭಾವಿಸಿದ್ದರು. ಧರ್ಮಗಳ ಸಾರಭೂತ ಸ್ವಭಾವವೆಂದರೆ ಒಳಿತನ್ನು ಮಾಡಲು, ಸಾಂತ್ವನ ಹಾಗೂ ಶಾಂತಿ ನೀಡಲು, ನಮ್ಮ ಬಾಳಿಗೆ ಶಕ್ತಿ ಒದಗಿಸುವುದೇ ಹೊರತು ಎಂದೂ ಮಾನವ ಕುಲದ ವಿಭಜನೆಗೂ ಹಿಂಸೆ ಕದನಗಳಿಗೂ ನೆಪ ಒದಗಿಸುವುದಿಲ್ಲ.

ಗಾಂಧೀಜಿಯವರು ರಾಜಕಾರಣವನ್ನು ಧರ್ಮದಿಂದ ಪ್ರತ್ಯೇಕಿಸುವುದನ್ನು ನಿರಾಕರಿಸಿದರು. ಧರ್ಮಕ್ಕೆ ಸಂಬಂಧಿಸಿ ಇಲ್ಲಿ ನಿರೂಪಿತವಾಗಿರುವ ಅವರ ಸಾರ್ವತ್ರಿಕ, ನೈತಿಕ ಹಾಗೂ ಮಾನವೀಯ ಮನೋಧರ್ಮದ ಹಿನ್ನೆಲೆಯಲ್ಲಷ್ಟೇ ನಾವಿದನ್ನು ನೋಡಿ ತಿಳಿದುಕೊಳ್ಳಬೇಕು; ಯಾವುದೇ ನಿರ್ದಿಷ್ಟ ಅಥವಾ ಬಿಡಿ ಧರ್ಮದ ಮಾಮೂಲೀ ಅರ್ಥದಲ್ಲಲ್ಲ. ಧರ್ಮವನ್ನು ನಿರ್ದಿಷ್ಟ ಧರ್ಮಗಳ ಸಂಕುಚಿತ ಅರ್ಥದಲ್ಲಿ ನೋಡಿದಾಗ, ಪ್ರಜಾಸತ್ತಾತ್ಮಕ ಹಾಗೂ ಜಾತ್ಯತೀತ ದೇಶಗಳಲ್ಲಿ ರಾಜ್ಯವನ್ನು ಧರ್ಮದಿಂದ ಪ್ರತ್ಯೇಕಿಸುವುದಕ್ಕೆ ಅವರ ವಿರೋಧವಿರಲಿಲ್ಲ. ಆದರೆ ರಾಜ್ಯವು ಒಂದು ನಿರ್ದಿಷ್ಟ ಧರ್ಮದ ಪರವಾಗಿದ್ದುಕೊಂಡು ಇತರ ಧರ್ಮಗಳ ವಿರುದ್ಧ ಭೇದಭಾವ ತೋರುವುದನ್ನು ಅವರು ಖಂಡಿತ ಇಷ್ಟಪಡಲಿಲ್ಲ. ಭಾರತವನ್ನು ಒಂದು ಹಿಂದೂ ರಾಜ್ಯವನ್ನಾಗಿ ಮಾಡುವ ಯಾವುದೇ ವಿಚಾರವನ್ನೂ ಅವರು ವಿರೋಧಿಸಿದರು. ಆದ್ದರಿಂದಲೇ ಅವರು ಬದ್ಧ ಜಾತ್ಯತೀತರಾದ ಜವಹರಲಾಲ್ ನೆಹರೂರವರನ್ನು ಭಾರತದ ಭಾವೀ ಪ್ರಧಾನ ಮಂತ್ರಿಯ ಸ್ಥಾನಕ್ಕೆ ಅಭ್ಯರ್ಥಿಯನ್ನಾಗಿ ಬುದ್ಧಿಪೂರ್ವಕವಾಗಿ ಸಿದ್ಧಗೊಳಿಸಿದರು. ಆದರೂ ಅವರು ರಾಜ್ಯದ ಹಾಗೂ ರಾಜಕಾರಣದ ನೈತಿಕ ಮಟ್ಟವನ್ನು ಮೇಲೇರಿಸಬಯಸಿದ್ದರು. ಇದಕ್ಕೆ ಅವರು ವಿಭಿನ್ನ ಧರ್ಮಗಳ ಸಂಪತ್ತಿನಿಂದ ಪಡೆದ ಮಾನವ ಕುಲದ ಸರ್ವಸಾಮಾನ್ಯ ನೈತಿಕ ಸಂಪತ್ತಿನ ನೆರವು ಪಡೆಯಲು ಹವಣಿಸಿದರು.

ತಮ್ಮ ಬಾಳಿನ ಕೊನೆಯ ಆರು ತಿಂಗಳುಗಳು ಗಾಂಧೀಜಿಯವರಿಗೆ ತೀವ್ರ ಸಂಕಷ್ಟದ ಹಾಗೂ ಆಶಾಭಂಗಗಳಿಂದ ಕೂಡಿದ ಕಾಲವಾಗಿದ್ದಿತು. ಅವರು ತಮ್ಮ ಬಾಳಿನಾದ್ಯಂತ ಏನನ್ನು ಬೋಧಿಸಿದರೋ ಅದನ್ನೆಲ್ಲ ಧರ್ಮದ ಹೆಸರಿನಲ್ಲಿ ದುರಭಿಮಾನಿ ಜನಸಮೂಹಗಳು, ದೇಶದ ವಿಭಜನೆಯ ಕಾಲದಲ್ಲೂ ಅನಂತರವೂ, ಹೇಡಿತನದಿಂದ ಹಾಗೂ ಅಮಾನವೀಯವಾಗಿ ಭಂಗಗೊಳಿಸಿದರು. ಈ ಕಾಲದಲ್ಲಿ ಒಮ್ಮೆ ಗಾಂಧೀಜಿಯವರನ್ನು ಸಂಧಿಸಿದ ಸುಪ್ರಸಿದ್ಧ ಬಂಗಾಳಿ ಹಾಡುಗಾರ ದಿಲೀಪ್ ಕುಮಾರ್ ರಾಯ್‌ರವರು ಗಾಂಧೀಜಿಯವರಿಗೆ ಪ್ರಿಯವಾದ ಹಾಡುಗಳನ್ನು ತಾವು ಹಾಡುವುದಾಗಿ ತಿಳಿಸಿದರಂತೆ. ಗಾಂಧೀಜಿಯವರು ತಮ್ಮ ಆಶಯಗಳನ್ನೂ ಆದ್ಯತೆಗಳನ್ನೂ ಗೌರವಿಸಿದುದಕ್ಕಾಗಿ ರಾಯ್ ಅವರಿಗೆ ತಮ್ಮ ಕೃತಜ್ಞತೆ ವ್ಯಕ್ತಪಡಿಸಿದರಂತೆ. ಅನಂತರ ರಾಯ್‌ರವರು ಅನುದ್ದಿಷ್ಟವಾಗಿ ಗಾಂಧೀಜಿಯವರನ್ನು ಕೇಳಿದರಂತೆ : ''ಈ ಇಡೀ ದೇಶದಲ್ಲಿ ನಿಮ್ಮನ್ನು ಗೌರವಿಸದವರು ನಿಮಗೆ ವಿಧೇಯರಾಗಿರದವರು ಯಾರಾದರೂ ಇದ್ದಾರೆಯೇ ?'' ಗಾಂಧೀಜಿ ಉತ್ತರಿಸಿದರಂತೆ : ''ನಿಮ್ಮ ಮಾತು ನನಗೆ ತುಂಬ ಅಣಕವಾಗಿ ಕಾಣುತ್ತದೆ, ಪ್ರಿಯ ರಾಯ್ ಅವರೇ ! ನೀವು ಹೇಳುವ ಮಾತು ನಿಜವಾಗಿದ್ದಲ್ಲಿ, ಈ ಎಲ್ಲ ಕೋಮುದಂಗೆಗಳೂ ಗಲಭೆಗಳೂ ನಡೆಯುತ್ತಿರಲೇ ಇರಲಿಲ್ಲ.''

ಈ ಅಣಕು ನಮ್ಮನ್ನು ಇನ್ನೂ ಕಾಡುತ್ತಲೇ ಬಂದಿದೆ. ನಾವು ಗಾಂಧೀಜಿಯವರನ್ನು ಎಲ್ಲ ವಿಧ್ಯುಕ್ತ ರೀತಿಗಳಲ್ಲಿ ಗೌರವಿಸುತ್ತಿದ್ದೇವೆ. ಆದರೆ ಅವರ ಧರ್ಮ, ಅವರ ಬೋಧನೆಗಳನ್ನೆಲ್ಲ ಗಾಳಿಗೆ ತೂರುತ್ತಿದ್ದೇವೆ, ಬಚ್ಚಲಲ್ಲಿ ಮುಳುಗಿಸುತ್ತಿದ್ದೇವೆ.

* * *

(ಮೇಲಿನದು ಭಾರತೀಯ ವಿದ್ಯಾಭವನದ ಗಾಂಧಿ ಕೇಂದ್ರದಲ್ಲಿ ನೀಡಿದ ಉಪನ್ಯಾಸ. ಶ್ರೋತೃಗಳ ಪ್ರತಿಕ್ರಿಯೆಗಳನ್ನೂ ಒಡಮೂಡಿಸಿ ಪುನರ್ರೂಪಿಸಿದುದು. ಹೆಚ್ಚಿನ ವಿವರಗಳಿಗೆ ಲೇಖಕರ 'Hinduism : A Gandhian Perspective' ಪುಸ್ತಕವನ್ನು ನೋಡಬಹುದು.)

ಮೂಲ : **ಡಾ|| ಎಂ. ವಿ. ನಾಡಕರ್ಣಿ**
೧೩, 'ಸಮಾಗಮ', ೨ನೇ ಅಡ್ಡರಸ್ತೆ, ನಾಗರಬಾವಿ, ಬೆಂಗಳೂರು - ೫೬೦ ೦೭೨

ಕನ್ನಡಕ್ಕೆ : **ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಅಡ್ಡರಸ್ತೆ, ೩. ಟಿ. ಬೆಡ್ ಬನಶಂಕರಿ ೨ನೇ ಹಂತ, ೩ನೇ ಬ್ಲಾಕ್,
ತ್ಯಾಗರಾಜನಗರ, ಬೆಂಗಳೂರು - ೫೬೦ [illegible]



ಭುವನೇಶ್ವರಿ ಹೆಗಡೆ

# ಒಂದ್ಕೆಲಸ ಮಾಡಿ

ಮನುಷ್ಯ ಮಾತ್ರರ ಬೆನ್ನು ಹತ್ತಿ ಹೋಗಿ ಅವರ ಸ್ನೇಹ ಗಳಿಸೋದು ಮುಂದೊಂದು ದಿನ ಆ ವ್ಯಕ್ತಿಯ ಸ್ವಭಾವದ ಹಿಂದೆ ಮುಂದೆ ಇರುವ ಎಲ್ಲ ವಿಶೇಷಣಗಳ ಪರಿಚಯವಾಗಿ ಭ್ರಮನಿರಸನಗೊಂಡು ಹಳ ಹಳಿಸೋದು... ಇಂಥ ಅನುಭವ ತುಂಬ ಸಲ ರಿಪೀಟ್ ಆದಾಗ ನಾನೊಂದು ನಿರ್ಧಾರಕ್ಕೆ ಬಂದೆ. ಇನ್ನು ಮೇಲೆ ಈ ಹುಲು ಮನುಜರ ಸಹವಾಸ ಮಾಡಿ ಚಿತ್ತಕ್ಷೋಭೆ ತಂದುಕೊಳ್ಳೊ ಬದಲು ನಮ್ಮ ಭಾಷೆಯ ಕೆಲವು ಸ್ವಾರಸ್ಯಕರ ಪದ, ಪದಪುಂಜಗಳ ಸ್ನೇಹ ಮಾಡಿಕೊಂಡು ಅವು ತಮ್ಮ ಹಿಂದೆ ಮುಂದೆ ಸೂಸುವ ಅರ್ಥ ಕಾಂತಿಯನ್ನು ಅನುಭವಿಸಿ ಮನೋಲ್ಲಾಸ ಪಡೆಯಬೇಕೆಂಬ ಹೊಸ ಹುಚ್ಚಿಗೆ ನನ್ನನ್ನು ಒಡ್ಡಿಕೊಂಡೆ ಎಂಬುದೇ ನನ್ನ ನಿರ್ಧಾರದ ಸಾರಾಂಶ.

ಪರಿಣಾಮವಾಗಿ ನನ್ನ ಕೆಲ ಪರಮಾಪ್ತ ಪದಗಳನ್ನು ಆತ್ಮೀಯ ಸ್ನೇಹಿತರ ಹಾಗೆ ಜತನದಿಂದ ಕಾಪಾಡಿಕೊಂಡು ಬಂದಿದ್ದೇನೆ. ಧಾರವಾಡ ಪ್ರಾಂತ್ಯದಲ್ಲಿ ನಾನು ವಿದ್ಯಾಭ್ಯಾಸ ನಡೆಸಿದ್ದಾಗ ವಿದ್ಯಾಗಿರಿಯಲ್ಲಿ 'ರೂಮ್ಮನೆ' ಮಾಡಿ ನೆಲೆಸಿದ್ದೆವು. ಆಗ ಸುತ್ತಮುತ್ತ 'ಹಚ್ಚು' ಎಂಬ ಒಂದೇ ಶಬ್ದ ಬಳಕೆಯಾಗುವ ರೀತಿ ನನ್ನನ್ನು ಯೋಚನೆಗೆ 'ಹಚ್ಚಿ'ತ್ತು. ನಾನು ಪೇಯಿಂಗ್ ಗೆಸ್ಟ್ ಆಗಿದ್ದ ಮನೆಯೊಡತಿ ಗೋದೂಬಾಯಿ ದಿನಾ ಅವಲಕ್ಕಿ ಖಾರಾ ಹಚ್ಚುತ್ತಿದ್ದರು. ನೀರಿಲ್ಲದ ಆ ಬಡಾವಣೆಯ ಜನ ಹು.ಧಾ.ಮ.ನ.ಸ. (ಹುಬ್ಬಳ್ಳಿ-ಧಾರವಾಡ ಮಹಾನಗರ ಸಭೆ) ಎಂಬ ನೀರಿನ ಗಾಡಿ ಬಂದಾಗ ಬಕೀಟು ಕೊಡ ಹಿಡಿದು 'ಪಾಳಿ ಹಚ್ಚುತ್ತಿದ್ದರು.' ಉಳಿದಂತೆ ಗೋಡೆಗೆ ಪೇಂಟ್ ಹಚ್ಚೋದು, ಬಟ್ಟೆಗೆ ಸೋಪು ಹಚ್ಚೋದು (ರೇಡಿಯೊ ಹಚ್ಚಿಟ್ಟುಕೊಂಡು ಅಭ್ಯಾಸಕ್ಕೆ ಕೂಡೋದು), ಸಂಜೀ ಮುಂದಾ ಹೊಸ್ತಿಲಿಗೆ ದೀಪ ಹಚ್ಚೂದು, ಹಣೀ ಮ್ಯಾಗ ಕುಂಕುಮ ಹಚ್ಚೂದು ಕೊನೆಗೆ ಅರಿಶಿಣ ಹಚ್ಚೂದು, ಎಣ್ಣೆ ಹಚ್ಚಿ ಸ್ನಾನ ಮಾಡೂದು... ನಡೆದೇ ಇತ್ತು.

ಸುದ್ದಿಗಳಿಗೆ ಬಣ್ಣ ಹಚ್ಚಿ ಹೇಳೋವ್ರು ಕಡಿಮೆ ಇರಲಿಲ್ಲ. ನಮ್ಮ ಮನೆ ಮಾಲೀಕರು ದೂರದಲ್ಲಿರೊ ಮಗನಿಗೆ ಆಗಾಗ ಫೋನ್ ಹಚ್ಚುತ್ತಿದ್ದರು. ಲೆಕ್ಕದ ಪಟ್ಟಿಯಲ್ಲಿ ಅದನ್ನು ಹಚ್ಚೋತಿದ್ರು. ಅವರ ಪಕ್ಕದ ಮನೆಯ ನಿವೃತ್ತರೆಲ್ಲ ಸೇರಿ ಟೈಂ ಪಾಸ್ ಕಾರ್ಡ್ ಆಡಲಿಕ್ಕೆ ಕೂತು ಮನೆಯೊಡತಿಗೆ, ಅಕ್ಕಾರ ಸ್ವಲ್ಪ ಮಂಡಕ್ಕೀ ಖಾರ ಹಚ್ತೀರೇನ್ರೀ ? ಚಹಾ ಕುಡ್ಯೊ ಹಂಗಾಗೇವ ಎಂದು ಚಹಾಕ್ಕೆ ವರಾತ ಹಚ್ತಿದ್ರು (ಹೀಗೆ ನಾನು ಒಂದೇ ಸಮನೆ ಹೇಳುತ್ತ ಹೋದುದನ್ನು ಗೋದೂಬಾಯಿಯವರು ನೋಡಿದರೆ ಏನ್ ವಟವಟಾ ಹಚ್ಯಾಳವ್ವಾ ಎಂದುಬಿಡುತ್ತಾರೆ !) ಹೀಗೇ ಏನು ಬಣ್ಣ ಹಚ್ಚದಿದ್ದರೂ ಧಾರವಾಡ ಹುಬ್ಬಳ್ಳಿ ಪ್ರಾಂತ್ಯಗಳಲ್ಲಿ ಈ ರಂಗುರಂಗಾಗಿ ರಾರಾಜಿಸುತ್ತಿದೆ. ಒಂದು ಶಬ್ದ ಕ ಎಂದರೂ ಹತ್ತು ಹದಿನೈದು ರೀತಿಯಲ್ಲಿ ಯಾಗುತ್ತಿದೆ ಎಂದ ಬಳಿಕ ಕನ್ನಡದ ಪದ ಸಂಪತ್ತೇನು ಕಡಿಮೆಯೇ ?

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಉದ್ಯೋಗಾರ್ಥ ಬ ನೆಲೆಸಿದ ನನಗೆ ಇಲ್ಲಿಯ 'ಎಂಥದು ಮಾರಾಯ್ರೆ' ಪದಪುಂಜ ಮೋಡಿಹಾಕಿತು. ಹೊಗಳಲು, ತೆಗ ಟೀಕಿಸಲು ವೈಭವೀಕರಿಸಲು ಎಲ್ಲಿ ಬೇಕೆಂದಲ್ಲಿ ಯಾಗುವ ಈ ಪದ ಸಿನಿಮಾದವರ ಕೈಲಿ, ಟಿ.ವಿ.ಯ ಕೈಲಿ ಸಿಕ್ಕು ಉದ್ಧಾರವಾಗುವ ರೀತಿ ನೋಡಿ ಇಲ್ಲಿನ ಸ್ನೇಹಿತರು ಕನಲಿದ್ದುಂಟು. "ಎಂಥದು ಮಾರಾ ಈ ಟಿ.ವಿ. ಜನಕ್ಕೆ ಮಂಡೆ ಸಮಾ ಇಲ್ಲವಾ ಹೇ ಮಂಗಳೂರು ಕನ್ನಡ ಅಂದ ಕೂಡಲೇ ಮ ಮಾಡುದಾ ? ಎನ್ನುವುದು ಕಿವಿ ಮೇಲೆ ಬಿತ್ತು. ಎಂಥದು ಮಾರಾಯ್ರೆ ಎಂಬ ಉದ್ಗಾರದ ಕು ಒಂದು ಸಂಶೋಧನಾ ಪ್ರಬಂಧಕ್ಕಾಗುವಷ್ಟು ಸಾ ವಿವರ ನನ್ನ ಬಳಿ ಇದೆ.

ತೀರಾ ಇತ್ತೀಚೆಗೆ ನನಗೆ ಸಾಕೋ ಸಾಕು ಮಾ ಬೆಂಗಳೂರು ಕಡೆಯವರ 'ಒಂದ್ಕೆಲಸ ಮಾಡಿ' ಆಜ್ಞೆಯೋ, ವಿನಂತಿಯೋ, ಸಲಹೆಯ ಆಗಬಹುದಾದ ಪದಪುಂಜ. ಈಗೊಂದು ತಿ ಹಿಂದೆ ನನ್ನ ಹತ್ತಿರ ಯಾರ್ಯಾದರೂ ಬಂದು 'ಒಂದ್ ಮಾಡಿ' ಎಂದು ಹೇಳಿದರೆ ನಾನು ವಿಚಲಿತ ತ್ತಿರಲಿಲ್ಲ. ಅದೆಂಥಾ ಕೆಲಸವೆಂದು ತಿಳಿದುಕೊ ಆದರೆ ಮಾಡುವದು ಇಲ್ಲವಾದರೆ ಬಿಡುವದು ಸರಳ ಸಮಾಧಾನ ತಾಳುತ್ತಿದ್ದೆ. ಆದರೆ ಈಗ ದಿನಗಳ ಹಿಂದೆ ಒಂದು ಯುವ ಕಪಿಸೈನ್ಯದೊ ಕರ್ನಾಟಕದ ರಾಜಧಾನಿಯನ್ನು ಸಂದರ್ಶಿಸಿ ಬ ಬಳಿಕ ಯಾರಾದ್ರೂ 'ಒಂದ್ಕೆಲಸ ಮಾಡಿ' ಎ ಉಲಿದರೆ ಅಲ್ಲಿಂದ ಮಾರು ದೂರ ಜಿ ಬಿಡುತ್ತೇನೆ. ಅಷ್ಟಾಗಿದೆ ಒಂದ್ಕೆಲಸದ ಅನುಭವ.

ದೇಶವ್ಯಾಪಿ 'ಯುವಶಕ್ತಿ ಕ್ರೋಡೀಕರ ಮಹೋನ್ನತ ಉದ್ದೇಶದಿಂದ ಆಯೋಜಿಸಲಾ 'ಶೈಕ್ಷಣಿಕ ಪೂರಕ ಸಾಂಸ್ಕೃತಿಕ' ಮೇಳವೊಂದರಲ್ಲಿ ಪ್ರದರ್ಶನಕ್ಕೆ ಸಜ್ಜಾದ ಒಂದು ಯುವಕ ಯುವತಿ ತಂಡವನ್ನು ರಾಜಧಾನಿಗೆ ಕರೆದುಕೊಂಡು ಹೋ ಬರುವ ಕೆಲಸ ನನಗೆ ಬಂದಿತ್ತು. 'ಉತ್ಸಾಹಪೀಡಿತ' ನಮ್ಮ ಬಟಾಲಿಯನ್‌ನಲ್ಲಿ ಹುಡುಗರು, ಹುಡುಗಿಯ ಸಮಸಂಖ್ಯೆಯಲ್ಲಿದ್ದು ನನ್ನ 'ಸಾಂಸ್ಕೃತಿಕ ಜವಾಬ ಹೆಚ್ಚಾಗಿತ್ತು.

ಪ್ರಯಾಣದ ವ್ಯವಸ್ಥೆಯನ್ನು ನಾ ಮುಂದು ಮುಂದು ಎಂದು ಮಾಡ ಹೊರಟ ಹತ್ತಾರು ಉತ್ ಪೀಡಿತರು ಹತ್ತಾರು ಬಗೆಯ ಗೊಂದಲ ಸೃಷ್ಟಿಸಿದ್ದರಿ ಸೂರ್ಯ ಮತ್ತು ಪ್ರಕಾಶ ಎಂಬಿಬ್ಬರು ವಿದ್ಯಾರ್ಥಿ ಮಾತ್ರ ಇಡೀ ಟ್ರಿಪ್ಪಿನ ಜವಾಬ್ದಾರಿ ವಹಿಸುತ್ತಾರೆಂ

ಡುಗಿಯರು ಅನಗತ್ಯ ಸಲಹೆ ಕೊಡಕೂಡದೆಂದೂ ಕೇತು ಮಾಡಿದೆ.

ನಮಗೆ ಉಳಿಯಲು ಏರ್ಪಾಡಾದ ಸ್ಥಳವನ್ನು ನಕ್ಕೊಂದು ಸಾರಿ ಬದಲಾಯಿಸಿದ ಫೋನು ಂಗಳೂರಿನಿಂದ ಬಂದು ಸೂರ್ಯ ಪ್ರಕಾಶರಿಗೆ ಮಂಡೆ ಸಿ ಮಾಡಿತ್ತು. ತರಬೇಕಾದ ಲಗೇಜಿನ ವಿವರ ಅತಿ ವರಣೆ ಇತ್ತು. ಯಕ್ಷಗಾನ ಭೂತದ ಕೋಲಗಳ ದರ್ಶನಕ್ಕೆ ಬೇಕಾದ ವೇಷಭೂಷಣ, ತೆಂಗಿನ ಗರಿ ಳೆ ಕೋಲು ಮೊದಲಾದ 'ರಂಗ ಸರಕು'ಗಳು ಕಷ್ಟಿದ್ದು 'ಲಗೇಜು ಸಮಸ್ಯೆ' ಎಂಬುದು ಸಮಸ್ಯೆಯೇ ಂಟಾಗುವಷ್ಟಿತ್ತು. ಸ್ವಲ್ಪ ಆಚೀಚೆ ಆದರೂ ಪಾಠಿಗಳ ಗೇಲಿ, ಹುಡುಗಿಯರ ಮೂದಲಿಕೆ, ್ರರಂಭವಾಗುತ್ತಿದ್ದುದು ಏಕಮೇವ ಅಧ್ಯಾಪಿಕೆಯಾದ ನು ಅಗತ್ಯಕ್ಕಾಗುವ ಸ್ಟ್ರಿಕ್ಟ್ ಮನೋಭಾವ ಮುಖಭಾವ ಳಬೇಕಾಯ್ತು. ಹೊರಡುವ ದಿನ ಕೊನೆಯದಾಗಿ ಂಗಳೂರಿನಿಂದ ಬಂದ ಫೋನು ನಮಗೆ ಉಳಿಯಲು ್ಯೂ ಮಾಡರ್ನ್ ಹೋಟೆಲ್' ಎಂಬಲ್ಲಿ ವ್ಯವಸ್ಥೆ ಾಗಿದೆ ಎಂದು ತಿಳಿಸಿತು.

ಅಂತೂ ಹೊರಡುವ ರಾತ್ರಿ ಎಂಟಕ್ಕೆಲ್ಲ ಖಾಸಗಿ ಸ್ಸಿನ ಆಫೀಸೊಂದರಲ್ಲಿ ಎಲ್ಲರೂ ಲಗೇಜು ಸಮೇತ ಾಜರಾದರು. ನಮ್ಮ ಲಗೇಜು ಕಂಡ ಹಿರಿಯರೊಬ್ಬರು ಅಮರನಾಥ ಯಾತ್ರೆಗಾ ?' ಎಂದು ಕೇಳಿ ಹುಡುಗರಲ್ಲಿ ್ರರಂಭಿಕ ಸಂಚಲನ ಉಂಟುಮಾಡಿದರು. ಯಾತ್ರೆಗೆ ಾಕ್ರೀ ಹೋಗೋಣ, ಜಾತ್ರೆಗೆ ಹೊರಟಿದೀವಿ, ುವಜನ ಜಾತ್ರೆಗೆ ಎಂದು ವಿವರಿಸತೊಡಗಿದರು.

ನಮ್ಮ ಟಿಕೇಟುಗಳನ್ನು ಪರಿಶೀಲಿಸಿದಾತನ ಬಳಿ ಮಗೆ ಉಳಿದುಕೊಳ್ಳಲು ನೀಡಲಾದ ನ್ಯೂ ಮಾಡರ್ನ್ ೋಟೆಲ್ ಹತ್ರ ನಿಮ್ಮ ಬಸ್ಸು ಹೋಗುತ್ತಾ? ಎಂದು ಳಿದೆವು. ಪೂರ್ತಿ ಕೇಳಿಸಿಕೊಳ್ಳುವ ಮೊದಲೇ ಹೋ... ೋಗುತ್ತೆ ಎಂದುಬಿಟ್ಟ 'ರೈಟ್ ಪೋಯೀ' ಎಂಬ ಟಿಯಲ್ಲೇ. ಆದರೂ ನಮ್ಮ ಹೊಣೆ ಹೊತ್ತ ಡುಗರು ಯಾವುದಕ್ಕೂ ಇರಲಿ ಎಂದು ಬಸ್ ಜೆಂಟನ, ಡ್ರೈವರನ, ಕ್ಲೀನರ, ಚೆಕ್ಕರನ... ಎಲ್ಲರ ಳಿಯೂ ಕೇಳಿ ಕೇಳಿ ಕನ್‌ಫರ್ಮ್ ಮಾಡಿಕೊಳ್ಳ ೊಡಗಿದಾಗ ಅಯ್ಯ ಇವ್ರನ್ನ ನ್ಯೂ ಮಾಡ್ರನ್ನ್ ಓಟ್ಲ ವ ಬೀಳ್ಸಿ ಹಾಕಣ್ಣ. ತಲೆ ತಿಂತವೆ... ಎಂದಾರೋ ೊಣಗಿದ ಮೇಲೆ ತಣ್ಣಗಾದರು.

ಮಂಗಳೂರು ಬಿಟ್ಟ ಬಸ್ಸು ಘಟ್ಟ ಏರುವ ತನಕವೂ ಳುವಿನಲ್ಲಿ ಮಾತು ನಗು ನಡೆಸಿ ಸುಸ್ತಾದ ವಿದ್ಯಾರ್ಥಿ ಂದ ಆಮೇಲೆ ಸುಸ್ತಾಗಿ ನಿದ್ರಾವಶವಾಯಿತು. ಇಡೀ ಸು ತಣ್ಣಗಾದರೆ ತಾನೇ ಮೇಡಂಗೆ ಸಮಾಧಾನ. ಂಗೂ ಜೊಂಪು ಹತ್ತಿತ್ತು. ಯಾರ್‍ರೀ ಯಶವಂತಪುರ... ಂಬ ಬಸ್ಸಿನಾತನ ಉದಯರಾಗಕ್ಕೆ ಗಡಿಬಿಡಿಸಿ ಎದ್ದು ಸ್ಸಿನ ಹುಡುಗನ ಹತ್ತಿರ ನ್ಯೂ ಮಾಡ್ರನ್... ಎಂದು ಳಿ "...ಓ ಬುಡಿ ಮಾಡ್ರನ್ನೋಟ್ಲ ಬಾಗ್ಲಾಗೇ ಳ್ಸುವಾ..." ಎಂದನ್ನಿಸಿಕೊಂಡ ಕೆಲವೇ ಕ್ಷಣಗಳಲ್ಲಿ ಾರ್‍ರೀ ಮಾಡ್ರನ್ನೋಟ್ಲು... ಎಂಬ ಬೊಬ್ಬೆ ಕೇಳಿಸಿತು.

ನಮ್ಮ ಗುಂಪು ತಂತಮ್ಮ ಸಾಂಸ್ಕೃತಿಕ ಭಾರ ೊಂದಿಗೆ ಕೆಳಗೆ ಧುಮುಕಿತು. ತಲೆ ಎತ್ತಿ ನೋಡಿದರೆ ೊಡ್ಡದಾಗಿ 'ಮಾಡರ್ನ್ ಹೋಟೆಲ್' ಎಂಬ ಬೋರ್ಡು. ಗೇಟಲ್ಲಿ ನಮ್ಮನ್ನು ನಿಲ್ಲಿಸಿ ವಿಚಾರಿಸಿ ಬರಲು ಹೋದ ಸೂರ್ಯ, ಪ್ರಕಾಶ ಇಬ್ಬರ ಮುಖವೂ ಏಕೋ ಗ್ರಹಣ ಹಿಡಿದಂತೆ ಕಂಡುಬಂತು. ಇದು ಬರೀ ಮಾಡರ್ನ್ ಹೋಟೆಲ್ಲು, ನಮಗೆ ವಸತಿ ಏರ್ಪಾಡಾಗಿರದು ನ್ಯೂ ಮಾಡರ್ನ್ ಹೋಟೆಲಲ್ವಾ ? ಎಂದು ಹೇಳಿ ಬೆಳಗಿನ ಚಳಿಗೆ ಬಿಸಿ ಮುಟ್ಟಿಸಿದರು.

ಇನ್ನು ಆ ನ್ಯೂ ಮಾಡರ್ನ್ ಹೋಟೆಲ್ ಎಲ್ಲಿದ್ಯೋ ಈ ಓಲ್ಡ್ ಮಾ. ಹೋ.ನಲ್ಲೇ ಉಳಿದರಾಗದೇ, ಬಸ್ಸಿನವರು ಎಷ್ಟೆಂದರೂ ಬಸ್ಸಿನವರೇ, ಈ ಹೆಸರಿನವು ಎಷ್ಟಿವೆಯೋ, ಏರಿಯಾ ಕೇಳ್ಬಾರ್ದಿತ್ತಾ?... ಹೀಗೆ ಪರಸ್ಪರ ಆರೋಪ ಪ್ರತ್ಯಾರೋಪಗಳು ಅರ್ಧ ಗಂಟೆ ನಡೆದು ಎಲ್ಲರಿಗೂ ಒಂದೊಂದು ಕಪ್ ಕಾಫಿ ತರಿಸಿ ಕೊಟ್ಟು ಬಾಯಿ ಮುಚ್ಚಿಸಬೇಕಾಯಿತು.

ನಮ್ಮ ಗೋಟಾವಳಿ ಕಂಡ ಗೇಟ್ ಸೆಕ್ಯೂರಿಟಿಯಾತ ನನ್ನ ಬಳಿ ಬಂದು 'ಒಂದ್ಕೆಲಸ ಮಾಡಿ ಮೇಡಂ' ಅಂದ. ಮೊದಲ ಬಾರಿಗೆ ರಾಜಧಾನಿಯಲ್ಲಿ ಕಿವಿಗೆ ಬಿದ್ದ ಈ ಪದಪುಂಜ ಅಪ್ಯಾಯಮಾನವಾಗಿ ಭಾಸವಾಯ್ತು. ಕಣ್ಣು ಮಿಳುಕಿಸಿದವಳಿಗೆ "ನಿಮ್ಮನ್ನು ಕರೆಸಿದವರಿಗೆ ಫೋನು ಮಾಡಿ ಹಿಂಗಿಂಗಾಗಿದೆ ಅಸ್ಟಿ ಇಲ್ಲೇ ಉಳ್ಕೊ ಅಂದಾರು" ಎಂದ. ಬೇಗ ಬೇಗ ಆ ಒಂದು ಕೆಲಸ ಮಾಡಿದೆ. ರಿಂಗಾಗುತ್ತಲೇ ಆ ಕಡೆಯಿಂದ ಬಂದ ಗುಡ್ ಮಾರ್ನಿಂಗ್‌ಅನ್ನು ಲಕ್ಷಿಸದೆ ನಮ್ಮ ಗೋಟಾವಳಿಯನ್ನು ಅರುಹಿದೆ. ಕ್ಷಣ ಹೊತ್ತು ಮೌನ. ನೀವೀಗ ಯಶವಂತ ಪುರದಲ್ಲಿ ಇದೀರಿ ಅಂತಾಯ್ತು. ಮತ್ತೆ ಮೌನ. ಪುನಃ ಗಂಭೀರವಾಗಿ ಆತ 'ನೀವೊಂದ್ಕೆಲಸ ಮಾಡಿ' ಅಂದ.

ಒಂದೇಕೆ ಹತ್ತು ಕೆಲಸವಾದ್ರೂ ಮಾಡಲೇಬೇಕಿತ್ತು. ಹೇಳಿ ಅಂದೆ. ಆಟೋ ಹಿಡಿದು ನ್ಯೂ ಮಾಡ್ರನ್ ಹೋಟ್ಲಿಗೆ ಬನ್ನಿ. ಅಲ್ಲಿ ರೂಮಿದೆ ಎಂದು ಏರಿಯಾ ವಿವರ ನೀಡಿದ. ಹನ್ನೆರಡು ಜನಕ್ಕಾಗುವಂತೆ ನಾಲ್ಕಾದರೂ ರಿಕ್ಷಾ ಬೇಕು. ಬಂದ ರಿಕ್ಷಾಗಳಿಗೆಲ್ಲ ಕೈ ಮಾಡೋದು ನ್ಯೂ ಮಾಡ್ರನ್ನೋಟ್ಲು ಎನ್ನುವುದು, ಅವರು ನಮ್ಮ ತಲೆ ಮೇಲಿದ್ದ ಬೋರ್ಡು, ನಮ್ಮ ಲಗೇಜು ನೋಡಿ ಬರಲ್ಲ

## ಕನ್ನಡಿಗೆ ಹೆದರಿ

ನನ್ನ ಬಗ್ಗೆಯೇ ಹೆದರಿಕೊಂಡೆ
ಸತ್ತು ಹೋಗಿದ್ದೇನೆ ಇದನ್ನೇ
ಸಾರುವ ಸಾವಿರಾರು ಕಡಲಕಾಗೆ
ಏಕಕಂಠವಾಗಿ ಕೂಗುವ ಕಾ... ಕಾ ಶಬ್ದ
ಸೀಳುತ್ತಲೇ ಇದೆ ಬಿಸಿಲೇರದ ಗಾಳಿಯನ್ನು
ದೊಡ್ಡ ಮೋಡ ಭಾರವಾಗಿ
ಭೂಮಿಯ ಮೇಲೆ ಬೋರಲಾಗಿ
ತಣ್ಣಗೆ ಮುತ್ತಿಟ್ಟು ಕುದಿಯುತ್ತಿದೆ
ಸ್ವಭಾವದ ಒಂಟಿ ನಡಿಗೆಗೆ ಹೆದರಿ

ಬಿದ್ದ ಕನಸು ಆಳುವಿಕೆ ಹೊಡೆದಾಟ
ಅಪೂರ್ವ ನೋಟ ಬರೇ ಬೊಂಬೆಯಾಟ
ಮುಂದೆ ಬಾಗುವ ಯಾವ ಅವಘಡವೂ
ನನ್ನಿಂದ ಆಗದಿರಲಿ ಬೇಡಿಕೊಳ್ಳುತ್ತೇನೆ
ಸ್ವಯಂ ಚಾಲಿತ ಕೀಲು ...
ಕಿತ್ತೊಯ್ಯಲಾದ ಆತ್ಮವನ್ನು ಎಲ್ಲಿ ಹುಡುಕಲಿ

ಎದುರಾಗುವ ಎಲ್ಲ ಮುಖಗಳ ಮುಸುಕು
ಕಣ್ಣು ಹುಸಿಯಾಗಿ ಕರಗುತ್ತಿವೆ
ಗಲ್ಲ ಗಂಟಲು ಕೈಕಾಲು ತಿರುಚಿಕೊಂಡು
ಹೆಸರಿರದ ಎಂಥದ್ದೋ ಶ್ರುತಿಪೆಟ್ಟಿಗೆ
ಕೇಳಿಸುತ್ತಿದೆ ಮಂದ್ರಧ್ವನಿ ಯಾರ
ಬರುವಿಕೆಯ ಕಾದು ಹಾಗೆ ನರಳುತ್ತಿದೆ
ಕನ್ನಡಿಗೆ ಹೆದರಿ ಮುಖ
ಮುಚ್ಚಿಕೊಳ್ಳುತ್ತಿರುವೆ ...



ಕವಿತಾ ರೈ
ಅರ್ಕ, ಶಾರದಾನಗರ, ಮಾಡೂರು, ಕೋಟೆಕಾರು ಅಂಚೆ
ಮಂಗಳೂರು - ೫೭೫ ೦೨೨

ಎನ್ನುವುದು... ಸುಮಾರು ಹೊತ್ತು ನಡೆಯಿತು. ಅಂತೂ ಮೂರು ರಿಕ್ಷಾ ಸಿಕ್ಕು ನಾಲ್ಕನೇದಕ್ಕೆ ಕಾಯೋದ್ರೊಳಗೆ ಮೂರಕ್ಕೇ ಮುಕ್ತಾಯವಾಗಬಾರದೇ ಎನಿಸಿ ಚಿಂತಾಕ್ರಾಂತ ಭಂಗಿಯಲ್ಲಿ ನಿಂತ ನನ್ನ ಕಿವಿಯ ಬಳಿ,

'ನೀವೊಂದ್ಕೆಲ್ಸ ಮಾಡೋದೊಳ್ಳೇದು' ಎಂಬ ಸ್ವರ ಬಿತ್ತು. ಪುನಃ ಸೆಕ್ಯೂರಿಟಿಯಾತ (ಹೃದಯವಂತಾ) ''ನೀವು ರಿಕ್ಷಾ ಸೇರಿಸಿ ಆಗ್ಲಿಕ್ಕಿಲ್ಲ. ನಮ್ಮ ಹೋಟೆಲ್ಲಿನ ಟೂರಿಸ್ಟ್ ಟ್ಯಾಕ್ಸಿ ಇದೆ. ಎಲ್ಲಾರನ್ನೂ ಒಂದೇ ಕಾರಲ್ಲಿ ಕಳಿಸುವಾ ಸುಮ್ನೆ ಅಂಗ್ಮಾಡಿ'' ಅಂದ. ಇದಪ್ಪ ಒಂದ್ಕೆಲಸ ಅನ್ನಿಸಿತು. ಆದರೆ ಆಗಲೇ ೩ ಆಟೋದವರು ಒಂದು ಮೀಟಿಂಗ ನಡೆಸಿ ಯಾವ ದಾರೀಲಿ ಹೇಗೆ ಸುತ್ತಿ ಕರ್ಕೊಂಡ್ಹೋಗೋದು ಎಂಬ ಚರ್ಚೆ ನಡೆಸಿದ್ದವರು ನಮ್ಮ ಲಗೇಜು ಕಾರಿಗೆ ಹಾಕೋದು ನೋಡಿ ಜಗಳಕ್ಕೆ ಬಂದರು. ''ನಮ್ಮ ಹಣ ಮಡಗಿ.'' ನಮ್ಮ ಹುಡುಗರು ನಾವು ನಿಮ್ಮ ಆಟೋ ಹತ್ತಿದರಲ್ವೇ ಹಣ ಕೊಡೋದು ? ಎಂದು ತುಳು ಬೈಗಳು ಶುರು ಮಾಡಿದರು. ಬೆಳಗಿನ ವಾಕ್ ಬಂದವರು, ಅವರು ಇವರು ಸೇರಿ... ಕೆಲವರು ನಮ್ಮ ಪರ ಕೆಲವರು ಆಟೋಪರ... ಪರ ಪರ ಶುರುವಾಗಿ ಜನಸಂದಣಿ ವಿಪರೀತವಾಯ್ತು.

ಕಾರ್ ಡ್ರೈವರ್ ಬಂದು 'ಒಂದ್ಕೆಲಸ ಮಾಡಿ' ಎಂದು ಪಿಸುಗುಟ್ಟಿದ ಪ್ರಕಾರ ನಾವು ಒಬ್ಬೊಬ್ಬರೇ ಮೆಲ್ಲಗೆ ಜಾರಿ ಕಾರಲ್ಲಿ ಕುಳಿತೆವು. ಹಿಂಬದಿ ಗೇಟಿನಿಂದ ಕಾರು ಪಾರಾಯಿತು. ಜಗಳ ಎಷ್ಟೊತ್ತು ಮುಂದುವರಿಯಿತೋ. ಜಗಳಕ್ಕೆ ಸೇರಿದ ಜನರಿಂದ ಆ ಹೋಟೆಲ್ಲಿಗೆ ಒಂದಿಷ್ಟು ಕಾಫಿ ವ್ಯಾಪಾರವಂತೂ ಆಗಿರಬೇಕು.

ಅಂತೂ ಬಂದು ವಸತಿ ಸೇರಿದ ಕರಾವಳಿ ಕುವರರಿಗೆ ಮನೆಯ ಬಿಸಿ ಗಂಜಿ ಊಟ ನೆನಪಾಗಿ ಮುಖ ಚಿಕ್ಕದಾಗಿತ್ತು. ಸಂಘಟಕ ಜುಬ್ಬಾಧಾರಿ ಬಂದು ''ಹೇಗೂ ಬಂದಾಯ್ತಲ್ಲ ಈಗ ನೀವು ಒಂದು ಕೆಲಸ ಮಾಡಿ'' ಅಂದ. ತಿಂಡಿ ತಿನ್ನದೇ ನಾವು ಯಾವ ಕೆಲಸಾ ಮಾಡೋ ಸ್ಥಿತೀಲಿಲ್ಲ ಎಂದು ಒಬ್ಬ ಹುಡುಗಿ ಹೇಳಿದ ರೀತಿ ಕರುಳು ಚುರುಕ್ ಎನ್ನುವಂತಿತ್ತಾದ್ದರಿಂದ ಯಾರೂ ನಗಲಿಲ್ಲ.

ಈಗಿಂದೀಗ ನೀವು ರೆಡಿ ಆಗಿ ವೇದಿಕೆ ಹತ್ರ ಬರ್ಬೇಕು. ಸ್ಪರ್ಧೆ ಶುರು ಮಾಡೋರೇ ನೀವು. ಬೇರೆ ತಂಡಗಳೂ ರಿಪೋರ್ಟ್ ಮಾಡಿಲ್ಲ... ಪರಿಣಾಮ ಗೊಂದಲ ತಾರಕಕ್ಕೇರಿತು.

ಬರಗಾಲದಲ್ಲಿ ಅಧಿಕ ಮಾಸ ಎಂಬಂತೆ ನಾವು ಆಯೋಜಿಸಿಕೊಂಡು ಬ ಗದಾಯುದ್ಧದ ಕೌರವನ ಕಾಸ್ಟ್ಯೂಮ್ ಚೀಲ ಬದಲಾಗಿ ಮಕ್ಕಳ ಮೇಳದ ವೇ ಭೂಷಣವಿದ್ದ ಚೀಲ ಬಂದಿತ್ತು. ಬಾಲ ಕೌರವನ ಗಾತ್ರದ ಯಾರೂ ಇಲ್ಲದ ಪ್ರ ಭೀಮನ 'ಅರವಮಂ ನಿರ್ಜಿತ ಕಂಠೀರವ ರವಮಂ...' ಕೇಳಿ ನೀರೊಳಗಿದ್ದ ಬೆಮರ್ದನುರಾಗಪತಾಕಂ... ದುರ್ಯೋಧನ ಯಾವ ವೇಷದಲ್ಲಿ ಬರುವನೆಂಬು ಸಮಸ್ಯೆಯಾಯ್ತು.

ಹುಡುಗರು ಅದೇನೋ ಗುಜು ಗುಜು ಮಾಡಿ ನಂತರ ನನ್ನ ಬಳಿ ಬ ನೀವೊಂದು ಕೆಲಸ ಮಾಡಬೇಕು ಮೇಡಂ ಎಂದರು. ಆಯ್ತು ಮಕ್ಕಳೇ. ಹೇಗಾದ ಒಂದು ಪ್ರದರ್ಶನ ಕೊಡಿ. ಒಂದಲ್ಲ ಹತ್ತು ಕೆಲಸ ನಿಮಗಾಗಿ ಮಾಡುವೆ... ಎಂದ ಇನ್ನೇನಿಲ್ಲ ನೀವು ಸ್ವಲ್ಪ ಸುಮ್ಮನಿದ್ದು ಸಹಕರಿಸಬೇಕು. ನಾವು ಚೂರು ಆಚೀಚೆ ಮಾ ಕೊಳ್ತೇವೆ ಎಂದರು. ರಿಹರ್ಸಲ್ ಎಲ್ಲಾ ಅವರೇ ಸ್ವಂತ ಮಾಡಿಕೊಂಡಿರೋದ್ರಿ ನನಗೇನೂ ಅಭ್ಯಂತರವಿಲ್ಲ ಎಂದು ಪ್ರೇಕ್ಷಕರ ನಡುವೆ ಹೋಗಿ ಕುಳಿತೆ.

ಯಕ್ಷಗಾನದಿಂದಲೇ ನಮ್ಮ ತಂಡದ ಪ್ರದರ್ಶನ ಪ್ರಾರಂಭವಾಯ್ತು. ಯುದ ಕೊನೆಯ ದಿನ ಅಶ್ವತ್ಥಾಮನ ಸಲಹೆಯ ಮೇರೆಗೆ ದುರ್ಯೋಧನ ನೀರಿನಲ್ಲಿ ಅ ಕುಳಿತಿದ್ದಾನೆ. ಭೀಮಾದಿಗಳು ಅವನನ್ನು ಕೆಣಕಿ ಎಬ್ಬಿಸಲು ಬಂದಿದ್ದಾರೆ. ಭಾಗವತ ಚಂಡೆ ಮದ್ದಳೆ ಎಲ್ಲವೂ ಅಬ್ಬರ ತಾಳದಲ್ಲಿ ಹೊಡೆದರು. ಭೀಮನ ಪಾತ್ರ ವಹಿ ಬೊಬ್ಬೆಯರ್ಜನೂ... ಎಲ್ಲೆ ಕುನ್ನಿ ದುರ್ಯೋಧನಾ ಕಪ್ಪೆಯಂತೆ ನೀರಲ್ಲಡಗಿದ್ದೀ ಧೈರ್ಯವಿದ್ದರೆ ಮೇಲೆದ್ದು ಬಾ... ಎಂದು ಬೊಬ್ಬೇ ಹೊಡೆದದ್ದೇ ಹೊಡೆದದ್ದು.

ಇನ್ನೇನು ನೀರೊಳಗಿದ್ದ ದುರ್ಯೋಧನ ಸಿಟ್ಟಿನಿಂದ ಬೆವರಿ ಎದ್ದು ಬರಬೇ ಏನು ಏರ್ಪಾಡು ಮಾಡಿಕೊಂಡಿದ್ದಾರೋ ಗದಾಧಾರಿ ದುರ್ಯೋಧನನನ್ನು ಯಾ ವೇಷದಲ್ಲಿ ರಂಗಕ್ಕೆ ತರುತ್ತಾರೋ ಎಂಬ ಆತಂಕದಲ್ಲಿ ನಾನು ನೋಡುತ್ತೇನೆ. ಸಂಪೂ ಭೂತದ ಕೋಲಕ್ಕೆ ಸಿದ್ಧನಾದ ಪ್ರಕಾಶ ತಾಳೆಗರಿ ಕಿರೀಟ, ಕೈಯಲ್ಲಿ ಖಡ್ಗ , ಅಕ್ಕ ದೊಂದಿಯವರು... ಕರಾವಳಿಯ ಭೂತ ಎದ್ದುಬಂದಿದೆ. ಭಾಗವತರು ಅದೇ ಹಾಡಿದರೋ ತಿಳಿಯದು. ಭೀಮ ಮಾತ್ರ ಒಂದು ಎಕ್ಸ್ಟ್ರಾ ಡೈಲಾಗ್ ಹೊಡೆದ.

ಎಲೈ ಕುರುಕುಲ ಕುನ್ನಿ, ಜಲಜಂತುಗಳ, ಪಿಶಾಚಿಗಳ ಭೂತ ಪ್ರೇತ ಜತೆಯಲ್ಲಿರಲು ಯೋಗ್ಯನಾದ ನೀನು ಭೂತದ ವೇಷದಲ್ಲಿ ಬಂದು ನನ್ನನ್ನು ಹೆದ ಬೇಕೆಂದಿರುವೆಯಾ ? ಉಹೂಂ, ನಾನು ಕಲಿಭೀಮ ಬೆದರಲಾರೆ ಬಾ ಯುದ್ಧಕ್ಕೆ ಎಂ ಗದೆ ಬೀಸಿದ. ಭೂತವೂ ಗಂಟೆ ತೂಗುತ್ತ... ಅಂಚ ಮಾಳ್ಪೆ ಇಂಚ ಮಾಳ್ಪೆ ನಿನ್ನ ಪಡ್ಚ ಮಾಳ್ಪೆ ಎನ್ನುತ್ತ ಕೋಲದ ಕುಣಿತ ಪ್ರದರ್ಶಿಸಿತು. ಭೀಮನಿಗೆ ಚಂಡ ಮ ಭಾಗವತರು ದುರ್ಯೋಧನನಿಗೆ ಭೂತದ ಗಂಟೆ ಅದಕ್ಕೆಂದೇ ತಂದ ಢಕ್ಕೆ ಅದು ಫ್ಯೂಷನ್ (ನನಗೆ ಮಾತ್ರ ಕನ್‌ಫ್ಯೂಷನ್) ಸೃಷ್ಟಿಯಾಗಿ ಸಿಳ್ಳೆ ಚಪ್ಪಾಳೆ ಬಿದ್ದೇ ಬಿದ್ದವು.

ದುರ್ಯೋಧನ ಸತ್ತು ನೆಲಕ್ಕೆ ಬೀಳಬೇಕು... ಆಗ ಕರಾವಳಿಯ ಹಿರಿಯರೊಬ್ಬ ವೇದಿಕೆಗೆ ನುಗ್ಗಿ ಇನ್ನು ಭೂತಾನ ನೆಲಕ್ಕೆ ಬೀಳಿಸಿ ತುಳುನಾಡ ಸಂಪ್ರದಾಯಕ್ಕೇ ಅಪಚಾ ಮಾಡಬೇಡಿ ಎನ್ನುತ್ತ ಭೂತವನ್ನು ಒಳಕ್ಕೆಳೆದುಕೊಂಡು ಹೋದರು. ದುರ್ಯೋಧ ತೊಡೆಮುರಿದು ಸೋತ ದೃಶ್ಯ ಹೀಗೆ ಮೂಡಿಬಂದು... ಒಟ್ಟಾರೆ ತಂಡಕ್ಕೆ ಬಹುಮಾ ತಂದುಕೊಟ್ಟಿತು. ಎರಡು ಐಟಂ ಗದಾಯುದ್ಧ ಹಾಗೂ ಭೂತದ ಕೋಲ ಒಟ್ಟು ಸೇ ಸಮಯ ಉಳಿಸಿ ನಂತರ ಹುಡುಗಿಯರು ಡನ್ನನ ಡೆನ್ನಾನ... ಡ್ಯಾನ್ಸನ್ನು ಮನಸಾರೆ ಮಾ ಮುದ ನೀಡಿದರು. ಆಪತ್ತಿಗಾದ ಭೂತವನ್ನೂ ಹುಡುಗರ ಆಪತ್ತಿಗಾಗುವ ಮಂಡೆಯ ಸದ್ಯ ಮೈಕಿನ ಹತ್ತಿರ ಹೋಗದ ಆ ತುಳು ಹಿರಿಯರನ್ನೂ ಒಟ್ಟಾಗಿ ವಂದಿಸಿದೆ. ವಿದ್ಯಾ ಗಳೆಲ್ಲ ಖುಷಿಯೋ ಖುಷಿಯಲ್ಲಿ ರಿಪ್ಯಾಕ್ ಮಾಡುತ್ತಿರುವಾಗ-''ನೀವೆಲ್ಲ ಈಗ ಒಂ ಕೆಲಸ ಮಾಡ್ಬೇಕು'' ಎಂದೆ. ಅರ್ಥವಾದ ಹುಡುಗರು 'ಹೋ' ಎಂದರಚಿದರು.

ಯಕ್ಷಗಾನ ಭೂತದ ಕೋಲ ಒಟ್ಟು ಸೇರಿಸಿದ್ದನ್ನು ಊರಲ್ಲಿ ಹೋಗಿ ಹೇಳ್ಬಾದು ಅಷ್ಟೇ ತಾನೆ ? ಇಲ್ಲೇ ಮರೆತುಬಿಟ್ಟ... ಶೀಲ್ಡ್ ಹಿಡಿದ ಶೀನ ಕುಣಿದಾಡಹತ್ತಿ ಬೆಂಗಳೂರಿಂದ ಮಂಗಳೂರಿಗೆ ಬರುವಾಗ ನನ್ನ ಪದ ವಿನೋದ ಕೋಶಕ್ಕೆ ಒಂ ಹೊಸ ಎಂಟ್ರಿ ಆಗಿ ಒಂದ್ಕೆಲಸಾ ಮಾಡು ಅನ್ನತೊಡಗಿತ್ತು.

ಭುವನೇಶ್ವರಿ ಹೆಗಡೆ
೧೦೧, ರತ್ನಾ ಅಪಾರ್ಟ್‌ಮೆಂಟ್ಸ್, ಕದ್ರಿ ಮಾರ್ಕೆಟ್, ಮಂಗಳೂರು - ೨

ಹೊಸ ವರ್ಷದ ಶುಭಾಶಯಗಳು


ರೂ. 100


ರೂ. 100


ರೂ. 30


ರೂ. 20


ರೂ. 100


ರೂ. 150


ರೂ. 75

ಹರ್ಷವರ್ಧನ ಪ್ರಕಾಶನ
8-ಎ/15, ಜವಾಹರ ಸೊಸೈಟಿ, ಗೋವಿಂದನಗರ
ಮುಂಬಯಿ - 400 092
ದೂರವಾಣಿ : (022) 28900925
e-mail jeevi65@gmail.com
ವಿತರಕರು : ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ., ಬೆಂಗಳೂರು

ನಿಸರ್ಗದ ವಿಕಾಸದ ದಾರಿಯಲ್ಲಿ ಮಾನವನ ನಿರಂತರ ಬೌದ್ಧಿಕ ಮತ್ತು ಭೌತಿಕ ಚಟುವಟಿಕೆ ಂದ ಅಗಾಧವಾದ ಪರಿವರ್ತನೆ ಕಂಡುಬಂದಿದೆ. ಬೌದ್ಧಿಕ ಕ್ರಿಯಾಶೀಲತೆ ಪರಿವರ್ತನಾ ಪ್ರಕ್ರಿಯೆಗೆ ರ್ಗದರ್ಶನವಾದರೆ ಮಾನವನ ದೈಹಿಕ ಶ್ರಮ ಭೌತಿಕ ಚಾಲನೆ ನೀಡಿದೆ. ಚಾರಿತ್ರಿಕ ಭೌತಿಕವಾದದ ದರ್ಭದಲ್ಲಿ ಕಾರ್ಲ್ ಮಾರ್ಕ್ಸ್ ಅವರು ''ಮಾನವನ ಕೈಗಳೇ ನಾಗರಿಕತೆಯನ್ನು ನಿರ್ಮಿಸಿದವು'' ದು ಹೇಳಿರುವಂತೆ ಮಾನವನ ಭೌತಿಕ ಚಟುವಟಿಕೆಗಳಿಂದ ಸಮಾಜದಲ್ಲಿ ಮರುಕಳಿಸದಂತಹ ರವಾದ ಬದಲಾವಣೆ ಕಂಡುಬಂದಿದೆ. ಆದರೆ, ಸಮಾಜ ವಿಕಾಸವಾದಂತೆ ಬೌದ್ಧಿಕ ಹಾಗೂ ಭೌತಿಕ ಶಕ್ತಿಗಳಲ್ಲಿ ವಿಭಜನೆಯಾಗಿ ಬೌದ್ಧಿಕ ಶಕ್ತಿ ಭೌತಿಕ ಶಕ್ತಿಗಿಂತಲೂ ಮೇಲಾದದ್ದು ಎಂಬ ನಂಬಿಕೆ ಡಿದೆ. ವೈಜ್ಞಾನಿಕವಾಗಿ ನೋಡಿದಾಗ ಒಂದು ಹೆಚ್ಚು, ಇನ್ನೊಂದು ಕಡಿಮೆಯಾಗಿರದೇ ಅವು ದಕ್ಕೊಂದು ಪೂರಕವಾಗಿವೆ. ಶೀಘ್ರಗತಿಯಲ್ಲಿ ಬದಲಾವಣೆಗೊಳ್ಳುತ್ತಿರುವ ಮಾನವ ಸಮಾಜದಲ್ಲಿ ಕ ಚಟುವಟಿಕೆ ಕೀಳಾದದ್ದು, ಮೃಗೀಯವಾದದ್ದು ಮತ್ತು ಒರಟಾದದ್ದು ಎಂಬ ಕೃತ್ರಿಮವಾದ ಲು-ಕೀಳನ್ನು ಸೃಷ್ಟಿಸಲಾಗಿದೆ. ವೈಜ್ಞಾನಿಕ ಹಾಗೂ ತಾಂತ್ರಿಕ ಬೆಳವಣಿಗೆಗಳೊಂದಿಗೆ ದೈಹಿಕ ಶಕ್ತಿ ರ್ಥಹೀನವಾದದ್ದು ಎಂಬ ವಾದವನ್ನು ಬೆಳೆಸಲಾಗುತ್ತಿದೆ. ಬೌದ್ಧಿಕ ಹಾಗೂ ಭೌತಿಕ ಶಕ್ತಿಗಳ ಮೇಲು ಳು ಕಲ್ಪನೆಗಳನ್ನು ಸಾಮಾಜಿಕ ವರ್ಗಗಳೊಂದಿಗೆ ಸಮೀಕರಿಸಲಾಗಿದೆ. ಬೌದ್ಧಿಕ ಕ್ರಿಯಾಶೀಲತೆ ಲ್ವರ್ಗಗಳ ಆಸ್ತಿ ಎಂತಲೂ, ಭೌತಿಕ ಶ್ರಮ ಕೆಳವರ್ಗಗಳ ಕರ್ಮ ಎಂಬಂತೆಯೂ ಬಿಂಬಿಸಲಾಗಿದೆ. ಗಾಗಿ ಜನಸಾಮಾನ್ಯರಲ್ಲಿ ದೈಹಿಕ ಶಕ್ತಿಯ ಬಗ್ಗೆ ತಾತ್ಸಾರ ಮನೋಭಾವನೆ ಮೂಡಿರುವುದು ಸಹಜ.

ಗ್ರಾಮೀಣ ಹಾಗೂ ನಗರ ಪ್ರದೇಶಗಳ ಚಟುವಟಿಕೆಗಳಲ್ಲಿಯೂ ಮೇಲು-ಕೀಳಿನ ಭಾವನೆ ರ್ಣವಾಗಿ ನಗರ ಪ್ರದೇಶದ ಉತ್ಪಾದನಾ ಚಟುವಟಿಕೆಗಳು ಹೆಚ್ಚೆಚ್ಚು ಬೌದ್ಧಿಕವಾಗಿಯೂ, ಮೀಣ ಪ್ರದೇಶದ ಚಟುವಟಿಕೆಗಳು ಭೌತಿಕವಾದವುಗಳು ಎಂಬ ಭಾವನೆ ಮೂಡುತ್ತಿದೆ. ಸರಳ ಗೂ ಹಗುರವಾದ ಬೌದ್ಧಿಕ ಚಟುವಟಿಕೆಯೇ ಶ್ರೇಯಸ್ಕರ ಎಂಬ ಭಾವನೆಯಿಂದಲೇ ಬಡ ೀರೆಗೌಡ ಬೆಂಗಳೂರಿನ ದಾರಿ ಹಿಡಿದದ್ದು. ನಗರ ಪ್ರದೇಶದಲ್ಲಿರುವ ತನ್ನ ಸಂಬಂಧಿಯೋ ರವಾ ಸ್ನೇಹಿತನೋ ಬೌದ್ಧಿಕ ಚಟುವಟಿಕೆಯನ್ನವಲಂಬಿಸಿ ಹೆಚ್ಚಿನ ಆದಾಯ ಪಡೆದು ಐಶಾರಾಮಿ ವನ ಸಾಗಿಸಲು ಸಾಧ್ಯವಾಗಿದೆ ಎಂದು ನಂಬಿರುವ ವ್ಯಕ್ತಿ ನಗರಗಳ ದಾರಿ ಹಿಡಿದಿರುವುದರಲ್ಲಿ ರ್ಯವಿಲ್ಲ. ಹಳ್ಳಿಗಳಿಂದ ನಗರ ಪ್ರದೇಶಗಳಿಗೆ ವಲಸೆ ಅಭಿವೃದ್ಧಿಯ ಸಂಕೇತ ಎಂದು ಬಿಂಬಿಸು





# ದೈಹಿಕ ಶ್ರಮ, ಉತ್ಪಾದಕತೆ ಹಾಗೂ ಸಾಮಾಜಿಕ ಧೋರಣೆಗಳು



ಬೌದ್ಧಿಕ ಹಾಗೂ ಭೌತಿಕ ದುಡಿಮೆಗಳಲ್ಲಿ ತಾರತಮ್ಯ ಮೂಡಲು ನಿರ್ಣಯಾತ್ಮಕ ಕಾರಣವೆಂದರೆ ಬೌದ್ಧಿಕ ಹಾಗೂ ಭೌತಿಕ ಶ್ರಮಗಳಿಗೆ ದೊರೆಯುವ ವೇತನ ಅಥವಾ ಆದಾಯಗಳಲ್ಲಿರುವ ತಾರತಮ್ಯ. ಬೌದ್ಧಿಕ ಶಕ್ತಿ ಯಾವುದೇ ರೀತಿಯಲ್ಲಿ ಕೀಳಾಗಿರದೆ ಅದು ವ್ಯಕ್ತಿಯ ಹಾಗೂ ರಾಷ್ಟ್ರದ ಆರೋಗ್ಯ ಹಾಗೂ ಅಭಿವೃದ್ಧಿಗೆ ಮೂಲ ಸ್ತಂಭ ಎಂಬ ವಿಚಾರವನ್ನು ಜನಸಾಮಾನ್ಯರಿಗೆ ವೈಜ್ಞಾನಿಕವಾಗಿ ಸ್ಪಷ್ಟಪಡಿಸಬೇಕು. ಅವರಲ್ಲಿರುವ ತಪ್ಪು ತಿಳುವಳಿಕೆಗಳನ್ನು ನಿವಾರಿಸಿ ಬುದ್ಧಿಜೀವಿಗಳು, ಸಮಾಜದ ಮುಖಂಡರು ತಮ್ಮ ಕೃತಿಗಳ ಮೂಲಕ ಮೇಲ್ಪಂಕ್ತಿಯನ್ನು ಹಾಕಿಕೊಡಬೇಕು. ಯುವಕರಲ್ಲಿ ರಾಷ್ಟ್ರಭಕ್ತಿ , ದೈಹಿಕ ಶ್ರಮಗಳ ಬಗ್ಗೆ ಶ್ರದ್ಧೆ ಬೆಳೆಸುವುದಕ್ಕಾಗಿ ರಾಷ್ಟ್ರೀಯ ಸರಕಾರಗಳು ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದರೂ ಅವು ಕೇವಲ ಕಾಟಾಚಾರಗಳಾಗಿವೆ.



ಡಾ।। ರಾಜೇಂದ್ರ ಪೋದ್ದಾರ



## ಕೃಷ್ಣಮೂರ್ತಿ ಫೌಂಡೇಷನ್ ಇಂಡಿಯಾ
## ಬೆಂಗಳೂರು ಶಿಕ್ಷಣ ಕೇಂದ್ರ

ಬೆಂಗಳೂರಿನ ಕೃಷ್ಣಮೂರ್ತಿ ಶಿಕ್ಷಣ ಕೇಂದ್ರವು ಜೆ. ಕೆ. ಯವರ ಪುಸ್ತಕಗಳನ್ನು ಕನ್ನಡದಲ್ಲಿ ಭಾಷಾಂತರಿಸಿ ಹೊಸ ವಿನ್ಯಾಸದೊಂದಿಗೆ ಸುಂದರವಾಗಿ ಪ್ರಕಟಿಸಲು ಆರಂಭಿಸಿದೆ. ಈಗಾಗಲೇ ಬಿಡುಗಡೆಯಾದ ಪುಸ್ತಕಗಳ ಮಾಹಿತಿ ಕೆಳಕಂಡಂತಿದೆ.

| | |
|---|---|
| ೧. ಧ್ಯಾನ ಚಿಂತನ<br>ಅನುವಾದ : ಡಾ॥ ನಿ. ಮುರಾರಿ ಬಲ್ಲಾಳ | ರೂ. ೬೫ |
| ೨. ಹಿಂಸೆಯನ್ನು ಮೀರಿ<br>ಅನುವಾದ : ಪ್ರೊ॥ ಓ. ಎಲ್. ನಾಗಭೂಷಣ ಸ್ವಾಮಿ | ರೂ. ೧೨೦ |
| ೩. ಕ್ರಿಯೆ ಮತ್ತು ಸಂಬಂಧ<br>ಅನುವಾದ : ಬಿ. ಎ. ಸನದಿ | ರೂ. ೧೫ |
| ೪. ಮೊದಲ ಹಾಗೂ ಕೊನೆಯ ಬಿಡುಗಡೆ*<br>ಅನುವಾದ : ಶ್ರೀಮತಿ ರುಕ್ಮಿಣಿ ಕೃಷ್ಣಮೂರ್ತಿ | ರೂ. ೧೫೦ |
| ೫. ಕಾಲ ಮತ್ತು ಕಾಲರಹಿತ*<br>ಅನುವಾದ : ಶ್ರೀಮತಿ ವನಮಾಲಾ ರಂಗನಾಥ ರಾವ್ | ರೂ. ೧೦ |
| ೬. ಸಂಸ್ಕೃತಿ ಸಂಗತಿ<br>ಅನುವಾದ : ಪ್ರೊ॥ ಎಚ್. ಎಸ್. ರಾಘವೇಂದ್ರ ರಾವ್ | ರೂ. ೧೫೦ |
| ೭. ಧಾರ್ಮಿಕ ಜೀವನ ಮತ್ತು ಬದುಕಿನ ಕಲೆ<br>ಅನುವಾದ : ಪ್ರೊ॥ ಓ. ಎಲ್. ನಾಗಭೂಷಣ ಸ್ವಾಮಿ | ರೂ. ೧೫ |
| ೮. ಅನುದಿನ ಚಿಂತನ<br>ಅನುವಾದ : ಪ್ರೊ॥ ಓ. ಎಲ್. ನಾಗಭೂಷಣ ಸ್ವಾಮಿ | ರೂ. ೧೬೦ |
| ೯. ಬಾಳಿಗೊಂದು ಭಾಷ್ಯ - ಸಂಪುಟ ೧<br>ಅನುವಾದ : ಡಾ॥ ಮಹಾಬಲೇಶ್ವರರಾವ್ | ರೂ. ೧೩೦ |
| ೧೦. ಭಯ, ಸ್ವಾತಂತ್ರ್ಯ ಮತ್ತು ಶಿಕ್ಷಣ<br>ಅನುವಾದ : ಪ್ರೊ॥ ಓ. ಎಲ್. ನಾಗಭೂಷಣ ಸ್ವಾಮಿ | ರೂ. ೨೦ |
| ೧೧. ಶಿಕ್ಷಣ ಮತ್ತು ಜೀವನ<br>ಅನುವಾದ : ಡಾ॥ ಎಚ್. ಎಸ್. ರಾಘವೇಂದ್ರ ರಾವ್ | ರೂ. ೬೫ |
| ೧೨. ಭಯದಾಚೆಯ ಬದುಕು<br>ಅನುವಾದ : ಪ್ರೊ॥ ಓ. ಎಲ್. ನಾಗಭೂಷಣ ಸ್ವಾಮಿ | ರೂ. ೨೦ |
| ೧೩. ದುಃಖಕ್ಕೆ ವಿದಾಯ<br>ಅನುವಾದ : ಪ್ರೊ॥ ಓ. ಎಲ್. ನಾಗಭೂಷಣ ಸ್ವಾಮಿ | ರೂ. ೨೫ |
| ೧೪. ಸಂಘರ್ಷವಿರದ ಬದುಕಿಗಾಗಿ<br>ಅನುವಾದ : ಪ್ರೊ॥ ಓ. ಎಲ್. ನಾಗಭೂಷಣ ಸ್ವಾಮಿ | ರೂ. ೨೫ |
| ೧೫. ಸಂಬಂಧವೆಂದರೇನು ?<br>ಅನುವಾದ : ಪ್ರೊ॥ ಓ. ಎಲ್. ನಾಗಭೂಷಣ ಸ್ವಾಮಿ | ರೂ. ೨೫ |
| ೧೬. ಜೆ. ಕೆ. ಜೀವನ ದರ್ಶನ<br>ಲೇಖಕರು : ಡಾ॥ ನಿ. ಮುರಾರಿ ಬಲ್ಲಾಳ | ರೂ. ೧೩೦ |
| ೧೭. ಜೆ. ಕೃಷ್ಣಮೂರ್ತಿ - ಶಿಕ್ಷಣ<br>(ದ್ವಿತೀಯ ಆವೃತ್ತಿ) ಎಸ್. ಡಿ. ಕಾಶೀಕರ | ರೂ. ೯೦ |
| ೧೮. ತಿಳಿದುದೆಲ್ಲವ ಬಿಟ್ಟು...<br>ಪ್ರೊ॥ ಜಿ. ವೆಂಕಟಸುಬ್ಬಯ್ಯ | ರೂ. ೯೦ |
| ೧೯. ಬಾಳಿಗೊಂದು ಭಾಷ್ಯ - ಸಂಪುಟ ೨<br>ಡಾ॥ ಮಹಾಬಲೇಶ್ವರ ರಾವ್ | ರೂ. ೧೫೦ |
| ೨೦. ಪ್ರೀತಿ ಎಂದರೇನು ?<br>ಪ್ರೊ॥ ಓ. ಎಲ್. ನಾಗಭೂಷಣ ಸ್ವಾಮಿ | ರೂ. ೨೫ |
| ೨೧. ಬಾಳಿಗೊಂದು ಭಾಷ್ಯ - ಸಂಪುಟ ೩<br>ಡಾ॥ ಮಹಾಬಲೇಶ್ವರ ರಾವ್ | ರೂ. ೧೮೫ |
| ೨೨. ಅಸೂಯೆ<br>ಪ್ರೊ॥ ಓ. ಎಲ್. ನಾಗಭೂಷಣ ಸ್ವಾಮಿ | ರೂ. ೩೦ |

*ಪ್ರತಿಗಳು ಮುಗಿದಿವೆ

*For More Information Contact*

**The Study Bangalore**

Krishnamurthy Foundation India, Thatguni Post, Bangalore-62
Ph : 080-28435243, e-mail : KFistudy@gmail.com

ತ್ತಿರುವ ಅರ್ಥಶಾಸ್ತ್ರಜ್ಞರ ವಿಚಾರ ಹಾಗೂ ಪ್ರಚಾರಗಳು ಇಂತಹ ಪಲಾ ಪೂರಕವಾಗಿವೆ. ಹಳ್ಳಿಗಳಲ್ಲಿದ್ದರೂ, ದೈಹಿಕ ಶ್ರಮವನ್ನೇ ಹೆಚ್ಚಾಗಿ ನಂಜಿರುವ ನೆಮ್ಮದಿಯ ಬದುಕನ್ನು ಸಾಗಿಸಲು ಸಾಧ್ಯವಿಲ್ಲವೆ ? ಇದು ಸಾಧ್ಯ, ಆದರೆ ತಿರುಚ ಆರ್ಥಿಕ ನೀತಿಗಳು ಇದು ಸಾಧ್ಯವಾಗದಂತೆ ನೋಡಿಕೊಳ್ಳುತ್ತವೆ. ನೈಜ ಉತ್ಪಾದ ಅವಶ್ಯವಿರುವ ದೈಹಿಕ ಶ್ರಮವನ್ನು ಕೀಳಾಗಿ ನೋಡುತ್ತಿರುವ ನಗರ ಪ್ರದೇಶದಲ್ಲಿ ಮೇಲ್ವರ್ಗದ ಅಧಿಕಾರಶಾಹಿ ಜನ ತಮ್ಮ ಕೃತ್ರಿಮವಾದ ಮನರಂಜನಾತ್ಮಕವಾ ವಿಕಾರ ರೂಪದ ದೈಹಿಕ ಕಸರತ್ತುಗಳನ್ನು ಮಾಧ್ಯಮಗಳ ಮೂಲಕ ಪ್ರದರ್ಶಿಸುವು ಅಸಹ್ಯವೆನಿಸುವುದಿಲ್ಲವೆ ?

ಆರ್ಥಿಕವಾದ ಒಂದು ಬಲಾಢ್ಯ ರಾಷ್ಟ್ರದ ನಿರ್ಮಾಣಕ್ಕೆ ಗರಿಷ್ಠ ಮಟ್ಟದ ಶ್ರ ಉತ್ಪಾದಕತೆ ಮುಖ್ಯ ಎಂಬುದು ಅರ್ಥಶಾಸ್ತ್ರದ ಕನಿಷ್ಠ ಜ್ಞಾನವಿರುವ ಯಾರಿಗಾದರ ಅರ್ಥವಾಗುವ ವಿಷಯ. ಅಗಾಧ ಪ್ರಮಾಣದಲ್ಲಿ ದೈಹಿಕ ಶ್ರಮವನ್ನು ಅವಲ ಸಿರುವ ಕೃಷಿ ಹಾಗೂ ಉದ್ದಿಮೆ ಕ್ಷೇತ್ರಗಳಲ್ಲಿ ಶ್ರಮ ಸಾಮರ್ಥ್ಯ ಕುಂಠಿತವಾಗುತ್ತಿ ಇದಕ್ಕೆ ಕಾರಣಗಳೇನು ? ಅವುಗಳಲ್ಲಿ ಉತ್ಪಾದನಾ ಚಟುವಟಿಕೆಯ ಸ್ವರೂಪ, ಬ ಲಾಗುತ್ತಿರುವ ಉಪಕರಣಗಳು, ಕಾರ್ಮಿಕರು ಕಾರ್ಯ ನಿರ್ವಹಿಸುತ್ತಿರುವ ಪರಿಸ್ಥಿ ಅವರ ದೈಹಿಕ ಸಾಮರ್ಥ್ಯದಂತಹ ಅನೇಕ ಅಂಶಗಳಿವೆ. ಕ್ಷೀಣಿಸುತ್ತಿರುವ ಕಾಮಿ ಉತ್ಪಾದಕತೆಗೆ ದೈಹಿಕ ಶ್ರಮದ ಬಗ್ಗೆ ಇರುವ ಕೀಳರಿಮೆ, ತಾತ್ಸಾರ ಮನೋ ಭಾವನೆಯೂ ಪ್ರಮುಖ ಕಾರಣ ಎನ್ನಬಹುದು. ದೇಶದ ಒಟ್ಟಾರೆ ಉತ್ಪಾದನೆ ಮೇ ಗಾಢವಾದ ಪರಿಣಾಮ ಬೀರಬಲ್ಲ ಈ ಮನೋಭಾವನೆಗೆ ಕಾರಣಗಳೇನು ಈಗಾಗಲೇ ಮೇಲೆ ಚರ್ಚಿಸಿರುವಂತೆ ಐತಿಹಾಸಿಕವಾಗಿ ಆಳುವ ವರ್ಗಗ ನಿರ್ಮಿಸಿರುವ ಬೌದ್ಧಿಕ ಹಾಗೂ ಭೌತಿಕ ಶ್ರಮಗಳ ನಡುವಿನ ಮೇಲು-ಕೀಳಿನ ಕ ಒಂದಾದರೆ ಬಂಡವಾಳಶಾಹಿ ಅರ್ಥ ವ್ಯವಸ್ಥೆಯಲ್ಲಿ ಉತ್ಪಾದನಾ ಚಟುವಟಿಕೆಗ ಆರೋಗ್ಯಪೂರ್ಣವಾಗಿರದೇ ಶೋಷಣಾತ್ಮಕವಾಗಿರುವುದು ಇನ್ನೊಂದು ಕಾರ ಹಿಂದಿನ ದಿನಗಳಲ್ಲಿ ಭಾರತದ ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಚಟುವಟಿಕೆಗಳ ಸಾಮೂಹಿಕವಾಗಿ, ಮನರಂಜನಾತ್ಮಕವಾಗಿ ಕೈಕೊಳ್ಳಲಾಗುತ್ತಿದ್ದು ದೈಹಿಕ ವ್ಯಕ್ತಿ ಆನಂದ ಪಡೆಯುವಂತಹ ವಾತಾವರಣ ಮೂಡುತ್ತಿತ್ತು. ಇಂದು ಈ ರೀತಿ ಸಾಮೂಹಿಕ ಚಟುವಟಿಕೆಗಳು ಮಾಯವಾಗಿ ಅವು ಯಾಂತ್ರೀಕೃತವಾ ಅಸಹನೀಯವಾಗಿವೆ.

ಇದಕ್ಕೆ ತದ್ವಿರುದ್ಧವಾದ ನಿಲುವನ್ನು ಹೊಂದಿದ್ದ ಸಾಮಾಜಿಕ ಪ್ರಗತಿಯ ಹರಿಕಾರರಾ ಕ್ರಾಂತಿಕಾರಿ ಬಸವಣ್ಣನವರು, ರಾಷ್ಟ್ರಪಿತ ಗಾಂಧೀಜಿಯವರು, ಸಮಾಜವಾದಿಗ ಮಾನವನ ಸರ್ವಾಂಗೀಣ ಅಭಿವೃದ್ಧಿಯಲ್ಲಿ ದೈಹಿಕ ಶ್ರಮದ ಮಹತ್ವವನ್ನು ತೋರಿದ್ದಾರೆ. **'ಕಾಯಕವೇ ಕೈಲಾಸ'** ಎಂಬ ಸಂದೇಶದ ಮೂಲಕ ಬಸವಣ್ಣನವ ಕಾಯಕ ಮಾನವ ಸಮಾಜದ ಪುರೋಭಿವೃದ್ಧಿಗೆ ಮೂಲಮಂತ್ರ ಎಂದು ಸಾರಿದ್ದಾ ಗಾಂಧೀಜಿಯವರು ವ್ಯಕ್ತಿಯ ಆರೋಗ್ಯಪೂರ್ಣವಾದ ಬದುಕಿಗಾಗಿ ದೈಹಿಕ ಶ್ರ ಮಾಡಲೇಬೇಕೆಂದು ತಮ್ಮ **'ಬ್ರೆಡ್ ಲೇಬರ್'** ತತ್ವವನ್ನು ಆಚಾರ ಹಾಗೂ ವಿಚಾರ ಮೂಲಕ ನಮ್ಮ ಮುಂದಿಟ್ಟಿದ್ದಾರೆ. ದೈಹಿಕ ಶ್ರಮದ ಮೂಲಕವೇ ಗ್ರಾಮೀಣ ಭಾರತ ಅಭಿವೃದ್ಧಿ ಸಾಧ್ಯ ಎಂಬುದನ್ನು ವಾದಿಸಿ ದುಡಿಮೆಯ ಸಂಕೇತವಾದ ಸಲಿಕೆಯನ್ನು ತ ಸಂಘಟನೆಯ ಲಾಂಛನವನ್ನಾಗಿಸಿಕೊಂಡ ಸಮಾಜವಾದಿ ಡಾ॥ ರಾಮ ಮನೋಹ ಲೋಹಿಯಾ ಅವರು ದುಡಿಯುವ ಜನರ ಸೈನ್ಯದ ಅವಶ್ಯಕತೆಯನ್ನು ಎತ್ತಿ ತೋರಿಸಿದ್ದಾ ಸಾಮ್ರಾಜ್ಯಶಾಹಿಗಳ ದಮನಕ್ಕೆ ಒಳಗಾದ ಮಧ್ಯ ಅಮೆರಿಕಾದ ಕ್ಯೂಬಾ ಎಂಬ ಪ ದ್ವೀಪ ರಾಷ್ಟ್ರದ ಜನತೆ ತಮ್ಮ ದೈಹಿಕ ಶ್ರಮದ ಮೂಲಕ ಛಲದಿಂದ ಹೋರಾಡಿದ್ದಾ ಅಲ್ಲಿನ ರೈತರು, ಸಾಮಾನ್ಯ ಜನರು, ಅಧಿಕಾರಿಗಳು, ಮಂತ್ರಿಗಳು ಸಾಮೂಹಿಕವಾ ರಾಷ್ಟ್ರೀಯ ದೈಹಿಕಶ್ರಮ ಕಾರ್ಯಕ್ರಮದಲ್ಲಿ ಭಾಗವಹಿಸಿ ರಾಷ್ಟ್ರೀಯ ಉತ್ಪಾದನೆಯ ಹೆಚ್ಚಿಸಿ, ದಿಗ್ಬಂಧನಗಳಿಗೆ ಸವಾಲಾಗಿ ನಿಂತು ಜಗತ್ತಿಗೆ ಮಾದರಿಯಾಗಿದ್ದಾರೆ.

ಬೌದ್ಧಿಕ ಹಾಗೂ ಭೌತಿಕ ದುಡಿಮೆಗಳಲ್ಲಿ ತಾರತಮ್ಯ ಮೂಡಲು ನಿರ್ಣಯಾ ಕಾರಣವೆಂದರೆ ಬೌದ್ಧಿಕ ಹಾಗೂ ಭೌತಿಕ ಶ್ರಮಗಳಿಗೆ ದೊರೆಯುವ ವೇತನ ಅಥ ಆದಾಯಗಳಲ್ಲಿರುವ ತಾರತಮ್ಯ. ಬೌದ್ಧಿಕ ಶಕ್ತಿ ಯಾವುದೇ ರೀತಿಯಲ್ಲಿ ಕೀಳಾಗಿರ ಅದು ವ್ಯಕ್ತಿಯ ಹಾಗೂ ರಾಷ್ಟ್ರದ ಆರೋಗ್ಯ ಹಾಗೂ ಅಭಿವೃದ್ಧಿಗೆ ಮೂಲ ಸ್ತಂಭ ಎ ವಿಚಾರವನ್ನು ಜನಸಾಮಾನ್ಯರಿಗೆ ವೈಜ್ಞಾನಿಕವಾಗಿ ಸ್ಪಷ್ಟಪಡಿಸಬೇಕು. ಅವರಲ್ಲಿರು ತಪ್ಪು ತಿಳುವಳಿಕೆಗಳನ್ನು ನಿವಾರಿಸಿ ಬುದ್ಧಿಜೀವಿಗಳು, ಸಮಾಜದ ಮುಖಂಡರು ತ ಕೃತಿಗಳ ಮೂಲಕ ಮೇಲ್ಪಂಕ್ತಿಯನ್ನು ಹಾಕಿಕೊಡಬೇಕು. ಯುವಕರಲ್ಲಿ ರಾಷ್ಟ್ರಭ

ಕ ಶ್ರಮಗಳ ಬಗ್ಗೆ ಶ್ರದ್ಧೆ ಬೆಳೆಸುವುದಕ್ಕಾಗಿ ರಾಷ್ಟ್ರೀಯ ಕಾರಗಳು ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದರೂ ಕೇವಲ ಕಾಟಾಚಾರಗಳಾಗಿವೆ. ಇತ್ತೀಚೆಗೆ ಗ್ರಾಮೀಣ ಪ್ರದೇಶ ಲ್ಲಿ ಕಾರ್ಮಿಕ ಸಾಮರ್ಥ್ಯದ ಬಗ್ಗೆ ಚರ್ಚೆಗೆ ಗ್ರಾಸವಾದ ಯವೆಂದರೆ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಡಿಯಲ್ಲಿ ಕುಂಠಿತವಾಗುತ್ತಿರುವ ಶ್ರಮ ಸಾಮರ್ಥ್ಯ. ನಮ್ಮ ೀಕ ವಿಚಾರಗೋಷ್ಠಿಗಳಲ್ಲಿ ಮತ್ತು ಹಳ್ಳಿಗಳ ಕಟ್ಟೆ ಚರ್ಚೆಗಳಲ್ಲಿ ವಾಗುವ ಅಂಶ ಗ್ರಾಮೀಣ ಜನ ಮೈಗಳ್ಳರಾಗಿದ್ದಾರೆ, ಪುಕ್ಕಟೆ ಿಯ, ದವಸ-ಧಾನ್ಯ ದೊರೆಯಲಿ ಎಂದು ಹೊಂಚು ುತ್ತಾರೆ ಎಂಬ ಅಪಾದನೆ ಸರ್ವೇಸಾಮಾನ್ಯವಾಗಿದೆ. ಈ ರವನ್ನು ಇಷ್ಟು ಹಗುರವಾಗಿ ಪರಿಗಣಿಸುವಂತಿಲ್ಲ. ಮಾಲಿಕರು, ಅಧಿಕಾರಶಾಹಿಗಳು ಕಿಂಚಿತ್ತೂ ದೈಹಿಕ ಶ್ರಮ ದೆ ಅಪಾರ ಆದಾಯ ಹಾಗೂ ಸಂಪತ್ತನ್ನು ಹೊಂದಿದ್ದನ್ನು ಧ್ಯಮಗಳು ಕಣ್ಣಿಗೆ ರಾಚುವಂತೆ ಬಿಂಬಿಸುತ್ತಿರುವಾಗ ಸಹಜ ಿಯೇ ನಿಷ್ಠೆಯಿಂದ ದುಡಿಯುವ ವ್ಯಕ್ತಿಯಲ್ಲೂ ಜಿಗುಪ್ಸೆ ಿಡುವುದು. ಇದರರ್ಥ, ಸಾಮಾನ್ಯ ಜನ ದೈಹಿಕ ದುಡಿಮೆ ಿದ ವಿಮುಖರಾಗುತ್ತಿರುವುದನ್ನು ಸಮರ್ಥಿಸುವುದಲ್ಲ. ಸಮಾಜದಲ್ಲಿ ಶೋಷಣೆ ನೆಗೊಂಡು ದುಡಿಮೆ ಹಾಗೂ ಆದಾಯಗಳಲ್ಲಿ ಸಮಾನತೆ ಮೂಡಿ ದುಡಿಮೆ ಗಿನ ತಾತ್ಸಾರ ಮನೋಭಾವನೆ ಬದಲಾಗಬೇಕು. ಅದೇ ವೇಳೆ, ದುಡಿಯುವ ರೂ ಕೂಡ ತಾವು ಶೋಷಣೆಗೊಳಗಾದಾಗ ಶೋಷಕರನ್ನು ದೂಷಿಸಿ, ಅವಕಾಶ ಗ ತಾವೂ ಶೋಷಕರಾಗುವ ಆತಂಕವೂ ಇದೆ. ಸಮಾಜದಲ್ಲಿ ದುಡಿಮೆಗೆ ಬೆಲೆ ರೆಯಬೇಕಾದರೆ ಸರ್ವ ಸಮಾನತೆ ಹಾಗೂ ಸಹಬಾಳ್ವೆ ಮೂಡಬೇಕು ಹಾಗೂ ಡಿಮೆ ಆನಂದದಾಯಕವಾಗಿರಬೇಕು. ಈ ನಿಟ್ಟಿನಲ್ಲಿ ನಮ್ಮ ಮಾನಸಿಕ ೀರಣೆಗಳು ಸಮಗ್ರವಾಗಿ ಬದಲಾದಾಗ ಮಾತ್ರ ಎಲ್ಲರೂ ದೈಹಿಕ ದುಡಿಮೆಗೆ ಂದಾಗುವ ಲಕ್ಷಣಗಳನ್ನು ಕಾಣಬಹುದು.

**ಮಠಾಧೀಶರು ರಾಜಕೀಯ ಹಸ್ತಕ್ಷೇಪ ಮಾಡದಿರಲು ಮಾಜಿ ಸಿ. ಎಂ. ಸಲಹೆ**
— ಸುದ್ದಿ



ಜ್ಯೋತಿಷಿಗಳು ರಾಜಕೀಯ ಹಸ್ತಕ್ಷೇಪ ಮಾಡದಿರುವಂತೆ... ನೀವು ಒಂದು ಹೇಳಿಕೆ ಕೊಡಿ ಸಾರ್...!

ದೈಹಿಕ ಶ್ರಮ ಸಾಮೂಹಿಕವಾದಾಗ ಅದೊಂದು ದೈಹಿಕ ಹಿಂಸೆಯಾಗದೆ, ಆಯಾಸವಾಗದೆ ಮನೋರಂಜನಾತ್ಮಕವಾದ ಉತ್ಪಾದಕ ಚಟುವಟಿಕೆಯಾಗುತ್ತದೆ. ಇಂತಹ ಸಾಮೂಹಿಕ ಕ್ರಿಯೆಗೆ ಅನುವು ಮಾಡಿಕೊಡುವ ನೀತಿ ನಿರೂಪಿಸಲು ಜನಪ್ರತಿನಿಧಿಗಳ ಮೇಲೆ ಒತ್ತಡ ತರಬೇಕು ಮತ್ತು ಅವುಗಳ ಅನುಷ್ಠಾನಕ್ಕೆ ಜಾಗ್ರತ ನಾಗರಿಕ ಪಡೆ ಸೃಷ್ಟಿಯಾಗಬೇಕು. ಪುರೋಗಾಮಿ ಬುದ್ಧಿಜೀವಿಗಳು ಮತ್ತು ಜವಾಬ್ದಾರಿ ಮಾಧ್ಯಮಗಳು ಜನರಲ್ಲಿ ಜಾಗೃತಿ ಮೂಡಿಸಬೇಕಾಗಿದೆ. ದೈಹಿಕ ಶ್ರಮಕ್ಕೆ ತಕ್ಕುದಾದ ಘನತೆ ಗೌರವಗಳನ್ನು ದೊರಕಿಸಿಕೊಡಬೇಕಾದುದು ನಾಗರಿಕ ಸಮಾಜದ ಜವಾಬ್ದಾರಿಯಾಗಿದೆ. ಕೆಲವೇ ಕೆಲವು ಚಾಲಾಕಿ ಜನರ ಮಾನಸಿಕ ವ್ಯವಹಾರಗಳು, ರಾಜಕೀಯ ಷಡ್ಯಂತ್ರ, ಆಡಳಿತಾತ್ಮಕ ಮೋಸ, ಅವಕಾಶವಾದಿ ವ್ಯಾಪಾರಿಗಳ ಆತ್ಮವಂಚನಾ ವಿಧಾನಗಳನ್ನು ಅನುಸರಿಸಿ ಅತೀ ಕಡಿಮೆ ದುಡಿಮೆಯ ಮೂಲಕ ಗರಿಷ್ಠ ಲಾಭಗಳಿಸುವ ಪ್ರಲೋಭನೆಗೆ ನಮ್ಮ ಯುವಕರು ಒಳಗಾಗುತ್ತಿರುವ ಇಂದಿನ ನಕಾರಾತ್ಮಕ ಬೆಳವಣಿಗೆ ದೀರ್ಘಕಾಲದಲ್ಲಿ ಮಾನವ ಸಮಾಜಕ್ಕೆ ಮಾರಕವಾಗಬಲ್ಲದು. ಈ ಸಮಾಜಘಾತುಕ ವ್ಯವಹಾರಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿ ಯುವಕರಿಗೆ ಸೂಕ್ತ ಮಾರ್ಗದರ್ಶನ ನೀಡಬೇಕಾಗಿದೆ. "ಶ್ರಮ ಏವ ಜಯತೇ" ನಿನಗೆ ಮಾತ್ರ, ನನಗಲ್ಲ ಎಂಬ ಧೋರಣೆ ಇರುವವರೆಗೂ ದುಡಿಯುವವನ ಮನದಲ್ಲಿ ದೈಹಿಕ ಶ್ರಮದ ಬಗ್ಗೆ ತಾತ್ಸಾರ ಮೂಡುವುದು ಸಹಜ. ಹಾಗಾದರೆ, ಬದಲಾವಣೆ ಎಲ್ಲಿಂದ ಆರಂಭವಾಗಬೇಕಾಗಿದೆ ?

ಡಾ॥ ರಾಜೇಂದ್ರ ಪೋದ್ದಾರ
ಸಹ ಪ್ರಾಧ್ಯಾಪಕರು (ಕೃಷಿ ಅರ್ಥಶಾಸ್ತ್ರ)
ಕೃಷಿ ಮಹಾವಿದ್ಯಾಲಯ, ವಿಜಾಪುರ

# ಗ್ರೀಷ್ಮದ ಸುಡುಬೆಂಕಿಯ ಹಾಡು

ಸಂಸಾರ ಬಳ್ಳಿಯ ಚಿಂತೆಯು ಚಿಗುರಿದೆ
ಜ್ವರ ಬಂತೆ ಗ್ರೀಷ್ಮದ ಕೊನೆಯಲ್ಲಿ। ಭೂಮಿಗೆ
ಬರ ಬಂತೆ ಹಗೆಗಳ ನಗೆಯಂತೆ !

ಎಲೆಯಿಲ್ಲ ನೆರಳಿಲ್ಲ ನೆಲೆಯಿಲ್ಲ ಹೂವಿಲ್ಲ
ಮಲ್ಲಿಗೆ ಬಳ್ಳಿಗೆ ಬಲವಿಲ್ಲ। ಕರೆದರೆ
ಹಾಲಿಲ್ಲ ಕಪಿಲೆಯ ಕರುವಿಗೆ.

ಕರುಗಳಾಡುವುದಿಲ್ಲ ಕೊರಳ ಕಿಂಕಿಣಿಯಿಲ್ಲ
ಭೂಮಿಯ ಜಲಬಿಂದು ಬರಿದಾಗಿ। ಬಯಲಲ್ಲಿ
ಕಾಗೆಯ ಕೂಗಿಗೆ ಲಯವಿಲ್ಲ.

ಮಳೆ ಮುನಿದು ನೆಲವೆಲ್ಲ ಬಾಯ್ತೆರೆದು ಬಿಸಿಲಿಗೆ
ಹಾಹಾಕಾರವೆ ಹಗಲಿರುಳು। ಶಿವಶಿವ
ತರತಮವಿಲ್ಲ ಬವಣೆಗೆ.

ಕಾಡೆಲ್ಲ ನಾಡಾಗಿ ರಸ್ತೆ ಮಹಲುಗಳಾಗಿ
ಪಾತಾಳದಾಳಕ್ಕೆ ಕನ್ನವ। ಕೊರೆದರು
ಕೊಳವೆಗಳೆಲ್ಲಿ? ನೀರೆಲ್ಲಿ ?

ಮೋಡದ ಮನೆಯಲ್ಲಿ ನೀರಿನ ಮದ್ದುಂಟು
ಏರಿದ ಜ್ವರಕೆ ಮಳೆ ಬರಲಿ। ಮಳೆರಾಯ
ಬಾರಯ್ಯ ಮಿಂಚಿನ ರಥವೇರಿ.

ವಸಂತ ಹೋಗಿದೆ, ಗ್ರೀಷ್ಮವು ಹೀಗಿದೆ,
ವರ್ಷದ ದಿನ ಮುಂದೆ;
ನೆಲ ಮುಗಿಲಾಟದ ಕೇಳಿಯ ಕೇಳಿರಿ :
ಚಕ್ರದ ಗತಿಯೊಂದೆ;
ಇಂದೆಂಬುದು ನಿನ್ನೆಯ ಮಗು
ನಾಳೆಯ ತಾಯ್ತಂದೆ !

'ಕಿರಣ'
ಕುತ್ಯಾಳ ನಾಗಪ್ಪ ಗೌಡ (ಕಿರಣ)
ಕಿರಣಕುಟೀರ, ಸುಳ್ಯ - ೫೭೪೨೩೯



ಪಿ. ಆರ್. ವಿಶ್ವನಾಥ್

# ವಿಶ್ವ ಹಿಂದು, ಇಂದು, ಮುಂದು

ಎಲ್ಲ ವೈಜ್ಞಾನಿಕ ಕ್ಷೇತ್ರಗಳಂತೆ ಕಳೆದ ದಶಕದಲ್ಲಿ ಖಗೋಳ ವಿಜ್ಞಾನದಲ್ಲೂ ಬಹಳ ಗತಿಯಾಗಿದ್ದರೂ ಈ ಲೇಖನದಲ್ಲಿ ನಾವು ಎರಡು ಮುಖ್ಯ ವಿಷಯಗಳ ಬಗ್ಗೆ ಮಾತ್ರ ಂದ್ರೀಕರಿಸೋಣ: (೧) ವಿಶ್ವ ಎಂದು ಹುಟ್ಟಿತು, ಅದರ ವಿಸ್ತೀರ್ಣವೇನು, ಅದರ ವಿಷ್ಯವೇನು ಎನ್ನುವ ಪ್ರಶ್ನೆಗಳಿಗೆ ಸಿಕ್ಕಿರುವ ಹೊಸ ಉತ್ತರಗಳು; (೨)ಈ ವಿಶ್ವದಲ್ಲಿ ನಮ್ಮಂತೆ ೀರೆಯ ಸಂಸ್ಕೃತಿಗಳು ಇವೆಯೇ ಎಂಬ ಪ್ರಶ್ನೆಯನ್ನು ಉತ್ತರಿಸಲು ನಮ್ಮ ಹಿತ್ತಲಿನಲ್ಲಿಯೇ ಂದರೆ ಸೂರ್ಯಮಂಡಲದ ಹತ್ತಿರವೇ ನಡೆಯುತ್ತಿರುವ ಸಂಶೋಧನೆಗಳು.

## ೧.ಅ) ವಿಶ್ವದ ವಿಸ್ತಾರ

೧೬ನೆಯ ಶತಮಾನದಲ್ಲಿ ಪೋಲೆಂಡಿನ ನಿಕೊಲಸ್ ಕೋಪರ್ನಿಕಸ್ ವಿಶ್ವದ (ಅಂದು ಳಿದಿದ್ದ) ಕೇಂದ್ರದಲ್ಲಿರುವುದು ಸೂರ್ಯನೇ ಹೊರತು ಭೂಮಿಯಲ್ಲ ಎಂದು ಮಂಡಿಸಿದಾಗ ನೇ ಹೆಚ್ಚು ಎಂದುಕೊಂಡಿದ್ದ ಮನುಷ್ಯಜಾತಿಯ ಹೆಮ್ಮೆ ಮತ್ತು ಗರ್ವಗಳಿಗೆ ಏಟುಬಿದ್ದಿತು. ಲವೇ ದಶಕಗಳ ನಂತರ (೧೬೧೦ರಲ್ಲಿ)ಬರೇ ಆಟದ ಸಾಮಾನಾಗಿದ್ದ ಟೆಲಿಸ್ಕೋಪನ್ನು ಟಲಿಯ ಗೆಲಿಲಿಯೊ ರಾತ್ರಿಯ ಆಕಾಶದತ್ತ ತಿರುಗಿಸಿದಾಗ ಕೋಪರ್ನಿಕಸ್‌ನ ಸಿದ್ಧಾಂತಕ್ಕೆ ಪರೋಕ್ಷವಾಗಿ ಸಾಕ್ಷಿ ಸಿಕ್ಕಿದ್ದೇ ಅಲ್ಲದೆ ಈ ಪ್ರಪಂಚದ ವೈವಿಧ್ಯವೂ ಕಾಣಲು ಸಿಕ್ಕಿತು. ಲಕ್ಷಾಂತರ ರೆಗಳನ್ನು ಒಳಗೊಂಡ ನಮ್ಮ ಆಕಾಶಗಂಗೆಯನ್ನು (ಇದನ್ನು ಗ್ರೀಕರು ಮಿಲ್ಕಿವೇ ಅಥವಾ ್ಯಲಕ್ಸಿ ಎಂದು ಕರೆದರು) ಮೊತ್ತಮೊದಲು ನೋಡಿದವನು ಗೆಲಿಲಿಯೊ. ಈ ಆಕಾಶಗಂಗೆಯ ಗ್ಗೆ ಸರಿಯಾದ ವಿವರಗಳು ಸಿಗಲು ೨೦ನೆಯ ಶತಮಾನದ ತನಕ ಕಾಯಬೇಕಾಯಿತು. ಇದರ ಸ್ತಾರ ತಿಳಿದು ನಾವು (ಸೂರ್ಯ) ಗ್ಯಾಲಕ್ಸಿಯ ಅಂಚಿನಲ್ಲಿದ್ದೇವೆ ಎನ್ನುವುದು ಅರಿವಾದಾಗ ನುಷ್ಯನಲ್ಲಿ ಉಳಿದುಕೊಂಡಿದ್ದ ಸಣ್ಣ ಪುಟ್ಟ ಹೆಮ್ಮೆಗಳೂ ಕಡಿಮೆಯಾದವು. ಸೂರ್ಯನಿಂದ ೂರಟ ಬೆಳಕು ಸೂರ್ಯಮಂಡಲದ ಅಂಚಿನ ಗ್ರಹವೆಂದು ಪರಿಗಣಿಸಲಾಗಿದ್ದ ಪ್ಲೂಟೋವನ್ನು ೀರಲು ೪ ಗಂಟೆಗಳಾದರೆ, ನಮ್ಮ ಗ್ಯಾಲಕ್ಸಿಯ ಮತ್ತೊಂದು ಅಂಚಿಗೆ ಹೋಗಲು ಸುಮಾರು ೪೦೦೦೦ ವರ್ಷಗಳನ್ನು ತೆಗೆದುಕೊಳ್ಳುತ್ತದೆ. ಅಂದರೆ ಊರಂಚಿನ ಚಿಕ್ಕ ಹಣತೆಯ ಮನೆ ಮ್ಮದು! ಆದರೆ ಈ ಊರೂ ವಿಶೇಷವೇನಲ್ಲ ಎಂದು ಗೊತ್ತಾಗಿದ್ದು ನಮ್ಮ ಗ್ಯಾಲಕ್ಸಿಯ ಮಾನ್ಯತೆಯ ಬಗ್ಗೆ ತಿಳಿದಾಗ!

ಟೆಲಿಸ್ಕೋಪ್‌ಗಳಲ್ಲಿ ಅನೇಕ ತಾರೆಗಳಲ್ಲದೆ ಅವುಗಳ ತರಹ ಬೆಳಕಿನ ಕೇಂದ್ರೀಕರಣವಿಲ್ಲದೆ ರಡಿಕೊಂಡಿರುವ ಜ್ಯೋತಿಗಳೂ ಕಂಡುಬಂದು ಅವುಗಳನ್ನು ನೀಹಾರಿಕೆಗಳೆಂದು (ನೆಬ್ಯುಲ) ರೆದರು. ಉಪಕರಣಗಳು ದೊಡ್ಡದಾಗುತ್ತ ಹೋದರೂ ಈ ನೀಹಾರಿಕೆಗಳು ರಹಸ್ಯವಾಗಿಯೇ ಳಿದವು. ಪ್ರಖ್ಯಾತ ತತ್ವಶಾಸ್ತ್ರಜ್ಞ ಕಾಂತ್ ರ ತರಹ ಕೆಲವರು ಈ ನೀಹಾರಿಕೆಗಳು ದೂರವಿರುವ

೧೬ನೆಯ ಶತಮಾನದಲ್ಲಿ ಪೋಲೆಂಡಿನ ನಿಕೊಲಸ್ ಕೋಪರ್ನಿಕಸ್ ವಿಶ್ವದ (ಅಂದು ತಿಳಿದಿದ್ದ) ಕೇಂದ್ರದಲ್ಲಿರುವುದು ಸೂರ್ಯನೇ ಹೊರತು ಭೂಮಿಯಲ್ಲ ಎಂದು ಮಂಡಿಸಿದಾಗ ತಾನೇ ಹೆಚ್ಚು ಎಂದುಕೊಂಡಿದ್ದ ಮನುಷ್ಯಜಾತಿಯ ಹೆಮ್ಮೆ ಮತ್ತು ಗರ್ವಗಳಿಗೆ ಏಟುಬಿದ್ದಿತು. ಕೆಲವೇ ದಶಕಗಳ ನಂತರ (೧೬೧೦ರಲ್ಲಿ)ಬರೇ ಆಟದ ಸಾಮಾನಾಗಿದ್ದ ಟೆಲಿಸ್ಕೋಪನ್ನು ಇಟಲಿಯ ಗೆಲಿಲಿಯೊ ರಾತ್ರಿಯ ಆಕಾಶದತ್ತ ತಿರುಗಿಸಿದಾಗ ಕೋಪರ್ನಿಕಸ್‌ನ ಸಿದ್ಧಾಂತಕ್ಕೆ ಅಪರೋಕ್ಷವಾಗಿ ಸಾಕ್ಷಿ ಸಿಕ್ಕಿದ್ದೇ ಅಲ್ಲದೆ ಈ ಪ್ರಪಂಚದ ವೈವಿಧ್ಯವೂ ಕಾಣಲು ಸಿಕ್ಕಿತು. ಲಕ್ಷಾಂತರ ತಾರೆಗಳನ್ನು ಒಳಗೊಂಡ ನಮ್ಮ ಆಕಾಶಗಂಗೆಯನ್ನು (ಇದನ್ನು ಗ್ರೀಕರು ಮಿಲ್ಕಿ ವೇ ಅಥವಾ ಗ್ಯಾಲಕ್ಸಿ ಎಂದು ಕರೆದರು) ಮೊತ್ತಮೊದಲು ನೋಡಿದವನು ಗೆಲಿಲಿಯೊ.

ೇರೆಯದೇ ವಿಶ್ವಗಳು ಎಂದು ವಾದಿಸಿದರೆ ಮತ್ತೆ ಕೆಲವರು ಅವು ಹತ್ತಿರವೇ ಇರುವ ್ಯೋತಿಗಳಿರಬೇಕು ಎಂದು ಮಂಡಿಸಿದರು. ೧೯೨೦ನೆಯ ಇಸವಿಯ ಏಪ್ರಿಲ್ ತಿಂಗಳ ೨೬ನೆಯ ಾರೀಖಿನಂದು ಅಮೆರಿಕಾ ಸಂಯುಕ್ತ ಸಂಸ್ಥಾನದ ರಾಜಧಾನಿಯಾದ ವಾಷಿಂಗ್‌ಟನ್ ನಗರದಲ್ಲಿ ಡೆದ ಒಂದು ಚರ್ಚೆ ಖಗೋಳ ವಿಜ್ಞಾನದ ಚರಿತ್ರೆಯಲ್ಲಿ ಬಹಳ ಖ್ಯಾತಿ ಗಳಿಸಿದೆ. ನೀಹಾರಿಕೆಗಳ ಜ ಸ್ವರೂಪದ ಬಗ್ಗೆಯ ಚರ್ಚೆಯನ್ನು ಆಲ್ಬರ್ಟ್ ಐನ್‌ಸ್ಟೈನರೂ ಸೇರಿದಂತೆ ಅನೇಕ ವಿಜ್ಞಾನಿಗಳು ೀಕ್ಷಿಸಿದರು. ಎಷ್ಟೇ ವಾದವಿವಾದಗಳಾದರೂ ವಿಜ್ಞಾನಿ ಸಮುದಾಯ ಯಾವ ನಿರ್ಣಯಕ್ಕೂ ಬರಲಿಲ್ಲ. ುಂದಿನ ದಶಕದಲ್ಲಿ ಎಡ್ವಿನ್ ಹಬಲ್‌ರ ಅಮೋಘ ವೀಕ್ಷಣೆಗಳು ಈ ನೀಹಾರಿಕೆಗಳು ನಮ್ಮದೇ ್ಯಾಲಕ್ಸಿಯ ತರಹ ಬೇರೆಯ ಗ್ಯಾಲಕ್ಸಿಗಳೆಂದೂ ಮತ್ತು ಅವು ಬಹು ದೂರದಲ್ಲಿವೆಯೆಂದೂ ೋಸಿದವು. ಈ ಜಗತ್ತು ನಮ್ಮ ಗ್ಯಾಲಕ್ಸಿಗೆ ಮಾತ್ರ ಸೀಮಿತವಲ್ಲ ಎಂಬುದು ಹಬಲ್‌ರ ಮೊದಲ ೋಧನೆ. ಅದಕ್ಕಿಂತ ಹೆಚ್ಚು ಮಹತ್ವವಾದದ್ದು ಈ ಪ್ರಪಂಚ ವಿಸ್ತಾರವಾಗುತ್ತಲೇ ಹೋಗುತ್ತಿದೆ ಎಂಬ ವರ ಎರಡನೆಯ ಶೋಧನೆ.

**೧.ಆ) ವಿಶ್ವದ ಶಾಖ**

ಈ ಸಂಶೋಧನೆಗಳ ಜೊತೆಯೇ ವಿಶ್ವದ ಹುಟ್ಟಿನ ಬಗ್ಗೆ ಮಹತ್ವದ ಸಿದ್ಧಾಂತವೂ ಜನ್ಮ ತಾಳಿತು. ಂದೆ ಎಂದೋ ಒಂದು ಕ್ಷಣದಲ್ಲಿ ಮಹಾ ಆಸ್ಫೋಟನೆ (ಬಿಗ್ ಬ್ಯಾಂಗ್)ಯೊಂದರಿಂದ ವಿಶ್ವದ ನ್ಮವಾಯಿತು ಎಂದು ಈ ಸಿದ್ಧಾಂತ ಮಂಡಿಸಿತು. ಈ ವಿಷಯದ ಬಗ್ಗೆ ಬೇರೆಯ ಸಿದ್ಧಾಂತಗಳು ಉದಾಹರಣೆಗೆ, ಹಾಯಲ್, ನಾರ್ಲೀಕರ್ ಮತ್ತು ಇತರರ ಎಂದೂ ಒಂದೇ ತರಹ ಇರುವ ವಿಶ್ವ ಸ್ಟೆಡಿ ಸ್ಟೇಟ್)] ಇದ್ದರೂ ಬಿಗ್ ಬ್ಯಾಂಗ್ ಸಿದ್ಧಾಂತಕ್ಕೆ ಪ್ರಯೋಗಗಳಿಂದ ಸಾಕ್ಷಿಗಳು ಸಿಗುತ್ತಾ ಂದವು. ಅವುಗಳಲ್ಲಿ ಮುಖ್ಯವಾದದ್ದು ಪ್ರಪಂಚದ ಶಾಖದ ಸಂಶೋಧನೆಗಳು.

೧೯೬೫ರಲ್ಲಿ ಪ್ರಪಂಚದ ಶಾಖವನ್ನು ಸುಮಾರು ೩ ಡಿಗ್ರಿಗಳು (ಇದು ಬಹಳ ಶೀತಲವಾದ್ದರಿಂದ ೆಲ್ವಿನ್ ಅಳತೆಯನ್ನು ಉಪಯೋಗಿಸುತ್ತಾರೆ. ಪರಿಚಿತ ಸೆಲ್ಸಿಯಸ್ ಅಳತೆಯಲ್ಲಿ ಇದು ಸುಮಾರು – ೭೦ ಡಿಗ್ರಿಗಳು) ಎಂದು ಪ್ರಯೋಗಗಳು ಕಂಡುಹಿಡಿದಾಗ ಬಿಗ್ ಬ್ಯಾಂಗ್ ಸಿದ್ಧಾಂತವನ್ನು ಎಲ್ಲರೂ ಪ್ಪಿಕೊಳ್ಳಲು ಪ್ರಾರಂಭಿಸಿದ್ದರು (ಈ ಸಂಶೋಧನೆಗೆ ನೊಬೆಲ್ ಬಹುಮಾನ ಬಂದಿತು). ಒಳ ಂತರಿಕ್ಷದಲ್ಲಿ ಇರುವ ಶಾಖ ಇದು. ಆ ಮಹಾ ಆಸ್ಫೋಟನೆಯ ಬಿಲಿಯ ಡಿಗ್ರಿ ಶಾಖದಲ್ಲಿ ಹುಟ್ಟಿದ ಶ್ವ ನಿಧಾನವಾಗಿ ತಣ್ಣಗಾಗುತ್ತ ಈಗ ಈ ಶಾಖವನ್ನು ಹೊಂದಿರುತ್ತದೆ ಎಂದು ಸಿದ್ಧಾಂತಗಳು ೧೯೪೦ರ ದಶಕದಲ್ಲಿ ಮಂಡಿಸಿದ್ದನ್ನು ಈ ಪ್ರಯೋಗಗಳು ಕಂಡುಹಿಡಿದವು. (ಈ ಪ್ರಯೋಗಗಳು ಂಡುಹಿಡಿದ ಶಾಖ ಯಾವ ಸ್ಥಳೀಯ ಜ್ಯೋತಿಗಳೂ ಇರದ ಕಡೆ ಇರುವಂತಹದ್ದು.) ಈ ಶಾಖದ ಅಳತೆ ೨.೭೨೫ ಡಿಗ್ರಿಗಳಿದ್ದು ಮೈಕ್ರೊವೇವ್ ಅಲೆಗಳ ರೂಪದಲ್ಲಿ ಹರಡಿರುವುದನ್ನು ಉಪಕರಣಗಳು ಕಂಡುಹಿಡಿದಿದ್ದವು (ಮೈಕ್ರೊವೇವ್‌ಗಳಿಗೆ ರೇಡಿಯೊ ಅಲೆಗಳಿಗಿಂತ ಕಡಿಮೆ ರಂಗಾಂತರ). ನಮ್ಮ ಕಣ್ಣುಗಳಿಗೆ ಈ ಅಲೆಗಳನ್ನು ನೋಡುವ ಸಾಧ್ಯತೆ ಇದ್ದಿದ್ದರೆ ಎಲ್ಲೆಲ್ಲೂ ಈ ಅಲೆಗಳು ಕಾಣಬರುತ್ತಿದ್ದು ಪ್ರತಿಯೊಂದು ಜಾಗದಲ್ಲೂ ಒಂದೇ 'ಪ್ರಕಾಶ' ಇರುತ್ತಿತ್ತು!

ಆದರೂ ಅನೇಕ ಪ್ರಶ್ನೆಗಳು ಇತ್ಯರ್ಥವಾಗದೇ ಇದ್ದವು. ಆ ಮಹಾಸ್ಫೋಟನೆ ಯಾವಾಗ ನಡೆಯಿತು ಎಂಬ ಪ್ರಶ್ನೆಗೆ ನಿಖರವಾದ ಉತ್ತರವಿರಲಿಲ್ಲ. ಎರಡನೆಯ ಪ್ರಶ್ನೆ ವಿಶ್ವದ ಭವಿಷ್ಯ : ವಿಶ್ವ ಹೀಗೆಯೇ ವಿಸ್ತಾರವಾಗುತ್ತ ಹೋಗುತ್ತದೋ ಅಥವಾ ಎಂದೋ ಒಂದು ದಿನ ಕುಗ್ಗಲು ಪ್ರಾರಂಭಿಸುತ್ತದೋ? ಈ ಪ್ರಶ್ನೆಗಳಿಗೆ ೫ ವರ್ಷಗಳ ಹಿಂದೆಯೂ ಸರಿಯಾದ ಉತ್ತರವಿರಲಿಲ್ಲ.



**(೧.ಇ) ವಿಶ್ವ ಎಂದು ಹುಟ್ಟಿತು ?**

ನಮ್ಮ ಪುರಾಣಗಳ ಪ್ರಕಾರ ಪ್ರಪಂಚ ಅತಿ ಹಳೆಯದ್ದು (ಸುಮಾರು ೫ ಬಿಲಿಯ ವರ್ಷಗಳು). ಆದರೆ ಪಾಶ್ಚಿಮಾತ್ಯರಲ್ಲಿ ವಿಶ್ವ ಅತಿ ಈಚಿನದು (೫೦೦೦ ವರ್ಷಗಳಿಗಿಂತ ಕಡಿಮೆ). ವಿಜ್ಞಾನ ಬೆಳೆಯುವ ವರೆವಿಗೆ ಮಾನವ ಈ ಊಹೆಗಳನ್ನೇ ನಂಬಿಕೊಂಡಿದ್ದ. ೧೯ನೆಯ ಶತಮಾನದ ಆದಿಯಲ್ಲಿ ಭೂಗರ್ಭಶಾಸ್ತ್ರದ ಸಂಶೋಧನೆಗಳಿಂದ ಈ ಭೂಮಿಯ ವಯಸ್ಸು ಕಡೆಯ ಪಕ್ಷ ಲಕ್ಷ ವರ್ಷಗಳಿರಬೇಕೆಂದು ತಿಳಿಯಿತು. ಇದರ ನಂತರ ಡಾರ್ವಿನ್ ತಮ್ಮ ವಿಕಾಸವಾದ ಸಾಧ್ಯವಾಗಬೇಕಾದರೆ ಭೂಮಿಯ ವಯಸ್ಸು ಕಡೆಯಪಕ್ಷ ೭ ಕೋಟಿ ವರ್ಷಗಳೆಂದು ಹೇಳಿದರು. ಆದರೆ ಭೌತಶಾಸ್ತ್ರದ ಪರಮಾಣುಗಳ ಅಧ್ಯಯನದಿಂದ ಸರಿಯಾದ ಉತ್ತರ ೨೦ನೆಯ ಶತಮಾನದ ಮೊದಲ ದಶಕದಲ್ಲಿ ಬಂದಿದ್ದಿತು. ರೇಡಿಯೊ ವಿಕಿರಣದ ಪ್ರಯೋಗ ಗಳಿಂದ ಭೂಮಿಯ ವಯಸ್ಸು ಸುಮಾರು ನಾಲ್ಕೂವರೆ ಬಿಲಿಯ (೪೫ ಕೋಟಿ) ವರ್ಷಗಳೆಂದು ತಿಳಿಯಿತು.

ಆದರ ಖಗೋಳವಿಜ್ಞಾನದಲ್ಲಿ ಭೂಮಿಯ ಬಗ್ಗೆ ಮಾತ್ರವಲ್ಲದೆ ಇಡೀ ವಿಶ್ವದ ವಯಸ್ಸಿನ ಬಗ್ಗೆ ಮಾಹಿತಿ ದೊರಕಬೇಕಲ್ಲವೆ? ಈ ಪ್ರಯತ್ನ ಮೊದಲಿಂದಲೂ ನಡೆಯುತ್ತಿದ್ದು, ಅತಿ ಪುರಾತನ ನಕ್ಷತ್ರ ('ಗ್ಲಾಬ್ಯುಲರ್ ಕ್ಲಸ್ಟರ್' ಎಂಬ ತಾರೆಗಳ ಗುಂಪು)ಗಳ ಬಗ್ಗೆಯ ಅಧ್ಯಯನ ಪ್ರಪಂಚದ ವಯಸ್ಸು ಸುಮಾರು ೧೧ರಿಂದ ೧೮ ಬಿಲಿಯ ವರ್ಷಗಳಿರಬಹುದೆಂದು ತಿಳಿಸಿತು. ಜಗತ್ತು ವಿಸ್ತಾರವಾಗುತ್ತಿದೆ ಎಂದು ಹಬಲ್ ಕಂಡುಹಿಡಿದಿದ್ದರಲ್ಲವೇ? ಈ ವಿಸ್ತಾರದ ಅಳತೆಯಿಂದಲೂ ವಿಶ್ವದ ವಯಸ್ಸಿನ ಬಗ್ಗೆ ಮಾಹಿತಿ ಸಿಕ್ಕಿತು (೯ರಿಂದ ೧೮ ಬಿಲಿಯ ವರ್ಷಗಳು). ಆದರೆ ಈ ವಿಧಾನಗಳಲ್ಲಿ ಸಾಧ್ಯತೆಗಳು ಹೆಚ್ಚಿರುವುದರಿಂದ (ಅಂದರೆ ಹೆಚ್ಚು ಅನಿಶ್ಚಿತತೆ) ನಿಖರವಾಗಿ ವಯಸ್ಸನ್ನು ಕಂಡುಹಿಡಿಯುವ ಬೇರೆ ಬೇರೆ ವಿಧಾನಗಳು ಬೇಕಾದವು.

ಅತ್ಯಂತ ನಿಖರ ಪ್ರಯೋಗಗಳಿಂದ ವಿಶ್ವದ ವಯಸ್ಸನ್ನು ಕಂಡುಹಿಡಿದಿರುವುದು ಖಗೋಳ ವಿಜ್ಞಾನದಲ್ಲಿ ಕಳೆದ ಕೆಲವು ವರ್ಷಗಳಲ್ಲಿನ ಬಹು ಮುಖ್ಯ ಸಂಶೋಧನೆ. ಕೆದಕಿ ಕೆದಕಿ ನೋಡುವುದು ವಿಜ್ಞಾನದ ರೀತಿಯಾದ್ದರಿಂದ ವಿಶ್ವದ ಶಾಖದಲ್ಲೂ ಅಲ್ಪಸ್ವಲ್ಪ ವ್ಯತ್ಯಾಸಗಳಿರುತ್ತವೋ ಎಂಬುದನ್ನು ಕಂಡುಹಿಡಿಯಲು ಹೊಸ ಪ್ರಯೋಗಗಳು ಪ್ರಾರಂಭವಾದವು. ಈ ಶಾಖ ಎಲ್ಲ ದಿಕ್ಕುಗಳಲ್ಲೂ ಒಂದೇ ಇರದಿದ್ದಲ್ಲಿ ಅವು ಬಹು ಹಿಂದಿನ ಜಗತ್ತಿನಲ್ಲಿ ಅಲ್ಲಿ ಇಲ್ಲಿ ಇದ್ದ ದ್ರವ್ಯರಾಶಿಯ ಬಗ್ಗೆ ಮಾಹಿತಿ ಕೊಡುತ್ತವೆ. ಇದನ್ನು ಸಂಶೋಧಿಸಲು ಉಪಕರಣಗಳನ್ನು ಕೋಬೆ (COBE) ಎನ್ನುವ ಸ್ಯಾಟಲೈಟಿನಲ್ಲಿಟ್ಟು ಅಂತರಿಕ್ಷದಲ್ಲಿ ಇಡಲಾಯಿತು. ಇದು ಎರಡು ವ್ಯತಿರಿಕ್ತ ದಿಕ್ಕುಗಳಲ್ಲಿನ ಶಾಖದ ವ್ಯತ್ಯಾಸವನ್ನು ಕಂಡುಹಿಡಿಯುವ ಉಪಕರಣ. ಈ ವ್ಯತ್ಯಾಸವು ಶೂನ್ಯವಲ್ಲ ಎಂದು ತೋರಿಸಿದ್ದಲ್ಲದೆ ಅದರ ಮೌಲ್ಯ ಬಹಳ ಕಡಿಮೆ ಎಂದು (ಲಕ್ಷ ಭಾಗದಲ್ಲಿ ಒಂದರಷ್ಟು ವ್ಯತ್ಯಾಸ) ತೋರಿಸಿತು. ಈ ಫಲಿತಾಂಶಗಳು ವಿಶ್ವ ಸೃಷ್ಟಿ ಶಾಸ್ತ್ರದ ಮೊದಲ ನಿಖರ ಪ್ರಯೋಗ ಎಂಬ ಹೊಗಳಿಕೆ ಸಿಕ್ಕಿ ಅದರ ಸಂಶೋಧಕರಿಗೆ ೨೦೦೬ರ ನೊಬೆಲ್ ಬಹುಮಾನವೂ ಬಂದಿತು.

ಆದರೆ ಇದಕ್ಕಿಂತ ಹೆಚ್ಚು ನಿರ್ದಿಷ್ಟತೆ ಬೇಕಾಗಿದ್ದರಿಂದ ಮತ್ತೂ ಒಳ್ಳೆಯ ಉಪಕರಣಗಳನ್ನಿಟ್ಟು ಸಂಶೋಧನೆಗಳನ್ನು ನಡೆಸಲಾಯಿತು. ಕಳೆದ ೨ ವರ್ಷಗಳಲ್ಲಿ ಡಬ್ಲ್ಯುಮ್ಯಾಪ್ ಎಂಬ ಹೆಸರಿನ ಈ ಪ್ರಯೋಗ ಈ ಶಾಖದ ಬಗ್ಗೆ ಮತ್ತೂ ನಿಖರ ಮಾಹಿತಿಗಳನ್ನು ಕೊಟ್ಟಿದೆ. ಇದರಿಂದ ಜಗತ್ತಿನ ವಯಸ್ಸು ೧೩.೭ ಬಿಲಿಯ ವರ್ಷಗಳು ಎಂದು ತಿಳಿದು ಬಂದಿದೆ. ಇದರ ನಿರ್ದಿಷ್ಟತೆಯು ಅಥವಾ ಅನಿಶ್ಚಿತತೆಯು (.೫ ಬಿಲಿಯ

ವರ್ಷಗಳು ಮಾತ್ರ) ಮೌಲ್ಯ ಈ ಪ್ರಯೋಗದ ಹೆಗ್ಗಳಿಕೆಯನ್ನು ತೋರಿಸುತ್ತದೆ. ಅಂದರೆ ನಮ್ಮ ಜಗತ್ತಿನ ವಯಸ್ಸು ೧೩.೨ ರಿಂದ ೧೪.೨ ಬಿಲಿಯ ವರ್ಷಗಳು.

ಪ್ರಪಂಚದ ಈ ೧೩ ಬಿಲಿಯ ವರ್ಷಗಳನ್ನು ನಮ್ಮ ಒಂದು ವರ್ಷಕ್ಕೆ ಅಳವಡಿಸಿ ಕೊಂಡಾಗ ಜೀವನದ ಮತ್ತು ಮಾನವನ ಆಗಮನ ಎಷ್ಟು ಇತ್ತೀಚೆಗೆ ಎಂದು ತಿಳಿಯುತ್ತದೆ :

೧) ಜನವರಿ ೧, ಮಧ್ಯ ರಾತ್ರಿ – ಮಹಾ ಆಸ್ಫೋಟನೆ
೨) ಜನವರಿ ೮ – ಮೊದಲ ನಕ್ಷತ್ರಗಳು
೩) ಸೆಪ್ಟೆಂಬರ್ ೧ – ಸೂರ್ಯನ ಜನ್ಮ
೪) ಸೆಪ್ಟೆಂಬರ್ ೧೧ – ಭೂಮಿಯ ಹುಟ್ಟು
೫) ಡಿಸೆಂಬರ್ ೧೯ – ಜೀವದ ಪ್ರಾರಂಭ
೬) ಡಿಸೆಂಬರ್ ೩೦ – ಡೈನೊಸಾರ್‌ಗಳ ನಿರ್ನಾಮ
೭) ಡಿಸೆಂಬರ್ ೩೧ ರಾತ್ರಿ ೧೧.೩೯ – ಮೊದಲ ಮನುಷ್ಯ
೮) ಜನವರಿ ೧ – ಇಂದು
೯) ಮೇ ೨ – ಸೂರ್ಯ ಉಬ್ಬಿ ಭೂಮಿಯ ಕೊನೆ
೧೦) ~ ೭೦೦೦ ವರ್ಷಗಳ ನಂತರ – ಗ್ಯಾಲಕ್ಸಿ, ನಕ್ಷತ್ರಗಳ ಕೊನೆ

**(೧.ಈ) ವಿಶ್ವದ ಭವಿಷ್ಯ (ಅದೃಶ್ಯ ಶಕ್ತಿ)**

ಜಗತ್ತಿನ ವಿಸ್ತಾರ ಒಂದೇ ವೇಗದಲ್ಲಿ ಆಗುತ್ತಿಲ್ಲ. ಸಮಯವಾಗುತ್ತ ಹೆಚ್ಚು ಹೆಚ್ಚು ವೇಗದಿಂದ ಜಗತ್ತು ವಿಸ್ತಾರವಾಗುತ್ತಿದೆ ಎಂದು ಈ ಡಬ್ಲ್ಯೂಮ್ಯಾಪ್ ಪ್ರಯೋಗ ಮತ್ತು ಕಳೆದ ಕೆಲವು ವರ್ಷಗಳ ಇತರ ಸಂಶೋಧನೆಗಳಿಂದ ತಿಳಿದು ಬಂದಿದೆ. ಇದರ ಅರ್ಥವನ್ನು ನಾವು ಊರುಗಳ ಬೆಳವಣಿಗೆಗಳನ್ನು ಹೋಲಿಸಿ ಪ್ರಾಯಶಃ ತಿಳಿಯಬಹುದು. ಹಳೆಯ ಸೆನ್ಸಸ್‌ಗಳ ಪ್ರಕಾರ ಪ್ರತಿ ದಶಕಕ್ಕೂ ಒಂದು ಊರಿನಲ್ಲಿ ೧೦ ಲಕ್ಷ ಜನ ಹೆಚ್ಚಾಗಬೇಕು ಎಂದು ನಿರೀಕ್ಷಿಸಲಾಗಿತ್ತು ಎಂದುಕೊಳ್ಳೋಣ. ಆದರೆ ಇತ್ತೀಚಿನ ಮಾಹಿತಿಗಳ ಪ್ರಕಾರ ಅದರ ಬೆಳವಣಿಗೆಗೆ ಒಂದು ದಶಕದಲ್ಲಿ ೧೦ ಲಕ್ಷ, ಮುಂದಿನ ದಶಕದಲ್ಲಿ ೧೫, ಅದರ ಮುಂದಿನ ದಶಕದಲ್ಲಿ ೨೦ – ಈ ರೀತಿ ಜನಸಂಖ್ಯೆ ಹೆಚ್ಚಾಗುತ್ತಿದೆ ಎಂದು ತಿಳಿಯಿತು. ಇದೇ ರೀತಿಯಲ್ಲಿ ನಮ್ಮ ಜಗತ್ತಿನ ಸೀಮೆಯೂ ವಿಸ್ತಾರವಾಗುತ್ತಿದೆ. ಯಾವುದೋ ನಮಗೆ (ಈಗ) ತಿಳಿಯದಿರುವ ಶಕ್ತಿ ಜಗತ್ತಿನ ವಿಸ್ತಾರವನ್ನು ಹೆಚ್ಚಿಸುತ್ತ ಹೋಗುತ್ತಿದೆ. ಇದಕ್ಕೆ ಡಾರ್ಕ್ ಎನರ್ಜಿ ಎಂಬ ಹೆಸರು. ಈ ಅದೃಶ್ಯ ಶಕ್ತಿ ಗ್ಯಾಲಕ್ಸಿಗಳನ್ನು, ತಾರೆಗಳನ್ನು ಹೊರನೂಕುತ್ತಾ ಜಗತ್ತಿನ ಸೀಮೆ[illegible] ಹೆಚ್ಚು ಮಾಡುತ್ತಿದೆ.

ನಮಗೆ ಕಾಣಿಸುವ ವಿಶ್ವದ ತೂಕ (ಅಂದರೆ ತಾರೆಗಳು, ಗ್ಯಾಲಕ್ಸಿಗಳು [illegible] ಜ್ಯೋತಿಗಳ ತೂಕವನ್ನು ಸೇರಿಸಿದರೆ ಬರುವ ತೂಕ) ನಮ್ಮ ಜಗತ್ತಿನ ನಿಜ ತೂಕ[illegible] ಬಹಳ ಕಡಿಮೆ ಎಂದು ಸುಮಾರು ೪೦ ವರ್ಷಗಳ ಹಿಂದೆಯೇ ಪ್ರಯೋಗ[illegible] ತೋರಿಸಲು ಪ್ರಾರಂಭವಾಗಿದ್ದಿತು. ನಮಗೆ ಕಂಡುಬರುವ ವಿಶ್ವದ ತೂಕ ನಿಜತೂ[illegible] ಶೇಕಡ ೫-೧೦ ಮಾತ್ರ ಎಂದು ತಿಳಿದು ಈ ವ್ಯತ್ಯಾಸಕ್ಕೆ ನಮಗೆ ಪ್ರಯೋಗ[illegible] ಕಾಣದ ಯಾವುದೋ ಕಣಗಳು ಜವಾಬ್ದಾರಿ ಇರಬೇಕು ಎಂಬ ಅಭಿಪ್ರಾಯ ಬೆಳೆ[illegible] ಅವು ನಿಜವಾಗಿಯೂ ಏನು ಎಂದು ಇಂದೂ ತಿಳಿದಿಲ್ಲ. ಆ ಅದೃಶ್ಯ ತೂಕಕ್ಕೆ ಡಾ[illegible] ಮ್ಯಾಟರ್ ಎಂದು ಹೆಸರಿತ್ತಿದ್ದರು. ಆದರೆ ಅದು ಏನು ಎಂದು ತಿಳಿಯುವ ಮೊ[illegible] ಈ ಅದೃಶ್ಯ ಶಕ್ತಿಯ ಪರಿಕಲ್ಪನೆ ಬಂದಿದೆ. ಐನ್‌ಸ್ಟೈನ್‌ರ ಪ್ರಖ್ಯಾತ ಸೂತ್ರದ ಪ್ರ[illegible] ದ್ರವ್ಯರಾಶಿ ಮತ್ತು ಶಕ್ತಿ ಒಂದೇ. ಆದ್ದರಿಂದ ಪ್ರಪಂಚದ ಒಟ್ಟು ಶಕ್ತಿ/ತೂಕದ ಮುಕ್[illegible] ಭಾಗ ಅದೃಶ್ಯ ಶಕ್ತಿಯಿಂದಲೂ, ಶೇಕಡ ೨೦ ಅದೃಶ್ಯ ತೂಕದಿಂದಲೂ, [illegible] (ಬಹು ಸ್ವಲ್ಪ) ಭಾಗ ತಾರೆ, ಗ್ಯಾಲಕ್ಸಿಗಳಿಂದಲೂ ಬರುತ್ತದೆ ಎಂದು ಇಂದಿನ ಚಿಂ[illegible]

ವಿಶ್ವದ ಭವಿಷ್ಯದಲ್ಲಿ ಏನಿರಬಹುದು ಎಂಬುದಕ್ಕೂ ಈ ಅದೃಶ್ಯ ಶಕ್ತಿಯ ಸಂ[illegible] ಧನೆಗಳಿಂದ ಉತ್ತರ ಸಿಗುತ್ತಿದೆ. ಈ ಶಕ್ತಿಯಿಂದ ಎಲ್ಲವೂ ದೂರ ದೂರ ಹೋಗು[illegible] ವುದರಿಂದ ನಮಗೆ ಇಂದು ಕಾಣುತ್ತಿರುವ ದೂರದ ಗ್ಯಾಲಕ್ಸಿಗಳಾಗಲೀ, [illegible] ಗಳಾಗಲೀ ಸುಮಾರು ಸಮಯದ ನಂತರ ಕಾಣುವುದಿಲ್ಲ. ಅದಲ್ಲದೆ ಈ ವಿಕರ್ಷಣಾ [illegible] ಗುರುತ್ವಾಕರ್ಷಣೆ ಒಟ್ಟುಗೂಡಿಸಿಟ್ಟ ದ್ರವ್ಯರಾಶಿಗಳನ್ನು ಬೇರೆ ಬೇರೆ ಮಾಡುತ[illegible] ಹೀಗೆಯೇ ಹೋಗುತ್ತಾ ಅಣುವಿನ ಕೇಂದ್ರದಲ್ಲಿರುವ ಪರಮಾಣು ಮತ್ತು ಅ[illegible] ಸುತ್ತಿನ ಎಲೆಕ್ಟ್ರಾನ್‌ಗಳನ್ನು ಬೇರೆ ಬೇರೆ ಮಾಡಿ ಅಣುಗಳನ್ನೆಲ್ಲಾ ಒ[illegible] ಹಾಕಿಬಿಡುತ್ತದೆ. ಆದ್ದರಿಂದ ಕಡೆಗೆ ಉಳಿಯುವುದು ಬರೇ ಸ್ವತಂತ್ರ ಕಣಗ[illegible] ವಿಶ್ವದಲ್ಲಿ ಬೇರೆ ಬೇರೆ ಇರುವ ಕೋಟಿಗಟ್ಟಲೆ ಕಣಗಳು ಅಲ್ಲಿ ಇಲ್ಲಿ ಸ್ವಚ್ಛಂದವ[illegible] ಚಲಿಸುತ್ತಿರುತ್ತವೆ! ಇದು ಭವಿಷ್ಯವಿಲ್ಲದ ಶೀತಲ ವಿಶ್ವ! (ಇದೆಲ್ಲಾ ಆಗ[illegible] ಮುಂಚೆಯೇ ನಮ್ಮ ಸೂರ್ಯ ಬೆಳೆದು ಬೆಳೆದು ಆ ಶಾಖ ಭೂಮಿಯ[illegible] ಒಳಗೊಂಡಂತೆ ಎಲ್ಲ ಗ್ರಹಗಳನ್ನೂ ಸುಟ್ಟುಹಾಕಿಬಿಟ್ಟಿರುತ್ತದೆ.)


With best compliments from



RAGHU BOOK STALL

Distributors for Navneet Children's Books & Cello Pens,
Text Books, School Books & Stationeries

Door No. 198, Ashoka Road, Mysore - 570 001
Phone Nos: 2565417, 2436096, 9448056542



ಗ್ಯಾಲಕ್ಸಿಗಳ ವಿವಿಧ ಆಕಾರಗಳು. ಹಿಂದಿನವರು ಇವನ್ನು ನೀಹಾರಿಕೆಗಳು ಎಂದು ಕರೆದಿದ್ದು ಕೆಲವರು ಇವುಗಳು ಹತ್ತಿರದ ಜ್ಯೋತಿಗಳು ಎಂದೂ ಮತ್ತು ಇತರರು ಇವು ಬೇರೆಯದೇ ಗ್ಯಾಲಕ್ಸಿಗಳು ಎಂದೂ ತಿಳಿದಿದ್ದರು.

**ಅ) ಮಂಗಳ ಗ್ರಹದಲ್ಲಿ ನೀರು ?**

'ಇಷ್ಟು ದೊಡ್ಡ ಜಗತ್ತಿಗೆ ಒಂದೇ ಭೂಮಿಯೇ ?' ಹಿಂದಿನಿಂದ ಅನೇಕ ಪಂಡಿತರು ಈ ತಿಯ ಪ್ರಶ್ನೆಗಳನ್ನು ಕೇಳಿಕೊಂಡು ವಿಶ್ವದಲ್ಲಿ ನಮ್ಮ ಭೂಮಿಯಂತೆ ಬೇರೆ ಗ್ರಹಗಳು ಇದ್ದೇ ಬೇಕು ಎಂದು ಹೇಳುತ್ತಲೇ ಬಂದಿದ್ದಾರೆ. ಆದರೆ ಈ ಪ್ರಶ್ನೆಯನ್ನು ವೈಜ್ಞಾನಿಕವಾಗಿ ಶೀಲಿಸುವ ಸಾಧ್ಯತೆ ಹುಟ್ಟಿದ್ದು ಕಳೆದ ಶತಮಾನದಿಂದ ಮಾತ್ರ. ಅಂತಹ ಗ್ರಹಗಳ ಅನ್ವೇಷಣೆಗೆ ರಡುವ ಮೊದಲು ಅದರ ಪರಿಸರ ಹೇಗಿರಬೇಕು ಎಂದು ನಾವು ಕೇಳಿಕೊಳ್ಳಬೇಕು. ರೆ ಬೇರೆ ಪರಿಸರಗಳಲ್ಲಿ ಬೇರೆ ಬೇರೆ ತರಹದ ಜೀವಗಳಿರಬಹುದು. ಆದರೆ ಈಗ ನಮ್ಮ ಹದ್ದೇ ಪರಿಸರವಿರಬೇಕು ಎಂದು ಕೇಳಿಕೊಳ್ಳೋಣ. ನಮ್ಮ ಜೀವದ ಆಧಾರ ನೀರು. ದ್ದರಿಂದ (ದ್ರವರೂಪದ) ನೀರು ಇರಬಹುದಾದಂತಹ ಗ್ರಹಗಳು ಇರಬೇಕು.

ಜೀವನ ಹುಟ್ಟಬೇಕಾದರೆ ಆ ಗ್ರಹ ಭೂಮಿಯಂತೆ ಸೂರ್ಯಮಂಡಲವೊಂದರಲ್ಲಿ ಬೇಕು. ಸೂರ್ಯನಿಂದ ಸರಿಯಾದ ದೂರದಲ್ಲಿರಬೇಕು – ಹತ್ತಿರವಿದ್ದರೆ (ಬುಧ ಗ್ರಹದ ಹ) ಅತಿ ಹೆಚ್ಚು ಶಾಖದಿಂದಲೂ, ದೂರವಿದ್ದರೆ (ಯುರೇನಸ್ ಗ್ರಹದ ತರಹ) ಅತಿ ಯಿಂದ ಜೀವ ಹುಟ್ಟುವುದಿಲ್ಲ. ಆದ್ದರಿಂದ ಜೀವದ ಸಂಭಾವ್ಯತೆ ಮಂಗಳ ಗ್ರಹದಲ್ಲಿ ತ್ರ ಎಂಬ ಅಭಿಪ್ರಾಯ ಮೊದಲಿಂದಲೂ ಇದ್ದು, ಖಗೋಳಜ್ಞರು ಮಂಗಳ ಗ್ರಹವನ್ನು ಲಿಸ್ಕೋಪ್‌ಗಳಿಂದ ವೀಕ್ಷಿಸಿ ವಿಸ್ಮಯಗೊಂಡಿದ್ದರು. ೧೯ನೆಯ ಶತಮಾನದ ಕೊನೆಯ ಕಗಳಲ್ಲಿ ಇಟಲಿಯ ಶಿಯಾಪರೇಲಿ ಮತ್ತು ಅಮೆರಿಕಾದ ಲೊವೆಲ್ ಎಂಬ ಖಗೋಳಜ್ಞರು ಂಗಳ ಗ್ರಹದ ಮೇಲಿನ ರೇಖೆಗಳನ್ನು ನೋಡಿ ಅವುಗಳು ಕಾಲುವೆ (ಕೆನಾಲ್)ಗಳಿರ ದೆಂದು ಅಭಿಪ್ರಾಯಪಟ್ಟಿದ್ದರು. ಲೊವೆಲ್ ಒಂದು ಹೆಜ್ಜೆ ಮುಂದೆ ಹೋಗಿ ಈ ಕಾಲುವೆ ಲ್ಲಿ ಭೂಮಿಯ ತರಹವೇ ನೀರು ಹರಿಯುತ್ತಿದ್ದು ಇಲ್ಲಿಯ ನಿವಾಸಿಗಳಂತೆಯೇ ಮಂಗಳ ದಲ್ಲೂ ನಿವಾಸಿಗಳು ಇರುವುದಕ್ಕೆ ಸಾಕ್ಷಿ ಎಂದು ವಾದಿಸಿದನು. ಇಂದು ಅವರ ಅಭಿಪ್ರಾಯಗಳಿಗೆ ಮನ್ನಣೆ ಇರದಿದ್ದರೂ ಮಂಗಳ ಗ್ರಹದಲ್ಲಿ ನೀರನ್ನು ಹುಡುಕಲು ಪ್ರಯತ್ನಗಳು ನಡೆಯುತ್ತಲೇ ಇವೆ.

ಕಳೆದ ಶತಮಾನದ ಕಡೆಯ ದಶಕಗಳಲ್ಲಿ ಕೆಲವು ಅಂತರಿಕ್ಷ ವಾಹನಗಳು (ಮೆರಿನರ್ ಇತ್ಯಾದಿ) ಈ ಗ್ರಹವನ್ನು ಪರೀಕ್ಷಿಸಿದ್ದರೂ ಆ ಸಂಶೋಧನೆಗಳು ವಿವಾದಾಸ್ಪದವಾಗಿದ್ದು ನಿಖರ ಪ್ರಯೋಗಗಳನ್ನು ನಡೆಸಲು ನ್ಯಾಸಾ ಸಂಸ್ಥೆ ನಿರ್ಧರಿಸಿತು. ೨೦೦೩ರ ಜೂನ್ ಮತ್ತು ಜುಲೈ ತಿಂಗಳಲ್ಲಿ ಆ ಸಂಸ್ಥೆ ಕಳಿಸಿದ ರೋವರ್ ಎಂಬ ರೊಬಾಟ್ (ಯಾಂತ್ರಿಕ ಮಾನವ)ಗಳು ೫-೬ ತಿಂಗಳುಗಳ ನಂತರ ೨೦೦೪ರ ಜನವರಿಯಲ್ಲಿ ಮಂಗಳ ಗ್ರಹದ ಮೇಲೆ ಇಳಿಯಿತು. ನೀರನ್ನು ಕಂಡುಹಿಡಿಯುವುದು ಅವುಗಳ ಮುಖ್ಯ ಕೆಲಸವಾದರೂ, ಅಲ್ಲಿಯ ಹವಾದ ಬಗ್ಗೆ ಹೆಚ್ಚು ಮಾಹಿತಿಗಳನ್ನು ಸಂಗ್ರಹಿಸಿ ಮುಂದೆ ಮಾನವ ಅಲ್ಲಿ ಬಂದಿರುವ ಸಾಧ್ಯತೆಗಳನ್ನು ಕಂಡುಹಿಡಿಯುತ್ತಿದೆ. ಈ ಯಾಂತ್ರಿಕ ಮಾನವರು ಭೂಗರ್ಭಶಾಸ್ತ್ರಜ್ಞರ ಮಾದರಿಯಲ್ಲಿ ಕಳೆದ ೩ ವರ್ಷಗಳಲ್ಲಿ ಅನೇಕ ಪ್ರಯೋಗಗಳನ್ನು ನಡೆಸಿವೆ.

ಇಂದು ಆ ಗ್ರಹದಲ್ಲಿ ನೀರಿರುವ ಸಾಧ್ಯತೆ ಬಹಳ ಕಡಿಮೆ ಇದ್ದರೂ ಹಿಂದೆ ಇದ್ದೇ ಇದ್ದಿರಬೇಕು ಎಂದು ಪ್ರಯೋಗಗಳು ತೋರಿಸುತ್ತಿವೆ. ಈಗ ಶಾಖ ಕಡಿಮೆಯಾಗಿ ಮಂಗಳದ ನೆಲದ ಕೆಳಗೆ ಬಹಳ ಆಳದಲ್ಲಿ ಹಿಮಗಡ್ಡೆಯ ರೂಪದಲ್ಲಿ ನೀರು ಇರಬೇಕು ಎಂದು ಹೇಳುತ್ತಿದ್ದಾರೆ. ಮಂಗಳದ ವಾತಾವರಣದ ಅನಿಲಗಳು ಅದರ ನೆಲದೊಳಗೆಲ್ಲೋ ಇರಬೇಕು. ಈ ಎಲ್ಲ ಕಾರಣಗಳಿಂದ ಹಿಂದಿನ ಕಾಲದಲ್ಲಿ ಮಂಗಳದಲ್ಲಿ ಹೆಚ್ಚು ಶಾಖ ಇದ್ದಿರಬೇಕು ಎಂದು ಸಂಶೋಧಕರು ಹೇಳುತ್ತಿದ್ದಾರೆ.

ಕೆಲವು ತಿಂಗಳುಗಳ ಹಿಂದೆ ತೆಗೆದ ಗ್ರಹದ ಛಾಯಾಚಿತ್ರವೊಂದನ್ನು ಹಳೆಯ ಛಾಯಾಚಿತ್ರದೊಂದಿಗೆ ಹೋಲಿಸಿದಾಗ ಹಿಂದಿರದಿದ್ದ ಬಿಳಿ ಬಣ್ಣದ ಮತ್ತು ಸ್ವಲ್ಪ ದಪ್ಪವಾದ ರೇಖೆಯೊಂದು ಕಾಣಿಸಿತು. ಆದ್ದರಿಂದ ಇತ್ತೀಚೆಗೆ ನೀರು ಇಲ್ಲಿ ಹರಿದಿದ್ದಿರಬೇಕು ಎಂದು ಕೆಲವು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಅಂದರೆ ನೀರು ಹಿಂದೆ ಮಾತ್ರವಲ್ಲ ಇಂದೂ ಇದೆ ಎಂಬ ಈ ಶೋಧನೆಯಿಂದ ಮನುಷ್ಯ ಅಲ್ಲಿ ಹೋಗಿ ಇರಲು ಉತ್ತೇಜನ ಕೊಟ್ಟಿದೆ. ಆದರೆ ಕೆಲವು ವಿಜ್ಞಾನಿಗಳು ಇದು ನೀರಲ್ಲ, ಧೂಳು ಎಂದು ಹೇಳುತ್ತಿದ್ದಾರೆ. ಮಂಗಳದಲ್ಲಿ ಪ್ರತಿದಿನ ಶಾಖದ ವ್ಯತ್ಯಾಸ ಬಹಳ ಹೆಚ್ಚು. ಈ ವ್ಯತ್ಯಾಸ ಭೂಮಿಯಲ್ಲಿ ೧೦-೨೦ ಡಿಗ್ರಿಗಳಿದ್ದರೆ ಮಂಗಳದಲ್ಲಿ ಇದು ಸುಮಾರು ೧೦೦ ಡಿಗ್ರಿಗಳು. ಮನುಷ್ಯರಿಗಂತೂ ಈ ಶಾಖದ ವ್ಯತ್ಯಾಸ ತಡೆಯಲು ಆಗುವುದಿಲ್ಲ. ಆದರೆ ಅಲ್ಲಿ ೪ ವರ್ಷಗಳಿಂದ ಇರುವ ರೋಬಾಟ್‌ಗಳಿಗೂ ಇದು ಕಷ್ಟಕರವಾಗಿದ್ದು, ಅವುಗಳನ್ನು ಸ್ವಲ್ಪವಾದರೂ ಹಿತಕರವಾದ ಸ್ಥಳಗಳಿಗೆ ಒಯ್ಯುವ ಯೋಚನೆ ಇದೆಯಂತೆ! ಅಂತೂ ಮನುಷ್ಯ ಅಲ್ಲಿ ಹೋಗಿಬರುವ ಮುಂಚೆ ಮಂಗಳ ತನ್ನ ರಹಸ್ಯಗಳನ್ನು ಬಯಲು ಮಾಡುವುದಿಲ್ಲ ಎಂದು ಕಾಣುತ್ತದೆ!

**(೨.ಆ) ಭೂಮಿಯ ತರಹ ಇರುವ ಗ್ರಹ!**

ಜಗತ್ತಿನಲ್ಲಿ ಸುಮಾರು ೩೦೦ ಬಿಲಿಯ ಗ್ಯಾಲಕ್ಸಿಗಳಿವೆ. ಈ ಪ್ರತಿಯೊಂದು ಗ್ಯಾಲಕ್ಸಿಯಲ್ಲೂ ಸುಮಾರು ೩೦೦ ಬಿಲಿಯ ನಕ್ಷತ್ರಗಳಿವೆ! ಅಂದರೆ ಈ ಪ್ರಪಂಚದಲ್ಲಿ ಅಗಾಧ ಸಂಖ್ಯೆಯ ನಕ್ಷತ್ರಗಳು. ಅವುಗಳಲ್ಲಿ ಎಷ್ಟರಲ್ಲಿ ಗ್ರಹಗಳಿವೆ ? ಗ್ರಹಗಳಿರುವ ತಾರೆಗಳೆಷ್ಟು? ಇದಕ್ಕೆ ಸರಿಯಾದ ಉತ್ತರವಿಲ್ಲ. ಕೆಲವರು ಪ್ರತಿ ತಾರೆಗೂ ಒಂದಾದರೂ ಗ್ರಹವಿರಬೇಕು ಎಂದರೆ ಇತರರು

ಜೀವನ ಹುಟ್ಟಬೇಕಾದರೆ ಆ ಗ್ರಹ ಭೂಮಿಯಂತೆ ಸೂರ್ಯಮಂಡಲವೊಂದರಲ್ಲಿರಬೇಕು. ಸೂರ್ಯನಿಂದ ಸರಿಯಾದ ದೂರದಲ್ಲಿರಬೇಕು – ಹತ್ತಿರವಿದ್ದರೆ (ಬುಧ ಗ್ರಹದ ತರಹ) ಅತಿ ಹೆಚ್ಚು ಶಾಖದಿಂದಲೂ, ದೂರವಿದ್ದರೆ (ಯುರೇನಸ್ ಗ್ರಹದ ತರಹ) ಅತಿ ಚಳಿಯಿಂದ ಜೀವ ಹುಟ್ಟುವುದಿಲ್ಲ. ಆದ್ದರಿಂದ ಜೀವದ ಸಂಭಾವನೆ ಮಂಗಳ ಗ್ರಹದಲ್ಲಿ ಮಾತ್ರ ಎಂಬ ಅಭಿಪ್ರಾಯ ಮೊದಲಿಂದಲೂ ಇದ್ದು ಖಗೋಳಜ್ಞರು ಮಂಗಳ ಗ್ರಹವನ್ನು ಟೆಲಿಸ್ಕೋಪ್‌ಗಳಿಂದ ವೀಕ್ಷಿಸಿ ವಿಸ್ಮಯಗೊಂಡಿದ್ದರು. ೧೯ನೆಯ ಶತಮಾನದ ಕೊನೆಯ ದಶಕಗಳಲ್ಲಿ ಇಟಲಿಯ ಶಿಯಾಪರೇಲಿ ಮತ್ತು ಅಮೆರಿಕಾದ ಲೊವೆಲ್ ಎಂಬ ಖಗೋಳಜ್ಞರು ಮಂಗಳ ಗ್ರಹದ ಮೇಲಿನ ರೇಖೆಗಳನ್ನು ನೋಡಿ ಅವುಗಳು ಕಾಲುವೆ (ಕೆನಾಲ್)ಗಳಿರಬಹುದೆಂದು ಅಭಿಪ್ರಾಯಪಟ್ಟಿದ್ದರು.




ಉಡುಪಿಯಲ್ಲಿ ಡಿಸೆಂಬರ್ ೧೨ ರಿಂದ ೧೪ರವರೆಗೆ ೭೪ನೇ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತು. ಸಮ್ಮೇಳನದ ಅಂಗವಾಗಿ ನಡೆದ ಪುಸ್ತಕ ಪ್ರದರ್ಶನ ಮತ್ತು ಮಾರಾಟ ಚಟುವಟಿಕೆಯಲ್ಲಿ ನವಕರ್ನಾಟಕ ಮಳಿಗೆಯ ದೃಶ್ಯ.

ಅವುಗಳಲ್ಲಿ ಅರ್ಧ ಮಾತ್ರ ತಾರೆಗಳನ್ನು ಹೊಂದಿರುತ್ತವೆ ಎನ್ನುತ್ತಾರೆ. ಅಷ್ಟು ಗ್ರಹಗಳಲ್ಲಿ ನಮ್ಮ ಭೂಮಿಯಂತಹ ಗ್ರಹಗಳೆಷ್ಟು? ಅಂತಹ ಗ್ರಹಗಳನ್ನೇ ನೇರವಾಗಿ ಕಂಡುಹಿಡಿಯಲಾಗುವುದಿಲ್ಲ. ಅವುಗಳು ಸುತ್ತುತ್ತಿರುವ ನಕ್ಷತ್ರವನ್ನು ನಿರಂತರವಾಗಿ ವೀಕ್ಷಿಸಬೇಕು. ಗ್ರಹಗಳು ಸುತ್ತುತ್ತಿದ್ದರೆ ಆ ನಕ್ಷತ್ರದ ಚಲನೆ ಮತ್ತು ಬೆಳಕು ಒಂದೇ ಸಮ ಇರದೆ ಬದಲಾಗುತ್ತಿರುತ್ತದೆ. ಈ ಬದಲಾವಣೆಗಳನ್ನು ಅಧ್ಯಯಿಸಿ ಎಂತಹ ಗ್ರಹಗಳಿರಬಹುದು ಎಂದು ಕಂಡುಹಿಡಿಯಬಹುದು. ಇಂತಹ ಗ್ರಹಗಳಿಗೆ ಸೂರ್ಯೇತರ (ಎಕ್ಸೋಪ್ಲ್ಯಾನೆಟ್) ಗ್ರಹಗಳು ಎಂಬ ಹೆಸರಿಟ್ಟಿದ್ದಾರೆ. ಮೊನ್ನೆ ಮೊನ್ನೆಯವರೆವಿಗೆ ಇಂತಹ ಸುಮಾರು ೨೫೦ ಗ್ರಹಗಳನ್ನು ಕಂಡುಹಿಡಿದಿದ್ದಾರೆ. ಅವುಗಳಲ್ಲಿ ಅನೇಕ ಗುರುಗ್ರಹದ ತರಹ ಇವೆ. ಆದರೆ ಅದು ಅತಿಶಯವೇನಲ್ಲ. ಏಕೆಂದರೆ ಗುರು ಅಥ ಶನಿಯ ತರಹ ತೂಕವಿದ್ದಲ್ಲಿ ಮಾತ್ರ ನಕ್ಷತ್ರದ ಮೇಲೆ ಹೆಚ್ಚು ಪ್ರಭ ವಿರುತ್ತದೆ. ಆದರೆ ಅಂತಹ ಗ್ರಹಗಳಲ್ಲಿ ಜೀವ ಇರುವ ಸಾಧ್ಯತೆ ಕಡಿಮೆ.

ಆದರೂ ಈ ವರ್ಷದಲ್ಲಿಯೇ (ಏಪ್ರಿಲ್ ೨೦೦೭) ಕಂಡುಹಿ ಒಂದು ಗ್ರಹ ಬಹಳ ಸ್ವಾರಸ್ಯಕರವಾಗಿರುವಹಾಗಿದೆ. ನಮ್ಮ ಸೂರ್ಯ ತರಹವಿದ್ದು ಗ್ರಹ ಭೂಮಿಯಷ್ಟು ದೂರದಲ್ಲಿದ್ದರೆ ಜೀವ ಸಾಧ್ಯ ಎಂ ನೋಡಿದ್ದೇವೆ. ಸೂರ್ಯನಷ್ಟು ಮಾತ್ರ ಶಾಖವಿರುವ ತಾರೆಗಳು ಒಟ್ಟ ೧೦೦ಕ್ಕೆ ೫. ಆದರೆ ಈಗ ಕಂಡುಹಿಡಿದಿರುವ ಗ್ರಹವಿರುವುದು ಸೂರ್ ನಿಗಿಂತ ಕಡಿಮೆ ಪ್ರಕಾಶದ ನಕ್ಷತ್ರ (ಹೆಸರು ಗ್ಲಿಸ್ ೫೮೧). ಆದರೆ ಇದ ಗ್ರಹವೂ ಹತ್ತಿರವೇ ಇರುವುದರಿಂದ ಅಲ್ಲಿ ನೀರು ಇರುವ ಸಾಧ್ಯತೆ ಹೆ ಎಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಈ ಗ್ರಹದ ಶಾ ಶೂನ್ಯದಿಂದ ಸುಮಾರು ೪೦ ಡಿಗ್ರಿ ಸೆಲ್ಸಿಯಸ್ ಇರಬಹುದು ಎನ್ನುತ್ತಾ ಇದನ್ನು ಕಂಡುಹಿಡಿದ ಜಿನೀವಾ ವಿಶ್ವವಿದ್ಯಾಲಯದ ವಿಜ್ಞಾನಿಗ ಪ್ರಾಯಶಃ ಇದೇ ಪ್ರಥಮ ಭೂಮಿಯ ತರಹ ಇರುವ ಗ್ರಹ ಎಂದಿದ್ದಾ ಇದರ ಸೂರ್ಯ ಹತ್ತಿರವಿರುವುದರಿಂದ ಈ ಗ್ರಹದಲ್ಲಿ ನಿಂತರೆ ನ ಸೂರ್ಯನಿಗಿಂತ ೫ರಷ್ಟು ದೊಡ್ಡದಾಗಿ ಕಾಣಿಸಬಹುದು ಎಂದ ಕೆಲವರ ಕಲ್ಪನೆ. ವಿಶ್ವದ ದೂರಗಳನ್ನು ನೆನಪಿನಲ್ಲಿಟ್ಟುಕೊಂಡರೆ ಈ ಗ್ರ ನಮ್ಮ ಪಕ್ಕದ ಮನೆಯಂತೆ. ಆದರೂ ದೂರದಲ್ಲಿರುವುದರಿಂದ (ನ ಸೂರ್ಯನ ಬೆಳಕು ನಮ್ಮನ್ನು ಎಂಟೇ ನಿಮಿಷಗಳಲ್ಲಿ ಸೇರಿದರೆ ಈ ಗ್ರಹ ಬೆಳಕು ೨೦ ವರ್ಷಗಳನ್ನು ತೆಗೆದುಕೊಳ್ಳುತ್ತದೆ : ದೂರ ೨೦ ಜ್ಯೋ ವರ್ಷಗಳು) ನಾವು ಹೋಗಿಬರುವ ಸಾಧ್ಯತೆಯಂತೂ ಇಲ್ಲ. ಆದ ಪ್ರಬುದ್ಧ ನಾಗರಿಕತೆ ಇದ್ದಲ್ಲಿ ರೇಡಿಯೊ ಸಂಪರ್ಕ ಸಾಧ್ಯ.

ಪಿ. ಆರ್. ವಿಶ್ವನಾಥ್
ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಆಸ್ಟ್ರೋಫಿಸಿಕ್ಸ್, ಬೆಂಗಳೂರು - ೫೬೦ ೦೩೪

ರಾಬಿನ್ ಶರ್ಮಾ
ಅವರ
# ಫೆರಾರಿ ಮಾರಿದ ಫಕೀರ
ನಿಮ್ಮ ಕನಸುಗಳನ್ನು ನನಸಾಗಿಸಲು
ಅದೃಷ್ಟಸಿದ್ಧಿಯನ್ನು ಪಡೆಯಲು ಪ್ರೇರಿಸುವ ಕಥೆ

**ಪುಟಗಳು : 161** **ಬೆಲೆ : ರೂ. 115**

JAICO PUBLISHING HOUSE
127, M.G. Road, Mumbai - 400 023 Tel : 022-22676702, 22676802, 226745501, Fax : 22656412

JAICO BOOK HOUSE (P) LIMITED
14/1, 1st Main Road, 6th Cross, Gandhinagar, Bangalore - 560 009
© 22267016, 22257083



ಡಾ|| ಬಿ. ಎಸ್. ಶೈಲಜಾ

# ಓ ಸೀರೆ, ನಾ ನಿನ್ನ ಬಿಡಲಾರೆ !

ಶೀರ್ಷಿಕೆಯನ್ನೋದಿದ ತಕ್ಷಣ ನೀರೆಯ ಬದಲು ಸೀರೆ
ಗ್ಗಿರಬೇಕು. ಮುದ್ರಾರಾಕ್ಷಸನ ಹಾವಳಿ ಎಂದಂದು
ಡಿರಾ ? ಈಗ ಬರೆದವರು ಯಾರು ಎಂದು ಆ ಕಡೆ ಕಣ್ಣು
ಯಿಸಿ, ಓಹೋ ಸರಿ ಸರಿ ಎಂದು ಮುದ್ರಾರಾಕ್ಷಸನ ಮೇಲಿನ
ಆರೋಪವನ್ನು ಹಿಂತೆಗೆದುಕೊಂಡಿರಲ್ಲವೇ ?

ೀರೆ ಎಂಬ ಆರು ಮೀಟರ್ ಉದ್ದದ ವಸ್ತ್ರ ನನಗೆ ಅಂಟಿ
ಡಿದ್ದು ಬಹಳ ಹಿಂದೆಯೇ. ಸೀರೆ ಎಂಬುದು ಘನತೆಯನ್ನು
ಂಕೊಡುವ ವಸ್ತುವಾದದ್ದರಿಂದ ಎಂ.ಎಸ್‌ಸಿ. ಓದುವವರಿಗೆ
ಹೆಚ್ಚು ಕಡಿಮೆ 'ಯೂನಿಫಾರ್ಮ್' ಆಗಿತ್ತು. ಓಡಾಡುವಾಗ
ರುತ್ತಿದ್ದುದರಿಂದ ಅದು ನನ್ನಿಂದ ಬೇಕಾದಷ್ಟು ಬಾರಿ ಬೈಯಿಸಿ
ಡಿದೆ. ಈ ಫಜೀತಿ ನನ್ನದು ಮಾತ್ರವಲ್ಲ; ನನ್ನ ಸಹಪಾಠಿ(ಠಿ)
ಲ್ಲರದೂ ಆಗಿತ್ತು. ಪ್ರತಿದಿನ ಬೆಳಿಗ್ಗೆ 'ಲೇಡೀಸ್ ರೂಂ'ನಲ್ಲಿ
ಗಳನ್ನು ಉಡುವ, ರಿಪೇರಿ ಮಾಡುವ ಪಾಠ ಇರುತ್ತಿತ್ತು. ಸೀರೆ
ವುದರಿಂದ ಇಸ್ತ್ರಿ ಕೆಲಸ ಕಡಿಮೆ ಎಂಬಂಥ ಸಂಶೋಧನಾತ್ಮಕ
ಗಳೂ ಅಲ್ಲಿ ನಡೆಯುತ್ತಿದ್ದವು. ಎಡತೋಳಿಗೆ ಇಸ್ತ್ರಿ ಇಲ್ಲದಿದ್ದರೂ
ಾಗಿಲ್ಲ; ಚಳಿಗಾಲದಲ್ಲಿ ಸ್ವೆಟರ್ ಧರಿಸುವುದರಿಂದ ಇಸ್ತ್ರಿಯೇ
ಲ್ಲ ಎಂಬಂತಹ ಅಮೂಲ್ಯವಾದ (ಇಂಧನ ಉಳಿತಾಯ
ೇ ?) ವಿಷಯಗಳೂ ಚರ್ಚೆಯಾಗುತ್ತಿದ್ದವು.

ೀರೆಯ ಇನ್ನಿತರ ಉಪಯೋಗಗಳೇನು ಎಂಬುದರ ಬಗ್ಗೆ
ೆ ಮೊದಲ ಸುಳಿವು ಸಿಕ್ಕಿದ್ದು ಅಂಬಾಲಾ ರೈಲ್ವೇ ಸ್ಟೇಷನ್‌ನಲ್ಲಿ.
ಯುಟ್ಟ ನಮ್ಮ ಗುಂಪನ್ನು ಕಂಡು (ನಾವು ಹದಿಮೂರು
ಗಿಯರಿದ್ದೆವು) ಓಡಿಬಂದವನೊಬ್ಬ ನಾವು ಕನ್ನಡ
ಮಾತನಾಡುತ್ತಿದ್ದುದು ಕೇಳಿ ಹಿರಿ ಹಿರಿ ಹಿಗ್ಗಿಹೋದ. ಆತ ಮಂಡ್ಯ.ಜಿಲ್ಲೆಯವನು. ಮಿಲಿಟರಿಗೆ ಸೇರಿದ್ದ ಮಗನನ್ನು ಹುಡುಕುತ್ತಾ ಅಲ್ಲಿಗೆ ಬಂದಿದ್ದ. ಆದರೆ ಭಾಷೆಯ ತೊಡರಿನಿಂದ ಮುಂದೇನು ಮಾಡಬೇಕೆಂದು ತಿಳಿಯದೇ ಪರಿತಪಿಸುತ್ತಿದ್ದ. ಅಲ್ಲಿದ್ದ ಮಿಲಿಟರಿ ಅಧಿಕಾರಿಗಳನ್ನು ಭೇಟಿಮಾಡಲು ಹೋದೆವು. ನಮ್ಮ ತಂಡವನ್ನು ನೋಡಿ ಅವರು ಘೇರಾವ್ ಮಾಡಲು ಬಂದವರು ಎಂದುಕೊಂಡಿದ್ದಿರಬಹುದು (ನಮ್ಮೊಡನೆ ೨೭ ಹುಡುಗರೂ ಇದ್ದರು). ಒಟ್ಟಿನಲ್ಲಿ ಅವನ ಇಚ್ಛೆ ನೆರವೇರಿತು; ಆತನ ಮಗ ಜಲಂಧರದಲ್ಲಿದ್ದ. ಅವನನ್ನು ಕಾಣಲು ಮಿಲಿಟರಿಯವರೊಡನೆಯೇ ಹೊರಟುನಿಂತ.

ಸೀರೆಯನ್ನು ಬೈಯುತ್ತಾ ಉಟ್ಟುಕೊಳ್ಳುತ್ತಿದ್ದ ಹದಿಹರೆಯದ ದಿನಗಳವು. ಮುಂದೆ ನನಗೆ ಅನೇಕ ಪೇಚುಗಳನ್ನೂ, ಅಪೂರ್ವ ಅನುಭವಗಳನ್ನೂ ಎಲ್ಲಕ್ಕಿಂತ ಮುಖ್ಯವಾಗಿ ಈ ಲೇಖನಕ್ಕೆ ಸಾಮಗ್ರಿಯನ್ನೂ ಒದಗಿಸುತ್ತದೆಯೆಂದು ಆಗಲೇ ಗೊತ್ತಿದ್ದರೆ ಖಂಡಿತಾ ಬೈಯುತ್ತಿರಲಿಲ್ಲ.

ಮೊದಲಬಾರಿ ವಿದೇಶಕ್ಕೆ ಹೊರಡುವ ಸಂದರ್ಭ ಒದಗಿದಾಗ ಸಿಲ್ಕ್ ಸೀರೆ ಧರಿಸಿ ಹೊರಟುನಿಂತೆ. ಮುಂಬಯಿಯಲ್ಲಿ ಲುಫ್ತಾನ್ಸಾ ತಡವಾಗಿ ಹೊರಟಿದ್ದರಿಂದ ಸುಮಾರು ಮೂರ್ನಾಲ್ಕು ಗಂಟೆ ವಿಮಾನ ನಿಲ್ದಾಣದಲ್ಲಿ ನಮ್ಮನ್ನು ಕೊಳೆಹಾಕಿದರು. ಒಬ್ಬಾಕೆ (ಬಿಳಿಯ ಹೆಂಗಸು) ಬಂದು ''ಎಷ್ಟು ಗಂಟೆ ತಡ ?'' ಎಂದು ನನ್ನನ್ನು ಕೇಳಿದಳು. ಅಲ್ಲಿ ತೆರೆಯ ಮೇಲೆ ಮೂಡಿದ್ದನ್ನು ಹೇಳಿದೆ. ಇನ್ನೊಬ್ಬಾತ (ಬಿಳಿಯ) ಬಂದು ''ಹಸಿವಾಗುತ್ತಿದೆ, ರೆಸ್ಟೋರೆಂಟ್‌ನಲ್ಲಿ ತಿನ್ನಲು ಕೂಪನ್ ಸಿಗುತ್ತದೆಯೇ ?'' ಎಂದು ಕೇಳಿದ. ಮೂರನೆಯವಳೊಬ್ಬಳು ''ಏಕೆ ತಡ ?'' ಎಂದಳು. ನಾನು ಕೈಆಡಿಸಿ, ''ನನಗೇನು ಗೊತ್ತು ?'' ಎಂದೆ. ಆಕೆ "You ought to know" (ನಿನಗೆ ಗೊತ್ತಿರಬೇಕಾಗಿತ್ತು) ಎಂದು ಗುಡುಗಿದಳು. ಏಕೆ ? ಎಂದು ಕಣ್ಣುಕಣ್ಣು ಬಿಡುತ್ತಾ ಕುಳಿತೆ. ಆಗ ಥಟ್ಟನೆ ಹೊಳೆಯಿತು. ನನ್ನ ಸೀರೆಯೇ ಈ ಎಲ್ಲಾ ವಿದೇಶೀಯರನ್ನೂ ನನ್ನತ್ತ ಸೆಳೆದಿತ್ತು. ಗಗನಸಖಿಯರ 'ಯೂನಿಫಾರ್ಮ್' ಉಡುಪು ಮೈಸೂರು ಸಿಲ್ಕ್ ಸೀರೆಗಳು ಎಂಬುದನ್ನು ಅರಿಯದೇ ನಾನು ಸಿಲ್ಕ್ ಸೀರೆ ಧರಿಸಿದ್ದುದರ ಪರಿಣಾಮ ಇದು.

ವಿದೇಶೀಯ ಮಹಿಳೆಯೊಬ್ಬರು ವಿಮಾನ ನಿಲ್ದಾಣಕ್ಕೆ ಬಂದಿದ್ದರು. ನನ್ನನ್ನು ಕರೆದೊಯ್ಯಲು. ನನ್ನ ಸೀರೆಯನ್ನು ಕಂಡು, ''ಯುವರ್... ಯುವರ್...'' ಎಂದು ತಡವರಿಸಿ ಕೊನೆಗೆ ''ಸೂಟ್ ಈಸ್ ವೆರಿ

ಸ್ಪೈಸ್'' ಎಂದರು. ಅಲ್ಲಿಯ ಯೂನಿವರ್ಸಿಟಿಯಲ್ಲಿ ಎಲ್ಲರ ಕಣ್ಣು ನನ್ನ ಸೀರೆಯ ಮೇಲೇ. ಒಂದಿಬ್ಬರು ಹತ್ತಿರ ಬಂದು ಅಭಿನಂದಿಸುತ್ತಿದ್ದರು. ಹೀಗೊಂದು ಸಂಜೆ ಕೊಠಡಿಗೆ ಹಿಂದಿರುಗಿದೆ. ಬಾಗಿಲು ಹಾಕುತ್ತಿದ್ದಂತೆಯೇ ಟಕಟಕ ಸದ್ದು ಕೇಳಿತು. ಹದಿಹರೆಯದ ಹುಡುಗಿಯೊಬ್ಬಳು ನಿಂತಿದ್ದಳು. ''ಐದು ನಿಮಿಷ ಪುರುಸೊತ್ತಿದೆಯೇ ?'' ಎಂದು ನಮ್ರತೆಯಿಂದ ಕೇಳಿಕೊಂಡಳು. ಮೇಜಿನತ್ತ ಕೈ ತೋರಿಸಿ, ''ಆ ಬಟ್ಟೆ ನೀವು ನಿನ್ನೆ ತೊಟ್ಟಿದ್ದಿರಲ್ಲವೇ ?'' ಎಂದಳು. ಅಲ್ಲಿ ನನ್ನ ಸೀರೆಯೊಂದು ಓರಣವಾಗಿ ಮಡಿಚಿಕೊಂಡು ಕುಳಿತಿತ್ತು. ''ಹೌದು'' ಎಂದೆ.

''ಈ ದಿನ ಬೆಳಿಗ್ಗೆ ನಾನು ರೂಂ ಶುಚಿಮಾಡಲು ಬಂದಿದ್ದೆ. ಆಗ ಇದು ಕುರ್ಚಿಯ ಮೇಲಿತ್ತು. ತೆಗೆದು ಮೇಜಿನ ಮೇಲಿಡುವಾಗ ಬಿಚ್ಚಿಹೋಯಿತು. ಅದು ಏಕೆ ಹಾಗಾಯಿತೋ ಗೊತ್ತಿಲ್ಲ. ದಯವಿಟ್ಟು ಕ್ಷಮಿಸಬೇಕು'' ಎಂದು ಬಡಬಡನೆ ಹೇಳಿದಳು. ನಾನು ಸೀರೆಯನ್ನು ಕೈಗೆ ತೆಗೆದುಕೊಂಡು ನೋಡಿದೆ. ಏನೂ ಆಗಿರಲಿಲ್ಲ. ಹಾಗೆಂದು ಹೇಳಿದೆ. ಅವಳು ನಂಬಲಿಲ್ಲ. ''ಪುನಃ ಧರಿಸದಂತೆ ಮಾಡಿಬಿಟ್ಟೆ; ಹೊಲಿಗೆಯೆಲ್ಲ ಬಿಟ್ಟು ಹೋಗಿದೆ; ಕ್ಷಮಿಸಿ'' ಎಂದು ಪುನಃ ಪೆಚ್ಚುಮೋರೆಯಿಂದ ಹೇಳಿದಳು. ಆಗ ನನಗೆ ಅವಳ ಕಳವಳ ಅರ್ಥವಾಯಿತು. ''ಇದಕ್ಕೆ ಹೊಲಿಗೆಗಳಿಲ್ಲ'' ಎಂದೆ. ಆಗವಳು ''ಆ...'' ಎಂದು ಬಾಯ್ತೆರೆದು ನಿಂತಳು. ಆಮೇಲೆ ''ಹೊಲಿಗೆಯೇ ಇಲ್ಲದೆ ಹೇಗೆ ನಿಲ್ಲುತ್ತದೆ ?'' ಎಂದಳು. ''ಉಟ್ಟು ತೋರಿಸಬೇಕೇ ?'' ಎಂದೆ. ಅವಳು ''ಒಂದೇ ನಿಮಿಷ'' ಎಂದು ಓಡಿಹೋದವಳು ಒಂದೇ ನಿಮಿಷದಲ್ಲೇ ಹಿಂದಿರುಗಿ ಬಂದಳು. ಜೊತೆಗೆ ಇನ್ನಿಬ್ಬರನ್ನು ಕರೆತಂದಳು. (ಅವರಲ್ಲೊಬ್ಬ ಹುಡುಗ) ಇವರೆಲ್ಲಾ ಇದೇ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು. ದುಡ್ಡು ಸಂಪಾದಿಸಲು ಹೀಗೆ ಬೆಳಗಿನ ಹೊತ್ತು ಗೆಸ್ಟ್ ಹೌಸ್‌ನ ಕೊಠಡಿಗಳನ್ನು ಶುಭ್ರಮಾಡುವ ಕೆಲಸ ಮಾಡುತ್ತಿದ್ದವರು.

ಈಗ ಅವಳಿಗೆ (ಅವಳ ಪ್ಯಾಂಟ್ ಮೇಲೆಯೇ) ಸೀರೆ ಉಡಿಸಿದೆ. ಆಹಾ! ಅವರ ಮುಖಗಳ ಮೇಲೆ ಮೂಡಿದ ಆಶ್ಚರ್ಯ – ಅದನ್ನು ಮರೆಯುವಂತೆಯೇ ಇಲ್ಲ.

ಸ್ಟುಟ್‌ಗಾರ್ಟ್‌ನಲ್ಲಿ ಗೆಳತಿಯ ಗೆಳತಿಯೊಬ್ಬಳನ್ನು ಭೇಟಿ ಮಾಡಬೇಕಿತ್ತು. ಮುಖ ಪರಿಚಯ ಇಲ್ಲ. ಅದರೇನು, ಆ ಕೆಂಚು ಮುಖಗಳ ನಡುವೆ ಅದೇನೂ ಸಮಸ್ಯೆ ಅಲ್ಲ ಎಂದು ನನ್ನ ಧೈರ್ಯ. ಆದರೆ ಅಲ್ಲಿ ವಿಷ್ಯನ್ನರು ಬಹಳ. ಆದ್ದರಿಂದ ಸೀರೆಯ ಸಹಾ... ಕೋರಿದೆವು. ಆಕೆಯೂ ಸೀರೆಯುಟ್ಟು ರೈಲ್ವೆ ಪ್ಲಾಟ್‌ಫಾರಂಗೆ ಬಂದಾಗ ಸ... ಪರಿಹಾರವಾಯಿತು. ಇನ್ನೊಬ್ಬ (ಕೆಂಚು) ವಿಜ್ಞಾನಿ ನನ್ನನ್ನು ಹುಡುಕಲು ಕಷ್ಟ... ಬಹುದು ಎಂದುಕೊಂಡು ಮ್ಯೂನಿಕ್ ರೈಲು ನಿಲ್ದಾಣದಲ್ಲಿ ಜಾಹಿರಾತಿಗಾಗಿ ಇ... ಟ್ರ್ಯಾಕ್ಟರ್ ಮೇಲೆ ಹತ್ತಿನಿಂತು ಕೈಯಲ್ಲಿ ನನ್ನ ಹೆಸರಿನ ಫಲಕ ಹಿಡಿದಿದ್ದರು. ನನ್ನ ಕೈ... ಕ್ಯಾಮೆರಾ ಇದ್ದಿದ್ದರೆ ಅದನ್ನು ಫೋಟೋ ತೆಗೆದು ಇಟ್ಟುಕೊಂಡಿರುತ್ತಿದ್ದೆ. ನನ್ನ ಹೆಸ... ಅಷ್ಟು ಎತ್ತರದಲ್ಲಿ, ಜಾಹಿರಾತುಗಳ ಜೊತೆ ಸ್ಪರ್ಧಿಸುತ್ತಿತ್ತು. ನನ್ನ ಕಂಡಕೂಡ... ಅಲ್ಲಿಂದಿಳಿದು ಬಂದ ಅವರು, ''ಆಹಾ ನಿಮ್ಮನ್ನು ಹುಡುಕುವುದು ಎಷ್ಟು ಸುಲಭ! ... ಉಡುಪಿನ ಗುರುತೇ ಸಾಕಾಗಿತ್ತು'' ಎಂದರು.

ಇನ್ನೊಮ್ಮೆ ರೈಲು ಪ್ರಯಾಣ ಮಾಡುತ್ತಿದ್ದಾಗ ನನ್ನೊಡನೆ ಇದ್ದ ಸೀತಾ (ಇಸ್ರೋ... ವಿಜ್ಞಾನಿ) ಕೂಡ ಸೀರೆ ಉಟ್ಟಿದ್ದರು. ನಮ್ಮನ್ನು ಪ್ಲಾಟ್‌ಫಾರಂನಲ್ಲೇ ಗಮನಿ... ಪಾಕಿಸ್ತಾನಿಯೊಬ್ಬ ರೈಲಿನೊಳಗೆ ಹುಡುಕುತ್ತಾ ಬಂದು ಆತ್ಮೀಯವಾ... ಮಾತನಾಡಿಸಿದ. ಕೆಂಚು ಮುಖಗಳ ಪರಕೀಯರ ನಡುವೆ ಭಾರತ-ಪಾಕಿಸ್ತಾನ ಎ... ಭೇದ ಇಲ್ಲ. ನಾವೆಲ್ಲಾ ಒಂದೇ.

ಸೀರೆಯಿಂದಾಗಿ ಆಕರ್ಷಿತರಾಗಿ ನನ್ನನ್ನು ಮಾತನಾಡಿಸಿದವರಲ್ಲಿ ಶ್ರೀಲಂಕಾ... ನಿರಾಶ್ರಿತರು, ಸುರಿನಾಮ್‌ನಿಂದ ವಲಸೆ ಬಂದವರು, ಬಾಂಗ್ಲಾದೇಶೀಯರೂ ಇದ್ದಾ... ಬಾಲಾಜಿಯ ದರ್ಶನಕ್ಕಾಗಿ ಬರುತ್ತಿದ್ದ ನಾರ್ವೆಯ ಕುಟುಂಬದ ಪರಿಚಯ... ಆಯಿತು. ಆ ಕುಟುಂಬದ ಹಿರಿಯ – ಭಾರತೀಯ – ಮೃತನಾಗಿದ್ದರೂ, ಕೆ... ಮಕ್ಕಳು, ಮೊಮ್ಮಕ್ಕಳು ಆಗಾಗ್ಗೆ ಬಾಲಾಜಿಯ ದರ್ಶನಕ್ಕಾಗಿ ಬರುತ್ತಿರುತ್ತಾ... ಇಂಡೋನೇಷಿಯದಲ್ಲಂತೂ ಎಲ್ಲರೂ ನನಗೆ ಕೈಮುಗಿಯುತ್ತಿದ್ದರು.

ಕೇಪ್ ಟೌನ್‌ನಲ್ಲಿ ಉಂಟಾದ ಅನುಭವ ವಿಶಿಷ್ಟ ರೀತಿಯದು. ಗೋಷ್ಠಿ... ಮೊದಲ ದಿನ ಸಂಜೆ 'ಪೋಸ್ಟರ್' ನೋಡುತ್ತಾ, ಕಾಫಿ ಕುಡಿಯುತ್ತಾ ನಿಂತಿದ್ದೆ. ... ಟಕ್ ಎಂದು ನಡೆದುಬರುವ ಶಬ್ದ ಕೇಳಿತು. ಆ ಶಬ್ದ ನನ್ನ ಸಮೀಪಕ್ಕೆ ಬಂದು ನಿ... ಹೋದಾಗ ಆ ವ್ಯಕ್ತಿ ಯಾರು ಎಂದು ನೋಡಲೇಬೇಕಾಯಿತು. ಧಡೂತಿ ಆಕಾ...


ಶುಭಾಶಯಗಳೊಂದಿಗೆ



ಎಐಟಿಯುಸಿ

ಬೆಂಗಳೂರು ಜಿಲ್ಲಾ ಕಮಿಟಿ

ಘಾಟೆ ಭವನ, ವೈಯಾಲಿಕಾವಲ್

ಬೆಂಗಳೂರು - 560 003

ೃ) ಪೊಲೀಸ್ – ಹೆಣ್ಣು – ಆದ್ದರಿಂದ ಪೊಲೀಸಿಣಿ ಎನ್ನೋಣ. ಆಕೆ ನನ್ನನ್ನೇ ನಿಟ್ಟಿಸುತ್ತಿದ್ದಳು. ನಾನು ಅರ್ಥಕವಾಗಿ ಹಾಯಿಸಿದ ದೃಷ್ಟಿಯೊಡನೆ ಅವಳ ದೃಷ್ಟಿಯೂ ಬೆರೆತಾಗ ''ಹಲೋ'' ಎಂದು ನಕ್ಕಿರಿದು ಟಕ್ ಟಕ್ ಎಂದು ಮುನ್ನಡೆದಳು.

ಮರುದಿನವೂ ಇದೇ ಘಟನೆಯ ಪುನರಾವರ್ತನೆ ಆಯಿತು. ಮೂರನೆಯ ದಿನವೂ ಟಕ್ ಎಂದು ಸದ್ದು ಕೇಳಿದಾಗ ಆ ದಿಕ್ಕಿಗೆ ಬೆನ್ನು ಹಾಕಿ ನಿಂತೆ. ಆದರೂ ಅವಳು ಮ ನನ್ನ ಹಿಂದೆ ನಿಂತದ್ದು ಅರಿವಾಯಿತು. ಆದರೆ ಎರಡು ನಿಮಿಷವಾದ ಲೆ ಟಕ್ ಟಕ್ ಆರಂಭವಾಗಿ ದೂರ ಸರಿಯಿತು. ಏಕೆ ಹೀಗೆ ? ನನಗೆ ಆತಂಕವೇ ಆಯಿತು. ನನ್ನ ಪಾಸ್‌ಪೋರ್ಟ್ ಏನಾದರೂ ವಾಗಿದೆಯೇ ? ಇದು ಇವಳ ಕೈಗೆ ಸಿಕ್ಕಿದೆಯೇ ? – ಹೀಗೆಲ್ಲಾ ಲೋಚನೆಗಳು ಮೂಡತೊಡಗಿದವು. ಅದು ಭದ್ರವಾಗಿದೆ ದು ಖಾತ್ರಿ ಮಾಡಿಕೊಂಡೆ. ಮುಂದಿನ ದಿನ ಅದೇ ಹೊತ್ತಿಗೆ ... ಟಕ್ ! ಈ ದಿನ ಏನು ವಿಷಯ ಎಂದು ಕೇಳಿಯೇ ಬಿಡೋಣ ಎಂದು ಮನಸ್ಸು ಗಟ್ಟಿಮಾಡಿಕೊಂಡೆ.

ಅಂದು ಟಕಾ... ಟಕ್ ಎಂಬ ಜೋಡಿ ಶಬ್ದಗಳು ಕೇಳಿಬಂದವು. ಳ ಜೊತೆಗೆ ಇನ್ನೊಬ್ಬ (ಬಿಳಿ) ಪೊಲೀಸಿಣಿಯೂ ಬರುತ್ತಿದ್ದಳು. ನಾ ನನ್ನ ಬಳಿಗೇ ಬರುತ್ತಿದ್ದಾರೆ. ನನಗೆ ಭಯವಾಯಿತು – ಏನಿದು ? ದು. ಅಲ್ಲಿದ್ದ ಇತರರಿಗೂ ಆಶ್ಚರ್ಯವಾಗಿರಬೇಕು. ಎಲ್ಲರ ನ ನನ್ನ ಮೇಲೇ. ನನ್ನ ಹೃದಯ ಜೋರಾಗಿ ಬಡಿದುಕೊಳ್ಳ ಡಗಿತು. ಅವರಿಬ್ಬರು ಮಾತಾಡಿದ್ದು (ಇಂಗ್ಲಿಷ್‌ನಲ್ಲಿ) ಹೀಗಿತ್ತು:

ಪೊಲೀಸಿಣಿ : ಇದೇ ನಾನು ಹೇಳಿದ್ದು.
ಪೊಲೀಸಿಣಿ : ಇದಾ, ಇದನ್ನು ನಾನು ಡರ್ಬಾನ್‌ನಲ್ಲಿ ನೋಡಿದ್ದೆ.
ಪೊಲೀಸಿಣಿ : ಏನದು ?
ಪೊಲೀಸಿಣಿ : ಗೊತ್ತಿಲ್ಲ, ಅದಕ್ಕೆ ಹೊಲಿಗೆ ಇಲ್ಲ.
ಪೊಲೀಸಿಣಿ : ಮತ್ತೇ ?
ಪೊಲೀಸಿಣಿ : ಅದಕ್ಕೆ ಗಂಟೆಗಟ್ಟಲೆ ಸಮಯ ಬೇಕು.




ಈಗ ನಾನು ಬಾಯಿ ಹಾಕಿ, ''ಏನು ವಿಷಯ ?'' ಎಂದೆ. ಇಷ್ಟು ಹೊತ್ತಿಗೆ ಸುತ್ತ ಗುಂಪು ಸೇರಿತ್ತು. ಆ ಇಬ್ಬರೂ ಮುಖ ಮುಖ ನೋಡಿಕೊಂಡರು. ನೆಗೆ ಕಪ್ಪು ಪೊಲೀಸಿಣಿ, ''ನಿನ್ನ ಉಡುಪಿನ ಇನ್ನೊಂದು ತುದಿ ಎಲ್ಲಿದೆ ?'' ದಳು. ಸದ್ಯ ! ಇಷ್ಟೇ ತಾನೇ ಎಂದು ನಾನು ನಿಟ್ಟುಸಿರಿಟ್ಟೆ. ಕೆಲವರು ಮುಸಿಮುಸಿ ನಕ್ಕು ದೂರ ಸರಿದರು. ವರಂತೂ ಸಿಟ್ಟುಮಾಡಿದರು. ನಾನು ಕಾಲಿನ ಬಳಿ ಸ್ವಲ್ಪವೇ ಸರಿಸಿ ಸೀರೆಯ ಇನ್ನೊಂದು ತುದಿಯನ್ನು ತೋರಿಸಿದೆ. ಳು ಆಶ್ಚರ್ಯದಿಂದ ಬಿಟ್ಟಗಣ್ಣು ಬಿಟ್ಟಂತೆ ನಿಂತಿದ್ದವಳು, ಇನ್ನೇನೋ ಕೇಳುವುದರಲ್ಲಿದ್ದಳು. ಅಷ್ಟರಲ್ಲಿ ಬಿಳಿ ಲೀಸಿಣಿ, ''ಅಷ್ಟೇ ! ಸಮಾಧಾನವಾಯಿತಲ್ಲ ಸಾಕು, ಬಾ. ಇದಕ್ಕೆ ಹೊಲಿಗೆ ಇರುವುದಿಲ್ಲ ಎಂದು ಹೇಳಿದೆನಲ್ಲ... ದರೆ ಮತ್ತೆ ಹಾಕಿಕೊಳ್ಳಲು ಗಂಟೆಗಟ್ಟಲೆ ಹಿಡಿಯುತ್ತದೆ. ಬಾ ಹೋಗೋಣ'' ಎಂದಳು... ಫ್ರಾನ್ಸ್‌ನ ವಿಜ್ಞಾನಿ ಯುವತಿಯೊಬ್ಬಳು ಆಗ ನನ್ನ ಹತ್ತಿರ ಬಂದು, ''ನನಗೂ ಇದೇ ಅನುಮಾನವಿತ್ತು'' ಎಂದು ಪಿಸುಗುಟ್ಟಿದಳು.

ಭಾರತದೊಳಗೂ ಸೀರೆ ನನಗೊಂದಷ್ಟು ವಿಶಿಷ್ಟ ಅನುಭವ ಒದಗಿಸಿದೆ. ಗುಜರಾತ್‌ನಲ್ಲಿದ್ದಾಗ ಅನೇಕ ಹೆಣ್ಣು ಕ್ಕಳು (ಯುವವಿಜ್ಞಾನಿಗಳು) ನನ್ನನ್ನು ಅರಸಿಕೊಂಡು ಬರುತ್ತಿದ್ದುದು ಸೀರೆಗಾಗಿ. ಅಲ್ಲಿ ನಡೆಯುತ್ತಿದ್ದ ಸಾಂಸ್ಕೃತಿಕ ರ್ಯಕ್ರಮಗಳಲ್ಲಿ ಅತಿಥಿಗಳಿಗೆ ಹೂಗುಚ್ಛ ಅರ್ಪಿಸಲು ಈ ಹುಡುಗಿಯರು ವೇದಿಕೆ ಹತ್ತುತ್ತಿದ್ದರು. ಅದಕ್ಕಾಗಿ ರಿಗೆ ರೇಷ್ಮೆ ಸೀರೆ ಬೇಕಾಗುತ್ತಿತ್ತು. ನನ್ನ ''ಸ್ಟಾಕ್'' ತೋರಿಸಿ ಎಂದು ಕೇಳುತ್ತಿದ್ದರು. ಮೂರು ಮತ್ತೊಂದರಲ್ಲಿ ದನ್ನು ಆಯ್ಕೆಮಾಡಿ ಒಯ್ಯುತ್ತಿದ್ದರು. ಹಾಸ್ಟೆಲಿನಲ್ಲಿ ಇರುತ್ತಿದ್ದ ಈ ಹುಡುಗಿಯರು ರೇಷ್ಮೆ ಸೀರೆಯನ್ನು ಎಲ್ಲಿಂದ ದಾರು ? ಇವರನ್ನು ನನ್ನ ಬಳಿಗೆ ಕಳುಹಿಸುತ್ತಿದ್ದ ನಿರ್ವಾಹಕರು (ಅವರೂ ವಿಜ್ಞಾನಿಯೇ) ಈಚೆಗೆ ಟಿಯಾಗಿದ್ದರು. ''ನಿಮ್ಮನ್ನು ನೆನೆಸಿಕೊಳ್ಳುತ್ತಲೇ ಇರುತ್ತೇನೆ'' ಎಂದ ಮೇಲೆ ''ನೀವು ಅಹ್ಮದಾಬಾದ್ ಬಿಟ್ಟು ದಮೇಲೆ ನಮ್ಮ ಹುಡುಗಿಯರಿಗೆ ರೇಷ್ಮೆ ಸೀರೆಗೆ ಪರದಾಟವಾಗಿಬಿಟ್ಟಿದೆ'' ಎಂದು ಗುಟ್ಟು ಬಿಟ್ಟುಕೊಟ್ಟಿದ್ದರು.

ಅಹಮದಾಬಾದ್‌ನ ಬಹುತೇಕ ಶಾಲೆಗಳಲ್ಲಿ ''ಸರಸ್ವತಿ ವಂದನಾ'' ಎಂಬುದೊಂದು ಕಾರ್ಯಕ್ರಮ ಯುತ್ತದೆ. ಅದರಲ್ಲಿ ಸರಸ್ವತಿಯ ವೇಷ ಧರಿಸಿ ಕುಳಿತುಕೊಳ್ಳುವ ಹುಡುಗಿಯರು ಯಾರ್ಯಾರ ಮೂಲಕವೋ ನ್ನು ಸಂಪರ್ಕಿಸಿ ನನ್ನ ಬಿಳಿ ರೇಷ್ಮೆ ಸೀರೆ ಒಯ್ಯುತ್ತಿದ್ದರು. ಹಾಗಾಗಿ ಅದು ಎಲ್ಲ ಶಾಲೆಗಳಿಗೂ ಡ್ರೈ ಕ್ಲೀನ್ ಗಡಿಗಳಿಗೂ ಭೇಟಿಕೊಟ್ಟು ಬಂದಿದೆ.

ಬಿಳಿಸೀರೆ ನನ್ನನ್ನು ಪೇಚಿಗೆ ಸಿಕ್ಕಿಸಿದ್ದು ಬೆಂಗಳೂರಲ್ಲಿ ತೀರಾ ಇತ್ತೀಚೆಗೆ. ಭಾರತೀಯ ವಿದ್ಯಾ ಭವನದ ಮುಂದೆ ದುಹೋಗುತ್ತಿದ್ದಾಗ ಎದುರಾದ ಹಿರಿಯರೊಬ್ಬರು, ''ಈ ಕಡೆ ಅಲ್ಲಮ್ಮಾ ಆ ಕಡೆ ಹೋಗಿ'' ಎಂದು ಮಾರ್ಗದರ್ಶನ ಮಾಡಿದರು. ಅವರು ತೋರಿಸಿದ್ದ ದಿಕ್ಕಿನತ್ತ ನೋಡಿದೆ. ಬಿಳಿಸೀರೆಯುಟ್ಟ ಮಹಿಳೆಯರು ಹಿಂಡು ಹಿಂಡಾಗಿ ಧಾವಿಸುತ್ತಿದ್ದರು. (ರೇಸ್ ಕೋರ್ಸ್‌ಗೆ !)

ಅಂದಿನಿಂದ ಶನಿವಾರ-ಭಾನುವಾರ ಬಿಳಿಸೀರೆ ವರ್ಜ್ಯವಾಯಿತು. ಇಂತಹ ವಿಶಿಷ್ಟ ಅನುಭವಗಳೆಲ್ಲಾ ನಮಗೆ (ಸೀರೆ ಉಡುವವರಿಗೆ) ಮಾತ್ರ. ಈ ಬಗ್ಗೆ ಅಸೂಯೆ ಉಂಟಾಗುವುದು ಪುರುಷರಿಗೆ ಸಹಜವೇ. ಪಂಚೆ ಬಿಟ್ಟು ಪ್ಯಾಂಟು ಬರುವುದಕ್ಕೆ ಮುಂಚೆಯೂ ಈ ಅಸೂಯೆ ಇದ್ದಿರಲೇಬೇಕು ಎಂದು ನನ್ನ ಅನುಮಾನ. ಇದಕ್ಕೆ ಕಾರಣವಿಲ್ಲದಿಲ್ಲ. ಹೇಗಾದರೂ ಸೀರೆಯ ಜನಪ್ರಿಯತೆಯನ್ನು ಮಟ್ಟಹಾಕಬೇಕೆಂದು ಸಂಚು ನಡೆಸಿ ''ಸೀರೆ ಉಡಬೇಡಿ'' ಎಂದು ಹೆದರಿಸಲು ದ್ರೌಪದಿ ವಸ್ತ್ರಾಪಹರಣದ ಕತೆಯನ್ನು ಸೃಷ್ಟಿಸಿರಬೇಕು ಎಂದು ನನ್ನ ಗುಮಾನಿ. ಅದೇನೇ ಆದರೂ, ಅಂತಹ ಬೆದರಿಕೆಗಳನ್ನು ಎದುರಿಸಿ ಸಾವಿರಾರು ವರ್ಷಗಳಿಂದ ತನ್ನತನವನ್ನು ಉಳಿಸಿಕೊಂಡಿದೆ, ಈ ಸೀರೆ. ಅದು ನಮ್ಮನ್ನು ಬಿಡಲಾರದು. ನಾವೂ ಅಷ್ಟೇ – ನಾನೂ ಅಷ್ಟೇ – ಓ ಸೀರೆ, ನಾನಿನ್ನ ಬಿಡಲಾರೆ !

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ
ಹೈಗ್ರೌಂಡ್
ಬೆಂಗಳೂರು - 560 001

# ಅಪ್ಪನಿಗುಟ್ಟಿದೋರ್ಗೆ ಅಭಿವೃದ್ಧಿ ಕಾಣಿಸುತ್ತೆ

**ಯಾ**ರು ಹೆಚ್ಚು? ದೇವರೋ? ದೇವರ ಏಜೆಂಟರೋ?

ತಮ್ಮ ನಿರ್ವ್ಯಾಜ ಭಕ್ತಿಯಿಂದ ಭಗವಂತನನ್ನು ಮಣಿಸಿದವರು ಇದ್ದರಂತೆ ಪುರಾಣಯುಗದಲ್ಲಿ. ಆಗ ದೇವರು ಭಕ್ತ ಪರಾಧೀನ ಅಂತೆ.

ದೇವರಿಗೂ ಭಕ್ತನಿಗೂ ನೇರ ಸಂಪರ್ಕ. ಏಜೆಂಟರ ಸೊಟುಗದ ಅವಶ್ಯಕತೆ ಇರಲಿಲ್ಲ.

ಇಲ್ಲಿ, ಈ ಕಲಿಗಾಲದಲ್ಲಿ?

ದೇವರಿಗೆ ಬಾಯಿಲ್ಲ. ಮೂಕ ಅವನು. ಏಜೆಂಟರ ಬಾಯಿಯಾದರೋ ಬೊಂಬಾಯಿ. ಯಾವುದೇ ಆದೇಶ ನೀಡಿದರೂ ಇವರ ಮೂಲಕವೇ. ಇವರು ಇಲ್ಲದಿದ್ದರೆ ಅವನೂ ಇಲ್ಲ! ಅಂದರೆ ಅವನಿಗಿಂತ ಇವರೇ ದೊಡ್ಡವರು!

ಈ ಗುಟ್ಟು ಜನರಿಗೆ ಗೊತ್ತುಂಟು. ದೇವರಿಗೆ ಹರಕೆ ಹೊರುತ್ತಾರೆ. ಪೂಜಾರಿಗೆ ಸಮರ್ಪಿಸುತ್ತಾರೆ.

ರಾಜಕಾರಣಿಗಳು?

ಅವರೂ ಜನರೇ ಅಲ್ಲವೆ ಎನ್ನುವುದು ಮೂರ್ಖ ಪ್ರಶ್ನೆ. ಜನರನ್ನು ಆಳಲೆಂದೇ ನೇಮಿಸಲ್ಪಟ್ಟವರು ಅವರು!

ಅವರೇನು ಮಾಡಿದರು?

ಹಿಡಿದರು ಜ್ಯೋತಿಷಿಗಳ. ಯಾವ ಗ್ರಹ ಯಾವ ಮನೆಯಲ್ಲಿ ಅವಿತಿದೆ ಎಂದು ಅವರಿಗಲ್ಲವೆ ತಿಳಿದಿರುವುದು?

'ರಾಜ ಯೋಗವಿಲ್ಲ' ಸಾರಿದರು ಅವರು.

ಇಲ್ಲದ ಯೋಗ ತರುವುದು ಹೇಗೆ?

ಅದಕ್ಕೂ ಅವರಲ್ಲಿ ಪರಿಹಾರ ಇತ್ತು.

ನಡೆಸಿ ನಿರ್ದಿಷ್ಟ ದೇವರ ಪೂಜೆ. ಸಾಂಗವಾಗಿ ನೆರವೇರಲಿ ಯಜ್ಞ; ಹೋಮ, ಹವನ.

ಅದೂ ನಡೆಯಿತು. ಬಂಧಿಸಿದರು ಗ್ರಹಗಳನ್ನ ಬೇಕಾದ ಮನೆಗಳಿಗೆ.

ಅಲ್ಲಿಗೆ ಮುಗಿಯಿತೆ?

ತಿಳಿಯಬೇಕಲ್ಲ ದೇವರ ಮನಸ್ಸು?

ನಡೆದರು ಮಠಾಧೀಶರ ಬಳಿಗೆ.

ಸರ್ವಸಂಗ ಪರಿತ್ಯಾಗಿಗಳು ಕೊಡವಿದರು ಕಾವಿ. ಮರೆತರು ಅಧ್ಯಾತ್ಮಕತೆ, ಮೆರೆದರು ಲೌಕಿಕತೆ! ನೀಡಿದರು ಆದೇಶ 'ಇವರು ಮುಖ್ಯಮಂತ್ರಿ ಆಗಬೇಕು, ಇಂತಹವರು ಮಂತ್ರಿಗಳಾಗಬೇಕು.'

ಕಾರ್ಯರೂಪಗೊಂಡಿತೆ ಅವರ ಆದೇಶ?

ಉಲ್ಲಂಘಿಸುವುದೆಂದರೇನು ಅರ್ಥ? ಕಾವಿಧಾರಿಗಳ ಮಾತೇ ಸಂವಿಧಾನ!

ಆಯಿತೆ ಬಡವರ ಉದ್ಧಾರ? ದೇಶದ ಅಭಿವೃದ್ಧಿ? ಒಂದು ಕತೆ ಕೇಳಿ.

ಸಮೃದ್ಧಿಯಾಗಿರುವ ಒಂದು ಊರು. ಅಲ್ಲಿಗೆ ಒಬ್ಬ ಸನ್ಯಾಸಿ ಬಂದ. ಊರ ಮುಂದಲ ಕೆರೆಯ ಪಕ್ಕದಲ್ಲಿ ನೆಲೆಸಿದ.

ಕಾವಿ ತೊಟ್ಟಿರುವವರೆಲ್ಲ ಸರ್ವಸಂಗಪರಿತ್ಯಾಗಿಗಳು ತಾನೆ! ಜನ ಬಂದರು. ಇಷ್ಟಾರ್ಥ ಫಲಿಸುವಂತೆ ಕೋರಿಕೊಂಡರು. ಸನ್ಯಾಸಿಯೂ ಶುಭ ಹಾರೈಸಿದ.

ಫಲಿಸಿತೆ ಇಷ್ಟಾರ್ಥ?

ಕೆಲವರಿಗೆ ಫಲಿಸಿತು. ಹಲವರಿಗೆ ಇಲ್ಲ. ಅದೆಲ್ಲ ಅವರವರ ಪೂರ್ವಾರ್ಜಿತ ಪುಣ್ಯದ ಫಲ!

ಫಲಿಸಿದವರ ಪಾಲಿಗೆ: 'ಸ್ವಾಮೀಜಿ ಪವಾಡ ಪುರುಷ', 'ದೈವಾಂಶ ಸಂಭೂತ', 'ದೇವರೇ ಸ್ವಾಮೀಜಿಯ ರೂಪದಲ್ಲಿ ಬಂದಿದ್ದಾನೆ.'

ಫಲಿಸದವರಿಗೆ: 'ಕಳ್ಳ ಸನ್ಯಾಸಿ', 'ದೇವರೂ ಅಲ್ಲ, ದಿಂಡರೂ ಅಲ್ಲ, ವಂಚಕ', 'ದುಡೀಲಾರ್ದೆ ಈ ಯಾಸ ಕಟ್ಟವ್ನೆ.'

ಸನ್ಯಾಸಿಗೆ ಜನರ ಭಾವನೆ ತಿಳಿಯಿತು. ಯಾವುದಾದರೂ ತಂತ್ರ ಉಪಯೋಗಿಸಬೇಕು; ಇಲ್ಲದಿದ್ದರೆ ಜನರು ತನ್ನನ್ನು ಇಲ್ಲಿಂದ ಓಡಿಸುವುದು ಖಚಿತ ಎಂಬುದು ಅರ್ಥ ಆಯಿತು. ನೇರವಾಗಿ ಊರಿನ ಒಳಕ್ಕೆ ಹೋದ. ಯಾವತ್ತೂ ಬಾರದ ಸ್ವಾಮೀಜಿ ತಮ್ಮ ಊರಿಗೆ ಬಂದಿರುವುದು ತಿಳಿದು ವಿದ್ಯುತ್ ಸಂಚಾರ ಆದಂತಾಯಿತು. ಜನ ಸ್ವಾಮೀಜಿ ಬಳಿಗೆ ಬಂದು ಸೇರಿದರು. ಸ್ವಾಮೀಜಿ ಧೀರ ಗಂಭೀರ ಧ್ವನಿಯಲ್ಲಿ ಹೇಳಿದರು: ''ಮಕ್ಕಳೇ, ಈಗ ಶ್ರಾವಣ ಮಾಸ. ಈ ಪವಿತ್ರ ಮಾಸದ ಶನಿವಾರದಂದು ಆ ದಯಾಮಯನಾದ ತಿರುಪತಿ ತಿಮ್ಮಪ್ಪನು ನಮ್ಮ ಆಶ್ರಮದಲ್ಲಿ ತನ್ನ ದರ್ಶನವನ್ನು ನೀಡುತ್ತಾನೆ. ಆ ಪರಮಾತ್ಮನ ದರ್ಶನವನ್ನು ನೀವೂ ಮಾಡಬೇಕೆಂದು ಆ ದಯಾಮಯನ ಪ್ರೇರಣೆ ಆಗಿದೆ. ಕೊನೆಯ ಶ್ರಾವಣ ಶನಿವಾರ ನೀವೆಲ್ಲರೂ ಆಶ್ರಮದ ಬಳಿಗೆ ಬಂದು ಪರಮಾತ್ಮನ ದರ್ಶನ ಮಾಡಿ ಪುನೀತರಾಗಬೇಕೆಂಬುದು ನಮ್ಮಗಳ ಅಪೇಕ್ಷೆ. ದರ್ಶನಾಕಾಂಕ್ಷಿಗಳು ಅಂದು ಆಶ್ರಮದ ಬಳಿಗೆ ಬನ್ನಿ.''

ತಿರುಪತಿ ತಿಮ್ಮಪ್ಪನ ದರ್ಶನ. ಅದೂ ಶ್ರಾವಣ ಶನಿವಾರದಂದು! ಊರವರು ಪುಳಕಿತರಾದರು. ಕೊನೆಯ ಶನಿವಾರ ಬಂದಿತು. ಸನ್ಯಾಸಿಯ ಮೇಲೆ ಭಕ್ತಿ ಇದ್ದವರು ದೇವರ ದರ್ಶನವಾಗುವುದೆಂದು ಸಂತೋಷಿಸಿದರು. ಕಳ್ಳ ಸನ್ಯಾಸಿ ಎನ್ನುತ್ತಿದ್ದವರೂ ಇವನ ಬಂಡವಾಳ ಬಯಲು ಮಾಡಬಹುದೆಂದು ಹರ್ಷದಲ್ಲಿದ್ದರು. ಅಂತೂ ಅವತ್ತು ನಂಬಿಕೆ ಇರುವವರು, ಇಲ್ಲದವರಿಂದ ಆಶ್ರಮದ ಆವರಣ ತುಂಬಿಹೋಗಿತ್ತು. ಒಟ್ಟಿನಲ್ಲಿ ಇಡೀ ಊರೇ ಅಲ್ಲಿ ಸೇರಿತ್ತು.

ಪೂಜಾ ಕಾರ್ಯದಲ್ಲಿ ನಿರತನಾಗಿದ್ದ ಸನ್ಯಾಸಿ ಆಶ್ರಮದ ಕುಟೀರದಿಂದ ಹೊರಬಂದ. ತುಂಬಿರುವ ಜನಸಮೂಹ ನೋಡಿದ. ಪಕ್ಕದಲ್ಲೇ ಇದ್ದ ತಿಪ್ಪೆಯ ಕಡೆ ನಡೆದ. ಜನಸಮೂಹ ಅವನನ್ನು ಹಿಂಬಾಲಿಸಿತು. ತನ್ನ ಕಮಂಡಲದಿಂದ ನೀರನ್ನು ತೆಗೆದು ತಿಪ್ಪೆಯ ಮೇಲೆ ಪ್ರೋಕ್ಷಿಸಿದ. 'ಎಲ್ಲರೂ ಒಂದೇ ಸಮನೆ ಗೋವಿಂದಾ ಗೋವಿಂದ ಎನ್ನಿ' ಅಂದ. 'ಗೋವಿಂದಾ ಗೋವಿಂದ'



ನಭೋಮಂಡಲ ಸೇರುತ್ತಿರುವಂತೆಯೇ ಸನ್ ... ಭಕ್ತಿಯಿಂದ ತಿಪ್ಪೆಯ ಪೂಜೆ ನೆರವೇರಿಸಿದ. ಎಲ್ಲ ... ನಿಶ್ಶಬ್ದರಾಗಿರಬೇಕೆಂದು ಸೂಚಿಸಿದ. ದೇವರ ... ಕಾಣುವ ತವಕದಿಂದ ಭಕ್ತಗಣ ಮೌನ ತಾಳಿತು. ಸನ್ಯಾಸಿ ಹೇಳಿದ– ''ಭಗವಂತನ ದರ್ಶನ ಪಡೆಯ ... ನೀವೆಲ್ಲರೂ ಕಾತುರರಾಗಿದ್ದೀರಿ. ಆದರೆ ಒಂ ... ಸೂಚನೆ. ನೀವೆಲ್ಲರೂ ಐದು ಕ್ಷಣಗಳನ್ನು ಎಣಿಸಿ ... ಐದನೇ ಕ್ಷಣಕ್ಕೆ ಆ ದಯಾಮಯನಾದ ತಿರು ... ತಿಮ್ಮಪ್ಪ ಪ್ರತ್ಯಕ್ಷನಾಗುತ್ತಾನೆ. ಅಪ್ಪನಿಗೆ ಹುಟ್ಟಿದವ ... ಮಾತ್ರ ಅವನ ದರ್ಶನ ಪ್ರಾಪ್ತವಾಗುತ್ತದೆ.''

ಭಕ್ತಗಣ ಐದು ಕ್ಷಣ ಎಣಿಸಿತು. ಐದನೇ ಕ್ಷಣ ... ತಿರುಪತಿ ತಿಮ್ಮಪ್ಪ ಪ್ರತ್ಯಕ್ಷ ಆದ.

ಜನರು ಅದನ್ನು ಕಂಡರೆ?

'ಕಂಡೆವು' ಅಂದರು!

ಇಲ್ಲ ಅಂದರೆ ಅವರು ಅಪ್ಪನಿಗೆ ಹುಟ್ಟಿದವರಲ್ಲ!

ಈಗ ಆಯಿತೆ ದೇಶದ ಅಭಿವೃದ್ಧಿ? ಪ್ರಶ್ನೆ.

ಆಗಿದೆ ಅಭಿವೃದ್ಧಿ! ಆದರೆ...

ಅದು ಅಪ್ಪನಿಗೆ ಹುಟ್ಟಿದವರಿಗೆ ಮಾತ್ರ ಕಾಣಿಸುತ್ತೆ

**ಎಚ್. ಎಲ್. ಕೇಶವಮೂರ್ತಿ**
೨೦೪೪, ೧೨ನೇ ಅಡ್ಡರಸ್ತೆ, ಕಲ್ಲಹಳ್ಳಿ ಬಡಾವಣೆ, ಮಂಡ್ಯ-೫೭೧ ...




# ಸದ್ದಿಲ್ಲದೆ ಅಮೆರಿಕಾಗೆ ಶರಣಾಗತಿ

**ಕೆ**ಲವು ದಿನಗಳ ಹಿಂದೆ ಪತ್ರಿಕೆಗಳಲ್ಲಿ ಒಂದು ಸುದ್ದಿ ಪ್ರಕಟವಾಯಿತು. ಅದು ಅಮೆರಿಕಾದ ಗೂಢಚರ್ಯೆ ಸಂಸ್ಥೆ ಐಎ) ನಡೆಸಿದ ತನಿಖೆಗಳ ಪ್ರಕಾರ ಇರಾನ್ ಕಳೆದ ನಾಲ್ಕು ವರ್ಷಗಳಿಂದ (೨೦೦೩) ರಮಾಣು ಅಸ್ತ್ರತಯಾರಿಕೆಯ ಯಾವುದೇ ಚಟುವಟಿಕೆಯಲ್ಲಿ ತೊಡಗಿಲ್ಲ ಎಂದು ವರದಿ ಾಡಿರುವುದಾಗಿ ತಿಳಿಸಿತು. ಅಂತಾರಾಷ್ಟ್ರೀಯ ಪರಮಾಣು ಶಕ್ತಿ ಸಂಸ್ಥೆಯ (ಐಎಇಎ) ್ಯಕ್ಷ ಅಲ್ ಬರ್ಧೆದೆ ಕೂಡ ಇದೇ ರೀತಿಯ ವರದಿಯನ್ನು ವಿಶ್ವಸಂಸ್ಥೆಯ ಭದ್ರತಾ ಮಂಡಳಿಗೆ ್ಲಿಸಿದ್ದಾರೆ. ಈ ಎರಡೂ ವರದಿಗಳು ಮುಂದೆ ಇದ್ದರೂ ಅಧ್ಯಕ್ಷ ಜಾರ್ಜ್ ಬುಷ್ ಅವನ್ನು ೆಗಣಿಸಿ ಏಕಪಕ್ಷೀಯವಾಗಿ ಇರಾನಿನ ಮೇಲೆ ಆರ್ಥಿಕ ದಿಗ್ಬಂಧನ ವಿಧಿಸಿದ್ದಾರೆ. ್ವಸಂಸ್ಥೆಯ ಭದ್ರತಾ ಮಂಡಳಿಯಲ್ಲಿ ವಿರೋಧ ಇದ್ದುದರಿಂದ ಅಮೆರಿಕಾಗೆ ಅದನ್ನು ಪಯೋಗಿಸಿಕೊಳ್ಳಲಾಗಲಿಲ್ಲ. ಆದರೂ ಬುಷ್ ಆಡಳಿತಕ್ಕೆ ಇತರ ದೇಶಗಳು ತಮ್ಮನ್ನು ುಸರಿಸುವಂತೆ ಒತ್ತಡ ಹೇರುವುದು ಕಷ್ಟವಾಗಿಲ್ಲ. ಇಂಥ ವಿಚಾರಗಳಲ್ಲಿ ಅಮೆರಿಕಾದ ತಳಿತಾಗಾರರಿಗೆ ಯಾರ ಕೈ ತಿರುಚಬೇಕು ಎನ್ನುವುದು ಚೆನ್ನಾಗಿ ಗೊತ್ತಿದೆ. ಪದೇ ಪದೇ ಳ್ಳು ಹೇಳುತ್ತಿದ್ದು ಅದನ್ನೇ ಸತ್ಯವಾಗಿಸುವ ತಂತ್ರಗಾರಿಕೆ ಅನುಸರಿಸಿ ಇರಾಕಿನ ಮೇಲೆ ರಾಕ್ರಮಣ ನಡೆಸಿತು. ಈಗ ಇರಾನಿನ ಸರದಿ.

ಮೇಲಿನ ಸುದ್ದಿ ನಮ್ಮ ಮಾಧ್ಯಮಗಳ ಗಮನ ಸೆಳೆಯಲೇ ಇಲ್ಲ. ಪತ್ರಿಕೆಗಳಲ್ಲಿ ಎಲ್ಲೋ ೂಲೆಯಲ್ಲಿ ಪ್ರಕಟವಾಗಿತ್ತು. ಹಾಗೆಯೇ ಇನ್ನೊಂದು ಸುದ್ದಿ ಕೂಡ ಪ್ರಕಟವಾಗಲೇ ಇಲ್ಲ. ಯಶಃ ಮನಮೋಹನ ಸಿಂಗ್ ಮತ್ತು ಜಾರ್ಜ್ ಬುಷ್ ಇಬ್ಬರಿಗೂ ಮುಜುಗರ ದೀತೆಂದು ಚರ್ಚೆಗೆ ಬರಲೇ ಇಲ್ಲ. ಅದು ಇರಾನಿನ ಮೇಲೆ ಅಮೆರಿಕಾ ಏಕಪಕ್ಷೀಯವಾಗಿ ಧಿಸಿರುವ ಆರ್ಥಿಕ ದಿಗ್ಬಂಧನಕ್ಕೆ ಸಂಬಂಧಿಸಿದ ವಿಚಾರ. ಭಾರತೀಯ ಸ್ಟೇಟ್ ಬ್ಯಾಂಕ್ ರತದಿಂದ ಸರಕುಗಳನ್ನು ಆಮದು ಮಾಡಿಕೊಳ್ಳುತ್ತಿರುವ ಇರಾನಿಯನ್ ಕಂಪನಿಗಳ ವಹಾರ ಪತ್ರಗಳನ್ನು (ಲೆಟರ್ಸ್ ಆಫ್ ಕ್ರೆಡಿಟ್) ಅಂಗೀಕರಿಸಲು ನಿರಾಕರಿಸುತ್ತಿದೆ ಎಂದು ದುಬಂದಿದೆ. ಮನಮೋನಹ ಸಿಂಗ್ ಸರಕಾರ ಅಮೆರಿಕಾದ ಒತ್ತಡಗಳಿಗೆ ಮಣಿದು ಈ ು ಕೈಗೊಂಡಿದೆ. ಇಲ್ಲದಿದ್ದರೆ ಸ್ಟೇಟ್ ಬ್ಯಾಂಕ್ ಅಂಥ ಕ್ರಮ ತೆಗೆದುಕೊಳ್ಳುತ್ತಿರಲಿಲ್ಲ. ್ವಸಂಸ್ಥೆಯ ಭದ್ರತಾ ಮಂಡಳಿಯಲ್ಲಿ ಅಂಗೀಕಾರವಾಗಿರುವ ದಿಗ್ಬಂಧನಗಳನ್ನು ಮಾತ್ರ ್ಲ ದೇಶಗಳೂ ಪಾಲಿಸಬೇಕೇ ಹೊರತು ಯಾವುದೇ ದೇಶದ ಏಕಪಕ್ಷೀಯ ನಿರ್ಧಾರ ್ನಲ್ಲ. ಉದಾಹರಣೆಗೆ, ೨೦೦೭ರ ಮಾರ್ಚ್‌ನಲ್ಲಿ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯು ಾನಿಗೆ ಕೆಲವು ಆಯುಧ ಸಾಮಗ್ರಿಗಳ ಸರಬರಾಜನ್ನು ನಿಷೇಧಿಸಿತು. ಬೇರಾವುದೇ ನಿಷೇಧ ್ಲದಿರುವಾಗ ಸ್ಟೇಟ್ ಬ್ಯಾಂಕ್ ಎಲ್ಲ ವ್ಯವಹಾರಗಳನ್ನು ನಿಲ್ಲಿಸಿರುವುದೇಕೆ ? ಈ ವಿಚಾರ ಾಧ್ಯಮಗಳಲ್ಲಿ ಚರ್ಚೆಗೆ ಗ್ರಾಸವಾಗಲೇ ಇಲ್ಲ. ಇನ್ನೊಂದು, ಭಾರತದ ಎಸ್ಸಾರ್ ಕಂಪನಿ ಾನಿನಲ್ಲಿ ಹಲವು ಮಿಲಿಯನ್ ಡಾಲರುಗಳ ತೈಲ ಸಂಸ್ಕರಣಾಗಾರ ನಿರ್ಮಾಣ ಯೋಜನೆ ್ನು ಅಮೆರಿಕಾದ ಒತ್ತಡಕ್ಕೆ ಮಣಿದು ಕೈಬಿಟ್ಟಿದೆ. ಹೀಗೆ ಕಾಣದ ಕೈನ ಕೈವಾಡದಿಂದ ಾನಿನೊಂದಿಗೆ ಭಾರತದ ವ್ಯವಹಾರಗಳು ಒಂದೊಂದಾಗಿ ಸ್ಥಗಿತಗೊಳ್ಳುತ್ತಿವೆ. ಇವೆಲ್ಲ ುರಿಕಾದ ನ್ಯೂಕ್ಲಿಯರ್ ಸಹಕಾರ ಒಪ್ಪಂದ ಇನ್ನೂ ಜಾರಿಗೆ ಬರುವ ಮೊದಲೇ ಭವಿಸುತ್ತಿರುವ ವಿದ್ಯಮಾನಗಳು. ಪ್ರಧಾನಿ ಮನಮೋಹನ ಸಿಂಗ್ ಈಚೆಗೆ ರಷ್ಯಾಗೆ ಕೃತ ಭೇಟಿ ನೀಡಿ ಅಧ್ಯಕ್ಷ ವ್ಲದಿಮೀರ್ ಪುತಿನ್ ಜೊತೆ ಮಾತುಕತೆ ನಡೆಸಿದರು. ಹಲವು ್ಪಂದಗಳಿಗೆ ಸಹಿಹಾಕಿದರು. ಆದರೆ ಕೊನೆ ಘಳಿಗೆಯಲ್ಲಿ ರಷ್ಯಾದೊಂದಿಗೆ ನ್ಯೂಕ್ಲಿಯರ್ ್ಪಂದಕ್ಕೆ ಭಾರತ ಸಹಿ ಹಾಕಲಿಲ್ಲ. ಈ ಒಪ್ಪಂದ ೨೦೦೭ರ ಜನವರಿಯಲ್ಲಿ ರಷ್ಯಾದ ್ಯಕ್ಷ ಪುತಿನ್ ಭಾರತಕ್ಕೆ ಬಂದಿದ್ದಾಗ ಪ್ರಸ್ತಾಪವಾಗಿದ್ದು, ಎಲ್ಲವೂ ಸಿದ್ಧವಾಗಿತ್ತು. ಈ ಒಪ್ಪಂದದ ಾರ ತಮಿಳುನಾಡಿನ ಕೂಡಂಕುಳಂನಲ್ಲಿ ೧೦೦೦ ಮೆಗಾವಾಟ್ ಸಾಮರ್ಥ್ಯವುಳ್ಳ ಇನ್ನೂ ಲ್ಕು ನ್ಯೂಕ್ಲಿಯರ್ ರಿಯಾಕ್ಟರುಗಳನ್ನು ರಷ್ಯಾದ ಸಹಕಾರದಿಂದ ಸ್ಥಾಪಿಸಲು ಯೋಜಿಸ ಗಿತ್ತು. ಇದಕ್ಕೆ ಅಗತ್ಯವಾದ ಇಂಧನವನ್ನು ಪೂರೈಸಲು ರಷ್ಯಾ ಸಮ್ಮತಿಸಿತ್ತು. ಇದೇನೂ ೊಸ ಯೋಜನೆಯಲ್ಲ. ೧೯೮೮ರಲ್ಲಿಯೇ ಹಿಂದಿನ ಸೋವಿಯತ್ ಒಕ್ಕೂಟದೊಂದಿಗೆ ಈ ್ ಒಪ್ಪಂದವಾಗಿತ್ತು. ಕೂಡಂಕುಳಂನಲ್ಲಿ ಎರಡು ನ್ಯೂಕ್ಲಿಯರ್ ರಿಯಾಕ್ಟರುಗಳ ಸ್ಥಾಪನೆಗೆ ್ಯ ಒಪ್ಪಿತ್ತು. ಸೋವಿಯತ್ ಒಕ್ಕೂಟದ ವಿಘಟನೆಯಿಂದಾಗಿ ಯೋಜನೆ ನೆನೆಗುದಿಗೆ ್ತು. ೧೯೯೮ರಲ್ಲಿ ಮತ್ತೆ ಯೋಜನೆ ಪುನಶ್ಚೇತನಗೊಂಡು ಕಾರ್ಯಗತವಾಗಿದೆ. ಮುಂದಿನ ್ಷದಿಂದ ಈ ರಿಯಾಕ್ಟರುಗಳು ವಿದ್ಯುಚ್ಛಕ್ತಿ ಉತ್ಪಾದಿಸಲಿವೆ. ಇದರ ಮುಂದುವರಿಕೆ ಯಾಗಿಯೇ ಮತ್ತೆ ನಾಲ್ಕು ರಿಯಾಕ್ಟರುಗಳ ಸ್ಥಾಪನೆಗೆ ಎರಡೂ ಸರಕಾರಗಳೂ ಸಮ್ಮತಿಸಿದ್ದುವು. ಅಮೆರಿಕಾದೊಂದಿಗೆ ನ್ಯೂಕ್ಲಿಯರ್ ಸಹಕಾರ ಒಪ್ಪಂದ ಇದಕ್ಕೆ ಅಡ್ಡಿಯಾಗಿ ಪರಿಣಮಿಸಿದೆ. ರಷ್ಯಾದೊಂದಿಗೆ ನ್ಯೂಕ್ಲಿಯರ್ ಕ್ಷೇತ್ರದಲ್ಲಿ ಸಹಕಾರವನ್ನು ವಿಸ್ತರಿಸಿದರೆ ಅಮೆರಿಕಾದ ಆಕ್ರೋಶಕ್ಕೆ ಗುರಿಯಾಗಬೇಕಾಗುವುದೆಂಬ ಭೀತಿಯಿಂದ ಮನಮೋಹನ ಸಿಂಗ್ ಸರಕಾರ ಹಿಂದೆ ಸರಿದಿದೆ ಎಂಬುದು ಸ್ಪಷ್ಟವಾಗಿದೆ.

ಪಾರ್ಲಿಮೆಂಟಿನ ಚಳಿಗಾಲದ ಅಧಿವೇಶನದಲ್ಲಿ ರಷ್ಯಾದೊಂದಿಗೆ ನ್ಯೂಕ್ಲಿಯರ್ ಒಪ್ಪಂದ ಸಹಿ ಹಾಕದೆ ಹೋಗಿರುವ ಪ್ರಶ್ನೆ ಪ್ರಸ್ತಾಪವಾಗಿದೆ. ಎಡಪಕ್ಷಗಳು ಯುಪಿಎ ಸರಕಾರದ ಈ ಕ್ರಮವನ್ನು ಪ್ರಶ್ನಿಸಿವೆ. ಸರಕಾರ ಈ ವಿಚಾರದಲ್ಲಿ ಸ್ಪಷ್ಟೀಕರಣ ನೀಡಬೇಕಾಗಿದೆ. ಭಾರತದೊಂದಿಗೆ ನ್ಯೂಕ್ಲಿಯರ್ ಕ್ಷೇತ್ರದಲ್ಲಿ ಈವರೆಗೆ ಸಹಕರಿಸುತ್ತಿರುವ ರಾಷ್ಟ್ರ ರಷ್ಯಾ ಒಂದೇ. ಹಿಂದೆಯೇ ಒಪ್ಪಂದವಾಗಿರುವುದರಿಂದ ನ್ಯೂಕ್ಲಿಯರ್ ಸರಬರಾಜು ತಂಡದ ರಾಷ್ಟ್ರಗಳಿಂದ ಯಾವುದೇ ರೀತಿಯ ನಿರ್ಬಂಧವೂ ಅನ್ವಯವಾಗುವುದಿಲ್ಲ ಎಂದು ರಷ್ಯಾ ಸ್ಪಷ್ಟವಾಗಿ ಹೇಳಿದೆ. ೧೯೯೮ರಲ್ಲಿ ಹಿಂದಿನ ಒಪ್ಪಂದದಂತೆ ಯೋಜನೆಯನ್ನು ಪುನಶ್ಚೇತನಗೊಳಿಸಿದಾಗ ಅಮೆರಿಕಾ ಇದಕ್ಕೆ ಆಕ್ಷೇಪಿಸಿತ್ತು. ಆದರೆ ಅದರಿಂದ ಯೋಜನೆ ಕಾರ್ಯಗತವಾಗಲು ಅಡ್ಡಿಯೇನಾಗಲಿಲ್ಲ. ಆದರೆ ಈಗ ಭಾರತ ಹೊಸ ಒಪ್ಪಂದಕ್ಕೆ ಸಹಿ ಹಾಕಲು ಹಿಂದೇಟು ಹಾಕಿದೆ. ಅಮೆರಿಕಾದೊಂದಿಗೆ ನ್ಯೂಕ್ಲಿಯರ್ ಸಹಕಾರ ಒಪ್ಪಂದ ಕುರಿತು ದಿನಬೆಳಗಾದರೆ ಒಂದಲ್ಲ ಒಂದು ಕಾರಣದಿಂದ ಅಬ್ಬರದ ಪ್ರಚಾರ ಮಾಡುವ, ಈ ಒಪ್ಪಂದವನ್ನು ಹಾಡಿ ಹೊಗಳಿ, ಎಡ ಪಕ್ಷಗಳ ವಿರೋಧವನ್ನು ತೆಗಳಿ ಅಬ್ಬರ ಮಾಡುವ ಮಾಧ್ಯಮಗಳು ಮನಮೋಹನ ಸಿಂಗ್ ರಷ್ಯಾದೊಂದಿಗೆ ಅದೇ ನ್ಯೂಕ್ಲಿಯರ್ ಸಹಕಾರಕ್ಕೆ ಸಿದ್ಧವಾಗಿದ್ದ ಒಪ್ಪಂದಕ್ಕೆ ಸಹಿ ಹಾಕದೆ ಹಿಂದೇಟು ಹಾಕಿರುವುದರ ಬಗೆಗೆ ಚಕಾರವೆತ್ತಿಲ್ಲ. ಈ ತಾರತಮ್ಯ ಏಕೆ ? ಅಮೆರಿಕದ ಭಯವೆ ? ಮಾಧ್ಯಮಗಳೇ ಆತ್ಮಾವಲೋಕನ ಮಾಡಿಕೊಂಡು ಈ ಪ್ರಶ್ನೆಗಳಿಗೆ ಉತ್ತರಿಸಬೇಕು.

ಮನಮೋತನ ಸಿಂಗ್ ಸರಕಾರ ಅಮೆರಿಕಾದ ಒತ್ತಡಕ್ಕೆ ಮಣಿಯುತ್ತಿರುವುದು ಇದೇ ಮೊದಲ ಸಲವೇನಲ್ಲ. ಜಾರ್ಜ್‌ಬುಷ್ ಭಾರತದೊಂದಿಗೆ ನ್ಯೂಕ್ಲಿಯರ್ ಸಹಕಾರದ ಬಲೆ ಬೀಸಿದಾಗಿನಿಂದ ಯುಪಿಎ ಸರಕಾರ ಅಮೆರಿಕಾದ ಆಜ್ಞಾನುವರ್ತಿಯಂತೆ ನಡೆದುಕೊಳ್ಳ ತೊಡಗಿದೆ. ಮೊದಲ ಶರಣಾಗತಿ ಐಎಇಎ ಸಭೆಯಲ್ಲಿ ಇರಾನಿನ ವಿರುದ್ಧವಾಗಿ ಭಾರತ ಮತ ಚಲಾಯಿಸಿದ್ದು. ಭಾರತದ ಸ್ವತಂತ್ರ ವಿದೇಶಾಂಗ ನೀತಿಗೆ ಬಿದ್ದ ಮೊದಲ ಪೆಟ್ಟು ಇದು. ಭಾರತದ ಸ್ವಾತಂತ್ರ್ಯ ಸಾರ್ವಭೌಮತ್ವಕ್ಕೆ ಚ್ಯುತಿ ಬರುವ ಯಾವುದೇ ಒತ್ತಡಗಳಿಗೆ ಮಣಿಯುವುದಿಲ್ಲ ಎಂದು ಬಡಾಯಿಕೊಚ್ಚಿಕೊಳ್ಳುವ ಕಾಂಗ್ರೆಸ್ ನೇತೃತ್ವದ ಮನಮೋಹನ ಸಿಂಗ್ ಸರಕಾರ ಅದಕ್ಕೆ ವಿರುದ್ಧವಾಗಿ ನಡೆದುಕೊಳ್ಳುತ್ತಿದೆ. ಇರಾನಿನಿಂದ ಇಂಧನಾನಿಲವನ್ನು ಕೊಳವೆ ಮೂಲಕ ರವಾನಿಸುವ ಭಾರತ-ಇರಾನ್-ಪಾಕಿಸ್ತಾನ ತ್ರಿರಾಷ್ಟ್ರ ಸಹಕಾರ ಯೋಜನೆ ಈಗ ಪೂರ್ಣವಾಗಿ ತೆರೆಮರೆಗೆ ಸರಿದಿದೆ. ಮೊದಲಿನಿಂದಲೂ ಈ ಯೋಜನೆಗೆ ಅಮೆರಿಕಾದ ವಿರೋಧವಿದ್ದುದನ್ನು ನೆನಪಿನಲ್ಲಿರಿಸಿಕೊಳ್ಳಬೇಕು. ಹಾಗಾಗಿ ಈಗ ಇರಾನಿನೊಂದಿಗಷ್ಟೇ ಅಲ್ಲದೆ, ಬೇರಾವುದೇ ದೇಶಗಳೊಂದಿಗೆ ವ್ಯವಹರಿಸಬೇಕಾದರೂ ಅಮೆರಿಕಾದ ದೊಡ್ಡಣ್ಣನ ಅಪ್ಪಣೆ ಪಡೆಯಬೇಕಾದ ಸ್ಥಿತಿ ಬಂದಿದೆ. ಅಮೆರಿಕಾದೊಂದಿಗೆ ನ್ಯೂಕ್ಲಿಯರ್ ಸಹಕಾರ ಒಪ್ಪಂದದ ನಂಟಿಗೆ ಬೆಸೆದಿರುವುದರಿಂದಲೇ ಮನಮೋಹನ ಸಿಂಗ್ ಸರ್ಕಾರ ರಷ್ಯಾದೊಂದಿಗೆ ನ್ಯೂಕ್ಲಿಯರ್ ಸಹಕಾರ ಒಪ್ಪಂದ ವಿಸ್ತರಣೆಗೆ ಸಹಿ ಹಾಕಲು ಹಿಂದೇಟು ಹಾಕಿದೆ. ಮೊದಲಿನಿಂದ ಭಾರತದ ಜೊತೆ ದೃಢವಾದ ಸ್ನೇಹ ಸಂಬಂಧಗಳನ್ನಿರಿಸಿಕೊಂಡು, ಬೆಂಬಲ ನೀಡುತ್ತ ಬಂದಿರುವ ರಷ್ಯಾದ ಜೊತೆ ಒಪ್ಪಂದಕ್ಕೆ ಹಿಂದೇಟುಹಾಕಿರುವುದು ನಮ್ಮ ವಿದೇಶಾಂಗ ವ್ಯವಹಾರವನ್ನು ಅಮೆರಿಕಾದ ಅಧೀನಕ್ಕೆ ಒಪ್ಪಿಸಿರುವುದರ ಸಂಕೇತ. ಅಮೆರಿಕಾದೊಂದಿಗೆ ಒಪ್ಪಂದ ಅನುಷ್ಠಾನಕ್ಕೆ ಬರುವುದಕ್ಕೆ ಮುನ್ನವೇ ಹೀಗಾದರೆ ಮುಂದೇನು ? ಸ್ವಾತಂತ್ರ್ಯ, ಸಾರ್ವಭೌಮತ್ವ, ಸ್ವತಂತ್ರ ನಡವಳಿಕೆ ಎಲ್ಲವನ್ನೂ ಮೂಟೆ ಕಟ್ಟಿಟ್ಟು, ಅಮೆರಿಕಾದ ಅನುಮತಿ ಪಡೆಯಲು ರಾಯಭಾರಿ ಕಚೇರಿ ಮುಂದೆ ಪ್ರಧಾನಿ ಮನಮೋಹನ ಸಿಂಗ್ ಕೈಕಟ್ಟಿ ನಿಲ್ಲಬೇಕಾದೀತು. ಅದಕ್ಕೆ ಬದಲು ಅವರು ಮರ್ಯಾದೆಯಿಂದ ಅಮೆರಿಕಾದೊಂದಿಗೆ ನ್ಯೂಕ್ಲಿಯರ್ ಸಹಕಾರ ಒಪ್ಪಂದವನ್ನು ತಿರಸ್ಕರಿಸಬೇಕು. ಇಲ್ಲ ಗದ್ದುಗೆಯಿಂದ ಇಳಿಯಬೇಕು.

ಸೀಯಾರ್ಕೆ
'ಚೌಬೀನ', ೮೪೯, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫



# ಸಾಹಿತ್ಯ ಪ್ರಕಾಶನ: ಕೊಪ್ಪೀಕರ ಬೀದಿ, ಹುಬ್ಬಳ್ಳಿ - 580 020 © (0836) 2367676, ಮೊ : 94481 10034

## ಈ ಪುಸ್ತಕಗಳು ನಿಮ್ಮ ಮನೆಯಲ್ಲಿರಲಿ !

| | | |
|---|---|---|
| ಅನುಭವ ಇರುವಲ್ಲಿ ಅಮೃತತ್ವವಿದೆ | ಡಾ. ಪಾಟೀಲ ಪುಟ್ಟಪ್ಪ | 30.00 |
| ಬದುಕಲು ಬೇಕು ಬದುಕುವ ಈ ಮಾತು | ,, | 20.00 |
| ಕನ್ನಡದ ಕಂಪು | ,, | 20.00 |
| ಅವರ ಬದುಕು ನಮಗೆ ಬೆಳಕು | ,, | 30.00 |
| ಇಲ್ಲಿ ಬೆಳಕಿದೆ | ,, | 50.00 |
| ಸೋತೆ ಎನಬೇಡಿ; ಸೋಲಿನಲ್ಲೇ ಗೆಲುವಿದೆ | ,, | 25.00 |
| ಪುಸ್ತಕ ಸಂಸ್ಕೃತಿ | ,, | 20.00 |
| ತಾಯಿಯೇ ಮೊದಲ ಗುರು | ಇಂದುಮತಿ ಪುಟ್ಟಪ್ಪ | 25.00 |
| ಅನುಭವಾಮೃತದ ಅರವಟ್ಟಿಗೆ | ,, | 25.00 |
| ಯಶಸ್ಸಿನತ್ತ ಪಯಣ | ಯಂಡಮೂರಿ ವೀರೇಂದ್ರನಾಥ | 50.00 |
| Personality Development & Communication Skills | Yandamoori Veerendranath | 100.00 |
| ನಿಮ್ಮನ್ನು ನೀವು ಗೆಲ್ಲಬಲ್ಲಿರಿ | ,, | 40.00 |
| ಓ ಹೆಣ್ಣೇ, ನೀನೆಷ್ಟು ಒಳ್ಳೆಯವಳು ! | ,, | 50.00 |
| ನಿಮ್ಮ ಮಕ್ಕಳು ನಿಮ್ಮನ್ನು ಪ್ರೀತಿಸುವರೇ ? | ,, | 50.00 |
| ಯಶಸ್ಸಿನ ರಹಸ್ಯಗಳು : ಪಾಲಕರಿಗೆ ಗೊತ್ತಿಲ್ಲ, ಶಿಕ್ಷಕರು ಹೇಳಲ್ಲ | ,, | 75.00 |
| ತಪ್ಪು ಮಾಡೋಣ ಬನ್ನಿ | ,, | 175.00 |
| ದುಡ್ಡು ಮಾಡುವುದು ಹೇಗೆ ? | ,, | 22.00 |
| ಮಳೆಗಾಲದ ಒಂದು ಸಂಜೆ (ಕಾದಂಬರಿ) | ,, | 100.00 |
| ಮಂಜಿನ ಹೂಮಳೆ (ಕಾದಂಬರಿ) | ,, | 60.00 |
| ದುಡ್ಡು ಮೈನಸ್ ದುಡ್ಡು (ಕಾದಂಬರಿ) | ,, | 75.00 |
| ಪ್ರೇಮ | ,, | 50.00 |
| ಅಂತರ್‌ಮುಖಿ | ,, | 100.00 |
| ವ್ಯಕ್ತಿತ್ವ ವಿಕಾಸ ಮತ್ತು ಸಂವಹನ ಕೌಶಲಗಳು | ,, | 120.00 |
| ನೂರು ಮಾತು ಕೇಳಿ; ಒಂದು ರ‍್ಯಾಂಕ್ ಗಳಿಸಿ | ,, | 10.00 |
| ಮಕ್ಕಳ ಆರೋಗ್ಯ, ಸುರಕ್ಷತೆ ಮತ್ತು ನಡವಳಿಕೆ | ಪಾರ್ವತಮ್ಮ ಮಹಾಲಿಂಗಶೆಟ್ಟಿ | 15.00 |
| ಕುಟುಂಬದಲ್ಲಿ ಹೊಂದಾಣಿಕೆ ಮತ್ತು ಮಕ್ಕಳು | ,, | 25.00 |
| ನಕ್ಕೀರಿ ಹಲ್ಲು ಕಂಡೀತು, ಜೋಕೆ ! (ಜೋಕುಗಳು) | ,, | 25.00 |
| ನಕ್ಕೀರಿ ಹಲ್ಲು ಕಂಡೀತು, ಜೋಕೆ ! - 2 (ಜೋಕುಗಳು) | ,, | 25.00 |
| ನಗೆ ನವಿಲು (ಜೋಕುಗಳು) | ಗೋಪಾಲಕೃಷ್ಣ ಪಿ. ನಾಯಕ | 25.00 |
| ಆತ್ಮ ವಿಶ್ವಾಸ (ವ್ಯಕ್ತಿತ್ವ ವಿಕಾಸ) | ಡಾ. ಬಿ. ವಿ. ಪಟ್ಟಾಭಿರಾಮ್ | 25.00 |
| ಪಾಸಿಟಿವ್ ಥಿಂಕಿಂಗ್ (ವ್ಯಕ್ತಿತ್ವ ವಿಕಾಸ) | ,, | 25.00 |
| ಮನಸಿನ ಭಾಷೆ ಮೈಂಡ್ ಮ್ಯಾಜಿಕ್ (ವ್ಯಕ್ತಿ ವಿಕಾಸ) | ,, | 130.00 |
| ಸೆಲ್ಫ್ ಹಿಪ್ನಾಟಿಸಂ-ರಿಲ್ಯಾಕ್ಸೇಶನ್ (ವ್ಯಕ್ತಿತ್ವ ವಿಕಾಸ) | ,, | 25.00 |
| ಯಶಸ್ಸಿನ ಮೊದಲ ಸೋಪಾನ; ನಾಯಕತ್ವ ಲಕ್ಷಣ | ,, | 25.00 |
| ಉತ್ತಮ ತಂದೆ ತಾಯಿ + ಉತ್ತಮ ಗುರುಗಳು = ಅತ್ಯುತ್ತಮ ವಿದ್ಯಾರ್ಥಿ | ,, | 25.00 |
| ಸೊಗಸಾದ ಮಾತುಗಾರರಾಗಬೇಕೆ ? (ವ್ಯಕ್ತಿತ್ವ ವಿಕಾಸ) | ,, | 25.00 |
| ನೀ ನೆಮ್ಮದಿಯಿಂದಿರು ಓ ಮನವೇ ! (ವ್ಯಕ್ತಿತ್ವ ವಿಕಾಸ) | ,, | 25.00 |
| ವಿದ್ಯಾರ್ಥಿಗಳೇ ಓದುವುದು ಹಾಗಲ್ಲ; ಹೀಗೆ ! | ಆರ್. ವಿ. ಕಟ್ಟೀಮನಿ | 30.00 |
| ಮಹಿಳೆಯರಿಗಾಗಿ ಸೌಂದರ್ಯವರ್ಧಕ ವ್ಯಾಯಾಮಗಳು | ,, | 30.00 |
| ಕುಟುಂಬದಲ್ಲಿ ಹೊಂದಾಣಿಕೆ ಮತ್ತು ಮಕ್ಕಳು | ,, | 25.00 |
| ಮಾನಸಿಕ ಒತ್ತಡದಿಂದ ಮುಕ್ತರಾಗುವುದು ಹೇಗೆ ? | ,, | 36.00 |
| ಆರೋಗ್ಯ ಹಾಗೂ ಜೀವನೋಲ್ಲಾಸಕ್ಕಾಗಿ ನಿದ್ರೆ | ,, | 25.00 |
| ಯಶಸ್ಸಿನ ಶಿಖರಕ್ಕೆ 30 ಮೆಟ್ಟಿಲು | ,, | 25.00 |
| ಪರೀಕ್ಷೆಯಲ್ಲಿ ರ‍್ಯಾಂಕ್ ಗಳಿಸುವ ಸೂತ್ರಗಳು | ,, | 22.00 |
| ನಿಮ್ಮನ್ನು ನೀವು ಅರಿತುಕೊಳ್ಳಿ | ,, | 25.00 |

| | | |
|---|---|---|
| ಸಂಖ್ಯೆಗಳಲ್ಲಿ ನಿಮ್ಮ ವ್ಯಕ್ತಿತ್ವ | ,, | 25.00 |
| ಮನಃಶಾಂತಿಗಾಗಿ ಧ್ಯಾನ | ,, | 25.00 |
| ಗೃಹಿಣಿಯರಿಗೆ ಸಲಹೆ | ಸವ್ಯಸಾಚಿ | 39.00 |
| ಅತ್ಯುತ್ತಮ ಜ್ಞಾಪಕಶಕ್ತಿ ನಿಮ್ಮದಾಗಬೇಕೆ ? | ,, | 39.00 |
| ನಿಮ್ಮ ಮುಖ ಏನನ್ನು ಹೇಳುತ್ತದೆ ? | ,, | 25.00 |
| ವೈದ್ಯ ವಿಷಯ ವೈವಿಧ್ಯ | ಡಾ॥ ಪಿ. ಎಸ್. ಶಂಕರ್ | 45.00 |
| ಆರೋಗ್ಯ ಭಂಗ | ,, | 45.00 |
| ಆರೋಗ್ಯಕ್ಕೆ ಆತಂಕ | ,, | 45.00 |
| ದೇಹಸ್ಥಿತಿ ವಿಚಾರಶಕ್ತಿ | ,, | 45.00 |
| ಆ ಹದಿನೆಂಟು ದಿನಗಳು (ಕಾದಂಬರಿ) | ,, | 250.00 |
| ಶ್ರೀ ಕೃಷ್ಣ ಮತ್ತು ಮಹಾಭಾರತ ಯುದ್ಧ (ಕಾದಂಬರಿ) | ,, | 60.00 |
| ದಶಾವತಾರ (ಕಾದಂಬರಿ) | ,, | 250.00 |
| ನಳದಮಯಂತೀ (ಕಾದಂಬರಿ) | ಪ್ರೊ. ಕೆ. ಎಸ್. ನಾರಾಯಣಾಚಾರ್ಯ | 60.00 |
| ನಿಮ್ಮನ್ನು ನೀವು ಅರಿತುಕೊಳ್ಳಿ | ,, | 25.00 |
| ಮಹಾಮಾತೆ ಕುಂತೀ ಕಂದೆರೆದಾಗ (ಕಾದಂಬರಿ) | ,, | 60.00 |
| ಆಚಾರ್ಯ ಚಾಣಕ್ಯ (ಕಾದಂಬರಿ) | ,, | 100.00 |
| ಶ್ರೀ ರಾಮಾಯಣದ ಮಹಾ ಪ್ರಸಂಗಗಳು | ,, | 150.00 |
| ಭಾರತ, ಇಸ್ಲಾಂ ಮತ್ತು ಗಾಂಧಿ - ಶ್ರೀ ಅರವಿಂದರ ಭವಿಷ್ಯವಾಣಿ | ,, | 60.00 |
| ಶ್ರೀ ಮಹಾಭಾರತ ಕಾಲ ನಿರ್ಣಯ ಮತ್ತು ಇತರ ಲೇಖನಗಳು | ,, | 60.00 |
| ರಾಷ್ಟ್ರೀಯ ಚಿಂತನೆಗಳು ಮತ್ತು ಪರಾಮರ್ಶಗಳು | ,, | 175.00 |
| ಸಮಾಜ ಮತ್ತು ಅಧ್ಯಾತ್ಮೀಕರಣ | ,, | 60.00 |
| ನಿತ್ಯ ಚಿಂತನಗಳು | ಎನ್ಕೆ | 50.00 |
| ಜೀವನವೆಂದರೇನು ? | ಪ್ರೊ. ವೀರೇಂದ್ರ ಸಿಂಪಿ | 60.00 |
| ಪ್ರವಾದಿ - ಖಲೀಲ್ ಗಿಬ್ರಾನ್‌ನ 'The Prophet' ಅನುವಾದ | ಶ್ರೀ ದೇವದತ್ತ | 36.00 |
| ಲಾಲ್ ಕಿತಾಬ್ - ಶೀಘ್ರ ಪರಿಹಾರೋಪಾಯಗಳು - 1 | ವಿಜಯವೀರ್ | 80.00 |
| ಲಾಲ್ ಕಿತಾಬ್ - ಶೀಘ್ರ ಪರಿಹಾರೋಪಾಯಗಳು - 2 | ವಿಜಯವೀರ್ | 180.00 |
| ಜೀವನ ಪಾಠಗಳು | ವಿ. ಕೃ. ಗೋಕಾಕ್ | 25.00 |
| ಬೆತ್ತಲೆ ಜಗತ್ತು - 1 | ಪ್ರತಾಪ ಸಿಂಹ | 60.00 |
| ಬೆತ್ತಲೆ ಜಗತ್ತು - 2 | ,, | 120.00 |
| ಬೆತ್ತಲೆ ಜಗತ್ತು - 3 | ,, | 100.00 |
| ಬೆತ್ತಲೆ ಜಗತ್ತು - 4 | ,, | 100.00 |
| ಬೆತ್ತಲೆ ಜಗತ್ತು - 5 | ,, | 120.00 |
| ನಿಮ್ಮ ಮಗು ಆರೋಗ್ಯವಾಗಿಯೇ ಇದೆ ! | ಡಾ॥ ಮಧುಕರ ವಾಜಪೇಯಿ | 50.00 |
| ವಾಲ್ಮೀಕಿ ಚಿಂತನ ಮಂಥನ | ಪ್ರೊ॥ ವಿಷ್ಣು ಜೋಶಿ | 40.00 |
| ರಾಮಾಯಣ ರಸಾಯನ | ಶ್ರೀ ಸುಗುಣೇಂದ್ರ ತೀರ್ಥರು | 30.00 |
| ಪಾಕಿಟ ಪೆಂಡೂಲಂ | ಪ್ರೊ॥ ರಾಜಶೇಖರ ಭೂಸನೂರಮಠ | 33.00 |
| ನೀವು ಮತ್ತು ನಿಮ್ಮ ಚಕ್ರಗಳು | ,, | 30.00 |
| ಪರ್ಯಾಯ ಚಿಕಿತ್ಸೆಗಳು | ,, | 30.00 |
| ಭವಿಷ್ಯಾವಧಾನ | ,, | 30.00 |
| ಅತೀಂದ್ರಿಯ ಪ್ರಪಂಚ | ,, | 30.00 |
| ವಿಶ್ವೇಶ್ವರಯ್ಯ ದರ್ಶನ | ಎಸ್. ಕೆ. ದೇಸಾಯಿ | 80.00 |
| ಮಾರ್ಕೆಟಿಂಗ್ ಮಂತ್ರಗಳು | ಮುರುಗೇಶ ಹನಗೋಡಿಮಠ | 50.00 |
| ಹಿಂದೂ ಮಗುವೇ ನಿನಗಾಗಿ ಒಂದು ಪುಟ್ಟ ಪುಸ್ತಕ | ಡಾ॥ ಶ್ಯಾಮಲಾ ವತ್ಸ | 40.00 |
| ಒಗಟು ಬಿಡಿಸೋ ಜಾಣ ಎನಿಸೋ | ಗುರುರಾಜ ಬೆಣಕಲ್ | 40.00 |
| ಜನಗಳ ಮನ | ವಿಶ್ವೇಶ್ವರ ಭಟ್ | 140.00 |
| ನೂರೆಂಟು ಮಾತು 2 | ವಿಶ್ವೇಶ್ವರ ಭಟ್ | 120.00 |




ಬಿ. ಸುರೇಶ

ತ್ರಗಳು
**ಅಪ್ಪಾಜಿ** – ಎಪ್ಪತ್ತರ ಹರೆಯದವ. ಸ್ವಾತಂತ್ರ್ಯ ಹೋರಾಟಗಾರ
**ಜಗಳೂರ್** – ಮಧ್ಯವಯಸ್ಕ (ನಲ್ವತ್ತು ದಾಟಿದವನು), ರಾಘುವಿನ ಕಂಪನಿಯ ಸಕ್ರೆಟರಿ
**ರಾಘು** – ಅಪ್ಪಾಜಿಯ ಮಗ (ಮೂವ್ವತ್ತು ದಾಟಿದವನು), ವ್ಯಾಪಾರಿ
**ಧ್ವನಿಗಳು** – ರಾಘವೇಂದ್ರನ ಮನೆಗೆ ಪಾರ್ಟಿಗೆಂದು ಬಂದಿರುವ ಶ್ರೀಮಂತರು ಮತ್ತು ಸರ್ಕಾರೀ ಅಧಿಕಾರಿಗಳು.

[ರಂಗದ ಮೇಲೆ ಆಧುನಿಕ ಎನಿಸುವ ಮನೆಯೊಂದರ ಣೆ. ಅದು ಬಹುಮಹಡಿ ಕಟ್ಟಡವೊಂದರಲ್ಲಿರುವ . ಅಪಾರ್ಟ್‌ಮೆಂಟ್ ಎಂದು ಕರೆಯಬಹುದಾದ ಯಲ್ಲಿದೆ. ಕಟ್ಟಡವು ಸಮುದ್ರವೊಂದರ ಪಕ್ಕದಲ್ಲಿದೆ ದನ್ನು ಸೂಚಿಸುವಂತೆ ಭೋರ್ಗರೆತ ಕೇಳುತ್ತಿದೆ. ಣೆಯಲ್ಲಿರುವ ಸಿಂಗಲ್ ಬೆಡ್ ಮಂಚಕ್ಕೆ ಸೊಳ್ಳೆಪರದೆ ದೆ. ಕೋಣೆಯಲ್ಲಿರುವ ಎಲ್ಲಾ ವಿವರಗಳು ಶ್ರೀಮಂತಿಕೆ ನ್ನು ಸೂಚಿಸುತ್ತಿವೆ. ಕೋಣೆಯ ಒಂದು ಗೋಡೆಗೆ ತ್ತಾವ ಗಾಂಧಿಯ ಫೋಟೋ ಇದೆ. ಕೋಣೆಯ ಒಂದು ಲೆಯಲ್ಲಿ ಚರಕವೊಂದಿದೆ, ಪುಟ್ಟ ಸ್ಟೂಲಿನ ಮೇಲೆ. ಣೆಯೊಳಗೆ ಒಂದೆರಡು ಹೂ ಕುಂಡಗಳನ್ನು ಕಂಚಿನದು ಸುವ ಪಾತ್ರೆಗಳಲ್ಲಿ ಇರಿಸಿದೆ. ರಂಗದ ಮತ್ತೊಂದು ಗೆ ಒಂದು ಬರೆಯುವ ಟೇಬಲ್ ಇದೆ. ಅದರ ಪಕ್ಕದಲ್ಲಿ ದು ತಗಡಿನ ಕಸದ ಬುಟ್ಟಿ ಇದೆ. ರಂಗದ ಹಿಂಬದಿಯಲ್ಲಿ ದು ಪಕ್ಕಕ್ಕೆ ಕಿಟಕಿ ಮತ್ತೊಂದು ಪಕ್ಕಕ್ಕೆ ಕೋಣೆಯ ಗಿಲು ಕಾಣುತ್ತದೆ.]

[ವೇದಿಕೆಯಲ್ಲಿ ಕಿಟಕಿಯಾಚೆಗಿನ ಲೋಕವನ್ನ ೋಡುತ್ತಾ ನಿಂತಿರುವ ಅಪ್ಪಾಜಿ ಕಾಣುತ್ತಾರೆ. ಆತನ ಬದಿಗೆ ವಾಯು ಆಗಿದೆ. ತಲೆಗೂದಲು ಸಂಪೂರ್ಣ ಯಾಗಿದೆ. ಆತ ಎಡಗಾಲನ್ನು ಎಳೆಯುತ್ತಾ ನಡೆಯುತ್ತಾರೆ. ರ ಕಣ್ಣಿಗೆ ಒಂದು ಗಾಂಧಿ ಶೈಲಿಯ ಕನ್ನಡಕವೂ ಇದೆ. ಖಾದಿ ಪಂಚೆ ಮತ್ತು ಒಂದು ಖಾದಿಯ ಒಳ ಅಂಗಿ ಸಿದ್ದಾರೆ. ಆತ ಮಾತನ್ನು ಆರಂಭಿಸುವವರೆಗೆ ಹಿನ್ನೆಲೆಯಲ್ಲಿ ಧಿ ಭಜನ್ "ವೈಷ್ಣವ ಜನತೋ..." ಕೇಳುತ್ತಿದೆ. ಆತ ನವಾಗಿ ಮಾತಾಡುತ್ತಾರೆ. ಆರಂಭದಲ್ಲಿ ಪ್ರೇಕ್ಷಕರಿಗೆ ಗಿಯೇ ನಿಂತು ಮಾತನ್ನು ಆರಂಭಿಸುತ್ತಾರೆ.]

**ಅಪ್ಪಾಜಿ :** ಉಹ್ಲುಂ...! ಏನೂ ಸರ್‍ಯಾಗಿ ಯೋದಿಲ್ಲ!... ಈ ಇಪ್ಪತ್ತೆಂಟನೆ ಮಹಡಿಯ ವನವೇ ಇಷ್ಟು!... ಇಷ್ಟಕ್ಕೂ ನೋಡೋಕ್ಕಾದ್ರೂ ್ಲೇನಿದೆ?... ಭೂಮಿನೇ ನುಂಗೋ ಹಾಗೆ ನುಗ್ಗೋ ಸಮುದ್ರದ ಅಲೆಗಳು ಅಂಚಿನಲ್ಲಿರೋ ಬಂಡೆಗಳಿಗೆ ದು ನಿಟ್ಟುಸಿರು ಬಿಡೋದನ್ನ ಬಿಟ್ರೆ, ಇಲ್ಲಿ ೋಡೋಕ್ಕೆ ಬೇರೇನೂ ಇಲ್ಲ! ಅದನ್ನಾದರೂ ಎಷ್ಟು ನೋಡೋದು? (ನಡೆದು ಚರಕದ ದಿಕ್ಕಿಗೆ ುತ್ತಾನೆ.) ಇಲ್ಲ...! ನನಗೆ ಬೇರೆ ದಾರೀನೇ ಇಲ್ಲ...! ೋ ಒಬ್ಬ ಮಗನ ಮನೆ ಬಿಟ್ಟು, ಈ ವಯಸ್ಸಲ್ಲಿ ನಾದ್ರೂ ಇನ್ನೆಲ್ಲಿಗ್ ಹೋಗ್ಲಿ?... (ನಿಟ್ಟುಸಿರು) ಮುದಿ ಪ್ಪಂದ್ರು – ಅಮ್ಮಂದ್ರನ್ನ ಮನೇಲಿಟ್ಕೊಳ್ಳೊ ಮಕ್ಕಳ ಖ್ಯೇನೆ ಕಡಿಮೆ ಆಗ್ತಾ ಇದ್ಯಂತೆ... ಇನ್ನು ಆ ಮಾತಿಗೆ ವಾದ ಅನ್ನೋ ಹಾಗೆ ನನ್ನನ್ನ ಇಂಥಾದ್ದೊಂದು ಮನೇಲ್ಲಿಟ್ಟು, ಎರಡು ಹೊತ್ತು ಊಟ ಹಾಕ್ತಾ ಇರೋ ಮಗನ್ನ ಬಿಟ್ಟು, ನಾನೆಲ್ಲಿಗ್ ಹೋಗ್ಲಿ?... ಇಲ್ಲ! ಕಾಲ ಬದಲಾಗಿದೆ, ಪೂರಾ ಬದ್ಲಾಗಿದೆ!... (ಚರಕವನ್ನ ತಿರುವುತ್ತಾ ಅದರ ಮೇಲಿನ ಧೂಳು ಕೊಡವುತ್ತಾನೆ. ಹೆಗಲ ಮೇಲಿರುವ ವಸ್ತ್ರದಿಂದಲೇ ಅದನ್ನ ಒರೆಸುತ್ತಾನೆ.) ನನಗೂ ಒಂದ್ಕಾಲದಲ್ಲಿ ಅನ್ನಸ್ತಾ ಇತ್ತು... ಅಪ್ಪಾಜಿ ಅಂತ ನನಗೂ ಒಂದು ಮಹತ್ವ ಸಿಗಬಹುದು ಅನ್ನಸ್ತಾ ಇತ್ತು!... ಗಾಂಧೀಜಿ ಜೊತೆ ಇದ್ದೋನು! ಸ್ವಾತಂತ್ರ್ಯ ಹೋರಾಟದಲ್ಲಿ ಹತ್ತು ವರ್ಷ ದುಡಿದೋನು! ಜೈಲು ಕಂಡೋನು!... ಈ ಎಲ್ಲಾ ಸಂಗತಿಗಳಿಗೆ ಇವತ್ತಲ್ಲ – ನಾಳೆ ಬೆಲೆ ಬರತ್ತೆ ಅಂತ ಅನಸ್ತಾ ಇತ್ತು!... ಆದರೆ... ನಾವು ತಂದುಕೊಟ್ಟ ಸ್ವಾತಂತ್ರ್ಯಕ್ಕೆ ಬೆಲೆ ಇಲ್ಲ ಅನ್ನೋದು ಈಗ ಗೊತ್ತಾಗ್ತಾ ಇದೆ... ಅದು ಬರೀ ಪೋಸ್ಟಲ್ ಡಿಪಾರ್ಟ್‌ಮೆಂಟ್‌ನೋರು ತರೋ ಸ್ಟಾಂಪಿನ ಮೇಲೆ ಲೆಕ್ಕ ಇಡೋಕ್ಕೆ ಮಾಡಿದ ಚಳವಳಿ ಅನ್ನಸ್ತಾ ಇದೆ... ಈಗ ಎಲ್ಲಾ ಬದಲಾಗಿದೆ. ಪೂರಾ ಬದ್ಲಾಗಿದೆ... ಸ್ವಾತಂತ್ರ್ಯದ ಅರ್ಥವೇ ಬದ್ಲಾಗಿದೆ...

ನಮ್ಮ ಕಾಲದ ಯಾವ ಮೌಲ್ಯಕ್ಕೂ ಈಗ ಅರ್ಥ ಉಳ್ದೇ ಇಲ್ಲ... ಉಹ್ಲುಂ... ಯಾವುದಕ್ಕೂ ಅರ್ಥ ಉಳ್ದಿಲ್ಲ...

[ಆಗಲೇ ಹೊರಗೆ ಕಾಲಿಂಗ್ ಬೆಲ್ ಸದ್ದು ಕೇಳುತ್ತದೆ. ಅಪ್ಪಾಜಿ ಚರಕ ಬಿಟ್ಟು ಧ್ವನಿ ಬಂದ ಕಡೆಗೆ ನೋಡುತ್ತಾರೆ. ಯಾರೋ ಕೋಣೆಯೊಳಗೆ ಬರಬಹುದು ಎಂದು ನೋಡುತ್ತಾ ಇರುವ ಅಪ್ಪಾಜಿಗೆ ಕಾತರವಿದೆ. ಈವರೆಗೆ ಇದ್ದ ವಿಶ್ರಾಂತ ಸ್ಥಿತಿಯಿಲ್ಲ. ಯಾರನ್ನೋ ನಿರೀಕ್ಷಿಸುವಂತೆ ಅಪ್ಪಾಜಿ ಬಾಗಿಲಿನತ್ತ ನೋಡುತ್ತಾ ಇದ್ದಾರೆ.

ಹೊರಗೆ ಬಾಗಿಲು ತೆಗೆದ ಸದ್ದು ಮತ್ತು ಯಾರೋ ಒಳಗೆ ಬಂದ ಸದ್ದು ಕೇಳುತ್ತದೆ. ಬಂದವರೊಂದಿಗೆ ಮಾತಾಡುವ ರಾಘುವಿನ ಮಾತು ಕೇಳುತ್ತದೆ. (ರಂಗದ ಹಿನ್ನೆಲೆಯಲ್ಲಿ ರಾಘುವಿನ ಮಾತಿಗಾಗಿ ಒಂದು ಕಿಟಕಿಯನ್ನು ಬಳಸಬಹುದು.)]

**ರಾಘು :** (ಆತ ಯಾರಿಗೋ ಇನ್‌ಸ್ಟ್ರಕ್ಷನ್ ಕೊಡುತ್ತಾ ಇದ್ದಾನೆ) ಶಂಕ್ರ... ಇವತ್ತು ರಾತ್ರಿ ಒಂದ್ ಹತ್ತು ಜನಕ್ಕೆ ಆಗೋಷ್ಟು ಅಡಿಗೆ ಮಾಡು... ಖಾರದ್ದೂ ಇರಲಿ... ಅಪ್ಪನಿಗೆ ಆ ವಾಸನೆ ಆಗಲ್ಲ... ಬಾಲ್ಕನೀಲ್ಲಿ ಕೂತು ಕೋಳಿ ಕತ್ತರ್ಸು... ಆಯ್ತಾ?... (ನೆನಪಾದಂತೆ) ಆಮೇಲೆ ಆ ಕಾಕಾನ ಅಂಗಡೀಲ್ಲಿ ಎರಡು ಕ್ರೇಟ್ ಸೋಡಾಗ್ ಹೇಳಿದೀನಿ... ತಂದ್ ಇಟ್‌ಬಿಡು... ನಾನು ಇನ್ನೊಂದರ್ಧ ಗಂಟೇಲ್ಲಿ ಬಂದ್‌ಬಿಡ್ತೀನಿ...

[ರಾಘು ಹೊರಟದ್ದು, ಬಾಗಿಲು ಮುಚ್ಚಿದ್ದು ಕೇಳುತ್ತದೆ. ಅಪ್ಪಾಜಿ ಮತ್ತೆ ನಿರಾಳರಾಗುತ್ತಾರೆ. ಮತ್ತೆ ಮಾತು ಆರಂಭಿಸುತ್ತಾರೆ, ಸ್ವಗತದಂತೆ.]

**ಅಪ್ಪಾಜಿ :** ಈ ಮಸಾಲೆಗಳ ವಾಸನೆ ಬಂತೂಂದ್ರೆ ನನ್ನ ತಲೇಲ್ಲಿ ಹುಳಾ ತುಂಬ್ಕೊಳತ್ತೆ. ಆ ವಾಸ್ನೆ ಹಿಂದೇನೇ

ಪಾರ್ಟಿ... ಪಾರ್ಟಿ ವಾಸನೇಗ್ ಬರ್ರೋ ಜನ. ಜೊತೇಲ್ಲಿ ಅವರ ಹೆಂಡತೀರೋ ಅಥವಾ ಬೇರ್ಯೋರ ಹೆಂಡತೀರೋ ಅನ್ನೋದೂ ಗೊತ್ತಾಗ್ದ ಇರೋಷ್ಟು ಮೇಕಪ್ ಮಾಡ್ಕೊಂಡ ಹೆಂಗಸರು... ಛೇ! ಛೇ! ಅವರನ್ನ ಮನುಷ್ಯರು ಅಂದ್ರೆ ತಪ್ಪಾಗತ್ತೆ! ಪ್ರಾಣಿಗಳು ಅನ್ನೋದೇ ವಾಸಿ!... ಅವರನ್ನ ನೋಡ್‌ದ್ರೆ ಬಕಿಂಗ್‌ಹ್ಯಾಮ್ ಪ್ಯಾಲೆಸ್‌ನಿಂದಾನೇ ಇಳಿದುಬಂದವರು ಅನ್ನಬ್ಬೇಕು! ಹಾಗಿರ್‍ತಾರೆ. ... ಆ ಊಟ, ಆ ಕುಡಿತ, ಆ ಮಾತು, ಆ ನಗು! ... ಇದನ್ನೆಲ್ಲಾ ಕೇಳ್ದಾಗ ನನ್ನ ತಲೆ ಕೆಟ್ಟು ಮೊಸರು ಗಡಿಗೆ ಆಗತ್ತೆ... ಗಾಂಧೀಜಿ ಅವರ ಜೊತೆ ಅಷ್ಟು ಕಾಲ ಇದ್ದು, ಅವರ ಸಿದ್ಧಾಂತದ ಹಾಗೇ ಇಷ್ಟೂ ಕಾಲ ಬದುಕಿದ್ದರೂ... ಈ ಪಾರ್ಟೀಗ್ ಬರೋ ಜನರನ್ನ ನೋಡ್ದಾಗ... ಅವರನ್ನೆತ್ತಿ ಕಿಟಕಿ ಯಿಂದಾಚೇಗೆ... ಆ ಅರಬ್ಬೀ ಸಮುದ್ರಕ್ಕೆ ಎಸೆದು ಬಿಡ್ಬೇಕು ಅನ್ಸತ್ತೆ. ಅಷ್ಟು ಕೋಪ ಸರಿ ಅಲ್ವೇನೋ... ಆದರೂ ಒಂದೊಂದ್ಸಲ ಇಂಥಾ ಹಿಂಸೆಯಿಂದಾದ್ರೂ ಶಾಂತಿ ಸಿಗ್ಬೋದೇನೋ ಅನ್ಸತ್ತೆ. (ಮತ್ತೆ ಚರಕ ಒರೆಸುತ್ತಾ, ಖಾಲಿ ಚರಕವನ್ನು ತಿರುವುತ್ತಾರೆ. ಹಿನ್ನೆಲೆಯಲ್ಲಿ ''ವೈಷ್ಣವ ಜನತೋ...'' ಕೇಳುತ್ತದೆ. ಕೆಲ ಕ್ಷಣದ ನಂತರ) ಈ ನಮ್ಮ ರಾಘೂ ವ್ಯವಹಾರಗಳ್ಯಾವ್ದೂ ನಾನು ತಿಳ್ಕೊಂಡಿರೋಷ್ಟು ಸರಳವಾಗಿಲ್ಲ... ಅವನದ್ದು ಬೇರೆ ಬೇರೆ ಹೆಸರಿನ ಐದಾರು ಕಂಪೆನಿಗಳಿವೆ... ಇನ್ನೂ ಜಾಸ್ತೀನೆ ಇರ್ಬೋದೋ ಏನೋ?... ಆದರೆ ಅವನು ಆಗಾಗ ಪಾರ್ಟಿ ಕೊಡ್ತಾ ಇರ್‍ತಾನೆ. ವ್ಯಾಪಾರ ಶುರು ಮಾಡಿದ್ದಕ್ಕೆ, ವ್ಯಾಪಾರ ಮುಗ್‌ದಿದ್ದಕ್ಕೆ, ಆಗದೆ ಹೋಗಿದ್ದಕ್ಕೆ... ಹೀಗೇ ಏನೆಲ್ಲಾ ಕಾರಣ ಇದೆ ಗೊತ್ತಾ ಅವನ ಪಾರ್ಟೀಗೆ?... ಅವನನ್ನೇ ಕೇಳಿದ್ರೆ ''ಇನ್ ದ ನೇಮ್ ಆಫ್ ಬಿಸಿನೆಸ್ ಪಪ್ಪಾ!'' ಅಂತ ಅಂಗ್ರೇಜಿನಲ್ಲಿ ಹೇಳ್‌ಬಿಡ್ತಾನೆ. (ಕೊಂಚ ಅಸಹನೆಯ ಜೊತೆಗೆ) ಛೇ! ಇಂಥಾ ಮಗನ ಜೊತೆ ಬದುಕೋದಕ್ಕಿಂತ ಆತ್ಮಹತ್ಯೆ ಒಳ್ಳೇದೇನೋ? ಆದರೆ... ನನ್ನದಲ್ಲದ ದೇಹವನ್ನ ತ್ಯಜಿಸೋ ಹಕ್ಕು ನನಗಿಲ್ಲ ಅಂತ ಮಹಾತ್ಮರು ಹೇಳಿದ್ದಾರೆ. ... ಹ್ಞೂಂ!... ಹೇಗೋ ಕಾಲ ಹಾಕ್ಬೇಕು, ಉಸಿರಿರೋವರ್ಗ್ಗೆ!

[ಮತ್ತೆ ಕಾಲಿಂಗ್ ಬೆಲ್ಲಿನ ಸದ್ದಾಗುತ್ತದೆ. ಅಪ್ಪಾಜಿ ಚರಕ ಬಿಟ್ಟು ಹೊರಗಿನ ಮಾತು ಆಲಿಸುವವರಂತೆ ಮಂಚದ ಮೇಲೆ ಹೋಗಿ ಕೂಡುತ್ತಾರೆ. ಎದುರಿಗೆ ಓದಲೆಂಬಂತೆ ಭಗವದ್ಗೀತೆಯನ್ನು ತೆರೆದಿಟ್ಟುಕೊಳ್ಳುತ್ತಾರೆ. ಹೊರಗೆ ಬಾಗಿಲು ತೆರೆದ ಸದ್ದು. ಯಾರೋ ಬಂದರೆಂಬಂತೆ ಮಾತುಗಳು. ಅಪ್ಪಾಜಿ ಹೊರಗಿನ ದಿಕ್ಕಿಗೇ ನೋಡುತ್ತಾರೆ.]

**ರಾಘು** : (ಧ್ವನಿ) ಓಹೋ! ಕಮಿನ್, ಕಮಿನ್ ಮಿಸ್ಟರ್ ಅಂಡ್ ಮಿ... ಕುಲಕರ್ಣಿ! ಕಮಿನ್!... ಓಹೋಹೋ! ಮಿಸ್ಟರ್ ಅಂಡ್ ಮಿಸೆಸ್ ಗುಪ್ತಾ, ... ಯಾಮ್ ಹ್ಯಾಪಿ! ಐ ಯಾಮ್ ರಿಯಲಿ ಹ್ಯಾಪಿ ದಟ್ ಯು ಕುಡ್ ಮೇಕ್ ಇಟ್!! (ಕೃತಕ ನಗುಗಳು ಕೇಳುತ್ತವೆ) ವಾಟ್ ವಿಲ್ ಯೂ ಹ್ಯಾವ್? ವಿಸ್ಕಿ, ಸ್ಕಾಚ್?... ... ಯೆಸ್! ವಿತ್ ಆರ್ ವಿಥೌಟ್ ಐಸ್? (ಮತ್ತೆ ಕೃತಕ ನಗು)

**ಅಪ್ಪಾಜಿ** : (ಮತ್ತೆ ಪ್ರೇಕ್ಷಕರ ದಿಕ್ಕಿಗೆ ನೋಡುತ್ತಾ ಮಾತು ಮುಂದುವರೆಸುತ್ತಾರೆ) ನಗು ಕೇಳ್‌ಸ್ತಾ? ಅದು ಹೊಟ್ಟೆಯಿಂದ ಬಂದದ್ದೇ ಅಲ್ಲ... ಇಲ್ಲೇ, ಗಂಟಲಿಂದ... ಎಂಜಲು ಹಾರಿದ್ದಾಗೆ!... ಥತ್! (ಬಾಗಿಲತ್ತ ನೋಡಿ) ಇನ್ನು ಸ್ವಲ್ಪ ಹೊತ್ತಿಗೆ ರಾ... ನನ್ನ ವಿಷಯ ಶುರು ಮಾಡ್ತಾನೆ, ಹ್ಞೂಂ!

**ರಾಘು** : (ಧ್ವನಿ) ಯೂವ್ ನೋ, ಮೈ ಫಾದರ್ ವಾಸ್ ಎ ಫ್ರೀಡಮ್ ಫೈಟರ್... ಹಿ ಪಾರ್ಟಿಸಿಪೇಟೆಡ್ ಇನ್ ಆಲ್ ದ ಸ್ಟ್ರಗಲ್ಸ್ ಫಾರ್ ಫ್ರೀಡಮ್! ಹಿ ವಾಸ್ ಆಲ್... ಜೈಲ್ಡ್ ಫಾರ್ ಎ ಲಾಂಗ್ ಟೈಂ, ಯೂವ್ ಸೀ... ಅವರು ಗಾಂಧೀಜಿ ಜೊತೇ... ಇದ್ದರಂತೆ!... ಈಗಲೂ ಚರಕ ತಿರುಗ್ಸಿ ನೂಲು ತೆಗೀತಾರೆ! ಉಪವಾಸ ಕೂ... ಮಾಡ್ತಾರೆ, ಯೂವ್ ನೋ!

**ಅಪ್ಪಾಜಿ** : (ತಟ್ಟನೆ ಪ್ರೇಕ್ಷಕರಿಗೆ) ಅದಕ್ಕೆ ಆ ಅವರು, ಆ ಪಾರ್ಟೀಗ್ ಬಂದಿರೋ... ಜನ! ಊರಗಲ ಬಾಯಿ ತೆಗೆದು, ''ಹ್ಞಾಂ! ಇಸ್ ಇಟ್?'' ಅಂತಾರೆ... ಸುಳ್ಳ್ ಸು... ಗೌರವ ಆದರ ತೋರ್‌ಸ್ತಾರೆ!... ನಾನೇ ಏನಾದ್ರೂ ಅವರ ಎದುರ್‍ಗೆ ಇದ್ದಿದ್ರೆ, ನನ್ನ... ವಿಚಿತ್ರ ಪ್ರಾಣೀನ ನೋಡೋ ಹಾಗೆ ನೋಡ್ತಿದ್ರು... ಅದಕ್ಕೇ, ನಾನಲ್ಲೀಗ್ ಹೋಗೋದ... ಇಲ್ಲ... ಈ ಪಾರ್ಟಿಗಳು ಅಂದ್ರೆ ನನಗ್ ಅಸಹ್ಯ! ಥೂ!... (ಮತ್ತೆ ಬಾಗಿಲತ್ತ ನೋಡಿ... ಆ ಗದ್ದಲ ಕೇಳಿ! ಗಲಾಟೇಲ್ಲಿ ಇವರು ಪಾಶ್ಚಾತ್ಯ ಸಂಗೀತಾನ ಮೀರ್‌ಸ್ತಾರೆ.

[ಹೊರಗೆ ಗದ್ದಲ ಮತ್ತು ಜೋರು ಜೋರಾದ ಮಾತಿನ ಜೊತೆಗೆ ಗದ್ದಲದ ಸಂಗೀತ ಸ... ಕೇಳುತ್ತದೆ.]

**ಅಪ್ಪಾಜಿ** : (ಪ್ರೇಕ್ಷಕರತ್ತ ತಿರುಗಿ ಗುಟ್ಟು ಹೇಳುವವರಂತೆ) ಈ ಪಾರ್ಟಿ ...

With Best Compliments From



Ministry of Communications Employees' Co-operative Housing Society Ltd.

No. 419, 1st Floor, 12th Cross
Sadashivanagar
Bangalore - 560 080

Govindaraj
Mob. 9448278426












**COMPUTERISED CNC MACHINE ENGRAVING**

Wooden Doors, Windows
(Lakshmi, Venkateshwara, Ganesha, Saibaba etc.,)
Statues
Modern Indoor & Outdoor Engraved Paintings
Also Brass, Aluminum, Copper Engraving Statues
Name Plates for Houses & Offices

# THE ARTS

No. 42/43, MKK Road, Between Devaiah Park & Harishchandra Ghat
Srirampuram, Bangalore - 560 021
Telefax : 080-23328426 email: thearts@yahoo.com

# ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ

## ಕರ್ನಾಟಕದ ಸಂಪರ್ಕ ಸೇತುವೆ







ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮವು ಪ್ರಯಾಣಿಕರ ಬೇಡಿಕೆ ಹಾಗೂ ಅಗತ್ಯಗಳಿಗೆ ಪೂರಕವಾಗಿ ಹಲವಾರು ವಿನೂತನ ಕಾರ್ಯ ಯೋಜನೆಗಳನ್ನು ಪ್ರಯಾಣಿಕಸ್ನೇಹಿ ಯೋಜನೆಗಳನ್ನು ರೂಪಿಸಿದೆ.

### ರಾಜ್ಯ ಹಾಗೂ ಹೊರ ರಾಜ್ಯದ ಮುಖ್ಯ ಸ್ಥಳಗಳಿಗೆ ನಿಗಮದಿಂದ ವೋಲ್ವೋ ಬಸ್‌ಗಳ ಸೇವೆ

ಐರಾವತ - ವೋಲ್ವೋ ಸೇವೆ - ಪೂರ್ಣ ಹವಾನಿಯಂತ್ರಿತ ಅಂತರರಾಷ್ಟ್ರೀಯ ದರ್ಜೆಯ ಪ್ರಯಾಣ, ಸುಖಾಸೀನ, ಉತ್ತಮ ಸೇವಾವ್ಯವಸ್ಥೆ, ವಿಡಿಯೋ ಹಾಗೂ ಆಡಿಯೋ ಸೌಲಭ್ಯ. ಉತ್ತಮ ಹಾಗೂ ಆರಾಮದಾಯಕ ಆಸನಗಳು, ಪ್ರಯಾಣದ ಸಾಮಾನುಗಳನ್ನಿಡಲು ಸಾಕಷ್ಟು ಸ್ಥಳಾವಕಾಶ ಇತ್ಯಾದಿ ಸೌಲಭ್ಯಗಳನ್ನು ಹೊಂದಿದೆ

### ಒಪ್ಪಂದದ ಮೇರೆಗೆ ಬಸ್ ಸೇವೆಗಳು

ಮದುವೆ, ಮುಂಜಿ, ಪ್ರವಾಸ ಮತ್ತಿತರ ಸಮಾರಂಭಗಳಿಗೆ ಬಸ್‌ಗಳು ದಿನ ಮತ್ತು ಗಂಟೆಗಳ ಆಧಾರದ ಮೇಲೆ ಲಭ್ಯ. ಶಾಲಾ ಕಾಲೇಜುಗಳಿಗೆ ರಿಯಾಯಿತಿ ಉಂಟು

### ಚಾರ್ಟರ್ಡ್ ಕಾಂಟ್ರಾಕ್ಟ್ ಬಸ್ ಸೇವೆಗಳು

ಕಾರ್ಖಾನೆ/ಕಂಪನಿ/ವಿದ್ಯಾಸಂಸ್ಥೆ/ಕಛೇರಿಗಳಿಗೆ ತಮ್ಮ ಸಿಬ್ಬಂದಿಗಳನ್ನು ಕರೆದುಕೊಂಡುಬರಲು, ಬಿಡಲು ವಿಶೇಷ ದರಗಳಲ್ಲಿ ಬಸ್‌ಗಳು ಲಭ್ಯ

### ಮಾಸಿಕ ಬಸ್ ಪಾಸ್‌ಗಳು

ಪ್ರತಿದಿನ ಪ್ರಯಾಣಿಸುವ ಪ್ರಯಾಣಿಕರಿಗಾಗಿ 20 ದಿನದ ದರ ಪಾವತಿಸಿ 30 ದಿನಗಳು ಪ್ರಯಾಣಿಸಬಹುದಾದ ಮಾಸಿಕ ಬಸ್ ಪಾಸ್‌ಗಳು

### ಸ್ವಾತಂತ್ರ್ಯ ಟಿಕೆಟ್‌ಗಳು

7 ದಿನಗಳ ಕಾಲ ರಾಜ್ಯದಲ್ಲಿ ಎಲ್ಲಿಂದ ಎಲ್ಲಿಗೆ ಬೇಕಾದರೂ ಎಷ್ಟು ಬಾರಿಯಾದರೂ ಪ್ರಯಾಣಿಸಬಹುದಾದ ಸ್ವಾತಂತ್ರ್ಯ ಟಿಕೆಟುಗಳು. ಈಗ ಇಂಟರ್‌ನೆಟ್ (ksrtc.in) ಮೂಲಕವೂ ಟಿಕೆಟ್ ಕಾಯ್ದಿರಿಸುವ ಸೌಲಭ್ಯ

### ಅವತಾರ್ ಯೋಜನೆ

ಯಾವುದೇ ಸಮಯದಲ್ಲಿ ಎಲ್ಲಿಂದಾದರೂ ಮುಂಗಡ ಆಸನಗಳನ್ನು ಕಾಯ್ದಿರಿಸುವ ವ್ಯವಸ್ಥೆ

- ಹೋಗಿ ಬರುವ ಟಿಕೆಟನ್ನು ಕಾಯ್ದಿರಿಸಿದಲ್ಲಿ ಹಿಂದಿರುಗುವ ಪ್ರಯಾಣದ ಟಿಕೆಟ್ ದರದಲ್ಲಿ ಶೇ. 10 ರಿಯಾಯಿತಿ
- 4 ಜನಕ್ಕಿಂತ ಹೆಚ್ಚಿಗೆ ಒಂದೇ ಟಿಕೆಟ್‌ನಲ್ಲಿ ಸೀಟುಗಳನ್ನು ಕಾಯ್ದಿರಿಸಿದಲ್ಲಿ ಶೇ. 5 ರಿಯಾಯಿತಿ
- ಮುಂಗಡ ಟಿಕೆಟ್ ಕಾಯ್ದಿರಿಸಿದವರಿಗೆ ಪ್ರಯಾಣದ ದಿನ 2 ಗಂಟೆ ಮುಂಚಿತವಾಗಿ ನಗರ ಸಾರಿಗೆಗಳಲ್ಲಿ ಉಚಿತ ಪ್ರಯಾಣದ ಸೌಲಭ್ಯ
- ಸಂಸ್ಥೆಯ ಬಸ್‌ಗಳಲ್ಲಿ ಪ್ರಯಾಣಿಸುವವರಿಗೆ ಎರಡು ಲಕ್ಷ ರೂ.ಗಳ ಅಪಘಾತ ಪರಿಹಾರ ಸೌಲಭ್ಯ

ಹೆಚ್ಚಿನ ವಿವರಗಳಿಗೆ ತಮ್ಮ ಸಮೀಪದ ನಿಲ್ದಾಣದ ಮೇಲ್ವಿಚಾರಕರು/ಡಿಪೋ ಮೇಲ್ವಿಚಾರಕರು/ವಿಭಾಗೀಯ ಕಛೇರಿಗಳನ್ನು ಸಂಪರ್ಕಿಸಿ.
ಆರಾಮದಾಯಕ ಸುರಕ್ಷಿತ ಮತ್ತು ನಿಗದಿತ ಪ್ರಯಾಣಕ್ಕೆ ಕೆ.ಎಸ್.ಆರ್.ಟಿ.ಸಿ. ಬಸ್‌ಗಳಲ್ಲೇ ಪ್ರಯಾಣಿಸಿ.
ಪ್ರಯಾಣಿಕರು ಕೆಂಪೇಗೌಡ ಬಸ್ ನಿಲ್ದಾಣ ಹಾಗೂ ಬೆಂಗಳೂರಿನ ಇತರೆಡೆಗಳಲ್ಲಿರುವ 106 ಗಣಕೀಕೃತ ಕಾಯ್ದಿರಿಸುವ ಕೌಂಟರ್‌ಗಳಲ್ಲಿ ಹಾಗೂ ಮೈಸೂರು, ಮಂಗಳೂರಿನಲ್ಲಿ 15 ದಿನಗಳ ಮುಂಚಿತವಾಗಿ ಟಿಕೆಟ್‌ಗಳನ್ನು ಕಾಯ್ದಿರಿಸಬಹುದಾಗಿದೆ.

ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ : 080-22873377/22870099/9980915155
ಬಸ್ ಗುತ್ತಿಗೆಗಾಗಿ : 9980915152, 22353054, ಮುಂಗಡ ಕಾಯ್ದಿರಿಸುವಿಕೆ 9980915157/22385848 ಹಾಗೂ 12666

ಪ್ರಯಾಣಿಕರೇ ನಮ್ಮ ಪ್ರಭುಗಳು    ಕರ್ನಾಟಕ ಸಂಪರ್ಕ ಸೇತುವೆ    ಸೇವಾ ಭಾಗ್ಯ ನಮ್ಮದು

website : www.ksrtc.org ಅಥವಾ www.ksrtc.in

ರಾಘು ಅವರ್ಗೆಲ್ಲಾ ಉಡುಗೊರೆ ಕಳಿಸಿಕೊಡ್ತಾನೆ. ...ಟಿ.ವಿ., ಟೇಪ್‌ರೆಕಾರ್ಡರ್, ಶಿ ಮದ್ಯ ! ಇನ್ನೂ ಏನೇನೋ !... ಈ ಪಾರ್ಟಿಗಲ್ಲದೆ ಇದ್ದರೂ ರಾಘು ಕೊಡೊ ಡುಗೊರೆಗೆ ಬೆಲೆ ಇದ್ಯಲ್ಲಾ ?... ಆ ಜನ ಇವನಿಗೆ ಲೈಸನ್ಸ್ ಕೊಡುಸ್ತಾರೆ... ಮತ್ತೆ ಸಾದೊಂದು ಪ್ರಾಜೆಕ್ಟ್ ಶುರು ಆಗತ್ತೆ! ಅಲ್ಲಿಗೆ ಪಾಪಗಳೆಲ್ಲಾ ಪಚನ ಹೋಗತ್ತೆ... (ಮತ್ತೆ ಚರಕ ಸುತ್ತಲು ಕೂರುತ್ತಾ) ಉಹ್ಞುಂ... ಈಗ ಯಾವುದಕ್ಕೂ ಉಳ್‌ದಿಲ್ಲ... ಸಂಬಂಧಗಳೇ ವ್ಯಾಪಾರ ಆಗೋ ಸ್ಥಿತಿ ಬಂದ್ ಬಿಟ್ಟಿದೆ... ನಲ್ಲಿ ಹೇಳ್ಬೇಕೂಂದ್ರೆ ಕಾಲ ಪೂರ, ಪೂರಾ ಬದಲಾಗಿದೆ.

[ಹೊರಗಿನ ಗದ್ದಲ ಹೆಚ್ಚಾಗುತ್ತದೆ. ಅಪ್ಪಾಜಿ ಆ ಗದ್ದಲ ಮರೆಯಲೆಂಬಂತೆ ದೊಡ್ಡ ಯಲ್ಲಿ ಭಗವದ್ಗೀತೆಯನ್ನು ಓದುತ್ತಾರೆ. ಗದ್ದಲದ ಸದ್ದನ್ನು ಮೀರಿಸುವಂತೆ ಧ್ವನಿ ಸುತ್ತಾರೆ. ಅವರ ಓದಿನ ರಾಗಕ್ಕೆ ತಕ್ಕಂತೆ ಮೈದೂಗುತ್ತಾರೆ. ಗೀತೆಯ ಸಾಲುಗಳು ಸ್ಥವಾಗಿವೆ ಎಂಬಂತೆ ಓದುತ್ತಲೇ ಹೊರಕೋಣೆಯತ್ತ ನೋಡುತ್ತಾರೆ.

ಹೊರಗಿನ ಗದ್ದಲ ಈಗ ಚೀರಾಟದ ಹಂತ ತಲುಪಿದೆ. ಅಲ್ಲಿ ಯಾವುದೋ ವಿಷಯಕ್ಕೆ ೀ ಜಗಳ ಆಗುತ್ತಾ ಇರುವಂತಿದೆ. ''ಇದೆಲ್ಲಾ ಆಗಿದ್ದು ನಿಮ್ಮಿಂದಾರೀ !'', ''ನಾನೇನಯ್ಯ ದ್ದೆ ?'', ''ನೋಡಿ ಈ ಸಿಂಗ್ಯುಲರ್ ಎಲ್ಲಾ ಸರಿ ಬರೋದಿಲ್ಲ, ಮರ್ಯಾದೆ, ಮರ್ಯಾದೆ ಕೊಟ್ಟು ಾಡಿ.'' ''ಮರ್ಯಾದೆ ಇರೋರ್ಗೆ ಕೊಡ್ಬೋದು, ಅದೇ ಇಲ್ಲದೋರ್ಗೆ ಏನ್ರೀ ಕೊಡೋದು ?'' ಯೂವ್ ಬಾಸ್ಟರ್ಡ್ !'' ''ಯೂವ್ ಸನ್ ಆಫ್ ಎ ಬಿಚ್ !'' ಗದ್ದಲದ ನಡುವೆ ಮಾತುಗಳು ಕೊಳ್ಳುತ್ತವೆ.]

**ಅಪ್ಪಾಜಿ :** (ಪ್ರೇಕ್ಷಕರತ್ತ ತಿರುಗಿ, ಮುಸಿನಗೆಯೊಂದಿಗೆ ಮಾತನ್ನು ಆರಂಭಿಸುತ್ತಾರೆ) ವಿನಿಂದ ಆರಂಭ ಆಗಿದ್ದು ಅಂತ್ಯ ಆಗೋದು ಇಲ್ಲೇ !... ಜಟಾಪಟೀನೇ ಶುರು ರತ್ತೆ. ಯಾವುದಕ್ಕೆ ಗೊತ್ತಾ ?... ಯಾವುದೋ ಊರಲ್ಲಿ ಆಗಿರೋ ರೇಸ್ಗೆ. ರಲ್ಲಿ ಗೆಲ್ಲೋ ಕುದುರೇಗೆ ! ಹಾಗೆ ಓಡೋ ಕುದುರೇಗೂ ಆ ಪಾರ್ಟೀಲ್ಲಿ ಕಿತ್ತಾಡ್ತಾ ೋರ್ಗೂ ತುಂಬಾ ವ್ಯತ್ಯಾಸ ಏನೂ ಇಲ್ಲ! ಎಲ್ಲಾರ್ಗೂ ಒಂದೇ ಸಲ ಗುರಿ ಮುಟ್ಟಿ ಟ ತೊಡ್‌ಸ್ಕೊಳೊ ಆಸೆ!... ಆದರೆ, ಅವರ್ಯಾರ್ಗೂ ಗುರಿ ಯಾವುದು ಅಂತಾನೇ ತ್ತಿಲ್ಲ, ಪಾಪ !

[ಆ ಹೊತ್ತಿಗೆ ಯಾರೋ ಕೋಣೆಯ ಬಾಗಿಲು ತಟ್ಟಿದ ಸದ್ದು ಕೇಳುತ್ತದೆ. ಅಪ್ಪಾಜಿ ತಟ್ಟನೆ ದಲಿನಂತೆಯೇ ಗೀತೆ ಓದಲಾರಂಭಿಸುತ್ತಾರೆ. ಕೋಣೆಯ ಬಾಗಿಲು ದೂಡಿಕೊಂಡು ಟು ಧರಿಸಿದ ನಲ್ವತ್ತರ ಹರೆಯದ ಟಿ. ಸಿ. ಜಗಳೂರು ಉರುಫ್ ತಿಪ್ಪೇಸ್ವಾಮಿ ಚೌಡಪ್ಪ ಳೂರು ಪ್ರವೇಶಿಸುತ್ತಾನೆ. ಆತನ ಚಿನ್ನದ ಫ್ರೇಮಿನ ಕನ್ನಡಕಕ್ಕೆ ಚೈನು ಇದೆ. ಆ ಕನ್ನಡಕ ಯ ಮೇಲೆ ತೂಗುತ್ತಿದೆ. ಆತನ ಕೈಯಲ್ಲಿ ಗುಂಡಿನ ಫ್ಲಾಸ್ಕ್ ಇದೆ. ಆತ ತನಗೆ ಯಾವುದೇ ಯಲ್ಲೂ ಹೊಂದದ ಡ್ರೆಸ್ಸಿನಲ್ಲಿ ಇದ್ದಾನೆ ಎಂಬುದು ಸ್ಪಷ್ಟ. ಆತನ ಮೈ ಬಣ್ಣ ಆತ ದಲಿತ ಬುದನ್ನು ಸೂಚಿಸುತ್ತಿದೆ.

ಜಗಳೂರ್ ಬಂದುದನ್ನು ಗಮನಿಸದೆ ಗೀತ ಪಠಣ ಮಾಡುತ್ತಾ ಇರುವ ಅಪ್ಪಾಜಿ. ಳೂರ್ ಅಪ್ಪಾಜಿಯ ಬೆನ್ನ ಹಿಂದೆ ಬಂದು ನಿಲ್ಲುತ್ತಾನೆ. ಅಪ್ಪಾಜಿ ಓದುತ್ತಾ ಇರುವ ಸ್ಕೃತವನ್ನು ತಾನೂ ಓದಲು ಪ್ರಯತ್ನಿಸುತ್ತಾನೆ.]

**ಅಪ್ಪಾಜಿ :** ಚಾತುರ್‌ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ। ತಸ್ಯ ರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥

**ಜಗಳೂರ್ :** (ಸಂಸ್ಕೃತ ಬಾರದವನಂತೆ) ಚತುರ... ವರ್ಣ್ಯಂ... ಮಯಾ... ಸೃಷ್ಟ್ಯಂ...

**ಅಪ್ಪಾಜಿ :** ಅರರೆ! ಮಿಸ್ಟರ್ ಟಿ. ಸಿ. ಜಗಳೂರ್ ! ನೀವು ಬಂದ್ರಾ ? ನಾನು ಘು ಅಂದ್ಕೊಂಡೆ... ನೀವೂ ಕೂಡ ಗೀತೆ ಓದ್ತೀರೇನು ?

**ಜಗಳೂರ್ :** ಓದೋ ಪ್ರಯತ್ನ ಅಷ್ಟೆ.. ಹ್ಹೆಹ್ಹೆ... ಆ ಭಾಷೆ ನಮ್ಮ ನಾಲ್ಗೇಗ್ ಗ್ಗೋದಿಲ್ಲ. ಹೆಹ್ಹೆಹ್ಹೆ (ಕೃತಕವಾಗಿ ನಗ್ತಾನೆ).

**ಅಪ್ಪಾಜಿ :** ಕಂಪೆನಿ ಸೆಕ್ರೆಟರಿಗೆ ಸಂಸ್ಕೃತ ಬೇಕಾಗೋದೂ ಇಲ್ಲ ಬಿಡಿ. ಕೂತ್ಕೊಳಿ ! ಮಂಚದ ಮೇಲೇ ಕೂರಲು ಸೂಚಿಸುತ್ತಾನೆ) ಅದೇನು ? ಪಾರ್ಟಿ ಬಿಟ್ಟು ಇಲ್ಲೀಗ್ ದ್ರಿ ?

**ಜಗಳೂರ್ :** (ಅವರು ತೋರಿಸಿದಲ್ಲಿ ಕೂರದೆ ಅತ್ತಿತ್ತ ಕೂರಲು ಜಾಗ ನೋಡುತ್ತಾ) ಗಲಾಟೆ ನನಗಾಗಲ್ಲ ಅಪ್ಪಾಜಿ.

**ಅಪ್ಪಾಜಿ :** (ಬಾಗಿಲತ್ತ ನೋಡಿ) ಈಗ ಗಲಾಟೆ ಆಗ್ತಾ ಇರೋದ್ ಯಾವುದಕ್ಕೆ ?

**ಜಗಳೂರ್ :** ಜನಶಕ್ತಿ ಸೊಸೈಟಿಯ ಪ್ರಪೋಸಲ್ ದಡ ಸೇರಿದ್ದಕ್ಕೆ! ಹಹ್ಹ... ಸುತ್ತಾ ಏನೋ ಹುಡುಕ್ತಾನೆ)

**ಅಪ್ಪಾಜಿ :** ದಡ ಸೇರ್‌ದ್ಮೇಲೆ ಗಲಾಟೆ ಯಾಕೇಂತ ?

**ಜಗಳೂರ್ :** ಕೆಲಸ ಮಾಡಿದ್ದು ಯಾರು ಅನ್ನೋ ಕ್ರೆಡಿಟ್ ಬೇಡ್ವಾ ಅಪ್ಪಾಜಿ. (ಇನ್ನೂ ಹುಡುಕುತ್ತಾ) ಈಗ ನಿಮ್ಮ ಮಗ ರಾಘವೇಂದ್ರ ಪಾರ್ಟಿ ಕೊಡ್ತಾ ಇದ್ದಾರೆ... ಬಂದಿರೋರು – ''ತಾವು ಈ ಪ್ರಪೋಸಲ್ ಓಕೆ ಮಾಡ್ಸೋಕ್ಕೆ ಏನೇನ್ ಕಷ್ಟಪಟ್ವಿ'' ಅಂತ ಒಬ್ಬರ ಮೇಲ್ ಒಬ್ಬರು ರೇಗಾಡ್ಕೊಂಡ್ ಮಾತಾಡ್ತಾರೆ. ನಾಳೆ ಆ ಬೋಲಾರಾಮ್ ಗೋಲ್‌ವಾಳ್ಕರ್ ಪಾರ್ಟಿ ಕೊಟ್ಟರೆ, ಅಲ್ಲಿ ಈ ಪ್ರಪೋಸಲ್‌ನ ತಡ್ಯೋಕ್ಕೆ ಏನೇನ್ ಕಷ್ಟ ಪಟ್ವಿ ಅಂತ ಇದೇ ಜನ ಮಾತಾಡ್ತಾರೆ... ಹ್ಹೆಹ್ಹೆ! ಅಪ್ಪಾಜಿ. ತಿಲ್ಲಿರೋರೆಲ್ಲಾ ಬಾಯಿಹರುಕ್ರು ! (ನಗು)

**ಅಪ್ಪಾಜಿ :** ಇದೆಲ್ಲಾ ರಾಘೂಗೆ ಗೊತ್ತಾಗಲ್ವಾ ?

**ಜಗಳೂರ್ :** ಗೊತ್ತಾಗ್ದೆ ಏನು ? ಚೆನ್ನಾಗ್ ಗೊತ್ತಿರತ್ತೆ. ಆದರೂ ಪಾರ್ಟಿ ಕೊಡ್ತಾರೆ. ಬಂದವರಿಗೆ ಕೈತುಂಬಾ ಪ್ರೆಸೆಂಟೇಷನ್ ಕೊಡ್ತಾರೆ... ಹಹ್ಹಹ್ಹ (ಇನ್ನೂ ಹುಡುಕುತ್ತಾ)

**ಅಪ್ಪಾಜಿ :** (ಕುತೂಹಲದಿಂದ ನೆನಪಿಸಿಕೊಳ್ಳುತ್ತಾ) ಈ ಜನಶಕ್ತಿ ವಾದಿರಾಜ್ ಅವರದ್ದಲ್ವಾ ?

**ಜಗಳೂರ್ :** ಹ್ಞೂಂ... ಅವರದ್ದೇ! ಹೆಸರಿಗೆ ಅವರ ಚಿಕ್ಕಪ್ಪ ಏಕನಾಥ್‌ರಾವ್ ಛೇರ್ಮನ್ ಆಗಿದಾರೆ, ಅಷ್ಟೆ. (ಇನ್ನೂ ಹುಡುಕ್ತಾ)

**ಅಪ್ಪಾಜಿ :** ಅಂತೂ ಒಳ್ಳೇ ಕೆಲಸಕ್ಕೆ ಅಂತ ಆರಂಭ ಆಗಿದ್ದೆಲ್ಲಾ ಈಗ ಕೆಲವರ ಸ್ವತ್ತಾಗ್ ಬಿಟ್ಟಿದೆ. ಛೇ ! ಇಂಥಾ ವಿಷಯಗಳು ನಮ್ಮಂಥೋರ ಕಿವೀಗ್ ಬೀಳ್‌ಬಾರ್ದು!

**ಜಗಳೂರ್ :** (ಹುಡುಕುವುದನ್ನ ನಿಲ್ಲಿಸಿ, ನಗ್ತಾ) ಬೇಡ ಅಂದರೂ ಕಿವೀಗ್ ಬಂದು ಅಪ್ಪಳ್ಸೋದೇ ಇದು ಅಪ್ಪಾಜಿ... ಹ್ಹೆಹ್ಹೆಹ್ಹೆ... ಆ ಕುಲಕರ್ಣಿ ಅಂತೂ ವಾಂತೀನೇ ಮಾಡ್‌ಬಿಟ್ಟ...

**ಅಪ್ಪಾಜಿ :** ಕುಲಕರ್ಣಿ ಯಾರು ?

**ಜಗಳೂರ್ :** ಫೈನಾನ್ಸ್ ಡಿಪಾರ್ಟ್‌ಮೆಂಟ್‌ನೋನು !... (ನಗ್ತಾ)

**ಅಪ್ಪಾಜಿ :** ಛೇ ! ಈ ಜನ ಕೈಲಾಗದೆ ಇದ್ದರೂ ಕುಡ್ಯೋದು ಯಾಕೇಂತ ?

**ಜಗಳೂರ್ :** ಅದು ಪ್ರಜ್ಞೇಗ್ ಬರೋದೇ ಇಲ್ವಲ್ಲ, ಅಪ್ಪಾಜಿ ?... ಹ್ಹೆಹ್ಹೆ... ಕುಡಿಯೋನ್ಗೆ ಎಷ್ಟು ಕುಡೀಬೇಕೂಂತ ತಿಳುವಳಿಕೆ ಇರಲ್ಲ... ನನ್ನನ್ನೇ ತಗೊಳಿ... ನಾನು ಹೆಚ್ಚಿಗೆ ಕುಡ್ಯೋದಿಲ್ಲ. ಯಾಕೇಂದ್ರೆ, ನಾನು ಕಂಠಮಟ್ಟ ಕುಡಿದ್ ತಕ್ಷಣ ಬಡಬಡ್ಸೋಕ್ಕೇ ಶುರು ಮಾಡ್ತೀನಿ... ಏನ್ ಹೇಳ್ದೆ? ಯಾಕ್ ಹೇಳ್ದೆ ಅಂತಾನೇ ತಿಳ್ಯಲ್ಲಾ... ಒಂದ್ಸಲ ಬಡಬಡಿಕೆ ಶುರು ಆದರೆ ಸಾಕು... ಹೊಟ್ಟೆಯಿಂದ ಏನೇನ್ ಹೊರಗ್ ಬಂತು ಅಂತ ಗೊತ್ತೇ ಆಗಲ್ಲ. ಹ್ಹೆಹ್ಹೆ.

**ಅಪ್ಪಾಜಿ :** (ಅವನ ಕೈಯಲ್ಲಿರುವ ಗುಂಡಿನ ಫ್ಲಾಸ್ಕ್ ನೋಡ್ತಾ) ಆದರೂ... ?

**ಜಗಳೂರ್ :** ಆದರೂ ಕುಡೀತೀನಿ... ನನಗಾಗಿ ಅಲ್ಲ!... ರಾಘವೇಂದ್ರಜೀಗೇ ಅಂತ, ವಾದಿರಾಜ್‌ಜೀಗೇ ಅಂತ... ನಾವು ಅವರ್ಗಿಂತ ಬೇರೆ ಅನ್ನಸ್‌ಬಾರ್ದಲ್ಲ.. ಅದಕ್ಕೇ ಕುಡೀತೀನಿ... ಹ್ಹೆಹ್ಹೆ (ಎಂದು ಫ್ಲಾಸ್ಕಲ್ಲಿ ಇದ್ದುದನ್ನು ಕುಡಿದು ಮತ್ತೆ ಕೋಣೆಯಲ್ಲಿ ಏನನ್ನೋ ಹುಡುಕಲಾರಂಭಿಸುತ್ತಾನೆ.)

**ಅಪ್ಪಾಜಿ :** ನೀವೇನ್ ಹುಡುಕ್ತಾ ಇದೀರಿ ?

**ಜಗಳೂರ್ :** ಏನಿಲ್ಲ, ಏನಿಲ್ಲ... (ಎಂದು ಮೂಲೆಯಲ್ಲಿದ್ದ ಒಂದು ಕಸದಬುಟ್ಟಿಯನ್ನ ತೆಗೆದು ಬೋರಲು ಹಾಕಿಕೊಂಡು ಕೂರುತ್ತಾನೆ.)

[ಅಪ್ಪಾಜಿ ಅವನನ್ನೇ ಗಮನಿಸುತ್ತಾ ಇದ್ದಾರೆ.]

**ಜಗಳೂರ್ :** ಅಪ್ಪಾಜೀ... ನಾನೇನಾದ್ರೂ ತುಂಬಾ ಮಾತಾಡ್‌ಬಿಟ್ನಾ ?

**ಅಪ್ಪಾಜಿ :** ಇಲ್ಲ... ತುಂಬಾ ಏನೂ ಮಾತಾಡಿಲ್ಲ.

**ಜಗಳೂರ್ :** (ಅಮಲು ಅವನ ಮಾತಿನ ತೂಕ ತಪ್ಪಿಸುತ್ತಾ ಇರುವಂತೆ) ನಾನು ಮರ್ಯಾದೆ ಮರ್ತು ಏನಾದ್ರೂ ಮಾತಾಡಿದ್ರೆ ನಿಮ್ಮ ಕಾಲಿಂದ್ ತೆಗ್ದು ಹೊಡೀರಿ ! ಅಪ್ಪಾಜಿ !... ಆ ಅಧಿಕಾರ ನಿಮಗೊಬ್ಬರ್ಗೆ ಇರೋದು. ... ನೀವು... ನೀವು ನನ್ನ... ... ನನ್ನ ಅಪ್ಪ ಇದ್ದ್‌ಹಾಗೆ ! (ಅವನ ಧ್ವನಿಯಲ್ಲಿ ಗೌರವ-ಪ್ರೀತಿ) ಅದ್ಕೆ ಇಲ್ಲೀಗ್ ಬಂದಾಗೆಲ್ಲಾ ತಪ್ಪದೆ ನಿಮ್ಮ ಹತ್ತಿರ ಮಾತಾಡ್ತೀನಿ ! ಬೇರ್ಯೋರ್ಹತ್ರ ? ... ಉಹ್ಞುಂ ! ... ಬಾಯ್ಕೂಡ ಬಿಚ್ಚಲ್ಲ (ಫ್ಲಾಸ್ಕಿನಿಂದ ಅಪ್ಪಾಜಿಗೆ ಕಾಣದಂತೆ ಏರಿಸಿಕೊಳ್ಳುತ್ತಾನೆ) ... ಅಪ್ಪಾಜಿ, ನಿಮ್ಮ ಹತ್ತಿರ ಇದ್ರೆ ಹೊಂಗೆ ಮರದ ನೆರಳಲ್ಲಿ ಇದ್ದಾಗ್ ಆಗತ್ತೆ... ನಿಜವಾಗ್ಲೂ!

[ಅಪ್ಪಾಜಿ ಅವನನ್ನ ಕನಿಕರದಿಂದ ನೋಡುತ್ತಾರೆ.]

**ಜಗಳೂರ್ :** ಹ್ಹೆಹ್ಹೆ!... ಅಪ್ಪಾಜೀ... ಅದ್ಯಾಕ್ ಹಾಗ್ ನೋಡ್ತಾ ಇದೀರಿ ನನ್ನ ?... ಹ್ಹೆಹ್ಹೆ! ... ಯಾವ್ದೋ ಝೂ ಗಾರ್ಡನ್‌ನಲ್ಲಿ ಇರ್ಬೇಕಾದೋನು ಇಲ್ಲೀದೀನಿ ಅಂತಾನಾ ? ... ಹ್ಹೆಹ್ಹೆ ?

**ಅಪ್ಪಾಜಿ** : ಹಾಗೇನೂ ಇಲ್ಲ ಮಿಸ್ಟರ್ ಟಿ. ಸಿ. ಜಗಳೂರ್

**ಜಗಳೂರ್** : ತಿಪ್ಪೆ... ತಿಪ್ಪೇಸ್ವಾಮಿ ಚೌಡಪ್ಪಾ ಜಗಳೂರ್...

**ಅಪ್ಪಾಜಿ** : (ತಲೆದೂಗಿ) ಜಗಳೂರ್, ನಿಮ್ಮನ್ನ ನೋಡ್ದಾಗೆಲ್ಲಾ ನನ್ನನ್ನ ಒಂದು ಪ್ರಶ್ನೆ ಕಾಡತ್ತೆ!

**ಜಗಳೂರ್** : (ನಗ್ತಾ, ಹುಬಗನಂತೆ) ಕೇಳಿ ಮತ್ತೆ.

**ಅಪ್ಪಾಜಿ** : ಈಗ ನೀವು ವಾದಿರಾಜ ಮತ್ತೆ ನಮ್ಮ ರಾಘು ಕಂಪೇನೀಲ್ಲಿ ದೊಡ್ಡ ಹುದ್ದೇಲ್ಲಿದೀರಿ. ಆದರೆ... ನೀವು ಯಾವ ಸ್ಥಿತಿಯಿಂದ ಯಾವುದಕ್ಕೆ ತಲುಪಿದ್ರಿ ಅಂತ ನೆನಸ್ಕೊಂಡ್ರೆ... ನನಗ್ ಸೋಜಿಗ ಅನ್ಸತ್ತೆ!

**ಜಗಳೂರ್** : ''ನಾನು'' ಅಂದ್ರೆ ? ... ಓ! ನಾನು ಏ. ಕೆ. ಅಂತಾನಾ ? ಹ್ಹೆಹ್ಹೆ... ನನ್ನನ್ನ ಆದಿಕರ್ನಾಟಕ ಅನ್ನೋ ಧೈರ್ಯ ಯಾರ್ಗಿದೆ ಈಗ, ಹೇಳಿ ?... ಹ್ಹೆಹ್ಹೆ... ಇತ್ತು! ಈ ''ಏ.ಕೆ., ಏ.ಕೆ.'' ಅನ್ನೋ ಶಬ್ದ ನಾನು ಕೆಲಸಕ್ಕೆ ಸೇರ್ಕೊಂಡ ಹೊಸದರಲ್ಲಿ ಕೇಳ್ತಾ ಇತ್ತು! ... ಒಂದ್ ಸಲ ಕೋಪದಲ್ಲಿ ನಿಮ್ಮ ಮಗ ರಾಘವೇಂದ್ರ ಅವರೂ ಹಾಗ್ ಕರ್ದಿದ್ರೂ ನನ್ನನ್ನ!... ನಾನು ಉಗ್ದೆ, ಸರ್ಯಾಗ್ ಹೇಳ್ದೆ (ಎದುರಿಗೆ ರಾಘವೇ ಇದ್ದಾನೋ ಎಂಬಂತೆ ಅಪ್ಪಾಜೀನ ನೋಡಿಕೊಂಡು) ''ಬಾಯ್ ಮುಚ್ಚಿ. ನನ್ನನ್ನ ಏ.ಕೆ. ಅಂತ ಕರ್‍ಯೋ ನಿಮ್ಮ ಕೆಲ್ಸಾನೇ ನನಗ್ ಬೇಡ! ತಗೋಳ್ರಿ ರಾಜೀನಾಮೆ! ನಿಮ್ಮ ಹಾಳಾದ ಹಿಂದೂ ಧರ್ಮ ಕಟ್ಕೊಂಡ್ ನನಗೇನ್ ಆಗ್ಬೇಕಾಗಿದೆ. ನಾನು ಬೌದ್ಧ, ನವಬೌದ್ಧ. ನಿಯೋಬುದ್ದಿಸ್ಟ್'' (ಮಾತಾಡುತ್ತಾ ಜಗಳೂರ್ ಧ್ವನಿ ತಾರಕಕ್ಕೇರುತ್ತದೆ. ಆತನಿಗೆ ತಾನು ಚೀರುತ್ತಾ ಇರುವುದು ಅಪ್ಪಾಜಿಯ ಮುಂದೆ ಎಂದು ಅರಿವಾಗಿ ಆತ ತಟ್ಟನೆ ಮಾತು ನಿಲ್ಲಿಸುತ್ತಾನೆ.) ಹೋಗ್ಲಿ ಬಿಡಿ ಅಪ್ಪಾಜಿ. ಈಗ ಅದೆಲ್ಲಾ ಯಾಕೆ ?

**ಅಪ್ಪಾಜಿ** : ಪರವಾಗಿಲ್ಲ ಹೇಳಿ ಜಗಳೂರ್ ?

**ಜಗಳೂರ್** : ಅಪ್ಪಾಜಿ, ನೀವು ಬೇಕಾದ್ರೆ ನನ್ನ ತಿಪ್ಪೇಸ್ವಾಮಿ ಅನ್ನಿ. ಅಥವಾ ತಿಪ್ಪ ಅಂತನ್ನಿ. ಆದ್ರೆ ಜಗಳೂರು ಅನ್ಬೇಡಿ... ಹ್ಹೆಹ್ಹೆ... ನೀವು ಹಾಗ್ ಕರ್‍ದ್ರೆ ನನಗ್ ... ''ಏ.ಕೆ.'' ಅಂತ ಅಂದ್ಹಾಗೆ ಕೇಳತ್ತೆ... ಹ್ಹೆಹ್ಹೆ... ಹ್ಹೆಹ್ಹೆ!

**ಅಪ್ಪಾಜಿ** : ಆಯ್ತು, ಹಾಗೆ ಕರ್‍ಯೋಣಂತೆ! ಆದ್ರೆ ನೀವು ಅದೇನೋ ಹೇ... ಇದ್ದರಲ್ಲ, ಅದನ್ನ ನಿಲ್ಲಿಸ್ಬೇಡಿ. ಹೇಳಿ!

**ಜಗಳೂರ್** : ಅಯ್ಯೋ! ಬೇಡ ಬಿಡಿ. ಅಪ್ಪಾಜಿ... ಅದನ್ನೆಲ್ಲಾ ಕೇ... ಅಗ್ಬೇಕಾದ್ದೇನಿದೆ ? ಹ್ಹೆಹ್ಹೆ... ನಾನ್ ಬೇರೆ ಕುಡ್ದಿದೀನಿ. ಹ್ಹೆಹ್ಹೆ... ಕುಡ್ಕ... ಮಾತಾಡ್ ಬಾರ್ದು, ಅಪ್ಪಾಜಿ!

[ಅಪ್ಪಾಜಿ ಅವನು ಮಾತಾಡಿಯೇ ಆಡುತ್ತಾನೆ ಎಂಬ ನಂಬಿಕೆಯೊಡನೆ ಕೇಳುಗರಂ... ಕೂರುತ್ತಾರೆ. ಜಗಳೂರ್ ಮತ್ತೆ ಫ್ಲಾಸ್ಕಿನಿಂದ ಗುಂಡನ್ನ ಗಂಟಲಿಗಿಳಿಸುತ್ತಾನೆ. ತಾನು ಕೂತಿ... ಕಸದಬುಟ್ಟಿಯಿಂದ ಎದ್ದು ಓಡಾಡುತ್ತಾನೆ. ಕೆಲಕ್ಷಣದ ನಂತರ ಮಾತನ್ನಾರಂಭಿಸುತ್ತಾನೆ.]

**ಜಗಳೂರ್** : ಬಟ್... ಅಪ್ಪಾಜಿ. ವಾದಿರಾಜರಾವ್ ದೊಡ್ಡ ಮನುಷ್ಯರು!... ತುಂಬ... ಅಂದ್ರೆ ತುಂಬಾ ದೊಡ್ಡ ಮನುಷ್ಯರು! ಅವರು ಹೇಳಿದ್ರೂ! ''ಯಾರೂ ಯಾವುದ... ಕಾರಣಕ್ಕೂ ಟಿ. ಸಿ. ಜಗಳೂರ್‌ಗೆ ಅವಮಾನ ಮಾಡಬಾರದು'' ಅಂತ ಅವರು ಹೇಳಿದ್ರು... ಆಮೇಲೆ! ಹ್ಹೆಹ್ಹೆ... ಈ ''ಏ.ಕೆ., ಏ.ಕೆ.'' ಅಂತ ಕೇಕೆ ಹಾಕ್ತಾ ಇದ್ದೋರೆಲ್ಲಾ ಸುಮ್ಮನ... ಗ್ಹೋದ್ರೂ!... ಹ್ಹೆಹ್ಹೆ... ಬಟ್ ಅಪ್ಪಾಜಿ! ವಾದಿರಾಜ್ ಅವರಿಂದ ನನಗೆ ಸ್ಟೇಟ... ಬಂತು! ಐ ಯಾಂ ನಾಟ್ ಅನ್ ಆರ್ಡಿನರಿ ಏ.ಕೆ. ಎನಿಮೋರ್!... ಹ್ಹೆಹ್ಹೆ... ಯಾಂ ಟಿ.ಸಿ. ಜಗಳೂರ್! ತಿಪ್ಪೇಸ್ವಾಮಿ ಚೌಡಪ್ಪ ಜಗಳೂರ್! ಕಂಪೆನಿ ಸೆಕ್ರೆಟರಿ!

[ಅಪ್ಪಾಜಿ ಮತ್ತೇನೋ ಕೇಳಬೇಕೆಂದು ಹೊರಟವರು ಕೈ ಎತ್ತಿದ್ದನ್ನ ಇಳಿಸುತ್ತಾರೆ. ಮಾ... ತಡೆದುಕೊಳ್ಳುತ್ತಾರೆ. ಅದನ್ನು ಗಮನಿಸುವ ಜಗಳೂರ್]

**ಜಗಳೂರ್** : ಅಪ್ಪಾಜಿ! ಐ ಥಿಂಕ್ ಯೂವ್ ಹ್ಯಾವ್ ಒನ್ ಮೋ... ಕ್ವೆಶ್ಚನ್ ?... ಕೇಳಿ. ಈ ಕಂಪೆನಿ ಸೆಕ್ರೆಟರಿ ಎಲ್ಲಾ ಪ್ರಶ್ನೇಗೂ ಉತ್ತರ ಕೊಡ್ತಾನೆ.

**ಅಪ್ಪಾಜಿ** : (ವಿಷಾದದ ಜೊತೆಗೆ ನಗ್ತಾ) ನನ್ನಂಥೋರ್‍ನ ಈ ವಯಸ್ನಲ್ಲಿ ಕಾಡೋದು ಬರೀ ಪ್ರಶ್ನೆಗಳೇ...

**ಜಗಳೂರ್** : ಮತ್ತೇ ಕೇಳಿ ?... ಹೊರಗ್ ಹೋಗಿ ಆ ನಾಟಕ ನೋ... ನಿಮ್ಮಂಥ ಗಾಂಧೀವಾದಿಗಳ ಜೊತೆ ಕೊತ್ಕೋಳೋದು ವಾಸಿ ಅಲ್ವಾ ?... ಆದೇ... ಬೇಕಾದ್ರೂ ಕೇಳಿ... ನೋ ಹೆಸಿಟೇಷನ್ಸ್ ಪ್ಲೀಸ್ !

**ಅಪ್ಪಾಜಿ** : ತಿಪ್ಪೆಸ್ವಾಮಿ, ನೀವು ಈ ಸಮಾಜದ ಯಾವುದೋ ಸ್ತರದಿಂ... ಯಾವುದೋ ಎತ್ತರ ತಲ್ಪಿದೀರಿ. ಆದರೆ ನಿಮ್ಮ ಜನರ ಮೇಲೆ ಸಾವಿರಾ... ವರ್ಷಗಳಿಂದ ಅನ್ಯಾಯ ಆಗಿದೆ, ಅತ್ಯಾಚಾರ ಆಗಿದೆ...

**ಜಗಳೂರ್** : (ಅವರ ಮಾತನ್ನ ಅರ್ಧದಲ್ಲಿಯೇ ತಡೆದು) ನನಗ್ ಗೊತ್ತು ಬಾಪೂಜಿ... ನನಗೆಲ್ಲಾ ಗೊತ್ತು... ಅದನ್ನ ಮರ್‍ಯೋಕ್ಕೇ ನಾನ್ ಇದನ್ನ ಹಿಡ್ಯೋದು. (ಕೈಯಲ್ಲಿರು... ಗುಂಡಿನ ಫ್ಲಾಸ್ಕ ತೋರಿಸಿ. ಅದರಲ್ಲಿದ್ದುದನ್ನು ಗಂಟಲಿಗೆ ಸುರಿದುಕೊಂಡು) ಅಪ್ಪಾಜಿ... ನಾನು ಬಿ.ಎ. ಓದಿದ್ ಮೇಲೆ, ಹಳ್ಳೀಗ್ ಹೋದೆ! ನಮ್ಮವ್ವಂಗೆ ನನ್ನ ಗುರುತೇ... ಸಿಗ್ಲಿಲ್ಲ. ''ಬಾಬ್ಯಾ, ನೀನು ಪೂರಾ ಬದ್ಲಾಗ್‌ಬಿಟ್ಟಿದ್ಯೋ ಯಪ್ಪಾ! ನಮ್ಮೋರಂಗ... ಇಲ್ವಲ್ಲೋ!'' ಅಂತಂದ್‌ಬಿಟ್ಟು!... ನನಗ್ ಆಶ್ಚರ್ಯ ಆಯ್ತು. ಆವತ್ತೇ ರಾ... ನಾನು ಊರಿಗ್ ಬಂದೇ ಅಂತ ಹೆಂಡ ತರ್‍ಸ್‌ದ್ಲು. ಬಾಡು ಮಾಡ್‌ದ್ಲು... ಕುಡಿದ... ತಿಂದು ಹಾಡಿದ್ಲು... (ಯಾವುದೋ ಜಾನಪದೀಯ ರಾಗವನ್ನ ಹೇಳುತ್ತಾನೆ)

[ಹಾಡುತ್ತಾ, ಹಾಡುತ್ತಾ ಕೋಣೆಯ ಸುತ್ತಾ ತನ್ನ ಜನರ ಶೈಲಿಯಲ್ಲೇ ಕುಣಯುತ್ತಾನ... ದಿಢೀರನೆ ರಂಗಮಧ್ಯದಲ್ಲಿ ಜಾರಿದಂತೆ ಕೂರುತ್ತಾನೆ. ಅಪ್ಪಾಜಿ ಗಾಬರಿಯಿಂದ ಬಳಿ... ಬರುವಷ್ಟರಲ್ಲಿ ಮಾತನ್ನ ಆರಂಭಿಸುತ್ತಾನೆ.]

**ಜಗಳೂರ್** : ... ಆಮೇಲ್ ನನ್ನ ಹಿಡ್ಕೊಂಡ್ ಅಳೋಕ್ಕೆ ಶುರು ಮಾಡ್‌ದ್ಲು... ಅಳ್ತಾ, ಅಳ್ತಾ ಹೇಳದ್ಲು, ''ಬಾಬ್ಯಾ, ಅಂಗಿ ಕಳಚೋ! ಲಂಗೋಟ ಕಟ್ಕೋ! ಕಂಬ... ಹೊದ್ದು, ಕೈಯಲ್ಲಿ ಗೆಜ್ಜೆಕೋಲು ಹಿಡ್ದು ಕಾಡುಬೇಟೇಗ್ ಹೋಗೋ! ದೊಡ್ಡಮ... ಹೊಡ್ಕೊಂಡ್ ಬಾರೋ! ನನಗೆ ನಿಮ್ಮಪ್ಪನ್ನ ನೋಡ್ಬೇಕಾಗಿದ್ಯೋ! ಇಷ್ಟೊತ್ತೊರ್ಗ ಅತ... ಕಣೊ! ಆ ವಾದಿರಾಜನ ಅಪ್ಪ ನಿಮ್ಮಪ್ಪನ್ನ ಸುಟ್ಟ! ನಿನ್ನ ತಂಗೀನ... ನಿನ್ನ ತಂಗೀನ...''

[ಅವನ ಮಾತು ಕೇಳುತ್ತಾ ಅಪ್ಪಾಜಿಯ ಕೈಕಾಲುಗಳು ಸೆಟೆದುಕೊಳ್ಳುತ್ತವೆ. ಅಪ್ಪಾ... ಮೆಲ್ಲಗೆ ''ಇಲ್ಲ, ಇಲ್ಲ! ನಿಲ್ಸು, ನಿಲ್ಸು!'' ಎಂದೆನ್ನತೊಡಗುತ್ತಾರೆ. ಜಗಳೂರು ಆ ಮಾತು... ಕೇಳಲೇ ಇಲ್ಲವೋ ಎಂಬಂತೆ ಕೆಲಕ್ಷಣದ ನಂತರ ಮಾತು ಮುಂದುವರೆಸುತ್ತಾನೆ. ಭಾವುಕನಾ... ನೆಲಕ್ಕೆ ಕುಸಿದು ಅಳುತ್ತಾ ಮಾತಾಡುತ್ತಾನೆ. ತನ್ನ ಜನರಂತೆ ಕುಕ್ಕರುಗಾಲಲ್ಲಿ ಕೂತು ಆಕಾ... ನೋಡುತ್ತಾ, ಎದೆ ಬಡಿದುಕೊಂಡು ರೋದಿಸುತ್ತಾನೆ.]


ರಾಜ್ ವೈಚಾರಿಕ ವೇದಿಕೆ, ಬೆಂಗಳೂರು

ಪ್ರಕಾಶನದ

ವಿಚಾರವಾದಿ ಶ್ರೀ ಎ. ಎಸ್. ನಟರಾಜ್ ಅವರ

**ದೇವರು : ಸಮಗ್ರ ಚಿಂತನೆ**

ಜಗತ್ತಿನ ದೇವರು, ಧರ್ಮ, ದೈವತ್ವ, ಆರಾಧನೆ, ತತ್ವ ದರ್ಶನಗಳ ಪರಿಚಯ, ವೈಜ್ಞಾನಿಕ ವಿಮರ್ಶಾ ಗ್ರಂಥ.

ಭೌತ ಸಂಶೋಧಕ ನಿರೂಪಣೆ, ಪ್ರಾಮಾಣ್ಯಗಳಿಂದ ಸಮರ್ಥ ಪ್ರತಿಪಾದನೆ, ವೈಜ್ಞಾನಿಕ, ವೈಚಾರಿಕ, ತಾರ್ಕಿಕ, ವಸ್ತುನಿಷ್ಠ ವಿಮರ್ಶೆಯಿಂದ ಸ್ಪಷ್ಟವಾದ ಚಿತ್ರಣಗಳನ್ನು ಅದ್ಭುತ, ಅಪೂರ್ವ, ಅನನ್ಯವಾಗಿ ಓದುಗರ ಮುಂದಿಡುವುದೇ ಈ ಗ್ರಂಥದ ಉದ್ದೇಶವಾಗಿದೆ. ಓದಿದಷ್ಟೂ ವಿಷಯಗಳ, ವಿಚಾರಗಳ, ತಾರ್ಕಿಕ, ವೈಚಾರಿಕ, ವೈಜ್ಞಾನಿಕ ಸತ್ಯದ ಆಳಕ್ಕೆ ಕೊಂಡೊಯ್ಯುವುದೇ ಈ ಕೃತಿಯ ಹಿರಿಮೆ ಮತ್ತು ವೈಶಿಷ್ಟ್ಯವಾಗಿದೆ.

'ಸಂಶೋಧನೆಯ ಆಳ, ವಿದ್ವತ್ತಿನ ಪ್ರಖರತೆ, ತೀಕ್ಷ್ಣ ವಿಶ್ಲೇಷಣೆಯ ಅಪರೂಪದ ಪುಸ್ತಕ' ಎಂದು ವಿಮರ್ಶಕರಿಂದ ಮೆಚ್ಚುಗೆ ಪಡೆದ ಗ್ರಂಥ.

**ಪುಟಗಳು : 408 + 16** **ಬೆಲೆ : ರೂ. 250**

**ಜ್ಯೋತಿಷಕ್ಕೆ ಸವಾಲು**

ಸಮಗ್ರ ಜೋತಿಷ, ವಾಸ್ತು, ಆತ್ಮ, ಪುನರ್ಜನ್ಮ, ಪೂರ್ವಕರ್ಮ, ಭೂತಪ್ರೇತಗಳ ಮೇಲಿನ ಸತ್ಯಶೋಧಕ, ವೈಜ್ಞಾನಿಕ, ವೈಚಾರಿಕ, ತಾರ್ಕಿಕ, ಶಾಸ್ತ್ರೀಯ ವಿಮರ್ಶಾ ಗ್ರಂಥ.

**ಪುಟಗಳು : 408 + 8** **ಬೆಲೆ : ರೂ. 250**




ಈ ಎರಡೂ ಪುಸ್ತಕಗಳು ನವಕರ್ನಾಟಕ ಪಬ್ಲಿಕೇಷನ್ಸ್‌ನ ಎಲ್ಲ ಪುಸ್ತಕ ಮಳಿಗೆ ಹಾಗೂ ಪ್ರದರ್ಶನಗಳಲ್ಲಿ ದೊರೆಯುತ್ತವೆ



**ಜಗಳೂರ್** : ನನಗ್ ಗೊತ್ತೇ ಇರ್ಲಿಲ್ಲ, ವಾದಿರಾಜರಾವ್ ಅವರ ಚಿಕ್ಕಪ್ಪ ಕನಾಥ್‌ರಾವ್, ಜನಶಕ್ತಿ ಸೊಸೈಟಿಯ ಛೇರ್ಮನ್... ಅವನು ನನ್ನ ತಂಗೀನ ದ್ದಾ!... ಆ ವಿಷಯಾನ ನಮ್ಮಪ್ಪ ಊರ್ಗೇ ಕೇಳೋ ಹಾಗ್ ಅತ್ಕೋತಾ ಳ್‌ದ್ನಂತೆ!... ಅದಕ್ಕೆ... ಅದಕ್ಕೇ ಅವರು! ಆ ಊರಿನ ದೊಡ್ಡ ಜನ! ನಮ್ಮಪ್ಪನ್ನ ರಿನ ಮಧ್ಯ ಇದ್ದ ಕಲ್ಲಿನ ಕಂಭಕ್ಕೆ ಕಟ್‌ಹಾಕಿ ಸುಟ್ಟುಬಿಟ್ಟರಂತೆ!

[ಜಗಳೂರು ನೆಲಕ್ಕೆ ಹಣೆ ಬಡಿದುಕೊಳ್ಳುತ್ತಾ ಅಳುತ್ತಾನೆ. ಕೆಲಕ್ಷಣದ ನಂತರ ಅವನ ಅಳು ತು, ಕೊಂಚ ಸ್ಪಷ್ಟವಾಗಿ ಮಾತು ಮುಂದುವರೆಸುತ್ತಾನೆ.]

**ಜಗಳೂರ್** : (ಮಂದ್ರದಲ್ಲಿ ಆರಂಭವಾಗಿ ದನಿಯೇರಿಸುತ್ತಾ) ... ನಮ್ಮಮ್ಮ ಅಳ್ತಾ ಳ್ತಾ ಇದ್ಲು, "ಬಾಬ್ಲ್ಯಾ, ಸತ್ತಮೇಲೆ ಈ ನಿಮ್ಮಪ್ಪಂಗೆ ಆಸೆ ಉಳ್‌ದು ಹೋಗತ್ತೋ ಪ್ಪಾ! ಆಸೆ ಸಾಯೋಕ್ಕೆ ಬಿಡಬೇಡ್ವೋ ಯಪ್ಪಾ!"

**ಅಪ್ಪಾಜಿ** : (ಕೈಕಾಲು ನಡುಗುವಾಗಲೇ) ಏನಾಸೆ ?

**ಜಗಳೂರ್** : (ಅಪ್ಪಾಜಿಯತ್ತ ತಿರುಗಿ, ತಟ್ಟನೆ) ವಾದಿರಾಜನ ಮನೆ ಸುಡೋ ಆಸೆ!

**ಅಪ್ಪಾಜಿ** : (ಅಚ್ಚರಿ, ಕಾತರದಿಂದ) ಏನಂದ್ರಿ ?... ನೀವು ಏನಂದ್ರಿ ತಿಪ್ಪೇಸ್ವಾಮಿ ?

**ಜಗಳೂರ್** : (ಎಚ್ಚರವಾದಂತೆ) ಏನೂ ಹೇಳ್ಲಿಲ್ಲ, ಹ್ಹೆಹ್ಹೆ, ಏನೂ ಹೇಳ್ಲಿಲ್ಲ... ತ್ತೆ ಆಕಾಶಕ್ಕೆ ಮುಖಮಾಡಿ) ನನಗ್ ಕನಸು ಬೀಳ್ತಾ ಇತ್ತು!... ಕೆಟ್ಟ ಕನಸು!... ನು ಪಂಜು ಹಿಡ್ಕೊಂಡು ಅವರ್ ಮನೆ ಸುಡ್ತಾ ಇದೀನಿ!... ಮನೆ ಒಳಗೆ ವರೆಲ್ಲಾರೂ ಇದಾರೆ, ಆ ವಾದಿರಾಜನ ಅಪ್ಪ, ಚಿಕ್ಕಪ್ಪ!... ನಮ್ಮಪ್ಪನ್ನ ಂದೋರು! ನನ್ನ ತಂಗೀನ ತಿಂದೋರು!... ಅವರು ಅಳ್ತಾ ಇದಾರೆ... ವಭಯದಿಂದ ಚೀರ್ತಾ ಇದಾರೆ!... [ಕಲ್ಪನೆಯ ಗುಂಗಿನಲ್ಲೇ ವಿಕಟವಾಗಿ ನಗುತ್ತಾ, ಣೆಯುತ್ತಾನೆ. ಮಂಚದ ಸುತ್ತಾ ಕೇಕೆ ಹಾಕಿ ನಗುತ್ತಾ ಸುತ್ತುತ್ತಾನೆ. ಅವನು ಕುಣಿದಂತೆ ಅಪ್ಪಾಜಿಯ ನಡುಕ ಹೆಚ್ಚುತ್ತದೆ. ಜಗಳೂರು ಕುಣಿಯುತ್ತಾ ಇದ್ದವನು ಮತ್ತೆ ಕಾಲುಜಾರಿ ಬೀಳುತ್ತಾನೆ. ಅಪ್ಪಾಜಿ ಅವನನ್ನ ಎಬ್ಬಿಸಲೆಂಬಂತೆ ಬಳಿಗೆ ಹೋಗುವ ಪ್ರಯತ್ನದಲ್ಲಿದ್ದಾಗಲೇ, ಜಗಳೂರಿಗೆ ಎಚ್ಚರವಾದಂತೆ] ಕ್ಷಮ್ಸಿ ಅಪ್ಪಾಜಿ, ನಾನು ಅದೇನೇನೋ ಬಡಬಡ್‌ಸ್ಬಿಟ್ಟೆ... ನಾನು, ನಾನು ಕಿರುಚ್ಲಿಲ್ಲ ಅಲ್ವಾ ?

**ಅಪ್ಪಾಜಿ** : ಇಲ್ಲ, ನನ್ನ ಕಿವೀಗೆ ಹಾಗೇನೂ ಕೇಳ್‌ಸ್ಲಿಲ್ಲ!

**ಜಗಳೂರ್** : (ಎದ್ದು ಮೊದಲಿನಂತೆ ಕಸವಬುಟ್ಟಿಯ ಮೇಲೆ ಕೂರುತ್ತಾ) ನನಗೂ ಎಷ್ಟೋ ಸಲ ಹೀಗಾಗತ್ತೆ ಅಪ್ಪಾಜಿ! ಯಾರೋ ಏನೋ ಮಾತಾಡ್‌ದ್ರೆ ಕೇಳೋದೇ ಇಲ್ಲ!... ಇಲ್ಲಾ, ಆಗ ಕೇಳಿದ್ದು ಅದೇ ಕ್ಷಣದಲ್ಲಿ ಮರ್ತುಹೋಗತ್ತೆ. ಹ್ಹೆಹ್ಹೆ!

**ಅಪ್ಪಾಜಿ** : ಆಮೇಲೇನಾಯ್ತು ?

**ಜಗಳೂರ್** : ಯಾವ ಮೇಲೆ ?

**ಅಪ್ಪಾಜಿ** : ಅದೇ ನಿಮ್ಮ ಕನಸಾದ್ಮೇಲೆ ?

**ಜಗಳೂರ್** : ಯಾವ ಕನಸಾದ್ಮೇಲೆ ?

**ಅಪ್ಪಾಜಿ** : ಅದೇ ಏಕನಾಥ್‌ರಾವ್‌ನ ಸುಡೋ ಕನಸು...

**ಜಗಳೂರ್** : (ನಾನು ಹೇಳಬಾರದ ಮಾತು ಹೇಳಿದ್ದೇನೆ ಎಂದು ಗಲಿಬಿಲಿಗೊಂಡು) ಹ್ಹೆಹ್ಹೆ... ಅದನ್ನೆಲ್ಲಾ ಮರ್ತುಬಿಡ್ಬೇಕು... ನೆನಪನ್ನ ಕೆದಕೋದ್ರಲ್ಲಿ ಅರ್ಥ ಇಲ್ಲ... ಹ್ಹೆಹ್ಹೆ... (ತಟ್ಟನೆ ಧ್ವನಿ ಬದಲಿಸಿ ವಿನೀತನಾಗಿ) ಅಪ್ಪಾಜಿ ನಾನ್ ಮತ್ತೇನಾದ್ರೂ ಹೇಳ್‌ದ್ನಾ ?

[ಅಪ್ಪಾಜಿ ಸುಮ್ಮನೆ ತಲೆಯಾಡಿಸುತ್ತಾರೆ]

**ಜಗಳೂರ್** : ಅದಕ್ಕೆ... ಅದಕ್ಕೇ ನಾನು ಕುಡ್ಯೋದಿಲ್ಲಾ... ಕುಡ್‌ದ್ರೆ ನೋಡಿ, ನಮ್ಮ ನಾಲಿಗೇನೆ ನಮ್ಮ ಮಾತು ಕೇಳಲ್ಲ. (ಎನ್ನುತ್ತ ಮತ್ತೆ ಕುಡಿಯುತ್ತಾನೆ)

**ಅಪ್ಪಾಜಿ** : (ಅವನನ್ನೇ ನೋಡುತ್ತಾ) ಇಷ್ಟೆಲ್ಲಾ ಆದರೂ ನೀವು ವಾದಿರಾಜರಾವ್

# ಗರಿ ಹುಟ್ಟುವ ಗಳಿಗೆ

ಉಕ್ಕುವ ತೆರೆಯಬ್ಬರದ ಎದೆಹರೆಯ
ಒಳಗೆ ಮಂದ ಸರೋವರದ
ತಿಳಿ ನೀರ ಹೂ ಬೆಳಕು.
ನೆರೆದ ಮೈ ಹದ ಧಗೆಗೆ
ಮೊದಲ ಜಳಕದ ಪುಳಕ.
ಬಗೆಯೊಳಗು ತೆರೆ ತೆರೆದು
ತೆರತರದ ಖುಷಿಬಿಂದು
ಕರಿಮೋಡದಾರ್ಭಟದ
ಮುಂಗಾರ ನವಿಲು.
ಮಣ್ಣ ಕಂಪಿನ ಅಲರು ಹೂಗಂಧ
ಅವಳು ಹಾದು ಹೋಗುವಾಗ.
ಗಾಳಿ ಮೊದಲ ಹಿಮಕಣಗಳನ್ನು
ಬೀಸಿ ತಂದಿದೆ ಎಂಬಂತೆ
ಇಬ್ಬನಿಗರೆದ ಭಾವದಲಿ
ಮೃದುವಾಗುತ್ತದೆ ಶಬ್ದ.
ಕಣ್ಣುಗಳ ತುಂಬ ನಕ್ಷತ್ರ ಹಾಡು
ನಿಂತಲ್ಲಿ ನಿಲ್ಲದ ಮೋಡ
ಒಡಲೊಳಗಿನ ಭಾವ.

ಮುಖದ ಲಾವಣ್ಯ ಚಿತ್ತಾರ
ಗಳಿಗೆ ಗಳಿಗೆಗೂ ಬದಲು
ಗರಿಹುಟ್ಟುವ ಗಳಿಗೆ.
ಎಲ್ಲೋ ಕುಳಿತು ಕೂಗುವ
ಕೋಗಿಲೆಯ ಇನಿದನಿಗೆ ದಂಗಾಗಿ
ಮತ್ತೊಂದು ಧ್ರುವ ಹುಡುಕಿ ಹೋಗುವ
ತವಕ

ಕರೆವ ಹಕ್ಕಿಯ ರೆಕ್ಕೆ
ಕಾಡದಾಕಾಶಕ್ಕೆ ನೆಗೆವ
ಅದಮ್ಯ ಹಂಬಲ.
ಈ ಹರೆಯ ಬೆರಳು ನುಡಿಸಿದ
ಕೊಳಲ ಸಂಗೀತ.



ಫಾಲ್ಗುಣಗೌಡ ಅಚವೆ
ಫಾಲ್ಗುಣಗೌಡ, ಅಚವೆ-೫೮೧೩೪೪, ಅಂಕೋಲಾ (ಉ.ಕ.)

ಅವರ ಕಂಪೇನೀಲ್ಲೇ ಕೆಲಸ ಮಾಡ್ತಾ ಇದೀರಲ್ಲಾ? ಯಾಕೆ ?

**ಜಗಳೂರ್** : (ಗುಂಡಿನ ಲೋಕಕ್ಕೆ ಇಳಿಯುತ್ತಾ) ಅವತ್ತು ಅವರು ರಸ್ತೇಲ್ಲಿ ಸಿಕ್ಕಿದ್ರು!... ನನ್ನ ಭುಜದ ಮೇಲೆ ಕೈಯಿಟ್ಟು ಹೇಳ್‌ದ್ರು. ''ನಮ್ಮಪ್ಪ-ನಿಮ್ಮಪ್ಪನ್ನ ಸುಟ್ಟ!... ನಾನು ಆ ಪಾಪ ತೊಳ್ಕೋಬೇಕು. ನೀನ್ ನನ್ನ ಜೊತೆ ಇರು. ನಾನ್ ನಿನ್ನ ದೊಡ್ಡ ಮನ್ಸಾ ಮಾಡ್ತೀನಿ!'' ಅಂತಂದ್ರು!

**ಅಪ್ಪಾಜಿ** : ದೊಡ್ಡ ಮನುಷ್ಯಾನಾ ?

**ಜಗಳೂರ್** : ಹ್ಞೂಂ... ವಾದಿರಾಜರಾವ್ ದೊಡ್ಡೋರು! ಅವರದ್ದು ದೊಡ್ಡ ಮನಸ್ಸು!... ಅದಕ್ಕೇ ಅವರು ನನ್ನನ್ನ ಕರ್‍ಕೊಂಡ್ ಹೋಗಿ ಅವರ ಕಂಪೆನೀಗೇ ಸೆಕ್ರೆಟರಿ ಮಾಡ್‌ದ್ರು!... ಹ್ಹೆಹ್ಹೆ!

**ಅಪ್ಪಾಜಿ** : ಇದಕ್ಕೇ... ಆ ತಾಯಿ ಒಪ್ಪಿದ್ಲಾ?

**ಜಗಳೂರ್** : ಜೀವನ ಎಲ್ಲಾ ಉರೀತಾ ಇದ್ದೋಳ್ನ, ನನ್ನ ಸಂಬಳದ್ ದುಡ್ಡು ತಣ್ಣಗ್ ಮಾಡ್ತು!... ''ಸೇರ್‍ಕೋ, ಸೇರ್‍ಕೋ... ಈ ದರಿದ್ರ ಬಡತನ ಮೊದ್ಲು ಹೋಗ್ಲಿ'' ಅಂತಂದ್ಲು... ನಾನು ? ಕೆಲಸಕ್ಕ್ ಸೇರ್‍ಕೊಂಡು, ದೊಡ್ಡ ಮನುಷ್ಯ ಆದೆ!

[ಜಗಳೂರು ನೆಲವನ್ನೇ ನೋಡುತ್ತಾ ನಿಲ್ಲುತ್ತಾನೆ. ಅಪ್ಪಾಜಿ ಚರಕದ ಬಳಿ ಸಾಗುತ್ತಾರೆ. ಖಾಲಿ ಚರಕ ಸುತ್ತುತ್ತಾರೆ. ಸುತ್ತುತ್ತಾ ಸುತ್ತುತ್ತಾ ಮಾತಾಡುತ್ತಾರೆ.]

**ಅಪ್ಪಾಜಿ** : ಅವತ್ತು ಗಾಂಧಿ ಹಿಂದೆ ಇದ್ದೋರೂ ಹಿಂಗೇ ಯೋಚ್ನೆ ಮಾಡಿದ್ರೆ... ಈ ದೇಶಕ್ಕೆ ಸ್ವಾತಂತ್ರ್ಯಾನೇ ಕನಸಾಗ್ತಾ ಇತ್ತು! ... ಛೇ! ಈ ಜನ ಅನ್ಯಾಯ ಆದರೂ ಯಾಕೆ ಉರ್‍ಯೋಲ್ಲಾ?

**ಜಗಳೂರ್** : (ತನ್ನದೇ ಲೋಕದಲ್ಲಿ, ಅಪ್ಪಾಜಿಯ ಮಾತು ಕೇಳದೆ ಇದ್ದವನಂತೆ) ನಾನು ದೊಡ್ಡೋನಾಗೋ ದಾರಿ ಹಿಡ್ದು ಲಗ್ನ ಆದೆ. ನಮ್ಮ ಕೇರಿ ಲಕ್ಕೂ ನನ್ನ ಕೈ ಹಿಡ್ದು, ಪಟ್ಟಣ ಸೇರಿ, ಲಕ್ಷ್ಮಿ ಆಗ್‌ಹೋದ್ಲು, ಮಿಸೆಸ್ ಲಕ್ಷ್ಮಿ ಟಿ. ಸಿ. ಜಗಳೂರ್ ಆಗ್‌ಹೋದ್ಲು... ಹ್ಹೆಹ್ಹೆ!

**ಅಪ್ಪಾಜಿ** : (ತಮ್ಮ ಲೋಕದಲ್ಲಿ) ರಾಧೆ ಕೂಡ ಇದೆ ಹೇಳ್ತಾ ಇದ್ಲು! ''ನಮ್ಮ ಮದ್ವೆ ಆಗಿದೆ. ಈ ಗಾಂಧಿ-ಪಾಂಧಿ ಬಿಟ್ಟು, ಸಂಸಾರ ನಡ್ಸಿ. ಸ್ವಾತಂತ್ರ್ಯ ಅನ್ಕೊಂಡು ನೀವೂ ಸಾಯೋದಲ್ದೆ ನಮ್ಮನ್ನೂ ಯಾಕ್ ಸಾಯ್‌ಸ್ತೀರಿ. ಊರಲ್ಲಿರೋರೆಲ್ಲಾ ಸರ್ಕಾರದ ನೌಕರಿ ಮಾಡ್ಕೊಂಡು ಸುಖವಾಗಿಲ್ವೇನು ? ಅವರಿಗೆಲ್ಲಾ ಬೇಡ ನಿಮಗ್ಯಾಕ್ ಬೇಕು ? ನೀವು ಜೈಲಲ್ಲಿ ಯಾಕ್ ಕೊಳೀಬೇಕು ? ಈ ದೇಶಕ್ಕೆ ಬರದೆ ಇದ್ದರೆ ಏನ್ ಹಾಳಾಗತ್ತೆ?'' ಅಂತಿದ್ಲು. ನಾನೂ ಆಗ ರಾಧೆ ಹೇಳಿದ್ ಕೇಳಿದ್ರೆ ಈಗ ಪ್ರತಿ ತಿಂಗಳೂ ಪೆನ್ಷನ್ ಬರ್‍ತಾ ಇತ್ತೋ ಏನೋ ? ರಾಘು ಹತ್ತಿರ ಕಾಸಿಗೆ ಕೈ ಒಡ್ಡೋ ಗೋಳೂ ತಪ್ತಾ ಇತ್ತೇನೋ ? ಹೇಗಾದರೂ ಬರಲಿ, ದುಡ್ಡು ಬರತ್ತೆ? ಬಂದಿದ್ರಲ್ಲಿ ನನಗೇನ್ ಸಿಗತ್ತೆ ಅನ್ನೋ ಲೆಕ್ಕಾಚಾರದಲ್ಲೇ ಸುಖ ಇತ್ತೇನೋ ? ಅಥವಾ ನಾನು ಮದುವೆ ಆಗದೆ ಹೋಗಿದ್ರೆ ?... ಏನಾಗ್ತಾ ಯಾರಿಗ್ಗೊತ್ತು? ನಾನೂ ಫಕೀರ ಆಗ್ಬೋದಿತ್ತು! ಸಂಸಾರ ಅಂದರೆ ತಾವರೆ ಇದ್ದಹಾಗೆ. ಅಲ್ಲಿ ನನ್ನಂಥಾ ಸಂನ್ಯಾಸೀಗ್ ಈಜೋಕ್ಕಾಗಲ್ಲ! ಆದರೂ ಚಳುವಳಿ ಸೇರ್‍ಕೊಂಡೆ! ನನ್ನ್ ಎದೇಲ್ಲಿ ಬೆಂಕಿ ಇತ್ತು!... ಬ್ರಿಟಿಷರು ಈ ದೇ ಮಾಡ್ತಾ ಇದ್ದ ಗಾಯ ಜ್ಞಾಪಕದಲ್ಲಿತ್ತು! ನಾನು, ನಾನು...

[ಅಪ್ಪಾಜಿಯ ಮಾತು ನಡೆಯುವಾಗ ಕೇಳದೆ ಗುಂಡೇರಿಸುತ್ತಾ ಇದ್ದ ಜಗಳೂ ಮತ್ತಿನಲ್ಲಿ ಮತ್ತೆ ಮಾತಾಡುತ್ತಾನೆ.]

**ಜಗಳೂರ್** : ಅಕಸ್ಮಾತ್ ನಾನು ಮದುವೆ ಆಗದೆ ಇದ್ದಿದ್ರೆ ?... ಕೊಳ್ಳಿ ಹಿಡ್ಕೊಂ ಹೋಗಿ ವಾದಿರಾಜರಾವ್ ಮನೇಗ್ ಬೆಂಕಿ ಇಟ್ಟಿದ್ರೆ ?... ಸಿಟ್ಟು ಈಗಲೂ ಇ ಆದರೆ ಉಪಯೋಗ ಇಲ್ಲ. ಖಂಡಿತಾ ಉಪ್ಯೋಗ ಇಲ್ಲಾ! (ಮೌನದ ನಂತ ... ಈಗ್ಲೂ ಪೇಪರ್‍ನಲ್ಲಿ ಬರ್‍ತಾನೆ ಇರತ್ತೆ. ''ಯಾರನ್ನೋ ಸುಟ್ಟರು! ಯಾರದ್ದೋ ಕ ಕಿತ್ರು! ಯಾರದ್ದೋ ಮಾನಭಂಗ ಆಯ್ತು! ಯಾರದ್ದೋ ಕೈಕಾಲು ಮುರ್‍ದ್ರೂ ಆಗ ನನಗ್ ಉರೀತಿರೋ ಮರ ಕಾಣತ್ತೆ. ಕಾಪಾಡಿ ಅಂತಾ ಕಿರುಚ್ತಾ ಇರೋ ನ ಕಾಣ್ತಾನೆ. (ಮುಖದಲ್ಲಿ ಸಿಟ್ಟು ಮೂಡುತ್ತದೆ) ಆಗ ನಾನು ಮನಸ್ನಲ್ಲೇ ಕೊಳ್ಳಿ ಹಿಡೀತೀ ಓಡ್ತೀನಿ!... ಎದುರಿಗೆ ಸಿಕ್ಕವರನ್ನೆಲ್ಲಾ ಸುಡ್ತೀನಿ! (ಬಿಕ್ಕಿ ಬಿಕ್ಕಿ ಅಳಲು ಆರಂಭಿಸುತ್ತಾ ಅಪ್ಪಾಜಿ ಆತನನ್ನ ದಿಟ್ಟಿಸಿ ನೋಡುತ್ತಾರೆ. ಜಗಳೂರು ಅಪ್ಪಾಜಿಯನ್ನು ಗಮ


FOR A WIDE RANGE OF BOOKS ON ALL SUBJECTS



Rs. 150



Rs. 70


Rs. 295



Rs. 225



Rs. 140



Rs. 125



Rs. 80


Rs. 160



Rs. 125


Rs. 140



Rs. 85



Rs. 95



Rs. 195

GOODWILL PUBLISHING HOUSE YOUNG LEARNER PUBLICATIONS

Rattan Jyoti, 18 Rajendra Place, New Delhi - 110 008

Tel : 91-11-25750801. 25755519, 25820556 FAX: 91-11-25763428

e-mail : goodwillpub@vsnl.net website : www.goodwillpublishinghouse.com



ಲಾಗುತ್ತಾನೆ.) ಅದಕ್ಕೆ... ಅದಕ್ಕೇ ನಾನು ಯಾಗಿರ್ತೀನಿ! ಬಿಡುವೇ ಸಿಗದೆ ಇರೋ ಹಾಗೆ ಸ ಮಾಡ್ತೀನಿ! ಏನೂ ಕೆಲಸ ಇಲ್ಲದೆ ಇದ್ದಾಗ ರಾಜರಾವ್ ನನಗ್ ಕೊಟ್ಟಿರೋ ಸೌಂಡ್ ಷನ್‌ನಲ್ಲಿ ಪಾಪ್ ಸಂಗೀತ ಕೇಳ್ತೀನಿ! ನನ್ನ ಮಗ ತಾಡೋ ಕಾನ್ವೆಂಟ್ ಇಂಗ್ಲೀಷ್ ಕೇಳ್ತೀನಿ! ಅವನನ್ನ ನ್ನಲ್ಲೇ ಓದ್‌ಸ್ಬೇಕು ಅಂತಾ ಇಂಗ್ಲೀಷಿನ ಗಂಧ– ಇಲ್ದೆ ಇರೋ ನನ್ನ ಲಕ್ಕೂಗೆ ಇಂಗ್ಲೀಷ್‌ನಲ್ಲೇ ತ್ತೀನಿ! ಹ್ಹೆಹ್ಹೆ... ಅವಳು ನನ್ನ ಮಾತು ಅರ್ಥ ಆಗದೆ ಗ ತೃಪ್ತಿಪಟ್ಕೊಂಡು ಕುಡೀತೀನಿ! ಮತ್ತೆ ಗಾಗ್ಲೇಬಾರದು ಅಂದ್ಕೊಂಡು ಗೊರಕೆ ಹೊಡೀತಾ ಗ್ತೀನಿ! ಹ್ಹೆಹ್ಹೆ... ಹ್ಹೆಹ್ಹೆಹ್ಹೆ!

**ಅಪ್ಪಾಜಿ** : ಮತ್ತೆ?... ನಿಮ್ಮ ತಾಯಿ?

**ಜಗಳೂರ್** : ಅವಳು?... ಹ್ಹೆಹ್ಹೆ... ಅವಳಿಂಥಾ ಲ್ಲಾ ನೋಡೇ ಇರ್ಲಿಲ್ವಲ್ಲಾ! ಅದಕ್ಕೇ ಬೆಳಗ್ನಿಂದ ಜೇವರ್ಗೂ ಟಿ.ವಿ. ಮುಂದೆ ಬಾಯ್‌ಬಿಟ್ಕೊಂಡ್ ತಿರ್ತಾಳೆ. ಯಾವುದೋ ಫಾರಿನ್ ಚಾನೆಲ್ ನೋಡಿ, ಂಡನ್ ದೇಸ ಚೆಂದಾಕೈತೆ, ಮಗಾ'' ಅಂತಾ ಇರ್ತಾಳೆ.

**ಅಪ್ಪಾಜಿ** : ಮತ್ತೆ?... ಅವಳ್ಗಂಡನ್ನ...?

**ಜಗಳೂರ್** : ಮರ್ತಿದಾಳೆ! ... ಪೂರಾ ರ್ತಿದಾಳೆ. ಸುಖ ಬಂತೂಂದ್ರೆ ದುಃಖ ಎಲ್ಲಾ ತ್ತುಹೋಗತ್ತೆ, ಅಪ್ಪಾಜಿ! ... ಒಂದು ಮಡಕೆ ನೀರು ೋಕ್ಕೇ ಮೈಲಿಗಟ್ಲೆ ನಡೀತಾ ಇದ್ದೋಳ್ಗೆ ಮೆತ್ತೆ ಇದ ಮಂಚದ ಮೇಲ್ ಕೂತ್ ತಕ್ಷಣ ಎಲ್ಲಾ ಮರತ್ಕಂಡ್ಬು... ಹ್ಹಹ್ಹಹ್ಹ! ... ವಾದಿರಾಜರಾವ್ ನನಗೆ ಫೈವ್ ಬೆಡ್‌ರೂಂ ಮನೆ ಕೊಟ್ಟಿದ್ದಾರೆ. ಫೋನಿದೆ, ಫ್ರಿಡ್ಜ್ ಇದೆ, ಎ.ಸಿ. ಇದೆ! ... ಈಗ ನಾನು ಆರ್ಡಿನರಿ ಮ್ಯಾನ್ ಅಲ್ಲ, ಯೂವ್ ಸೀ? ಇಪ್ಪತ್ತು ಸಾವಿರ ಸಂಬಳದೋನು! ... ನನಗೆ ಸೋಷಿಯಲ್ ಸ್ಟೇಟಸ್ ಇದೆ! ಐ ಯಾಂ ಹ್ಯಾಪಿ! ವೆರಿ ವೆರಿ ಹ್ಯಾಪಿ!

**ಅಪ್ಪಾಜಿ** : ಮತ್ತೆ? ...ಈಗ ಹಾಗನ್ನೋಲ್ವಾ?

**ಜಗಳೂರ್** : ಹ್ಯಾಗೆ?

**ಅಪ್ಪಾಜಿ** : ಅನ್ಯಾಯಕ್ಕೆ ಸೇಡು ತೀರ್‌ಸ್ಕೋಬೇಕು ಅಂತಾ?

**ಜಗಳೂರ್** : (ಮತ್ತೆ ಸಿಟ್ಟಿಗೆ ಸಾಗುತ್ತಾ) ಅನ್ಸತ್ತೆ. ಕೆಲವು ಸಲ ಇದನ್ನೆಲ್ಲಾ ಬಿಟ್ಟು ಉರಿಯೋ ಪಂಜು ಹಿಡ್ಕೊಂಡ್ ಓಡೋಣಾಂತ ಅನ್ಸತ್ತೆ!... ಬಾಪೂಜಿ, ನಾನು ಸುಳ್ಳು ಹೇಳ್ತಾ ಇಲ್ಲಾ! ... ಒಂದು ದಿನ ನಿಜವಾಗ್ಲೂ ಎದ್ದುಬಿಡ್ತೀನಿ! ... ಆಗ ಊರ್ಗೆಲ್ಲಾ ಕೂಗಿ ಕೂಗಿ ಹೇಳ್ತೀನಿ!... ''ಏಕ್‌ನಾಥ್‌ರಾವ್ ನನ್ನ ತಂಗೀನ ಕೆಡ್‌ಸ್ದಾ! ನಮ್ಮಪ್ಪನ್ನ ಸುಟ್ಟು ಹಾಕ್ದಾ'' ಅಂತ್ಹೇಳ್ತೀನಿ! (ಕಿರುಚುತ್ತಾ ಇದ್ದವನು ತಟ್ಟನೆ ಅಪ್ಪಾಜಿಯತ್ತ ತಿರುಗಿ) ಅಪ್ಪಾಜಿ, ಈ ವಿಷಯ ಅಸೆಂಬ್ಲಿವರ್ಗೂ ಹೋಗಿತ್ತು! ... ಅಲ್ಲಿ ಕಾನೂನು-ಕಾಯಿದೆ ಅಂತಾ ನಾಟ್ಕ ಮಾಡ್ಬಿಟ್ರು! ಏಕನಾಥ್‌ರಾವ್ ಜಾಗದಲ್ಲಿ ಅವರ್ ಮನೇಲ್ಲಿ ಜೀತಕ್ಕಿದ್ದ ಶಿಂಗ್ರ್ಯಾನ ನಿಲ್ಸ್ಸಿ, ತಪ್ಪಿತಸ್ಥ ಅಂತನ್ನಿ, ಜೈಲಿಗ್ ಕಳ್‌ಸ್ಬಿಟ್ರು!

**ಅಪ್ಪಾಜಿ** : ಹೌದಾ?

**ಜಗಳೂರ್** : ಹ್ಞೂಂ! ...ಈಗ ಶಿಂಗ್ರ್ಯಾನ ಹೆಂಡತೀಗೆ ವಾದಿರಾಜ ತಿಂಗ್ಳು ತಿಂಗ್ಳು ದುಡ್ಡು ಕಳ್‌ಸ್ತಾನೆ! ಅವಳ ಸಂಸಾರ ನಡ್‌ಸ್ತಾನೆ! ಹ್ಹಹ್ಹಹ್ಹ...!

**ಅಪ್ಪಾಜಿ** : (ಸ್ವಗತದಂತೆ) ಇದೆಲ್ಲಾ ಸಾಧ್ಯಾನಾ? ದುಡ್ಡು ಕೊಟ್ಟು ಯಾರನ್ ಬೇಕಾದ್ರೂ ಖೈದಿ ಮಾಡ್ಬೋದಾ? ದುಡ್ಡಿದ್ದವನು ಅಪರಾಧ ಮಾಡ್‌ದ್ರೂ ಸುಖವಾಗಿ ಹೊರಗೆ ಇರ್ಬೋದಾ? ...ಛೀ! ಛೀ! ನಾನು ಇದನ್ನೆಲ್ಲಾ ಯೋಚ್ನೆ ಮಾಡ್‌ಬಾರದು! ... ಇದೆಲ್ಲಾ ನನಗ್ ಅರ್ಥ ಆಗಲ್ಲ! (ಎನ್ನುತ್ತಾ ಚರಕದ ಬಳಿ ಬಂದು ಅದನ್ನು ತಿರುವುತ್ತಾರೆ)

[ಅಪ್ಪಾಜಿ ತಮ್ಮದೇ ಲೋಕದಲ್ಲಿರುವುದನ್ನ ಗಮನಿಸಿ ಅವರ ಬಳಿಗೆ ಬರುವ ಜಗಳೂರ್, ಅಪ್ಪಾಜಿಯನ್ನು ಹಿಂದಕ್ಕೆ ಸರಿಸಿ ತಾನು ಚರಕ ತಿರುವುತ್ತಾ ಮಾತಾಡುತ್ತಾನೆ.]

**ಜಗಳೂರ್** : ಆದರೆ ಅಪ್ಪಾಜಿ, ವಾದಿರಾಜರಾವ್ ಒಳ್ಳೇನು! ...ಅವನದ್ದು ವಿಶಾಲ ಹೃದಯ! ಅವನು ಶಿಂಗ್ರ್ಯಾನ್ಗೂ ಒಳ್ಳೇದು ಮಾಡ್ತಾನೆ! ಇನ್ನೊಂದೆರಡು ವರ್ಷದಲ್ಲಿ ಶಿಂಗ್ರ್ಯಾನ ಮಗನ್ಗೆ ನಮ್ಮ ಆಫೀಸಲ್ಲೇ ಪ್ಯೂನ್ ಕೆಲಸ ಕೊಡ್ತಾನಂತೆ! ವಾಟ್ ಎವರ್ ಮೇ ಬಿ ಹಿಸ್ ಪರ್ಸನಲ್ ಲೈಫ್, ವಾದಿರಾಜ್‌ರಾವ್ ಇಸ್ ಎ ಜಂಟಲ್‌ಮ್ಯಾನ್! ...ಅವನನ್ನ ನೋಡ್ಕೊಂಡು ಮನಸ್ಸನ್ನ ಸಾಯಿಸ್ಕೋಬೇಕು!

**ಅಪ್ಪಾಜಿ** : ನಿಜ, ನಿಜ. ಹೊಟ್ಟೇನ ಸಾಯ್ಸೋದಕ್ಕಿಂತ ಮನಸ್ಸನ್ನ ಸಾಯ್ಸೋದೆ ಒಳ್ಳೇದು! ಅದು ಸುಲಭ ಕೂಡ! (ಜಗಳೂರ್ ನಕ್ಕಂತೆ ನಗುತ್ತಾರೆ)

**ಜಗಳೂರ್** : (ಚರಕ ನಿಲ್ಲಿಸಿ ಮೊದಲಿನಂತೆ ಕಸದ ಬುಟ್ಟಿಯ ಮೇಲೆ ಕೂರುತ್ತಾ) ನಗಿ ಬಾಪೂಜಿ, ನಗಿ! ಆದರೆ ಇದು ಸತ್ಯ! ಮನಸ್ಸನ್ನ ಸಾಯ್‌ಸ್ಕೊಂಡ್ ಬಹಿರಂಗದಲ್ಲಿ ಬದುಕ್ಬೋದು, ಹೊಟ್ಟೆ ಸಾಯ್‌ಸ್ಕೊಂಡು ಬದುಕೋಕ್ಕಾಗಲ್ಲ!

**ಅಪ್ಪಾಜಿ** : ಹೌದು, ಹೌದು. ...ಇನ್ ಮುಂದೆ ಹಸಿವನ್ನ ಕೊಂದು, ಮನಸ್ಸನ್ನ ಬದುಕ್ಸೋ ಜನ ಇರೋದೇ ಇಲ್ವೇನೋ?

**ಜಗಳೂರ್** : (ಗುಂಡಿನ ಫ್ಲಾಸ್ಕನ್ನ ಎತ್ತಿ ಖಾಲಿ ಮಾಡುವಂತೆ ಕುಡಿಯುತ್ತಾನೆ. ನಂತರ ಫ್ಲಾಸ್ಕಿನಿಂದ ಉದುರುವ ಕೊನೆ ಹನಿಗಾಗಿ ನಾಲಿಗೆ ಚಾಚಿ ಹಿಡಿದು) ಹ್ಞೂಂ! ಹ್ಞೂಂ! ಕೊನೆಹನೀಗೆ ಕಾಯ್ತಾ ಎಲ್ಲಾ ಮರೀಬೇಕು!

**ಅಪ್ಪಾಜಿ** : ಎಲ್ಲಾ ಸುಖಗಳು ಎದುರಿಗೇ ಇವೆ! ಯಾವುದನ್ನ ಎತ್ಕೊಳ್ಳಿ? ಯಾವುದನ್ನ ಬಿಡ್ಲಿ? ಸಂತೆಯಲ್ಲಿ ನಿಂತಿದ್ದಾನೆ ಕಬೀರ! (ಹಾಡಿನಂತೆ) ಕಬೀರ್ ಖಡ ಬಾಜ಼ರ್ ಮೇ। ಲಿಯೇ ಲುಕಾಠಿ ಹಾಥ್ ॥ ಜೋ ಫುಕೇ ಅಪ್‌ನಾ ಘರ್ ಅಪ್‌ನೇ ಹಾಥ್। ವಹೀ ಹಮಾರೇ ಸಾಥ್ ॥

[ಹಾಡುವ ಅಪ್ಪಾಜಿಯನ್ನ ಅರೆನಿದ್ರಾ ಭಂಗಿಯಲ್ಲಿ ನೋಡುವ ಜಗಳೂರ್]

**ಅಪ್ಪಾಜಿ** : ಸಂಸಾರ ಸುಖ ಮರ್ತೋನ್ಗೆ ಮಾತ್ರ ಸಮಾಜದ ಏಳಿಗೆಗೆ ಬಂಡಾಯ ಮಾಡೋಕ್ಕೆ ಸಾಧ್ಯವಂತೆ! ನಮ್ಮ ಜೊತೆ ಜೈಲಲ್ಲಿದ್ದ ಸ್ವಾತಂತ್ರ್ಯವೀರರು ಯಾವಾಗ್ಲೂ ಈ ಹಾಡು ಹೇಳ್ತಾ ಇದ್ದರು! ಈಗ ಈ ಹಾಡಿಗೆ ಅರ್ಥ ಉಳ್ದಿಲ್ಲ. ಇವೆಲ್ಲಾ ಹಿತವಾಗಿ ಕಾಲ್‌ಚಾಚ್ಕೊಂಡು ಕೂತೋರು ಕೇಳೋಕ್ಕಿರೋ ಸಾಲು ಮಾತ್ರ. ಇದು ನಿಜ ಆಗೋದಲ್ಲ! ಕಾಲ ಬದ್ಲಾಗಿದೆ, ಪೂರಾ ಬದ್ಲಾಗಿದೆ!

[ಜಗಳೂರ್ ಮತ್ತೆ ಅಸ್ವಸ್ಥನಾಗುತ್ತಾನೆ. ಕೋಣೆಯ ತುಂಬಾ ಎಡ್ಡಾದಿಡ್ಡಿ ನಡೆಯುತ್ತಾನೆ. ಅವನ ನಡಿಗೆಯ ಜೊತೆಗೆ ಅವನ ತಾಯಿ ಹೇಳುತ್ತಾ ಇದ್ದ ಜನಪದ ಹಾಡಿನ ರಾಗವನ್ನೂ ಹೇಳುತ್ತಾನೆ. ಆಗಲೇ ಕೋಣೆಯ ಬಾಗಿಲನ್ನ ಯಾರೋ ತಟ್ಟಿದ ಸದ್ದು ಕೇಳುತ್ತದೆ. ಜಗಳೂರ್ ಹಾಡು ನಿಲ್ಲಿಸದೆ ಬಾಗಿಲತ್ತ ನೋಡುತ್ತಾನೆ. ಹಾಗೇ ನೋಡುವಾಗಲೇ ಮತ್ತೆ ಜಾರಿ ಬೀಳುತ್ತಾನೆ.]

**ಅಪ್ಪಾಜಿ** : (ಬಾಗಿಲತ್ತ ನೋಡುತ್ತಾ) ಯಾರದು ? ಬನ್ನಿ ಒಳಗಡೆ!

[ಬಾಗಿಲು ತೆರೆದು ಒಳಗೆ ಬರುವ ರಾಘು. ಅವನು ಮಧ್ಯವಯಸ್ಕ. ಉದ್ಯಮಿಯ ವೇಷದಲ್ಲಿದ್ದಾನೆ. ಬಾಗಿಲ ಬಳಿಯೇ ನಿಲ್ಲುತ್ತಾನೆ.]

**ರಾಘು** : ಮಿಸ್ಟರ್ ಟಿ. ಸಿ. ಜಗಳೂರ್ ! (ಎಂದು ಮಾತು ತಡೆಯುತ್ತಾನೆ) ಐ ಯಾಂ ಸಾರಿ ! ನಿಮ್ಮ ತಾಯಿ...

**ಅಪ್ಪಾಜಿ** : (ಕಾತರದಿಂದ) ಏನಾಯ್ತು ಆಕೇಗೆ ? ಕೇಳಿ ತಿಪ್ಪೇಸ್ವಾಮಿ, ಏನಾಯ್ತು ಆ ತಾಯಿಗೆ ಅಂತಾ ಕೇಳಿ.

**ರಾಘು** : ಷಿ ಇಸ್ ಸೀರಿಯಸ್ ! ಆಕೇನ ಹಾಸ್ಪಿಟಲ್‌ಗೆ ಅಡ್‌ಮಿಟ್ ಮಾಡಿದಾರೆ! ...ಅವರು ಪ್ರತಿನಿಮಿಷ ನಿಮ್ಮ ಹೆಸರನ್ನ ಹೇಳ್ತಾ ಇದಾರಂತೆ, ಮಿ. ಜಗಳೂರ್ ! ನಮ್ಮ ಡ್ರೈವರ್‌ಗೆ ಹೇಳಿದೀನಿ. ನೀವು ಆದಷ್ಟು ಬೇಗ ಆಸ್ಪತ್ರೆ ತಲುಪಿದ್ರೆ ಒಳ್ಳೇದು !

[ಜಗಳೂರ್ ಜಾರಿ ಬಿದ್ದಿದ್ದವನು ಮೊಣಕಾಲ ಮೇಲೆ ಕೂರುತ್ತಾನೆ. ಮತ್ತೆ ಅದೇ ಜನಪದ ಹಾಡನ್ನು ಹೇಳತೊಡಗುತ್ತಾನೆ. ತಾಯಿಯ ಸುದ್ದಿ ಅವನಿಗೆ ತಲುಪಿದಂತೆ ಕಾಣುವುದಿಲ್ಲ.]

**ಅಪ್ಪಾಜಿ** : ತಿಪ್ಪೇಸ್ವಾಮಿ, ತಿಪ್ಪಣ್ಣಾ!... ಏಳಿ, ನಿಮ್ಮ ತಾಯಿ ಕರೀತಾ ಇದಾಳಂತೆ, ತಕ್ಷಣ ಹೊರಡಿ.

[ಏಳಲಾಗದ ಅವನನ್ನ ರಾಘು, ಬಳಿಗೆ ಬಂದು ತೋಳು ಹಿಡಿದು ಎಬ್ಬಿಸುತ್ತಾನೆ. ರಾಘುವಿನ ಜೊತೆಗೆ ಬಾಗಿಲ ಕಡೆಗೆ ಸಾಗುವಾಗ ಅದೇ ಹಾಡು ಹೇಳುತ್ತಾ ಇರುವ ಜಗಳೂರ್, ಬಾಗಿಲ ಬಳಿ ನಿಂತು ಅಪ್ಪಾಜಿಯತ್ತ ನೋಡುತ್ತಾ ಮಾತಾಡುತ್ತಾನೆ.]

**ಜಗಳೂರ್** : ನಾನು ಬರ್ತೀನಿ ಅಪ್ಪಾಜಿ! ...ತುಂಬಾ, ತುಂಬಾ ಮಾತಾಡ್‌ಬಿಟ್ಟೆ. ...ಗಾಯಗಳೆಲ್ಲಾ ಮತ್ತೆ ಹಸಿ ಆಗ್‌ಬಿಟ್ಟಿದಾವೆ. ...ಅವಕ್ಕೆಲ್ಲಾ ಕೀವು ತುಂಬ್ಕೊಳೋಕ್ಕೆ ಮುಂಚೆ ತೊಳ್ಕೋಬೇಕು. ಬರ್ತೀನಿ ! (ಎಂದು ಹೊರಟವನು ಆಯತಪ್ಪಿ ಬೀಳಲಿದ್ದಾಗ ರಾಘು ಹಿಡಿದುಕೊಳ್ಳುತ್ತಾನೆ. ಜಗಳೂರ್ ಸಂಭಾವಿತನಂತೆ ''ಎಕ್ಸ್‌ಕ್ಯೂಸ್ ಮಿ'' ಎಂದು, ಮರಳಿ ಅಪ್ಪಾಜಿಯತ್ತ ತಿರುಗಿ ಹಾಡುತ್ತಾನೆ) ''ಕಬೀರ್ ಖಡಾ ಬಾಜ಼ಾರ್ ಮೇ ಲಿಯೇ ಲುಕಾಠಿ ಹಾಥ್ !'' ಸರೀನಾ ಬಾಪೂಜಿ !

[ರಾಘು ಅವನನ್ನು ಬಾಗಿಲಿಂದ ಆಚೆಗೆ ಬಲವಂತವಾಗಿ ತಳ್ಳುತ್ತಾನೆ]

**ರಾಘು** : ಶಂಕ್ರ, ಇವರನ್ನ ಕಾರಿನ ತನಕ ಕರ್ಕೊಂಡ್‌ಹೋಗಿ ಬಿಡೋ! (... ಕೂಗುತ್ತಾನೆ. ನಂತರ ತಾನೂ ಹೊರಡಲಿದ್ದಾಗ)

**ಅಪ್ಪಾಜಿ** : ರಾಘೂ !

**ರಾಘು** : ಯೆಸ್ ಪಪ್ಪಾ! ಊಟ ತರೋಕ್ಕೆ ಹೇಳ್ಲಾ?

**ಅಪ್ಪಾಜಿ** : (ಬೇಡ ಎಂಬಂತೆ ತಲೆಯಾಡಿಸಿ) ತಿಪ್ಪೇಸ್ವಾಮಿ ಅವರ ತಾಯಿ... ಏನಾಯ್ತಂತೆ ?

**ರಾಘು** : ಸರಿಯಾಗ್ ಗೊತ್ತಾಗ್ಲಿಲ್ಲ ಪಪ್ಪಾ! ಆ ಶತದಡ್ಡನ ಹೆಂಡತಿ ಫೋ... ಏನೇನೋ ವದರ್ತಾ ಇದ್ಲು. ಆತನ ತಾಯಿ ಏನೋ ಬೆಂಕಿ ಹಚ್ಕೊಂಡ್ರೂಂತ ಅಸ್ಪಷ್ಟ... ಗೊತ್ತಾಯ್ತು. ...ಮೈಮೇಲೆ ಸೀಮೆಎಣ್ಣೆ ಸುರ್ಕೊಂಡಿರ್ಬೇಕು ! ಈ ಜನ ಅದಕ್ಕಿಂತ ... ಕೆಲಸ ಇನ್ನೇನ್ ಮಾಡ್ತಾರೆ ಹೇಳಿ. ಪಪ್ಪಾ, ನೀವು ಇಂಥಾ ವಿಷಯಕ್ಕೆಲ್ಲಾ ಹ... ತಲೆಕೆಡಸ್ಕೋಬೇಡಿ ! ನಿಮ್ಮ ಆರೋಗ್ಯಕ್ಕೆ ಒಳ್ಳೇದಲ್ಲಾ! ...ನಾನ್ ಊಟ ಕಳ್ಸ್ತೀ...

[ರಾಘು ನಿಷ್ಕ್ರಮಿಸುತ್ತಾನೆ. ಅಪ್ಪಾಜಿ ಒಬ್ಬರೇ ಉಳಿಯುತ್ತಾರೆ. ಮತ್ತೆ ಸಮು... ಭೋರ್ಗರೆತ ಕೇಳುತ್ತದೆ. ಅಪ್ಪಾಜಿ ರಂಗದ ಮುಂಭಾಗಕ್ಕೆ ಬರುತ್ತಾರೆ.]

**ಅಪ್ಪಾಜಿ** : ಬದ್ಲಾಗಿದೆ. ಎಲ್ಲಾ ಬದ್ಲಾಗಿದೆ! ಹೊಟ್ಟೆ ಮನಸ್ಸನ್ನ ತಿನ್ನತ್ತೆ! ಮ... ಮನುಷ್ಯನ್ನ ತಿಂತಾನೆ! ಯಾವ್ದೂ ಮೊದಲಿನ ಹಾಗಿಲ್ಲ! ಅದಕ್ಕೇ ನಮಗೇನೂ ಅ... ಆಗಲ್ಲ! ರಾ...ಘೂ... !

[ಅವರ ಮತ್ತೊಂದು ಪಕ್ಕಕ್ಕೂ ವಾಯು ಬಡಿಯಿತೋ ಎಂಬಂತೆ ಅ... ಕುಸಿಯುತ್ತಾರೆ. ಅವರ ಮಾತು ಕೂಡ ನಿಂತಂತೆ, ಬಾಯಿ-ಕೈ ಎಲ್ಲವೂ ಒದರಿಕೊಳ್ಳು... ಅವರ ಮೇಲಿದ್ದ ದೀಪ ಆರಿ, ಅವರ ಹಿಂದಿದ್ದ ಗೋಡೆಯ ಮೇಲಿದ್ದ ಗಾಂಧೀಜಿ ಚಿತ್ರಕ್ಕೆ ... ಬರುತ್ತದೆ. ಹಿನ್ನೆಲೆಯಲ್ಲಿ ''ವೈಷ್ಣವ ಜನತೋ...'' ಭಜನ್ ಕೇಳುತ್ತದೆ. ರಂಗದ ಮ... ಸಂಪೂರ್ಣ ಕತ್ತಲಿಳಿಯುತ್ತದೆ.]


**ಬಿ. ಸುರೇಶ**

ಮೀಡಿಯಾ ಹೌಸ್ ಸ್ಟುಡಿಯೋ, ಸಂಖ್ಯೆ ೧೧೬೨, ೨೨ನೇ ಅಡ್ಡರಸ್ತೆ

೨೩ನೇ ಮುಖ್ಯರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೭೦





**ಕೆ.ವಿ. ಸುಬ್ಬಣ್ಣ ನೆನಪಿನ**
**'ಮೊದಲ ಓದು' ಪುಸ್ತಕ ಮಾಲೆ**

ಕನ್ನಡ ಸಾಹಿತ್ಯವನ್ನು ಪ್ರವೇಶಿಸಬಯಸುವ ಹೊಸ ಓದುಗರಿಗೆ ಕನ್ನಡದ ಪ್ರಮುಖ ಲೇಖಕರ ಹಾಗೂ ಕನ್ನಡದ ಹೊರಗಿನ ಮುಖ್ಯ ಚಿಂತಕರ ಆಯ್ದ ಬರಹಗಳ ಕಿರು ವಾಚಿಕೆಗಳು ಲಭ್ಯವಾಗಬೇಕು – ಎಂಬ ಉದ್ದೇಶವಿಟ್ಟುಕೊಂಡು ಅಕ್ಷರ ಪ್ರಕಾಶನವು ಈ ಪುಸ್ತಕ ಮಾಲಿಕೆಯನ್ನು ಆರಂಭಿಸಿದೆ. ಆಯಾ ಲೇಖಕರನ್ನು ಮೊದಲ ಬಾರಿಗೆ ಪರಿಚಯಿಸಿಕೊಳ್ಳುವವರಿಗೆ ಉಪಯುಕ್ತವಾಗುವಂತೆ ಈ ಪುಸ್ತಕಗಳ ವಸ್ತು-ವಿನ್ಯಾಸಗಳನ್ನು ರೂಪಿಸಲಾಗಿದೆ. ಮಾರುಕಟ್ಟೆಗೆ ಬಿಡುಗಡೆಯಾಗುವ ಜತೆಗೆ, ಈ ಮಾಲಿಕೆಯ ಪುಸ್ತಕಗಳನ್ನು ನೀನಾಸಂ ಪ್ರತಿಷ್ಠಾನವು ನಡೆಸುತ್ತಿರುವ ಸಾಹಿತ್ಯ ಅಧ್ಯಯನ ಶಿಬಿರಗಳಲ್ಲಿ ಪಠ್ಯಗಳಾಗಿಯೂ ಬಳಸಲಾಗುತ್ತದೆ.

ಅಕ್ಷರ ಪ್ರಕಾಶನಕ್ಕೆ ೫೦ ತುಂಬಿರುವ ಸಂದರ್ಭದಲ್ಲಿ ಅಕ್ಷರ ಪ್ರಕಾಶನ ಮತ್ತು ನೀನಾಸಂ ಸಂಸ್ಥೆಗಳ ಪ್ರೇರಕ ಶಕ್ತಿಯಾಗಿದ್ದ ದಿವಂಗತ ಕೆ. ವಿ. ಸುಬ್ಬಣ್ಣನವರ ನೆನಪಿಗೆ ಈ ಹೊಸ ಪುಸ್ತಕ ಮಾಲೆಯ ಮೊದಲ ಕಂತಿನ ೨೫ ಪುಸ್ತಕಗಳನ್ನು ೨೦೦೬ನೆಯ ಅಕ್ಟೋಬರ್‌ನಲ್ಲಿ ಹೊರತರಲಾಗಿದೆ. ಎರಡನೆಯ ಕಂತಿನ ೧೦ ಪುಸ್ತಕಗಳನ್ನು ೨೦೦೭ನೆಯ ಅಕ್ಟೋಬರ್‌ನಲ್ಲಿ ಹೊರತರಲಾಗಿದೆ. ಪ್ರಕಟಣೆಯ ಹಕ್ಕುಗಳ ಲಭ್ಯತೆಯನ್ನಾಧರಿಸಿ, ಮುಂದಿನ ವರ್ಷಗಳಲ್ಲಿ ಈ ಮಾಲೆಯನ್ನು ಇನ್ನೂ ಹಲವು ಲೇಖಕ-ಕೃತಿ-ಪ್ರಕಾರಗಳಿಗೆ ವಿಸ್ತರಿಸಬೇಕೆಂಬುದು ಪ್ರಕಾಶನದ ಆಶಯ.

**ಮೊದಲ ಕಂತಿನ ಪುಸ್ತಕಗಳು** : ಪಂಪನ ಆದಿಪುರಾಣ ಪ್ರವೇಶ ❑ ಜನ್ನನ ಯಶೋಧರ ಚರಿತೆ ಪ್ರವೇಶ ❑ ವಚನ ಪ್ರವೇಶ ❑ ರಾಘವಾಂಕನ ಹರಿಶ್ಚಂದ್ರ ಕಾವ್ಯ ಪ್ರವೇಶ ❑ ಕುಮಾರವ್ಯಾಸನ ಕರ್ಣಾಟಕ ಭಾರತ ಕಥಾಮಂಜರಿ ಪ್ರವೇಶ ❑ ಕುವೆಂಪು ಅವರ ಆಯ್ದ ಕವಿತೆಗಳು ❑ ಪು.ತಿ.ನ. ಅವರ ಆಯ್ದ ಕವಿತೆಗಳು ❑ ಕೆ. ಎಸ್. ನರಸಿಂಹ ಸ್ವಾಮಿ ಅವರ ಆಯ್ದ ಕವಿತೆಗಳು ❑ ಗೋಪಾಲಕೃಷ್ಣ ಅಡಿಗ ಅವರ ಆಯ್ದ ಕವಿತೆಗಳು ❑ ಚಂದ್ರಶೇಖರ ಕಂಬಾರ ಅವರ ಆಯ್ದ ಕವಿತೆಗಳು ❑ ಎ. ಕೆ. ರಾಮಾನುಜನ್ ಅವರ ಆಯ್ದ ಕವಿತೆಗಳು ❑ ಸು.ರಂ. ಎಕ್ಕುಂಡಿ ಅವರ ಆಯ್ದ ಕವಿತೆಗಳು ❑ ಯು. ಆರ್. ಅನಂತಮೂರ್ತಿ ಅವರ ಆಯ್ದ ಕಥೆಗಳು ❑ ಪಿ. ಲಂಕೇಶ್ ಅವರ ಆಯ್ದ ಕಥೆಗಳು ❑ ಯಶವಂತ ಚಿತ್ತಾಲ ಅವರ ಆಯ್ದ ಕಥೆಗಳು ❑ ಶಾಂತಿನಾಥ ದೇಸಾಯಿ ಅವರ ಆಯ್ದ ಕಥೆಗಳು ❑ ಪೂರ್ಣಚಂದ್ರ ತೇಜಸ್ವಿ ಅವರ ಆಯ್ದ ಕಥೆಗಳು ❑ ದೇವನೂರ ಮಹಾದೇವ ಅವರ ಆಯ್ದ ಕಥೆಗಳು ❑ ವೈದೇಹಿ ಅವರ ಆಯ್ದ ಕಥೆಗಳು ❑ ಶಿವರಾಮ ಕಾರಂತ ಅವರ ಆಯ್ದ ಬರಹಗಳು ❑ ಡಿ.ವಿ.ಜಿ. ಅವರ ಆಯ್ದ ಬರಹಗಳು ❑ ಗೌರೀಶ ಕಾಯ್ಕಿಣಿ ಅವರ ಆಯ್ದ ಬರಹಗಳು ❑ ಕೀರ್ತಿನಾಥ ಕುರ್ತಕೋಟಿ ಅವರ ಆಯ್ದ ಬರಹಗಳು ❑ ಬಿ.ಜಿ.ಎಲ್. ಸ್ವಾಮಿ ಅವರ ಆಯ್ದ ಬರಹಗಳು ❑ ಡಿ. ಆರ್. ನಾಗರಾಜ್ ಅವರ ಆಯ್ದ ಬರಹಗಳು.

**ಎರಡನೆಯ ಕಂತಿನ ಪುಸ್ತಕಗಳು** : ಶಿವಕೋಟ್ಯಾಚಾರ್ಯನ ವಡ್ಡಾರಾಧನೆ ಪ್ರವೇಶ ❑ ರನ್ನನ ಗದಾಯುದ್ಧ ಪ್ರವೇಶ ❑ ಲಕ್ಷ್ಮೀಶನ ಜೈಮಿನಿ ಭಾರತ ಪ್ರವೇಶ ❑ ಮಹಾತ್ಮಗಾಂಧಿ ಅವರ ಆಯ್ದ ಬರಹಗಳು ❑ ರಾಮಮನೋಹರ ಲೋಹಿಯಾ ಅವರ ಆಯ್ದ ಬರಹಗಳು ❑ ಪು.ತಿ.ನ. ಅವರ ಆಯ್ದ ಬಗಹಗಳು ❑ ರಾಘವೇಂದ್ರ ಖಾಸನೀಸ ಅವರ ಆಯ್ದ ಕಥೆಗಳು ❑ ಎಚ್. ಎಸ್. ಶಿವಪ್ರಕಾಶ್ ಅವರ ಆಯ್ದ ಕವಿತೆಗಳು ❑ ವೈದೇಹಿ ಅವರ ಆಯ್ದ ಕವಿತೆಗಳು ❑ ಪ್ರತಿಭಾ ನಂದಕುಮಾರ್ ಅವರ ಆಯ್ದ ಕವಿತೆಗಳು.

ಪ್ರತಿಯೊಂದರ ಬೆಲೆ : ರೂ. ೭೫
ಒಟ್ಟು ೩೫ ಶೀರ್ಷಿಕೆಗಳ
ಒಂದು ಸೆಟ್‌ನ ಬೆಲೆ : ರೂ. ೨೬೨೫



ವಿವರಗಳಿಗೆ
**ಅಕ್ಷರ ಪ್ರಕಾಶನ**
ಹೆಗ್ಗೋಡು – ೫೭೭ ೪೧೭, ಸಾಗರ
ಶಿವಮೊಗ್ಗ ಜಿಲ್ಲೆ, ದೂರವಾಣಿ : ೦೮೧೮೩ - ೨೬೫೪೪೬

ವಂದೇ ಮಾತರಂ'
ಾರತ್ ಮಾತಾ ಕೀ ಜೈ'
ಂದೂಸ್ತಾನ್ ಜಿಂದಾಬಾದ್'
ಈ ಮೂರು ಸ್ಲೋಗನ್‌ಗಳನ್ನು ಹೊರತುಪಡಿಸಿ ಮತ್ತೇನೂ
ರ ಗ್ಯಾಲರಿಯಲ್ಲಿ ಕೂಗಬಾರದು.'' ಬಿ.ಎಸ್.ಎಫ್. (ಬಾರ್ಡರ್
ಿಟಿ ಫೋರ್ಸ್)ನ ಅಧಿಕಾರಿಗಳು ಮೈಕ್‌ನಲ್ಲಿ ಮತ್ತೆ ಮತ್ತೆ ಈ
ಜೋರಾಗಿ ಹೇಳುತ್ತಲೇ ಇದ್ದರು. (ಅಂದರೆ 'ಪಾಕಿಸ್ತಾನ'ದ
ತೆ ಏನೂ ಹೇಳಬಾರದು ಎಂದು ಅರ್ಥ.)
ದು ಪಂಜಾಬ್‌ನ 'ವಾಘಾ ಬಾರ್ಡರ್'ನ ಸಂಜೆ ೫ ಗಂಟೆಯ
ಪಂಜಾಬ್‌ನ ಅಮೃತಸರಕ್ಕೆ ಬಂದವರು ವಾಘಾ ಬಾರ್ಡರ್
ಕದೆ ಹಿಂತಿರುಗುವುದು ಅಪರೂಪ. ಅಮೃತಸರದಿಂದ ಮುಕ್ಕಾಲು
ಸು ದಾರಿ. ಅಮೃತಸರದ ಸ್ವರ್ಣ ಮಂದಿರ, ಜಲಿಯನ್ ವಾಲಾ
ದುರ್ಗಿಯಾನಾ ತೀರ್ಥ ಮೂರನ್ನೂ ವೀಕ್ಷಿಸಿ ಸಂಜೆಗೆ ವಾಘಾ
ರ್‌ಗೆ ಬಂದಿದ್ದೆವು.
ೇಟಿನ ಆಚೆ ಬದಿಗೆ ಪಾಕಿಸ್ತಾನ. ಅಲ್ಲೂ ಗ್ಯಾಲರಿಯಲ್ಲಿ ಪ್ರೇಕ್ಷಕರ
ನುಗ್ಗಾಟ. ಆ ಕಡೆಯಲ್ಲಿ 'ಪಾಕಿಸ್ತಾನ ಜಿಂದಾಬಾದ್' ಎಂಬ
ಷಣೆ. ಒಟ್ಟಾರೆ ವಾಘಾ ಬಾರ್ಡರ್‌ನ ಎರಡೂ ಕಡೆ ಪ್ರೇಕ್ಷಕರ
ಮ.
ಮೃತಸರ ನಗರದಿಂದ ಸುಮಾರು ೩೦ ಕಿ.ಮೀ. ದೂರದಲ್ಲಿ
ಿಯ ಬಳಿ ಭಾರತ-ಪಾಕ್ ಗಡಿಯಲ್ಲಿನ ಈ ವಾಘಾ
ರ್‌ನಲ್ಲಿ ಸಂಜೆಗೆ ಎರಡೂ ಬದಿಯಲ್ಲಿ ಉತ್ಸವದ ಸಂಭ್ರಮ.
ೂ ದೇಶಗಳ ಗಡಿಕಾವಲು ಪಡೆಯ ಜವಾನರು ಗೇಟು ತೆರೆದು
ರ ಕೈಕುಲುಕುತ್ತಾರೆ. ಆವಾಗ ಭಾರತ-ಪಾಕ್ ನಡುವಿನ ಯಾವ
ಗಳೂ ನೆನಪಾಗುವುದಿಲ್ಲ! ದೀಪಾವಳಿ ಸಂದರ್ಭದಲ್ಲಿ
ವಲು ಜವಾನರು ಪರಸ್ಪರ ಸಿಹಿ ಹಂಚಿ ಸಂಭ್ರಮಪಡುತ್ತಾರೆ.
ತಂತ್ರ್ಯದ ಮೊದಲು ದೆಹಲಿಯಿಂದ ಲಾಹೋರ್‌ಗೆ ತೆರಳುವ ಈ
ಲ್ಲಿ ಯಾವುದೇ 'ತಡೆ' ಎಂಬುದಿರಲಿಲ್ಲ. ಆದರೆ ವಿಭಜನೆಯ
ಭೌಗೋಳಿಕ ಸ್ತರದಲ್ಲಿ ಅಮೃತಸರದ ಅಟಾರಿ ಎಂಬ ಊರಿನ
ಪದ ವಾಘಾದಲ್ಲಿ ಒಂದು 'ರೇಖೆ'ಯನ್ನು ಎಳೆಯಲಾಯಿತು.
ಪ್ರದೇಶದ ಈ ಭಾಗದ ಜನರು ಮತ್ತು ಆ ಭಾಗದ ಜನರ ನಡುವೆ
ರ್ಕ ಕಡಿದುಬಿತ್ತು. ಅತ್ತ-ಇತ್ತಗಳಲ್ಲಿರುವ ಸಂಬಂಧಿಕರು ಸಂಕಷ್ಟಕ್ಕೆ
ದ್ದರು. ಇಂದೂ ಕೂಡ ವಾಘಾ ಬಾರ್ಡರ್‌ನಲ್ಲಿ ಬಿ.ಎಸ್.ಎಫ್.
ನರು ಧ್ವಜ ಇಳಿಸಿದ ನಂತರ ಗೇಟು ಬಂದ್‌ಮಾಡಿದಾಗ ಎರಡೂ
ಸಂಬಂಧಿಕರು ದೂರದಲ್ಲಿ ನಿಂತೇ ಮಾತನಾಡುವುದನ್ನು
ಹುದು. ಇಂದು ವಾಘಾ ಬಾರ್ಡರ್‌ನ ಉದ್ದಕ್ಕೂ ಮುಳ್ಳಿನ
ಹಾಕಲಾಗಿದೆ. ಬಿ.ಎಸ್.ಎಫ್. ಜವಾನರು ಹದ್ದಿನ ದೃಷ್ಟಿಯಿಂದ
ು ಕಾಯುತ್ತಿದ್ದಾರೆ. ಎರಡೂ ಬದಿಯಲ್ಲಿನ ರೈತರು ಮಾತ್ರ
ನಂತೇ ಹಸಿರು ಹೊಲಗಳಲ್ಲಿ ಕೃಷಿ ಮಾಡುತ್ತಿದ್ದಾರೆ.
ಂದು ಪಾಕಿಸ್ತಾನ ಎಂದರೆ ಭಾರತೀಯರು ಉರಿದು
ವಂತಾಗಿದೆ. ಜಮ್ಮು-ಕಾಶ್ಮೀರದಲ್ಲಿ ಪಾಕ್ ಉಗ್ರರ ಕ್ರೂರ
ಳು, ಪಾಕಿಸ್ತಾನ ಆಡಳಿತದ ಬೆಂಬಲದಿಂದ ಭಾರತದಲ್ಲಿ
ುತ್ತಿರುವ ಭಯೋತ್ಪಾದನೆ ಇವುಗಳನ್ನೆಲ್ಲ ಕಂಡ ಭಾರತೀಯರಿಗೆ
ಬಾರ್ಡರ್‌ನಲ್ಲಿ ಸಂಜೆಯ ಆ ದೃಶ್ಯವನ್ನು ಕಂಡಾಗ ನಿಜಕ್ಕೂ
ುವಾಗಬಹುದು.
ಾರತ ಸರಕಾರ ಮತ್ತು ಪಾಕ್ ಸರಕಾರದ ಜಂಟಿ ಸ್ನೇಹಹಸ್ತದ
ಗಿ ಲಾಹೋರ್‌ಗೆ ಬಸ್ಸು ಪ್ರಯಾಣ, ಸಮ್‌ಜೋತಾ ಎಕ್ಸ್‌ಪ್ರೆಸ್
ಪ್ರಯಾಣ ಇತ್ಯಾದಿ ಸೌಕರ್ಯಗಳನ್ನು ನೀಡಿದರೂ ಭಾರತದ

**ಶ್ರೀನಿವಾಸ ಜೋಕಟ್ಟೆ**



ವಾಘಾ ಬಾರ್ಡರ್‌ನಲ್ಲಿ ಭಾರತ-ಪಾಕ್ ಜವಾನರು

# ವಾಘಾ ಗಡಿ
# ಇಲ್ಲಿ ಭಾರತ-ಪಾಕ್ ಕಚ್ಚಾಟ ನೆನಪಾಗದು

ಭಾರತ-ಪಾಕಿಸ್ತಾನಗಳು ವಿಭಜನೆ ಆಗಿರಬಹುದು. ಮುಳ್ಳುಬೇಲಿ ತಾಗಿಸಿರಬಹುದು. ಎರಡೂ ಕಡೆ ಲೋಹದ ಗೇಟು ಇರಬಹುದು. ಆದರೆ ಸಂಜೆಯ ಈ ಪಥಸಂಚಲನೆ ಎರಡೂ ದೇಶಗಳ ಸಂಬಂಧವನ್ನು ಮಧುರಗೊಳಿಸಲು ಖಂಡಿತಾ ಸಹಾಯ ಮಾಡಬಹುದಾಗಿದೆ. ಭಾರತದ ಮೂಲೆ ಮೂಲೆಗಳಿಂದ ಈ ವಾಘಾ ಬಾರ್ಡರ್‌ನ ಪಥಸಂಚಲನೆ ವೀಕ್ಷಿಸಲು ಜನ ಬರುತ್ತಾರೆ. ಬಿ.ಎಸ್.ಎಫ್. ಜವಾನರ ಮನೋಬಲ ವೃದ್ಧಿಸಲು ಇದು ನೆರವು ನೀಡಬಲ್ಲುದು. ಪಾಕ್ ಜೈಲುಗಳಿಂದ ಭಾರತೀಯರನ್ನು ಬಿಡುಗಡೆ ಮಾಡಿದಾಗ (ಮುಖ್ಯವಾಗಿ ಬೆಸ್ತರನ್ನು) ಅವರು ಭಾರತಕ್ಕೆ ಬರುವುದೂ ಇದೇ ವಾಘಾ ಬಾರ್ಡರ್ ರಸ್ತೆಯಿಂದಲೇ ಆಗಿದೆ!

ಭಾರತದ ಕೈದಿಗಳನ್ನು ಪಾಕ್ ಬಿಡುಗಡೆ ಮಾಡಿದಾಗ ಭಾರತ ಪ್ರವೇಶಿಸುತ್ತಿರುವ ಕೈದಿಗಳು



# JSW Steel Limited

The flagship company of the group, it is a fully integrated steel maker, with plants located at Toranagallu, Bellary District, Karnataka, and Vasind & Tarapur in Maharashtra State. The current capacity of 3.8 mtpa at Toranagallu is stated to increase to 7 mtpa by 2008 and to 10 mtpa by the year 2010.

Our Vision

- The preparation and grooming of the next generation of young thinkers
- The continuous improvement of cost stewardship in the value chain
- The ability to nurture lasting customer relationships, by anticipating needs and delivering beyond expectations
- The catalyst for growth amongst the nation's steel industries
- The marketing of value added branded products for both domestic and global markets

Our Values



Young thinking is crystal clear




Young thinking fosters leadership



Young thinking is unique




Young thinking is for winners

## JSW group of Companies

Part of the O P Jindal group with interest in steel, power, mining, industrial gases and maritime infrastructure



JSW Steel Limited



JSW Energy Limited



South West Port Limited



Vijaynagar Minerals Pvt Ltd



Jindal Praxair Oxygen Copany Limited

Technical and behavioural competency form the core of this Indian industrial giant which believes in quality customised products

## Vision 2020

Vijaynagar Works - 10 MTPA

JSW West Bengal - 10 MTPA

JSW Jharkhand - 10 MTPA

ದ್ಧ ಅದರ ಷಡ್ಯಂತ್ರ ಮಾತ್ರ ಕಡಿಮೆ ಆಗಿಲ್ಲ. ವಾಘಾ ಬಾರ್ಡರ್‌ಗೆ ಬಂದ ಕರಿಗೆ ಸಂಜೆಯ ದೃಶ್ಯವನ್ನು ಕಂಡಾಗ ಅದೆಲ್ಲ ನೆನಪಿಗೆ ಬರಲಾರದು! ಅಷ್ಟು ಮದ ವಾತಾವರಣ ಅಲ್ಲಿದೆ.

ವಾಘಾ ಬಾರ್ಡರ್‌ನ ಪ್ರೇಕ್ಷಕರ ಗ್ಯಾಲರಿ ಇರುವ ಜಾಗದಿಂದ ಅರ್ಧ ೀಮೀಟರ್ ಹಿಂದಕ್ಕೆ ಪ್ರವಾಸಿಗರು ತಮ್ಮ ತಮ್ಮ ವಾಹನಗಳನ್ನು ನಿಲ್ಲಿಸಬೇಕು. ೂ ಅಲ್ಲಿಂದ ಕಾಲುನಡಿಗೆಯಲ್ಲೇ ಇತ್ತ ಬರಬೇಕು. ದಾರಿಯುದ್ದಕ್ಕೂ ವಾಘಾ ರ್ಡರ್‌ನಲ್ಲಿ ಪಾಕ್ ಕಾವಲು ಪಡೆ ಮತ್ತು ಭಾರತದ ಕಾವಲು ಪಡೆಯ ಜವಾನರ ಯ ಪರೇಡ್‌ನ ಆ ದೃಶ್ಯಗಳನ್ನೊಳಗೊಂಡ ಫೋಟೋ, ಸಿ.ಡಿ. ಮಾರುವ ಗರು ಬೆನ್ನುಬೀಳುವುದಿದೆ.

ಇಲ್ಲಿನ ಬಿ.ಎಸ್.ಎಫ್. ಜವಾನರ ಪಥ ಸಂಚಲನೆ ಬಹು ಆಕರ್ಷಕ. ಅವರ ೆ ಧ್ವನಿಯ ಘೋಷಣೆ ಮತ್ತು ಪರೇಡ್‌ಗಳನ್ನು ವೀಕ್ಷಿಸುವುದೇ ಬಹಳ ುಹಲಕಾರಿ. ಅತ್ತ ಗೇಟ್‌ನ ಆಚೆಗೆ ಪಾಕಿಸ್ತಾನದ ಕಾವಲು ಪಡೆಯವರೂ ಅದೇ ಯದಲ್ಲಿ ಪರೇಡ್ ಮಾಡುತ್ತಾರೆ. ಇದು ಸುಮಾರು ಒಂದು ಗಂಟೆ ಕಾಲ ಕರನ್ನು ಸೆರೆಹಿಡಿಯುತ್ತದೆ. ಗೇಟು ತೆರೆದು ಪರಸ್ಪರರ ಶುಭಾಶಯ ವಿನಿಮಯದ ರ ತಮ್ಮ ತಮ್ಮ ಧ್ವಜ ಇಳಿಸುತ್ತಾರೆ, ಕೈಕುಲುಕುತ್ತಾರೆ. ಆನಂತರ ಗೇಟು ಚ್ಚಿಬಿಡುತ್ತಾರೆ. ಎರಡೂ ಕಡೆ ಬೇರೆ ಬೇರೆ ಗೇಟುಗಳನ್ನು ಕಾಣಬಹುದು. ನಡುವೆ ೀ ಮ್ಯಾನ್ಸ್ ಲ್ಯಾಂಡ್'.

ನಾವು ಬಂದ ಸಮಯ ಆಚೆ ಪಾಕಿಸ್ತಾನದ ಗ್ಯಾಲರಿಗಳಲ್ಲಿ ವಿದ್ಯಾರ್ಥಿನಿಯರೇ ದ್ದರು. ಘೋಷಣೆ ಹಾಕುವುದರಲ್ಲಿ ಅವರು ಭಾರತೀಯರಿಗಿಂತಲೂ ಬಹಳ ದಿದ್ದರು! 'ಪಾಕಿಸ್ತಾನ ಜಿಂದಾಬಾದ್' ಎಂಬ ಅವರ ಘೋಷಣೆ ಈಚೆ ತೀಯರ ಘೋಷಣೆಗಿಂತಲೂ ಜೋರಾಗಿ ಕೇಳಿಬರುತ್ತಿತ್ತು.

ಇತ್ತ ಬಿ.ಎಸ್.ಎಫ್. ಜವಾನರು ಗೇಟ್ ಎದುರಿನ ರಸ್ತೆಯಲ್ಲಿ ರೋಷಗೊಂಡಂತೆ ತಟ್ಟಿ, ಮೀಸೆಯ ಮೇಲೆ ಕೈ ಇರಿಸಿ ಉಗ್ರರೂಪದಲ್ಲಿ ಆವೇಶಗೊಂಡಂತೆ ಂಚಲನೆ ಮಾಡುತ್ತಿದ್ದರು. ಇಲ್ಲಿ ಇದು ಪ್ರತಿದಿನ ಸಂಜೆಯ ಮಾಮೂಲಿ ದೃಶ್ಯ. ುಮ್ಮೆ ಇದೆಲ್ಲ ಸುಮ್ಮನೆ ಪ್ರೇಕ್ಷಕರನ್ನು (ಪ್ರವಾಸಿಗರನ್ನು) ಆಕರ್ಷಿಸುವ ಕವಾಗಿ ಕಂಡುಬಂದರೂ ಅಚ್ಚರಿ ಪಡಬೇಕಾಗಿಲ್ಲ.

ನೋ ಮ್ಯಾನ್ಸ್ ಲ್ಯಾಂಡ್' ಗೇಟ್‌ನ ಆಚೆ ಪಾಕಿಸ್ತಾನದ ಪ್ರದೇಶದಲ್ಲಿ ಪಾಕಿಸ್ತಾನ ಕ (ಜನಕ) ಮೊಹಮದಾಲಿ ಜಿನ್ನಾ ಅವರ ಚಿತ್ರವನ್ನು ಕಾಣಬಹುದು. ಂಚಲನೆಯ ಆ ಸಂದರ್ಭದಲ್ಲಿ ಗ್ಯಾಲರಿಯಲ್ಲಿ ಕೂತಿದ್ದ ವೀಕ್ಷಕರಿಂದ ಡನಗಳ ಸುರಿಮಳೆ, ಬೆಂಬಲ ನೀಡುವ ಘೋಷಣೆಗಳು. ಜವಾನರನ್ನು ದುಂಬಿಸುವ ಯತ್ನವದು!

ಈ ದಿನಗಳಲ್ಲಿ ತನಿಖೆ, ನಿಗಾ ಹಿಂದಿಗಿಂತ ಜಾಸ್ತಿ ಆಗಿದೆ. ಆದರೂ ವಾಘಾ ರ್ಡರ್‌ಗೆ ಪ್ರವಾಸಿಗರು ಬಂದೇ ಬರುತ್ತಾರೆ. ಭಾರತ-ಪಾಕಿಸ್ತಾನದ ಗಡಿಯನ್ನು ಜಿಸುವ ಈ ರಸ್ತೆಯಲ್ಲಿ ಲೋಹದಿಂದ ಕೂಡಿದ ವಿಶಾಲ ಗೇಟ್ ಎರಡೂ ಕಡೆ ಗೇಟ್‌ನ ಪಕ್ಕದಲ್ಲೇ ಬೆಳಿಗ್ಗೆ ಎರಡೂ ದೇಶಗಳ ಧ್ವಜ ಏರಿಸಲಾಗುತ್ತದೆ.



ವಾಘಾ ಬಾರ್ಡರ್‌ನಲ್ಲಿ ಲೇಖಕ ಶ್ರೀನಿವಾಸ ಜೋಕಟ್ಟೆ ಮತ್ತು ತಂಡ



ಈ ಬಾರಿಯ ೨೦೦೭ರ ದೀಪಾವಳಿ ಸಮಯ ಬಿ.ಎಸ್.ಎಫ್.ನ ಕಮಾಂಡರ್ ಭಗತ್‌ಸಿಂಗ್ ಟೋಲಿಯಾ ಅವರು ವಾಘಾ ಬಾರ್ಡರ್‌ನಲ್ಲಿ ಪಾಕಿಸ್ತಾನಿ ರೇಂಜರ್ ವಿಂಗ್ ಕಮಾಂಡರ್ ಲೆಫ್ಟಿನೆಂಟ್ ಕರ್ನಲ್ ತಾರಿಕ್ ಜಾಂಜುವಾ ಅವರಿಗೆ ಸಿಹಿತಿಂಡಿ ಉಡುಗೊರೆ ನೀಡುತ್ತಿರುವುದು.

ಸೂರ್ಯಾಸ್ತಕ್ಕಿಂತ ಮೊದಲು ಧ್ವಜ ಇಳಿಸುವ ಕಾರ್ಯಕ್ರಮ ನಡೆಯುತ್ತದೆ. ಇದು ಸಂಜೆ ೫ರ ನಂತರದ ದೃಶ್ಯ. ಚಳಿಗಾಲದಲ್ಲಿ ಮಾತ್ರ ಈ ವಾಘಾ ಬಾರ್ಡರ್‌ನ ಪಥ ಸಂಚಲನೆ ಸ್ವಲ್ಪ ಬೇಗನೆ ಇರುವುದು. ಎರಡೂ ಬದಿಯಲ್ಲಿ ತಮ್ಮ ತಮ್ಮ ದೇಶಗಳ ಜವಾನರನ್ನು ಹುರಿದುಂಬಿಸುವುದಕ್ಕೆ ವೀಕ್ಷಕರು ಗೀತೆ-ಕವ್ವಾಲಿಗಳನ್ನು ಕೂಡ ಹಾಡುವುದನ್ನು ಕಾಣಬಹುದು. ನೂರಾರು ಕ್ಯಾಮರಾಗಳು ಈ ದೃಶ್ಯವನ್ನು ಸೆರೆಹಿಡಿಯುತ್ತದೆ. ರಾಷ್ಟ್ರಗೀತೆಯ ಜೊತೆ ಈ ಪರೇಡ್ ಸಮಾಪ್ತಿಯಾಗುತ್ತದೆ. (ಒಳಗೊಳಗೇ ಸಿಟ್ಟನ್ನು ಅದುಮಿಟ್ಟುಕೊಂಡ ಜನ ಮೆಲ್ಲಗೆ ಗುಣುಗುಣಿಸುತ್ತಾರೆ – 'ಪಾಕಿಸ್ತಾನ್ ಮುರ್ದಾಬಾದ್' ಎಂದು!)

ಧ್ವಜ ಇಳಿಸುವ ಸಮಾರಂಭ ಮುಗಿಯುತ್ತಲೇ ವೀಕ್ಷಕರ ಗ್ಯಾಲರಿಯಿಂದ ಜನ ಇಳಿದು ತಮ್ಮ ತಮ್ಮ ವಾಹನಗಳಿರಿಸಿದ್ದ ಜಾಗಕ್ಕೆ ನಡೆಯುತ್ತಾರೆ. ಆ ಬದಿಗೆ ನೋಡಿದರೆ ಗಡಿಯಲ್ಲಿನ ಮುಳ್ಳು ತಂತಿಯ ಬೇಲಿಯಷ್ಟೇ ಕಾಣುತ್ತದೆ.

ಗಡಿಪ್ರದೇಶದ ರೈತರು ಮಾತ್ರ ''ನಾವು ನೆಮ್ಮದಿಯಿಂದ ಇಲ್ಲ. ಆಗಾಗ ಗುಂಡು ಹಾರಾಟವೂ ನಡೆಯುವುದಿದೆ'' ಎನ್ನುತ್ತಾರೆ.

ಕೇಂದ್ರ ಸರಕಾರ ಕಳೆದ ವರ್ಷ ವಾಘಾ ಗಡಿಯನ್ನು ಪ್ರವಾಸಿ ತಾಣದ ರೂಪದಲ್ಲಿ ವಿಕಸಿತಗೊಳಿಸಲು ಯೋಜನೆ ಹಾಕಿಕೊಂಡಿತು. ಅಟಾರಿ ವಾಘಾ ಸೀಮೆಯ ಏಕೀಕೃತ ವಿಕಾಸಕ್ಕಾಗಿ ಕಳೆದ ವರ್ಷ ೪೮೪.೫೮ ಲಕ್ಷ ರೂಪಾಯಿ ಮಂಜೂರು ಮಾಡಲಾಗಿತ್ತು. ಇದರಲ್ಲಿ ಅಟಾರಿ ವಾಘಾ ಗಡಿ, ನೀಮ್ ಚಮೇಲಿ ಪರಿಸರ, ಅಟಾರಿ ಮಹಲ್, ಸಮಾಧಿ ಪರಿಸರ, ಅಟಾರಿ ಅಂತರರಾಷ್ಟ್ರೀಯ ರೈಲ್ವೆ ಸ್ಟೇಷನ್, ರಾಮ್ ತೀರ್ಥ ಮಂದಿರ ಪರಿಸರ, ಪುಲ್ ಕಂಜಾರಿ, ಸರಾಯ್ ಅಮಾನತ್ ಖಾನ್ ಪರಿಸರ ಮತ್ತು ರಾಜಾರಾಮ್‌ಸಿ ಪರಿಸರದ ವಿಕಾಸ ಕಾರ್ಯ ಎಲ್ಲವನ್ನು ಒಳಗೊಂಡಿದೆ.

ಭಾರತ-ಪಾಕಿಸ್ತಾನಗಳು ವಿಭಜನೆ ಆಗಿರಬಹುದು. ಮುಳ್ಳುಬೇಲಿ ತಾಗಿಸಿರಬಹುದು. ಎರಡೂ ಕಡೆ ಲೋಹದ ಗೇಟು ಇರಬಹುದು. ಆದರೆ ಸಂಜೆಯ ಈ ಪಥಸಂಚಲನೆ ಎರಡೂ ದೇಶಗಳ ಸಂಬಂಧವನ್ನು ಮಧುರಗೊಳಿಸಲು ಖಂಡಿತ ಸಹಾಯಮಾಡಬಹುದಾಗಿದೆ. ಭಾರತದ ಮೂಲೆ ಮೂಲೆಗಳಿಂದ ಈ ವಾಘಾ ಬಾರ್ಡರ್‌ನ ಪಥಸಂಚಲನೆ ವೀಕ್ಷಿಸಲು ಜನ ಬರುತ್ತಾರೆ. ಬಿ.ಎಸ್.ಎಫ್. ಜವಾನರ ಮನೋಬಲ ವೃದ್ಧಿಸಲು ಇದು ನೆರವು ನೀಡಬಲ್ಲುದು. ಪಾಕ್ ಜೈಲುಗಳಿಂದ ಭಾರತೀಯರನ್ನು ಬಿಡುಗಡೆ ಮಾಡಿದಾಗ (ಮುಖ್ಯವಾಗಿ ಬೆಸ್ತರನ್ನು) ಅವರು ಭಾರತಕ್ಕೆ ಬರುವುದೂ ಇದೇ ವಾಘಾ ಬಾರ್ಡರ್ ರಸ್ತೆಯಿಂದಲೇ ಆಗಿದೆ!

ಚಿತ್ರ-ಲೇಖನ : ಶ್ರೀನಿವಾಸ ಜೋಕಟ್ಟೆ
'ಗೊರೈ-ಸುಯೋಗ್', ಫ್ಲ್ಯಾಟ್ ನಂ. ೨೦೩, ಪ್ಲಾಟ್ ನಂ. ೯೧
ಗೊರೈ ಸೆಕೆಂಡ್, ಬೊರಿವಿಲಿ (ಪಶ್ಚಿಮ), ಮುಂಬಯಿ - ೪೦೦ ೦೯೨




■ ವೈದೇಹಿ

# ಆ ಮನೆ ಈ ಮನೆ

''ಅಪ್ಪ, ಅದೇನದು ಕೂಗುವುದು ?''

''ಏನೋ ಸುಡುಗಾಡು. ನೀನೊಮ್ಮೆ ನಿದ್ದೆ ಮಾಡುತ್ತೀಯ ಇಲ್ಲವಾ ?'' – ಮನೆ ಕಟ್ಟುವ ಚಿಂತೆಯಲ್ಲಿ ಪುಟ್ಟ ಮಗನೊಂದಿಗೆ ಪ್ರೀತಿಯಿಂದ ಮಾತಾಡುವುದು ಕೂಡ ಆತನಿಗೆ ಮರೆತೇ ಹೋದಂತಿದೆ. ಇನ್ನು ಕೈ ಹಿಡಿದು ಹೆಜ್ಜೆ ಹಾಕುವುದಂತೂ ದೂರವೇ ಉಳಿಯಿತು. ಆದರೆ ಮಗ ಬಿಡುವನೆ ? ತಂದೆ ಹೂಂ ಹಾಂ ಅನ್ನದಿದ್ದರೂ – ಅದು ಕೂಗುವುದು ಯಾಕೆ ? ಅದಕ್ಕೆ ಹಸಿವಾಗುತ್ತದಾ ? ಅದರ ಅಪ್ಪನೂ ಅದಕ್ಕೆ ಗದರಿದನೆ ? ಅದರ ಅಮ್ಮ ಎಲ್ಲಿ ಹೋದಳು ?

''ಅಬ್ಬಬ್ಬ ಎಷ್ಟು ಪ್ರಶ್ನೆಗಳು. ನನ್ನ ತಲೆ ಬಿಸಿಯಲ್ಲಿ ನಾನಿದ್ದೇನೆ, ಇವನ ಪ್ರಶ್ನೆ ಮುಗಿಯುವುದೆಂತಲೇ ಇಲ್ಲ. ಸುಮ್ಮನೆ ಮತ್ತೆ ಗಾದೆ ಮಾಡಿದರೆ ? 'ಮಕ್ಕಳನ್ನು ಹುಗಿದಲ್ಲಿ ಸಮೇತ ನನ್ನನ್ನು ಹುಗಿಯಬೇಡ ದೇವರೆ' ಅಂತ ?'' ಎಂದು ಆತ ತಲೆಚಿಟ್ಟು ಹಿಡಿದವನಂತೆ ಸಿಡುಕಿದ. ಕೇಳಿ ಹೆಂಡತಿಯ ಕಣ್ಣಲ್ಲಿ ನೀರು ಬಂತು. ''ನಿಮಗೆ ವಯಸ್ಸಾಯಿತು ಏಕೆ ? ಇಂಥಾ ಮಗನಿರುವಾಗ ಯಾರೋ ತಲೆ ಕೆಟ್ಟವರು ಮಾಡಿದ ಗಾದೆ ಹೇಳುತ್ತೀರಲ್ಲ, ಮನೆ ಕಟ್ಟಲು ಹೋಗಿ ನಿಮ್ಮ ತಲೆಯೂ ಕೆಟ್ಟಿತೋ ಹೇಗೆ !'' ಎಂದು ಭಂಗಿಸಿದಳು.

ಉತ್ತರವಾಗಿ ಆತ ಮತ್ತೇನೋ ಅಲ್ಲದ್ದೇ ಒಂದು ಮಾತು ಬಿಸಾಕಿದ. ಇಂಥ ಸಮಯದಲ್ಲಿ ಮಾತು ಮಾತು ಮಥಿಸಿದರೆ ಬರುವುದು ನಾದದ ನವನೀತವಲ್ಲ, ಬೆಣ್ಣೆಯಲ್ಲ; ಬೆಂಕಿ. ಕೊನೆಗೆ ಆಕೆ 'ಅಯ್ಯೊ ಸಾಕಾಯ್ತು ದೇವರೆ, ಈ ಮನೆ ಒಂದು ಕಟ್ಟಿ ಯಾವಾಗ ಮುಗಿಯುತ್ತದೋ' ಎಂದು ಆರ್ತಳಾಗಿ ದೇವರನ್ನು ನೆನೆದು ಹರಕೆ ಹೇಳಿಕೊಂಡಳು. ಅಮ್ಮ ಅಪ್ಪನ ಬಿರುಮಾತಿನ ಎಡೆಯಲ್ಲಿ ಮಗ ನಿದ್ದೆ ಹೋದ.

ಅತ್ತಣಿಂದ ಜಗಳದಲ್ಲಿ ತಾನೂ ಪಾತ್ರಧಾರಿಯೆಂಬಂತೆ ಆ ತೀಕ್ಷ್ಣ ಕೀರಲು ದನಿಯ ಜೀವ – ಠೀಂ ಠೀಂ ಠೀಂ...

**ಠೀಂ** ಠೀಂ ಠೀಂ.........

ಇದೊಂದು ಹೊಸ ಕರಕರೆ. ಇಷ್ಟು ದಿವಸ ತ್ತೊ. ರಾತ್ರಿ ಒಂದು ನಿದ್ದೆ ಕೂಡ ಮಾಡದ ಹಾಗೆ ದೇ ಸಮ ಕೂಗುತ್ತದೆ, ಹೆತ್, ಎಂದ ಆತ.... ಇಲ್ಲೇ ಮಾಡಿದೆಯ ಹೇಗೆ ? ಇಡೀ ರಾತ್ರಿ ಗುತ್ತದೆಯಲ್ಲ, ಸ್ವರ ಬಿದ್ದು ಹೋಗುವುದೂ ಇಲ್ಲ ದ್ದಕ್ಕೆ. ಈ ಸದ್ದಿನಲ್ಲಿ ನಿದ್ದೆ ಮಾಡಲು ಕುಂಭಕರ್ಣನ ತ್ರದವರಿಗೆ ಮಾತ್ರ ಸಾಧ್ಯವಾದೀತು.

ಹೊರಬಂದು ಕುಳಿತ ಆತ. ಮನ ತುಂಬ ತಲೆ ಬ ತಾನು ಕಟ್ಟಿಸುತ್ತಿರುವ ಮನೆಯದೇ ವಿಚಾರ. ಮನೆ ಗಿ ಬರುತ್ತಿದೆ ಅಂತ ನೋಡಿದವರೆಲ್ಲ ಹುತ್ತಿದ್ದಾರೆ. ಆದರೂ ಹಾಲು ಇನ್ನಷ್ಟು ಲ ಇರಬೇಕಿತ್ತು... ಉದ್ದಕ್ಕೆ ತಕ್ಕ ಲ ಇರದಿದ್ದರೆ ಹಾಲೆಂಬುದು ಡಾರಿನ ಹಾಗೆ ಕಾಣುತ್ತದೆ. ಊಟದ ಕೋಣೆಯನ್ನು ಹಿಗ್ಗಿಸಬಹುದಿತ್ತು... ಮುಂಚೆ ಗೊತ್ತಾಗಲಿಲ್ಲ, ಈಗ ಲಿಸಲು ಸಾಧ್ಯವಿಲ್ಲ. ಅಲ್ಲದೆ ಎಲ್ಲದಕ್ಕೂ ಪ್ರಧಾನ ವತೆಯೊಂದು ಬೇಕಲ್ಲ. ಸ್ಕ್ವೇರ್ ಫೀಟ್ ಲೆಕ್ಕ ಏರುವ ಕೇಳಿದರೆ ಎದೆ ಬಡಿತವೂ ಧಮಧಮ ಏರುತ್ತದೆ.

ಹೊತ್ತು ಎಷ್ಟಾಯಿತು, ಓ ನಡು ರಾತ್ರಿ. ಲಗದಿದ್ದರೆ ನಾಳೆ ನಿಂತಲ್ಲಿ ಕುಳಿತಲ್ಲಿ ಕಣ್ಣು ರುತ್ತದೆ. ಮತ್ತೆ ಒಳಗೆ ನಡೆದ. ಇನ್ನೇನು ಲಗಬೇಕು ಎನ್ನುವಾಗ ಮತ್ತೆ ಕೇಳತೊಡಗಿತು. ಠೀಂ ಠೀಂ... ರಾಗ ಕೇಳೀ ಕೇಳೀ ಸಾಕಾಗಿದೆ.

ಛೇ, ಇದಿಲ್ಲೇ ಮನೆ ಮಾಡಿದೆ, ಖಂಡಿತ. ಇಲ್ಲೇ ಲ್ಲೋ ಇದೆ, ಎಲ್ಲಿ ಇದೆ ಎಲ್ಲಿಂದ ಕೂಗುತ್ತಿದೆ ಅಂತ ವರಾದರೂ ಅದಿಲ್ಲದಂತೆ ಮಾಡಬಹುದಿತ್ತು. ಬ್ಯಾಟರಿ ು ಹಿಡಿದು ಇಡೀ ಮನೆಯ ಸಂದಿಗೊಂದಿಯೆಲ್ಲ ಡುಕಿಕೊಂಡು ಬಂದ ಆತ. ಗೋಡೆ ಸಂದಿ ಕಿಟಕಿ ಗಿಲುಗಳ ಹಿಂಭಾಗ, ದಾರಂದ, ಕಪಾಟಿನ ಚಡಿ, ದ ಮೂಲೆ ಎಲ್ಲೆಲ್ಲಿ ನೋಡಿದರೂ ಊಹೂಂ. ಗೆ ಕಾಣಸದೆ ಕೇವಲ ಕರ್ಣಗೋಚರದಲ್ಲಿ ಠೀಂ ಠೀಂಯ ಅವಿರತ ಮೀಟಿನಿಂದಲೇ ಆ ಪುಟ್ಟ ತನ್ನ ಸಹನೆಗೆ ಒಡ್ಡುವ ಸವಾಲೆ !

''ಅಯ್ಯೋ, ಅದು ಯಾವಾಗಿನಿಂದ ಇತ್ತು. ನಿಮ್ಮ ನಕ್ಕೆ ಬಂದದ್ದು ಈವಾಗ ! ಸರಿಯಾಯ್ತು'' ನಕ್ಕಳು ಡದಿ.

''ಅದು ಹೇಗೆ ? ಮುಂಚಿನಿಂದಲೂ ಖಂಡಿತ ಲಿಲ್ಲ ಅದು. ಇದ್ದಿದ್ದರೆ ನನಗೆ ಕೇಳುತ್ತಿರಲಿಲ್ಲವೆ ? ನೇನು ಅಷ್ಟು ಕೆಪ್ಪನೆ ?'' – ರೇಗಿದನಾತ.

''ಯಾರಿಗೆ ಗೊತ್ತು ? ಇದ್ದರೂ ಇರಬಹುದು'' – ದಳು ಹೆಂಡತಿಯೂ, ಬಿಡದೆ.

ಮನೆ ಕಟ್ಟಲು ಸುರುಮಾಡಿದ ಲಾಗಾಯ್ತಿನಿಂದಲೂ ಗೇ. ಸಣ್ಣಸಣ್ಣದಕ್ಕೂ ಆತ ರೇಗುವ, ಪ್ರತಿಯಾಗಿ ಯೂ ಜಗಳಕ್ಕೆ, ಸಿಟ್ಟಿಗೆ ಕಾರಣಗಳು ಬೇಕಿಲ್ಲ. ಯಾಸವೊಂದೇ ಸಾಕು. ಮನಸಿನ ಆಯಾಸ, ದೈಹಿಕ ಯಾಸ, ಆಯಾಸದಿಂದ ಜಗಳ, ಜಗಳದಿಂದ ತ್ತೇನೋ. ಹೀಗೆ, ಭಗವದ್ಗೀತೆಯಲ್ಲಿ ಇಂಥದೇ ದು ಸಾಲಿದೆಯಲ್ಲ, ಆದರ ಜೊತೆ ಸಾಲಿನಂತೆ.

ಕೂಗು ಸಿದ್ದ ಹೋದ ಪುಟ್ಟನ ಕನಸಿನಲ್ಲಿ ತೂರಿಬಂದಿದೆ. ಅದನ್ನು ಹಿಂಬಾಲಿಸಿದ ಆತ. ಅಲ್ಲೊಂದು ಮನೆ. ಪುಟ್ಟ ಮೆಲ್ಲ ಒಳ ಸಾರಿದ. ಇನ್ನೇನು ಬಾಗಿಲು ತಟ್ಟಬೇಕು, ಅಷ್ಟರಲ್ಲಿ ಅದು ತಾನಾಗಿ ತೆರೆದುಕೊಂಡಿತು. ಒಳಹೊಕ್ಕ ಪುಟ್ಟ. ಕೂಗು ಕೇಳುತ್ತಿದೆ, ಕೂಗುವವರು ಕಾಣರು. ಕೋಣೆ ಕೋಣೆ ಹೊಕ್ಕು ಹೊರಟರೂ ಎಲ್ಲಿಯೂ ಯಾರೂ ಕಾಣಲೊಲ್ಲರು. ಪುಟ್ಟ ತಾನೂ ದೊಡ್ಡದಾಗಿ ಒಂದು ಕೂಗು ಹಾಕಿದ, ಒಂದು ಇನ್ನೊಂದು ಮತ್ತೊಂದು... ಆ ಕೂಗು ಪ್ರತಿಯಾಗಿ ಈ ಕೂಗು, ಬೆಳಗಿನವರೆಗೂ. ಬೆಳಗಾಗಿ ಎಚ್ಚರವಾದಾಗಲೇ ಆತನಿಗೆ ತಾನು ಅಷ್ಟೊತ್ತಿನವರೆಗೂ ಆ ಕೂಗಿನ ಮನೆಯಲ್ಲಿಯೇ ಇದ್ದೆ ಎಂಬ ಅರಿವಾಗಿದ್ದು. ಪುಟ್ಟ ತನ್ನ ಕನಸನ್ನು ಅಮ್ಮನಿಗೆ ಹೇಳಿದ "ಅಮ್ಮಾ, ಬಾ ನಿನಗೂ ಆ ಮನೆ ತೋರಿಸುತ್ತೇನೆ, ಈಗಲೇ ಹೋಗಿ ಬರುವ. ಬಾ, ಬಾ."

ತಾಯಿ "ಬೇಡ ಮಗು. ಅದರಲ್ಲಿ ಅಬಜಿ ಇದೆ. ಹೋದರೆ ಸಾಕು, ಕಚ್ಚುತ್ತದೆ. ಉಬ್ಬು ಮಾಡುತ್ತದೆ."

"ಆದರೆ ಅಮ್ಮ, ನಾನು ಹೋಗಿ ಬಂದೆನಲ್ಲ. ನನಗೆ ಏನೂ ಆಗಲಿಲ್ಲ ನೋ... ಅದರ ಮನೆ ಎಷ್ಟು ಚೆನ್ನಾಗಿದೆ. ಪೂರಾ ನಮ್ಮ ಮನೆಯಂತೆಯೇ ಇದೆ."

"ಅಬಜಿ ಇತ್ತೇ ?"

"ಇಲ್ಲ, ಇರಲಿಲ್ಲ."

'ಹಾಗಾದರೆ ಬಹುಶಃ ಪೇಟೆಗೆ ಹೋಗಿದೆ. ಅದು ವಾಪಾಸು ಮ... ಬರುತ್ತದೆಯಲ್ಲ, ಆಗ ಹೋಗುವ. ಆಯಿತಾ ?' ಎಂದಳು ತಾಯಿ, ಆತನಿಗೆ ಬೆಳ... ತಿಂಡಿ ತಿನ್ನಲು ಹುರುಪು ಬರುವಂತೆ.

* * *

ಮಳೆಗಾಲ ಹತ್ತಿರ ಬರುತ್ತಿದೆ. ಮತ್ತೆ ದಕ್ಷಿಣಾಯನ. "ಗೃಹಪ್ರವೇಶ...


...ಇರಲಿ ನೂರು ದೂರು... ಪರಿಹಾರಕ್ಕೆ ಒಂದೇ ಸೂರು!

ನಾಗರಿಕ ಸೇವಾ ಕೇಂದ್ರಗಳು,
ಸರಳ ಸುಲಭ ಪರಿಹಾರ ಮಾರ್ಗಗಳು

ಪಾಲಿಕೆ ಸೇವೆಗಳಿಗಾಗಿ ನಾಗರಿಕ ಸೇವಾ ಕೇಂದ್ರಕ್ಕೆ ಭೇಟಿ ನೀಡಿ

**ಕೇಂದ್ರಗಳಲ್ಲಿ ದೊರಕುವ ಸೇವೆಗಳು**

- ಆಸ್ತಿ ತೆರಿಗೆ ಪಾವತಿ
- ಖಾತಾ ವಿಭಜನೆ/ ವರ್ಗಾವಣೆ / ಸಂಯೋಜನೆ
- ಮಾಹಿತಿ ಪುಸ್ತಕ ಮತ್ತು ಅರ್ಜಿ ನಮೂನೆಗಳಿಗಾಗಿ ಅರ್ಜಿ
- ಖಾತೆ ನೋಂದಣಿ ಅರ್ಜಿ
- ಕಟ್ಟಡ ನಕ್ಷೆ ಮಂಜೂರು ಅರ್ಜಿ
- ಜನನ ಮತ್ತು ಮರಣ ಪ್ರಮಾಣ ಪತ್ರಗಳು
- ನಾಗರಿಕ ಕುಂದುಕೊರತೆಗಳ ನೋಂದಣಿ

**ಆಸ್ತಿ ತೆರಿಗೆ ಪಾವತಿ**

ಬೆಂಗಳೂರು ನಗರದ ಎಲ್ಲ 100 ವಾರ್ಡುಗಳಲ್ಲಿ ಕಂದಾಯಕ್ಕೆ ಒಳಪಟ್ಟಿರುವ ಯಾವುದೇ ಸ್ವತ್ತುಗಳಿಗೆ ಸಂಬಂಧಿಸಿದಂತೆ ಇಲ್ಲಿ ಕಂದಾಯ ಪಾವತಿ ಮಾಡಿ ಅಧಿಕೃತ ರಸೀತಿ ಪಡೆಯಬಹುದು. ಕಂದಾಯವನ್ನು ನಗದು – ಚೆಕ್ ಅಥವಾ ಡ್ರಾಫ್ಟ್ ಮೂಲಕ ಪಾವತಿ ಮಾಡಬಹುದು.

**ಖಾತೆಗೆ ಸಂಬಂಧಿಸಿದ ಸೇವೆಗಳು**

ಖಾತಾ ಬದಲಾವಣೆ, ಖಾತಾ ಒಂದು ಗೂಡಿಸುವಿಕೆ, ವಿಭಜನೆ, ಕಂದಾಯ ನಿಗದಿ ಪಡಿಸುವಿಕೆ ಮುಂತಾದ ಸೇವೆಗಳಿಗೆ ಅರ್ಜಿ ಸಲ್ಲಿಸಬಹುದು. ಅರ್ಜಿ ಸಲ್ಲಿಸಿದ 30 ದಿನಗಳೊಳಗೆ ಖಾತೆ ಬದಲಾವಣೆ ಅಥವಾ ನೋಂದಾವಣೆ ಮಾಡಲಾಗುವುದು ಅಥವಾ ಈ ಬಗ್ಗೆ ಅಂತಿಮ ತೀರ್ಮಾನವನ್ನು ತಿಳಿಸಲಾಗುವುದು.

**ಆಸ್ತಿ ತೆರಿಗೆ ಪಾವತಿ**

ಬೆಂಗಳೂರು ನಗರದ ಎಲ್ಲ 100 ವಾರ್ಡುಗಳಲ್ಲಿ ಕಂದಾಯಕ್ಕೆ ಒಳಪಟ್ಟಿರುವ ಯಾವುದೇ ಸ್ವತ್ತುಗಳಿಗೆ ಸಂಬಂಧಿಸಿದಂತೆ ಇಲ್ಲಿ ಕಂದಾಯ ಪಾವತಿ ಮಾಡಿ ಅಧಿಕೃತ ರಸೀತಿ ಪಡೆಯಬಹುದು. ಕಂದಾಯವನ್ನು ನಗದು ಚೆಕ್ ಅಥವಾ ಡ್ರಾಫ್ಟ್ ಮೂಲಕ ಪಾವತಿ ಮಾಡಬಹುದು.

**ಖಾತೆಗೆ ಸಂಬಂಧಿಸಿದ ಸೇವೆಗಳು**

ಖಾತಾ ಬದಲಾವಣೆ, ಖಾತಾ ಒಂದುಗೂಡಿಸುವಿಕೆ, ವಿಭಜನೆ, ಕಂದಾಯ ನಿಗದಿ ಪಡಿಸುವಿಕೆ ಮುಂತಾದ ಸೇವೆಗಳಿಗೆ ಅರ್ಜಿ ಸಲ್ಲಿಸಬಹುದು. ಅರ್ಜಿ ಸಲ್ಲಿಸಿದ 30 ದಿನಗಳೊಳಗೆ ಖಾತೆ ಬದಲಾವಣೆ ಅಥವಾ ನೋಂದಾವಣೆ ಮಾಡಲಾಗುವುದು ಅಥವಾ ಈ ಬಗ್ಗೆ ಅಂತಿಮ ತೀರ್ಮಾನವನ್ನು ತಿಳಿಸಲಾಗುವುದು.

**ಕಟ್ಟಡ ನಕ್ಷೆ ಮಂಜೂರಾತಿ**

ನೆಲ ಮತ್ತು ಒಂದನೇ ಅಂತಸ್ತಿನ ಒಂದು ವಾಸದ ಮನೆಗೆ ನಕ್ಷೆ ಮಂಜೂರಾತಿಗಾಗಿ ಇಲ್ಲಿ ಅರ್ಜಿ ಸಲ್ಲಿಸಬಹುದು. ಅರ್ಜಿಯೊಡನೆ ಸಲ್ಲಿಸಬೇಕಾದ ದಾಖಲೆಗಳು ಮತ್ತು ಶುಲ್ಕಗಳ ವಿವರಗಳನ್ನು ಸುಲಭ ನಕ್ಷೆ ಪುಸ್ತಕದಲ್ಲಿ ವಿವರಿಸಲಾಗಿದೆ. ಸುಲಭ ನಕ್ಷೆಯ ಪ್ರತಿಗಳು ಇಲ್ಲಿ ಮಾರಾಟಕ್ಕಿವೆ. ಬೆಲೆ ರೂ. 50/- ಮಾತ್ರ.

**ಜನನ ಮತ್ತು ಮರಣ ಪ್ರಮಾಣ ಪತ್ರಗಳು**

1. ನಿಗದಿತ ನಮೂನೆಗಳಲ್ಲಿ ಅರ್ಜಿ ನೀಡಿ ಜನವರಿ 1993ರಿಂದ ಡಿಸೆಂಬರ್ 2002ರವರೆಗಿನ ಜನನ ಮತ್ತು ಮರಣ ಪ್ರಮಾಣ ಪತ್ರಗಳನ್ನು ಅರ್ಜಿ ನೀಡಿದ ದಿನವೇ ಪಡೆಯಬಹುದಾಗಿದೆ. 1993ಕ್ಕಿಂತಲೂ ಹಿಂದಿನ ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕರಿಸಿದ ಒಂದು ದಿನದ ನಂತರ ಒದಗಿಸಲಾಗುವುದು.
2. ಚಾಲ್ತಿ ವರ್ಷದ ಪ್ರಮಾಣ ಪತ್ರಗಳನ್ನು ಸಂಬಂಧಪಟ್ಟ ಪಾಲಿಕೆಯ ಉಪನೋಂದಣಾ ಕಛೇರಿಯಲ್ಲಿ ಪಡೆಯಬಹುದಾಗಿದೆ.
3. ಜನನ/ಮರಣ ಘಟನೆ ಸಂಭವಿಸಿದ 21 ದಿನದೊಳಗಾಗಿ ಸಂಬಂಧಪಟ್ಟ ಪಾಲಿಕೆಯ ಉಪನೋಂದಣಾ ಕಛೇರಿಯಲ್ಲಿ ನೋಂದಾಯಿಸಿ ಉಚಿತವಾಗಿ ಒಂದು ಪ್ರಮಾಣ ಪತ್ರ ಪಡೆಯಬಹುದಾಗಿದೆ.

ನಾಗರಿಕರು ಪ್ರಮಾಣ ಪತ್ರಗಳನ್ನು ಪಡೆಯಲು ಸೇವಾ ಶುಲ್ಕ – ರೂ.50/–, ಜನನ – ಪ್ರಮಾಣ ಪತ್ರದಲ್ಲಿ ಹೆಸರು ಸೇರ್ಪಡೆ – ರೂ.50/–, ಅಧಿಕ ಪ್ರತಿಯೊಂದಕ್ಕೆ– ರೂ.10/–.

ಅರ್ಜಿಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ www.bmponline.org ವೆಬ್‌ಸೈಟ್‌ನಿಂದ ಪಡೆಯಬಹುದು.

**ನಾಗರಿಕ ಸೇವಾ ಕೇಂದ್ರಗಳು**

| | | | |
|---|---|---|---|
| ಕೇಂದ್ರ ಕಛೇರಿ<br>ನರಸಿಂಹರಾಜು ಚೌಕ ಬೆಂಗಳೂರು<br>ಫೋನ್: 22975520<br>22975583 | ಉಪ ಆಯುಕ್ತರು (ಪೂರ್ವ ವಲಯ)<br>ನೆಲಮಹಡಿ, ಪಬ್ಲಿಕ್ ಯುಟಿಲಿಟಿ ಕಟ್ಟಡ<br>ಮಹಾತ್ಮ ಗಾಂಧಿ ರಸ್ತೆ, ಬೆಂಗಳೂರು<br>ಫೋನ್: 22975800/804 | ಉಪ ಆಯುಕ್ತರು (ಪಶ್ಚಿಮ ವಲಯ)<br>ಭಾಷ್ಯಂ ಪಾರ್ಕ್, ಮಲ್ಲೇಶ್ವರಂ, ಬೆಂಗಳೂರು<br>ಫೋನ್: 22975600/602/603 | ಉಪ ಆಯುಕ್ತರು (ದಕ್ಷಿಣ ವಲಯ)<br>9ನೇ ಅಡ್ಡರಸ್ತೆ 9ನೇ ಮುಖ್ಯರಸ್ತೆ<br>ಜಯನಗರ 2ನೇ ಬ್ಲಾಕ್, ಬೆಂಗಳೂರು<br>ಫೋನ್: 22975702/703/704 |

| | | |
|---|---|---|
| 1. ಸಂಜಯನಗರ | ಫೋನ್ ನಂ. | 22975512/514 |
| 2. ಮಡಿವಾಳ | ಫೋನ್ ನಂ. | 22975526/527 |
| 3. ಆರ್.ಪಿ.ಸಿ.ಲೇಔಟ್ | ಫೋನ್ ನಂ. | 22975655/22975525 |
| 4. ಇಂದಿರಾನಗರ | ಫೋನ್ ನಂ. | 22975508/509 |
| 5. ಕೋರಮಂಗಲ | ಫೋನ್ ನಂ. | 22975506/507 |
| 6. ರಾಜಾಜಿನಗರ | ಫೋನ್ ನಂ. | 22975510/511 |



ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

ಜನತೆಯ ಅವಶ್ಯಕತೆಗಳಿಗೆ ಸದಾ ಸ್ಪಂದಿಸುವತ್ತ ಮತ್ತೊಂದು ಹೆಜ್ಜೆ

...ರಾಯಣದಲ್ಲೇ ಮಾಡಬೇಕು ಅಂತ ಬೇರೆ ...ಯಂತೆ. ಈಗ ಎಷ್ಟು ಆಗಿದೆಯೋ ಅಷ್ಟಕ್ಕೇ ಒಳ ...ಕ್ಕ ಶಾಸ್ತ್ರ ಮುಗಿಸಿ ಬಿಡುವ. ಮತ್ತೆ ಉಳಿದ ಭಾಗವನ್ನೆಲ್ಲ ...ನ ಮಾಡಿಕೊಳ್ಳುವ'' ಎಂದನಾತ. ಮುಹೂರ್ತ, ದಿನ ...ತಾದ್ದೆಲ್ಲ ನೋಡಿದ್ದಾಯಿತು. ಗೃಹಪ್ರವೇಶದೊಳಗೆ ...ಷ್ಟೂ ಮುಗಿಸುವ ಉದ್ದೇಶದಲ್ಲಿ ಮನೆ ಕೆಲಸ ...ುಸಿನಿಂದ ಸಾಗಿತು. ಅತ್ತ ಆಫೀಸು ಜವಾಬ್ದಾರಿ, ...ೇಸಿನಿಂದ ಬರುತ್ತಲೂ ಮನೆ ಕಟ್ಟುವಲ್ಲಿಗೆ ಹೋಗಿ ...ು ಬೇಡ ವಿಚಾರಿಸಿ ಒದಗಿಸಿ ಬರುವ ಧಾವಂತ. ...ನಡುವೆ ರಜೆ ಹಾಕಿ ಟೈಲ್ಸ್, ದೀಪದ ವಿನ್ಯಾಸ ...ಂತಾಗಿ ಅದು ಇದು ಆಯುವಾಟ, ಹುಡುಕುವಾಟ, ...ಾಟ, ತಮ್ಮ ಬಜೆಟ್ಟಿನೊಳಗೆ ಹೊಂದಿಸುವ ಕಷ್ಟ. ಎಲ್ಲ ...ಗಿಸಿ ರಾತ್ರಿ ಮನೆಗೆ ಬಂದರೆ ಒಂದು ಗಳಿಗೆ ...ುತೆಯಿಂದ ಕಣ್ಣುಮುಚ್ಚಲುಂಟೆ ?

...ಸುರುವಾಗಿಯಾಯಿತು – 'ಗಾಯನ ಕಛೇರಿ' – ಠೀಂ ...ಠೀಂ...

''ನಮಗೆಲ್ಲ ಅಭ್ಯಾಸ ಆಗಿದೆಯಪ್ಪ, ಪಾಪ ಅದರ ...ಿಗೆ ಅದು ಕೂಗುತ್ತದೆ, ನಿಮ್ಮದೊಂದು ಏನೋ ...ತ್ರ. ನಿಮಗೆ ಮನೆ ಕಟ್ಟುವ ತಲೆಬಿಸಿ ಅಂತ ಅದೇಕೆ ಸುಮ್ಮನಿರಬೇಕು ?'' ಹೆಂಡತಿ ...ನ ಚಡಪಡಿಕೆ ಕಂಡು ಛೇಡಿಸುವಳು.

ಮಗ ಕೇಳಿದ : ಅಮ್ಮ ಅಕೊ, ಅಬಜಿ ಕೂಗುತ್ತಿದೆ! ಅದು ಯಾವಾಗ ಅದರ ...ೆಯೊಳಗೆ ಹೋಯಿತು ?

ತಾಯಿ : ಗೊತ್ತಿಲ್ಲ ಮಗೂ.

ಮಗ : ಯಾವಾಗ ಹೊರಗೆ ಬರುತ್ತದೆ ?

ತಾಯಿ : ಅದೂ ಗೊತ್ತಿಲ್ಲ ಮಗೂ. ನಮಗೆಲ್ಲ ತಿಳಿಯದ ಹಾಗೆ ಅದು ಹೊರಗೆ ...ುತ್ತದೆ, ಒಳಗೆ ಹೋಗುತ್ತದೆ.

ಮಗ : ಯಾಕೆ ?

ತಾಯಿ : ಯಾಕೆಂದರೆ ಅದಕ್ಕೆ ನಮ್ಮ ಪುಟ್ಟ ಇಲ್ಲಿದ್ದಾನೆ ಅಂತ ಗೊತ್ತಿಲ್ಲವಲ್ಲ, ಅದಕ್ಕೆ.

ಪುಟ್ಟ : ಹೋ... ಹಾಗೆಯೊ ? ಹಾಗಾದರೆ ನಾವು ಕಾದು ಕುಳಿತುಕೊಳ್ಳುವ. ...ು ಹೊರಗೆ ಬರುವ ಹೊತ್ತಿಗೆ ಸರಿಯಾಗಿ ಟಪಕ್ಕಂತ ಎದ್ದು ನಿಲ್ಲುವ. ಆಗ ಅದು ...ಮ್ಮನ್ನು ಕಾಣುತ್ತದೆ.

ಅಮ್ಮ : ಆಯಿತಾಯಿತು, ಮಗು, ಈಗ ಮಲಗು.

ಪುಟ್ಟನನ್ನು ತಟ್ಟುತ್ತಿದ್ದಂತೆ ಆತ ನಿದ್ದೆ ಹೋದ. ತಾಯಿಗೂ ನಿದ್ದೆ ಬಂತು. ಆದರೆ ...ದೆಗೆ ? ನಿದ್ದೆಯಿಲ್ಲ, ಆಚೆ ಕೋಣೆಯಲ್ಲಿ ಲೆಕ್ಕ ಬರೆಯುತ್ತಿದ್ದಾನೆ. ಇದುವರೆಗೆ ಆದ ...ರ್ಚಿನ ಲೆಕ್ಕ, ಇನ್ನು ಆಗಬೇಕಾದ ಖರ್ಚಿನ ಅಂದಾಜು ಲೆಕ್ಕ, ನಾನಾ ಲೆಕ್ಕ ಲೆಕ್ಕ ...ಗಳಲ್ಲಿ ಮುಳುಗಿದ್ದಾನೆ. ಅತ್ತಣಿಂದ ಅವಿರತವಾದ ಠೀಂ ಠೀಂ ಠೀಂ... ಲೆಕ್ಕ ...ುತ್ತದೆ, ಮತ್ತೆ ಸುರುವಿಂದ ಸುರುವಾಗುತ್ತದೆ. ನಿದ್ದೆ ಮಾಡೋಣ ಎಂದರೆ ...ೋಚನೆಗೋ, ಠೀಂ ಠೀಂ ಗೋ ಒಟ್ಟು ನಿದ್ದೆ ಹತ್ತುತ್ತಿಲ್ಲ.

* * *

...ದಿನ ಕಳೆಯುತ್ತಿದೆ. ಮನೆಗೆಲಸ ಒಂದು ಹಂತಕ್ಕೆ ಬಂದಿದೆ. – ಇನ್ನು ಮೆಲ್ಲ ಹೊಸ ...ೆಗೆ ಹೋಗಿಬಿಡುವುದು; ಬಾಕಿ ಕೆಲಸಗಳನ್ನೆಲ್ಲ ಅಲ್ಲಿದ್ದುಕೊಂಡೇ ಮುಗಿಸುವುದು. ...ತ ಮನೆಯೆಂದರೆ ಇಷ್ಟೆಲ್ಲ ಕಷ್ಟ ಅಂತ ತನಗೆ ತಿಳಿದಿರಲಿಲ್ಲ. ಎಷ್ಟು ದುಡ್ಡು ತಂದು ...ಂದರೂ ಸ್ವಾಹಾ ಮಾಡಿ, ಮತ್ತೆ ಆSSS ಅಂತ ಬಾಯಿ ಕಳೆದು ನಿಲ್ಲುತ್ತದೆ ಮನೆ. ...ು ಎಲ್ಲೆಲ್ಲಿ ತೆಗೆಯಬಹುದೋ ಅಲ್ಲೆಲ್ಲ ತೆಗೆದ ಮೇಲೆಯೂ ಇನ್ನೂ ಕೊರತೆ. ಈಗ ...ರು ಬಂದರೂ ಭೆಟ್ಟಿಯಾದರೂ ಇದೇ ವಿಚಾರ. ಸದ್ಯಕ್ಕೆ ಇಡೀ ಪ್ರಪಂಚದ ...ತಿನ ವಸ್ತುವೇ ಮನೆ, ಮನೆ ಕಟ್ಟುವ ಸಾಮಗ್ರಿಗಳ ಬೆಲೆಯ ಏರಿಳಿತವೋ, ಲೋಕ ...ಸ್ತರೂ ಇದನ್ನೇ ಮಾತಾಡುತ್ತಿದ್ದಾರೋ ಇದನ್ನು ಬಿಟ್ಟು ಬೇರೆ ಅರಿಯರೋ ...ಬಂತೆ ಇದ್ದ ಆತ. ''ಮನೆ ಅಂತ ಒಂದು ಆದರೆ ಸಾಕು ಎಂಬವರಿಗೆ ಕಷ್ಟವಿಲ್ಲ ...ೇಡಿ. ಇಂಥದೇ ಆಗಬೇಕು, ಹೀಗೆಯೇ ಆಗಬೇಕು, ಇಂತಿಷ್ಟೇ ದುಡ್ಡಿನೊಳಗೆ ...ಬೇಕು ಅಂತಿರುವ ನಮ್ಮಂಥವರಿಗೆ ಕಷ್ಟ'' ಎನ್ನುವ. ಮನೆಗೆ ಬಂದವರೂ ಆ




ಇದೂ ಯಾವುದೋ ಒಂದು
'ಹೊಸ ಪಕ್ಷ' ಅಂದ್ಕೊಂಡೆ!
ಸೌರಶಕ್ತಿಯ ಬಳಕೆ ಅಂತ
ಈಗ ಅರ್ಥವಾಯ್ತು... ಬಿಡಿ!

ಅಂಥ ಗುಂಯಿಗೆ ದೇಳಿದವರಂತೆ ಆಹುದು ಆಹುದೆನ್ನುವರು. ''ಈಗ ನೋಡಿ, ನಮ್ಮ ಮನೆಯಲ್ಲಿ ಕೆಲದಿನಗಳಿಂದ ಯಾವುದೋ ಒಂದು ಕೀಟ ಎಲ್ಲೋ ತೂತು ಕೊರೆದು ಮನೆ ಮಾಡಿದೆ. ಅದಕ್ಕೆ ಏನಾದರೂ ಖರ್ಚು ಉಂಟಾ ? ನಮಗೆಲ್ಲ ಕರಕರೆ ಮಾಡಿಕೊಂಡು ಸುಖವಾಗಿದೆ'' ಎಂದನಾತ. ''ಅದರಂತೆ ನಾವೂ ಇರುವ ಹಾಗಿದ್ದರೆ! ಮೂರು ಕಾಸಿನ ಖರ್ಚಿಲ್ಲ'' ಎಂದು ದನಿಗೂಡಿಸಿ ಬಂದವರು ನಕ್ಕರು. 'ಮನೆಯೆಂಬುದು ನೋಡಿ, ಅವರವರ ಮನಸ್ಸು ಇದ್ದಂತೆ. ಮನಸ್ಸಿನ ಮುಂದುವರಿಕೆಯೇ ಮನೆ ಎನ್ನುತ್ತಾರಲ್ಲವೆ' ಮುಂತಾದ ಮಾತುಕತೆ ಊಟ ತಟ್ಟೆ ಲೋಟ ಚಮಚ ಕಣಕಣವಾಗುತ್ತಿರುವಾಗ ಮಗ ಒಂದೇ ಸಮ ತಕಪಕ ಕೈಕಾಲು ಬಡಿದ. ಏನು ? ಕೇಳಿದರೆ ''ಠೀಂ ಅಬಜಿ ಇವತ್ತು ಅದರ ಮನೆಗೆ ಹೋಗಿದ್ದನ್ನು ನಾ ಕಂಡೆ. ನಂಗೆ ಅದರ ಮನೆಗೆ ಕರೆದುಕೊಂಡು ಹೋಗೂ'' ಅಂತ ರಾಗ ತೆಗೆದ.

ಥಡ್. ಬಿತ್ತು, ಕಾಸಿ ಒಂದು ಪೆಟ್ಟು. ''ಎಷ್ಟೊತ್ತಿಗೆ ಕಂಡರೂ ವೇಂ ಅಂತ ಒರಲುವುದು ಬಿಟ್ಟರೆ ಬೇರೆ ಏನಾದರೂ ಕಲಿತಿದ್ದಾನೆಯೇ ನಿನ್ನ ಮಗ ?''

ಬಂದವರು ''ಸಣ್ಣವ ಇನ್ನು, ಬಿಡಪ್ಪಾ.''

''ಮತ್ತೆ! ಎಲ್ಲ ಬಿಟ್ಟು ಆ ಒರಲು ಪಿಶಾಚಿಯ ಮನೆಗೆ ಹೋಗಬೇಕಂತೆ. ಆಗಹೋಗುವ ಮಾತೆ ಇದು ?''

''ಇನ್ನೂ ಚಿಕ್ಕವ, ತಿಳಿಯದು ಪಾಪ''

ಹೆಂಡತಿ ಬಂದು ಮಗನನ್ನು ಸಂತೈಸಿ ಆಚೆಗೆ ಕರೆದುಕೊಂಡು ನಡೆದಳು.

ಆ ರಾತ್ರಿಯೂ ಸುರುವಾಗಿಯೆ ಬಿಟ್ಟಿತಲ್ಲ, ಗಾಯನ, ಠೀಂ ಠೀಂ ಠೀಂ... ಆತ ಪಕ್ಕನೆ ನೆನಪಾದಂತೆ ಮಗನ ಕಡೆ ತಿರುಗಿ ಕೇಳಿದ. ''ಏನೆಂದೆ ಪುಟ್ಟ ನೀನು, ಅಬಜಿಯ ಮನೆ ಕಂಡೆ ಎಂದೆಯ !''

''ಹೂಂ. ಇವತ್ತು ಬೆಳಿಗ್ಗೆ ಕಂಡೆ ನಾನು. ಹೇಳಿದರೆ ನೀನು ಹೊಡೆದೆಯಲ್ಲ!''

''ಎಲ್ಲಿ, ಎಲ್ಲಿ ಕಂಡೆ ?''

''ಹೊರಗೆ, ಈ ಕಿಟಕಿ ಪಕ್ಕ ಮರವಿದೆಯಲ್ಲ, ಅದರಲ್ಲಿ''

''ಬಾ, ಈಗಲೆ ತೋರಿಸು ನನಗೆ.''

''ಈಗವೆ ! ಈ ಕತ್ತಲಲ್ಲಿ ?'' – ಹೆಂಡತಿ.

''ಹೂಂ. ಬ್ಯಾಟರಿ ಹಿಡಿದುಹೋದರೆ...''

''ಏನಾಗಿದೆ ನಿಮಗೆ ? ಈಗಲೇ ನೋಡಲು ಏನು, ಜೀವ ಹೋಗುತ್ತದೆಯೆ.''

''ಹೌದು, ಜೀವ ಹೋಗುತ್ತಿದೆ.''

''ಬೆಳಗಾಗುವುದರೊಳಗೆ ಹೋಗಲಿಕ್ಕಿಲ್ಲ. ಹೋಗಲು ನಾನು ಬಿಡುವುದಿಲ್ಲ. ಹೆದರಬೇಡಿ. ಬೆಳಗಾಗಲಿ ಒಮ್ಮೆ'' – ಗದರಿದಳು ಹೆಂಡತಿ.

ಬೆಳಗಾಗುತ್ತಲೇ ಮಗನನ್ನು ಗಡಬಡಿಸಿ ಎಬ್ಬಿಸಿದ ಆತ. ''ಏಳು, ಏಳು ಕೀಟದ ಮನೆ ತೋರಿಸು.'' ಕಣ್ಣುಜ್ಜಿ ಹೊರಟ ಮಗ ಮನೆ ಹಿಂಬದಿ ಕಿಟಕಿ ಸನಿಹದಲ್ಲಿಯೇ ಇದ್ದ ಮರದ ಬಳಿ ನಿಂತ. ಅದರಲ್ಲೊಂದು ಕಿರೀ ರಂಧ್ರ. ''ಹೂಂ. ನಾ ಕಂಡೆ ಅಪ್ಪ, ಅದು ಇದರೊಳಗೆ ಹೋಗುವುದನ್ನು, ನಿನ್ನೆ ಬೆಳಿಗ್ಗೆಯೇ. ಹೇಳಿದರೆ ನೀನು...''

''ಹಂ ಹಂ ಸಾಕು.''

ಬ್ಯಾಟರಿ ಹಿಡಿದು ರಂಧ್ರದೊಳಗೆ ಬೆಳಕು ಬಿಟ್ಟ ಆತ.

''ಶ್, ಅದು ಮಲಗಿರುತ್ತದಂತೆ ಈಗ, ಅಮ್ಮ ಹೇಳಿದ್ದು, ಎಬ್ಬಿಸಬೇಡ.''

ತಂದೆ : 'ನನ್ನ ನಿದ್ದೆ ಕೆಡಿಸಿದರೆ ಅಡ್ಡಿಲ್ಲವಂತ ನಿನ್ನ ಅಮ್ಮನಿಗೆ ?' – ಸಿಟ್ಟೆಂಬುವುದೇ ಹಾಗೆಯೆ ? ಒಟ್ಟಾರೆ ಕಟಿಕಪಿ ಪ್ರಶ್ನೆಗಳನ್ನು ಎಸೆಯುವುದರಲ್ಲೇ ಸುಖ ಅದಕ್ಕೆ. ಅರ್ಥ ಅನುಭೋಗ ಬೇಕಂತಿಲ್ಲ. ''ಓ ಅಲ್ಲಿ ಅಕ, ಅಲ್ಲಿ ಅಲ್ಲಿ ಬೆಳಕು ಬಿಡು ಅಲ್ಲಿ ಅಲ್ಲಿ...'' ಎಂದ ಪುಟ್ಟ. ಕಾಣುತ್ತಿಲ್ಲ, ತನಗೆ ಕಾಣುತ್ತಿಲ್ಲ ಎನ್ನುತ್ತ ತುದಿಬೆರಳಲ್ಲಿ ನಿಂತ, ಕತ್ತುದ್ದ ಮಾಡಿದ. ''ಒಳಗೆ ನಮ್ಮ ಮನೆಯ ಹಾಗೆಯೇ ಇದೆ ಅಪ್ಪ. ಕೋಣೆ ಕೋಣೆಯಾಗಿ'' ಎಂದು ತಾನು ಹೋಗಿ ಬಂದಿರುವುದನ್ನು ತಿಳಿಸಿದ.

ಮಗನ ಮಾತು ಕಿವಿಗೆ ಬೀಳುತ್ತಿಲ್ಲ ತಂದೆಗೆ. ಬದಲು ಕೀಟ ಇಲ್ಲಿದೆಯೆಂಬುದು ಖಂಡಿತವಾಯ್ತು. ''ಓಹೋ, ನೀನು ಇಲ್ಲಿದ್ದೀಯಾ ? ಮಾಡಿಸುತ್ತೇನೆ ಬಗೆ ನಿನಗೆ.''

''ಅಪ್ಪ, ಈಗಾದರೂ ಹೋಗುವನ ಅಲ್ಲಿಗೆ ?''

ಕಿವಿತಿಪ್ಪಿ ನುಡಿದ ಅಪ್ಪ, ''ಹೋಗುವ ಅಂತೆ ಹೋಗುವ, ಇಷ್ಟು ಸಣ್ಣ ತೂತಿನೊಳಗೆ ಹೋಗಲಿಕ್ಕಾಗುತ್ತದೆಯೇ ದಡ್ಡ ? ನಡಿ ಮನೆಗೆ ಅಧಿಕ ಪ್ರಸಂಗಿ.''

ತಂದೆ ಮರದ ತೊಗಟೆ ಸ್ವಲ್ಪ ಕಿತ್ತು ರಂಧ್ರ ದೊಡ್ಡದು ಮಾಡಲೆಳಸಿದ. ನಿಲ್ಲಿಸಿ, ''ಊಹೂ, ಇದಕ್ಕೆ ಬೇರೆಯೇ ಮದ್ದು ಮಾಡುವೆ'' ಎಂದು ಸ್ವಗತವಾಡಿಕೊಂಡ.

* * *

ಹೊಸ ಮನೆಗೆ ಹೋಗುವ ಸಮಯ ಬಂದಿದೆ. ಮನೆಯೆಂದರೇನು ? ಬೇಡದ ಸಾಮಾನುಗಳ ರಾಶಿ. ಇಷ್ಟೆಲ್ಲಾ ಸಾಮಾನುಗಳು ಹೇಗೆ ಒಳಗೆ ತುಂಬಿಕೊಂಡವೋ ತಮಗೇ ತಿಳಿಯದಂತೆ ! ಮನೆ ಬದಲಾಯಿಸುವುದು ಎಂದರೆ ಬೇಡದ ಸಾಮಾನುಗಳ ವಿಲೇವಾರಿ ಮಾಡುವುದು ಎಂತಲೂ ಅರ್ಥ... ಮುಂತಾದ ಮಾತುಗಳ ನಡುವೆ ಅಂತೂ ಮನೆ ಪ್ಯಾಕ್ ಆಗಿ ಕುಳಿತಿದೆ.

ಪುಟ್ಟನಿಗಂತೂ ಸಂಭ್ರಮದಲ್ಲಿ ಕಣ್ಣೇ ಕಾಣುತ್ತಿಲ್ಲ, ಅವನ ಪ್ರಶ್ನೆಯೂ ಮುಗಿಯುತ್ತಿಲ್ಲ, ''ರೀ ರೀ ಅಬಜಿಯೂ ನಮ್ಮ ಜೊತೆ ಬರುವುದೆ ?'' ಕೇಳುವ. ಪದೇ ಪದೇ ಹೋಗಿ ಅದರ ಮನೆಯ ಬಳಿ ನಿಂತು, ''ಅಬಜೀ, ನೀನೂ ಬರುತ್ತೀಯ ನಮ್ಮ ಹೊಸಮನೆಗೆ ?'' ಎಂದು ಕೇಳುವ. ಅದೆಲ್ಲಾದರೂ ಫಕ್ಕನೆ ಹೊರಬಂದು ಅವನನ್ನು ಕಚ್ಚೀತು ಎಂದು ತನ್ನ ಬಿಡುವಿಲ್ಲದ ಕೆಲಸದ ಮಧ್ಯೆ ತಾಯಿ ಓಡಿಬಂದು ಆತನನ್ನು ಆಚೆ ಎಳೆದುಕೊಳ್ಳುವಳು.

''ಯಾಕಮ್ಮ, ಅದು ನಾನು ಕರೆದರೂ ಹೊರಗೆ ಬರುವುದಿಲ್ಲ ?''

''ಅದಕ್ಕೆ ಹೆದರಿಕೆ.''

''ಯಾಕೆ ?''

''ಅಪ್ಪ ಗದರಿದರೆ ಅಂತ.''

''ಹೋ, ಹೌದೇ ? ಹಾಗಾದರೆ ನಾವು ಹೊರಟುಹೋಗುತ್ತೇವಲ್ಲ? ಹೋದ ಮೇಲೆ ಮೆಲ್ಲ ಹೊರಗೆ ಬಾ ಅಬಜಿ. ಆಯಿತೇ ?'' ರಾತ್ರಿ ಮಾತ್ರ ಮಾತಾಡುವ ಕೀಟ, ಹಗಲಲ್ಲಿ ಕಂ ಕಿಂ ಎನ್ನುತ್ತಿಲ್ಲ.

* * *

ಸಂಜೆ. ಕತ್ತಲಾಗುತ್ತಿದೆ. ಬೇಗ ಆ ಮನೆಗೆ ಹೊರಡಬೇಕು. ಪ್ರವೇಶದ ಶಾಸ್ತ್ರ ಆರಂಭಕ್ಕೆ ಸಾಕಷ್ಟು ಮುಂಚೆಯೇ ತಾವು ಅಲ್ಲಿರಬೇಕು, ಒಂದೊಂದೇ ಒಂದೊ ಕೆಲಸ, ಎಂದು ಹೊರಡುವ ಹವಣವೇ ಮುಗಿಯುತ್ತಿಲ್ಲ. ಅವನು ಅವಸರಿಸುತ್ತಿ ಬಾಕಿ ಉಳಿದವನ್ನೆಲ್ಲ ಗೃಹಪ್ರವೇಶ ಮುಗಿದ ಮೇಲೆ ನಿಧಾನವಾಗಿ ಸಾಗಿಸುವುದು, ತೀರಾ ಅಗತ್ಯದ ಸಾಮಾನುಗಳಷ್ಟೇ ಸಾಕು ಅಂತಂದುಕೊಂಡಂತೆ ಅವು ಹೊರಟು ವಾಹನವೇರಲು ಸಜ್ಜಾಗಿ ಜಗಲಿಯಲ್ಲಿ ಕುಳಿತಿವೆ. ಇಷ್ಟು ದಿನ ಮನೆಯನ್ನು ಬಿಟ್ಟು ಹೊರಡುವ ಈ ಗಳಿಗೆಯಲ್ಲಿ ಹೆಂಡತಿಯ ಕಣ್ಣಲ್ಲಿ ನೀರಾಡು ''ಏನೇ ಆಗಲಿ ಈ ಮನೆಗೆ ಬಂದ ಮೇಲೆ ನಮಗೆ ಸ್ವಂತ ಮನೆ ಮಾಡುವ ಯೋ ಬಂತು. ಲಕ್ಷಣದ ಮನೆಯಿದು'' ಮುಂತಾಗಿ ತನ್ನೊಳಗೇ ಎಂಬಂತೆ ನುಡಿ ಮನೆಯ ಒಳಗೆಲ್ಲ ಸುಮ್ಮನೆ ಹೊಕ್ಕು ಹೊರಡುತ್ತಿದ್ದಾಳೆ. ಜೊತೆಗೆ ಹೊಸ ಮ ಗೆಲಫಲದ ಪುಟ್ಟ.

ಆಯಿತು, ಇನ್ನೇನು ಬಾಗಿಲು ಹಾಕಿ ಮೆಟ್ಟಿಲಿಳಿದು ವಾಹನವೇರಬೇಕು. ಎನ್ನುತ್ತ ಆತ ಕೈಯಲ್ಲೊಂದು ಚೀಲ ಬೀಸಿಕೊಂಡು ಮನೆಯ ಹಿಂಬದಿಗೆ ನಡ ಏನಿರಬಹುದೆಂದು ಹೆಂಡತಿ ಹಿಂಬಾಲಿಸಿದಳು. ಪುಟ್ಟನೂ. ಆ ಮರದ ಹ ಬರುತ್ತಲೇ ಆತ ಚೀಲದಿಂದ ಪ್ಲಾಸ್ಟಿಕ್ ಲಕೋಟೆ ಹೊರತೆಗೆದ.

''ಏನದು ?'' ಕೇಳಿದಳು ಹೆಂಡತಿ.

''ಏನೋ ಒಂದು. ಯಾಕೆ ನಿನಗೆ ? ಎಲ್ಲಾ ಬೇಕು, ತನಿಖೆ.''

ಸಿಡುಕುತ್ತ ಆತ ಲಕೋಟೆಯಿಂದ ಹೊಯಿಗೆ ಸಿಮೆಂಟು ಮಿಶ್ರಣ ಹೊರತೆಗೆದ.

''ಅಯ್ಯ ! ಸಿಮೆಂಟು ! ಯಾಕೆ ?''

''ಯಾಕೆಂತ ನೀನೇ ನೋಡು.'' ಮಿಶ್ರಣಕ್ಕೆ ನೀರು ಬೆರೆಸಿ ಕಲಸಿದ.

ಮಗ : ''ಯಾಕಪ್ಪಾ? ಇದು.''

ತಂದೆ : ''ನೋಡುತ್ತಿರು, ನಿನ್ನ ಅಬಜಿ ಮನೆ ಬೀಳದಂತೆ ಗಟ್ಟಿ ಮಾಡುತ್ತೇನೆ.''

ಮಗ : ''ಯಾಕೆ ? ಅದೀಗ ಗಟ್ಟಿಯಿಲ್ಲವೆ ?''

ರಪ್ಪ ಪೆಟ್ಟು ಬಿತ್ತು. ''ನಿನ್ನ ಮಗನ ಬಾಯಿಗೆ ಒಂದು ನಿಮಿಷ ಹೊ ಹಾಕುತ್ತೀಯ ?'' ಎಂದವ ಮಗನ ಕಡೆಗೆ ತಿರುಗಿ ''ಇಲ್ಲವಾದರೆ ನಿನ್ನನ್ನು ಅ ಮನೆಯೊಳಗೆ ಕಳಿಸಿ ಸಿಮೆಂಟು ಹಾಕುತ್ತೇನೆ'' ಎಂದು ಗರ್ಜಿಸಿದ.

''ಏನು ಮಾತೆಂತ ಹಾಗೆ ಹೇಳುತ್ತೀರಿ ? ಅದರ ಬದಲು ನಿಮ್ಮ ಬಾ ಸಿಮೆಂಟು ಮೆತ್ತಿಕೊಳ್ಳಬಹುದಲ್ಲ?'' ಎನ್ನುತ್ತ ಹೆಂಡತಿ ಒಗಟಿನಂತೆ ಪಿಳಿ ನೋಡುತ್ತಿದ್ದ ಮಗನನ್ನು ಸರ್‍ರನೆ ಹತ್ತಿರಕ್ಕೆ ಸೆಳೆದುಕೊಂಡಳು. ಮತ್ತೆ ಅನುನಯ ದನಿಯಲ್ಲಿ ನುಡಿದಳು ''ಹೇಗೂ ನಾವು ಹೊರಟುಹೋಗುವವರು. ಯಾಕೆ ಈ ಇದೆಲ್ಲ ?''

ಆತ ನುಡಿದ ''ಹೇಗೂ ಸಿಮೆಂಟಿದೆ. ಆ ತೂತು ಬಂದು ಮಾಡಿಬಿಟ್ಟರೆ ಮು ಈ ಮನೆಗೆ ಬರುವವರಿಗಾದರೂ ಉಪಕಾರವಾಗುತ್ತದೆ... ಮಾಡಿಸುತ್ತೇನೆ ನಿ ಬಗೆ, ಎಲೆ ಕೀಟವೇ. ಇಂದಿನಿಂದ ನಿನ್ನ ರೀಂ ರೀಂ ಎಲ್ಲ ಬಂದ್'' ಎನ್ನುತ್ತಾ ತ ಕೀಟದ ಗೂಡಿಗೆ ಸಿಮೆಂಟು ಮೆತ್ತ ತೊಡಗಿದ.

ಪುಟ್ಟ ಕೇಳಿದ – ''ಅಯ್ಯೋ ಏನಪ್ಪ, ಇನ್ನು ರೀ ರೀ ಅಬಜಿ ಕೂಗುವುದಿಲ್ಲವೆ ?''

ತಂದೆ ಉತ್ತರಿಸಿದ ''ಹೋ, ಏನು ಕೂಗದೆ ? ಅದರ ಮ ಬಾಗಿಲಿರಲಿಲ್ಲವಲ್ಲ, ನಾನು ಅದಕ್ಕೆ ಬಾಗಿಲು ಹಾಕಿಕೊಟ್ಟೆ ಅಷ್ಟೇ.''

ಪುಟ್ಟನಿಗೆ ಸಮಾಧಾನವಾಯ್ತು.

ಅಪ್ಪ ಕೀಟದ ಮನೆಗೆ ಸಿಮೆಂಟು ಮೆತ್ತುವುದನ್ನೇ ಖುಷಿಯಲ್ಲಿ ನೋಡುತ್ತ ನಿಂತ.

ಎಲ್ಲ ಮುಗಿಯುತ್ತಲೂ ಅವರು ಹೊಸಮನೆಗೆ ಹೊರಟುಹೋದರು.

* * *

ಹೊಸಮನೆಯಲ್ಲಿ ಒಂದು ರಾತ್ರಿ.

ತಂದೆಯಿನ್ನೂ ಮನೆಗೆ ಬಂದಿಲ್ಲ. ತಾಯಿ ಪುಟ್ಟನನ್ನು ತಟ್ಟಿ ಮಲಗಿಸುತ್ತಿದ್ದಾ ಇದ್ದಕ್ಕಿದ್ದಂತೆ ಎದ್ದುಕುಳಿತ ಪುಟ್ಟ. ಆಲಿಸಿ ಕೇಕೆ ಸಂತಸದಲ್ಲಿ ನುಡಿದ, ''ಅಮ್ಮ, ಅದೆ ರೀ ರೀ ಅಬಜಿ ? ಕರೆಯುತ್ತಿದೆ. ಕೇಳಿಸಿತೆ ? ಹಾಹಾ ! ಅದೂ ಇಲ್ಲೇ ಎಲ್ಲೊ ಮ ಮಾಡಿದೆ !... ನಾಳೆ ಬೆಳಗಾಗುತ್ತದಲ್ಲ, ಆಗ ಅದರ ಮನೆ ಹುಡುಕೋಣ ಹಂ ? ಬೇಡ'' ಎಂದ. ತಾಯಿಯ ಉತ್ತರವನ್ನು ತಾನೇ ತಿಳಿದು ನುಡಿದಂತೆ, ಸಂತೈಸುವಂತೆ.

ವೈದೇಹಿ
'ಇರುವಂತೆ', ಅನಂತನಗರ ೨ನೇ ಹಂತ, ಮಣಿಪಾಲ - ೫೭೬ ೧೦೪, ಉಡುಪಿ ಜಿಲ್ಲೆ

ಹೊಸ ವರ್ಷದ ಶುಭಾಶಯಗಳೊಂದಿಗೆ



ಭಾರತಿ ಪ್ರಕಾಶನ

ಸರಸ್ವತಿಪುರಂ, ಮೈಸೂರು - 570 009

ದೂರವಾಣಿ : 2543941

ಮೊಬೈಲ್ : 9448413188

ನಿಮಗೇನಾಯಿತು ಎಂಬುದನ್ನು ನೀವೇ
ರೆದರೆ ಚೆನ್ನಾಗಿರುವುದಿಲ್ಲ, ನೀವು
ಗಿದ್ದಿರಿ, ಹೇಗಾಡುತ್ತಿದ್ದಿರಿ ಎಂಬುದು
ಮಗೇ ಗೊತ್ತಿಲ್ಲ, ಆ ಭಾಗವನ್ನು ನಾನೇ
ರೆಯುತ್ತೇನೆ' ಎಂದು ಉಡದ ಪಟ್ಟು
ಾಕಿದಳು ನನ್ನ ಅರ್ಧಾಂಗಿ. ನಾನು ಬೇರೆ
ಾರಿ ಕಾಣದೆ ಒಪ್ಪಿಕೊಂಡೆ. ಗಂಡನ
ಂಡವಾಳದ ಬಗ್ಗೆ ಹೆಂಡತಿಗೆ ಹೇಳುವ
ಕ್ಕು ಇದ್ದೇ ಇದೆ. ನಾನು ಬೇಡವೆಂದರೂ
ಮ್ಮ ತೋಂಡಿಯಲ್ಲೇ ಜಗತ್ತಿಗೆಲ್ಲಾ
ಾರಿಬಿಡುತ್ತಾರೆ. ಅಂದಿನ ನನ್ನ
ಕ್ಕಲಾಟಗಳನ್ನು ಡಂಗೂರ ಹೊಡೆಯುವ
ವಕಾಶವನ್ನು
ಟ್ಟುಕೊಡುವರೆ? ಹಕ್ಕೊತ್ತಾಯದಿಂದ,
ನ್ನ ಮುಂದಿನ ಸ್ಥಿತಿಯನ್ನು ಸಾಕ್ಷಾತ್
ರಸ್ವತಿಯ ಬರಹದಿಂದಲೇ ತಿಳಿದುಕೊಳ್ಳಿ.

ಪ್ರೊ॥ ಚಿ. ಶ್ರೀನಿವಾಸರಾಜು

**ಬ್ರೆಡ್ಡು ಮತ್ತು ಕಲ್ಲು**

ನಾವು ಯೂರೋಪು ಪ್ರವಾಸವನ್ನು ಹದಿನೈದು ದಿಗಳಲ್ಲಿ ಮುಗಿಸಿದೆವು. ನಮ್ಮ ಪಾಲಿಗೆ ಅಪರೂಪದ ಅನುಭವ. ನಮ್ಮದು ವ್ಯವಸ್ಥಿತ ಪ್ರವಾಸ. ಆದರೆ ಎಲ್ಲ ರಾಷ್ಟ್ರಗಳ ಎಲ್ಲವನ್ನು ನೋಡಿದೆವು ಎಂಬ ಹೆಗ್ಗಳಿಕೆಯಿಲ್ಲ. ಆಯಾ ರಾಷ್ಟ್ರಗಳ ಒಂದೆರಡು ನಗರಗಳನ್ನು, ಅಲ್ಲಿನ ಕೆಲವು ಪ್ರಮುಖ ಸ್ಥಳಗಳನ್ನು ಮಾತ್ರ ಕಂಡೆವು. ಇಂತಹ ಸಂದರ್ಭದಲ್ಲಿ, ಅಲ್ಲಿನ ಜನರ ಹಾಡು-ಪಾಡುಗಳನ್ನು ಜೀವನ ಶೈಲಿಯನ್ನು ಸಂಪೂರ್ಣವಾಗಿ ಕಾಣುವುದಕ್ಕಿಂತ, ಅಲ್ಲಿ ನಾವು ಪಟ್ಟ ಪಾಡುಗಳ ಅನುಭವವೇ ಮುಖ್ಯವಾಗುತ್ತದೆ. ಈ ಮಿತ ಅನುಭವದ ಬಂಡವಾಳದಿಂದ 'ನಾನು ಆ ದೇಶವನ್ನು ನೋಡಿದ್ದೇನೆ. ಈ ದೇಶವನ್ನು ನೋಡಿದ್ದೇನೆ' ಎಂದು ಬೀಗುವುದು, ಬಡಬಡಿಸುವುದು ಸರಿಯಲ್ಲ. ಹುಟ್ಟಿ ಬೆಳೆದ ಕರ್ನಾಟಕವನ್ನೇ ಸರಿಯಾಗಿ ನೋಡದೆ, ಯೂರೋಪನ್ನು ಹದಿನೈದೇ ದಿನಗಳಲ್ಲಿ ನೋಡಿಬಿಟ್ಟೆ, ಎಂದು ಹೇಳುವುದು ತಮಾಷೆಯ ಸಂಗತಿ. ಆಯಾ ದೇಶಗಳ ವಾತಾವರಣಕ್ಕೆ ಪ್ರವೇಶ ಮಾಡಿದಾಗ ನಮಗೇನಾಗುತ್ತದೆ? ಎಂಬುದು ಮುಖ್ಯವಾಗುತ್ತದೆಯೇ ಹೊರತು, ಅವರಿಗೇನಾಗುತ್ತದೆ? ಎಂಬುದು ಮುಖ್ಯವಾಗುವುದಿಲ್ಲ, ಭಯೋತ್ಪಾದಕರನ್ನು ಹೊರತುಪಡಿಸಿ. ಯಾವುದೇ ದೇಶಕ್ಕೆ ನಮ್ಮಂತಹವರು ಸಾವಿರಾರು ಜನರು ಬರುತ್ತಾರೆ, ಸಾವಿರಾರು ಜನರು ಹೋಗುತ್ತಾರೆ.

ನಾವು ಪ್ಯಾರಿಸ್ ನಗರದ ಹೊರವಲಯದ 'ನವೋಟಲ್'ನಲ್ಲಿ ಎರಡು ಹಗಲು, ಮೂರು ರಾತ್ರಿಗಳನ್ನು ಕಳೆಯಬೇಕಾದ ಪ್ರಸಂಗ ಒದಗಿಬಂತು. ಪ್ಯಾರಿಸ್ ನಿದ್ರಿಸದ ನಗರ. ನಮ್ಮ ದಿಬ್ಬಣ ಗ್ರೇವಿನ್ ಮೇಣದ ಮ್ಯೂಸಿಯಂ, ಐಫೆಲ್ ಟವರ್‌ಅನ್ನು ಮಾತ್ರ ನೋಡಿತು. ನಾನು ಪೀಲೆ ಪಕ್ಕದಲ್ಲಿ ನಿಂತುಕೊಂಡು ಚಿತ್ರ ತೆಗೆಸಿಕೊಳ್ಳುವುದರಲ್ಲಿ ಯಶಸ್ವಿಯಾದೆ. ಐಫೆಲ್ ಟವರ್‌ನ ಮೊದಲನೇ ಹಂತಕ್ಕೆ ಲಿಫ್ಟ್‌ನಲ್ಲಿ ಹೋಗಿ, ಕೆಳಗಿಳಿದು ಬಂದೆ. ಆದರೆ ಲೌವ್ರ್ ಮ್ಯೂಸಿಯಂ, ಲೀಸೀ ಅರಮನೆ, ಕನ್‌ಕಾರ್ಡೊ ಚೌಕ, ಗಾರ್ನಿಯಾ ಅಪೆರಾ ಹೌಸ್, ಪೆತೀತ್ ಅರಮನೆ, ಗ್ರ್ಯಾಂಡ್ ಅರಮನೆ, ಸೀನ್ ನದಿ ಮುಂತಾದ ಚಾರಿತ್ರಿಕ ಸ್ಥಳಗಳನ್ನು ಬಸ್ಸಿನಿಂದಲೇ ತೋರಿಸುತ್ತಾ, ನಮ್ಮ ಬಯಕೆಗಳನ್ನು ಜೀವಂತವಾಗಿಟ್ಟನು ಟ್ಯೂರ್ ಮ್ಯಾನೇಜರ್. ಅಂದು 'ಭೋಜನಂ' ಹೋಟೆಲಿನಲ್ಲಿ ಭರ್ಜರಿ ಭಾರತೀಯ ಭೋಜನವನ್ನು ಮಾಡಿ, ಸಂತೃಪ್ತರಾಗಿ ಹೊರಬಿದ್ದೆವು. ಹೋಟೆಲಿಗೆ ಬಂದು ಬಿದ್ದುಕೊಂಡೆವು. ನಾವು ತಂಗಿದ್ದ ಹೋಟೆಲ್‌ನಲ್ಲಿ, ಗಿರಾಕಿಗಳಾಗಿ ಹಗಲು ಹೊತ್ತಿನಲ್ಲಿ, ಇಂಗ್ಲಿಷ್ ಬಲ್ಲ, ಒಬ್ಬ ಕಪ್ಪು ಹೆಣ್ಣುಮಗಳನ್ನು ಗೊತ್ತು ಮಾಡಿದ್ದರು. ಉಳಿದವರೆಲ್ಲಾ ಫ್ರೆಂಚ್ ಮಾತನಾಡುತ್ತಿದ್ದರು. ಅಲ್ಲಿನ ಕೆಲವರಿಗೆ ಇಂಗ್ಲಿಷ್ ಗೊತ್ತಿದ್ದರೂ ಮಾತನಾಡುತ್ತಿರಲಿಲ್ಲ, ನಾವು ಹೋಟೆಲಿನ ಮೂರನೆಯ ಅಂತಸ್ತಿನಲ್ಲಿ ಠಿಕಾಣಿ ಹೂಡಿದ್ದೆವು. ಐದಾರು ಕೊಠಡಿಗಳ ಅಂತರದಲ್ಲಿ, ಸ್ವಾಮಿ (ಓ. ಎಲ್. ನಾಗಭೂಷಣ ಸ್ವಾಮಿ ಮತ್ತವರ ಶ್ರೀಮತಿ) ದಂಪತಿಗಳ ಠಿಕಾಣಿ, ಪ್ರತಿಯೊಂದು ಕೊಠಡಿಯಲ್ಲೂ ಅತ್ಯಾಧುನಿಕ ಟಿ.ವಿ. ಮತ್ತು ಪಾರದರ್ಶಕ ಫ್ರಿಜ್ ಇದ್ದುವು. ಎರಡನ್ನೂ ಧಾರಾಳವಾಗಿ ಬಳಸಲು ಭಯ. ನಮಗೆ ಬೇಕಾದ ಚಾನೆಲ್ ಹಾಕಿಕೊಂಡರೆ, ಫ್ರಿಜ್‌ನಿಂದ ಬೇಕು ಬೇಕಾದ್ದು ತಿಂದರೆ ಯದ್ವಾತದ್ವಾ ಯುರೋಗಳನ್ನು ಕಕ್ಕಬೇಕಾಗುವುದೆಂದು ಟೂರ್ ಮ್ಯಾನೇಜರ್ ಧಮಕಿ ಹಾಕಿದ್ದನು. ಆದ್ದರಿಂದ ನಾವು ಅವುಗಳ ಸಹವಾಸಕ್ಕೇ ಹೋಗಲಿಲ್ಲ.

# ಇಬ್ಬರು ಹೇಳಿದ ಒಂದೇ ಕಥೆ



ಮಾರನೆಯ ದಿನ ಪ್ರವಾಸಿಗರನ್ನು ತಮ್ಮ ತಮ್ಮ ಖರ್ಚಿನಲ್ಲಿ, ಪ್ಯಾರಿಸ್‌ನ ಡಿಸ್ನಿ ಲೋಕಕ್ಕೆ ಹಾಗೂ ಲಿಡೋ ರಸ್ತೆಯ ಕ್ಯಾಬರೇ ಷೋ ಮಾಯಾಲೋಕಕ್ಕೆ ಕರೆದುಕೊಂಡು ಹೋಗುವ ಕಾರ್ಯಕ್ರಮವಿತ್ತು. ನಾವು ಡಿಸ್ನಿ ಲೋಕಕ್ಕೆ ಹೋಗಲು ತೀರಾ ದೊಡ್ಡವರು; ಆಕರ್ಷಕ ಅರೆನಗ್ನ ಕ್ಯಾಬರೇ ಷೋಗೆ ಹೋಗಲು ಅರವತ್ತರ ಆಸುಪಾಸಿನವರು. ಜೊತೆಗೆ ಇವುಗಳಿಗೆ ಹೋಗಲು ಸಾಕಷ್ಟು ಯುರೋಗಳನ್ನು ತೆರಬೇಕಾಗಿತ್ತು, ನಮ್ಮ ಸಹಪ್ರವಾಸಿಗರಲ್ಲಿ ಕೆಲವು ರಸಿಕ ಮಹಾಶಯರು, ಹೆಣ್ಣು ಮಕ್ಕಳ ನಿತಂಬುಗಳ ತೊನೆದಾಟವನ್ನು ಮತ್ತು ಕುಚದ್ವಯಗಳ ಕುಣಿದಾಟವನ್ನು ನೋಡಲು, ವಿಶೇಷವಾಗಿ ಸಿಂಗರಿಸಿಕೊಂಡು ಸಿದ್ಧರಾದರು. ಹೊರಗೆ ಹೋಗುವವರಿಗೆ ಊಟ ಹೊರಗಡೆಯೇ ಎಂದು ಪ್ರಕಟಿಸಿದ ಟೂರ್ ಮ್ಯಾನೇಜರ್. ಇಲ್ಲೇ ಇದ್ದವರ ಬಗ್ಗೆ ಚಕಾರವೆತ್ತಲಿಲ್ಲ, ಮ್ಯಾನೇಜರ್ ಮಹಾನುಭಾವ ಈ ವಿಹಾರಕ್ಕೆ ಎಷ್ಟೇ ಪ್ರಚೋದಿಸಿದರೂ ನಾವು ಜಗ್ಗಲಿಲ್ಲ, ಪ್ರವಾಸದ ಉದ್ದಕ್ಕೂ ನಮ್ಮ ಸೂಟ್‌ಕೇಸುಗಳನ್ನು ಹೊತ್ತು, ಎತ್ತಿ ಇಳಿಸಿ, ಸಾಕಾಗಿಹೋಗಿತ್ತು. ಈ ಒಂದು ದಿನ ಹೋಟೆಲಿನಲ್ಲೆ ಸಂಪೂರ್ಣ ರೆಸ್ಟ್ ತೆಗೆದುಕೊಳ್ಳುವುದೆಂದು ನಿರ್ಧರಿಸಿದೆವು. ಅಂದು ಭಾನುವಾರ ಬೇರೆ. ಬೆಳಗಿನ 'ಬ್ರೆಕ್‌ಫಾಸ್ಟ್'ನಲ್ಲಿ ಎಲ್ಲರೂ ಸೇರಿದ್ದೆವು. ಕೆಲವರು ಪ್ಯಾರಿಸ್ ಸೆಂಟುಗಳನ್ನು ನಾಚಿಸು




CAMBRIDGE
UNIVERSITY PRESS

www.cambridgeindia.org

# World's Best Dictionaries

**Cambridge Advanced Learner's Dictionary**

Paperback
9780521686846
Rs. 425.00

Paperback + CD-ROM
9780521686839
Rs. 495

Hardback + CD-ROM
9780521866958
Rs. 595.00

New




**Cambridge Learner's Dictionary** *(3rd Ed.)*

Book only
9780521714952
Rs. 225.00
Book + CD-ROM
978052174969
Rs. 375.00




**Cambridge Essential English Dictionary**

Paperback
9780521618816
Rs. 109.00

New




**Cambridge Idioms Dictionary** *(2nd Ed.)*

Paperback
9780521702430
Rs. 220.00

New




**Cambridge Phrasal Verbs Dictionary** *(2nd Ed.)*

Paperback
9780521698580
Rs. 200.00

New




**Cambridge English Pronouncing Dictionary** *(17th Ed.)*

Paperback
9780521698603
Rs. 240.00
Paperback + CD-ROM
9780521698597
Rs. 375.00

**Cambridge University Press India Private Limited**
C-22, Brigade MM, K.R. Road, Jayanagar, Bangalore-560070
Tel.: +91 80 65593388, 26764817, 26762764 Fax: +91 80 26761322
Email: cupbang@cupind.com

, ಸೆಂಟುಗಳನ್ನು ಪೂಸಿಕೊಂಡಿದ್ದರು. ಲಕಲಕನೆ ಯುತ್ತಿದ್ದರು. ಪ್ಯಾರಿಸ್ ನಗರದಲ್ಲಿ ಸುತ್ತಾಡಲು ಂಕರ ಸಿದ್ಧತೆ ನಡೆಸಿದ್ದರು. ಯೂರೋಪಿನಲ್ಲಿ ಸಸ್ಯಾಹಾರಿಗಳಿಗೆ ಫಜೀತಿ ಹೆಚ್ಚು.

ನಾವು 'ಬ್ರೇಕ್‌ಫಾಸ್ಟ್'ಗೆ ಮಾಮೂಲಿ ಬ್ರೆಡ್, ್, ಬಿಸ್ಕತ್, ಆಪಲ್ ಜ್ಯೂಸ್ ಹಾಗೂ ಹಸಿರು ್‌ಗಳನ್ನು ತಂದಿಟ್ಟುಕೊಂಡೆವು. ಎರಡು ಬ್ರೆಡ್ ತಿಂದು ಮೂರನೆಯದನ್ನು ತಿನ್ನುತ್ತಿದ್ದಂತೆ 'ಕಟುಂ' ತು. ಪಕ್ಕದಲ್ಲೇ ಇದ್ದ ಸ್ವಾಮಿ ''ಏನು ?'' ಎಂದರು. ಹುಷಾರಾಗಿ ತೆಗೆದು ನೋಡಿದೆ. ಒಂದು ಸಂದಿ ಕಾಳಿನಷ್ಟು ಬಿಳಿ ಕಲ್ಲು, ತೆಗೆದು ತೋರಿಸಿದೆ. ನ್ನು ತಯಾರು ಮಾಡಿದವರೂ ಮನುಷ್ಯರೇ . ಮುಂದುವರಿದ ರಾಷ್ಟ್ರಗಳಲ್ಲೂ ಕೆಟ್ಟ ಬ್ರೆಡ್ ತುವ ಸಂಪೂರ್ಣ ಸ್ವಾತಂತ್ರ್ಯವಿದೆ'' ಎಂದು ಕಿ ಹಾರಿಸಿ, ಜೋರಾಗಿ ನಕ್ಕರು. ನಾನು ಆ ಸ್ ಬ್ರೆಡ್ಡನ್ನು ಬಿಟ್ಟು, ಆಪಲ್ ಜ್ಯೂಸ್‌ಅನ್ನು ಂದು ಗ್ಲಾಸ್ ಕುಡಿದು ಸುಮ್ಮನಾದೆ. ಇದನ್ನು ಅಲ್ಲಿ ರಿಗಾದರೂ ಹೇಳಲೂ ಕೇಳಲೂ ಅಂದು ವಾರ. ಇಂಗ್ಲಿಷ್ ಬರುವ ಏಕೈಕ ಹೆಣ್ಣುಮಗಳಿಗೂ ು ರಜೆ. ನಮ್ಮ ಮನೆಯವರು ಮತ್ತು ಚಂದ್ರಾ ಸಂ, ಆಪತ್ಕಾಲಕ್ಕಿರಲಿ ಎಂದು ಒಂದೆರಡು ಸೇಬು ನ್ನ ತೆಗೆದಿಟ್ಟುಕೊಂಡರು. ಹೊಟ್ಟೆ ಚುರುಗುಟ್ಟುತ್ತಿತ್ತು. ೇಟೆಲನ್ನು ಮತ್ತು ನಮ್ಮ ಟೂರ್ ಮ್ಯಾನೇಜರನ್ನು ದಲ್ಲಿ ಬೈದಾಡಿಕೊಂಡು ನಮ್ಮ ನಮ್ಮ ರೂಮಿನ ಹೆಜ್ಜೆಹಾಕಿದೆವು. ಸ್ವಾಮಿಯವರು ಹೋಟೆಲಿನ ವನದಲ್ಲಿ ಸಿಗರೇಟು ಸೇದುವ ಉಮೇದನ್ನು ಡಿಸಿದರು. ನಾವೆಲ್ಲಾ ಹೋಟೆಲನ್ನು ಒಂದು ಕ್ಷಿಣೆ ಹಾಕಿದೆವು. ಅಚ್ಚುಕಟ್ಟಾದ ಚಿಕ್ಕ ಉದ್ಯಾನವನ. ನ ದಿನ ಮಳೆ ಬಂದಿದ್ದರಿಂದ ಹುಲ್ಲುಹಾಸು ತಾಜಾ ತ್ತು. ಸುಮಾರು ಮೂರು ನಾಲ್ಕು ಕಿಲೋಮೀಟರ್ ಲೆಯಲ್ಲಿ ಹೋಟೆಲುಗಳಾಗಲಿ, ಸಣ್ಣಪುಟ್ಟ ಅಂಗಡಿ ಗಲಿ ಇಲ್ಲ ಎಂಬುದನ್ನು, ಸರ್ವೆ ನಡೆಸಿದ ಬಂಗಾಲಿ ಪತಿಗಳು ಖಾತರಿಪಡಿಸಿದರು. ''ಹಾಳಾಗಿ ಹೋಗಲಿ'' ು ನಮ್ಮ ನಮ್ಮ ರೂಮುಗಳನ್ನು ಸೇರಿಕೊಂಡೆವು. ದ ಸಮಯದಲ್ಲಿ ಭೇಟಿಯಾಗೋಣ ಎಂದು ಾಡಿಕೊಂಡೆವು. ನಾನು ಮೊದಲೇ ಡಯಾಬಿಟಿಕ್. ನ ಉಪಹಾರ ಅಧ್ವಾನವಾಗಿತ್ತು. ಔಷಧಿ ಬೇರೆ ುಕೊಂಡದ್ದರಿಂದ, ಹೊಟ್ಟೆ ಸಿಕ್ಕಾಪಟ್ಟೆ ಚುರು ುತ್ತಿತ್ತು. ಪಾರದರ್ಶಕ ಫ್ರಿಜ್‌ನಲ್ಲಿ ಕಾಣುವುದೆಲ್ಲಾ ರೋ ಭಯದಿಂದ ಮುಟ್ಟುವಹಾಗಿಲ್ಲ. ಹಾಗೇ ಕೊಂಡೆವು. ನನಗಂತೂ ಹೇಗೆ ಹೊರಳಾಡಿದರೂ ಬರಲಿಲ್ಲ. ನನ್ನ ಹೆಂಡತಿ, ಲಯಬದ್ಧವಾದ ಕೆಯೊಂದಿಗೆ ಆನಂದವಾಗಿ ಸೊಗಸಾದ ುಲ್ಲಿ ಮುಳುಗಿದ್ದಳು. ನನಗೆ ಹಸಿವಿನ ತಾಂಡವ ೇ ಪ್ರಾರಂಭವಾಯಿತು. ಬೇಂದ್ರೆಯವರ

ಪ್ರಾಣದೇವನು ನೀ -
ಪ್ರಾಣನಾಗುತ ಅಂದ
ಅನ್ನ ದೇವರು ಮಾತ್ರ
ಇನ್ನೂ ಬರಲಿಲ್ಲೋ
ಇನ್ನೂ ಬರಲಿಲ್ಲಾ'

– ಕವನ ನೆನಪಾಯಿತು. ನಿದ್ದೆ ಬಾರದೆ ಕಾರಿಡಾರ್‌ನಲ್ಲಿ ಠಳಾಯಿಸಲು ಹೊರಬಿದ್ದೆ. ನಮ್ಮ ಹಾಗೇ ಹೋಟೆಲಿನಲ್ಲೇ ಉಳಿದವರಲ್ಲಿ ಕೆಲವರು, ಊರಿನಿಂದ ತಂದಿದ್ದ ತಿಂಡಿ ಬುತ್ತಿಗಳನ್ನು ಬಿಚ್ಚಿದ್ದರು. ಅರೆತೆರೆದ ಬಾಗಿಲುಗಳಿಂದ ಕಣ್ಣಿಗೆ ಬಿದ್ದು, ನನ್ನ ಹಸಿವು ಹೆಚ್ಚಾಯಿತು. ಕೊಠಡಿಗೆ ಬಂದು ದೊಪ್ಪನೆ ಬಿದ್ದುಕೊಂಡೆ. ತಟ್ಟನೆ ಮಧ್ಯಾಹ್ನ ಎಚ್ಚರವಾಯಿತು. ನಾನು ಮತ್ತು ನನ್ನ ಹೆಂಡತಿ ಲಗುಬಗೆಯಿಂದ ಸಿದ್ಧರಾದೆವು. ನಾನು ನನ್ನ ಮಾತ್ರೆಗಳನ್ನು ತೆಗೆದುಕೊಂಡು, ಊಟಕ್ಕೆ ಓಡುವ ಸ್ಥಿತಿಯಲ್ಲಿದ್ದೆ. ಸ್ವಾಮಿ ದಂಪತಿಗಳು ಆಗಲೇ ರೂಮಿನಿಂದ ನಿರ್ಗಮಿಸಿದ್ದರು. ಅವರಿಗೂ ಹಸಿವಾಗಿರಬೇಕು ಎಂದುಕೊಂಡು ಸರಸರನೆ ಲಿಫ್ಟ್ ಕಡೆಗೆ ಜೋರಾಗಿ ಹೆಜ್ಜೆ ಹಾಕಿದೆವು. ಕೆಳಗೆ ಹೋಗಿ ನೋಡಿದರೆ ಸ್ವಾಮಿ ದಂಪತಿಗಳು ನಾಪತ್ತೆ. ಹೋಟೆಲಿನ ಊಟದ ಮನೆಯಲ್ಲಿ ಮಾಮೂಲಿ ಗಲಿಬಿಲಿ ಸದ್ದಿಲ್ಲ. ಅಲ್ಲಿ ಗಾಜಿನ ಲೋಟಗಳು, ಪಿಂಗಾಣಿ ತಟ್ಟೆಗಳು ಮತ್ತು ಲಕಲಕನೆ ಹೊಳೆಯುವ ಚಮಚಗಳು ಸುಮ್ಮನೆ ಮಲಗಿದ್ದುವು. ನನಗೋ ಸುತ್ತಿಕೊಂಡಿದ್ದ ಆಯಾಸದಿಂದ, ಅಲ್ಲೆ ಇದ್ದ ಸೋಫಾದ ಮೇಲೆ ಕೂತುಕೊಂಡೆ. ಅಂದು ಭಾನುವಾರವಾದ್ದರಿಂದ ಹೋಟೆಲಿನಲ್ಲಿ ಊಟದ ವ್ಯವಸ್ಥೆ ಇರಲಿಲ್ಲ. ನಮ್ಮ ಟೂರ್ ಮ್ಯಾನೇಜರ್ ಪರ್ಯಾಯ ವ್ಯವಸ್ಥೆಯನ್ನೂ ಮಾಡಿರಲಿಲ್ಲ. ಈ ಪುಣ್ಯಾತ್ಮನ ದಯೆಯಿಂದ ಒಂದು ಕಪ್ ಕಾಫಿ ಕೂಡ ದೊರೆಯುತ್ತಿರಲಿಲ್ಲ. ಆದರೆ ಹೋಟೆಲ್ ಪಬ್ ತೆರೆದಿತ್ತು, ತುಂಬಿತ್ತು. ಜೀವಂತಿಕೆ ತುಂಬಿ ತುಳುಕುತ್ತಿತ್ತು. ಬೀರ್, ವಿಸ್ಕಿಗಳನ್ನು ಹೀರುತ್ತಾ ಸೊಗಸಾಗಿ ಹರಟೆ ಹೊಡೆಯುತ್ತಿದ್ದರು. ನನಗೋ ತಡೆಯಿಲ್ಲದ ಆಕಳಿಕೆ, ಸುಸ್ತೋ ಸುಸ್ತು.

''ನಿಮಗೇನಾಯಿತು ಎಂಬುದನ್ನು ನೀವೇ ಬರೆದರೆ ಚೆನ್ನಾಗಿರುವುದಿಲ್ಲ. ನೀವು ಹೇಗಿದ್ದಿರಿ, ಹೇಗಾಡುತ್ತಿದ್ದಿರಿ ಎಂಬುದು ನಿಮಗೇ ಗೊತ್ತಿಲ್ಲ. ಆ ಭಾಗವನ್ನು ನಾನೇ ಬರೆಯುತ್ತೇನೆ'' ಎಂದು ಉಡದ ಪಟ್ಟು ಹಾಕಿದಳು ನನ್ನ ಅರ್ಧಾಂಗಿ. ನಾನು ಬೇರೆ ದಾರಿ ಕಾಣದೆ ಒಪ್ಪಿಕೊಂಡೆ.




ಗಂಡನ ಬಂಡವಾಳದ ಬಗ್ಗೆ ಹೆಂಡತಿಗೆ ಹೇಳುವ ಹಕ್ಕು ಇದ್ದೇ ಇದೆ. ನಾನು ಬೇಡವೆಂದರೂ ತಮ್ಮ ತೋಂಡಿಯಲ್ಲೇ ಜಗತ್ತಿಗೆಲ್ಲಾ ಸಾರಿಬಿಡುತ್ತಾರೆ. ಅಂದಿನ ನನ್ನ ತಿಕ್ಕಲಾಟಗಳನ್ನು ಡಂಗೂರ ಹೊಡೆಯುವ ಸುವರ್ಣಾವಕಾಶವನ್ನು ಅವರು ಬಿಟ್ಟುಕೊಡುವರೆ? ಹಕ್ಕೊತ್ತಾಯದಿಂದ, ನನ್ನ ಮುಂದಿನ ಸ್ಥಿತಿಯನ್ನು ಸಾಕ್ಷಾತ್ ಸರಸ್ವತಿಯ ಬರಹದಿಂದಲೇ ತಿಳಿದುಕೊಳ್ಳಿ.

**ಕೋಕ್ ಮತ್ತು ಆಪಲ್**

ಸ್ವದೇಶವನ್ನೇ ಸರಿಯಾಗಿ ನೋಡದ ನನಗೆ, ವಿದೇಶಯಾತ್ರೆ ಕೂಡಿಬಂದಾಗ ಏಕಕಾಲಕ್ಕೆ ಆಶ್ಚರ್ಯ ಮತ್ತು ಸಂತೋಷ. ನನ್ನ ಗಂಡ ಸಂಪ್ರದಾಯದ ಕುಟುಂಬದಿಂದ ಬಂದರೂ ದೇವರು-ದಿಂಡಿರು ಎಂದರೆ ಉದಾಸೀನ. ಇನ್ನು ತೀರ್ಥಕ್ಷೇತ್ರಗಳನ್ನು, ಪುಣ್ಯಕ್ಷೇತ್ರಗಳನ್ನು ನೋಡುವ ಭಾಗ್ಯ ಎಲ್ಲಿಂದ ಬರಬೇಕು ಎಂದುಕೊಂಡಿದ್ದೆ. ಈ ದಿಢೀರ್ ಯೂರೋಪ್ ಪ್ರವಾಸ, ನನ್ನನ್ನು ಕುಣಿದು ಕುಪ್ಪಳಿಸುವಂತೆ ಮಾಡಿತು. ಮನೆಯನ್ನು ಮಕ್ಕಳಿಗೆ ಒಪ್ಪಿಸಿ, ತರಾತುರಿ ಸಿದ್ಧಳಾಗಿ ಬಿಟ್ಟೆ. ನನ್ನ ಪಾಸ್‌ಪೋರ್ಟ್ ಮತ್ತು ಏರ್ ಟಿಕೆಟುಗಳನ್ನು ನೋಡಿ ನೋಡಿ ಪುಳಕಗೊಂಡೆ. ವಿದೇಶದಲ್ಲಿಟ್ಟ ಒಂದೊಂದು ಹೆಜ್ಜೆಯೂ ನನಗೆ ಹೊಸ ಅನುಭವ. ನನ್ನ ಪುಟ್ಟ ಡೈರಿಯಲ್ಲಿ ಎಲ್ಲವನ್ನೂ ಗುರುತು ಹಾಕಿಕೊಳ್ಳುತ್ತಿದ್ದೆ. ಇಲ್ಲಿಗೂ ಅಲ್ಲಿಗೂ ಹಗಲು ರಾತ್ರಿಗಳಲ್ಲಿ ಕಂಡುಬರುವ ವ್ಯತ್ಯಾಸವೇ ಒಂದು ಸೋಜಿಗ. ಸಹ ಪ್ರವಾಸಿಗರ ಉಲ್ಲಾಸ, ವಿಚಾರಗಳಲ್ಲಿ ತಲ್ಲೀನಳಾಗಿ ಬಿಟ್ಟೆ. ಬೇರೆ ಬೇರೆ ನಾಡಿನ ಜನ, ಬೇರೆ ಬೇರೆ ಭಾಷೆಯ ಜನ ನನ್ನ ಹರಕು-ಮುರುಕು ಇಂಗ್ಲಿಷಿನಿಂದ ಹತ್ತಿರವಾದರು. ಬದುಕಿನಲ್ಲಿ ಭಾಷೆಗಿಂತ ಭಾವನೆಗಳು ಮುಖ್ಯ ಎಂಬುದು ಅರಿವಿಗೆ ಬಂತು. ಹದಿನೈದು ದಿನದಲ್ಲಿ ನಾವೆಲ್ಲಾ ಒಂದೇ ಕುಟುಂಬದ ಸದಸ್ಯರಾಗಿ ಬಿಟ್ಟೆವು.

ನಾವು ಪ್ಯಾರಿಸ್ ತಲುಪಿದಾಗ, ನನಗಾದ ಸಂತೋಷ ಅಷ್ಟಿಷ್ಟಲ್ಲ. ಪುಸ್ತಕಗಳಲ್ಲಿ ಓದಿ, ಅವರಿವರಿಂದ ಕೇಳಿ ಪ್ಯಾರಿಸ್ ಬಗ್ಗೆ ದೊಡ್ಡ ಕನಸನ್ನೇ ಕಟ್ಟಿಕೊಂಡಿದ್ದೆ. ನಾನು ನೋಡಿದ ರಸ್ತೆಗಳು ಜನನಿಬಿಡವಾಗಿದ್ದುವು. ಫುಟ್‌ಪಾತ್‌ನಲ್ಲೇ ಬಿದ್ದಿರುವ ಬಾಟಲುಗಳು, ಸಿಗರೇಟು ತುಂಡುಗಳು, ಕಾಗದದ ಚೂರುಗಳು, ರಸ್ತೆ ಬದಿಯಲ್ಲೇ ಮೇಯುವ ಜನ, ವಿಚಿತ್ರ ವೇಷಗಳಲ್ಲಿ ಭಿಕ್ಷೆ ಬೇಡುವ ಜನರನ್ನು ಕಂಡಾಗ, ನನ್ನ ಪ್ಯಾರಿಸ್ ಕನಸು ಕುಸಿದು ಬಿತ್ತು. ನಾನು ಕಂಡ ಪ್ಯಾರಿಸ್ಸಿನಲ್ಲಿ ಇದೆಲ್ಲಾ ಕಂಡಿತೊ ಅಥವಾ ನಿಜವಾದ ಪ್ಯಾರಿಸ್ಸನ್ನು ನಾನು ನೋಡಲೇ ಇಲ್ಲವೊ ಗೊತ್ತಿಲ್ಲ. ಇದು ನನ್ನ ಮಿತಿಯೂ ಇರಬಹುದು. ಒಟ್ಟಿನಲ್ಲಿ ನಾನು ಸುತ್ತಾಡಿದ ಬೀದಿಗಳು ಮುಂಬಯಿಯನ್ನು ನೆನಪಿಗೆ ತರುತ್ತಿದ್ದುವು. ಒಂದೆರಡು ರಸ್ತೆಗಳನ್ನು ನೋಡಿ, ಒಂದೆರಡು ಕಟ್ಟಡಗಳನ್ನು ನೋಡಿ, ದೇಶದ ರೀತಿ-ನೀತಿಗಳ ಬಗ್ಗೆ, ಅವರ ಜೀವನಶೈಲಿಯ ಬಗ್ಗೆ ತೀರ್ಮಾನಗಳನ್ನು ತೆಗೆದುಕೊಳ್ಳುವುದು ಸರಿಯಲ್ಲ ವೆಂದು ನನ್ನವರು ಬಾಯಿ ಮುಚ್ಚಿಸುತ್ತಿದ್ದರು. ನಾವು ಅಲ್ಲಿನ ತರಾವರಿ ಸೆಂಟುಗಳನ್ನು, ಬಗೆಬಗೆಯ ಬಟ್ಟೆ-ಬರೆಗಳನ್ನು ಕೊಳ್ಳಲಾಗದಿದ್ದರೂ ಅವುಗಳನ್ನು ನಿಂತು ನೋಡಲು ಅವಕಾಶ

## ಕನ್ನಡ ವಿಶ್ವವಿದ್ಯಾಲಯ, ಹಂಪಿ ಪ್ರಸಾರಾಂಗದ ಹೊಸ ಪ್ರಕಟಣೆಗಳು


೧. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ — ಸಂ. ಡಾ॥ಎಚ್.ಎಸ್.ಶ್ರೀಮತಿ — ೪೦೦.೦೦
೨. ಮಾತು ತಲೆಯೆತ್ತುವ ಬಗೆ — ಸಂ. ರಹಮತ್ ತರೀಕೆರೆ — ೧೫೦.೦೦
೩. ಇಲ್ಲಿ ಯಾರೂ ಮುಖ್ಯರಲ್ಲ — " — ೧೫೦.೦೦
೪. ಕರ್ನಾಟಕದ ನಾಥಪಂಥ — " — ೧೨೦.೦೦
೫. ಕನ್ನಡ ಸಂಶೋಧನೆ : ತಾತ್ವಿಕ ವಿಚಾರ — " — ೬೦.೦೦
೬. ಇಂಗ್ಲಿಷ್ ಗೀತಗಳು : ಸಾಂಸ್ಕೃತಿಕ ಮುಖಾಮುಖಿ — " — ೮೦.೦೦
೭. ಹಂಪಿ ಸಂಪುಟ — ಸಂ. ದೇವರಕೊಂಡಾರೆಡ್ಡಿ — ೧೫೦.೦೦
೮. ಜನಪದ ನುಡಿಗಟ್ಟುಗಳ ಕೋಶ — ಪ್ರೊ॥ ಸುಧಾಕರ — ೨೦೦.೦೦
೯. ಕುವೆಂಪು ದರ್ಶನ — ದೇ.ಜ.ಗೌ. — ೩೦೦.೦೦
೧೦. **The Sign** — *Ed: O. L. Nagabushana Swamy* — ೧೫೦.೦೦
(Vachana of 12th Century)
೧೧. **Strings and Cymbals** — *Ed. & C. N. Ramachandran* — ೨೦೦.೦೦
(Selection from Kannada Oral Epics)
೧೨. **Golden Flock** — *Ed. Translator: D. A. Shankar* — ೧೫೦.೦೦
(Rama Dhanya Charita and works of Kanakadasa)
೧೩. ಕನ್ನಡ ಜಗತ್ತು ಅರ್ಧಶತಮಾನ — ಕೆ. ವಿ. ನಾರಾಯಣ — ೧೨೦.೦೦
೧೪. ಡಾ॥ ಸಿಂಪಿ ಲಿಂಗಣ್ಣ ಸಮಗ್ರ ಜನಪದ ಸಂಪುಟ — ಸಂ. ಪ್ರೊ॥ ವೀರೇಂದ್ರ ಸಿಂಪಿ — ೩೦೦.೦೦
೧೫. ತುಳು ಸಾಹಿತ್ಯ ಚರಿತ್ರೆ — ಪ್ರ. ಸಂ: ಡಾ॥ ಬಿ. ಎ. ವಿವೇಕ ರೈ — ೧೦೦೦.೦೦

### ಹೊನ್ನಾರು ಮಾಲೆ (ಶೇ.೨೦ ರಿಯಾಯಿತಿ)

೧. ಗತಿಪ್ರಜ್ಞೆ — ಪ್ರೊ॥ ಜಿ. ವೆಂಕಟಸುಬ್ಬಯ್ಯ — ೮೦.೦೦
೨. ಕನ್ನಡ ಚಿಂತನೆ — ಪ್ರೊ॥ ದೇ. ಜವರೇಗೌಡ — ೮೦.೦೦
೩. ಕನ್ನಡ ಕಾವ್ಯತತ್ವ ಚಿಂತನೆ — ಪ್ರೊ॥ ಜಿ. ಎಸ್. ಶಿವರುದ್ರಪ್ಪ — ೮೦.೦೦
೪. ರಕ್ತಿ ರೂಪಣೆ — ಪ್ರೊ॥ ಸಿ. ಎನ್. ರಾಮಚಂದ್ರನ್ — ೮೦.೦೦
೫. ಸಾಹಿತ್ಯ ಸಮಾಹಿತ — ಡಾ॥ ಚನ್ನವೀರ ಕಣವಿ — ೮೦.೦೦
೬. ಕಡೆಗೋಲು — ಡಾ॥ ಹಂಪ ನಾಗರಾಜಯ್ಯ — ೮೦.೦೦
೭. ಜೊಂಬಾಳ — ಡಾ॥ ಕಮಲ ಹಂಪನಾ — ೮೦.೦೦
೮. ಛಂದೋಂಬುಧಿ — ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ — ೬೦.೦೦
೯. ಜನಸಂಸ್ಕೃತಿ — ಡಾ॥ ಸಿದ್ಧಲಿಂಗಯ್ಯ — ೮೦.೦೦
೧೦. ಸಮುಚ್ಚಯ — ಪ್ರೊ॥ ಎಂ. ರಾಮಚಂದ್ರ — ೮೦.೦೦
೧೧. ಆದಿವಾಸಿ ಸಮುದಾಯಗಳ ಅಭಿವೃದ್ಧಿ — ಸಿ. ಪಾರ್ವತಮ್ಮ — ೬೦.೦೦
೧೨. ಪರಿಕಲ್ಪನೆ — ಪ್ರೊ॥ ಎಂ. ಎಂ. ಕಲಬುರ್ಗಿ — ೮೦.೦೦
೧೩. ಸಾಹಿತ್ಯಶೀಲನ — ಡಾ॥ ಸಿ. ಪಿ. ಕೃಷ್ಣಕುಮಾರ್ — ೮೦.೦೦
೧೪. ಸಾಹಿತ್ಯ ಶೋಧನ — ಪ್ರೊ॥ ಎಚ್. ಜೆ. ಲಕ್ಕಪ್ಪಗೌಡ — ೮೦.೦೦
೧೫. ಸ್ಥಿತಿಪ್ರಜ್ಞೆ — ಪ್ರೊ॥ ಜಿ.ಎಚ್.ನಾಯಕ್ — ೮೦.೦೦
೧೬. ತುಳುವ ಜಾನಪದ ಲೋಕ : ಕೆಲವು ನೋಟಗಳು — ಪ್ರೊ॥ ಅಮೃತ ಸೋಮೇಶ್ವರ — ೮೦.೦೦
೧೭. ಪ್ರಮಾಣು — ಪ್ರೊ॥ ಗಿರಡ್ಡಿ ಗೋವಿಂದರಾಜ — ೮೦.೦೦
೧೮. ಕಾವ್ಯಕಾರಣ — ಪ್ರೊ॥ ಕೆ. ವಿ. ತಿರುಮಲೇಶ — ೮೦.೦೦
೧೯. ಮೇಜು ಮತ್ತು ಬಡಗಿ — ವೈದೇಹಿ — ೮೦.೦೦
೨೦. ಸಮಾಜ, ಸಂಸ್ಕೃತಿ ಮತ್ತು ಮಹಿಳೆ — ಸಾರಾ ಅಬೂಬಕರ್ — ೮೦.೦೦

### ಸಮಗ್ರ ಜೈನ ಸಾಹಿತ್ಯ ಮಾಲೆ

೧. ಪಂಪ ಸಂಪುಟ — ಪ್ರೊ॥ ಟಿ. ವಿ. ವೆಂಕಟಾಚಲ ಶಾಸ್ತ್ರೀ — ೧೦೦.೦೦
೨. ಶಿವಕೋಟ್ಯಾಚಾರ್ಯ - ಚಾವುಂಡರಾಯ ಸಂಪುಟ — ಪ್ರೊ॥ ಕಮಲಾ ಹಂಪನಾ — ೧೦೦.೦೦
೩. ರನ್ನ ಸಂಪುಟ — ಪ್ರೊ॥ ಹಂಪ ನಾಗರಾಜಯ್ಯ — ೧೦೦.೦೦
೪. ಪೊನ್ನ - ಕಮಲಭವ ಸಂಪುಟ — ಪ್ರೊ॥ ಹಂಪ ನಾಗರಾಜಯ್ಯ — ೧೦೦.೦೦
೫. ಇಮ್ಮಡಿ ನಾಗವರ್ಮ ಸಂಪುಟ — ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ — ೧೦೦.೦೦
೬. ಶಾಂತಿನಾಥ - ಆಂಡಯ್ಯ ಸಂಪುಟ — ಪ್ರೊ॥ ಸಿ. ವಿ. ನಾರಾಯಣ — ೧೦೦.೦೦
೭. ನಾಗಚಂದ್ರ ಸಂಪುಟ — ಡಾ॥ ಶಾಂತಿನಾಥ ದಿಬ್ಬದ — ೧೦೦.೦೦
೮. ನಯಸೇನ ಸಂಪುಟ — ಪ್ರೊ॥ ಎಸ್. ಪಿ. ಪಾಟೀಲ — ೧೦೦.೦೦
೯. ನೇಮಿಚಂದ್ರ ಸಂಪುಟ — ಪ್ರೊ॥ ದೇ. ಜವರೇಗೌಡ — ೧೦೦.೦೦
೧೦. ಬಂಧುವರ್ಮ ಸಂಪುಟ — ಬಿ. ಎಸ್. ಸಣ್ಣಯ್ಯ — ೧೦೦.೦೦
೧೧. ಆಚಣ್ಣ - ಅಗ್ಗಳ ಸಂಪುಟ — ಜಿ. ಜಿ. ಮಂಜುನಾಥನ್ — ೧೦೦.೦೦
೧೨. ಜನ್ನ ಸಂಪುಟ — ಪ್ರೊ॥ ಸಿ. ಪಿ. ಕೃಷ್ಣಕುಮಾರ್ — ೧೦೦.೦೦
೧೩. ಇಮ್ಮಡಿ ಗುಣವರ್ಮ - ಪಾರ್ಶ್ವಪಂಡಿತ ಸಂಪುಟ — ಡಾ॥ ವೈ.ಸಿ.ಭಾನುಮತಿ — ೧೦೦.೦೦
೧೪. ಮಧುರ-ಬಾಹುಬಲಿ ಸಂಪುಟ — ಪ್ರೊ॥ ಎನ್. ಬಸವಾರಾಧ್ಯ — ೧೦೦.೦೦
೧೫. ಮಂಗರಸ ಸಂಪುಟ — ಡಾ॥ ಬಿ.ವಿ.ಶಿರೂರ — ೧೦೦.೦೦
೧೬. ರತ್ನಾಕರವರ್ಣಿ ಸಂಪುಟ — ಪ್ರೊ॥ ಎಂ.ಜಿ. ಬಿರದಾರ — ೧೦೦.೦೦
೧೭. ಸಾಳ್ವ ಸಂಪುಟ — ಡಾ॥ ಎಂ. ಎಂ. ಜಯಚಂದ್ರ — ೧೦೦.೦೦
೧೮. ದೇವಚಂದ್ರ ಸಂಪುಟ — ಪ್ರೊ॥ ಎಚ್. ಜೆ. ಲಕ್ಕಪ್ಪಗೌಡ — ೧೦೦.೦೦

### ಪುಸ್ತಕಗಳು ದೊರೆಯುವ ಸ್ಥಳ

**ಮಾರಾಟ ವಿಭಾಗ, ಪ್ರಸಾರಾಂಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ
ದೂರವಾಣಿ ೦೮೩೯೪ - ೨೪೧೩೧೩



**ಕನ್ನಡ ವಿಶ್ವವಿದ್ಯಾಲಯ ಪ್ರಾದೇಶಿಕ ಕಚೇರಿ ಮತ್ತು ಪ್ರಸಾರಾಂಗ ಪುಸ್ತಕ ಮಾರಾಟ ಮಳಿಗೆ**
ಸರ್ಕಾರಿ ಮುದ್ರಣ ತಂತ್ರಜ್ಞಾನ ಸಂಸ್ಥೆ ಕಟ್ಟಡ
ಅರಮನೆ ರಸ್ತೆ, ಬೆಂಗಳೂರು - ೫೬೦ ೦೦೧
ದೂರವಾಣಿ : ೦೮೦ - ೨೨೩೭೨೩೮೮

ಡುತ್ತಿರಲಿಲ್ಲ. ಇನ್ನು ಚೌಕಾಶಿ ಮಾಡಿಕೊಳ್ಳುವ ಯ ದೂರವೇ ಉಳಿಯಿತು. ಇವರು ಮತ್ತು ಸ್ವಾಮಿ ಸರನೆ ಹೋಗಿ ಸೂಪರ್ ಮಾರ್ಕೆಟ್ ಖ್ಯದ್ವಾರಗಳ ಬಳಿ ನಿಂತು ಬಿಡುತ್ತಿದ್ದರು. ಸ್ವಾಮಿ ್ ಬಂದು ಸಿಗರೇಟನ್ನು ಹಚ್ಚಿಬಿಡುತ್ತಿದ್ದರು. ನೆಲ್ಲಿ ತಪ್ಪಿಸಿಕೊಳ್ಳುತ್ತೇವೆಯೊ ಎಲ್ಲಿ ಏನಾಗುವುದೋ ಬ ಗಾಬರಿಯಿಂದ ಇವರುಗಳನ್ನು ಶಪಿಸುತ್ತಾ ದಡನೆ ಓಡಿಬಂದು ಕೂಡಿಕೊಳ್ಳುತ್ತಿದ್ದೆವು.

ಪ್ಯಾರಿಸ್ಸಿನ ಹೊರವಲಯದ 'ನವೋಟಲ್'ನಲ್ಲಿ ಡು ಹಗಲು, ಮೂರು ರಾತ್ರಿಗಳನ್ನು ಕಳೆಯಲೇ ಕಾದ ಪ್ರಸಂಗ ಒದಗಿಬಂತು. ಅದು ನಮ್ಮ ಪಾಲಿಗೆ ಆಗಲೇ ಇಲ್ಲ, ಭಯಂಕರ ಅನುಭವ ುರಾಯಿತು. ಮರೆಯಲಾಗದ ದಿನವಾಯಿತು. ವು ತಂಗಿದ್ದ ಹೋಟೆಲಿನಲ್ಲಿ ಊಟೋಪಚಾರಗಳು ನುವಾರ ಬಂದಾಗಿದ್ದುವು. ಆದರೆ ಪಬ್ಬಿನ ಆನಂದ ಕ್ಕೆ ಹರಿಯುತ್ತಿತ್ತು. ಅನಿರೀಕ್ಷಿತ ಪರಿಸ್ಥಿತಿ ಎದುರಾಗಿ, ಾಸದ ಖುಷಿ ಅಲ್ಲೋಲ ಕಲ್ಲೋಲವಾಯಿತು. ಗಿನ ಉಪಹಾರ ಎಡವಟ್ಟಾದ್ದರಿಂದ, ನಮ್ಮ ನೆಯವರು ಬೆಳಗಿನಿಂದಲೇ ಸಪ್ಪಗಿದ್ದರು. ಮಧ್ಯಾಹ್ನ ಯಾಬಿಟಿಕ್ ಮಾತ್ರೆಗಳನ್ನು ತೆಗೆದುಕೊಂಡು, ಗಿಳಿದ ಮೇಲೆ ಇವರು ಇವರಾಗಿ ಇರಲಿಲ್ಲ. ಪುಟ್ಟ ವಿಷಯಗಳಿಗೆ ಮಿಡಿಗೊಳ್ಳುತ್ತಿದ್ದರು. ಮಾತನಾಡಿ ರೆ ರೇಗಿರೇಗಿ ಬೀಳುತ್ತಿದ್ದರು. ಗೆ ಮೈ ಬೆವರುತ್ತಿತ್ತು. ಮಾತು ಕ ಕಳೆದುಕೊಂಡಿತ್ತು. ನನ್ನೊಳಗಿನ ಕ ತಲ್ಲಣಗಳಿಂದ ಭಯ ಕುಡಿ ಡೆಯತೊಡಗಿತು. ಅಪರಿಚಿತ ಶ, ಅಪರಿಚಿತ ಜನ, ಅಪರಿಚಿತ ಷೆಯಿಂದ ಉಲ್ಬಣಗೊಂಡಿತು. ದು, ಇವರು ಹೀಗೇಕೆ ಆಡುತ್ತಿ ರೆ ಎಂಬುದು ಅರ್ಥವಾಗಲಿಲ್ಲ. ೇನು ಬೇಗ ರೆಡಿಯಾಗಲಿಲ್ಲ, ಅದಕ್ಕೆ ಮಿ-ಚಂದ್ರಾ ಹೋಗಿಬಿಟ್ಟಿದ್ದಾರೆ. ಗೆ ಸಮಯ ಪ್ರಜ್ಞೆ ಇಲ್ಲ, ಯಾವಾಗ ಏನು ಡಬೇಕೆಂದು ಗೊತ್ತಿಲ್ಲ'' ಎಂದು ಮುಖ ಟಿಟ್ಟುಕೊಂಡು, ಧುಮುಗುಡುತ್ತಾ ಎತ್ತರ ದನಿಯಲ್ಲಿ ಬಡಿಸಲು ಪ್ರಾರಂಭಿಸಿದರು. ಅಲ್ಲಿರುವವರು ಂದು ಕೊಳ್ಳುವರೋ ಎಂಬ ಮುಜುಗರ ಂಟಾಯಿತು. ಪ್ಯಾರಿಸ್ಸಿಗೆ ಬಂದರೂ ುಕೊಳ್ಳುವುದು ತಪ್ಪಲಿಲ್ಲ ವೆಂದು ಬೇಸರವಾಯಿತು. ರ ಗೊಣಗಾಟದ ಸ್ವಗತ ನಿಲ್ಲಲೇ ಇಲ್ಲ.

ಸ್ವಾಮಿ ದಂಪತಿಗಳು ರೂಮಿಗೆ ಹೋಗಿರ ುದೆಂದು ರಿಸಿಪ್ಷನ್ ಕೌಂಟರ್ ಹತ್ತಿರ ಹೋಗಿ ಾರಿಸಲು ಪ್ರಯತ್ನಪಟ್ಟೆ. ನನ್ನ ಹರಕು-ಮುರುಕು ಗ್ಲಿಷ್ ಪ್ರಯೋಜನಕ್ಕೆ ಬರಲಿಲ್ಲ. ಬೊಂಬೆಯಂತೆ ುತಿದ್ದ ಕೃಷ್ಣ ಸುಂದರಿ ಪ್ರತಿಕ್ರಿಯೆ ತೋರಲಿಲ್ಲ. ನನಗೆ ್ಬಂತು. ಲಿಫ್ಟ್ ಹತ್ತಿರ ಹೋದರೆ, ಅದು ಮೇಲಕ್ಕೆ ೋಗಿತ್ತು. ಮೂರನೇ ಮಹಡಿ ಹತ್ತಿಕೊಂಡು ೋಗುವುದರೊಳಗೆ ಕಾಲುಗಳು ಬಿದ್ದುಹೋದವು. ಜೊತೆಗೆ ಸ್ವಾಮಿ ದಂಪತಿಗಳೂ ರೂಮಿಗೆ ಬಂದಿರಲಿಲ್ಲ. ವಿಧಿಯಿಲ್ಲದೆ ಸೋತ ಕಾಲುಗಳಿಂದ ಇಳಿದುಬಂದೆ. ಇವರು ವಟಗುಟ್ಟುವುದನ್ನು ನಿಲ್ಲಿಸಿರಲಿಲ್ಲ. ನನ್ನ ಭಯ ಕ್ಷಣಕ್ಷಣಕ್ಕೂ ಹೆಚ್ಚಾಯಿತು. ಅಷ್ಟರಲ್ಲಿ ಸ್ವಾಮಿ ದಂಪತಿಗಳು ಪಬ್ಬಿನ ಅಂಗಳದಿಂದ ಹೊರಬಿದ್ದರು. ಅವರು ಒಂದೆರಡು ಪೆಗ್ಗು ಬೀರು, ವಿಸ್ಕಿ ಸೇವಿಸಿ, ಆಲೂ ಫಿಂಗರ್ ಚಿಪ್ಸ್ ರುಚಿ ನೋಡಿದ್ದರು. ತರಕಾರಿಗಳನ್ನೇ ಸರಿಯಾಗಿ ತಿನ್ನದವರು ಇನ್ನು ಬೀರು-ವಿಸ್ಕಿ ಕುಡಿಯೋ ತಾಕತ್ತು ಎಲ್ಲಿಂದ ಬರಬೇಕು? ಎಷ್ಟೇ ಪರದಾಡಿದರೂ ಆಹಾರ ಸಿಕ್ಕುವುದಿಲ್ಲವೆಂಬುದು ಖಚಿತವಾಯಿತು. ನಾನು, ಚಂದ್ರಾ ಮತ್ತು ಸ್ವಾಮಿ ಇವರನ್ನು ರೂಮಿಗೆ ಸೇರಿಸುವಷ್ಟರಲ್ಲಿ ಸಾಕುಸಾಕಾಯಿತು. ಯಾರು ಮಾತನಾಡಿದರೂ ಮಾತನಾಡುತ್ತಿರಲಿಲ್ಲ. ನಾನು ಮಾತನಾಡಿಸಿದರೆ, ಬಿರುಗಣ್ಣು ಬಿಟ್ಟುಕೊಂಡು ಗುರುಗುಟ್ಟುತ್ತಿದ್ದರು. ನನಗೋ ಒಂದು ಕಡೆ ಭಯ, ಒಂದು ಕಡೆ ಕೋಪ, ನಾನು ಬೇಸರದಿಂದ ಗೋಡೆಯ ಕಡೆ ಮುಖಮಾಡಿಕೊಂಡು ಮಲಗಿಬಿಟ್ಟೆ. ಆಯಾಸಕ್ಕೆ ಹಸಿವಿಗೆ ನಿದ್ದೆ ಆವರಿಸಿತು.



ಚಂದ್ರಾ ಬೆಲ್ ಮಾಡಿದಾಗಲೇ ನನಗೆ ಎಚ್ಚರ. ಇವರು ಹಾಸಿಗೆಯ ಮೇಲೆ ಕಾಣಲಿಲ್ಲ. ಚಂದ್ರಾ ಒಳಗೆ ಬಂದು ''ಮೇಷ್ಟ್ರು, ಒಬ್ಬರೇ ಏನೇನೋ ಮಾತಾಡಿಕೊಂಡು ಕಾರಿಡಾರ್‌ನಲ್ಲಿ ಓಡಾಡುತ್ತಿದ್ದಾರೆ'' ಎಂದರು. ನೋಡಿದರೆ, ಹೋಟೆಲ್ ಕಾರಿಡಾರ್‌ನಲ್ಲಿ ಪಂಚೆಯನ್ನು ಮೇಲೆತ್ತಿ ಕಟ್ಟಿಕೊಂಡು, ಬರೀ ನೆಟ್‌ಬನೀನಲ್ಲಿ ಈ ಕಡೆಯಿಂದ ಆ ಕಡೆಗೆ, ಆ ಕಡೆಯಿಂದ ಈ ಕಡೆಗೆ ಆಗಾಗ ಆಕಳಿಸುತ್ತಾ, ಗೊಣಗುಟ್ಟುತ್ತಾ ಠಳಾಯಿಸುತ್ತಿದ್ದಾರೆ. ''ಏಕೆ? ಏನಾಗುತ್ತಿದೆ? ಪಂಚೆ ಕೆಳಗೆ ಬಿಡಿ. ಒಳಗೆ ಬನ್ನಿ. ಗಲಾಟೆಮಾಡಬೇಡಿ'' ಎಂದು ಅಂಗಲಾಚಿ ಬೇಡಿಕೊಂಡೆ. ನಾನು ಮತ್ತು ಚಂದ್ರಾ ಇವರನ್ನು ರೂಮು ಸೇರಿಸುವಷ್ಟರಲ್ಲಿ ಭೂಮಿ ಆಕಾಶ ಒಂದಾಯಿತು. ಅವರ ಮೊಂಡುತನ, ಒದರಾಟ, ಕಿರಿಚಾಟ ನನ್ನ ಅವಮಾನವನ್ನು ಹೆಚ್ಚಿಸಿತು. ರೂಮಿಗೆ ಬಂದವರೆ ಹಾಸಿಗೆಯ ಮೇಲೆ ದೊಪ್ಪನೆ ಬಿದ್ದರು. ದಿಂಬಿನ ಮೇಲೆ ದಿಂಬು ಹಾಕಿಕೊಂಡು, ಮುಖ ಊದಿಸಿಕೊಂಡು ಮಲಗಿದರು. ತಟ್ಟನೆ ಎದ್ದು ಕೂತು ''ಕಾಕ್ಸ್ ಅಂಡ್ ಕಿಂಗ್ಸ್ ಕಂಪನಿ ಮೇಲೆ ಕೇಸು ಹಾಕುತ್ತೇನೆ'', ''ಟೂರ್ ಮ್ಯಾನೇಜರ್‌ನ ಅಲೆದಾಡಿಸುತ್ತೇನೆ'', ''ಬಸ್ಸಿನ ಮುಂದೆ ಮಲಗಿ ಸತ್ಯಾಗ್ರಹ ಮಾಡುತ್ತೇನೆ'' ಎಂದು ಘೋಷಿಸಿದರು. ''ಒಂದೆರಡು ಆಪಲ್ ಚೂರುಗಳನ್ನು ತಿನ್ನಿ ಸಾರ್, ಸಮಾಧಾನವಾಗುತ್ತೆ'' ಎಂದು ಚಂದ್ರಾ ಬೇಡಿಕೊಂಡರು. ಟೂರ್ ಮ್ಯಾನೇಜರ್‌ಅನ್ನು ಬಾಯಿಗೆ ಬಂದಂತೆ ಬಯ್ಯಲು ಪ್ರಾರಂಭಿಸಿದರು. ಘೋಷಣೆಗಳು ನಿಲ್ಲಲಿಲ್ಲ. ಅಷ್ಟರಲ್ಲಿ ಸ್ವಾಮಿ ಮೇಷ್ಟ್ರು ಆಗಮಿಸಿದರು. ಇವರ ಒರಟು ಮಾತುಗಳನ್ನು ಹಾಗೂ ತಿಕ್ಕಲಾಟಗಳನ್ನು ಕಂಡು ಅವಾಕ್ಕಾಗಿ ನಿಂತರು. ಅವರಿಗೂ ಆಶ್ಚರ್ಯ, ಗಾಬರಿಯಾಯಿತು. ಸ್ವಾಮಿ ಎಷ್ಟೇ ಹೇಳಿದರೂ ಬಿಸ್ಕತ್ ಮತ್ತು ಆಪಲ್ ಚೂರುಗಳನ್ನು ಮುಟ್ಟಲಿಲ್ಲ. ''ನನ್ನ ಕೇಸ್‌ನಲ್ಲಿ ಗೆದ್ದೇ ಗೆಲ್ಲುತ್ತೇನೆ'', ''ಎಲ್ಲವನ್ನು ಬಡ್ಡಿ ಸಮೇತ ಕಕ್ಕಿಸುತ್ತೇನೆ'' ಎಂದು ಕೂಗಾಡಲು ಪ್ರಾರಂಭಿಸಿದರು. ಸ್ವಾಮಿ ಮೇಷ್ಟ್ರು ಎಷ್ಟೇ ಸಮಾಧಾನ ಮಾಡಿದರೂ ಪ್ರಯೋಜನವಾಗಲಿಲ್ಲ. ''ರಾತ್ರಿ ಹನ್ನೊಂದಕ್ಕೊ ಹನ್ನೆರಡಕ್ಕೊ ಮ್ಯಾನೇಜರ್ ಬರುತ್ತಾನೆ. ಅವನ ರೂಮಿನ ಮುಂದೆ ಸತ್ಯಾಗ್ರಹ ಮಾಡಿ. ಮೊದಲು ಈ ಬಿಸ್ಕತ್, ಆಪಲ್ ತಿನ್ನಿ'' ಎಂದೆ. ಮೊಂಡು ಆಸಾಮಿ ಜಗ್ಗಲಿಲ್ಲ. ಆ ಕರೀ ಸೂಟ್ ಮ್ಯಾನೇಜರ್ ಮೇಲೆ ಕೋಪ ಒಂದು ಕಡೆ; ಭಯ, ದುಃಖ, ಅವಮಾನ ಇನ್ನೊಂದು ಕಡೆ. ಇವರು ಎಂದೂ ಹೀಗಾಡಿದವರಲ್ಲ. ಆಗಾಗ ಹಣೆ ಚಚ್ಚಿಕೊಳ್ಳುವುದನ್ನು, ತೋಳೇರಿಸಿ ಭುಜ ಕುಣಿಸುವುದನ್ನು ನಿಲ್ಲಿಸಲಿಲ್ಲ.

ನಾನು ಮತ್ತು ಸ್ವಾಮಿ ಮೇಷ್ಟ್ರು ಹೋಟೆಲಿನ ಕಿಚನ್‌ಗೆ ದೌಡಾಯಿಸಿದೆವು. ಅಲ್ಲಿ 'ನೊ ರೂಮ್ ಸರ್ವಿಸ್ ಅಂಡ್ ನೊ ಪ್ಯಾಕಿಂಗ್ ಸರ್ವಿಸ್ ಆನ್ ಸನ್‌ಡೇಸ್' ಎಂಬ ಉತ್ತರ ಸಿಕ್ಕಿತೇ ವಿನಾ, ಬೇರೇನೂ ಸಿಕ್ಕಲಿಲ್ಲ. ನಮ್ಮ ಬಸ್ ಡ್ರೈವರ್ ರೀಗೋಗೆ ಫ್ರೆಂಚ್ ಗೊತ್ತಿರಬಹುದು. ಅವನ ಮೂಲಕ ಈ ಪರಿಸ್ಥಿತಿಯನ್ನು ಹೋಟೆಲಿನವರಿಗೆ ವಿವರಿಸೋಣ ಎಂದು ಪ್ರಯತ್ನಿಸಿದೆವು. ಅವನು ಧಡೂತಿ ಆಸಾಮಿ, ಅವನಿಗೂ ನನ್ನಂತೆ ಇಂಗ್ಲಿಷ್ ಖಬು. ಸ್ವಾಮಿ ಮೇಷ್ಟ್ರು ತಮ್ಮ ನಾಟಕದ ತಿಳುವಳಿಕೆಯನ್ನೆಲ್ಲಾ ಖರ್ಚುಮಾಡಿ, 'ಮೈಮ್' ಸನ್ನೆಗಳಿಂದ, ಅವನಿಗೆ ಪರಿಸ್ಥಿತಿಯ ಗಂಭೀರತೆಯನ್ನು ವಿವರಿಸಲು ಪ್ರಯತ್ನಿಸಿದರು. ಏನಾದರೂ ಆಹಾರ ಕೊಡಿಸು ಎಂದರು. ಅವನಿಗೆ ಸರಿಯಾಗಿ ಅರ್ಥವಾಗಲಿಲ್ಲ. ಅವನಿಗೆ ಜರ್ಮನಿ

ಚೆನ್ನಾಗಿ ಗೊತ್ತೇ ವಿನಾ, ಇಂಗ್ಲಿಷ್ ಮತ್ತು ಫ್ರೆಂಚ್ ಚೆನ್ನಾಗಿ ಗೊತ್ತಿರಲಿಲ್ಲ. ಕೊನೆಗೆ ಡ್ರೈವರ್ ಇಷ್ಟಾದ "ಹಾಟ್ ಬೀರು ಕುಡಿದು ಮಲಗಿಬಿಡಲಿ, ಎಲ್ಲವೂ ಸರಿ ಹೋಗುತ್ತೆ" ಎಂದು ಅಪ್ಪಣೆ ಕೊಡಿಸಿದನು. ಅಲ್ಲಿಗೂ ಅವನನ್ನು ಬಿಡದೆ ಹೋಟೆಲ್ ಕಿಚನ್ ಬಳಿ ಎಳೆದುಕೊಂಡು ಹೋದೆವು. ಅರೆಬರೆ ಫ್ರೆಂಚಿನಲ್ಲಿ ಅವರಿಗೆ ಏನೇನೋ ಹೇಳಿದನು. ಕೊನೆಗೂ ಬಂದ ಉತ್ತರ "ನೊ ರೂಮ್ ಸರ್ವಿಸ್ ಅಂಡ್ ನೊ ಪ್ಯಾಕಿಂಗ್ ಆನ್ ಸನ್‌ಡೇಸ್." ಆ ಅಡಿಗೆಮನೆ ಮನುಷ್ಯ ನನ್ನ ಬಳೆಗಳನ್ನು, ನನ್ನ ಕುಂಕುಮವನ್ನು ಹಾಗೂ ನನ್ನ ತಾಳಿಯನ್ನು ತೋರಿಸಿ "ಇದೆಲ್ಲಾ ಏನು ? ಏಕೆ ?" ಎಂದು ಪ್ರಶ್ನಿಸಿದನು. ನಮ್ಮ ಕಷ್ಟ ನಮಗೆ, ಅವನ ಕುತೂಹಲ ಅವನಿಗೆ. ಅದು ಮದುವೆಯಾದವರ ಸೂಚನೆ ಎಂದು ಸ್ವಾಮಿ ಹೇಳಿದರು. ಹೀಗಾದರೂ ಅವನು ಏನನ್ನಾದರೂ ಕೊಡಬಹುದೆಂಬ ಆಶಾವಾದ. ಇದನ್ನು ಕೇಳಿ ದೊಡ್ಡದಾಗಿ ನಕ್ಕು ಹಿಂದಿನ ಮಾತನ್ನೇ ಜಪಿಸಿದನು. ನಾವು ಬಂದ ದಾರಿಗೆ ಸುಂಕವಿಲ್ಲವೆಂದುಕೊಂಡು, ಪೆಚ್ಚುಮೋರೆ ಹಾಕಿಕೊಂಡು ಬರಿಗೈಯಲ್ಲಿ ಹಿಂದಿರುಗಿದೆವು.

ನಾವು ರೂಮಿನಲ್ಲಿ ಇನ್ನೇನು ರಾದ್ಧಾಂತ ನಡೆದಿರುವುದೋ ಎಂದು ಒಂದೇ ಉಸಿರಿಗೆ ಓಡಿಬಂದೆವು. ಇವರ ಒದರಾಟ ನಿಂತಿತ್ತು. ಕಣ್ಣುಮುಚ್ಚಿ ಮಲಗಿದ್ದರು. ಘನ ನಿದ್ರೆಯ ಕಡೆ ಜಾರಿದ್ದರು. ಮಂಪರುಲೋಕದಲ್ಲಿ ಆಗಾಗ ಕೋರ್ಟು, ಸತ್ಯಾಗ್ರಹ, ಮ್ಯಾನೇಜರ್ ಎಂದು ಕನವರಿಸುತ್ತಿದ್ದರು. ದುಃಖ ಒತ್ತರಿಸಿಕೊಂಡು ಬಂತು. ದಿಕ್ಕು ತೋಚಲಿಲ್ಲ. ಕೊನೆಗೆ 'ಏನಾದರೂ ಮಾಡಿ' ಎಂದು ಸ್ವಾಮಿ ದಂಪತಿಗಳಿಗೆ ದುಂಬಾಲು ಬಿದ್ದೆ. ಇವರ ಕಿವಿಯ ಹತ್ತಿರ ಹೋಗಿ "ನೋಡ್ರಿ, ಸ್ವಾಮಿ-ಚಂದ್ರಾ ನಮ್ಮನ್ನು ಕರೆದುಕೊಂಡು ಬಂದವರು. ಅವರಿಗೂ ಬೇಜಾರಾಗಿದೆ. ಭಯ ಪಟ್ಟುಕೊಂಡಿದ್ದಾರೆ. ಏನಾದರೂ ತಿನ್ನಿ" ಎಂದು ಅಲುಗಾಡಿಸಿ ಹೇಳಿದೆ. ಸ್ವಾಮಿ, ಚಂದ್ರಾ ಸರದಿ ಪ್ರಕಾರ ತಿನ್ನುವಂತೆ ಪ್ರಚೋದಿಸಿದರು. ಕೊನೆಗೆ ಸ್ವಾಮಿ ತಾವು ತಂದಿದ್ದ ಕೋಕ್ ಕ್ಯಾನ್ ಒಡೆದು, ಬಾಯನ್ನು ಬಲವಂತವಾಗಿ ಬಿಡಿಸಿ, ಒಂದೆರಡು ಗುಟುಕನ್ನು ಕುಡಿಸಿದರು. ಈ ಸಾಹಸ ಸುಮಾರು ಅರ್ಧಗಂಟೆ ನಡೆಯಿತು. ಕೊನೆಗೊಮ್ಮೆ ಕಣ್ಣು ತೆರೆದು ಮುಚ್ಚಿದರು. ಅವರ ಬಡಬಡಿಕೆಯ ಮಾತು ಮೌನದ ಹಾದಿಯನ್ನು ಹಿಡಿದಿತ್ತು. ಯಾವುದೇ ರೀತಿಯ ಪ್ರತಿಕ್ರಿಯೆ ಇರಲಿಲ್ಲ. ಸ್ವಾಮಿ ಕೋಕ್ ಕುಡಿಸುವುದನ್ನು ನಿಲ್ಲಿಸಲಿಲ್ಲ. ಚಂದ್ರಾ ಹಸಿರು ಆಪಲ್‌ಅನ್ನು ಸಣ್ಣ ಸಣ್ಣ ಚೂರುಗಳನ್ನಾಗಿ ಮಾಡಿದರು. ನಾನು ಗರಬಡಿದಂತೆ ಕುಳಿತಿದ್ದೆ. ಚಂದ್ರಾ, ಈ ಪೇಚಾಟಗಳ ನಡುವೆ ಆಪಲ್ ಚೂರುಗಳನ್ನು ತುರುಕಿದರು. ಆ ಚೂರುಗಳನ್ನು ನಿಧಾನವಾಗಿ ಜಗಿದರು. ಸ್ವಾಮಿ ಪ್ರಯತ್ನ ಫಲ ಕೊಟ್ಟಿತು. ಕೋಕ್ ಕ್ಯಾನ್ ಖಾಲಿಯಾಯಿತು. ಪೆಚ್ಚು ಪೆಚ್ಚಾಗಿ, ಮೊದ್ದು ಮೊದ್ದಾಗಿ ಕಣ್ಣು ಬಿಟ್ಟರು. ನನಗೆ ಹೋದ ಜೀವ ಬಂದಂತಾಯಿತು. ಮೂವರೂ ಸೇರಿ, ಬಿಸ್ಕತ್ ಚೂರುಗಳನ್ನು ತಿನ್ನಿಸಿ, ನೀರು ಕುಡಿಸಿದೆವು. ಬ್ಲಡ್ ಷುಗರ್ ಲೋ ಆಗಿದ್ದರಿಂದ ಈ ಪರಿಪಾಟಲು. ಮತ್ತೆ ಇವರು ಮಾಮೂಲು ಸ್ಥಿತಿಗೆ ಬರಲು ಒಂದೆರಡು ಗಂಟೆ ಹಿಡಿಯಿತು. ಅಂತೂ ಇಂತೂ ಬಚಾವಾದರು. "ಚಂದ್ರಾ ಮೇಡಂ, ಸ್ವಾಮಿ ಸಾರ್, ನಾನು ಹೇಗಾಡಿದೆನೋ, ಏನು ಮಾತಾಡಿದೆನೋ ನನಗೇ ಗೊತ್ತಿಲ್ಲ. ಮನಸ್ಸಿಗೆ ನೋವಾಗಿದ್ದರೆ ಕ್ಷಮಿಸಿಬಿಡಿ" ಎಂದರು. ಟೂರ್ ಮುಗಿದರೂ ಟೂರ್ ಮ್ಯಾನೇಜರ್ ಮೇಲಿನ ಸಿಟ್ಟು ಕಡಿಮೆಯಾಗಲಿಲ್ಲ. ಅಂದು ಪಟ್ಟ ಪಾಡು, ಇಂದು ಹಾಡಾಗಿದೆ.

**ಬೆಂಡು ಮತ್ತು ಗುಂಡು**

ನಾನು ನನ್ನ ಮಂಪರು ಲೋಕದಿಂದ ಇನ್ನೂ ಕೆಳಗೆ ಹೋಗಿದ್ದರೆ, ಬಯಲಾಗಿ ಹೋಗುತ್ತಿತ್ತು ಬದುಕು. ಹಸಿವು, ನನ್ನ ಒಳಗನ್ನು ಅನಾವರಣಗೊಳಿಸಿತ್ತು. ನನ್ನ ಪೆಂಗತನ ನನಗೆ ಅರ್ಥವಾಗಿತ್ತು. ಸಾವು ಅಭ್ಯಾಗತನಾಗಿ ಬಂದು ಬಾಗಿಲು ಬಡಿದಾಗ, ಏನು ಮಾಡಬೇಕೆಂಬುದೇ ದಿಕ್ಕು ತೋಚಲಿಲ್ಲ. ಪ್ರವಾಸದಲ್ಲಿ ಜೊತೆಯಲ್ಲಿದ್ದವರು ಏನೇನು ಪಾಡುಪಡಬೇಕಿತ್ತು ಎಂಬುದನ್ನು ಕಲ್ಪಿಸಿಕೊಂಡರೆ ಮೈ ಜುಂ ಎನ್ನುತ್ತದೆ. ಹುಟ್ಟು ಇದ್ದಲ್ಲಿ ಸಾವು ಇದ್ದೇ ಇದೆ ಎಂದರೂ ಭಯ, ಬಯಕೆ ಹೋಗಿರಲಿಲ್ಲ. ಹುಟ್ಟು-ಸಾವು ಬದುಕಿನ ಎರಡು ದಡಗಳು ಎಂಬುದನ್ನು ಎಲ್ಲೋ ಓದಿದ .ನೆನಪು. ನಮ್ಮ ಬದುಕಿನಲ್ಲಿ ಸಾವಿನ ಪಹರೆ ಇದ್ದೇ ಇರುತ್ತದೆ. ಸಾವಿನ ಎದುರು ಬೆತ್ತಲೆಯಾಗುವುದು ಸಾಮಾನ್ಯದ ವಿಷಯವಲ್ಲ. ಒಂದು ಕಡೆ ಬದುಕಿನ ಬಯಕೆಗಳು ಮೇಲೆಳೆಯುತ್ತಿದ್ದರೆ, ಇನ್ನೊಂದು ಕಡೆ ಸಾವಿನ ಸಾಂಗತ್ಯ ಕೆಳಗೆಳೆಯುತ್ತಿತ್ತು. ದಾರಿ ಕಂಡುಕೊಳ್ಳುವುದು ನನ್ನ ಕೈಯಲ್ಲಿರಲಿಲ್ಲ. ನಾನು ಸಾವಿಗೆ ಸಿದ್ಧನಾಗಿ –


ಕವನ

ಕವಿ
ವನಗಳಲ್ಲಿ
ಆಯ್ದು
ಕಟ್ಟಿದ
ಹೂವಿನ
ಹಾರ



ಕಮಲಂ ಅರಸು

ಸಂ. ೧೧, ೧೦ನೇ ಅಡ್ಡರಸ್ತೆ, ೩ನೇ ಬಡಾವಣೆ
ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮


ನಾಳೆ ಬಪ್ಪುದು ನಮಗಿಂದೇ ಬರಲಿ
ಇಂದು ಬಪ್ಪುದು ನಮಗೀಗಲೇ ಬರಲಿ

ಎಂಬ ಮನಃಸ್ಥಿತಿಯಲ್ಲಿ ಇರಲಿಲ್ಲ. ಸಾವನ್ನು ಆಹ್ವಾನಿಸುವ ಪರಮ ಪ... ಅತಿಥಿಯಂತೆ

ಓಹ್, ಆ ನನ್ನ ಅತಿಥಿ ಮುಂದೆ
ತುಂಬಿ ತುಳುಕುತಿಹ ನನ್ನ ಬದುಕಿನ ಪಾತ್ರೆಯನಿಡುವೆ
ಆತನನು ಬರಿಗೈಯಲಿ ಹಿಂತಿರುಗಿ ಕಳುಹಿಸಲಾರೆ

ಎನ್ನುವ ರವೀಂದ್ರರ ಸ್ಥಿತಿಯಲ್ಲಂತೂ ನಾನು ಇರಲಿಲ್ಲ. ನನ್ನ ಮೊಮ್ಮಗನ ತೊದಲು... ಯನ್ನು ಆಲಿಸಬೇಕಿತ್ತು. ಹೊಸ ಕವಿಗಳಿಬ್ಬರ ಕವನ ಸಂಕಲನಗಳನ್ನು ಪ್ರಕಟಿಸಬೇಕಿ... ಆನಂದ ಝುಂಜರವಾಡರ ಕವನಗಳನ್ನು ಓದಬೇಕಿತ್ತು, ಉಡುಪಿ ಕೃಷ್ಣ ಭವನ... ಸಾಗು ದೋಸೆ ತಿನ್ನಬೇಕಿತ್ತು. ರಾಜರತ್ನಂ ಜನ್ಮಶತಮಾನೋತ್ಸವ ಆಚರಿಸಬೇಕಿತ್ತು.

ಅಂದು ಸ್ವಾಮಿ-ಚಂದ್ರಾ ನೆರವಿಗೆ ಬರದಿದ್ದರೆ ಎಲ್ಲರ ನೆನಪಿನಂಗಳದ ಅತಿ... ಯಾಗುತ್ತಿದ್ದೆ. ನನ್ನ ದೇಹದ ಲಯ ತಪ್ಪಿದಾಗ, ಹೊರಗೆ ಹೋದ ಉಸಿರು ಒಳ... ಬರುವುದೋ ಇಲ್ಲವೋ ಎಂಬ ಆತಂಕ. ಕಡಲ ಮೌನದಲ್ಲಿ ಮುಳುಗೇಳುತ್ತಿತ್ತು ಜೀ... ನಾನು ಓದಲು ಅರ್ಹವಾದದ್ದನ್ನು ಏನನ್ನೂ ಬರೆದಿಡಲಿಲ್ಲ; ಬರೆಯಲು ಅರ್ಹವಾದದ್ದು... ಏನೂ ಮಾಡಲಿಲ್ಲವೆಂಬ ವಿಚಿತ್ರ ಸಂಕಟ ಒಂದು ಕಡೆ. ಆದರೆ ಎಲ್ಲವೂ ಖಾ... ಯಾಗುತ್ತಾ ಭಯಂಕರ ಮೌನ ಪಿಸುಗುಟ್ಟುತ್ತಿತ್ತು. ಜೀವನದಿಯ ಒಂದು ಕಡೆ ಬೆಳಕ... ಇನ್ನೊಂದು ಕಡೆ ಕತ್ತಲು. ಸೆಳೆತ ಯಾವ ದಡ ಮುಟ್ಟಿಸುವುದೋ ಎಂಬ ಆತಂಕ.

ಆಗ ನನ್ನ ದರಿದ್ರ ಹಸಿವಿನಿಂದ ಕಣ್ಣುರೆಪ್ಪೆಗಳು ಭಾರವಾಗುತ್ತಿದ್ದವು; ನರನರಗ... ಕಳಚಿಕೊಳ್ಳುತ್ತಿದ್ದವು; ಸಂಬಂಧಗಳು ಮಂಕಾಗುತ್ತಿದ್ದವು; ಚಹರೆ ಕಳೆದುಕೊಳ್ಳುತ್ತಿದ್ದ... ನಡುನೆತ್ತಿಯಿಂದಲೇ ಅಸ್ತಂಗತನಾಗುತ್ತಿದ್ದ ಸೂರ್ಯ. ಎಂತಹ ಬೆಳಕಿಗಾದರೂ ಒಂದು ನೆರಳಿದೆ, ಕತ್ತಲೆಗೆ ಏನಿಲ್ಲವೆಂಬುದು ಒಗಟು. ಈ ಒಡಲ ಕವಲ... ತಡಕಾಡುವವರು ಮರೆಯಾಗಿದ್ದಾರೆ. ಇದರ ಅನ್ವೇಷಣೆಯಲ್ಲಿ ತೊಡಗಿದವ... ಕಥೆಯಾಗಿದ್ದಾರೆ. ಈ ನಿಗೂಢ ವಿಶ್ವದಲ್ಲಿ ಯಾವುದು ಟೊಳ್ಳು, ಯಾವುದು ಗ... ಎಂಬುದು ಜೀವ ಸಂಕುಲಕ್ಕೆ ಅರ್ಥವಾಗಿಲ್ಲ. ಇನ್ನು ನನಗೆ ಹೇಗೆ ಅರ್ಥವಾದೀತು?


**ಪ್ರೊ|| ಚಿ. ಶ್ರೀನಿವಾಸರಾಜು**
೨೧(೮), 'ಚಿರಂಜೀವಿ', ಹಳೇ ಈಜುಕೊಳದ ರಸ್ತೆ, ಕೋದಂಡರಾಮಪುರ, ಮಲ್ಲೇಶ್ವರ, ಬೆಂಗ...

# ರಾಮಧಾನ್ಯ ಚರಿತ್ರೆ ಮತ್ತು ಶ್ರಮಸಂಸ್ಕೃತಿ

ವಿ. ಚಂದ್ರಶೇಖರ ನಂಗಲಿ

'**ಪಾ**ಮುಲ ಕಾಳ್ಲು ಪಾಮುಲಕು ತೆಲಿಯುನಿ ಕಾನಿ ಇತರಲುಕೆಟ್ಲು ತೆಲಿಯುನು ?'' – (ಹಾವುಗಳ ಕಾಲು ಗಳಿಗೆ ತಿಳಿಯುವುದೇ ಹೊರತು ಇತರರಿಗೆ ಹೇಗೆ ತಿಳಿಯುವುದು ?) – ಎಂಬ ನಾಣ್ನುಡಿ 'ರಾಮಧಾನ್ಯ ಚರಿತ್ರೆ'ಗೆ ಚೆನ್ನಾಗಿ ಒಪ್ಪುತ್ತದೆ. ಇದನ್ನು ವಿಮರ್ಶೆ ಮಾಡಿದ 'ಮಾರ್ಗ' ನೆಲೆಯ ವಿದ್ವಾಂಸರಿಗೂ 'ದೇಸಿ' ನೆಲೆಯ ಂಸರಿಗೂ ಇರುವ ಅಂತರವನ್ನು ವಿಶೇಷವಾಗಿ ಗಮನಿಸಬೇಕಾಗಿದೆ. 'ಪರಿಶೀಲನ'ದ ಲೇಖನವೊಂದರಲ್ಲಿ ಜಿ. ಎಸ್. ಶಿವರುದ್ರಪ್ಪನವರು 'ರಾಮಧಾನ್ಯ ಚರಿತ್ರೆ'ಯನ್ನು ಎಳೆಎಳೆಯಾಗಿ ಬಿಡಿಸಿಟ್ಟು, ಇದರ ಅವಗುಣಗಳ ಪಟ್ಟಿಯನ್ನೇ ನೀಡಿದ್ದಾರೆ. ಜಿ.ಎಸ್.ಎಸ್. ಪ್ರಕಾರ 'ರಾಮಧಾನ್ಯ ಚರಿತ್ರೆ'ಯು ದೋಷಯುಕ್ತ ರಚನೆಯಾಗಿದೆ. ಈ ಕೃತಿ ಕುರಿತು ಜಿ.ಎಸ್.ಎಸ್. ಅವರ ಬದಲಾದ ದೃಷ್ಟಿ ಮತ್ತು ಪರಿಷ್ಕೃತ ವಿಮರ್ಶೆಯನ್ನು 'ಸಮಗ್ರ ಗದ್ಯ'ದಲ್ಲಿ ಬಹುದು.) ಆದರೆ, ಇದಕ್ಕೆ ತದ್ವಿರುದ್ಧವೆಂಬಂತೆ 'ದೇಸಿ' ನೆಲೆಯ ವಿದ್ವಾಂಸರಾದ ದೇ. ಜವರೇಗೌಡ, ಎಂ. ನಂದಮೂರ್ತಿ, ಎಚ್. ಎಲ್. ನಾಗೇಗೌಡ, ಸುಧಾಕರ ಮುಂತಾದವರು ರಾಮಧಾನ್ಯ ಚರಿತ್ರೆಯ ಒಳಹೊಕ್ಕು, ಬಹುಮುಖಿ ಆಯಾಮಗಳನ್ನು ಸೂಕ್ಷ್ಮ ಮತ್ತು ಸಮಗ್ರ ದೃಷ್ಟಿಯಿಂದ ವಿವೇಚಿಸಿದ್ದಾರೆ. ಜಾನಪದ ಧೀಮಂತಿಕೆಯ ದಿಯ ಮೇಲೆ ಅರಳಿಕೊಂಡಿರುವ ರಾಮಧಾನ್ಯ ಚರಿತ್ರೆಯ ಒಳನೋಟಗಳನ್ನು ಕಡೆಗೆ ಜಾನಪದ ವಿದ್ವಾಂಸರೇ ಚಿಸಿದ್ದರೆಂಬುದನ್ನು ಸ್ಮರಿಸಿದಲ್ಲಿ, ಹಾವುಗಳ ಕಾಲು ಹಾವುಗಳಿಗೆ ತಿಳಿಯುವ ಮರ್ಮಕಲೆಯು ಅರಿವಾಗುತ್ತದೆ.

ನಮ್ಮ ನಾಡಿನ ಬಗೆಬಗೆಯ ರಾಮಾಯಣಗಳ ಕಥಾಸಾಗರದಲ್ಲಿ ಒಂದಾಗಿರುವ 'ರಾಗಿ ರಾಮಾಯಣ'ವೆಂಬಂತೆ ಧಾನ್ಯ ಚರಿತ್ರೆಯನ್ನು ವಿವೇಚಿಸಿರುವ ಜಾನಪದ ವಿದ್ವಾಂಸರು, ಇದನ್ನು ಮತ್ತಾವುದೇ ಕೃತಿಯೊಂದಿಗೆ ಲಿಸಿರುವುದು ನನ್ನ ಗಮನಕ್ಕೆ ಬಂದಿಲ್ಲ. 'ರಾಮಧಾನ್ಯ ಚರಿತ್ರೆ'ಯನ್ನು ಕುರಿತು ಮಾತನಾಡುವ ಮಾರ್ಗ ಮತ್ತು ದೇಸಿ ಳ ವಿದ್ವಾಂಸರು, ಇದನ್ನು ಪರಂಪರೆಯಿಂದ ಬೇರ್ಪಡಿಸಿ, ಪ್ರತ್ಯೇಕ ದೃಷ್ಟಿಯಿಂದಲೇ ವಿಮರ್ಶಿಸಿದ್ದಾರೆ. ರಾಮಧಾನ್ಯ ಯು ಹೀಗೆ ಪರಂಪರೆಯಿಂದ ಬೇರ್ಪಟ್ಟಿರುವ, 'ಒಬ್ಬೊಂಟಿ' ರಚನೆಯೆಂದು ನಾನು ಭಾವಿಸುವುದಿಲ್ಲ. ಕನ್ನಡ ತ್ಯ ಪರಂಪರೆಯಲ್ಲಿ 'ಸಸ್ಯಾಲಂಬನ'ದ ಮೂಲಕ ನಿಸರ್ಗ ಮತ್ತು ಸಂಸ್ಕೃತಿಯ ಸಂಬಂಧಗಳನ್ನು ವಿವೇಚಿಸಿರುವ ರಾರು ಪ್ರಸಂಗಗಳೂ, ಹೊಸ ಕೃತಿಗಳೂ ಕಂಡುಬರುತ್ತವೆ. ಇವು ಯಾವುವೆಂದರೆ,

೧. ಪಂಪನ ಪುಷ್ಪೋದ್ಯಾನ, ೨. ಹರಿಹರನ ಪುಷ್ಪರಗಳೆ, ೩. ಕನಕದಾಸರ ರಾಮಧಾನ್ಯ ಚರಿತ್ರೆ, ವೆಂಪು ಅವರ ಗೊಬ್ಬರ.

ಸಸ್ಯ ಸಂಬಂಧಿಯಾದ ವಿವರಗಳನ್ನೇ ಪ್ರಧಾನವಾಗಿ ಹೊಂದಿರುವ ಈ ಚತುರ್ಮುಖಿ ಸೌಂದರ್ಯವನ್ನು ಅಖಂಡವಾಗಿ ಗ್ರಹಿಸಬೇಕಾಗಿದೆ. ಪಂಪನ ಪುಷ್ಪೋದ್ಯಾನವು ಭರತನ ಅಂತಃಪುರ ಸ್ತ್ರೀಯರ ವನವಿಹಾರದ ವರ್ಣನೆಯಾಗಿದೆ. ಡಾ॥ ಜಿ. ಎಸ್. ಶಿವರುದ್ರಪ್ಪನವರು ಈ ಕುರಿತು ಲೇಖನವೊಂದನ್ನು ರಚಿಸಿದ್ದಾರೆ. ನಿಸರ್ಗದ ರಮ್ಯತಾಣವೊಂದರಲ್ಲಿ ಬೀಡುಬಿಟ್ಟು, ವನವಿಹಾರದ ಹೆಸರಿನಲ್ಲಿ ಮನಸ್ವೇಚ್ಛೆಯಾಗಿ ವರ್ತಿಸುವ ವಿಲಾಸಿನಿಯರು ಅಲ್ಲಿಂದ ಹಿಂದಿರುಗುವಾಗ ತೋರುವ ವಿನಯ ಮತ್ತು ಕ್ಷಮಾಯಾಚನೆ ಮಾಡುವ ಬಗೆ ಹೃದ್ಯವಾಗಿದೆ. ಇದನ್ನು ಡಾ॥ ಎಲ್. ಬಸವರಾಜು ಅವರು 'ಆದಿಪುರಾಣ ಕಥಾಮೃತ'ದಲ್ಲಿ ಸವಿವರವಾಗಿ, ಸುಲಲಿತವಾಗಿ ನಮ್ಮ ಮುಂದಿಟ್ಟಿದ್ದಾರೆ : ''... ಹೀಗೆ ನಾನಾ ವಿಧದ ಕ್ರೀಡೆಯಿಂದ (ಆ ಸುಂದರಿಯರು) ವನಕ್ರೀಡೆಯನ್ನು ಮುಗಿಸಿ (೧೧.೧೨೪ ವ) –

ಇದು (ನಮಗೆ) ನಾಚಿಕೆಗೇಡಿನ ಮಾತಲ್ಲವೇ – ಇನ್ನು ನೀವು ನಮ್ಮನ್ನು ನೆನೆಯುತ್ತಿರಿ (ಮರೆಯಬೇಡಿರಿ) ಎಂಬುದು ? ನಮ್ಮಲ್ಲಿ ಯಾವ ಗುಣ ಕಂಡು ನೀವು (ನಮ್ಮನ್ನು) ನೆನೆಯುವಿರಿ – ಎಲೇ ಅಶೋಕ ವೃಕ್ಷಗಳೇ, ಎಡಗಾಲಿಂದ ನಿಮ್ಮನ್ನು ನಾವು ಒದ್ದುವೇ ? ಎಲೇ ಕೇಸರ ವೃಕ್ಷಗಳೇ ನಿಮ್ಮನ್ನು ಬಾಯಿತುಂಬಿಕೊಂಡ ಮದಿರೆಯಿಂದ ಉಗುಳಿದ್ದೇ ? ಮತ್ತೇರಿ ಮಾಡಿದ ನಮ್ಮೆಲ್ಲರ ಎಲ್ಲ ಇಂಥ ಚೇಷ್ಟೆಗಳನ್ನೂ ನೀವಿನ್ನು ಮರೆತುಬಿಡಿರಿ (೧೧.೧೨೫) – ಎಂದು ಅಶೋಕ ಮತ್ತು ಕೇಸರ ವೃಕ್ಷಗಳನ್ನು ಬೀಳ್ಕೊಂಡು –

ಹೂಗಳ ಗೊಂಚಲನ್ನು, ತಳಿರ ತೊಂಗಲನ್ನು, ಕೊಂಬೆಯಲ್ಲಿ ಅಲ್ಲಾಡುವ ಮಿಡಿಗಳನ್ನು ಕೈತುಂಬ ಹಿಡಿದು ಮುದ್ದಿಸದೆ, ಇರುವಂತೆಯೇ ಬಿಟ್ಟು ರಕ್ಷಿಸದೆ – ಕ್ರೂರವಾಗಿ, ಸೊನೆ ಸುರಿಯುವವರೆಗೆ ತರಿದು ನೋಯಿಸಿ ಕಾಡಿದೆವು ! ಇನ್ನು ನೀನು ಅದೊಂದನ್ನೂ – ಎಲೆ ಎಳೆಯ ಮಾಮರವೇ, ನೆನೆಯದೆ – ನಾವೂ ನೀನೂ ಜೊತೆಯಲ್ಲಿದ್ದೊಂದು ಘಳಿಗೆಯನ್ನು ಮಾತ್ರ ನೆನೆ (೧೧.೧೨೬) – ಎಂದು ಮಾಮರವನ್ನು ಅಪ್ಪಿಕೊಂಡು –

(ನಿಲ್ಲುವ) ಭಂಗಿಗಳಲ್ಲಿ ನಿಮಗೂ ನಮಗೂ ಸಮಸಮ. ಅದನ್ನು ನೀವು ಮನಸ್ಸಿಗೆ ತಂದುಕೊಂಡು ನಮ್ಮ ಮೇಲಣ ನಿಮ್ಮ ಅಸಮಾಧಾನ ಹೋಗಲಿ. ಒಬ್ಬರನ್ನೊಬ್ಬರು ಅಗಲುವ ಈ ಸಮಯದಲ್ಲಿ ಸ್ನೇಹಭಾವ ಇರಲಿ – ಎಲೇ ಲತೆಗಳಿರಾ ? (೧೧.೧೨೭) – ಎಂದು ವನಲತೆಗಳನ್ನು ಸಮಾಧಾನಪಡಿಸಿ – ಆಶೆಪಟ್ಟು ಅಲಂಕಾರದ

ಚೆಲುವಿಗಾಗಿ ನಿಮ್ಮ ಎಳೇ ಚಿಗುರು ಬೆರೆಸಿದ ಹೂಗೊಂಚಲನ್ನು ಮುರಿದೆವು – ಇನ್ನು ಆ ನಮ್ಮ ತಪ್ಪನ್ನು ಎಣಿಸದಿರಿ. ಎಲೇ ಉದ್ಯಾನವನದ ವೃಕ್ಷಗಳಿರಾ, ಈಗ ಮನಃಪೂರ್ವಕವಾಗಿ ಬೀಳ್ಕೊಂಡು ಪ್ರೀತಿಯಿಂದ ನಿಮಗೆ ಪ್ರದಕ್ಷಿಣೆ ಹಾಕಿಹೋಗುವ ನಮ್ಮ ಈ ಕೃತಜ್ಞತೆಯ ಭಾವವನ್ನು ದಯಮಾಡಿ ಒಪ್ಪಿಸಿಕೊಂಡು ಪ್ರಸನ್ನರಾಗಿರಿ (೧೧.೧೨೮) –''

ಹೀಗೆ ಸಸ್ಯಗಳನ್ನು ಮಾತ್ರವಲ್ಲದೆ, ಕೋಗಿಲೆ-ದುಂಬಿ-ಹಂಸೆಗಳನ್ನೆಲ್ಲ ಸಂತೈಸಿ ಬೀಳ್ಕೊಡುವ ಅಂತಃಪುರ ಸ್ತ್ರೀಯರ ಚಿತ್ರಣ ಹೃದಯಸ್ಪರ್ಶಿಯಾಗಿದೆ. ''...ಭರತನ ಅಂತಃಪುರದ ಈ ಲಲನೆಯರ ಸೌಂದರ್ಯಾನುಭವದಲ್ಲಿ ಒಂದು ರೀತಿಯ ಪ್ರಮತ್ತತೆ ಮೊದಮೊದಲಿಗೆ ಕಂಡುಬಂದರೂ, ಸೌಂದರ್ಯಾನುಭವದ ನಂತರ, ತಮ್ಮ ಉಪಭೋಗಕ್ಕೆ ಈ ಪ್ರಕೃತಿಯ ಸೌಂದರ್ಯವನ್ನು ನೋಯಿಸಿ ಕಾಡಿದೆವಲ್ಲಾ ಎಂಬ ಈ ಪಶ್ಚಾತ್ತಾಪದ ಮಾರ್ದವತೆ ಅಪೂರ್ವವಾಗಿದೆ...'' ಎನ್ನುವ ಜಿ. ಎಸ್. ಶಿವರುದ್ರಪ್ಪನವರ ಮಾತುಗಳಿಲ್ಲಿ ಸ್ಮರಣಾರ್ಹ ! ಸಮಾಜವೊಂದರ ಕೆನೆಪದರ ಮತ್ತು ನಿಸರ್ಗದ ಹೊಕ್ಕುಬಳಕೆಯ ಸೂಕ್ಷ್ಮಗಳಿಗೆ ಸಂಬಂಧಪಟ್ಟಂತೆ ಪಂಪನ ಪುಷ್ಪೋದ್ಯಾನ ಬಹುಮುಖ್ಯ ಪ್ರಸಂಗವಾಗಿದೆ. ಭೋಗಸಂಸ್ಕೃತಿಯ ಎದೆಹೊಲದಲ್ಲಿ ಅಪರಾಧಿಪ್ರಜ್ಞೆಯ ಕೂರಿಗೆ ಅಥವಾ ಮನಃಪರಿವರ್ತನೆಯ ಬಿತ್ತನೆ ಕಾರ್ಯ ಮಾಡಿರುವ ಪಂಪನು ಪ್ರಾತಃಸ್ಮರಣೀಯನಾಗಿದ್ದಾನೆ.

**ಹರಿಹರನ ಪುಷ್ಪರಗಳೆಯ** ಬಗ್ಗೆ ಡಿ.ಎಲ್.ಎನ್., ಸುಜನಾ, ಸಿ.ಪಿ.ಕೆ. ವಿಸ್ತಾರವಾದ ವಿವೇಚನೆ ಮಾಡಿದ್ದಾರೆ. ಇವರೆಲ್ಲರ ವಿಚಾರಗಳಿಗೆ ಪೂರಕವಾಗಿ ಪುನರುಕ್ತಿಯಾಗದಂತೆ ಮತ್ತಷ್ಟು ಹೊಸ ವಿಚಾರಗಳನ್ನಿಲ್ಲಿ ಸೇರಿಸಬಹುದೆನಿಸುತ್ತದೆ. ಹರಿಹರನ ಪುಷ್ಪರಗಳೆಯಲ್ಲಿ ಮನುಷ್ಯರು-ಹೂಗಳು ಎಂಬ ಭೇದವೇ ಇಲ್ಲ. ಈ ರಗಳೆಯಲ್ಲಿ ವರ್ಣಿಸಿರುವ ಹೂಗಳು 'ನವಕುಸುಮ'ಗಳಾಗಿರುವಂತೆಯೇ, ಇವನ್ನು ಕೊಂಡೊಯ್ಯಲು ಬಂದವನು ಕೂಡ 'ಮಾನವ ಕುಸುಮ'ವೇ ಆಗಿದ್ದಾನೆ. ಇವನು ಹೂಗಳನ್ನು ಮಾತನಾಡಿಸುವಂತೆಯೇ (= ಏನವ್ವ ಸಂಪಗೆಯೇ) ಪತ್ರೆ ಪುಷ್ಪಗಳೂ ಇವನನ್ನು ಮಾತನಾಡಿಸುತ್ತವೆ (= ಮರುಗಂ ಇತ್ತಂ ಬಾರ ಎನುತುಂ ಇರೆ). ಹರಿಹರನು ಎಲ್ಲ ಹೂಗಳಲ್ಲು ಶಿವಶರಣ-ಶಿವಶರಣೆಯರ ಚೇತನಗಳನ್ನೇ ಕಂಡಿದ್ದಾನೆ. ಆದ್ದರಿಂದಲೇ ಕೇದಗೆಯನ್ನು 'ಗುಪ್ತಭಕ್ತ'ನೆಂದೂ, ಸುರಹೊನ್ನೆಯನ್ನು 'ಸದ್ಭಕ್ತೆ'ಯೆಂದೂ ಸಂಬೋಧಿಸ... ಹರಿಹರನ ಕಣ್ಣಿಗೆ ಒಂದೊಂದು ಹೂವು ಭಕ್ತನ ಸಾಧಕ ಜೀವನಕ್ಕೆ ನಿಸರ್ಗ... ಸೃಷ್ಟಿಸಿದ ಪುಷ್ಪರೂಪಕಗಳಾಗಿ ಕಂಡಿವೆ. ಕೇದಗೆ, ಸುರಹೊನ್ನೆ, ಇರುವಂತಿಗೆ, ... ಜಾತಿ ಹೀಗೆ ಎಲ್ಲ ಹೂಗಳಲ್ಲೂ ಶರಣಚೇತನಗಳನ್ನು ಮನಗಂಡ ಹರಿಹರನಿಗೆ ಹೂ... ಕಂಪು ಶರಣ ಚೇತನದ ಪರಿಮಳವಾಗಿಯೇ ಗೋಚರಿಸುತ್ತದೆ. ಈ ವನಸ್ಪತಿ... ಮೇಲುಕೀಳಿನ ಸ್ಪರ್ಧೆಯಿಲ್ಲ. ಎಲೆಯ ರೂಪದಲ್ಲಿರಲಿ, ಹೂವಾಗಿರಲಿ, ಮುಳ್ಳಾಗಿ... ಬೇರಾಗಿರಲಿ, ಹೆಸರಿರಲಿ, ಇಲ್ಲದಿರಲಿ – ಇವುಗಳಲ್ಲಿರುವ ಪರಿಮಳ ಮಾತ್ರ ಒ... (=ಮನುಷ್ಯ ಜಾತಿ ತಾನೊಂದೆ ವಲಂ). ಇಂಥ ಪರಿಮಳಯುಕ್ತ ಶರಣಚೇತನ... ಬಾಳು ಶಿವಾರ್ಪಿತವಾಗಬೇಕು ಎಂಬ ಧ್ವನಿ ಪುಷ್ಪರಗಳೆಯಲ್ಲಿದೆ. ಎಲೆ, ಹೂ... ಮುಳ್ಳು, ಬೇರು ಹೀಗೆ ಬಗೆಬಗೆಯ ನಾಮರೂಪಗಳಿಂದ ನಿಸರ್ಗದಲ್ಲಿ ಚ... ಹೋಗಿರುವ ಪರಿಮಳಯುಕ್ತ ಚೇತನಗಳೆಲ್ಲ ಒಗ್ಗೂಡಿ 'ಪೊಚ್ಚ ಪೊಸಮಾಲೆ'ಯಾಗ... ಪ್ರಕ್ರಿಯೆಯಲ್ಲಿ ಹರಿಹರನು ಸಾಧಕ ಜೀವನದ ಸಮಷ್ಟಿ ಹೋರಾಟವ... ಅಭಿವ್ಯಕ್ತಿಗೊಳಿಸಿದ್ದಾನೆ. ಹೂಮಾಲೆಯಾಗುವ ಪ್ರಕ್ರಿಯೆಯಲ್ಲಿ ಸಂಘಟನೆಯಾಗ... ಧ್ವನಿಯನ್ನು ಮನಗಂಡರೆ, ಇದು ಹನ್ನೆರಡನೇ ಶತಮಾನದ ವಚನ ಚಳುವಳಿ... ಸಂಘಟನೆಯ ರೂಪಕದಂತೆ ಭಾಸವಾಗುತ್ತದೆ.

**ಕನಕದಾಸರ ರಾಮಧಾನ್ಯ ಚರಿತ್ರೆಯು** ಹಳಗನ್ನಡದ ಸಾಹಿತ್ಯರಾಶಿಯಲ್ಲೆ ಬ... ವಿಶಿಷ್ಟವಾದ, ೧೫೬ ಷಟ್ಪದಿಗಳನ್ನುಳ್ಳ ಒಂದು ಕೃತಿಯಾಗಿದೆ. ಮಹಾಭಾರತದಲ್ಲಿ ಶ್ರೀಕೃ... ಪಾಂಡವ ಪಕ್ಷಪಾತಿಯಾಗಿ, ಮತ್ತು ಪಾಂಡವ ಪ್ರತಿಷ್ಠಾಪನಾಚಾರ್ಯನಾಗಿರುವಂತೆಯ... ರಾಮಧಾನ್ಯ ಚರಿತ್ರೆಯಲ್ಲಿ ಕನಕದಾಸರು ರಾಗಿಯ ಪಕ್ಷಪಾತಿಯಾಗಿ, ಮತ್ತು ರಾಗಿ... ಪ್ರತಿಷ್ಠಾಪನಾಚಾರ್ಯನಾಗಿದ್ದಾರೆ. ಮೇಲುನೋಟಕ್ಕೆ ರಾಘವ ಪಟ್ಟಾಭಿಷೇ... ಪೌರಾಣಿಕ ಹಿನ್ನೆಲೆಯನ್ನುಳ್ಳ ಈ ಕೃತಿಯಲ್ಲಿ ರಾಗಿಯ ಪಟ್ಟಾಭಿಷೇಕವೇ ಒಳನೋ... ವಾಗಿದೆ. ಬಡವರ ಆಹಾರವಾಗಿರುವ ರಾಗಿಗೆ ದೊರೆತಿರುವ ಈ ಪ್ರಾಶಸ್ತ್ಯದಿಂದ... ರಾಮಧಾನ್ಯ ಚರಿತ್ರೆಯಲ್ಲಿ ಕಡೆಗೆ ಶ್ರಮಸಂಸ್ಕೃತಿಗೆ ಪಟ್ಟಾಭಿಷೇಕ ಮಾಡಿದಂತಾಗಿದ...

ಕವಿ ಬೇಂದ್ರೆಯವರು 'ಬಡತನವು ಸಾಹಿತ್ಯದ ಸಾರ್ವಭೌಮ ವಸ್ತು' ಎಂ...


With Best Compliments From



DHINGRA BOOK HOUSE

(Publisher of Children's Books)

Swarn House, F-171/B, Jagat Puri, Delhi - 110 051

Phone : 222021350, 22059251, Fax : 011-22507364

DHINGRA PUBLISHING HOUSE

(A Division of Dhingra Book House)

ವುದನ್ನು ಬಹು ಹಿಂದೆಯೇ ಕೃತಿಗಿಳಿಸಿದ ಮು ಕನಕದಾಸರ ರಾಮಧಾನ್ಯ ಚರಿತ್ರೆಗೆ ವೆ. ರಾಘವನು ವಿವಿಧ 'ಧಾನ್ಯವರ್ಗದ ಯನ್ನು ಬರಹೇಳುವುದು (= ೧೩೧ನೇ ಪದ್ಯ) ವಿವಿಧ 'ಧಾನ್ಯದ ತನು'ವನ್ನು ಈಕ್ಷಿಸುವುದು ನೇ ಪದ್ಯ) ರಾಮಧಾನ್ಯ ಚರಿತ್ರೆಯ ಪ್ರಮುಖ ವಾಗಿದೆ. ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ತಿಯರು ಮತ್ತು ಹರಿಶ್ಚಂದ್ರನ ಸಂವಾದ' ಭಾಗವು ಪ್ರಸಿದ್ಧವಾಗಿರುವುದೋ ಹಾಗೆಯೇ ಕನಕದಾಸರ ಾನ್ಯ ಚರಿತ್ರೆಯಲ್ಲಿ 'ರಾಗಿ ಮತ್ತು ವ್ರೀಹಿ ಸಂವಾದ' ಸುಪ್ರಸಿದ್ಧವಾಗಿದೆ. ಬಸವಣ್ಣನ ವಚನದಲ್ಲಿರುವ ರು ಮತ್ತು ಬಡವರು ಎಂಬ ವರ್ಗದೃಷ್ಟಿಯೊಂದಿಗೆ, ಮತ್ತು ಅಬ್ರಾಹ್ಮಣ (ಉದಾಹರಣೆಗೆ, ಾನ್ನ' – 'ಶೂದ್ರಾನ್ನ') ಎಂಬ ವರ್ಣದೃಷ್ಟಿಯನ್ನೂ ಕೊಂಡಿರುವ ರಾಗಿ-ವ್ರೀಹಿ ಸಂವಾದದಲ್ಲಿ ವರ್ಗ ರ್ಷ ಮತ್ತು ವರ್ಣ ಸಂಘರ್ಷಗಳು ಪ್ರಕಟ ವೆ. ರಾಗಿ ಮತ್ತು ಬತ್ತಗಳ ವಾಗ್ಯುದ್ಧದಲ್ಲಿ ಪ್ರತಿಷ್ಠಿತ ಮತ್ತು ಅಪ್ರತಿಷ್ಠಿತ ವರ್ಗದ ತರ-ತಮ ಭೇದಗಳು ಅಭಿವ್ಯಕ್ತಗೊಂಡಿವೆ. ಾನ್ನವಾಗಿರುವ ವ್ರೀಹಿಗೂ ಶೂದ್ರಾನ್ನವಾಗಿರುವ ರಾಗಿಗೂ ಈ ಕೃತಿಯಲ್ಲಿರುವ ಗಳಿವು : ಶ್ರೀಗಂಧ-ಒಣಕಟ್ಟಿಗೆ, ಹಸುಹಾಲು-ಕುರಿಹಾಲು, ವೀರಹನುಮ-ೀತಿ, ಗಂಗಾನದಿ-ಕಾಡಿನ ತೊರೆ, ಗರುಡ-ಹದ್ದು, ಹಂಸ-ಬಕ, ಕೋಗಿಲೆ-ಕಾಗೆ. ಸರ್ಗ ಚಿತ್ರಗಳಲ್ಲಿರುವುದು ಸಾಮಾಜಿಕ ದೃಷ್ಟಿಯ ತರ-ತಮಗಳೆಂಬುದು ರ್ಹ. 'ನವ ಧಾನ್ಯ' ಎಂಬ ಪುರೋಹಿತಶಾಹಿ ಸಂಸ್ಕೃತಿಯ ಮೌಲ್ಯವ್ಯವಸ್ಥೆಯಲ್ಲಿ ಇಂದಿಗೂ ಸ್ಥಾನವಿಲ್ಲ. ಕಿಟೆಲ್ ಅವರ ಪದಕೋಶದಲ್ಲಿ ಪುರೋಹಿತಶಾಹಿಯು ಮಾಡಿರುವ ನವಧಾನ್ಯಗಳ ವಿವರವಿದೆ : ಗೋದಿವೆ, ಬತ್ತ, ಉದ್ದು, ಹೆಸರು, ತೊಗರಿ, ಹುರಳಿ, ಅವರೆ, ಎಳ್ಳು – ಇವು ಪುರೋಹಿತಶಾಹಿಯ ನವಧಾನ್ಯ ದ್ದರೆ, ಕನಕದಾಸರು ರಾಮಧಾನ್ಯ ಚರಿತ್ರೆಯಲ್ಲಿ ''ಎಲ್ಲ ನವಧಾನ್ಯದಲಿ ಈತನೇ ನು'' (೧೩೫ನೇ ಪದ್ಯ) ಎಂದು ರಾಗಿಗೆ ಪ್ರಾಶಸ್ತ್ಯ ನೀಡಿ, ಶ್ರಮಸಂಸ್ಕೃತಿಗೆ ಿಷೇಕ ಮಾಡಿದ್ದಾರೆ.

ಾರ್ಕ್ಸ್‌ವಾದಿ ಸೌಂದರ್ಯಶಾಸ್ತ್ರದ ಪ್ರಕಾರ ಲೇಖಕನೊಬ್ಬ ಸಮಾಜದ ಯಾವ ಕ್ಕೆ ಸೇರಿದ್ದಾನೆಂಬುದು ಮುಖ್ಯವಲ್ಲ! ಆದರೆ, ಅವನ(ಳ) ಕೃತಿಗಳು ಮಾತ್ರ ಕ ಬದ್ಧತೆಯನ್ನು ಒಳಗೊಂಡಿರಬೇಕು : ದೀನ-ದರಿದ್ರರು, ಹೀನರು, ಾನಿತರು ಕುರಿತಂತೆ ಖಚಿತವಾದ ಬದ್ಧತೆಯನ್ನು; ಪಕ್ಷಪಾತವನ್ನು ಲೇಖಕರು ದಿರಲೇಬೇಕೆಂಬುದನ್ನು ಮಾರ್ಕ್ಸ್‌ವಾದಿ ಸೌಂದರ್ಯಶಾಸ್ತ್ರವು ಬಲವಾಗಿ ದಿಸುತ್ತದೆ. ಈ ವಿಷಯದಲ್ಲಿ ಮ್ಯಾಕ್ಸಿಂ ಗೋರ್ಕಿ ಹೇಳಿರುವ ಸುಪ್ರಸಿದ್ಧ ಳಿವು : ''ಸಂಸ್ಕೃತಿಯ ಯಜಮಾನರೆ! ನೀವು ಯಾರ ಕಡೆ ?'' ಇದೇ ನಿಲುವನ್ನು ತ್ಮಾ ಗಾಂಧಿಯವರು ಕೂಡ ಪ್ರತಿಪಾದಿಸಿದ್ದಾರೆಂಬುದು ಗಮನಾರ್ಹ! ನಮ್ಮ ೊಂದು ಆಲೋಚನೆ ಮತ್ತು ಕ್ರಿಯೆಗಳು ಸಮಾಜದ ಕಟ್ಟಕಡೆಯ ಮನುಷ್ಯನಿಗೆ ಮಟ್ಟಿಗೆ ಉಪಯೋಗವಾಗುತ್ತದೆ ಎಂಬುದನ್ನು ಗಮನಿಸಿಯೇ ನಿರ್ಧರಿಸಬೇಕು – ದೇ ಗಾಂಧಿಯವರ ಎದೆಯಾಳದ ಬಯಕೆಯಾಗಿತ್ತು. ಸ್ವಾಮಿ ವಿವೇಕಾನಂದರನ್ನು ಕೃತಿ ರಚಿಸಿರುವ ಕುವೆಂಪು ಅವರು ಅಧ್ಯಾಯವೊಂದಕ್ಕೆ 'ದರಿದ್ರ ದೇವೋ – ಎಂಬ ಶೀರ್ಷಿಕೆಯನ್ನು ಕೊಟ್ಟು, ತಾಯಿ-ತಂದೆ-ಗುರುಗಳೆಂಬ ರೂಢಿಗತ ನಾಲ್ಕನೇ ಆಯಾಮವೊಂದನ್ನು ನೀಡಿದ್ದಾರೆ. ಕನಕದಾಸರು ಬಡಜನರ ರವಾದ ರಾಗಿಯನ್ನು ಕುರಿತು 'ಪರಮಧಾನ್ಯದ ಚರಿತೆ' (ಮೊದಲನೇ ಪದ್ಯ), ಕಥೆ (ಮೂರನೇ ಪದ್ಯ), ಪರಮ ಪುಣ್ಯದ ರಾಮ ಕಥೆ (೧೫೮ನೇ ಪದ್ಯ) ಹೇಳಿ ತಮ್ಮ ಪಕ್ಷಪಾತ ಮತ್ತು ಕಲಾತ್ಮಕ ಬದ್ಧತೆಯನ್ನು ಸುಸ್ಪಷ್ಟವಾಗಿ ಮೆರೆದಿದ್ದಾರೆ. ಾಗಿಯು ಬತ್ತವನ್ನು ವ್ಯಾಖ್ಯಾನಿಸುವುದು ಹೀಗೆ : ''ಬಡವರನು ಕಣ್ಣೆತ್ತಿ ನೋಡೆ, ತ್ಯರನು ಬೆಂಬತ್ತಿ ನಡೆವ ಅಪೇಕ್ಷೆ ನಿನ್ನದು'' (೪೫ನೇ ಪದ್ಯ); ರಾಗಿಯು ತನ್ನನ್ನು ್ಯನಿಸಿಕೊಳ್ಳುವುದು ಹೀಗೆ : ''ಮಳೆದೆಗೆದು ಬೆಳೆಯಡಗಿ ಕ್ಷಾಮದ ವಿಲಯಕಾಲ ಅನ್ನವಿಲ್ಲದೆ ಅಳಿವ ಪ್ರಾಣಿಗಳ ಆಧರಿಸಿ ಸಲಹುವೆನು'' (೪೭ನೇ ಪದ್ಯ);

ಅಧಿಕಾರಕ್ಕಾಗಿ...
ಮಾಟ, ಮಂತ್ರ



ಗೆದ್ದು ಅಧಿಕಾರಕ್ಕೆ ಬಂದರೆ.... ಜನರ ಸಮಸ್ಯೆಗಳಿಗೂ ಮಾಟ, ಮಂತ್ರವೇ ಪರಿಹಾರವೇ ಸಾರ್...?

ಕಪಿಲಮುನಿಯ ಪ್ರಶಸ್ತಿ: (ರಾಗಿಯು) ''ಬಡವರ ಬಲ್ಲಿದನು ಆರೈದು ಸಲಹುವನು'' ಮತ್ತು (ಬತ್ತವು) ಭಾಗ್ಯದಿ ಬಲ್ಲಿದರ ಪತಿಕರಿಸುವನು (೧೩೫ನೇ ಪದ್ಯ); ಶ್ರೀರಾಮನ ಪ್ರಶಸ್ತಿ: (ರಾಗಿಯು) ''ಧರೆಗೆ ಹೊದ್ದಿದ ಕ್ಷಾಮಕಾಲದಿ ಕರುಣದಿಂ ನಡೆತಂದು ಲೋಕವ ಹೊರೆವನು ಅದು ಕಾರಣವೆ ಪತಿಕರಿಸಿದೆವು'' (೧೪೭ನೇ ಪದ್ಯ) ಮತ್ತು (ಬತ್ತವು) ''ದೀನರಲಿ ದಾರಿದ್ರ್ಯ ಜನದಲಿ ನಿರ್ದಯನೆಂದೆವು ಅಲ್ಲದೆ ಹೀನಗಳೆದವರಲ್ಲ!'' (೧೪೮ನೇ ಪದ್ಯ). ರಾಮಧಾನ್ಯ ಚರಿತ್ರೆಯ ಆರಂಭ ಮಧ್ಯಾಂತಗಳಲ್ಲಿ ಕೃತಿಯುದ್ದಕ್ಕೂ ಬಡಜನರ ಪಕ್ಷ ವಹಿಸಿ ಮಾತನಾಡುವುದನ್ನು ಗಮನಿಸಿದರೆ, ಇದರಲ್ಲಿರುವ ವರ್ಗ ಸಂಘರ್ಷ, ವರ್ಣ ಸಂಘರ್ಷಗಳ ಸಾಮಾಜಿಕ ಧ್ವನಿಯು ಯಾರಿಗಾದರೂ ಮನದಟ್ಟಾಗುತ್ತದೆ. ಈ ಕೃತಿಯ ಮಹತ್ವವೇನೆಂಬುದನ್ನು ಖಚಿತವಾಗಿ ಗುರುತಿಸಿಕೊಳ್ಳುವ ಇಚ್ಛೆಯುಳ್ಳವರು, ೧೯೩೦ರಲ್ಲಿ ಶ್ರೀ ಗವಾನಂದ ಕೆರೋಡಿ ಸುಬ್ಬರಾವ್ ವಿರಚಿತ 'ಪಲಾಂಡು ಚರಿತ್ರೆ' ಯೊಂದಿಗೆ ಹೋಲಿಸಿ ನೋಡಬೇಕಾಗುತ್ತದೆ. 'ಪಲಾಂಡು ಚರಿತ್ರೆ'ಯ ಬಗ್ಗೆ ಹೀ. ಚಿ. ಶಾಂತವೀರಯ್ಯನವರು ಲೇಖನವೊಂದನ್ನು (ಸುಧಾ ೨೩, ಸೆಪ್ಟೆಂಬರ್ ೧೯೭೯) ಬರೆದಿದ್ದಾರೆ. ತರಕಾರಿಗಳ ನಡುವೆ ಯಾರು ಹೆಚ್ಚು, ಎಂಬ ಕಲಹ ಉಂಟಾಗಿ, ಎಲ್ಲವೂ ತುರಂಗವಾಸದ ಶಿಕ್ಷೆಗೊಳಗಾಗುತ್ತವೆ. ತುರಂಗವಾಸದ ನಂತರ ಎಲ್ಲ ತರಕಾರಿಗಳು ಕೊಳೆತು ಕೆಟ್ಟುಹೋಗಿದ್ದರೆ, 'ಪಲಾಂಡು' (= ಈರುಳ್ಳಿ) ಮಾತ್ರ ನಳನಳಿಸುತ್ತಾ ಬಳಸಲು ಯೋಗ್ಯವಾಗಿರುತ್ತದೆ. ತರಕಾರಿಗಳ ಮೇಲಾಟದಲ್ಲಿ ಈರುಳ್ಳಿಗೆ ಜಯವು ಪ್ರಾಪ್ತಿಯಾಗುತ್ತದೆ. ಕೇವಲ ತಾಂತ್ರಿಕವಾದ ಕಲೆಗಾರಿಕೆಗೂ ಸಾಮಾಜಿಕ ಬದ್ಧತೆಯುಳ್ಳ ಕಲೆಗಾರಿಕೆಗೂ ನಡುವಣ ವ್ಯತ್ಯಾಸಕ್ಕೆ 'ಪಲಾಂಡು ಚರಿತ್ರೆ' ಮತ್ತು 'ರಾಮಧಾನ್ಯ ಚರಿತ್ರೆ' ಅತ್ಯುತ್ತಮ ನಿದರ್ಶನಗಳಾಗಿ ಕಾಣುತ್ತವೆ.

'ರಾಘವ' ಎಂಬ ಹೆಸರಿನಿಂದ 'ರಾಗಿ' ಶಬ್ದದ ನಿಷ್ಪತ್ತಿಯನ್ನು ವಿವರಿಸುವ ಬಗೆಯನ್ನು ಭಾಷಾವಿಜ್ಞಾನದಲ್ಲಿ 'ಪಂಡಿತ ನಿಷ್ಪತ್ತಿ' ಅಥವಾ 'ಸಂಸ್ಕೃತೀಕರಣ' ಎಂದು ಕರೆಯುತ್ತಾರೆ. ದೇಸಿ ಶಬ್ದಗಳಿಗೆ ಮಾರ್ಗದಲ್ಲಿ ಮೂಲವನ್ನು ಕಂಡುಕೊಳ್ಳುವ ಕ್ರಮವು ಜ್ಞಾನದಾಹಿಗಳಿಗೆ ಅಪೇಕ್ಷಣೀಯವಾದುದಲ್ಲ. ಆದರೆ ಕನಕದಾಸರು ಇಲ್ಲಿ ಸಂಸ್ಕೃತೀಕರಣದ ಮೂಲಕ ಸಾಧಿಸಿರುವ ದೇಸಿಯ ದಿಗ್ವಿಜಯವನ್ನು (= ರಾಗಿಯ ಪಟ್ಟಾಭಿಷೇಕವನ್ನು) ಮನಗಂಡರೆ, ಮೆಚ್ಚುಗೆ ಉಂಟಾಗುತ್ತದೆ. ಬಹುಶಃ ಅಪನಿಷ್ಪತ್ತಿಯೇ ನಿಜ ನಿಷ್ಪತ್ತಿಯಾಗುವ ಏಕೈಕ ನಿದರ್ಶನ ಇದೊಂದೆ ಇರಬಹುದು.

**ಕುವೆಂಪು ಅವರ 'ಗೊಬ್ಬರ'**ವು ಬಹು ವಿಶಿಷ್ಟವಾದೊಂದು ಕವಿತೆ. ಒಂದು ಸಮಾಜದ ಬುದ್ಧಿಜೀವಿಗಳಿಗೂ ಶ್ರಮಜೀವಿಗಳಿಗೂ ಪ್ರತೀಕವಾಗಿರುವ 'ಮರದ ತುದಿ ಹೂವು' ಮತ್ತು 'ಗೊಬ್ಬರ'ದ ನಡುವಣ ಸಂವಾದ ಭಾಗ ಈ ಕವನದ ವೈಶಿಷ್ಟ್ಯವಾಗಿದೆ. ಆದರೆ ಈ ಸಂವಾದವು ಹರಿಶ್ಚಂದ್ರ-ಹೊಲತಿಯರಂತೆ, ರಾಗಿ-ವ್ರೀಹಿಯಂತೆ ಉಭಯ ಸಂವಾದವಾಗಿರದೆ, ಪಂಡಿತರು ಮತ್ತು ಪಾಮರರ ಪರವಾಗಿ ಮೂಡಿಬರುವ ಕವಿವಾಣಿಯಂತೆ ನಿರೂಪಣೆಗೊಂಡಿದೆ. ನೆಲದ ಗೊಬ್ಬರದಿಂದ ಪುಷ್ಟಿ ಪಡೆಯುವ ಮರದ ತುದಿ ಹೂವಿನ ರೂಪಕದಲ್ಲಿ ಬುದ್ಧಿಜೀವಿಗಳಿಗೂ ಶ್ರಮಜೀವಿಗಳಿಗೂ ನಡುವೆ ಇರಲೇಬೇಕಾದ ಅವಿನಾಭಾವ ಸಂಬಂಧವನ್ನು ಕುವೆಂಪು ನಿರೂಪಿಸಿದ್ದಾರೆ. ಸಾಮಾಜಿಕವಾದ ವೈರುಧ್ಯಗಳು ಮತ್ತು ಸಂಘರ್ಷದಿಂದ ಆರಂಭವಾಗುವ ಈ ಕವನವು ಅಂತಿಮವಾಗಿ ಸಾಮಾಜಿಕ ಸಾಮರಸ್ಯಕ್ಕೆ ಒತ್ತು ನೀಡಿದೆ. ಪಂಪನ ಪುಷ್ಪೋದ್ಯಾನದಲ್ಲಿ ಮನಃಪರಿವರ್ತನೆಯ ಬಿತ್ತನೆ ಕಾರ್ಯ, ಹರಿಹರನ ಪುಷ್ಪರಗಳೆಯಲ್ಲಿ ಹೂಮಾಲೆಯಾಗುವ ಸಂಘಟನೆಯ ಧ್ವನಿ, ಕನಕದಾಸರ ರಾಮಧಾನ್ಯ ಚರಿತ್ರೆಯಲ್ಲಿರುವ ವರ್ಗ ಸಂಘರ್ಷದ ಸಾಮಾಜಿಕ ಧ್ವನಿ, ಕುವೆಂಪು ಅವರ 'ಗೊಬ್ಬರ' ಕವನದಲ್ಲಿರುವ ಸಾಮಾಜಿಕವಾದ ಪಲ್ಲಟ ಮತ್ತು ಸಾಮರಸ್ಯದ ಧ್ವನಿಗಳನ್ನು ಒಟ್ಟಿಗೆ ಪರಿಭಾವಿಸಿದರೂ, ಸಾಮಾಜಿಕವಾದ ಕೆನೆಪದರ ಮತ್ತು ತಳ ಸಮುದಾಯಗಳ ಸಮಗ್ರ ದರ್ಶನವೊಂದು ಪ್ರಕಟಗೊಳ್ಳುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ, ರಾಮಧಾನ್ಯ ಚರಿತ್ರೆಯು ಒಬ್ಬೊಂಟಿಯಾಗಿ ಕಾಣದೆ, ಇದರ ಬೇರು-ಬೀಜ-ಫಲಗಳೊಂದಾಗಿ ಕಾಣುತ್ತವೆ. ಕೊನೆಯದಾಗಿ, ಕನಕದಾಸರ ಕೃತಿಗಳಲ್ಲಿ ಕಾಣಬರುವ ತತ್ವಜ್ಞಾನ ಯಾವುದು, ಎಂಬ ಪ್ರಶ್ನೆಯನ್ನು

ಪರಿಶೀಲಿಸಬೇಕಾಗಿದೆ. ಪ್ರೊ॥ ಕಿ. ರಂ. ನಾಗರಾಜ ಅವರು 'ವ್ಯಾಸಕೂಟ' ಮತ್ತು 'ದಾಸಕೂಟ'ಗಳನ್ನು ಕನಕದಾಸರ ಕಾಲದ ಭಿನ್ನಮತಗಳು ಮಾತ್ರವೆಂಬಂತೆ ನಿರೂಪಿಸದೆ, ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಇಂದಿಗೂ 'ವ್ಯಾಸಕೂಟ- ದಾಸಕೂಟ' ಗಳೆಂಬ ಭಿನ್ನಮತಗಳಿರುವುದನ್ನು ಪ್ರಸ್ತಾಪಿಸಿದ್ದಾರೆ. ಕನಕದಾಸರನ್ನು ವ್ಯಾಸಕೂಟದ ವಿದ್ವಾಂಸರು ತಮ್ಮ ತತ್ವಜ್ಞಾನದ ಜೀತಕ್ಕೆ ಶರಣಾಗಿಸಿದರೆ, ದಾಸಕೂಟದ ವಿದ್ವಾಂಸರು ತಾವೇನು ಕಡಿಮೆಯೆಂದು ತಮ್ಮ ತತ್ವಜ್ಞಾನದ ಗೂಟಕ್ಕೆಳೆದು ಕಟ್ಟುವುದನ್ನು ಕಿ. ರಂ. ನಾಗರಾಜ ಅವರು ಖಂಡಿಸಿದ್ದು ನ್ಯಾಯಬದ್ಧವಾಗಿದೆ. ಏಕೆಂದರೆ, ಕನಕದಾಸರಂಥ ದಾಸಶ್ರೇಷ್ಠರು, ಸಂತರು, ಕವಿಗಳು ಯಾವುದಾದರೊಂದು ನಿರ್ದಿಷ್ಟ ರೀತಿಯ ತತ್ವಜ್ಞಾನಕ್ಕೆ ತಮ್ಮನ್ನು ತೆತ್ತುಕೊಂಡಿದ್ದಾರೆಂದು ಹೇಳಲಾಗದು! ಸಿದ್ಧರೂಪದ ತತ್ವಜ್ಞಾನಕ್ಕೆ ಗುಲಾಮನಾಗುವ ಯಾವೊಬ್ಬ ಲೇಖಕನೂ ದೊಡ್ಡವನಲ್ಲ!

ಕನಕದಾಸರ ಸ್ವಾನುಭವ-ಲೋಕಾನುಭವಗಳಿಂದ ಅರಳಿದಂತೆ ಕಾಣುವ ರಾಗಿ-ವ್ರೀಹಿ ಸಂವಾದವು ತನ್ನೊಳಗೆ ವ್ಯಾಸಕೂಟ ಮತ್ತು ದಾಸಕೂಟಗಳ ಭಿನ್ನಮತ, ಕಲಹಗಳನ್ನು ಗರ್ಭೀಕರಿಸಿಕೊಂಡಂತೆ ಭಾಸವಾಗುತ್ತದೆ. ರಾಮಧಾನ್ಯ ಚರಿತ್ರೆಯ ಸೂಕ್ಷ್ಮರೂಪದಂತಿರುವ "ಕುಲಕುಲವೆಂದು ಹೊಡೆದಾಡದಿರಿ, ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ ?" – ಎಂಬ ಕೀರ್ತನೆಯನ್ನು ಸ್ಮರಿಸಿಕೊಂಡಲ್ಲಿ ಜಾತಿಪದ್ಧತಿಯ 'ಸ್ಥಾವರ' ಸಮಾಜದಲ್ಲಿ ಕನಕದಾಸರು ಪರಿವರ್ತನೆಯ 'ಜಂಗಮ' ಗಾಳಿಯನ್ನುಂಟುಮಾಡಿದರೆಂಬುದೇ ಅವರ ಕೃತಿಗಳಲ್ಲಿ ಕಾಣಬರುವ ತತ್ವಜ್ಞಾನ ಯಾವುದೆಂಬುದನ್ನು ಸೂಚಿಸಿಬಿಡುತ್ತದೆ... ಇದನ್ನು 'ಪರಿವರ್ತನ ತತ್ವಜ್ಞಾನ' ಎಂಬ ಮಾತಿನಿಂದ ಕರೆಯಬಹುದು. ಆದರೆ, ವ್ಯಾಸಕೂಟದ ವಿದ್ವಾಂಸರು ಈ 'ಪರಿವರ್ತನೆ'ಯೆಂಬ ಪ್ರಾಣವನ್ನೇ ಕಳೆದು 'ಮಾಧ್ವತತ್ವ'ವೆಂಬ ಹುಲ್ಲು ತುರುಕಿ, ಕನಕದಾಸರನ್ನು ಮ್ಯೂಸಿಯಂ ವಸ್ತುವನ್ನಾಗಿ ಮಾಡಿಬಿಡುತ್ತಾರೆ. ಇದಕ್ಕೆ ಬನ್ನಂಜೆ ಗೋವಿಂದಾಚಾರ್ಯರ ಅಭಿಪ್ರಾಯ ಒಂದು ಉದಾಹರಣೆಯಾಗಿದೆ :

"...ಆ ಕಾಲದ ಸಾಮಾಜಿಕ ನಿಯಮವನ್ನು ಒಗ್ಗಿಸಿಕೊಂಡು ಒಪ್ಪಿಕೊಂಡು ಬೆಳೆದವರು ಅವರು. ಜಾತಿಪದ್ಧತಿಯನ್ನೆ ಕಿತ್ತೊಗೆಯಬೇಕು ಎನ್ನುವ ಕ್ರಾಂತಿಯ ದೃಷ್ಟಿ ಕನಕದಾಸರ ಕನಸಿನಲ್ಲೂ ಇದ್ದಂತಿಲ್ಲ. ಇಪ್ಪತ್ತನೆಯ ಶತಮಾನದ ಒಲವು ನಿಲುವುಗಳನ್ನು ನಾಲ್ಕು ಶತಕ ಹಿಂದೆ ಬದುಕಿದ ಒಬ್ಬ ಸಂತನ ಮೇಲೆ ಹೇರಿ ವ್ಯಾಖ್ಯಾನಿಸುವುದೂ ಒಂದು ಬಗೆಯ ಅಪಚಾರದ ಆವೇಶವೇ. ಕನಕದಾಸರು ಜಾತಿಪದ್ಧತಿ... ಒಪ್ಪಿಕೊಂಡು ಅದರ ಹೆಸರಿನಲ್ಲಿ ನಡೆಯುತ್ತಿದ್ದ ಸೋಗು ಡಂಭಾಚಾರಗಳನ್ನು ... ಎತ್ತಿ ತೋರಿಸಿ ಟೀಕಿಸಿದರು..."

ಜಾತಿ ಮತ್ತು ಕಾಲದ ಕಲ್ಪನೆಗಳನ್ನು 'ಸ್ಥಾವರ'ವಾಗಿ ನೋಡುತ್ತಿರುವ ... ವಿದ್ವಾಂಸರು ಅಂತಿಮವಾಗಿ ತಲುಪುವ ನಿರ್ಣಯಗಳು ಹೀಗಿವೆ :

೧. "ವ್ಯಾಸರಾಜರ ಭೇಟಿಯಾಗುವ ತನಕವೂ ಕನಕದಾಸರ ಚಿಂತನಕ್ಕೆ ... ಖಚಿತರೂಪ ದೊರಕಿದಂತಿಲ್ಲ. ಅಲ್ಲಿಂದ ಮುಂದೆ ಅವರು ಮಾಧ್ವದೀಕ್ಷೆಯ... ಕೊನೆಯದಾಗಿ ಅಪ್ಪಿಕೊಂಡರು ಎಂದು ಕಾಣುತ್ತದೆ."

೨. "ಕನಕದಾಸರ ಪದ್ಯಗಳೇ ಸ್ಫುಟವಾಗಿ ಹೇಳುವಂತೆ ಆಚಾರ್ಯ ಮಧ್ವ... ಕನಕದಾಸರ ಕೊನೆಯ ಸಾಧನೆಯ ಗುರುಗಳಾಗಿ ನಿಂತರು; ಮಾಧ್ವರ ತತ್ವಜ್ಞಾನ... ಕನಕದಾಸರ ಸಾಧನೆಗೆ ದಾರಿದೀಪವಾಯಿತು ಎನ್ನುವುದು ಮಾತ್ರ ನಿಶ್ಚಿತ..."

೩. "ಅದರಲ್ಲೂ ಪುನಃ ಮಾಯಾವಾದದ ದಾರಿಯಲ್ಲಿ ಸಾಗದೆ, ಆಚಾರ್ಯ ಮ... ಉಪನಿಷನ್ಮಾರ್ಗದಲ್ಲೇ ಸಾಗಬೇಕು ಎಂದು ಕನಕದಾಸರು ಎಚ್ಚರಿಸುತ್ತಾರೆ..." ಶ್ರೀ ಬನ್ನಂಜೆ ಗೋವಿಂದಾಚಾರ್ಯರ ಅಭಿಪ್ರಾಯಗಳು 'ಕನಕದಾಸರ ತತ್ವಜ್ಞಾನ...' ಎಂಬ ಲೇಖನದಿಂದ. ಸಪ್ತಗಿರಿ (ಟಿ.ಟಿ.ಡಿ. ಮಾಸಪತ್ರಿಕೆ) ಜೂನ್ ೧೯೯೪.

ಕನಕದಾಸರನ್ನು ಪೂರ್ವಸಿದ್ಧ ತತ್ವಜ್ಞಾನವೊಂದರ ಪ್ರತಿಪಾದಕನೆಂಬ... ನೋಡುವ ದೃಷ್ಟಿ ಸ್ಥಾವರವಾದದ್ದು ಮತ್ತು ಸಂಕುಚಿತವಾದದ್ದು. ಕನಕದಾಸ... ಶ್ರಮಸಂಸ್ಕೃತಿಗೆ ಸಹಜವಾದ ಜನಪದ ಧರ್ಮದ ಧಾತು ಮತ್ತು ಧೋರಣೆಗಳ... ಹೊಂದಿದ್ದರೆಂದು ತಿಳಿಯುವುದೇ ಸಾಧು!*

(*ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ, ಹಾವೇರಿ ಜಿಲ್ಲೆ, ಬ್ಯಾಡಗಿ ತಾಲ್ಲೂಕು ಮತ್ತು ಕಾಗಿ... ಮಹಾಸಂಸ್ಥಾನಗಳ ಸಂಯುಕ್ತ ಆಶ್ರಯದಲ್ಲಿ, ಕಾಗಿನೆಲೆಯ ಕನಕ ಗುರುಪೀಠ... ಆವರಣದಲ್ಲಿ ದಿನಾಂಕ ೨೬-೧೧-೨೦೦೭ರಂದು ಏರ್ಪಡಿಸಿದ್ದ ವಿಚಾರಗೋಷ್ಠಿ... ಮಾಡಿದ ಭಾಷಣವನ್ನಾಧರಿಸಿದ ಲೇಖನವಿದು.)

ವಿ. ಚಂದ್ರಶೇಖರ ನಂಗಲಿ
೧೬, ಶ್ರೀ ಗೌರಿ, ಕನಕನಗರ, ಹೊಸಕೋಟೆ - ೫೬೨ ೧೧೪

## ಹಾಡು ಕತೆಗಳ ಕಣಜ



ಇಲ್ಲಿ ಗೋಡೆಗಳು ಹಾಡುತ್ತವೆ
ಕಂಬಿಗಳು ಕತೆ ಹೇಳುತ್ತವೆ
ಹಗಲು ರಾತ್ರಿ ಪಹರೆ ಕಾಯುವ ಸಾವು
ಆಗಾಗ ಬೆನ್ನಮೇಲೆ ಕೈಹಾಕಿ
ತಣ್ಣಗೆ ಮಗ್ಗುಲಲ್ಲಿ ಮಲಗಿ ಕುಶಲ ಕೇಳುತ್ತದೆ
ಇಲ್ಲಿ ಮಾತು ಮೌನಗಳೆಲ್ಲ ಹಾಡು ಕತೆಗಳ ಕಣಜ
ಗೋಡೆ ಗೋಡೆಗೆ ಹೊಡೆದು ಪ್ರತಿಧ್ವನಿಗೊಡುವ
ನೂರು ಸಾವಿರವಾಗಿ ಅರಚಿಕೊಳ್ಳುವ
ಲಾಳದ ಭಯಕ್ಕೆ ಅವಿತುಕೊಳ್ಳುವ
ಅನಾಥಶಿಶುಗಳು
ಮಧ್ಯೆ ರಾತ್ರಿಯಲ್ಲೂ ಎಚ್ಚರವಿರುವ
ಕೂತುಕೊಂಡೇ ತೂಕಡಿಸುವ
ನಿದ್ದೆಯಲ್ಲೂ ಎದ್ದು ಓಡಾಡುವ
ಆಕಾರ ತಳೆಯದ ಅಮಾಯಕ ಕೃತಿಗಳು
ದೀಪದ ಬೆಳಕಲ್ಲಿ ಆಕಾಶದ ಪೋಜು ಕೊಡುವ
ಸುಣ್ಣ ಬಳೆದ ಗೋಡೆಗಳ ನಡುವೆ ನಡುಗುತ್ತ
ಮುದುಡಿ ಮಲಗುವ ಜೀವಗಳು ದೇಹಗಳು
ಕೆಂಡವಾಗದೆ ಕುದಿವ ಕುಲುಮೆಗಳು

ಮುಗಿಲುದ್ದ ಕೇಕೆ ಹಾಕುವ ಬಯಲ ಬೇತಾಳಗಳು
ಹಗಲೊಳಗೆ ಘನಬಯಲ ಮರದೊಳಗೆ
ಗರಿಬಿಚ್ಚದೆ ಕಣ್ಣು ತೆರೆಯದೆ ಜೋತಾಡುವ
ಬಾವಲಿಗಳು
ಹಲವು ಚಿಂದಿ ಮೋಡಗಳಾಗಿ ಚಿನ್ನಾಟವಾಡುವುವು
ದೂರ ದೂರ ಬಂಧುಗಳ ಮನೆಗಳ ಮೇಲೆ
ಕಣ್ಣೀರ ಮಳೆಯಾಗಿ ಹನಿಯೊಡೆದು ಹಾಡುವ
ಮೇಘದೂತಗಳು
ಹಗಲಾಗುವುದನ್ನು ಕಾಯುತ್ತ ರಾತ್ರಿ
ರಾತ್ರಿಯಾಗುವುದನ್ನು ಕಾಯುತ್ತ ಹಗಲು
ಕಳೆಯುತ್ತವೆ ಹೊತ್ತು ಸಹನೆಯ ಬಂಡೆಗಳ ಹೊತ್ತು
ನರಕದ ಕೊಪ್ಪರಿಗೆಯಲ್ಲಿ ಬೇಯುತ್ತವೆ
ತರತರದ ಬೇಸರದ ಅಪಸ್ವರದ ತಳಮಳದ
ಪ್ರವಾಹಗಳು
ಉಕ್ಕಿ ಹರಿಯಲು ಕಾತರಿಸುತ್ತವೆ
ಗೋಡೆಗಳ ಕಂಬಿಗಳ ಒಡ್ಡುಗಳ ಒಳಗೆ
ತುಂಬಿತುಳುಕುತ್ತವೆ.

ಬಸವರಾಜ ವಕ್ಕುಂದ
ಸಂಖ್ಯೆ ೩.೨, ಮಾಲ್ತೇಶ್ ಬಿಲ್ಡಿಂಗ್, ೧ನೇ ಕ್ರಾಸ್, ಕುಸುಮಾನಗರ, ಧಾರವಾಡ - ೫೮೦ ...

BOOKS FOR EVERYONE



Rs. 40



Rs. 80



Rs. 100



Rs. 60



Rs. 60



Rs. 50



Rs. 60



Rs. 60


Rs. 80



Rs. 40



Rs. 50



Rs. 60



Rs. 60



Rs. 60



Rs. 40



Rs. 100



Rs. 80



Rs. 40



Rs. 80



Rs. 30

MANOJ PUBLICATIONS

761, Main Road, Burari, Delhi - 110 084, Phones : 27611116, 27611349, Fax : 27611546, Mob : 9868112194
e-mail : info@manojpublications.com website : www.manojpublications.com
Showroom : Majoj Publications, 1583-84, Dariba Kalan, Chandni Chowk, Delhi-6
Phone : 23262174, 23268216, Mobile : 9818753569

# Get connected

## from anywhere in the country

Core Banking Solution
FINACLE

**Karnataka Bank has networked all its branches.**

## Enjoy the full range of our banking services:

- Internet Banking
- MoneyPlant International VISA Debit Card
- ATM Facility
- Bancassurance
- Mobile SMS Alerts
- Mutual Fund
- Multi Branch Banking
- MultiCity Cheque Facility
- Online Railway Tickets
- RTGS/NEFT Facility
- Western Union Money Transfer
- Demat Services
- Attractive Deposit & Loan Schemes

Committed to offer you 100% satisfaction with our banking services.

Step into your nearest Karnataka Bank branch for details



Karnataka Bank Ltd.

Your Family Bank. Across India.

Regd. & Head Office: Mangalore - 575 002 E-mail: info@ktkbank.com Visit us at: www.karnatakabank.com

# ವಸಾಹತೋತ್ತರ ಕಲೆ: ಸುರೇಖಾ



ಳೆದ ಹತ್ತು ಹದಿನೈದು ವರ್ಷಗಳಲ್ಲಿ ಕರ್ನಾಟಕವು, ಮುಖ್ಯವಾಗಿ ಬೆಂಗಳೂರು, ಷ್ಟ್ರದ ಹಾಗೂ ಪಾಶ್ಚಾತ್ಯ ದೇಶಗಳ ಕಲಾವಿದರ, ಕಲಾಸಕ್ತರ ಗಮನ ಸೆಳೆದಿದೆ. ಗತೀಕರಣದ ಹಿನ್ನೆಲೆಯಲ್ಲಿ ಮಿಶ್ರಸಂಸ್ಕೃತಿ ನಗರವಾಗಿ ಬೆಳೆಯುತ್ತಿರುವ ಬೆಂಗಳೂರಿನ ಹೊಸ ಸಂವೇದನೆಗಳನ್ನು ಬದುಕಿನ ಸಂಕೀರ್ಣ ಅನುಭವ ಅನುಭೂತಿಗಳನ್ನು ಅಭಿವ್ಯಕ್ತಿ ಗೊಳಿಸಲು ಹೊಸ ಪ್ರಯೋಗ ಸಾಧ್ಯತೆಗಳನ್ನು ಅರಸಿ ಬಳಸುತ್ತಿರುವ ಬೆರಳೆಣಿಕೆಯ ತಿಭಾವಂತ ಕಲಾವಿದೆಯರಲ್ಲಿ ಶ್ರೀಮತಿ ಸುರೇಖಾ ಒಬ್ಬರು. ದೃಶ್ಯಕಲೆಯ ಧ್ಯತೆಗಳು ವಿಸ್ತರಿಸುತ್ತಿರುವ ಸಂದರ್ಭವಿದು. ವರ್ಣಚಿತ್ರ ರಚನೆ ಯಾಚೆಗೂ ಭಿವ್ಯಕ್ತಿ ಮಾಧ್ಯಮಗಳನ್ನು, ಮಾಧ್ಯಮ ಪರಿಕರಗಳನ್ನು, ಸಂವಹನ ವಿಧಾನಗಳನ್ನು ಡುಕುವತ್ತ ಒಲವು ಹೆಚ್ಚಿದೆ. ಸುರೇಖಾ ಅವರು ವರ್ಣಚಿತ್ರ, ಛಾಯಾಚಿತ್ರ, ಡಿಯೊ ಕಲೆ, ವಿಡಿಯೊ ಸ್ಥಾಪನಾ ಕಲೆಗಳೆಲ್ಲದರಲ್ಲೂ ಕಲಾಕೃತಿಗಳನ್ನು ಸೃಷ್ಟಿಸಿದ್ದಾರೆ. ವರದು ಬಹು ಶಕ್ತಿಯುತವಾದ ಸ್ತ್ರೀ ಸಂವೇದನೆಯ ದನಿ, ಅಭಿವ್ಯಕ್ತಿ . ಕಲಾರಚನೆ ಂಬುದು ಅವರಲ್ಲಿ 'ಕಲಾಕ್ರಿಯೆ' (ಆರ್ಟ್ ಆ್ಯಕ್ಟ್) ಆಗಿದೆ. ಅವುಗಳ ಹಿಂದಿನ ಸೃಷ್ಟಿ, ಂತನೆ, ಸಂವೇದನೆಗಳ ಬಗೆಗೆ ಈ ಸಂವಾದದಲ್ಲಿ ಒಳನೋಟಗಳಿವೆ. ಸಂವಾದದಲ್ಲಿ ಾಗವಹಿಸಿರುವ ಎಚ್. ಎ. ಅನಿಲ್‌ಕುಮಾರ್ ಕಲಾ ಇತಿಹಾಸಕಾರರು, ಕಲಾ ಮರ್ಶಕರು, ನವ ಸೌಂದರ್ಯ ಮೀಮಾಂಸೆಯ ಚಿಂತಕರು. ಹಲವು ಕಲಾವಿದರ ಂದಿನ ಸ್ಫೂರ್ತಿಯೂ ಆಗಿದ್ದಾರೆ. ರಮೇಶಚಂದ್ರ ಅವರು ಕಲಾ ಅಧ್ಯಾಪಕರು, ಕಲಾ ರೆಹಗಾರರು, ಸ್ವತಃ ಶ್ರೇಷ್ಠ ಕಲಾವಿದರು. ಶ್ರೀಮತಿ ಎಂ. ಎಸ್. ಆಶಾದೇವಿಯವರು ಧ್ಯಾಪಕಿ, ಸ್ತ್ರೀ ಸಂವೇದನೆಯ ಬರೆಹಗಾರರಲ್ಲಿ ಒಬ್ಬರಾಗಿ ಪ್ರಸಿದ್ಧರು. ಹೊಸತು'ವಿಗಾಗಿ ಸಂದರ್ಶನವನ್ನು ಸಂಯೋಜಿಸಿ ಲೇಖನವನ್ನು ಸಿದ್ಧಪಡಿಸಿರುವ ಪ್ರೊ॥ ಎಂ. ಎಚ್. ಕೃಷ್ಣಯ್ಯನವರು ನಿವೃತ್ತ ಕನ್ನಡ ಪ್ರಾಧ್ಯಾಪಕರು. ಸುಪ್ರಸಿದ್ಧ ಕಲಾ ತ್ತು ಸಾಹಿತ್ಯ ವಿಮರ್ಶಕರು. 'ಹೊಸತು' ಬಳಗದಲ್ಲಿ ಅವರದ್ದು ವಿಶಿಷ್ಟ ಸ್ಥಾನ.

## ಒಂದು ಸಂವಾದ

**ಎಂ.ಎಚ್.ಕೆ. :** ನಮಸ್ಕಾರ. ಸುರೇಖಾ ಅವರ ಬಗ್ಗೆ ಸ್ನೇಹಿತರ ಒಂದು ದೊಡ್ಡ ಆಕ್ಷೇಪಣೆ. ಕೆಲ ತಿಂಗಳು ಬೆಂಗಳೂರಲ್ಲಿದ್ದರೆ, ಉಳಿದಂತೆ ದೇಶವಿದೇಶ ಸುತ್ತಾಡೋದೇ ಹೆಚ್ಚು. ಕಲಾಪ್ರದರ್ಶನ, ಉಪನ್ಯಾಸ, ಕಾರ್ಯಾಗಾರ, ರೆಸಿಡೆನ್ಸಿ ಎಂಬುವು ಕಾರಣಗಳು. ಹಾಗೆ ನೋಡಿದರೆ ಇಂದು ಭಾರತೀಯ ಕಲೆಯ ಕ್ಷೇತ್ರದಲ್ಲಿ ಆಗಿರುವ ಒಂದು ಆಶ್ಚರ್ಯಕರ ಬದಲಾವಣೆಯನ್ನು ಇದು ಸೂಚಿಸುತ್ತೆ. ಅದರಲ್ಲೂ ಕಳೆದ ಹದಿನೈದು ವರ್ಷಗಳ ಹಿಂದಿನ ವಾತಾವರಣ, ಸ್ಥಿತಿಗಳನ್ನು ಗಮನಿಸಿದರೆ. ಈ ಸ್ಥಿತ್ಯಂತರಕ್ಕೆ ಕಾರಣವಿರಬೇಕಲ್ಲವೆ ?

**ರಮೇಶ್‌ಚಂದ್ರ :** ಹಿಂದೆ ಐವತ್ತು ಅರವತ್ತರ ದಶಕಗಳಲ್ಲಿ ಹೊರಗಡೆ ಹೋಗಿಬರುವಂಥ ಕಲಾವಿದರ ಸಂಖ್ಯೆ ಕಡಮೆ ಇತ್ತು. ಅದೂ ಸೆಲೆಬ್ರಿಟೀಸ್‌ಗೆ. ಹಿರಿಯರಾಗಿ ಹೆಸರು ಮಾಡಿದ ಮೇಲೆ ಇಂತಹ ಅವಕಾಶಗಳು ದೊರೆಯುತ್ತಿದ್ದವು. ಕೆ. ಕೆ. ಹೆಬ್ಬಾರ್ ಅಂತಹವರಿಗೆ ಅದು ಸಾಧ್ಯವಿತ್ತು. ಈಗ ಸೃಜನಶೀಲ ಕಲಾವಿದರಿಗೆ ಅವಕಾಶಗಳು ಹೆಚ್ಚಿವೆ. ವಿದ್ಯಾಭ್ಯಾಸ ಮುಗಿಸುತ್ತಿದ್ದಂತೆ, ಈಗಿನ ತಲೆಮಾರಿನವರಿಗೆ, ಹೊರಗಿನ ದೃಶ್ಯ ಸಂಸ್ಕೃತಿ ಬಗ್ಗೆ ಆಸಕ್ತಿವಹಿಸಿ ಕಂಡುಕೊಳ್ಳುವುದರಿಂದ, ಅವರ ಸಂವೇದನೆಗಳು ಹೆಚ್ಚು ವಿಶಾಲವಾಗಿ, ಅವಕಾಶ ಜಾಸ್ತಿಯಾಗಿವೆ.

**ಎಂ.ಎಚ್.ಕೆ. :** ಕೇವಲ ವಿದೇಶೀಯರ ಕಲೆಯ ಬಗ್ಗೆ ಆಸಕ್ತಿ ಅಥವಾ ಅವರ ಅನುಕರಣೆ ಅಷ್ಟೇ ಇರಬಾರದು. ಇಲ್ಲಿನ ನೆಲದ, ಭಾರತೀಯತೆಯ ವಿನಾವರೂ ವಿಶಿಷ್ಟವಾದ ಸತ್ವ ಇರಬೇಕು ಎನಿಸುತ್ತೆ.

**ಸುರೇಖಾ :** ನೀವು ಹೇಳಿದ್ದು ಸ್ನೇಹಿತರ ತಮಾಷೆ ಮಾತು. ಅದೊಂದು ಟ್ರುಥ್, ಅಷ್ಟೆ. ಎಲ್ಲದಕ್ಕೂ ಒಂದು ಸಿಲ್ವರ್ ಲೈನಿಂಗ್ ಇರುತ್ತದೆಯಲ್ಲವೆ ? ನಿಮಗೂ ಗೊತ್ತಿದೆ. ಕೆನ್ ಸ್ಕೂಲ್ ಕಲಾವಿದರು ಅವರ ಚಟುವಟಿಕೆಗಳು ಎಲ್ಲ ಇಲ್ಲಿ ರೂಟೆಡ್. ೬೦ರ ಅನಂತರ ಕಿರಿಯ ತಲೆಮಾರಿನವರು ಬಂದನಂತರ ಈ ಅವಕಾಶಗಳು ಹೆಚ್ಚಿದುವು. ಆಗ್ಗೆ ಇಂಟರ್‌ನೆಟ್‌ನಿಂದ ತುಂಬ ಅನುಕೂಲ ಆಯಿತು. ಅಲ್ಲಿಯುವರೆಗೆ ಮುಂಬೈ, ದೆಹಲಿ ಎಂಬೆಸ್ಸಿಗಳು ಅಲ್ಲಿದ್ದುವು, ಅವರದೇ ಚಟುವಟಿಕೆ ಗಳಾಗುತ್ತಿದ್ದುವು. ಬೆಂಗಳೂರು ದೂರ. ಆದರೆ, ಆಮೇಲೆ, ನಮಗಿಂತ ಹಿರಿಯರು ಶೀಲಾ ಗೌಡ, ಬಿ. ಸುರೇಶ್ ಇವರು ೭೦, ೮೦ರಲ್ಲಿ ತುಂಬಾ ಕಷ್ಟ ಅನುಭವಿಸಬೇಕಾಗಿತ್ತು. ಸ್ಟ್ರಗಲ್ ಮಾಡಬೇಕಾಯಿತು. ಕೆಲಸಕ್ಕೂ ಇಲ್ಲಿ ಅನುಕೂಲವಿರಲಿಲ್ಲ. ಕೆಲವರು ಬರೋಡಾ ಮೊದಲಾದ ಕಡೆ ಹೊರಗೆ ಹೋದರು. ಶೀಲಾ ಮತ್ತು ಕೆಲವರು ಇಲ್ಲೆ ನೆಲಸಿದರು. ನಾವು ಬರೋಡಾ ಶಾಂತಿನಿಕೇತನಗಳಲ್ಲಿ ಶಿಕ್ಷಣ ಮುಗಿಸಿ ಬಂದವರಿಗೆ, ಆಗ್ಗೆ ನಮ್ಮ ಬ್ಯಾಚ್ ಎರಡು ಮೂರು ವರ್ಷದವರೂ

ಸಂವಾದ, ಸಂಯೋಜನೆ

**ಪ್ರೊ॥ ಎಂ. ಎಚ್. ಕೃಷ್ಣಯ್ಯ**



*ಸಂವಾದದ ಸಮಯ : (ಎಡದಿಂದ ಬಲಕ್ಕೆ) ಪ್ರೊ|| ಎಂ. ಎಚ್. ಕೃಷ್ಣಯ್ಯ, ಸುರೇಖಾ, ಅನಿಲ್‌ಕುಮಾರ್ ಮತ್ತು ರಮೇಶ್‌ಚಂದ್ರ*

ಸೇರಿದರೆ ದೊಡ್ಡದು, ಸುಮಾರು ನಲವತ್ತು ಜನರೇ ಇದ್ದೆವು. ಇಲ್ಲಿಗೆ ಬಂದ ಮೇಲೆ ಚಟುವಟಿಕೆ ಪ್ರಾರಂಭಿಸಿದೆವು. ಅಷ್ಟೇ ಅಲ್ಲ. ಒಂದು ಹೊಸ ಬಗೆ ಕಲೆಯೇ ಪ್ರಾರಂಭವಾಯಿತು. ಕಮ್ಯೂನಿಟಿ ವರ್ಕ್ಸ್ ಇರಬಹುದು, ಗ್ರೂಪ್ ಇರಬಹುದು, ಒಂದು ರೀತಿ ಕೊಲಾಬರೇಷನ್ ತರಹ ಚಟುವಟಿಕೆಗಳು. ಒಬ್ಬೊಬ್ಬರೂ ಪಬ್ಲಿಕ್ ಆರ್ಟ್ ಆಗಲಿ, ಬೇರೆ ಆಗಲಿ, ಹೊಸ ಸಂವೇದನೆ ಬೆಳೆಸಿಕೊಂಡು, ಆ ನಾಲ್ಕೈದು ವರ್ಷ ಮಾಡಿದ ಕೆಲಸದಿಂದ ಮುಂಬೈ ದೆಹಲಿ ಕಡೆಯವರೂ ಬೆಂಗಳೂರು ಕಡೆ ನೋಡುವಂಥ ಪ್ರಮೇಯ ಬಂತು.

**ಎಂ.ಎಚ್.ಕೆ :** ಇದಕ್ಕೆ ಕಾರಣ ? ಬೆಂಗಳೂರಿನದೇ, ಕರ್ನಾಟಕದ್ದೇ ಎಂಬ ವಿಶೇಷ.

**ಸುರೇಖಾ :** ನಿಜ. ಬೇರೆ ಕಡೆ ಕಮ್ಯೂನಿಟಿ ವರ್ಕ್ಸ್ ಇರಲಿಲ್ಲ. ವೈಯಕ್ತಿಕವಾಗಿ ಕಲಾವಿದರು ರಚನೆ ಮಾಡುತ್ತಿದ್ದರು, ಒಂದೊಂದು ಸಂಸ್ಥೆ ಆಶ್ರಯದಲ್ಲೂ ಸಹ. ಅದು ಕೆಲಸ ಮಾಡುತ್ತಿದ್ದ ರೀತಿ. ಇಲ್ಲಿ ಏನಾಯಿತೆಂದರೆ, ಒಂದು ಸಂಸ್ಥೆ, ಸಂಘಟನೆ ಎಂದಿರುತ್ತಿರಲಿಲ್ಲ. ಅವರವರೆ ಗ್ರೂಪಾಗಿ, ಇವೆಲ್ಲ ತಾತ್ಕಾಲಿಕ, ಒಟ್ಟಿಗೆ ಒಂದು ವರ್ಷ ಸಿಟಿ ಹೊರಗೆ, ಇನ್ನೊಂದು ವರ್ಷ ನಗರೀಕರಣ ಬಗ್ಗೆ ಹೀಗೆ ಕೆಲಸ ಮಾಡೋದು. ನಾಲ್ಕೈದು ವರ್ಷ ಹೀಗೇ ನಡೆಯಿತು. ಎಲ್ಲರಿಗೂ ಏನಾಗುತ್ತಿದೆ ಎಂದು ಆಶ್ಚರ್ಯ. ಒಂದು ವಿಭಿನ್ನವಾದ ಕಲೆಯೇ ಬೆಳೆಯುತ್ತಿತ್ತು. ಬರೀ ವರ್ಣಚಿತ್ರ ಎಂದೇ ಅಲ್ಲ. ಬೇರೆ ಸಮಸ್ಯೆಗಳಿಗೂ ಸ್ಪಂದಿಸುತ್ತಿದ್ದರು. ಒಂದು ಫಾರ್ಮ್ ಎಂದರೆ ಅದರ ಬಗೆಗೇ ಚರ್ಚೆ, ಜಗಳ. ಪತ್ರಿಕೆಯಲ್ಲೂ ಟೀಕೆ ಬರುತ್ತಿದ್ದವು. ಹೀಗೆ ಕೆಲವು ವರ್ಷ ಆಚೆ ಬೇರೆ ಕಡೆ ಆಗದ ಕೆಲಸ, ಚಟುವಟಿಕೆ ಇಲ್ಲಿ ಆಯಿತು.

**ಎಂ.ಎಚ್.ಕೆ :** ಅನಿಲ್ ಒಂದು ಕಡೆ ಬರೆದಿದ್ದಾರೆ. ಇಲ್ಲಿ ನಡೆದ ವಿಡಿಯೊ, ಸ್ಥಾಪನಾಕಲೆ ಮೊದಲಾದ ಪ್ರಯೋಗಗಳು ಇಡೀ ದೇಶದಲ್ಲೇ ಈ ಮಟ್ಟಕ್ಕೆ ಆಗಿರಲಿಲ್ಲ. ನಮ್ಮ ಕಲಾವಿದರು ಬಹಳ ಮುಂದಿದ್ದಾರೆ ಎಂದು.

**ಸುರೇಖಾ :** ಅದು ಅನಂತರ ಮುಂದುವರೆದದ್ದು. ಪುಷ್ಪಮಾಲಾ ಸಮುದಾಯ, ಹಲಸೂರು ಕೆರೆ ಕ್ರಿಯೇಷನ್ಸ್, ಉಮೇಶರ ನೆಲಾಕೃತಿ ಸ್ಥಾಪನಾ ಕಲೆ ಅಥವಾ ಸ್ಥಳ ನಿರ್ದಿಷ್ಟ ಕಲೆ ಅದು ತುಂಬ ದೊಡ್ಡ ವರ್ಕ್. ಜನರನ್ನು ನಗರದ ಹೊರಗೆ ಕರೆದು ಕೊಂಡುಹೋಗಿ ಅಲ್ಲಿ ಸೃಷ್ಟಿಸಿದ ಕಲಾಕೃತಿ ತೋರಿಸುವುದು. ಎಂದರೆ, ಚಿತ್ರಕಲಾ ಪರಿಷತ್ತು, ವೆಂಕಟಪ್ಪ ಆರ್ಟ್ ಗ್ಯಾಲರಿಗೆ ಹೋಗಿ ನೋಡುವುದಕ್ಕಿಂತ ಭಿನ್ನವಾದ ಅನುಭವ. ಬೆಂಗಳೂರಿನಲ್ಲಿ ಆರ್ಟ್ ಮಾರ್ಕೆಟ್ ಅನ್ನುವುದು ಬೆಳೆಯಲಿಲ್ಲ. ಅದರಿಂದ ಗ್ಯಾಲರಿ ಹೊರಗೆ ಇವರದೇ ಒಂದು ಹೊಸ ಆರ್ಟ್, ಪರ್ಯಾಯ ಆಲ್ಟರ್ನೇಟಿವ್ ಆರ್ಟ್ ಹುಟ್ಟುಹಾಕಿದರು. ಆದರೆ ಸ್ವಾರಸ್ಯವೆಂದರೆ, ಅನಂತರ ಗ್ಯಾಲರಿಯವರೂ ಅದನ್ನು ಒಪ್ಪಿಕೊಂಡರು. ಅದರಿಂದ ನಮ್ಮ ಹೊಸ ಕಲೆ ಮತ್ತೆ ಗ್ಯಾಲರಿಗೇ ಹಿಂದಿರುಗಿತು. ಹೇಗೆ ಸಾಧ್ಯ ಅನ್ನಿಸಬಹುದು. ಎರಡು ಮೂರು ವರ್ಷದ ಒಂದಿನ ಪ್ರದರ್ಶ... ಗಳನ್ನು ನೋಡಿದರೆ, ಮುಂ... ಯಲ್ಲೂ ಸಹ ಗ್ಯಾಲರಿ... ನಿಮಗೆ ಬಿಟ್ಟುಕೊಡುತ್ತಿ... ಎಂದರೆ ಐದುಸಾವಿರ ... ಸ್ಪೇಸನ್ನು ನಿಮಗೆ ಬೇಕಾದ... ನೀವು ಬಳಸಬಹುದು. ಅ... ಬೇಕಾದ ರೀತಿ ಏನೆಲ್ಲ ಸೌ... ಬೇಕೋ ಕಲ್ಪಿಸುತ್ತಿದ್ದರು. ... ಗೋಡೆಗಳಲ್ಲ, ನೆಲ, ಗೋ... ಸೀಲಿಂಗ್‌ವರೆಗೂ ಇಡೀ ಸ್ಪೇ... ನಲ್ಲಿ ಕಲಾಸೃಷ್ಟಿ. ಒಂದೊ... ಸಲದ ಪ್ರದರ್ಶನಕ್ಕೂ ಆ ಹಾ... ಸ್ಪೇಸನ್ನೇ ಆಲ್ಟರ್ ಮಾಡಿಕೊ... ತ್ತಾರೆ. ಕಲಾವಿದರ ಕಲ್ಪನೆ... ತಕ್ಕಂತೆ ರೂಮೋ ಮತ್ತೊಂದೋ ನಿರ್ಮಾಣವಾಗುತ್ತೆ.



ಜ್ವಾಲೆ ಮತ್ತು ಪುಷ್ಪ

**ಎಂ.ಎಚ್.ಕೆ.:** ನೀವು ಮ್ಯಾಕ್ಸ್‌ಮುಲರ್ ಭವನದಲ್ಲಿ 'ಅರ್ಬನ್ ಹೀರೋಯಿ... ಪ್ರದರ್ಶನ ಮಾಡಿದಾಗ ಪತ್ರ, ಛಾಯಾಚಿತ್ರ, ಗಣಕ, ವಿಡಿಯೊ, ಟಿ.ವಿ., ನೆ... ಗೋಡೆ ಮೇಲೆ ಪ್ರೊಜೆಕ್ಷನ್ ಎಲ್ಲಾ ಬಳಸಿದ್ದಿರಿ.

**ಸುರೇಖಾ:** ಅಲ್ಲಿ ಬಿಡಿ ಬಿಡಿ, ಬೇರೆ ಬೇರೆ ಸಂದರ್ಭದವು ಎಲ್ಲ ಕೂಡಿ ಒಂ... ಸಮಗ್ರ ಅನುಭವ ಕೊಡುವಂತಿತ್ತು. ಪ್ರವೇಶಿಸಿದಂತೆ ನೆಲದ ಮೇಲೆ ಕುಂಟೊಬಿ... ಆಟದ ಗೆರೆಯ ಚೌಕಗಳು, ಒಂದು ಹುಡುಗಿ ಕುಂಟುತ್ತ ಜಿಗಿಯುವುದ... ಇದ್ದಕ್ಕಿದ್ದಂತೆ ಗೆರೆಗೆ ಬೆಂಕಿ ಹೊತ್ತಿಕೊಳ್ಳುವುದು, ಕತ್ತೆತ್ತಿ ಎದುರು ಗೋಡೆ ಮೇಲ... ತೆರೆಯ ಮೇಲೆ ಆಕಾಶದಲ್ಲಿ ಆ ಹುಡುಗಿ ಕುಂಟೊಬಿಲ್ಲೆ ಆಡುತ್ತಿರುವುದು. ಅಲ್ಲಲ್ಲಿ... ಮಾನಿಟರ್‌ಗಳು ಕುಳಿತೋ ನಿಂತೋ ಬೇಕಾದ್ದನ್ನು ನೋಡುವುದು. ಆಗ್ಗೆ ಪತ್ರಿಕೆಯ... ಮೂರನೇ ಪುಟದಲ್ಲಿ ಬರುತ್ತಿದ್ದ ಹೆಣ್ಣಿನ ಮೇಲಿನ ಅತ್ಯಾಚಾರ, ಸಾವುಗಳು, ಹ... ಮೊದಲಾದುವು ಪ್ರೇರಣೆ. ಭಾಗೀರಥಿ ಸಹ ಒಂದು ಸಮಗ್ರ ಅನುಭವಕ್ಕೆ ಲಿ... ಆಗುತ್ತಿದ್ದಿತು. ಅದು ವಿವಿಧ ರೀತಿ ಅಲ್ಲಿ ಮಾಡಿದ್ದು.

**ರಮೇಶ್‌ಚಂದ್ರ :** ಇಂಥ ಪ್ರಯೋಗ ಮಾಡಲು ಇಷ್ಟು ಒಂದು ಕಾರಣವಿ... ಬೆಂಗಳೂರಿನಲ್ಲಿ ದೃಶ್ಯ ಸಂಸ್ಕೃತಿಗೆ ಸಂಬಂಧಿಸಿದ... ಯಾವುದೇ ಹ್ಯಾಂಗೋವರ್ ಇರಲಿಲ್ಲ. ದೆಹ... ಶಾಂತಿನಿಕೇತನ, ಮದರಾಸಿನ ಚೋಳಮಂಡ... ಕಲಾವಿದರು – ಅಲ್ಲೆಲ್ಲ ಸ್ವಾತಂತ್ರ್ಯಪೂರ್ವದಿ... ದೃಶ್ಯ ಸಂಸ್ಕೃತಿ ಬೇರುಗಳು ಶಕ್ತವಾಗಿದ್ದ... ಹಳಬರಿಗೆ ಅದನ್ನೆಲ್ಲ ಬಿಟ್ಟು ಹೊರಬರುವುದು ... ವಾಗುತ್ತಿತ್ತು. ಆದರೆ ಬೆಂಗಳೂರಲ್ಲಿ ಯು... ಕಲಾವಿದರ ಮೇಲೆ ಶಾಲೆಗಳ, ಹಿರಿಯರ ಪ್ರಭಾ... ಅಷ್ಟಾಗದೇ ಇದ್ದದ್ದರಿಂದ ಸುಲಭವಾಗಿ ಹೊ... ಬಂದು ಪ್ರಯೋಗ ಮಾಡಲು ಸಾಧ್ಯವಾಯಿತು.

**ಸುರೇಖಾ :** ಇದೊಂದು ರೀತಿ ಅಡ್ವಾಂಟೇ... ಆಯಿತೆಂದೇ ಹೇಳಬಹುದು.

**ಆಶಾದೇವಿ :** ಇನ್ನೊಂದು ದೃಷ್ಟಿಯಿಂದಲ... ನೋಡಲು ಸಾಧ್ಯ. ಚಿತ್ರಕಲೆ ಒಂದು ಸಮುದಾಯ... ರೂಪ ಪಡೆಯಿತು. ಗ್ಯಾಲರಿಯನ್ನೂ ಪ್ರವೇಶಿ... ಎಂದಿರಲ್ಲ – ಈ ಪ್ರಯತ್ನ ಪ್ರಜ್ಞಾಪೂರ್ವ... ವಾಗಿಯೇ ನಡೆಯಿತು ಎನ್ನಬಹುದು. ಇದ... ಅಭಿರುಚಿ ನಿರ್ಮಾಣದ ಪ್ರಯತ್ನ ಎಂ... ಕರೆಯಬಹುದೇ ?

**ಸುರೇಖಾ :** ಅಹುದು. ತುಂಬಾ ...

ಆದದ್ದು. ಒಂದು ಆರ್ಟ್ ಫಾರ್ಮ್ ಗ್ಯಾಲರಿಯಲ್ಲಿ ಸಾಧ್ಯವಾಗದ್ದನ್ನು ವಿದರು ಹೊರಗೆ ಸೃಷ್ಟಿ ಮಾಡಿದರು. ಮುಂದೆ ಗ್ಯಾಲರಿಯವರು ಅದನ್ನು ಒಪ್ಪಿ ಸಿದರು. ಅದು ಮಹತ್ವದ್ದೇ.

**ಮೇಶ್‌ಚಂದ್ರ** : ಅಭಿರುಚಿ ಅನ್ನೋದೂ ಮುಖ್ಯ. ನಮ್ಮಲ್ಲಿ ವೆಂಕಟಪ್ಪ ಆರ್ಟ್ ರಿ ಇತ್ತು. ಬಹಳ ಹಿಂದೆ ರವೀಂದ್ರ ಕಲಾಕ್ಷೇತ್ರದ ಲೌಂಜ್‌ನಲ್ಲೂ ಪ್ರದರ್ಶನ ತ್ತಿತ್ತು. ಅನಂತರ ಇತರ ಗ್ಯಾಲರಿಗಳೂ ಬಂದುವು. ಸಾಮಾನ್ಯವಾಗಿ ಪ್ರೇಕ್ಷಕರಿಗೆ ಸಾಂಪ್ರದಾಯಿಕವಾಗಿ ನೋಡುವಂತಹ ಕೃತಿಗಳೇ ಇರುತ್ತಿದ್ದವು. ಕೆನ್ ಸ್ಕೂಲ್, ಕಲಾ ಪರಿಷತ್ತು, ಕಲಾಮಂದಿರ ಇಂಥ ಕಲಾಶಾಲೆ ವಿದ್ಯಾರ್ಥಿಗಳಿಗೂ ಹೀಗೇ ಚಿತ್ರ ಮುಂತಾದುವೇ ನೋಡಲು ಸಿಗುತ್ತಿದ್ದುದು. ೯೦ರ ದಶಕದ ನಂತರ ಬಗೆಯ ಕಲಾಕೃತಿಗಳು ಬರಲು ಪ್ರಾರಂಭಿಸಿದ ಮೇಲೆ ಅದರ ಪ್ರಭಾವ ಾಲೆಗಳ ಮೇಲೂ ಆಯಿತು. ವಿದ್ಯಾರ್ಥಿಗಳು ಶಿಕ್ಷಣ ಪಡೆದು ಹೊರಬರುವ ಗೆ, ಹೊರಗೆ ಆಗುತ್ತಿದ್ದುದರ ಪ್ರಭಾವದಿಂದ ಅವರೂ ಹೊಸ ಪ್ರಯೋಗ ಲು ಸಾಧ್ಯವಾಯಿತು.

**ಂ.ಎಚ್.ಕೆ.** : ಗುಂಪು, ಸಮುದಾಯದ ಪ್ರಯೋಗಗಳಲ್ಲಿ ವಿಶಿಷ್ಟವಾದದ್ದು, ೀಯ ಗುಣ ಎನ್ನೋಣ, ಇದ್ದದ್ದರಿಂದಲೇ ರಾಜ್ಯದ ಆಚೆ ಮತ್ತು ವಿದೇಶದವರ ನ ಇತ್ತ ಹೊರಳುವಂತಾಯಿತೇ?

**ಆಶಾದೇವಿ** : ದೇಶೀಗುಣ ಎನ್ನುವುದೂ ಸಹ ಕಾಲದ ತುರ್ತಿನ ಜೊತೆ ಂಬಿಡಬೇಕು. ಆಗಲೇ ಪ್ರಸ್ತುತವಾಗೋದು. ಒಂದು ಪ್ರಶ್ನೆ, ಅನಿಲ್ ಅವರು ಕಡೆ ಆಗದ ಪ್ರಯೋಗಗಳು ವಾಗಿ ಕರ್ನಾಟಕದಲ್ಲಿ ಆದುವು ರಲ್ಲ, ಆ ತುರ್ತು ಇಲ್ಲಿಯದು ವೇ ಆಗಿತ್ತೆ?

**ಅನಿಲ್‌ಕುಮಾರ್** : ಇಲ್ಲಿಯ ವಿಶೇಷ ರೆ, ಎಂಬತ್ತರ ಸಂದರ್ಭಕ್ಕೆ ್ರಯ ಸಿನಿಮಾಗಳಲ್ಲಿ ಕೂಡ ೀರ ತಾತ್ವಿಕ ಸಮಸ್ಯೆಗಳನ್ನು ಕೊಂಡರು. ರಣಜಿತ್ ಗುಹಾ ಲ್ಟರ್ನ್ ಸಂಸ್ಕೃತಿ, ಉಪಸಂಸ್ಕೃತಿ ಹೇಳಿದರು. ಆಗ್ಗೆ ಅವರಿಗೆ ವುದೇ ಒಂದು ಸಂಸ್ಥೆ ಬೆಂಬಲವೂ ಲ್ಲ. ಅದರಲ್ಲೂ ಪೋಸ್ಟ್ ೀನಿಯಲಿಸಂ ಎಂದರೆ ಅಮೆರಿಕಾದ ತ್ ಹಣ ಬೆಂಬಲದಿಂದ, ಗ್ರೀನ್ ನಿಂದ, ಹುಟ್ಟಿಕೊಳ್ಳುವಂಥದ್ದು. ರೆ ಎರಡು ದಶಕಗಳ ಹಿಂದೆ ಇಲ್ಲಿ ದು ಜನ, ಲೈಕ್ ಮೈಂಡೆಡ್‌ನವರು ಸೇರಿಕೊಂಡು ಶುರು ಮಾಡಿದಾಗ ಅದು ಗೆ ಕೇಳಿಸುತ್ತಿತ್ತು. ಚರ್ಚೆ, ಉಪನ್ಯಾಸ, ಸೆಮಿನಾರ್‌ಗಳು – ಇವಾವುಗಳಿಂದಲೂ ಬಂದದ್ದಲ್ಲ. ಪ್ರಜ್ಞಾಪೂರ್ವಕವಾಗಿ ವಿಚಾರಗಳು ಬಂದದ್ದಲ್ಲ. ತಾನೇತಾನಾಗಿ ದ್ದು. ಗ್ಯಾಲರಿಗಳು ಇಲ್ಲದಿದ್ದರೂ ಹೊಸ ವರ್ಕ್ಸ್ ಮಾಡಬೇಕು ಎನ್ನೋದು ಾದಲ್ಲಿ ಬರಲಿಲ್ಲ, ಬಾಂಬೆಯಲ್ಲಿ ಬರಲಿಲ್ಲ, ಶಾಂತಿನಿಕೇತನದಲ್ಲೂ ಬರಲಿಲ್ಲ. ರ್.ನಾಗರಾಜ್ ದೆಹಲಿಯನ್ನು ರಾಜಕೀಯ ಕೇಂದ್ರ, ಕ್ಲರ್ಕ್‌ಗಳ ನಗರ ಎಂದು ರಲ್ಲ, ಅಲ್ಲಿಗೆ ಸುದ್ದಿ ಬಂದಿತೇ ಹೊರತು ಪ್ರಯೋಗ ಆಗಲಿಲ್ಲ. ಆದರೆ ನಮ್ಮಲ್ಲಿ ಸ ವರ್ಕ್ ಮಾಡುವಾಗಲೂ ಒಬ್ಬರಿಗೊಬ್ಬರು ಭಿನ್ನವಾಗಿರುತ್ತಿದ್ದರು. ಒಮ್ಮೆ ಒಬ್ಬ ಆಸ್ಟ್ರಿಯನ್ ಬಂದಿದ್ದರು. ಅವರು ಕೇಳುತ್ತಿದ್ದರು. ನೀವು ಇಂಡಿಯನ್ಸ್ ತ್ತ ದೊಡ್ಡ ವರ್ಕ್ಸ್ ಏಕೆ ಮಾಡುತ್ತೀರಾ ಅಂತ. ಅದು ಕೀಳರಿಮೆ ಸಂಕೇತವೇ, ಾ ಕೀಳರಿಮೆಯಿಂದ ತಪ್ಪಿಸಿಕೊಳ್ಳುವ ಹುನ್ನಾರವೇ ಅಂತ. ಅವರು ವುದನ್ನು ನೆಗೆಟಿವ್ ಎಂದರೋ ಅದು ಇಂದು ನಮ್ಮ ಉಪಸಂಸ್ಕೃತಿ ವಾದದಲ್ಲಿ ಲ್ಲೇ ಒಂದು ಕಡೆ ಒಳ್ಳೆಯ ಪ್ರತಿಭೆ ಅಂತಲೂ ಅನಿಸುತ್ತೆ. ಪುಷ್ಪಮಾಲಾ ಕ್ಯುರೇಟ್ ಿದ ಸ್ಥಳಪುರಾಣಗಳು, ಸಮುದಾಯ ಭವನದ ದೊಡ್ಡ ಬಿಲ್ಡಿಂಗ್ ಕೊಂಡು, ಅದರಲ್ಲಿ ಎರಡನೇ ಮಹಡಿ ಮೇಲೆ ಶ್ರೀನಿವಾಸ ಪ್ರಸಾದ್ ಸಂಗೀತಗಾರರನ್ನು ಕೂರಿಸಿ, ಎಮ್ಮೆಗಳನ್ನು ಮೆಟ್ಟಿಲು ಹತ್ತಿಸಿ ಫಸ್ಟ್ ಫ್ಲೋರ್‌ಗೆ ಎಳೆದುಕೊಂಡು ಹೋಗಿ, ಬೊಂಬುಗಳನ್ನೆಲ್ಲಾ ಕಟ್ಟಿದ್ದರು. ಆಕಾರ, ಅಳತೆ ಹೇಗಿಲ್ಲ ಬಂದಿತು ಎಂದರೆ, ಅಲ್ಲೊಂದು ಪಾಯಿಂಟ್, ಹಲಸೂರಲ್ಲಿ ಒಂದು ಪಾಯಿಂಟ್, ಕನ್ನಡ ಭವನದಲ್ಲೊಂದು, ಅದು ತ್ರಿಕೋನ ಆಕಾರ ಪಡೆಯಿತು. ಆರ್ಟ್ ಅನ್ನೋದು ಸತ್ತುಹೋಗಿದೆ, ಕಲಾವಿದ ಸತ್ತಿದ್ದಾನೆ ಎನ್ನುವ ಭಾವನೆ ಮೂಡಿದ್ದಾಗ ಈ ಹೊಸ ಕಲ್ಪನೆ ಬಂದಿತು. ನಮ್ಮಲ್ಲಿ ಸೌಂದರ್ಯಶಾಸ್ತ್ರ ಸತ್ತು, ರಾಜಕಾರಣ ಪ್ರವೇಶಿಸಿ ಕಲೆ ಕಲೆಯಾಗಿ ಉಳಿದಿಲ್ಲ ಎನ್ನುವಾಗ ನಾವು ಕಲೆಯನ್ನು ಆಂಥ್ರೊಪಾಲಜಿ, ಮಾನವಶಾಸ್ತ್ರದ ರೀತಿ ಟ್ರೀಟ್ ಮಾಡಿದೆವು. ಎಷ್ಟೋ ಜನಕ್ಕೆ ಸ್ಕಿಲ್ ಇರಲಿಲ್ಲ. ಆದರೆ ಮಾನವಶಾಸ್ತ್ರ ಎಲ್ಲವನ್ನೂ ಒಳಗೊಳ್ಳುತ್ತೆ.

ಹಡಪದ್ ಮಾಸ್ತರ್ ಅಂಥವರಿಗೆ ತೈಲವರ್ಣ ಚಿತ್ರ ರಚಿಸುವಾಗ ದೊಡ್ಡ ಟ್ರೆಡಿಷನ್ ಇರುತ್ತಿತ್ತು. ನಮಗೆ ಹಾಗೆ ಯಾವುದೇ ಟ್ರೆಡಿಷನ್ ಇಲ್ಲದೆ, ಮಾಡುವ ಹಠಕ್ಕೆ ಬಿದ್ದೆವು. ವಿಡಿಯೊ ವರ್ಕ್ಸ್‌ನಲ್ಲಿ ತಾಂತ್ರಿಕ ಕೌಶಲ, ಜ್ಞಾನ ಇಲ್ಲದೆ ಕನಿಷ್ಠ ಮದುವೆ ವಿಡಿಯೊ ತೆಗೆಯುವವರಷ್ಟು ತಂತ್ರಜ್ಞಾನವಿಲ್ಲದೆ, ಕೆಲಸ ಮಾಡಿದ್ದು – ಅದೇ ಒಂದು ಅಡ್ವಾಂಟೇಜ್ ಆಯಿತು. ಮೈಖೇಲ್ ರಷ್ ಎಂಬ ಇಂಟರ್‌ನ್ಯಾಷನಲ್ ನ್ಯೂ ಮೀಡಿಯಾ ಬರಹಗಾರ ಕೂಡ ಈ ಅಂಶವನ್ನು ಗುರುತಿಸುತ್ತಾನೆ. ಅವರು ಹೇಳುವುದೇನೆಂದರೆ, ಎಡಿಟ್ ಮಾಡುವ ಸ್ಕಿಲ್ ಇಲ್ಲದಿರುವುದೆ ವರ್ಕ್‌ಅನ್ನು ಚೆಂದ ಮಾಡುವುದಕ್ಕೆ ಇವರಿಗೆ ಆಗುತ್ತೆ ಎಂದು. ಅಂದರೆ ಈಸ್ಥಟಿಕ್ಸ್‌ನ ಬಲವಂತವಾಗಿ ಮುರಿಯುವುದೇ ಉದ್ದೇಶವಾಗುತ್ತೆ. ಬೇಕು ಬೇಕು ಎಂದೇ ಬುಲೆಟ್ ಬಳಸದೆ ಗನ್ ಅನ್ನು ಉಲ್ಟಾ ತಿರುಗಿಸಿ ಹೊಡೆಯುತ್ತಾ ಹೋಗೋದು ಇತ್ಯಾದಿ.



ಭಾಗೀರಥಿ – ವಿಡಿಯೊ

**ಆಶಾದೇವಿ** : ಇವರ ಮೇಲೆ ಸಮುದಾಯದ ಪ್ರಭಾವವೇನಾದರೂ ಆಯಿತೇ ?

**ಅನಿಲ್** : ಅದು ೭೦ರ ದಶಕ. ಆದರೆ ಪ್ರಭಾವ ಇದ್ದರೂ ಇರಬಹುದು. ಪ್ರಸನ್ನ ಗುರುತಿಸೋದು ಏನೆಂದರೆ, ಒಳ್ಳೆಯ ಪರ್‌ಫಾರ್ಮೆನ್ಸ್ ಮಾಡುವ ಕಲಾವಿದರು ಮಾತ್ರ ಈ ರೀತಿ ಕಲಾಸೃಷ್ಟಿ ಮಾಡುವುದಕ್ಕೆ ಸಾಧ್ಯ. ಪುಷ್ಪಮಾಲಾ, ಶೀಲಾ ಇವರ ಹೆಸರು ಹೇಳುತ್ತಾರೆ. ಹಡಪದ್ ಮೊದಲಾದವರು ಸಿನೆಮಾಗೆ ಕಲಾ ನಿರ್ದೇಶನ ಮಾಡಿದರು, ಆರ್ಟ್ ಫಿಲ್ಮ್‌ಗಳಿಗೆ. ಕಮ್ಯುನಿಸ್ಟ್ ಪ್ರಭಾವ ಆ ರೀತಿ ಇರಬಹುದು.

**ರಮೇಶ್‌ಚಂದ್ರ** : ಎಂಬತ್ತರ ದಶಕದ ಪ್ರಾರಂಭದಿಂದಲೇ ಈ ರೀತಿ ಚಟುವಟಿಕೆಗಳು ಆಗುತ್ತಿದ್ದುವು.

**ಆಶಾದೇವಿ** : ಕಲಾ ಮೇಳ, ಕಲಾ ಯಾತ್ರೆ ಎಲ್ಲ ಆ ಕಾಲದವೆ.

**ಎಂ.ಎಚ್.ಕೆ.**: ಪ್ರತಿಭಟನೆ ಸಂದರ್ಭದಲ್ಲಿ ಕಲಾವಿದರೂ ಭಾಗವಹಿಸಿ ಚಿತ್ರ ರಚಿಸುತ್ತಿದ್ದರು.

**ರಮೇಶ್‌ಚಂದ್ರ** : ಅಷ್ಟೇ ಅಲ್ಲ. ಅನೇಕ ಕಲಾವಿದರು ರಂಗಭೂಮಿ ಚಟುವಟಿಕೆಯಲ್ಲೂ ಆಸಕ್ತಿ ವಹಿಸಿದ್ದರು, ಭಾಗಿಯಾಗಿದ್ದರು. ಸುರೇಖಾ ಅಂತಹ ಕಲಾವಿದರು ರಂಗಭೂಮಿಯಲ್ಲಿ ನಟಿಯಾಗಿ ಅಭಿನಯಿಸದೇ ಇರಬಹುದು. ಆದರೆ ಸಾಕಷ್ಟು ರಂಗಭೂಮಿ ಕಲಾವಿದರ ಪರಿಚಯ ಗೆಳೆತನ ಇತ್ತು. ಇಲ್ಲೆಲ್ಲಾ ಪ್ರಭಾವ ಸಾಧ್ಯ. ಆ ಏಳೆಂಟು ವರ್ಷಗಳು ಪ್ರಭಾವಕಾರಿಯಾದುವು.

**ಸುರೇಖಾ** : ಆಗ ಏನಾಯಿತು ಎಂದರೆ, ಹಿಂದೆ ಕ್ಯುರೇಟರ್ಸ್, ಹೊರಗಡೆಯಿಂದ ಬಂದವರು, ಬಾಂಬೆ, ಡೆಲ್ಲಿಗೆ ಬಂದುಹೋಗುತ್ತಾ ಇದ್ದರು. ಈಗ ಮೊದಲು ಬೆಂಗಳೂರಿಗೆ ಬಂದು ಅನಂತರ ಬೇರೆ ಕಡೆ ಹೋಗುವಂತಾಯಿತು. ನಾವು ತಿಳಿಯದೇನೇ ಮ್ಯೂಸಿಯಂಗಳಿಗೆ ಅನುಕೂಲವಾಗುವಂತಹ ವರ್ಕ್ಸ್ ಮಾಡುತ್ತಿದ್ದೆವು. ಕಳೆದ ಕೆಲವು ವರ್ಷಗಳಲ್ಲಿ ಯಂಗ್‌ಸ್ಟರ್ಸ್‌ನ ಕೃತಿಗಳನ್ನು ನೋಡಿ ಅವರಿಗೆ ಇಷ್ಟವಾದರೆ, ಮ್ಯೂಸಿಯಂ ಷೋಗಾಗಿ ಕೊಳ್ಳುತ್ತಿದ್ದರು. ಇಲ್ಲಿ ಕ್ಯುರೇಟರ್ಸ್.



ಮೌನತ್ರಯಿ – ವಿಡಿಯೊ

ಹೊರಗಿನವರು ಎಲ್ಲರಿಗೂ ಬೆಂಗಳೂರು ಮುಖ್ಯವಾಯಿತು. ಹೊರಗಡೆ ಮ್ಯೂಸಿಯಂ ಆರ್ಟ್ ವರ್ಕ್ಸ್ ಬೇರೆ, ಗ್ಯಾ... ವರ್ಕ್ಸ್ ಬೇರೆಯಾಗಿಬಿಡುತ್ತೆ.

**ಅನಿಲ್‌ಕುಮಾರ್ :** ಪಾಪ್ಯುಲರ್ ಫಿಕ್ಷನ್ ಬರೆಯುವವರಿಗೆ ಗಂಭೀರ ವಿಮರ್ಶೆ ಸ್ವೀಕೃತಿ ಒಂದು ತರಹ ಕಾಣುತ್ತೆ. ... ಶ್ರೀನಿವಾಸ ವರ್ಮ ಅವರ ಕೃತಿಗಳು ಮ್ಯೂಸಿಯಂ ಪ್ರವೇಶಿಸದ, ವಿಮರ್ಶೆಗೆ ದಕ್ಕದ, ಪಾಪ್ಯುಲರ್ ಕಲ್ಚರ್‌ನ ಕೃತಿಗ... ಉಳಿದುಬಿಡುತ್ತವೆ. ಅದು ಒಂದು ಬಗೆ ಸಂಪ್ರದಾಯದ್ದೇ ಆಗುತ್ತೆ. ಅಂತಹ ತುಂಬ ಕಲಾವಿದರಿದ್ದಾರೆ. ಒ... ವಿಮರ್ಶಕರ ಕಣ್ಣಿಗೆ ಬೀಳಲಿಲ್ಲ ಎಂಬ ಕೀಳರಿಮೆ ಅಂತಹವರಿಗೆ ಇರುತ್ತೆ. ಎಂಬತ್ತರ ದಶಕದಲ್ಲಿ ಇನ್ನೊಂದು ವಿ... ಮಹಿಳಾ ಕಲಾವಿದರು. ಅದು ಏನು ಹೇಗೆ ಹೇಳುವುದು ಕಷ್ಟ, ಇಡೀ ದೇಶದಲ್ಲಿ ಕಲಾವಿದೆಯರು ಕಲಾವಿಮರ್ಶಕ... ಮೇಲುಗೈ ಸಾಧಿಸಿದರು. ಭಾರತೀಯ ಕಲಾ ಇತಿಹಾಸ ಬರೆದರೆ ಕೇವಲ ಶ್ರೀಮತಿ, ಶ್ರೀಮತಿ ಎಂದೇ ಆಗುವಷ್ಟಿದೆ ... ಕೆಲಸ. ವಸಾಹತೋತ್ತರಕ್ಕೂ, ಸಬಾಲ್ಟರ್ನ್ ಅಧೀನ ಸಂಸ್ಕೃತಿಗೂ ನೇರ ಸಂಬಂಧ ಇದೆ. ವಿಜಯಶಾಂತಿ ಮೊದಲ ಸೂಪ... ಸ್ಟಾರ್ ಆಗೋದಕ್ಕೂ, ಹೆಣ್ಣು ಸೂಪರ್‌ಸ್ಟಾರ್ ಎನಿಸಿಕೊಳ್ಳೋದಕ್ಕೂ ಸಂಬಂಧವಿದೆ. ಹಾಗೇ ಮಾಧುರಿ ದೀಕ್ಷಿತ್. ನಮ್ಮ... ಕಲ್ಪನಾ ಅವರು. ಎಲ್ಲೋ ಒಂದು ಕಡೆ ಡೆಲಿಬರೇಟ್ ಆಗಿ ಇದು ಶುರುವಾಯಿತು.

**ಎಂ.ಎಚ್.ಕೆ. :** ಇದಕ್ಕೂ ಆಂಟಿ ಈಸ್ಥೆಟಿಕ್ಸ್ ದೃಷ್ಟಿ ಅಥವಾ ಚಳವಳಿಗೂ ಸಂಬಂಧ ಇರಬೇಕು. ಪುರುಷಪ್ರಧಾ... ಕಲಾಪ್ರಪಂಚ ಹೆಣ್ಣನ್ನೇ ಚಿತ್ರಿಸಿತು. ಆಧುನಿಕೋತ್ತರ, ನೀವು ಹೇಳುವಂತೆ ಸಬಾಲ್ಟರ್ನ್ ಅರಿವಿನ ಕಾಲದಲ್ಲಿ, ಸ್ತ್ರೀ ಚಳವ... ಸೇರಿದಂತೆ ಇವೆಲ್ಲಾ ಬಂದಿವೆ. ಒಂದು ಹೊಸ ಮೀಮಾಂಸೆಗೂ ಕಾರಣವಾಗಬಹುದು.

**ಅನಿಲ್‌ಕುಮಾರ್ :** ಆಂಟಿ ವಿ.ಎಚ್.ಪಿ. (ವಿಶ್ವ ಹಿಂದೂ ಪರಿಷತ್) ಥಿಯರಿ ಸಹ. ಮೀಮಾಂಸೆಗೆ ವಾಪಸ್ಸಾಗು... ಸಾಧ್ಯತೆ ಇರಬಹುದು. ಅವಂತ್‌ಗಾರ್ಡ್ ಎನ್ನುತ್ತಾರಲ್ಲ, ಒಂದು ವ್ಯವಸ್ಥೆ ವಿರುದ್ಧವಾಗಿ ಪ್ರತಿಭಟನೆ ಆದದ್ದು ಮುಂದೆ ಅದ... ಒಂದು ವ್ಯವಸ್ಥೆಯಾಗಿಬಿಡಬಹುದು. ಮೊದಲಿನದು, ಅನಂತರದ್ದು ಎರಡೂ ಹೊಂದುತ್ತದೆಯೇ ಎನ್ನೋ ಪ್ರಶ್ನೆ ಬರುತ್ತೆ.

**ಆಶಾದೇವಿ :** ಒಂದನ್ನು ಮುರಿಯೋದು, ಅನಂತರ ಅದೇ ವ್ಯವಸ್ಥೆಯಾಗುವ ರೀತಿ ಇಲ್ಲಾಗಲಿಲ್ಲ ಎನಿಸುತ್ತೆ. ಇ... ವ್ಯವಸ್ಥೆಯಲ್ಲಿ ಪಲ್ಲಟಗಳನ್ನು ತರುವುದು ಮುಖ್ಯವಾಗಿದೆ ಎನಿಸುತ್ತೆ.

**ರಮೇಶ್‌ಚಂದ್ರ :** ನನ್ನ ದೃಷ್ಟಿಯಲ್ಲಿ ಇದು ಸೂಕ್ಷ್ಮ ವಿಷಯ. ಹೊರ ರೂಪದಲ್ಲಿ ಇಲ್ಲಿ ಥಿಯರಿಟಿಕಲ್ ಆ... ಹೇಳುವಂತಹುದು ಇಲ್ಲದಿರಬಹುದು. ಕಲಾವಿದೆಯರು ಸಾಂಪ್ರದಾಯಿಕ ದೃಷ್ಟಿ ಬಿಟ್ಟು, ಮಾಧ್ಯಮಗಳನ್ನು ಬದಲಾಯಿ... ತುಂಬ ಗಮನಾರ್ಹ ಕೃತಿಗಳನ್ನು ರಚಿಸಿದರು. ಮೃಣಾಲಿನಿ ಮುಖರ್ಜಿ ಸೆಣಬಿನ ದಾರ ಬಳಸಿ ಶಿಲ್ಪ ರಚಿಸಿದರು. ಶಿಲ್ಪ... ಕಲ್ಪನೆ ಬದಲಾಯಿತು. ಇದು ಒಂದು ಹೊಸ ಮಾಧ್ಯಮ ಎನ್ನುವುದಕ್ಕಿಂತ , ಸುಲಭವಾಗಿ ಸಿಗುವ ಒಂದು ಡೊಮೆಸ್ಟಿಕ್ ವಸ... ಬಳಸಿದರು. ಆ ಸಂವೇದನೆಯನ್ನು ಮೊದಲಬಾರಿಗೆ ಹತ್ತಿರದ ವಸ್ತುವಿನಿಂದ ಕೃತಿ ರಚಿಸಿ ತೋರಿದರು.

**ಎಂ.ಎಚ್.ಕೆ. :** ನಮ್ಮಲ್ಲಿ ಶೀಲಾ ಗೌಡ ಸೆಗಣಿ, ಬೆರಣಿ ಬಳಸಿದರು. ಪುಷ್ಪಮಾಲಾ ಬಾಗಿನದ ಮೊರವನ್ನ... ಶಿಲ್ಪವಾಗಿಸಿದರು. ಇದು ಸಾಮಾನ್ಯ ದಿನನಿತ್ಯದ ವಸ್ತುವನ್ನು ಕಲಾಕೃತಿಯ ಎತ್ತರಕ್ಕೇರಿಸಿದರು ಎನ್ನುವುದಷ್ಟೇ ಅಲ್ಲ, ಅದರಿಂ... ಹೊರಡುವ ಅರ್ಥಪರಂಪರೆಯ ಕಡೆಗೂ ಗಮನ ಸೆಳೆದರು.

**ಆಶಾದೇವಿ :** ಇವರೆಲ್ಲ ಹೊಸ ಹೆಣ್ಣನ್ನು ಹುಡುಕಲು ಹೊರಟದ್ದಲ್ಲ, ಹೆಣ್ಣನ್ನು ನೋಡುವ ಹೊಸ ದೃಷ್ಟಿ ತೋರಿದರು.

**ರಮೇಶ್‌ಚಂದ್ರ :** ಸುರೇಖಾ ಅವರು ಒಂದು ಪ್ರದರ್ಶನದಲ್ಲಿ ರೈಸ್ ಪೇಪರನ್ನು ಚರ್ಮದಂತೆ ಬಳಸಿದರು. 'ಟ್ರೇಸಸ್ ಅಂಡ್ ಮೆಮೊರೀಸ್ ಆಫ್ ದಿ ಬಾಡಿ' ಪ್ರದರ್ಶನ ಅದು. ಪೇಪರನ್ನೇ ಬಟ್ಟೆಯಂತೆಯೂ, ದೇಹದಂತೆಯೂ ಬಳ... ರೂಪಿಸಿದ್ದರು. ಇಲ್ಲಿ ಎರಡಕ್ಕೂ ಸಂಬಂಧ ಹುಟ್ಟಿಕೊಳ್ಳುತ್ತೆ. ಚರ್ಮ ದೇಹದ ಅವಿಭಾಜ್ಯ ಅಂಗ, ದೇಹಕ್ಕೆ ಸಂಬಂ... ಪಟ್ಟವೆಲ್ಲ ಅವಿಭಾಜ್ಯವೇ ಆಗುತ್ತವೆ. ಬ್ಲೌಸ್ ಇತ್ಯಾದಿ. ಚಿಕ್ಕಂದಿನಿಂದ ತಾನು ಪ್ರಜ್ಞಾಪೂರ್ವಕವಾಗಿ ಬೆಳೆಯುವವರೆಗೆ ದೇ... ಎನ್ನುವುದು ಎಲ್ಲ ಅನುಭವಗಳನ್ನೂ ಕ್ಯಾರಿ ಮಾಡುತ್ತ ಹೋಗುತ್ತೆ. ರೂಪಕವಾಗಿ ಹೇಳುವುದಾದರೆ ದೇಹದ ಮೇಲಿನ ... ಮಾರ್ಕ್ಸ್ ಇದ್ದಂತೆ. ಕಲಾವಿದೆಯರು ಇಂತಹ ಸಂವೇದನೆಯನ್ನು ಮೊದಲಬಾರಿಗೆ ಗುರುತಿಸುತ್ತಾ ಹೋಗಿದ್ದಾರೆ. ಇದ... ಪುರುಷ ಕಲಾವಿದರಲ್ಲಿ ಕಾಣಲ್ಲ. ವಿವಾನ್ ಸುಂದರಂ ೧೯೯೦ರಲ್ಲಿ ಮೊದಲಬಾರಿಗೆ ಇಂಜಿನ್ ಆಯಿಲ್ ಮತ್ತು ಚಾರ್‌ಕೋಲ್‌ನಲ್ಲಿ ಕೃತಿ ರಚಿಸಿದರು. ಅವರಲ್ಲಿ ಈ ಸಂವೇದನೆ ಕಾಣುವುದಿಲ್ಲ. ಆ ಕೃತಿಗಳಲ್ಲಿ ಫಸ್ಟ್ ವರ್ಲ್ಡ್, ಥರ್ಡ್ ವರ್ಲ್... ಎಲ್ಲ ಇವೆ. ಆತ್ಮೀಯವಾದ ಜಗತ್ತನ್ನು ಬಿಟ್ಟು ಹೊರ ಜಗತ್ತಿನ ಕಡೆ ಹೋದರು. ಎರಡರ ನಡುವಿನ ಅನುಭವ ಅದು. ನವ... ಬದುಕಿನ ಒಳಗಡೆಯೇ ಹುಟ್ಟಿಕೊಳ್ಳುವ ಅನುಭವಗಳಿಗೆ ಅವರು ಸ್ಪಂದಿಸಲಿಲ್ಲ.

**ಅನಿಲ್‌ಕುಮಾರ್ :** ಪುರುಷ ಕಲಾವಿದರು ದೇಹದ ಮೂಲಕ ಏನನ್ನೂ ಹೇಳಹೋಗುವುದಿಲ್ಲ. ಹೆಣ್ಣನ್ನು ಸ್ತ... ಮಾಡುತ್ತಾರೆಯೇ ಹೊರತು ಬೇರೆಯಲ್ಲ. ಅನಂತಮೂರ್ತಿಯವರು ಹೊರಾಂಗಣ-ಒಳಾಂಗಣ ಎಂದು ವಿವರಿಸುತ್ತಾರೆ. ಗಂಡಸರು ಮನೆಗೆ ಬಂದರೆ ಜಗಲಿಯಲ್ಲೆ ಕುಳಿತು ವ್ಯಾವಹಾರಿಕ ಹೊರ ವಿಷಯಗಳನ್ನು ಮಾತನಾಡುತ್ತಾರೆ. ಪಕ್ಕದ ಮ... ಹೆಂಗಸರು ನೇರವಾಗಿ ಮನೆಯೊಳಕ್ಕೆ ಹೋಗಿ ತಮ್ಮ ಬಗ್ಗೆಯೇ ಆಂತರ್ಯದ ವಿಷಯ ಮಾತನಾಡಿಕೊಳ್ಳುತ್ತಾರೆ, ದೇಹ... ವಿಷಯವೂ ಸೇರಿದಂತೆ. ೯೦ರ ದಶಕದಲ್ಲಿ ರವಿವರ್ಮನನ್ನು ಪುನರ್‌ವಿಮರ್ಶೆ ಮಾಡುವ ಕಲಾಪ್ರದರ್ಶನ ದೆಹಲಿಯ... ನಡೆಯಿತು. ಅಮೃತಾ ಶೇರ್‌ಗಿಲ್‌ರನ್ನು ಭಾರತದ ಮೊದಲ ಆಧುನಿಕ ಸ್ತ್ರೀ ಕಲಾವಿದರು ಎಂದು ಹೇಳುವ ಪ್ರಯತ್ನ... ಆಯಿತು. ಈಗ ಒಂದು ಬದಲಾವಣೆ ಆಗಿದೆ. ಗ್ಯಾಲರಿ, ಕೃತಿ ಮಾರಾಟ, ಹಣ ಮಾಡುವ ದೃಷ್ಟಿಯಲ್ಲೇ ಬದಲಾಗಿದೆ. ... ಪ್ರಶ್ನೆ. ಹಣ ಮಾಡುವುದರಲ್ಲಿ ತಪ್ಪಿಲ್ಲ, ಕೃತಿ ಏನು ಹೇಳುತ್ತೆ ಅದು ಮುಖ್ಯ ಎಂದಾಗಿದೆ.

**ಸುರೇಖಾ :** ಹಣ ಮಾಡೋದು ಎಂದಲ್ಲ, ಕಲಾಕೃತಿಯನ್ನು ಯಾರಾದರೂ ತೆಗೆದುಕೊಳ್ಳಬಹುದು.

**ಅನಿಲ್‌ಕುಮಾರ್ :** ಹಣಕ್ಕಾಗಿ ಕೃತಿ ಮಾಡುವುದಕ್ಕೂ, ಕೃತಿ ರಚಿಸಿದ ಮೇಲೆ ಮಾರಾಟವಾಗಿ ಹಣ ಬರುವುದಕ್ಕೂ ವ್ಯತ್ಯಾಸವಿದೆ. ಎರಡನೆಯ ದೃಷ್ಟಿ ಒಳ್ಳೆಯದು. ಇಡೀ ಭಾರತದಲ್ಲಿ ಒಂದು ಗ್ಯಾಲರಿ ಬಿಟ್ಟರೆ ಹೊಸ ಮಾಧ್ಯಮದ ಕೃತಿಗಳ... ಗ್ಯಾಲರಿ ಇಲ್ಲ. ವಿಡಿಯೊದ ಪ್ರದರ್ಶನಕ್ಕೆ ಎರಡು ಮೂರು ಸಾವಿರ ಸಿಗಬಹುದು, ಅಷ್ಟೆ . ಕಲಾವಿದೆಯರು ...

ಕೊಂಡರು. ಹಣ ಬರುವುದು ಮುಖ್ಯವಲ್ಲ, ಅಂತರರಾಷ್ಟ್ರೀಯ ಜ್ಞಾನಕೇಂದ್ರಗಳಲ್ಲಿ ಯಾವ ವಿಷಯ ಪ್ರಸ್ತುತ ಯಲ್ಲಿದೆ ಅದನ್ನೇ ವಿಷಯ ಮಾಡಿಕೊಂಡು ಕಲಾಕೃತಿ ಮಾಡುವ ಒಂದು ಧೈರ್ಯ. ರಾಷ್ಟ್ರೀಯತೆ ಕಲ್ಪನೆ ಇರಬಹುದು, ಖ್ ಖಾನ್ ಈಗ ಇಂಡಿಯನ್ ಆಕ್ಟರ್ ಅಲ್ಲ, ಏಷಿಯನ್ ಆಕ್ಟರ್ ಎಂದು ಗುರುತಿಸುತ್ತಿರುವುದಿರಬಹುದು, ಬಿನಾಲೆಗಳು ನಡೆಯುತ್ತಿವೆ. ಈ ಕಲ್ಪನೆಗಳು ಮನಸ್ಸಿಗೆ ಬೀಳುತ್ತಿದ್ದಂತೆ ಕಲಾಕೃತಿ ಮಾಡುವ ರೀತಿಯೂ ಬದಲಾಗುತ್ತ ಗುತ್ತಿದೆ. ಇಂಥ ಕಲ್ಪನೆಗಳು ವರ್ಣಚಿತ್ರ ಮಾಡುವವರಿಗೆ ಕೊನೆಯವರೆಗೂ ದಕ್ಕುವುದಿಲ್ಲ. ಅತುಲ್ ದೊಡಿಯಾ ಹವರು ಪೇಂಟಿಂಗ್‌ಗೆ ಹೊಸ ಜೀವ ತಂದುಕೊಡಬಲ್ಲರು. ಗಾಂಧೀಜಿ, ಜೋಸೆಫ್ ಬಾಯ್ಸ್‌ನ ಮಿಕ್ಸ್ ಮಾಡುತ್ತಾರೆ. ು ಸಮಕಾಲೀನರಾದರೂ, ಪರಸ್ಪರ ನೋಡಿರಲಿಲ್ಲ. ಬಾಯ್ಸ್ ಚಿತ್ರಕಲೆಯಲ್ಲಿ ಗಾಂಧಿ ಇದ್ದಂತೆ, ಜರ್ಮನಾ ಕಲಾವಿದ. ತಲೆಮಾರಿಗೆ ಪ್ರಭಾವ ಬೀರಿದ ಕಲಾವಿದರೆಂದರೆ ಜೋಸೆಫ್ ಬಾಯ್ಸ್, ಫ್ರಿಡಾ ಕಾರ್ಲೊ. ಕಾರ್ಲೊ ಥರ್ಡ್ ವರ್ಲ್ಡ್ ನಿಂದ ಬಂದವಳು. ಇವೆಲ್ಲಾ ಇಂಟರ್‌ನೆಟ್ ಬರುವ ವೇಳೆಗೆ ಆದುವು. ಇಂಟರ್‌ನೆಟ್ ಏನು ಮಾಡಿತು ಎಂದರೆ, ಅದು ಮಾಧ್ಯಮವಾಗಿ ಬಂದಿತು. ಬರೀ ಇಂಟರ್‌ನೆಟ್ ಆಗಿ ಬರಲಿಲ್ಲ, ಹೈಪರ್ ಟೆಕ್ಸ್ಟ್ ಎನ್ನುವುದು ಅದಕ್ಕೆ. ಸಂಪಾದಕ ಸುತ್ತಾನೊ, ಬಿಡುತ್ತಾನೊ ಗೊತ್ತಿಲ್ಲದ ಸಂದರ್ಭದಲ್ಲಿ ನಮ್ಮದೆ ವೆಬ್‌ಸೈಟ್ ಪ್ರಾರಂಭಿಸುವುದು, ನಮಗೆ ಬೇಕಾದ ಶ ನಾವೇ ಹುಡುಕಿಕೊಂಡು ಅಕಾಡೆಮಿಗಳ ಹೈರಾರ್ಕಿ ಮುರಿದು, ಅವರಿಗೆ ಪರ್ಯಾಯವಾದ ಮಾರ್ಗಗಳನ್ನು ಕುವಲ್ಲಿ ಹೈಪರ್ ಟೆಕ್ಸ್ಟ್ ಸಹಾಯ ಮಾಡಿತು. ಅದು ಬರುವುದಕ್ಕೂ ಇವರೆಲ್ಲರ ಕೃತಿಗಳು ಬರುವುದಕ್ಕೂ ನೇರವಾದ ಂಧವಿದೆ. ಇಂಟರ್‌ನ್ಯಾಷನಲ್ ರೆಸಿಡೆನ್ಸಿಗಳು, ಡಾಕ್ಯುಮೆಂಟಾ ಎಲ್ಲಾ ಏರ್ಪಟ್ಟವು. ಡಾಕ್ಯುಮೆಂಟಾ ಜಗತ್ತಿನ ಅತಿ ಶ್ರೇಷ್ಠ ರ್ಶನ, ನಾಲ್ಕೈದು ವರ್ಷಕ್ಕೊಮ್ಮೆ ನಡೆಯುತ್ತೆ.





**ುರೇಖಾ :** ೯೦ರ ದಶಕದಲ್ಲಿ ರೆಸಿಡೆನ್ಸಿ ಪ್ರಾರಂಭವಾದವು. ಯಾರಾದರೂ ಕಲಾವಿದರನ್ನು ಆಹ್ವಾನಿಸುತ್ತಾರೆ. ಇವರು ಗಿ ಎರಡು ಮೂರು ತಿಂಗಳು ಅಥವಾ ವರ್ಷ ಅಲ್ಲಿರುವುದು. ನಿಮ್ಮ ಪ್ರಾಜೆಕ್ಟ್ ಅನ್ನು ಪ್ರಾಯೋಜಿಸುತ್ತಾರೆ. ನೀವು ಕೆಲಸ ತಬಹುದು. ದೇಶ ಸುತ್ತಬಹುದು. ಬೆಂಗಳೂರಲ್ಲಿ ಸ್ವಿಸ್ ಬ್ಯಾಂಗಲೋರ್ ರೆಸಿಡೆನ್ಸಿ, ದೆಹಲಿಯಲ್ಲಿ ಖೋಜ್ ರೆಸಿಡೆನ್ಸಿ ರೆಸಿಡೆನ್ಸಿಗಳು ಅಂತರರಾಷ್ಟ್ರೀಯ ಕಾರ್ಯಾಗಾರ ನಡೆಸುತ್ತವೆ. ರಮೇಶ್‌ಚಂದ್ರ ಕಾರ್ಯಾಗಾರದಲ್ಲಿ, ಕೊಲೊರೆಡೊದಲ್ಲಿ ವಹಿಸಿ, ಮಾರ್ಬಲ್ ಅಂಡ್ ಮಾರ್ಬಲ್ ಶಿಲ್ಪಗಳನ್ನು ರಚಿಸಿ ಬಂದಿದ್ದಾರೆ.

**ಮೇಶ್‌ಚಂದ್ರ :** ಇಲ್ಲಿನ ಕಲಾವಿದರು ಪಶ್ಚಿಮಕ್ಕೆ ಹೋಗಿ ಬಂದು,ಅಲ್ಲಿನ ಪ್ರಭಾವಗಳಿಗೆ ಒಳಗಾಗುತ್ತಾರೊ ಹೇಗೆ ಎಂಬ ಪ್ರಾರಂಭದಲ್ಲೆ ಬಂದಿತ್ತು. ಒಂದು ಸ್ಪಷ್ಟನೆ. ನಮ್ಮ ಕಲಾವಿದರು ಆ ದೇಶಗಳಿಗೆ ಹೋಗಿಬಂದಾಗ, ಬಹುಶಃ ಭಾಷೆಯ ಬಗ್ಗೆ ಹೆಚ್ಚು ಕಾನ್ಷಿಯಸ್ ಆಗಿಬಿಡುತ್ತಾರೆ. ಕಲಾಶಾಲೆಗಳಲ್ಲಿ ಕಲಿತದ್ದಕ್ಕೆ ಸೀಮಿತವಾಗಿರುತ್ತೇವೆ. ಹೊರಗಿನ ಭಾಷೆಗೆ ಕೊಳ್ಳುವುದರಿಂದ ಕಣ್ಣು ತೆರೆಯುತ್ತೆ. ಕಲಾವಿದರು ತಮ್ಮ ತಮ್ಮ ಸಂಸ್ಕೃತಿಯ ಒಳಗಿನ ಸಮಸ್ಯೆಗಳನ್ನು ತೆಗೆದುಕೊಂಡು ಮಾಡಿದ್ದಾರೆ. ಅದು ಸುರೇಖಾ ಅವರ ಕೃತಿಗಳಲ್ಲಿ ಸ್ಪಷ್ಟವಾಗಿ ಕಾಣಿಸುತ್ತೆ. ಕ್ರಿಸ್‌ಒಫಿಲಿ ಆನೆ ಲದ್ದಿ ಬಳಸಿ ಕಲಾಕೃತಿ ಿದ್ದಕ್ಕೂ ಶೀಲಾ ಗೌಡ ಅವರು ಸೆಗಣಿ ಬಳಸಿದ್ದಕ್ಕೂ ಬಹಳ ವ್ಯತ್ಯಾಸವಿದೆ. ಸೆಗಣಿ, ನಮ್ಮ ಪರಿಸರದಲ್ಲಿ ನೆನಪಿನ ಸು ತ್ತೆ. ಕಲಾವಿದೆಯ ಸಂಸ್ಕೃತಿ ಪ್ರಜ್ಞೆ, ಆಯ್ಕೆ, ನಮ್ಮ ಸಂಸ್ಕೃತಿಯಲ್ಲಿ ಹೆಚ್ಚು ಅರ್ಥದ ಸಾಮಗ್ರಿ ಪರಿಕರ ಹುಡುಕಿ, ಕೃತಿಯಾಗಿಸುವಲ್ಲಿ ಬುದ್ಧಿವಂತಿಕೆ ಇದೆ.



**ುರೇಖಾ :** ರೂಢಿಗತವಾಗಿ ಆರ್ಟ್ ಮೆಟೀರಿಯಲ್ ಅಲ್ಲದ್ದೂ ಆರ್ಟ್ ಮೆಟೀರಿಯಲ್ ಆಗಿ, ಒಂದು ರೂಪ ಆಗುತ್ತೆ, ಯೋಚನೆ ಮಾಡುವ ರೀತಿ, ಪ್ರೆಸೆಂಟ್ ಮಾಡುವ ರೀತಿ ಒಂದು ಕಲಾಕೃತಿಯನ್ನು ಸೃಷ್ಟಿಸುತ್ತೆ.

**ಂ.ಎಚ್.ಕೆ. :** ನಿಮ್ಮ ಕಲಾಸೃಷ್ಟಿಯನ್ನೆ ಗಮನಿಸೋಣ. ನೀವು ಕೆನ್ ಕಲಾಶಾಲೆಯಲ್ಲಿ ಹಡಪದ್ ಮಾಸ್ತರರ ಯಾಗಿದ್ದಿರಿ. ಅನಂತರ ಶಾಂತಿನಿಕೇತನಕ್ಕೆ ಹೋದಿರಿ. ಅಲ್ಲಿ ಕೆ.ಜಿ. ಸುಬ್ರಮಣ್ಯನ್ ವಿಚಾರ ಚಿಂತನೆಗಳಿಗೂ ೂಂಡಿರಿ. ನಿಮ್ಮ ಕಾಲದಲ್ಲಿ ಸಂಪೂರ್ಣ ಹೊಸ ಬಗೆ ಪ್ರಯೋಗಗಳಿರಲಿಲ್ಲ. ೮೦ರ ದಶಕದ ಒಂದು ಮಿತಿಯಲ್ಲೇ ೋಗ ಆಗುತ್ತಿದ್ದವು. ೧೯೮೫ರಿಂದ೯೨ ನಿಮ್ಮ ಅಭ್ಯಾಸ. ನೀವು ಹೊಸದಿಕ್ಕಿಗೆ ಹೊರಳಿದ್ದು ಯಾವಾಗ?



**ುರೇಖಾ :** ವಾಸ್ತವವಾಗಿ ನಾನು ಸೈನ್ಸ್ ಗ್ರಾಜುಯೇಟ್. ಕಲೆಗೆ ಬಂದದ್ದೂ ಒಂದು ಆಕಸ್ಮಿಕ. ಹಡಪದರಿಂದ ವಿತಳಾಗಿಯೇ ಕಲಾಶಾಲೆಗೆ ಸೇರಿಕೊಂಡೆ. ಎದುರಿಗೆ ಅವರು ಮಾಡುತ್ತಿದ್ದ ರಚನೆ ನೋಡಿದಾಗ ಇದು ಸಂಪೂರ್ಣ ಕ್ಷೇತ್ರ ಎನಿಸಿತು. ದೃಶ್ಯಕಲೆಯಲ್ಲಿ ಸಂಪೂರ್ಣ ಭಿನ್ನ ಸಂವೇದನೆಗಳಿವೆ, ಕಾದಂಬರಿ ಕಾವ್ಯಕ್ಕಿಂತ ಬೇರೆಯೇ ಆದದ್ದು. ವಾಗ, ರಮೇಶ್‌ಚಂದ್ರ ಅನಂತರ ಸೇರಿಕೊಂಡರು, ಡಿಗ್ರಿ ಮುಗಿಸಿದವರೂ ಬರುತ್ತಿದ್ದರು. ವಿದ್ಯಾಮೂರ್ತಿ, ಈಗ ಪುರ್‌ನಲ್ಲಿದ್ದಾರೆ, ನನ್ನ ಸಹಪಾಠಿ. ಕೆನ್ ಸ್ಕೂಲ್‌ನಲ್ಲಿ ಕಲಿತ ಐದು ವರ್ಷಗಳಲ್ಲಿ ಬರಿ ಕಲೆ ಮಾತ್ರವಲ್ಲ, ಬೇರೆ ಬೇರೆ ವಿಷಯಗಳ ಪರಿಚಯ, ಪ್ರಭಾವವೂ ಆಗುವುದಕ್ಕೆ ಪ್ರಾರಂಭಿಸಿತು. ಚರ್ಚೆ ವಿಚಾರ ಸಂಕಿರಣಗಳೂ ಮುತ್ತಿದ್ದವು. ಫೆಮಿನಿಸ್ಟ್ ಮೂವ್‌ಮೆಂಟ್ ಇತ್ಯಾದಿ. ಇದಾದ ಮೇಲೆ ಶಾಂತಿನಿಕೇತನಕ್ಕೆ ಹೋದೆ. ಅಲ್ಲಿ ನನಗೆ ನಿಜವಾದ ಬ್ರೇಕ್ ಎನ್ನಬೇಕು. ಏಕೆಂದರೆ, ಸ್ಕೂಲಿನಲ್ಲಿದ್ದಾಗ ಬೇರೆಯವರ ಕೃತಿಗಳನ್ನು ನೋಡಿದ್ದುದು ಎಂದರೆ ಶೀಲಾ ಗೌಡ ೂಬ್ಬರದು. ಅವರಲ್ಲದೆ ಬರೋಡಾದಿಂದ ರೇಖಾ ರೋಡ್ವಿತ್ತಿಯ ಎನ್ನೋರು, ಆರ್ಟ್‌ನಲ್ಲಿ ತುಂಬ ರ್‍ಯಾಡಿಕಲ್ ಆಗಿ ಮಾಡಿದವರು, ಬಂದಿದ್ದರು. ಅವರೆಲ್ಲ ಬಂದು ಆರಾಮವಾಗಿ ಮಾತುಕತೆ ಆಡುತ್ತಿದ್ದರು. ಆದರೆ ಶಾಂತಿನಿಕೇತನ ಬೇರೆ ಚ ತೆರೆಯಿತು. ಅಲ್ಲಿ ಹಾಸ್ಟೆಲ್‌ನ ಹುಡುಗಿಯರು ತುಂಬ ಓದಿದ್ದವರು. ಒಂದು ದೊಡ್ಡ ಮೀಟಿಂಗ್. ನೋಡಿದರೆ ಅದು ುನ್ಸ್ ಮೀಟಿಂಗು. ಆ ಶಬ್ದವೇ ನನಗೆ ತಿಳಿದಿರಲಿಲ್ಲ, ಎಂದರೆ ಕಲೆಗಿಂತ ಇನ್ನೊಂದು ಹೊರಗಿನ ಪ್ರಪಂಚದ ಬಗೆಗೂ ತು. ರ್‍ಯಾಡಿಕಲ್ ಫೆಮಿನಿಸ್ಟ್ ಪ್ರಪಂಚ ಎನ್ನಿ. ಆಗ ನನಗೆ ಆದದ್ದೇನೆಂದರೆ, ನಾನು ಕರ್ನಾಟಕದವಳು, ನಾನು ಕೊಂಡಿದ್ದ ಅಕ್ಕಮಹಾದೇವಿ ಇವರ ವಿಚಾರಗಳೆಲ್ಲ ಹೊರಕ್ಕೆ ಬರಲು ಪ್ರಾರಂಭಿಸಿತು. ಅಲ್ಲಿಯವರೆಗೆ ಅವೆಲ್ಲ ನನಗೆ ದ್ದರೂ ಹೇಳಬೇಕು ಎನಿಸಿರಲಿಲ್ಲ. ಆ ಹುಡುಗಿಯರಿಗೆ ಅಕ್ಕಮಹಾದೇವಿಯಂತಹವಳು ಇರಲು ಸಾಧ್ಯವೇ ಎಂದೂ ರಲಿಲ್ಲ. ಈ ವಿಚಾರಗಳನ್ನೆಲ್ಲ ಹಂಚಿಕೊಳ್ಳುತ್ತಾ ಹೊಸ ಜಗತ್ತೇ ಬೆಳೆಯತೊಡಗಿತು. ಸುಬ್ರಮಣ್ಯನ್ ಅವರಿಂದ



ಮೌನಕ್ರಿಯೆ – ವಿಡಿಯೊ

# ARE YOU FRUSTRATED WITH POWER CUTS ? THEN USE DEEPA SOLAR LIGHTING SYSTEMS

## PRODUCTS

- Solar Street Light
- Solar Lantern
- Solar Home Lighting
- Solar Garden Light
- Solar Fans, Fan Caps
- Solar Mobile Chargers
- Solar Compound Light
- Solar Power Fencing
- Solar Grip Power
- Solar Focusing Lights



ಡಾ॥ ರಾಜ್‌ಕುಮಾರ್‌ರವರೊಂದಿಗೆ
ದೀಪಾ ಸೋಲಾರ್ ಲೈಟಿಂಗ್ ಸಿಸ್ಟಮ್ಸ್‌ನ ಮಾಲಿಕರಾದ ಕೆ. ಎಲ್. ಎಚ್. ರಾಯ



TM

**DEEPA SOLAR LIGHTING SYSTEMS**

*Exclusive Manufacturers of Solar Lighting Systems*

# 19, 4th 'C' Main, Mahalakshmi Layout
Opp. BNES College
Bangalore - 560 086.
Tel : 080-23594462, Telefax : 23596942.
Mobile : 9845161187
E-mail : info@deepasolar.com
Website : www.deepasolar.com










**Business Associates**
**An ISO 9001, ISO 14001 & OHSAS 180001**





ಮಲ್ಲಿಗೆಯ ಕಂಪು

ರ್ನ ಬೇರೆ ಡೈಮೆನ್ಷನ್, ಬೇರೆ ಬಗೆಯ ಈಸ್ಥಟಿಕ್ಸ್ ಎಲ್ಲಾ ತಿಳಿಯಿತು. ಅಲ್ಲಿ ಸಿ ಬರುವ ವೇಳೆಗೆ ಭಾಷೆ, ಸುತ್ತಮುತ್ತಲ ವಿಚಾರಗಳು, ಸಂಗತಿಗಳು, ಗಿಯರು ಚಿತ್ರಿಸುತ್ತಿದ್ದ ಹಾಸ್ಟೆಲ್‌ಲೈಫ್, ವಿಷಯಗಳು ಬೇರೆಯವಾದರೂ ವಿಭಿನ್ನ ಟ್ಟು, ಆದರೆ ಹಿಂದಿನ ರೀತಿ ಚಿತ್ರಣ – ಕೊನೆಯ ಎರಡು ಮೂರು ವರ್ಷ ಾವಣೆ ಆಯಿತು. ಹೊಸ ಮೆಟೀರಿಯಲ್ ಬಳಸೋದು ಇತ್ಯಾದಿ. ಹೀಗೆ ೀಚನೆ ಮಾಡಿ ನಾನು ಮತ್ತೆ ಹಳೆಯದಕ್ಕೇ ಹೋದೆ. ಅದೇ ರೈಸ್ ಪೇಪರ್. ೃವತ್ತು ವರ್ಷ ಹಳೆಯದು. ಕಾರಣ ಎಂದರೆ ಆ ಪೇಪರನ್ನು ಯಾರೂ ಡೈರೆಕ್ಟ್ ಟ್ರೀಟ್ ಮಾಡಿ ವರ್ಕ್ ಮಾಡಲ್ಲ. ಬಟ್ಟೆ ಮೇಲೆ ಪೇಪರ್ ಅಂಟಿಸಿ ವರ್ಕ್ ುತ್ತಾರೆ. ಪೇಪರ್ ಇದೆ ಅಂತಲೂ ಗೊತ್ತಾಗಲ್ಲ. ಆ ಪೇಪರ್ ನೋಡಿದಾಗ, ್- ಸ್ಕಿನ್ ಎರಡೂ ಮಿಕ್ಸ್ ಆಗಿದ್ದಂತೆ ಎನ್ನಿಸಿತು. ನಾನು ಪೇಪರೇ ಒಂದು ಬಾಡಿ ತ್ತಾ ಎಂದು ಯೋಚಿಸಿದೆ. ಆ ಕಾಲದಲ್ಲಿ ತುಂಬ ಸಾಹಿತ್ಯ ಓದುತ್ತಿದ್ದೆ. ಒಂದು ಕಥೆ ವಶಾಲಿ ಎನ್ನಿಸಿತು. ಬಾಡಿ ಇನ್ ಎಸೆನ್ಸ್ ಎಂದು ಉದಯಕುಮಾರ್ ಲೇಖನ ದ್ದು, ದೆಹಲಿಯವರು. ಕುಮಾರನ್ ಅಸಾನ್, ನಾರಾಯಣಗುರು ಅವರ ು ತೆಗೆದುಕೊಂಡು, ಬಾಡಿ ಮತ್ತು ಅಲಂಕಾರ ಎಲ್ಲಾ ಹೇಗೆ ವರ್ಕ್ ಆಗುತ್ತೆ ಬರೆದಿದ್ದರು. ಒಬ್ಬ ಹೆಂಗಸು ಎಂದೂ ಬ್ಲೌಸ್ ಧರಿಸಿರಲಿಲ್ಲ, ಅವರ ದಾಯ. ಆಕೆಗೆ ರವಕೆ ಉಡುಗೊರೆ ಸಿಗುತ್ತೆ. ತಾಯಿ ನೀನು ಕೊಳ್ಳುವಂತಿಲ್ಲ ಎನ್ನುತ್ತಾಳೆ. ಅವಳು ಹಟದಿಂದ ಹಾಕಿಕೊಂಡು ಬಂದಾಗ ತಾಯಿ ಕೆಯಿಂದ ಬಾರಿಸುತ್ತಾಳೆ, ಸ್ಲಟ್‌ನಂತೆ ಕಾಣುತ್ತೀಯಾ ಎಂದು. ಆದರೆ ಆಕೆಯ ನಿಗೆ ಆಕೆ ಬ್ಲೌಸ್ ಹಾಕಿಕೊಳ್ಳುವುದು ಇಷ್ಟ. ಇವಳಿಗೂ ಇಷ್ಟ, ತನ್ನ ಬಾಡೀನೇ ಡಿಕೊಳ್ಳುವುದು. ಅವಳದೇ ಬಾಡಿ, ಅವಳದೇ ಡಿಸೈರ್ ಇರುತ್ತಲ್ಲ. ಹೀಗಾಗಿ ಆಕೆ ಹೊತ್ತು ಬ್ಲೌಸ್ ಹಾಕಿಕೊಳ್ಳುವುದು, ಮನೆಯಿಂದ ಹೊರಬರುವಾಗ ಬಿಚ್ಚಿಟ್ಟು ವುದು. ಸುಮಾರು ನೂರೈವತ್ತು ವರ್ಷಗಳ ಹೆಣ್ಣಿನ ಚರಿತ್ರೆ ಇದ್ದಹಾಗೆ. ಮವಾಗಿ, ಅಲ್ಲಿ ಯಾವುದೇ ನೆಪ ಇರಲಿ, ಡಿಸೈರ್ ಆಫ್ ದಿ ಬಾಡಿ ್ಯವಾಗುತ್ತೆ. ಒಂದು ಬಗೆ ಸ್ವಾತಂತ್ರ್ಯದ ಅನುಭವ ಅದು. ಅಲ್ಲಿಂದ ಒಂದು ಸೆಟ್ ವರ್ಕ್ಸ್, ಬ್ಲೌಸಸ್ ಶುರು ಮಾಡಿದೆ. ಪೇಪರ್, ಸ್ಕಿನ್ ಪೇಪರ್ ಬ್ಲೌಸ್ ತರಹವೇ ತ್ತೆ. ಬೆಂಗಳೂರಲ್ಲೂ ಕೃತಿಗಳ ಪ್ರದರ್ಶನ ಆಯಿತು. ಅದು ನನ್ನ ಬ್ರೇಕ್. ಆ ಮಾಡುವಾಗ ಪೇಪರನ್ನು ಸ್ಟಿಚ್ ಮಾಡಿದೆ. ಪೇಪರ್ ಎಷ್ಟು ತೆಳುವಾಗಿದೆ ರೆ ಸ್ಟಿಚ್ ಆದಮೇಲೆ ಅದನ್ನು ಸ್ಕಿನ್ ತರಹವೇ ಟ್ರೀಟ್ ಮಾಡಬೇಕಾಗುತ್ತೆ.

ನನಗೆ ಒಂದು ನ್ಯೂನತೆ ಇದೆ ಎನಿಸುತ್ತಿತ್ತು. ಎಲ್ಲಿ ನನ್ನ ವರ್ಕ್, ಕ್ರ್ಯಾಫ್ಟ್ ಡುತ್ತೊ ಎಂದು. ಮುಂದಿನ ಹಂತ – ಛಾಯಾಚಿತ್ರ ಬಳಸಲು ತೊಡಗಿದೆ. ಮೇಲೆ ಆ ಬ್ಲೌಸ್ ಹಾಕಿಕೊಂಡ ಛಾಯಾಚಿತ್ರ. ಎಲ್ಲೋ ಒಂದು ಕಡೆ ಸ್ಕಿನ್ ಆಗಿ ಪೇಪರ್ ಜೊತೆ, ಬಾಡಿ ಮತ್ತು ಪೇಪರ್ ಮರ್ಜ್ ಆಗುತ್ತಾ ಹೋಗುತ್ತೆ. ಇಂಟರ್‌ಆಕ್ಷನ್ – ಬಾಡಿ ಮತ್ತು ಆಬ್ಜೆಕ್ಟ್ ನಡುವೆ. ಅಲ್ಲಿಂದ ಫೋಟೋಗ್ರಾಫ್ ುತ್ತಾ, ಒಂದು ಹಂತದಲ್ಲಿ ನನ್ನನ್ನೇ ಏಕೆ ಬಳಸಬಾರದು ಎನ್ನಿಸಿತು. ಆಗ ಟೊ ತೆಗೆಯುವುದನ್ನು ಪ್ರಾರಂಭಿಸಿದೆ, ನನ್ನನ್ನೇ ಬಳಸಿಕೊಂಡು ಒಂದು ುಲ್ಲಿ ಟ್ರೀಟಿಂಗ್ ದ ಬಾಡಿ, ಎಷ್ಟೇ ವರ್ಷ ಆದರೂ ದೇಹವೇ, ಮಾಧ್ಯಮ ಬದಲಾಗಬಹುದು. ಆದರೆ ದೇಹವನ್ನು ರೀಲೊಕೇಟ್ ಮಾಡುವುದು, ರೀಡಿಫೈನ್ ಮಾಡುವುದು, ದೃಷ್ಟಿಯನ್ನು ಬದಲಿಸುವುದು ಸಾಧ್ಯ.

**ಎಂ.ಎಚ್.ಕೆ. :** ಇಲ್ಲೆಲ್ಲಾ ನೀವು ಜಾನಪದವನ್ನೂ ಬಳಸಿಕೊಂಡಿದ್ದೀರಿ. ಅದು ಹೇಗಾಯಿತು?

**ಸುರೇಖಾ :** ನನಗೆ ಸಾಹಿತ್ಯದ ಪ್ರಭಾವ. ಕಥೆ ಇತ್ಯಾದಿ ಓದಿಕೊಂಡಿದ್ದೇನೆ. ಇನ್ನೊಂದು ರೀತಿಯಲ್ಲಿ ಸಾಹಿತ್ಯ ಮತ್ತು ಕಲೆಯನ್ನು ಒಂದು ಕಡೆ ಲಿಂಕ್ ಮಾಡಬಹುದು ಎನಿಸುತ್ತಿತ್ತು. ಬಾಡಿ ರಚಿಸಿದಾಗ ಬ್ಲೌಸ್ ಒಳಗೆ ರಿಬ್‌ಕೇಜ್ ಬ್ಯಾಕ್‌ಬೋನ್ ಎಲ್ಲ ಪ್ಯಾಟರ್ನ್‌ನಂತೆ ಕಾಣಿಸುತ್ತವೆ. ಪಂಪ, ಕುಮಾರವ್ಯಾಸರ ಬಗ್ಗೆ ಡಿ. ಆರ್. ನಾಗರಾಜ್ ಹೇಳಿದರು. ಯುದ್ಧಭೂಮಿಗೆ ಹೋದಾಗ ಅಲ್ಲಿ ದೇಹದ ಒಳಗಿನದು ಹೊರಗೆ ಕಾಣುವುದು ಇತ್ಯಾದಿ ವಿವರಿಸಿದ್ದರು. ಎಲ್ಲ ಪ್ರಭಾವ ಆಗಿದೆ. ಇಂಡಿಯನ್ ಆರ್ಟ್‌ನಲ್ಲೂ ಬ್ಯೂಟಿ ಮತ್ತು ವಯಲೆನ್ಸ್ ಇದ್ದರೂ, ಹಿಂಸೆ ಕ್ರೌರ್ಯಗಳನ್ನೂ ಸುಂದರವಾಗಿ ತೋರಿಸೋದು. ಇವೆಲ್ಲಾ ಪ್ರಭಾವ ಬೀರಿದುವು.

**ಅನಿಲ್‌ಕುಮಾರ್ :** ನೋಡುಗ, ಕಲಾವಿದ ಇಬ್ಬರೂ ಕಲಾಕೃತಿಯಲ್ಲಿ ಭಾಗಿಯಾಗುವ ಬಗೆ ಇದು. ರಿಚರ್ಡ್ ಬಾಖ್ ತನ್ನ ಕ್ರಿಯೇಷನ್‌ನಲ್ಲಿ ಇನ್‌ವಾಲ್ವ್ ಆಗುವಂಥವನು. ಒಂದು ಗುಹೆಯಂತೆ ಕತ್ತಲೆ ಒಳಗೆ ಸಾಗಿಹೋದ ಮೇಲೆ ಒಂದು ಅಂಗಳದಲ್ಲಿ ವಿಡಿಯೊ ಕಾಣಿಸುತ್ತೆ. ಈ ಎರಡೂ ಅನುಭವ ಮುಖ್ಯವಾಗುತ್ತೆ. ಅವನ ಷೋ ಅವನೇ ಕ್ರಿಯೇಟ್ ಮಾಡುತ್ತಾನೆ. ಮ್ಯಾನೇಜ್‌ಮೆಂಟ್ -ಸೃಷ್ಟಿ ಎರಡೂ ಇಲ್ಲಿ ಬೆರೆಯುತ್ತವೆ.

**ಎಂ.ಎಚ್.ಕೆ. :** ಶೀಲಾ ಅವರ ಸಾಕ್ಷಿ ಗುಡ್ಡ - ಸಾಕ್ಷಿ ಗೋಡೆ ಸಹ ನೋಡುಗ ಭಾಗಿಯಾಗುವಂತೆ ಮಾಡುತ್ತೆ.

**ಅನಿಲ್‌ಕುಮಾರ್ :** ನೋಡುಗನೂ ಕ್ರಿಯಾಶೀಲವಾಗಿ ಭಾಗಿಯಾಗಬೇಕು. ಧೈರ್ಯ ಮಾಡಿ ಒಳಹೋದರೆ ಬೇರೊಂದು ವಿಶ್ವ, ದೃಶ್ಯ. ಪ್ರೇಕ್ಷಕರೂ ಕಲಾವಿದರ ಪಾತ್ರ ವಹಿಸೋದು. ಹೈಪರ್ ಟೆಕ್ಸ್ಟ್‌ನಲ್ಲಿ ಒಬ್ಬ ಮಾಡಿದ್ದನ್ನು ಇನ್ನೊಬ್ಬ ಇಂಪ್ರೊವೈಸ್ ಮಾಡಿ ಬದಲಿಸಬಹುದು. ಮಲ್ಟಿಪಲ್ ಆಥರ್‌ಷಿಪ್ ಎನ್ನುವುದು. ಬಾರ್ಥೆ, ಆಥರ್ ಈಸ್ ಡೆಡ್ ಎಂದು ಬರೆದಿದ್ದಾನೆ. ಕಲಾಕೃತಿ ರಚಿಸಿದ ಮೇಲೆ ಮುಗಿಯಿತು. ಅದು ಪ್ರೇಕ್ಷಕನಲ್ಲಿ ಅರ್ಥ ಪಡೆಯಬೇಕು. ಆಗ ಇಡೀ ಜಗತ್ತೆ ಪಠ್ಯವಾಗುತ್ತೆ ಅಂತ. ಮಿಚೆಲ್ ಫುಕೊ ಇನ್ನೊಂದು ವಿಷಯ ಹೇಳುತ್ತಾನೆ. ಅಂತರಶಿಸ್ತೀಯ ವಿಧಾನ ಎಂದರೆ ಸಾಹಿತ್ಯ ಮತ್ತು ಚಿತ್ರಕಲೆ ಬೆರೆತರೆ ಇಂಟರ್-ಡಿಸಿಪ್ಲಿನ್ ಅಲ್ಲ, ಒಂದು ಡಿಸಿಪ್ಲಿನ್ನೇ ಅಲ್ಲದ್ದರ ಜೊತೆಗೆ ಗೊತ್ತಿರುವ ಡಿಸಿಪ್ಲಿನ್ ಕೂಡಿದಾಗ ಅಂತರಶಿಸ್ತು ಎಂದು. ಮತ್ತೆ ಹೇಳುವುದು, ಆರ್ಕಿಯಾಲಜಿ ಆಫ್ ನಾಲೆಡ್ಜ್‌ನಲ್ಲಿ, ಯಾವ ಯಾವುದು ಜ್ಞಾನ ಕೇಂದ್ರಗಳಿವೆ, ಕೆಲವು ಯಾಕಿಲ್ಲ– ಇದೆಲ್ಲ ರಾಜಕೀಯ ಪ್ರೇರಿತ ಎಂದು. ಅಲ್ಲಿ ವರ್ಕ್ ಬಗ್ಗೆ ನಾವು ಯಾವಾಗಲೂ ಪಾಸಿಟಿವ್ ಆದದ್ದನ್ನೆ ಪಿರಮಿಡ್ ತರಹ ಏಕೆ ಓದುತ್ತೇವೆ. ಎಷ್ಟೋ ವೇಳೆ ಕಲಾವಿದರು ಹಾಗೆ ಮಾಡಿರೋದಿಲ್ಲ. ಉದಾಹರಣೆಗೆ, ಮನೆ ಕಟ್ಟಿ, ಶಿಲ್ಪ ಎಂದು, ಮತ್ತೆ ಅದನ್ನು ಬ್ಲ್ಯಾಸ್ಟ್ ಮಾಡಿ, ತುಂಡು ಚೂರುಗಳನ್ನು ಜೋಡಿಸಿದರೆ – ಅದು ಒಟ್ಟುಗೂಡಿಸಿರುವುದೋ, ಬಿಡುಗಡೆಗೊಳಿಸಿರುವುದೋ ? ಲಿರಿಸಿಸಂ ಮತ್ತು ಸಿನಿಸಿಸಂ ಎರಡೂ ಬರುತ್ತವೆ. ಇಷ್ಟು ಹೊತ್ತು ಮಾತನಾಡುತ್ತ ಒಂದು ಐಡಿಯಾ, ಚಿಂತನೆ ನಿರ್ಮಾಣ ಮಾಡಿದೆವಲ್ಲ, ಅದರ ಅವಶ್ಯಕತೆಯೆ ಒಂದು ಕಾಲಬದ್ಧ ಚಿಂತನಾಧಾರೆ ಎಂದು ಫುಕೊ ಕರೆಯುತ್ತಾನೆ. ಅಲ್ಲಲ್ಲಿ ಚೂರು ಚೂರಾಗಿ ಹಂಚಿ ಬಿಟ್ಟುಬಿಡುವುದು. ಒಂದು ವರ್ಕ್ ಸಮಗ್ರವಾಗಿ ಇಂತಹದನ್ನೇ ಹೋಲುತ್ತಿದೆ ಎನ್ನುವ ಅವಶ್ಯಕತೆ ಇಲ್ಲ. ಇದು ಒಂದು ನಿರಂತರ ಸಂದಿಗ್ಧತೆ.

ಭಾಗೀರಥಿಯನ್ನು ತೆಗೆದುಕೊಳ್ಳುವುದು ಒಂದು ನೆಪವೇ ಹೊರತು, ಅದೇ ವಿಷಯವಲ್ಲ. ಸ್ವಲ್ಪಮಟ್ಟಿಗೆ ಪ್ರಭಾವ ಆಗೇ ಆಗುತ್ತೆ.

**ಎಂ.ಎಚ್.ಕೆ. :** ಭಾಗೀರಥಿ ಒಂದು ರೂಪಕವಾಗಿ ಕಾಲ ದೇಶಗಳನ್ನು ಕೂಡಿಸಿ ಬಿಡುತ್ತಲ್ಲವೆ ? ಅಂದು ಮತ್ತು ಇಂದು, ಆ ಊರು- ಈಗಿನ ನಗರ ಬೆರೆಯುತ್ತೆ.

**ಅನಿಲ್‌ಕುಮಾರ್ :** ದೃಶ್ಯ ನಿರ್ಮಿತಿಯ ರೂಢಿಗತ ಅಭ್ಯಾಸಗಳನ್ನೆಲ್ಲ ಬಲಿ ಕೊಡುವುದೇ ಈ ವಿಡಿಯೊ ಭಾಗೀರಥಿಯ ಕೆಲಸ. ರೀಡಿಂಗ್ಸ್ ಬೇರೆ ಬೇರೆ ಇರಲು ಸಾಧ್ಯ. ಬಲಯುತವಾಗಿ ಕೊಟ್ಟಿರುವುದನ್ನು ಬಿಟ್ಟು ಇನ್ನೂ ಏನೇನೊ ಹೇಳಬಹುದು. ಡೆರಿಡಾ ಹೇಳುತ್ತಾನಲ್ಲ, ಅರ್ಥಾಂತರ ಸಾಧ್ಯತೆ ಇರುವಾಗ, ಎರಡು ಅತಿಗಳನ್ನು ಕೂಡಿಸಿ ವೃತ್ತ ಮಾಡಿ ಈಗಿರುವುದನ್ನು ಗ್ರಹಿಸಬೇಕು ಅಂತ. ೮೦ರಲ್ಲಿ ಬರೋಡಾದಲ್ಲಿದ್ದಾಗ ಜಾನ್ ಬರ್ಜರ್ ಅಭಿಪ್ರಾಯಗಳು, ಈಗ ಫುಕೊ – ಡೆರಿಡಾವರೆಗೆ

ಬಂದಿದ್ದೇನೆ. ಇವರು ಎಲ್ಲಿಂದ ಬಂದವರು ಎಂದು ಎಷ್ಟೋ ಜನಕ್ಕೆ ಗೊತ್ತಿರಲಿಲ್ಲ. ಹೇಗೆ ಯೋಚನೆಗಳನ್ನೇ ಸಂಸ್ಥೆಯೊಳಕ್ಕೆ ಬಿಟ್ಟಿದ್ದರು ಕಂಡುಬರುತ್ತಾರೆ ಎನ್ನುವುದು ಆಶ್ಚರ್ಯ.

**ಸುರೇಖಾ :** ಸ್ವಿಟ್ಜರ್‌ಲೆಂಡ್‌ನಲ್ಲಿ ನಾನು ಜಾನ್ ಬರ್ಜರನ್ನು ಭೇಟಿಯಾಗಿದ್ದೆ. ಅವರ ಉಪನ್ಯಾಸ ಕೇಳಿದೆ. ಆನಂತರ ಮಾತನಾಡಿದೆ. ಸ್ಟುಡಿಯೋ ಹತ್ತಿರ ಹೋಟೆಲ್‌ನಲ್ಲಿದ್ದರು, ಸ್ಟುಡಿಯೋಗೆ ಬನ್ನಿ ಎಂದು ಆಹ್ವಾನಿಸಿದೆ. ಅವರು ಒಂದು ವರ್ಕ್ ನೋಡಿ, ಒಂದು ಸಣ್ಣ ಡ್ರಾಯಿಂಗ್ ಕೊಟ್ಟರು.

**ಅನಿಲ್‌ಕುಮಾರ್ :** ಈ ಎಕ್ಸ್‌ಪೋಷರ್ ಎನ್ನುವುದು ಮಹಾಸ್ಫೋಟದಂತಾಗಿ, ಆದರ್ಶ ಎಂದುಕೊಂಡಿದ್ದವರು ಎದುರಿಗೆ ಬಂದಾಗ, ನಮ್ಮ ಹಳೆಯ ತಲೆಮಾರಿನವರು ಹಿಂದೆಯೇ ಉಳಿದರೇನೋ ಎಂಬ ಸಂದೇಹವೂ ಇದೆ. ಹೈರಾರ್ಕಿಯನ್ನು ಮುರಿದಿದ್ದೆ ನಮ್ಮ ತಲೆಮಾರಿನವರ ಒಂದು ದೊಡ್ಡ ಕಾರ್ಯ.

**ಎಂ.ಎಚ್.ಕೆ. :** ಈಗ ಮುಂದೆ ಕಲೆ ಏನಾಗುತ್ತೆ, ಹೇಗಾಗುತ್ತೆ? ಹಿಂದಿನ ಕಲ್ಪನೆಗಳನ್ನೆಲ್ಲ ಮುರಿಯುತ್ತ ಬಂದಿದ್ದೀರಿ. ಇನ್ನು ಹೀಗೇ ಸಾಗಿದರೆ ಏನು?

**ಅನಿಲ್‌ಕುಮಾರ್ :** ಒಂದು, ತುಂಬ ಫ್ರೀ ಆಗುತ್ತೆ, ಅಲ್ಲದೆ, ಮ್ಯೂಸಿಯಂ ಕಲಾವಿದರಿಗೂ ಗ್ಯಾಲರಿ ಕಲಾವಿದರಿಗೂ ಕಂದಕ ಜಾಸ್ತಿಯಾಗುತ್ತೆ, ಅಂತರ. ಕಲೆ ಅರ್ಥದಲ್ಲೆ, ಕಾನ್‌ಸೆಪ್ಚುಯಲ್ ಕಲೆ ಅತಿಗೆ ಹೋಗಿ, ಸಾಹಿತ್ಯ ತುಂಬ ಬಂದುಬಿಡುತ್ತೆ.

**ಸುರೇಖಾ :** ವಾಸ್ತವವಾಗಿ ಕಲೆ ತುಂಬ ಡೈವರ್ಸಿಫೈ ಆಗುತ್ತೆ ಎನಿಸುತ್ತೆ. ಹತ್ತು ವರ್ಷದ ಹಿಂದಿನದಕ್ಕೂ







*ದೇಹ – ಅಂತರ್ಯ*

ಈಗಿನದಕ್ಕೂ ಹೋಲಿಸಿದರೆ ರೀಸರ್ಚ್ ತುಂಬ ಇದೆ. ಕಲೆ ಎನ್ನುವುದಕ್ಕಿಂತ ಅದನ್ನು ಮಾಡುವ ಅನುಭ ಮುಖ್ಯವಾಗುತ್ತಿದೆ. ಅನಿಲ್ ಆಕ್ಟಿವಿಸಂ ಎನ್ನುತ್ತಾರೆ.

**ಅನಿಲ್‌ಕುಮಾರ್ :** ಕಮ್ಯುನಿಟಿ ವರ್ಕ್ಸ್ ಜಾಸ್ತಿಯಾಗುತ್ತೆ, ತುಂಬ ಜನ ಸೇರಿ ಮಾಡುವ ಮಲ್ಟಿಪಲ್ ವರ್ಕ ಜಾಸ್ತಿಯಾಗುತ್ತೆ. ಶಾಂತಿನಿಕೇತನ, ಚೋಳಮಂಡಲಂ ಇದ್ದಂತೆ. ಇಂಟರ್-ಡಿಸಿಪ್ಲಿನರಿ ರೆಸಿಡೆನ್ಸಿ ಅವಕಾಶಗಳು ಬಹ ಬಂದಿವೆ. ಸೈನ್ಸ್ ಲ್ಯಾಬ್‌ಗಳಿಗೆ ಹೋಗಿ ಕಲೆಯ ಕೆಲಸ ಮಾಡಬಹುದು.

**ಸುರೇಖಾ :** ಕಲಾವಿದರು ಲ್ಯಾಬ್‌ನಲ್ಲಿ, ಮಾನವಶಾಸ್ತ್ರಜ್ಞರ ಜೊತೆ, ಇತಿಹಾಸಕಾರರ ಜೊತೆ ಕೂಡಿ ಕೆಲ ಮಾಡಬಹುದು. ಫಿಲ್ಮ್‌ನವರ ಜೊತೆ ಇತ್ಯಾದಿ.

**ಅನಿಲ್‌ಕುಮಾರ್ :** ಅಂತರಶಿಸ್ತು ಎನ್ನುವುದೂ ಕ್ಲೀಷೆಯಾಗಿಬಿಡಬಹುದು.

**ರಮೇಶ್‌ಚಂದ್ರ :** ಹಿಂದೆ ಕಲೆ ಎನ್ನುವುದು ಒಂದು ಪ್ರಾಡಕ್ಟ್ ಆಗಿ ಎಲ್ಲೂ ಇರಲಿಲ್ಲ. ಜೀವನದ ಭಾಗವಾಗಿ ಮುಂದೆ ಹೋದಂತೆ ಕಮ್ಯೂನಿಟಿ ಲಿವಿಂಗ್ ತುಂಬ ಕ್ರಿಯಾಶೀಲವಾಗಬಹುದು, ಪ್ರತ್ಯೇಕವಾಗಿ ವೈಯಕ್ತಿಕವಾ ಕಲಾಕೃತಿ ರಚಿಸುವುದಕ್ಕೆ ಬದಲಾಗಿ ಬರಹಗಾರ, ಕಲಾವಿದ, ಅಥೆಂಟಿಸಿಟಿ ಇವುಗಳಿಗೆ ಹೆಚ್ಚು ಗಮನ ಕೊಡುವುದಿ ಇಂಟರ್‌ನೆಟ್ ಕಲಾವಿದ ಒಂದು ವೆಬ್‌ಸೈಟ್ ಪ್ರಾರಂಭಿಸಿ, ಅದನ್ನು ಯಾವುದೇ ಇತರ ಬಿ.ಬಿ.ಸಿ., ಸಿ.ಎನ್.ಎನ್ ಗಳಿಗೆ ಕನೆಕ್ಟ್ ಮಾಡಿಕೊಂಡು ಹೋಗಬಹುದು.

**ಎಂ.ಎಚ್.ಕೆ. :** ಈ ಎಲ್ಲ ಸಾಧ್ಯತೆಗಳಲ್ಲಿ ನಮ್ಮಲ್ಲಿನ ರಸಾನುಭವದ ಕಲ್ಪನೆ ಯಾವ ರೀತಿ ಆಗಬಹುದು ? ಅದ ಹೋಗುತ್ತೆ ಎನ್ನಲಾರೆ. ಮೂಲಭೂತವಾದದ್ದು. ರಸ ಎನ್ನುವ ಬದಲು ಇನ್ನೇನೋ ಶಬ್ದ ಬಳಸಬಹುದು, ಅನುಭವ ಸುಳ್ಳಲ್ಲ. ಈಗ ವ್ಯಾಖ್ಯಾನಿಸುವ ರೀತಿ ಬದಲಾಗಬಹುದು. ನೀವು ವರ್ಚುಯಲ್ ರಿಯಾಲಿಟಿ ಎಂದಿರಿ ಅದರ ಬಗ್ಗೆ ವಿವರ, ಕಲೆಗೂ ಅದಕ್ಕೂ ಹೇಗೆ ಸಂಬಂಧ ಕಲ್ಪಿಸುತ್ತೀರಿ ? ಅದೊಂದು ಮಿಥ್ಯಾವಾಸ್ತವ.

**ಅನಿಲ್‌ಕುಮಾರ್:** ಈಗ ಇರುವ ಸ್ಥಿತಿಯಲ್ಲಿ ಅದು ಬರೀ ಒಂದು ಮಾಧ್ಯಮ ಅಷ್ಟೆ. ಒಂದು ಸಿನೆಮಾ ನೋಡು ತ್ತಿರುವಾಗ ಅದನ್ನು ಬದಲಾಯಿಸಿಕೊಳ್ಳಬಹುದು, ನಮ್ಮ ಇಷ್ಟದಂತೆ. ಹೀರೋ ಬಿದ್ದು, ವಿಲನ್ ಗೆಲ್ಲಬಹುದು ಅದೊಂದು ತಾಂತ್ರಿಕತೆ ಅಷ್ಟೆ, ಹೇಗಾದರೂ ಬಳಸಿಕೊಳ್ಳಬಹುದು. ಬೋದ್ರಿಲಾ ಬದುಕೇ ಒಂದು ಸೈನ್ಸ್ ಫಿಕ್ಷನ್ ಆಗಿದೆ ಎನ್ನುತ್ತಾರೆ. ಎಕ್ಸ್‌ಟೆಸಿ ಆಫ್ ಕಮ್ಯೂನಿಕೇಷನ್‌ನಲ್ಲಿ ಹೇಳೋದು. ವರ್ಚುವಲ್ ಅನ್ನೋದು ಬಂದುಬಿಟ್ಟರೆ ಮೊಬೈಲ್ ಇಲ್ಲದೆ ಇರುವಂತಿಲ್ಲ. ಕಾರು ಬದುಕಿನ ಭಾಗವಾಗಿಬಿಟ್ಟಿದೆ, ಶ್ರೀಮಂತಿಕೆ ಸಂಕೇತವಲ್ಲ. ಫೋಟೋ ಫೋಟೋ ರಿಯಲಿಸಂ ಆದಮೇಲೆ ಅದರ ತಾರ್ಕಿಕ ಮುಂದುವರಿಕೆ ವರ್ಚುಯಲ್ ರಿಯಲಿಸಂ. ಅದು ಬಂದುಬಿಟ್ಟರೆ ಈಗ ಹಿಂದಿನದರ ಬಗ್ಗೆ ಸಂಕೋಚ ಬಿಟ್ಟು, ಮತ್ತೆ ಹಿಂದಕ್ಕೂ ಹೋಗುತ್ತಿದ್ದೇವೆ. ಅಂದರೆ ತಿರುವು ಮುರುವು ಆಗಿದೆ ವಚನ ಸಾಹಿತ್ಯಕ್ಕೆ ವಾಪಸ್ ಹೋಗಿ, ಪುಷ್ಪಮಾಲಾ ಇವರೆಲ್ಲ, ಅಕ್ಕಮಹಾದೇವಿಯನ್ನು ಐಕನ್ ಆಗಿ ತೆಗೆದುಕೊಂಡು ಸಮಕಾಲೀನವಾಗಿ ಚಿಂತನೆ ನಡೆಸಿದ್ದಾರೆ ಆದರ ಮೂಲಕ ಕೃತಿರಚನೆಗೆ ಸಾಕಷ್ಟು ಅವಕಾಶ ಸಿಕ್ಕಿದೆ.

**ಸುರೇಖಾ :** ಅದು ಒಂದು ಬಗೆಯ ರೀವಿಸಿಟಿಂಗ್ ಎನ್ನಬಹುದು.

**ಅನಿಲ್‌ಕುಮಾರ್ :** ಅದಕ್ಕೆ ಐತಿಹಾಸಿಕ ಕಾರಣವೂ ಇದೆ. ಓರಿಯಂಟಲಿಸಂ ಏನಿದೆ, ಜೆಸ್ಯೂಟ್‌ಗಳು ಬಂದು ಭಾರತದ ಇತಿಹಾಸ ಬರೆದಾಗ, ಅಲ್ಲಾಗಿರುವ ಎಲ್ಲಾ ತಪ್ಪುಗಳನ್ನೂ ಸರಿಪಡಿಸುವುದಕ್ಕೆ ದೃಶ್ಯ ಕಲೆಯಲ್ಲ ಅವಕಾಶಗಳಿವೆ. ಇಂಡಿಯನ್ ಫಿಲಾಸಫಿ ಹೆಚ್ಚಾಗಿ ದೃಶ್ಯಕಲೆಗಳಲ್ಲಿ ವ್ಯಕ್ತ, ಓಲೆಗರಿ ಒಂದು ವರ್ಗಕ್ಕಾದರೆ, ವಾಸ್ತು ಶಿಲ್ಪ ಮೊದಲಾದುವು ಎಲ್ಲರನ್ನೂ ಮುಟ್ಟುವಂಥವು. ಈಗ ಕಂಪ್ಯೂಟರ್ ಅನಕ್ಷರಸ್ಥರು ಎನ್ನುತ್ತೇವಲ್ಲ.

**ಸುರೇಖಾ:** ಹಡಪದ್ ಮಾಸ್ತರ್ ನಮಗೆ ಕಲಿಸಿದ್ದೇ ಮುಂದೆ ಹೋಗಿ, ಮುಂದೆ ಹೋಗಿ ಎಂದು. ಆ ಕಾಲ ಅವರು ಎಷ್ಟು ಪ್ರಯೋಗ ಮಾಡಿದ್ದರು! ನನಗಂತೂ ಅವರ ಕೆನ್ ಸ್ಕೂಲೇ ಒಂದು ದೊಡ್ಡ ಶಿಲ್ಪ. ಎಲ ದೃಷ್ಟಿಯಿಂದ, ಅವರ ಆಶಯ, ಆಶೀರ್ವಾದ ಇಂದಿಗೂ ನಮಗೆ ಸ್ಫೂರ್ತಿಯಾಗಿ ಉಳಿದಿದೆ.



ಸುರೇಖಾ ಅವರ ಕಲಾಕೃತಿ

ಸಂವಾದ, ಸಂಯೋಜನೆ : **ಪ್ರೊ॥ ಎಂ. ಎಚ್. ಕೃಷ್ಣಯ್ಯ**
ನಂ. ೧೮೩, ರಾಜಾಜಿನಗರ ಫಸ್ಟ್ 'ಎನ್' ಬ್ಲಾಕ್, ಬೆಂಗಳೂರು - ೫೬೦ ೦१೦

# ಅಭಿವ್ಯಕ್ತಿ ಸ್ವಾತಂತ್ರ್ಯ – ಓದುಗರ ಅಭಿಪ್ರಾಯಗಳು





## ಅಭಿವ್ಯಕ್ತಿ ಸ್ವಾತಂತ್ರ್ಯ

**ಸ್ವಾ**ತಂತ್ರ್ಯವು ಸ್ವಚ್ಛಂದವಾಗಬಾರದೆಂಬುದು ಒಪ್ಪಬೇಕಾದ್ದೆ. ಕೈಯಲ್ಲಿ ಕತ್ತಿ ಹಿಡಿಯುವ ಸ್ವಾತಂತ್ರ್ಯ ವಿರಬಹುದಾದರೂ ಇನ್ನೊಬ್ಬರ ಕತ್ತು ಕಡಿಯುವ ಉಚ್ಛ್ರಂಖಲತೆಗೆ ಬೇಕು ಕಡಿವಾಣ. ಇಲ್ಲವಾದರೆ ಡು ಸಂಸ್ಕೃತಿಯಲ್ಲಿ ಬಾಳಬೇಕಾದೀತು.

ಆದರೆ ಕಡಿವಾಣದ ಹೆಸರಲ್ಲಿ ಕೆಲವು ಸ್ವಾರ್ಥಿಗಳು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಟಕು ಮಾಡುವುದನ್ನು ಖಂಡಿಸಲೇಬೇಕು. ಇಂಥ 'ಕಡಿವಾಣ'ದ ಹಿಂದೆ ಟ್ಟಭದ್ರ ಹಿತಾಸಕ್ತಿಗಳ 'ಸ್ಥಾನ'ಕ್ಕೆ ಧಕ್ಕೆಯಾಗುವ ಹೆದರಿಕೆಯೇ ಕಾರಣ. ುಕ್ತಚರ್ಚೆಗೆ, ಅಭಿಪ್ರಾಯಕ್ಕೆ ಅವಕಾಶವಾಗದಂತೆ ಅಂತಹ ಕೆಲವರ ಹಿಂದೆ ುಕಪಶುಗಳ ಹಾಗೆ ಹಿಂಬಾಲಿಸುವುದು ಅವರಿಗೆ ಬೇಕಾಗಿದ್ದು, ನಮ್ಮನ್ನು ಅಧೀನ ನ್ನಾಗಿ ಮಾಡಿ, ತಮ್ಮ ಅತಾರ್ಕಿಕ ಹಾದಿಯಲ್ಲೇ ಎಳೆದೊಯ್ಯುವ ಹುನ್ನಾರ ವರದು. ತಮ್ಮನ್ನು ಹಿಂಬಾಲಿಸಬೇಕು, ತಾವು ಹೇಳಿದ್ದೇ ಸರಿ (ಧರ್ಮ), ನ್ಯವೆನಲದು ಮಿಥ್ಯ ಎಂಬ ವಾದ ಮಾಡುತ್ತಾ ನಮ್ಮ ವಿಚಾರಶಕ್ತಿಯನ್ನೇ ಹಾಳು ಾಡಿ, ಪ್ರಗತಿಪರ ಚಿಂತನೆಗಳಿಗೆ ಅಡ್ಡಗಾಲು ಹಾಕುತ್ತಲೇ ಬಂದಿರುವುದು ತಿಹಾಸಿಕ ಸತ್ಯ. ಕ್ರಿಸ್ತ, ಸಾಕ್ರಟೀಸ್, ಮಾರ್ಟಿನ್ ಲೂಥರ್, ಗಾಂಧಿ ಹೀಗೆಷ್ಟೋ ಂದಿ ಸ್ವಾರ್ಥಿಗಳಿಗೆ ಬಲಿಯಾದರು.

ಹೀಗೆ ಅಭಿವ್ಯಕ್ತ ಸ್ವಾತಂತ್ರ್ಯವನ್ನು ಹತ್ತಿಕ್ಕುತ್ತಲೇ ಬಂದಿರುವುದು ಖಂಡನೀಯ. ತಂತ್ರವಾಗಿ ವಿಚಾರ ಮಾಡುವ, ಅಭಿವ್ಯಕ್ತಿಸುವ, ಹಕ್ಕು ಎಲ್ಲರಿಗೂ ಇದೆ. ಅದನ್ನು ಮ್ಮ ಹಿಡಿತದಲ್ಲಿಟ್ಟುಕೊಂಡಿರುವ ಕೆಲವು ಮಂದಿ ನಾವು ನಿರ್ಭೀತರಾದರೆ, ಮಾಲೋಕದಿಂದ ಹೊರಬರುವ ಪ್ರಯತ್ನ ಮಾಡಿದರೆ, ತಮ್ಮ ಬುಡ ಲಾಗುವುದೆಂಬ ಭಯದಿಂದ ಬೊಬ್ಬೆಹಾಕುತ್ತಾರೆ. ಅದನ್ನೆಲ್ಲಾ ಮೆಟ್ಟಿ ನಿಲ್ಲುವ ನಃಸ್ಥೈರ್ಯ ಸ್ವಾಗತಾರ್ಹ.

ಕೆಲ ಸ್ವಾರ್ಥಿಗಳ ಬೆದರಿಕೆಗೆ ಮಣಿದು ಸತ್ಯವನ್ನು ಅಪಮಾನಗೊಳಿಸಬೇಡಿ.

ವಂದನೆಗಳು.

**ಎಚ್. ಜಿ. ಸೋಮಶೇಖರ ರಾವ್**
೮೦, ೧೧ನೇ ಮುಖ್ಯರಸ್ತೆ, ಶ್ರೀನಗರ, ಬೆಂಗಳೂರು - ೫೦

## ಅಭಿವ್ಯಕ್ತಿಯ ಇತಿ-ಮಿತಿ

'**ಅ**ಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಮಿತಿ ಇರುವುದು ಸಹಜ; ಇತರರ ಸ್ವಾತಂತ್ರ್ಯಕ್ಕೆ ಚ್ಯುತಿ ಬಾರದಂತೆ ಸ್ವಾತಂತ್ರ್ಯವನ್ನು ಮಿತಿಗೊಳಿಸುವುದು ಅವಶ್ಯಕ' ಎಂಬುದನ್ನು ಮನಗಂಡ ಮೇಲೆ ವೈವಿಧ್ಯಮಯ ವಿಚಾರ, ಶ್ರದ್ಧೆ, ಗುರಿಗಳನ್ನು ಹೊಂದಿರುವ ವಿಶಾಲ ದೇಶದಲ್ಲಿ ವಿಭಿನ್ನ ಗುಂಪುಗಳ ಅಸ್ತಿತ್ವವು ಅನಿವಾರ್ಯವಾಗಿರುವಾಗ 'ಅಭಿವ್ಯಕ್ತಿ ಸ್ವಾತಂತ್ರ್ಯ'ದ ಪರಿಕಲ್ಪನೆಯನ್ನು ಇದಮಿತ್ಥಂ ಎಂದು ಪರಿಭಾವಿಸುವ ಪರಿ ಎಂತು? ವಿಭಿನ್ನ ಗುಂಪುಗಳ ಹಿನ್ನೆಲೆಯಿಂದ ಹೊಮ್ಮಿದ ಕಲಾವಿದರಿಗೆ, ಸಂಶೋಧಕರಿಗೆ ಅವರವರದೇ ಆದ ನಿಶ್ಚಿತ ಉದ್ದೇಶ, ವಿಚಾರ, ಲಹರಿಗಳು ಇರುವುದು ನೈಸರ್ಗಿಕವಾಗಿರುವಾಗ ಅವರ ಅಭಿವ್ಯಕ್ತಿಗೆ ವಿರೋಧ, ಆಕ್ರೋಶಗಳೂ ಸಹ ಅನಿವಾರ್ಯವಾಗುವುವೇ! ತಾವು ಅಭಿವ್ಯಕ್ತಗೊಳಿಸಿದ್ದೇ ಪರಮ ಸತ್ಯ ಎಂಬ ಭ್ರಮೆಯೂ ಕೂಡ ನಿಸರ್ಗ ಸಹಜವಾದ ಸಂಗತಿಯಾಗಿದೆ. ಈ ಮಾತಿಗೆ ಒಂದು ನಿದರ್ಶನದ ನಿರೂಪಣೆ ಹದವಾದೀತು.

ಟಿಪ್ಪು ಸುಲ್ತಾನನ ಕುರಿತು ನೂರಾರು ಗ್ರಂಥಗಳು ಬಂದಿವೆ. ಇಷ್ಟೊಂದು ಚರಿತ್ರೆಗಳು ಈ ವ್ಯಕ್ತಿಯ ಬಗ್ಗೆ ಬಂದುದನ್ನು ನೋಡಿದಲ್ಲಿ ಆತನ ಚಾರಿತ್ರಿಕ ಹಿರಿಮೆಗೆ ತಕ್ಕ ಸಾಕ್ಷ್ಯ ಒದಗಿದಂತಾಗಿದೆ. ವಿಪರ್ಯಾಸವೆಂದರೆ ಫ್ರೆಂಚ್ ಚರಿತ್ರೆಕಾರರು ಆತನನ್ನು ವೈಭವೀಕರಿಸಿ ಬರೆದರು. ಆಂಗ್ಲ ಲೇಖಕರು ಅವನನ್ನು ಕೀಳುಗಾಣುವಂತೆ ತಮ್ಮ ಬರಹ ಸಾಮರ್ಥ್ಯವನ್ನು ದುಡಿಸಿಕೊಂಡರು. ಆಗಿನ ಕಾಲದಲ್ಲಿ ಭಾರತದ ಈ ಭಾಗದಲ್ಲಿ ಫ್ರೆಂಚರು ಮತ್ತು ಬ್ರಿಟಿಷರು ತಮ್ಮ ತಮ್ಮ ಅಧಿಕಾರ ಬಲವತ್ತರಗೊಳಿಸುವ ಎತ್ತುಗಡೆಯಲ್ಲಿದ್ದರು. ಈಗ ಅಂದರೆ ಎರಡು ಶತಮಾನಗಳ ನಂತರ ಆತನ ಜೀವನಕಾರ್ಯದ ಮೌಲ್ಯಮಾಪನ ಮಾಡುವ ಸಂಶೋಧಕರು ತಮ್ಮ ಹಿನ್ನೆಲೆ, ಉದ್ದೇಶಗಳಿಗೆ ಅನುಗುಣವಾಗಿ ಆತನ ಚರಿತ್ರೆ, ಚಿತ್ರ ನೀಡುವಾಗ ತಮಗೆ ಅನುಕೂಲವಾದ ಆಧಾರಗಳನ್ನು ಮಾತ್ರ ಉದ್ದನ ಪಟ್ಟಿಯಾಗಿ ನೀಡುತ್ತ ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪ್ರಯೋಗಿಸಿದಾಗ ಅಮಾಯಕ ಓದುಗರಿಗೆ ಸತ್ಯದರ್ಶನ ದಕ್ಕುವಂತಾಗುವುದೋ ಅಥವಾ ಆತನ ಭಾವನೆಗಳಿಗೆ ಆಘಾತ ಉಂಟಾಗುವುದೋ? ನೂರಕ್ಕೆ ನೂರರಷ್ಟು ಸಂದರ್ಭ ದಲ್ಲಿ ಚರಿತ್ರೆ ಸಂಶೋಧನೆ ಮುಂತಾದವುಗಳು 'ಸತ್ಯವನ್ನು ಮರೆಮಾಚುವುದು



ಯಾವುದೋ ಭಾವನೆಗಳಿಗೆ ಆಘಾತವಾಗಿದೆ ಎಂಬ ಕುಂಟು ನೆಪ ಒಡ್ಡಿ ಕಲಾವಿದರ, ಸಂಶೋಧಕರ, ಸಾಹಿತಿಗಳ ಹಾಗೂ ಇತಿಹಾಸಕಾರರ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವ ಪ್ರಕ್ರಿಯೆಯನ್ನು ಕೆಲವು ಸಾರ್ವಜನಿಕ ಸಂಸ್ಥೆಗಳು ಮತ್ತು ಸರ್ಕಾರ ಈಚಿನ ವರ್ಷಗಳಲ್ಲಿ ಅಧಿಕಗೊಳಿಸುತ್ತಾ ಬಂದಿವೆ. ಇದರ ಬಗ್ಗೆ ತಮ್ಮ ಅನಿಸಿಕೆಗಳನ್ನು ವ್ಯಕ್ತಗೊಳಿಸಬೇಕೆಂದು 'ಹೊಸತು' ಓದುಗರಲ್ಲಿ ವಿನಂತಿ ಸಲ್ಲಿಸಲಾಗಿತ್ತು. ಅನೇಕ ಓದುಗರು ಇದಕ್ಕೆ ಸ್ಪಂದಿಸಿದ್ದಾರೆ. ಅವರಿಗೆಲ್ಲಾ ನಾವು ಕೃತಜ್ಞರಾಗಿದ್ದೇವೆ. ಸ್ಥಳಾಭಾವದಿಂದಾಗಿ ಆಯ್ದ ಕೆಲವು ಬರಹಗಳನ್ನು ಮಾತ್ರ ಇಲ್ಲಿ ಪ್ರಕಟಿಸುತ್ತಿದ್ದೇವೆ. ಅಪ್ರಕಟಿತ ಬರಹಗಳ ಲೇಖಕರು ಅನ್ಯಥಾ ಭಾವಿಸಬಾರದೆಂದು ಕೋರುತ್ತೇವೆ.

– ಸಂಪಾದಕ



– ಸುಳ್ಳನ್ನು ಸೂಚಿಸಿದಂತೆ' ಎಂಬ ನ್ಯಾಯಕ್ಕೆ ಪಕ್ಕಾಗುವಂತೆಯೇ ಇರುತ್ತವೆ.

'ಹಿರಣ್ಮಯೇನ ಪಾತ್ರೇಣ' ಸತ್ಯವು ಆವೃತ್ತಗೊಂಡಂತೇ ಇರುತ್ತದೆ. ಅದಕ್ಕಾಗಿಯೇ ಅಸಹಾಯಕರಾದ ಋಷಿಗಳು ಆ 'ಪೂಷನ್'ನನ್ನು ಆ ಆವರಣವನ್ನು ನಿವಾರಣೆಗೊಳಿಸಯ್ಯಾ ಎಂದು ಗೋಳುಗರೆಯುತ್ತಲೇ ಇದ್ದರಲ್ಲವೇ? ಪ್ರತಿಯೊಂದು ಚರ್ಚೆಯಲ್ಲಿ ವಾದಿ - ಪ್ರತಿವಾದಿಗಳು ನಿಜವನ್ನು ಮರೆಮಾಚುತ್ತಾ ಇದ್ದರೆ, ಅಂದರೆ ತಮ್ಮ 'ಅಭಿವ್ಯಕ್ತಿ'ಗೆ ಅಡ್ಡಿಯಾಗುವ ಸತ್ಯವನ್ನು ಮರೆಮಾಚುತ್ತ; ತಮ್ಮ ಅಭಿವ್ಯಕ್ತಿಗೆ ಶಕ್ತಿ ನೀಡುವ ಎಂಥ ಅನೃತವನ್ನು ಸೂಚ್ಯವಾಗಿಸಿ ತಮ್ಮ ಬೇಳೆ ಬೇಯಿಸಿಕೊಳ್ಳುವುದನ್ನು ಸರ್ವತ್ರ ಕಾಣುತ್ತೇವೆ. ಅದು ಹಾಗೇ ಇರೋದು; ತೋರಿಕೆಯಲ್ಲಿ ಮಾತ್ರ 'ಸತ್ಯಮೇವ ಜಯತೇ'ಯ ಬಾವುಟದ ಆವುಟ ಮರೆಯೋದು. ಅಂದ ಬಳಿಕ ಈ ಬಾಬತ್ತಿನಲ್ಲಿ ತಿಕ್ಕಾಟವೂ ಸಹಜವೇ. 'ವಾದೇ ವಾದೇ ಜಾಯತೇ ತತ್ತ್ವಬೋಧಃ' ಎಂಬುದು ನಿರೀಕ್ಷಿತ, ಅಪೇಕ್ಷಿತ ಉದ್ದೇಶ ವಿದ್ದರೂ 'ವಾದೇ ವಾದೇ ಜಾಯತೇ ಕಂಠಶೋಷಃ' ಎಂಬುದೇ ವಾಸ್ತವಾಂಶ.

ಸರಿ; ಅಂಥ ನಗ್ನಸತ್ಯವು ಸಹನೀಯವೂ ಅಲ್ಲ. ಅದಕ್ಕಾಗಿಯೇ ಅಲಂಕರಣ, ಪ್ರಸಾಧನಗಳ ಆವರಣ ಭೂಷಣ ಎನಿಸಿದೆ. ಈಗ ಪಿತೃತ್ವದ ನಿದರ್ಶನಕ್ಕೆ ಹೊರಳುವಾ. ಪಿತೃತ್ವವು ಎಂದಿಗೂ ಅಭಿಪ್ರಾಯ ಎನಿಸಿದೆ; ''ತಾಯಿ ಎಂಬುವಳು ಖಚಿತ, ತಂದೆ ಎನ್ನುವನು ಸಾಧ್ಯತೆ'' ಎಂಬ ಮಾತನ್ನು ಗಮನಿಸಿ. ಬಸವಣ್ಣ, ಶಿವಾಜಿ, ಅಂಬೇಡ್ಕರ್ ಇತ್ಯಾದಿ ನಮ್ಮ ಹಿರಿಜೀವಿಗಳ ಬಗ್ಗೆ ಚಿಂತಿಸುವುದಕ್ಕಿಂತ ಮೊದಲು ನಮ್ಮ ಪುರಾಣ, ಪುಣ್ಯಕಥೆಗಳ ಕಡೆಗೆ ಹಣಿಕಿ ಹಾಕುವಾ: ಗಣಪತಿಯ ಹುಟ್ಟಿನಲಿ ಶಿವನಿಗೆ ಪಾತ್ರವಿತ್ತೆ? ಪಾಂಡು, ಧೃತರಾಷ್ಟ್ರ, ವಿದುರ, ಪಾಂಡವರು, ಅಷ್ಟೇ ಏಕೆ ಶ್ರೀರಾಮ, ಲಕ್ಷ್ಮಣಾದಿಗಳ ಜನನಕ್ಕಾಗಿ ಪುತ್ರಕಾಮೇಷ್ಟಿಯಾಗ, ಪಾಯಸವನ್ನು ಯಜ್ಞದೇವತೆಯಿಂದ ಗ್ರಹಿಸಿದ್ದು...

ಶ್ರದ್ಧೆಯ ವಿಷಯದ ಬಗ್ಗೆ ಕೈ ಹಾಕುವಾಗ, ಮೂಗು ತೂರಿಸುವಾಗ ಸಂಭಾವ್ಯ ಸತ್ಯ ಹೀಗಿರಬಹುದು, ಹಾಗಿರಬಹುದು ಎಂದು ಜಡಿದು ಹೇಳುವುದು ಅಭಿವ್ಯಕ್ತಿ ಸ್ವಾತಂತ್ರ್ಯದತ್ತವಾದ ಈಟಿಯಾದರೆ ಅದು ಬಹುಸಂಖ್ಯಾಕ ಶ್ರದ್ಧಾಳುಗಳ ಕಣ್ಣ, ಹೃದಯಕ್ಕೆ ಘಾತಮಾಡುವ, ಆಘಾತ ಒಡ್ಡುವ ಧಾಟಿಯಲ್ಲಿಯೇ ಸಾಗುವುದು. ಇಂಥ 'ಸತ್ಯವನ್ನು ಮರೆಮಾಚುವುದು – ಸುಳ್ಳನ್ನು ಸೂಚಿಸುವುದು' ಎಂಬ ವಿಧಾನದಿಂದ. ವಿನಾಕಾರಣ ಸಮಾಜ ಜೀವನದಲ್ಲಿ ಅಲ್ಲೋಲಕಲ್ಲೋಲ ಉಂಟು ಮಾಡುವುದು ಹಿತಾವಹ ಎನಿಸೀತೆ? ತಮ್ಮ ತಥಾಕಥಿತ ಕಲಾಪ್ರೌಢಿಮೆಯನ್ನು ಮೆರೆಸಲೆಂದು ಅನ್ಯರ ಅಭಿಮಾನಿ ದೇವ ದೇವತೆಗಳನ್ನು ಬೆತ್ತಲೆಗೊಳಿಸುವುದು ಅಭಿವ್ಯಕ್ತಿ ಸ್ವಾತಂತ್ರ್ಯದ ಕಕ್ಷೆಯಲ್ಲಿ ಬಂದೀತೆ? ಇಂಥ ತಿಕ್ಕಾಟ ನಮ್ಮಲ್ಲಿಯೇ ಉಂಟು ಎಂದೇನಲ್ಲ. ಐರೋಪ್ಯ ದೇಶಗಳಲ್ಲಿ, 'ವಿಸುವು ಚರ್ಚೆಯ ವಿಷಯವಲ್ಲ, ಶ್ರದ್ಧೆಯ ವಿಷಯ' ಎಂಬ ನಿಷ್ಕರ್ಷೆಯೊಂದಿಗೆ ಮಂಗಳ ಹಾಡಲಾಗಿಲ್ಲವೆ? ಅಭಿವ್ಯಕ್ತಿ ಸ್ವಾತಂತ್ರ್ಯಕ್ಕಿಂತಲೂ ವಿಭಿನ್ನ ಸ್ತರದ ಸಮಾಜಗಳ ಸಂಘವಾಗಿರುವ ರಾಷ್ಟ್ರದಲ್ಲಿ ವಿನಾಕಾರಣ ಅಶಾಂತಿಗೆ ಆಸ್ಪದ ನೀಡದಂತೆ ಪ್ರಾಜ್ಞರು, ಕಲಾವಿದರು ತಾವೇ ಎಚ್ಚರವಹಿಸುವುದು ಯುಕ್ತ. ಮತ್ತೆ ಪ್ರಸಕ್ತ ನಡೆಯುತ್ತಿರುವ ಸಂಗತಿಗಳ ಸತ್ಯಾಸತ್ಯತೆಗಳೇ ಸಂದಿಗ್ಧವಾಗಿರುವಾಗ (ಸಂದಿಗ್ಧ ಗೊಳಿಸುತ್ತಿರುವಾಗ) ಹಿಂದೆ ಎಂದೋ ಆದುವುಗಳ ಸತ್ಯತೆ ಸಂಭಾವ್ಯತೆಗಳ ನಿರೂಪಣೆಯು ಪ್ರತಿರೋಧಕ್ಕೆ ಕಾರಣವಾಗುವುದೂ ಸತ್ಯವೇ!

ಅನಂತ ಕಲ್ಲೋಳ
'ರಮಾರಮಣ', ೫೦೬, ಕುಲಕರ್ಣಿ ಬೀದಿ, ಬೆಳಗಾವಿ - ೫೯೦ ೦೦೧

## ಅವರಿಗೆ ಪ್ರತಿ ವಿಕಾಸದ ಮೆಟ್ಟಿಲೂ ಆಘಾತವೇ!

ಅನಾದಿಕಾಲದಿಂದಲೂ 'ಹೊಸತು' ಎಂಬುದಕ್ಕೆ ಬಹುಸಂಖ್ಯ [illegible] ಸಹನೆ, ವಿರೋಧ, ಅಸಮ್ಮತಿ ಇದ್ದೇ ಇದೆ. ಭೂಮಿ ಗುಂಡಗಿದ್ದರೂ, ''ಹಾಗಿದೆ [illegible]


With Best Compliments From



RASASRI DEVELOPERS LTD

No. 25, 1st Floor, Utsav
I. T. Layout, M. S. R. Nagar
BANGALORE - 560 054

ಮಾನ್ಯರ ಕೆಂಗಣ್ಣಿಗೆ ಗುರಿಯಾದ. ಅಪ್ಪಟ, ಆದರೆ ಕಹಿಸತ್ಯಗಳನ್ನೇ ಬದುಕಿದ ಕ್ರೇಟೀಸ್ ಹೊಟ್ಟೆ ತುಂಬ ಹಾಲಾಹಲ ಕುಡಿಯಬೇಕಾಯ್ತು. ಭವಿಷ್ಯದ ನುಕುಲಕ್ಕೆ ಒಳಿತನ್ನೇ ಆಶಿಸಿದ, ಬಯಸಿದ ಮಹಾತ್ಮರ ಅಂತ್ಯಗಳು ಣಾಜನಕ. ರಾಮನನ್ನೇ ನಂಬುವವರು, ರಾಮನನ್ನು ಎದೆಯಲ್ಲಿಟ್ಟುಕೊಂಡವನ ನೆಗೆ ಗುಂಡಿಕ್ಕುತ್ತಾರೆ. ಜಾತಿ, ಮತ ಧಿಕ್ಕರಿಸಿ, ಇಡೀ ಸಮಾಜವನ್ನೇ ಸ್ಫಟಿಕ ಗಿಸುವ ಮಹೋನ್ನತ ಕನಸು ಕಂಡ, ಜಗಜ್ಯೋತಿ ಅಣ್ಣನ ಅಂತ್ಯ ಗಾಯ್ತೋ! ಇಂದಿನ ಸಕಲ ಸೌಕರ್ಯಗಳನ್ನು, ಅಂದು ತಮ್ಮ ಇಡೀ ಬದುಕನ್ನೇ ಒಡಿಪಾಗಿಟ್ಟು ಸಂಶೋಧಿಸಿದ ವಿಜ್ಞಾನಿಗಳು ಮಾತ್ರ ಬಡತನ, ರೋಗ, ತಾತ್ಸಾರ, ರ್ಲಕ್ಷ್ಯಗಳಿಂದ ಜರ್ಜರಿತರಾಗಿದ್ದವರು. ಯಾವೊಬ್ಬ ಆದರ್ಶ, ಉದಾತ್ತ ಕ್ತಿಯನ್ನೂ ಈ ಜಗತ್ತು ಸರಿಯಾಗಿ, ಯುಕ್ತವಾಗಿ ನಡೆಸಿಕೊಂಡಿಲ್ಲ. ಅಥವಾ ಗೆ ನಡೆಸಿಕೊಂಡ ಉದಾಹರಣೆಗಳೂ ತೀರ ಕಡಿಮೆಯೆ. ಹಾಗೆ ಶಿಕ್ಷಿಸಿದವರೇ, ರ್ಲಕ್ಷಿತ ಸಂಶೋಧನೆಗಳನ್ನು ಮುಂದೊಂದು ದಿನ ಎದೆಗೊತ್ತಿಕೊಂಡು, ಭಿಮಾನಪಡುವುದರೊಂದಿಗೆ ಅದರ ಮೇಲೆ ಅವಲಂಬಿತರಾಗುವುದು ಉಂಟು. ೈಲು, ವಿದ್ಯುತ್, ಗ್ಯಾಸ್... ಇತ್ಯಾದಿಗಳನ್ನು ಮೈಲಿಗೆಯಂತೆ ಕಂಡವರು ಈಗ...?) ದರೆ ಸರ್ಕಾರ, ನ್ಯಾಯಾಲಯ ಕೂಡ, ಮೂಢನಂಬಿಕೆಯೊಂದಿಗೆ ತಪ್ಪು ಹೆಜ್ಜೆ ಕುವುದು ಮಾತ್ರ ಖೇದನೀಯ.

ಇಂದು ನಾವು ಜೀವಿಸುತ್ತಿರುವ ನಾಗರಿಕತೆಯ ಪ್ರತಿ ಉತ್ಕರ್ಷದ ಕಠಿಣ ಟ್ಟಲುಗಳಿಗೂ ಇಂಥ ಉದಾತ್ತ ವ್ಯಕ್ತಿಗಳ ನೋವು, ಕಣ್ಣೀರು ಮೆತ್ತಿಕೊಂಡಿದೆ. ಂಥ ಕಣ್ಣೀರ ಹಿಂದೆ ಎದೆ ಬಿರಿವ ಆಘಾತಗಳೂ ಅಸಂಖ್ಯ. ಆದರೆ ಜಾತಿ, ರ್ಣ, ಮತಧರ್ಮಗಳ ಧೃತರಾಷ್ಟ್ರಶಕ್ತಿಗಳು ಅದೆಲ್ಲ ತಮಗಾದ 'ಆಘಾತ'ವೆಂದೇ ಲುಬುತ್ತಿರುತ್ತವೆ. ಅದು ನಿಜಕ್ಕೂ ಆಘಾತವಲ್ಲ... ಒಪ್ಪಲೊಲ್ಲದ ಸತ್ಯಗಳು; ಪ್ಪಲೇಬಾರದೆಂದುಕೊಳ್ಳುವ ಛಲದ ಮುಂದಿರುವ ನಿಷ್ಪಾಪಿ ಸತ್ಯಗಳು. ಅವರಿಗೆ ಬಗ್ಗೆ ಚರ್ಚೆ ಸಹ ಅಪಥ್ಯವೆ. ಜೊತೆಗೆ ಅಳುಕು, ಅಧೈರ್ಯ... 'ಅಭಿವ್ಯಕ್ತಿ ಯುಕ್ತತೆ' ಅವರಿಗೆ ಹಗಲು ದೆವ್ವ! ಹಾಗೆಂದೇ ಅದಕ್ಕೆ ಅವರು ಕೊಟ್ಟ ಶಿಷ್ಟ ಹಾಗೂ ರ್ಯಾದೆ ಮುಸುಕಿನ ಶಬ್ದ: 'ಆಘಾತ'. ಅದನ್ನೇ ಎಲ್ಲೆಲ್ಲೂ ಝಳಪಿಸಿ, ಸ್ವಯಂ ೋಷಿತ ಸಂರಕ್ಷಕರೆಂದು ಬಿಂಬಿಸಿಕೊಳ್ಳುತ್ತಾರೆ. ಅದರ ಹಿಂದೆ ನಾನಾ ಬಣ್ಣದ ತಾಸಕ್ತಿಗಳೂ ಉಂಟು.

ಇಂಥವರಿಗೆಲ್ಲ ಮಾನವ ಇತಿಹಾಸ ಗೊತ್ತಿಲ್ಲ. ವಿಕಾಸವಾದ ಇರಲಿ, ಮಾನವನ ಹಜ ಮನೋವಿಕಾಸದ ಪರಿಕಲ್ಪನೆ ಸಹ ಇಲ್ಲ. ತಾವು ನಿಂತಿರುವ ಭೂಮಿ ಚಪ್ಪಟೆ ಂದುಕೊಳ್ಳುತ್ತಲೇ ''ಭೂಮಿ ದುಂಡಗಿದೆ'' ಎಂದವರ ಮೇಲೆ ಹಾಯ್ದು, ನೂನು, ಖಡ್ಗ, ನಿಷೇಧ... ಇತ್ಯಾದಿಗಳನ್ನು ಝಳಪಿಸುತ್ತಾರೆ.

ಯಾವುದೇ ಹೊಸ ವಿಷಯಗಳನ್ನು ಅಭಿವ್ಯಕ್ತಿಸುವ ಸಂದರ್ಭದಲ್ಲಿ ಆಯಾಯ ಲದಲ್ಲೂ ಕುತ್ತಿಗೆ ಹಿಸುಕುವ, ಉಸಿರುಕಟ್ಟಿಸುವ ಕೃತ್ಯ ನಡೆಯುತ್ತಲೇ ಬಂದಿದೆ. ದರೆ ಹೇಗೋ ಏನೋ ಅವರು ಎಷ್ಟೇ ಅದುಮಿ ಹಿಡಿದರೂ ಕೆಲವಾದರೂ ಸತ್ಯ ೇಪಿತ ಶಬ್ದಗಳು ಗಂಟಲು 'ಗೊರಗೊರ'ದೊಂದಿಗೆ ಈಚೆಗೆ ದಾಟಿ ಂದೇಬಿಟ್ಟವೆ! ಅದೇ ಮನುಕುಲದ ಭಾಗ್ಯ. (ಎಷ್ಟೇ ಅನಾದರ, ವಿರೋಧ, ಷೇಧ, ಗಡಿಪಾರಾದ ನಡುವೆಯೂ ನಾಸ್ತಿಕತೆ, ಬೌದ್ಧಚಿಂತನೆ, ಲೋಕಾಯತ... ತ್ಯಾದಿ ಸಜೀವ ಹಾಗೂ ಸಬಲವಾಗಿಯೇ ಉಳಿದಿವೆ ಎಂಬುದು ಟ್ಟಭದ್ರರಿಗೊಂದು ಪಾಠವೇ.)

ಇಂಥದು ಎಲ್ಲೆಲ್ಲೂ ಇರುವಾಗ ಇನ್ನು ದೇವರು, ಧರ್ಮ ಎಂದರೆ ಬಟ್ಟೆ ಬಿಚ್ಚಿ ಣಿದಾಡುವವರ ದೇಶದಲ್ಲಿ ಹೇಗಿರಬೇಡ! ಅವರು ದೇಶವನ್ನು, ಮಾಜವನ್ನು, ನಮ್ಮಗಳ ಮನಃಸ್ಥಿತಿಯನ್ನು, ಮಧ್ಯಯುಗೀನ ಸ್ಥಿತಿಗೆ ಒಯ್ಯುವ ಸ್ನಾರದಲ್ಲೇ ತೊಡಗುತ್ತಾರೆ. ಅದರಲ್ಲಿ ಕೆಲವರು ಎಲ್ಲ ತಿಳಿದ ಧೂರ್ತರು, ಇನ್ನು ಲವರು ಮುಗ್ಧರು, ಹುಂಬರು ಹಾಗೇ ನಂಬಿಕೊಂಡಿರುತ್ತಾರೆ. ಇಬ್ಬರೂ ುಕರಕ್ಕೆ ಅರ್ಹರೇ. ಆದರೆ ಅವರ ನೀಚ ಕೃತ್ಯಗಳು ಎಂದಿಗೂ ಕ್ಷಮಾರ್ಹ ಲ್ಲವೆಂಬುದೂ ಅಷ್ಟೇ ನಿಜ.

ಆದರೆ ದೇಶ ಮುಂದುವರೆದಂತೆ ಈ ದುಷ್ಪತನ, ಧಾರ್ಷ್ಟ್ಯತೆ... ಮತ್ತಷ್ಟು ಬಲಗೊಳ್ಳುತ್ತಿರುವುದು ಆತಂಕವಷ್ಟೇ ಅಲ್ಲ: ಚಿಂತೆಯ ವಿಷಯ... ಈ ಆತಂಕವನ್ನು ತೊಡೆವ ಕ್ರಮ ನಿಷೇಧಕ್ಕೊಳಪಟ್ಟೀತು! ಯಾಕೆಂದರೆ ಅವರಿಗೆ ಈ 'ಕ್ರಮ' ಕೂಡ ಆಘಾತವೇ ಆಗಿರುತ್ತದೆ!!

ರಾಮಚಂದ್ರ ಎಸ್. ಕುಲಕರ್ಣಿ
ಎಫ್ ೬, ಲಕ್ಷ್ಮೀ ಅಪಾರ್ಟ್‌ಮೆಂಟ್, ಸಾರಸ್ವತಪುರ, ಧಾರವಾಡ-೨

## ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲಿನ ದಾಳಿ - ಒಂದು ಅನಿಸಿಕೆ

ವ್ಯಕ್ತಿಯ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ವಿನಾಕಾರಣ ಅಡ್ಡಗೋಡೆ ಕಟ್ಟಿ ಅದರಲ್ಲೇ ವಿಲಕ್ಷಣ ಖುಷಿಪಟ್ಟುಕೊಳ್ಳುವ ಮನುಷ್ಯನ ಪ್ರವೃತ್ತಿ ಇಂದು ನಿನ್ನೆ ಹುಟ್ಟಿಕೊಂಡದ್ದಲ್ಲ. ಬಹಳ ಹಿಂದೆಯೇ, ಅಧಿಕಾರವನ್ನು ಕೈಯಲ್ಲಿಟ್ಟುಕೊಂಡ ಒಂದು ವರ್ಗವು, ತನ್ನ ನಂಬಿಕೆಗಳು ಸುಳ್ಳುಗಳ ಮೇಲೆ ನಿಂತಿವೆಯೆಂಬುದನ್ನು ಅರಿಯದೆ, ಅವುಗಳ ವಿರುದ್ಧವಾಗಿ ಮಾತನಾಡುವವರು ಯಾರೇ ಬಂದರೂ, ಅವರನ್ನು ಹಾಗೆಯೇ ಬಿಡುವುದು ತನ್ನ ಪ್ರತಿಷ್ಠೆಗೆ ಕುಂದು ಎಂದು ತಿಳಿದು ಅವರ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಸಿದುಕೊಂಡದ್ದಿದೆ. ಜಗತ್ತಿನಲ್ಲಿ ಆಗಿಹೋದ ಅನೇಕ ಮಹಾನ್ ವ್ಯಕ್ತಿಗಳು ಇದನ್ನು ಒಂದಿಲ್ಲೊಂದು ರೀತಿಯಲ್ಲಿ ಎದುರಿಸಿದವರೇ ಆಗಿದ್ದಾರೆ. ಸಾಕ್ರಟಿಸ್, ಕೊಪರ್ನಿಕಸ್, ಯೇಸುಕ್ರಿಸ್ತ, ಗೆಲಿಲಿಯೋ ಮೊದಲಾದ ಸಾವಿರಾರು ಮಂದಿ ತಮಗೆ ಸರಿ ಕಂಡ ಸತ್ಯಗಳನ್ನು ಹೇಳಿದುದಕ್ಕಾಗಿ ಅತಿಘೋರ ಶಿಕ್ಷೆಗೆ ಗುರಿಯಾದರು. ಪ್ರಸ್ತುತ ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಪ್ರತಿಭಟನೆಯೆನ್ನುವುದು ನ್ಯಾಯಯುತ ದಾರಿಯನ್ನು ಬಿಟ್ಟು ದೊಂಬಿ, ಗಲಾಟೆ ಹಾಗೂ ವಿಧ್ವಂಸಕ ಕೃತ್ಯಗಳ ಉಗ್ರಸ್ವರೂಪವನ್ನು ಪಡೆದು ಆ ಮೂಲಕ, ಮಾತನಾಡುವವರ ಸ್ವಾತಂತ್ರ್ಯಹರಣ ಮಾಡುವ ಕುತಂತ್ರವನ್ನು ನಡೆಸುತ್ತಿರುವುದು ಶೋಚನೀಯ.

ಜಾತ್ಯತೀತ ರಾಷ್ಟ್ರವೆಂದು ಹೆಸರು ಪಡೆದಿರುವ ನಮ್ಮ ದೇಶದಲ್ಲಿ ಇಂದು ಜಾತಿ, ಧರ್ಮಗಳ ಮೇಲೆ ನಿಂತಿರುವ ರಾಜಕೀಯ ಪಕ್ಷಗಳ ನಡುವಣ ದ್ವೇಷ-ತಿಕ್ಕಾಟಗಳಿಂದಾಗಿ ಕ್ಷುಲ್ಲಕ ಕಾರಣಗಳಿಗೂ ಕೋಮುದಳ್ಳುರಿ ಭುಗಿಲೇಳುವ ಪರಿಸ್ಥಿತಿ ನಿರ್ಮಾಣವಾಗಿದೆ. ಇವತ್ತು ಅಭಿವ್ಯಕ್ತಿ ಸ್ವಾತಂತ್ರ್ಯದ ಪ್ರಶ್ನೆ ಏಳಲು ಕಾರಣ ಸನಾತನ ಧರ್ಮ ಮತ್ತು ಸಂಸ್ಕೃತಿಗಳ ಬಗ್ಗೆ ಮೂಲಭೂತವಾದಿಗಳು ಬೆಳೆಸಿಕೊಂಡಂತಹ ತಪ್ಪು ಕಲ್ಪನೆ. ತಮ್ಮ ಧರ್ಮ ಮತ್ತು ಸಂಸ್ಕೃತಿಗಳೇ ಶ್ರೇಷ್ಠ ಮತ್ತು ಇತರರದ್ದು ನಿಕೃಷ್ಟವೆಂದು ಸಾರುವ ಇವರು ತಮ್ಮ ಸಂಸ್ಕೃತಿಯ ಹಿನ್ನೆಲೆಯನ್ನು ತಿಳಿದುಕೊಳ್ಳದೆ, ಧಾರ್ಮಿಕ ಗ್ರಂಥಗಳನ್ನು ಸರಿಯಾಗಿ ಓದಿಕೊಳ್ಳದೆ, ಅವುಗಳ ಬಗ್ಗೆ ತಾವು ಗೌರವ ಮತ್ತು ಆರಾಧನಾ ಭಾವಗಳನ್ನಿಟ್ಟುಕೊಂಡಿದ್ದೇವೆಂದು ಹೊರನೋಟಕ್ಕೆ ತೋರಿಸಿಕೊಳ್ಳುತ್ತಾರೆ. ಸಂಸ್ಕೃತಿ-ಸಂಪ್ರದಾಯಗಳಲ್ಲಿ ಹೇಳಿದ ವಿಚಾರಗಳನ್ನು ಕಣ್ಣುಮುಚ್ಚಿ ನಂಬಲು ಸಿದ್ಧರಿಲ್ಲದ ಬುದ್ಧಿಜೀವಿಗಳನ್ನು ಅವರು ಸದಾ ಸಂಶಯದ ದೃಷ್ಟಿಯಿಂದಲೇ ನೋಡುತ್ತಾರೆ. ವಾಸ್ತವದಲ್ಲಿ ಎಲ್ಲವೂ ಮನುಷ್ಯ ನಿರ್ಮಿತವಾದುದರಿಂದ ಇತಿಹಾಸ - ಸಂಸ್ಕೃತಿಗಳು ಬೆಳೆದು ಬಂದ ಬಗೆ, ಧಾರ್ಮಿಕ ಗ್ರಂಥಗಳಲ್ಲಿ ಹೇಳಿದಂತಹ ವಿಚಾರಗಳ ಬಗ್ಗೆ ಸತತವಾದ ಸಂಶೋಧನೆಗಳನ್ನು ನಡೆಸಿ, ಸತ್ಯದ ಆವಿಷ್ಕಾರ ಮಾಡುವ ವೈಜ್ಞಾನಿಕ ದೃಷ್ಟಿಕೋನ ಬುದ್ಧಿಜೀವಿಗಳದ್ದು. ಆದರೆ ತಾವು ಸಂಶೋಧಿಸಿದ ಸತ್ಯಗಳನ್ನು ಅವರು ನೇರವಾಗಿ ಪ್ರಕಟಿಸಿದಾಗ ಪೂರ್ವಗ್ರಹಪೀಡಿತ ಮೂಲಭೂತವಾದಿಗಳಿಗೆ ಅದು 'ಆಘಾತ'ವಾಗಿ ಪರಿಣಮಿಸುತ್ತದೆ. ಸಲ್ಮಾನ್ ರಶ್ದಿ, ತಸ್ಲೀಮಾ ನಸ್ರೀನ್ ಅವರ ಕೃತಿಗಳು, ಡಾ ವಿಂಚಿ ಕೋಡ್ ಮೊದಲಾದವುಗಳಿಗೆ ಮುಟ್ಟುಗೋಲು ಹಾಕುವ ಪ್ರಸಂಗ ಬಂದದ್ದು ಅವರು ತಮ್ಮ ಧಾರ್ಮಿಕ ಗ್ರಂಥಗಳನ್ನು ಅವಹೇಳನ ಮಾಡಿದರು ಎಂಬ ಕಾರಣದಿಂದ. ಪೋಲಂಕಿ ರಾಮಮೂರ್ತಿಯವರು ತಮ್ಮ 'ಸೀತಾಯಣ'ದಲ್ಲಿ ಸೀತೆ ಮತ್ತು ಲಕ್ಷ್ಮಣರ ಸಂಬಂಧಕ್ಕೆ ಹೊಸ ಅರ್ಥವನ್ನು ನೀಡಲೆತ್ನಿಸಿದಾಗ, ಬಂಜಗೆರೆ ಜಯಪ್ರಕಾಶರು ತಮ್ಮ 'ಆನುದೇವಾ ಹೊರಗಣವನು...' ಎಂಬ ಕೃತಿಯಲ್ಲಿ ಬಸವಣ್ಣನ ಹುಟ್ಟಿನ ಬಗ್ಗೆ ಹೊಸ ಸತ್ಯಗಳನ್ನು ಅನ್ವೇಷಿಸಿ ಹೊರಟಾಗ ಮೂಲಭೂತವಾದಿಗಳು ಆ ಕೃತಿಗಳನ್ನು ಮುಟ್ಟುಗೋಲುಹಾಕಬೇಕೆಂದು ಹಾರಾಡಿದ್ದು ಇದೇ ಸಂಕುಚಿತ ಮನೋಭಾವ ಮತ್ತು ಸಂಶಯ ಪ್ರವೃತ್ತಿಗಳಿಂದ. ಇದಕ್ಕೆ ರಾಜಕೀಯ ಬಣ್ಣ ಬಂದರಂತೂ

ಆವರಿಗಾಗುವ 'ನೋವು' ಮತ್ತು 'ಆಘಾತ'ಗಳು ಬೆಂಕಿಯ ರೂಪತಾಳಿ ಜನರ ಜೀವಗಳನ್ನೇ ಕಬಳಿಸಲೂ ಹೇಸುವುದಿಲ್ಲ. ಧರ್ಮ-ಸಂಸ್ಕೃತಿಗಳ ರಕ್ಷಣೆಯ ಸೋಗು ಹಾಕಿ, ಅದರ ಹೆಸರಿನಲ್ಲಿ ವಿಧ್ವಂಸಕ ಕೃತ್ಯಗಳನ್ನು ಮಾಡಿ ಅದು ಆಡಳಿತ ಪಕ್ಷದ ದೌರ್ಬಲ್ಯವೆಂದು ಸಾಧಿಸಿ, ಮುಗ್ಧಜನರನ್ನು ಮರುಳುಗೊಳಿಸಿ, ಮುಂದಿನ ಬಾರಿ ಚುನಾವಣೆಯಲ್ಲಿ ಗೆಲ್ಲುವ ಹುನ್ನಾರವೂ ಇಲ್ಲಿರುತ್ತದೆ. ಒಂದು ವಿಷಯದಲ್ಲಿ ಅಧ್ಯಯನವನ್ನು ಕೈಗೊಂಡು, ತಾವು ಕಂಡುಕೊಂಡ ಸತ್ಯಗಳನ್ನು ಪ್ರಕಟಿಸಿ ಜನರಲ್ಲಿ ವೈಜ್ಞಾನಿಕ ಮನೋಭಾವವನ್ನು ಬೆಳೆಸಬಯಸುವ ಬುದ್ಧಿಜೀವಿಗಳ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಮಾನವೀಯ ಮೌಲ್ಯಗಳ ಬಗ್ಗೆ ಒಂದಿಷ್ಟೂ ಕಾಳಜಿಯಿಲ್ಲದೆ, ತಮ್ಮ ಸ್ವಾರ್ಥಸಾಧನೆಗಾಗಿ ಕಸಿದುಕೊಳ್ಳುವ ಪ್ರವೃತ್ತಿ ಹೀಗೆಯೇ ಮುಂದುವರಿಯುವುದು ತುಂಬ ಅಪಾಯಕಾರಿ.

ಪಾರ್ವತಿ ಜಿ. ಐತಾಳ್
'ಸುರಗಂಗಾ', ಬಸ್ರೂರ್ ಅಡ್ಡರಸ್ತೆ, ಕುಂದಾಪುರ - ೫೭೬ ೨೦೧

---

ಪ್ರಪಂಚದ ಅತೀ ದೊಡ್ಡ ಸಂವಿಧಾನವೆಂದು ಹೆಸರಾಗಿರುವ ಭಾರತದ ದೇಶದ ಸಂವಿಧಾನವು ಇಲ್ಲಿನ ಪ್ರಜೆಗಳಿಗೆ ತನ್ನ ೧೯(೧)(ಎ) ವಿಧಿಯಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕೊಟ್ಟಿದೆ. ಇದು ದೇಶದಲ್ಲಿನ ಪ್ರತಿಯೊಬ್ಬ ಪ್ರಜೆಯ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಮತ್ತು ತನಗೆ ಬೇಕಾದ ಮಾಹಿತಿಯನ್ನು ಪಡೆಯುವ ಅತೀ ಮುಖ್ಯವಾದ ಸ್ವಾತಂತ್ರ್ಯವಾಗಿದೆ. ಪತ್ರಕರ್ತರಿಗೆ, ಪತ್ರಿಕೆಗಳಿಗೆ ವಿಶೇಷವಾದ ಸ್ವಾತಂತ್ರ್ಯವಿಲ್ಲ; ದೇಶದ ಪ್ರಜೆಗಳೆಲ್ಲರಿಗೂ ಇರುವಂತೆಯೇ ಅಭಿವ್ಯಕ್ತಿ ಸ್ವಾತಂತ್ರ್ಯವೇ 'ಪತ್ರಿಕಾ ಸ್ವಾತಂತ್ರ್ಯ'ವೆಂದು ಸುಪ್ರೀಂ ಕೋರ್ಟ್ ಹೇಳಿದೆ.

ಅಭಿವ್ಯಕ್ತಿಯು ಮುಕ್ತವಾಗಿರಬೇಕು, ಪೂರ್ವಗ್ರಹಗಳಿರಬಾರದು ; ಜನತೆಯ ಸಹಜ ಅಭಿವ್ಯಕ್ತಿಯಾಗಿದ್ದು, ಜನರ ಅಭಿವ್ಯಕ್ತಿಯ ಮೇಲೆ ಯಾವುದೇ ರೀತಿಯ ಹೊರಗಿನ ಏಕಮುಖಿ ಪ್ರಭಾವವಿರಬಾರದು. ಅಭಿವ್ಯಕ್ತಿ ತಪ್ಪೋ-ಸರಿಯೋ ಎಂಬುದರ ಆರೋಗ್ಯಕರವಾದ ಚರ್ಚೆಗೆ ಅವಕಾಶವಿರಬೇಕು. ಈಗಿನ ಪರಿಸ್ಥಿತಿಯಲ್ಲಿ 'ಅಭಿವ್ಯಕ್ತಿ ಸ್ವಾತಂತ್ರ್ಯ'ವೆನ್ನುವುದು 'ಪುಸ್ತಕದ ಬದನೆಕಾಯಿ ಪಲ್ಯಕ್ಕಾಗಲ್ಲ' ಎಂಬ ನಾಣ್ಣುಡಿಗೆ ಸಮವಾಗಿದೆ. ಯಾವ ಸಂವಿಧಾನದಿಂದ ನಮಗೆ 'ಅಭಿವ್ಯಕ್ತಿ ಸ್ವಾತಂತ್ರ್ಯ' ದೊರಕಿದೆಯೋ ಅದೇ ಸಂವಿಧಾನದ ಹೆಸರಿನಲ್ಲಿ ಅ ಸ್ವಾತಂತ್ರ್ಯಹರಣ ಮಾಡುತ್ತಿರುವುದು ಈಗಿನ ವಾಸ್ತವದ ಸಂಗತಿ.

ಇತ್ತೀಚಿನ ಕೆಲವು ಘಟನೆಗಳನ್ನು ಇದಕ್ಕೆ ಉದಾಹರಿಸಬಹುದಾಗಿದೆ: ಬಂಡಾಯ ಸಾಹಿತಿ ಬಂಜಗೆರೆ ಜಯಪ್ರಕಾಶ್‌ರವರು ಬಸವಣ್ಣನ ಜಾತಿಗೆ ಸಂಬಂಧ ಪಟ್ಟಂತೆ ಕೆಲವು ಅಧ್ಯಯನ ನಡೆಸಿ ಬರೆವ 'ಆನುದೇವಾ ಹೊರಗಣವನು...' ಕೃತಿಯಲ್ಲಿ ಐತಿಹಾಸಿಕ ಪುರುಷನ ಮಾನಹಾನಿ ಮಾಡಿದ್ದಾರೆ ಎಂಬ ಕಾರಣಕ್ಕಾಗಿ ಆ ಕೃತಿಯ ಕರ್ತೃ ಪುಸ್ತಕವನ್ನು ಹಿಂತೆಗೆದುಕೊಂಡಾಗಿಯೂ ಅದನ್ನು ಸರ್ಕಾರ ಮುಟ್ಟುಗೋಲು ಹಾಕಿದೆ. ಇದಕ್ಕೆ ಮುಟ್ಟುಗೋಲು ಹಾಕಿ ಜನರಲ್ಲಿ ಮೂಡಿದ ಚರ್ಚೆಯನ್ನೇ ಮರೆಮಾಚಿದರು. ಅದೇ ರೀತಿ ಮುಸ್ಲಿಮ್ ವೈಚಾರಿಕ ಬರಹಗಾರ್ತಿ ತಸ್ಲೀಮಾ ನಸ್ರೀನ್‌ರ ವಿಚಾರದಲ್ಲಿಯೂ ಅಭಿವ್ಯಕ್ತಿಯ ಸ್ವಾತಂತ್ರ್ಯಹರಣವಾಗಿರುವುದನ್ನು ಕಾಣಬಹುದಾಗಿದೆ. ತನ್ನದೇ ಧರ್ಮದಲ್ಲಿನ ಕಟ್ಟುಪಾಡುಗಳು, ಧರ್ಮದಲ್ಲಿರುವ ಲೋಪಗಳನ್ನು ಪ್ರಶ್ನಿಸಿದ್ದಕ್ಕೆ ಆಕೆ ಅದೇ ಧರ್ಮದ ಮೂಲಭೂತವಾದಿಗಳ ಆಕ್ರೋಶಕ್ಕೆ ಗುರಿಯಾಗಬೇಕಾಯಿತು. ಇತ್ತೀಚೆಗೆ ನಡೆದ ಇನ್ನೊಂದು ಘಟನೆಯೆಂದರೆ ಮಿಡ್-ಡೇ ಪತ್ರಿಕೆಯ ೪ ಜನ ಪತ್ರಕರ್ತರನ್ನು ನ್ಯಾಯಾಂಗ ನಿಂದನೆಗೆ ಸಂಬಂಧಪಟ್ಟಂತೆ ಬಂಧಿಸಲಾಯಿತು. ಈ ಘಟನೆಗಳಲ್ಲೆಲ್ಲಾ ಆರೋಗ್ಯಕರ ಚರ್ಚೆಗೆ ಅವಕಾಶಗಳೇ ಇಲ್ಲವಾಯಿತು.

ಸ್ವಲ್ಪ ದಿನಗಳ ಹಿಂದೆ ಅಲಹಾಬಾದ್ ಹೈಕೋರ್ಟ್‌ನ ನ್ಯಾಯಾಧೀಶರಾದ ಶ್ರೀವಾಸ್ತವ ಭಗವದ್ಗೀತೆಯನ್ನು ರಾಷ್ಟ್ರದ ಧರ್ಮಗ್ರಂಥವೆಂದು ತಮ್ಮ ತೀರ್ಪಿನ ಮೂಲಕ ಘೋಷಿಸಿದರು. ದೇಶದ ಶ್ರೇಷ್ಠ ಗ್ರಂಥವಾದ ಸಂವಿಧಾನವನ್ನೋದಿ

With Best Compliments From

ABG Publishers' Distributors

4226, No.1, Bhargava Lane, Ansari Road, Daryaganj
New Delhi - 110 002. Phone: 2327 8399, 2328 3380

STOCKIST OF THE PUBLISHERS

◆ Arora Book Company ◆ Alka Publications ◆ Aureole Publishing House ◆ BPI India Pvt. Ltd. ◆ Book Palace ◆ Butterfly Books ◆ Children World Publication ◆ Crest Publishing House ◆ Dreamland Publications ◆ General Book Depot ◆ India Book House ◆ Indian Book Depot ◆ India Book Distributors ◆ Indian Publishing House ◆ Kamal Prakashan ◆ Om Books International ◆ Parragon India ◆ Pentagon Press ◆ Rupa & Co. ◆ Rohan Book Company ◆ Shree Book Centre ◆ Sahni Publications ◆ Shanti Publications ◆ Tiny Tot Publications ◆ Tarla Dalal ◆ West Land Books ◆ Wilco International

All Types of Indian & Foreign Books

Encyclopedia, Dictionaries, General Books, General Knowledge Books
Story & Graphic Novel, Reference Books, Fiction & Non Fiction
Cookery & Educational, Children's Literature, Self - Improvement & Management Books.

ಯಾಸ್ಥಾನದಲ್ಲಿರುವ ನ್ಯಾಯಾಧೀಶರು 'ಭಗವದ್ಗೀತೆ' ದೇಶದ ಧರ್ಮಗ್ರಂಥ ಎಂದು ಹೇಳಿರುವುದನ್ನು ಸರ್ವಧರ್ಮ ಸಮನ್ವಯದ ತತ್ವವನ್ನೊಪ್ಪಿದ ಯಾವ ಭಾರತೀಯನೂ ಕೂಡ ಟೀಕಿಸಿಯೇ ಟೀಕಿಸುತ್ತಾನೆ. ಇದನ್ನು ನ್ಯಾಯಾಂಗನಿಂದನೆ ಎಂದು ಜನಾಭಿಪ್ರಾಯಕ್ಕೆ ಮಣ್ಣು ಹಾಕಬಹುದೆ ?

ಈ ಮೇಲಿನ ಎಲ್ಲ ಘಟನೆಗಳಿಗೆ ವ್ಯತಿರಿಕ್ತವಾದುದೆಂದರೆ ಇತ್ತೀಚೆಗೆ ರಪ್ಪನವರ ಕಾದಂಬರಿ 'ಆವರಣ'ವು ಒಂದು ಪೂರ್ವಗ್ರಹ ಪೀಡಿತವಾಗಿದ್ದು ತೀಯ ಗಲಭೆಗಳಿಗೆ ತುಪ್ಪ ಸುರಿಯುವಂಥ ಕೃತಿಯಾಗಿದೆ ಎಂಬುದನ್ನು ಅದರ ಥಮ ಪುಟದಿಂದಲೇ ತಿಳಿಯುತ್ತಿದ್ದರೂ, ಆ ಕೃತಿಯನ್ನು ಶ್ರೇಷ್ಠ ಕಾದಂಬರಿ ಎಂದು ಬಿಂಬಿಸಿದ್ದು, ಅದರ ವಿರುದ್ಧದ ಧ್ವನಿಯನ್ನು ಅಡಗಿಸುವ ಸಲುವಾಗಿಯೇ ಗೆ ಹೇಳಿದಂತಿದೆ. ಹೀಗೆ ಸ್ವಾತಂತ್ರ್ಯಕ್ಕಾಗಿರುವ ಕಾನೂನು, ಆ ಸ್ವಾತಂತ್ರ್ಯವ ತ್ತಿಕೊಳ್ಳುವಿಕೆಗೂ ಒಂದು ಕಾನೂನಾಗಿದೆ.

ಇತ್ತೀಚೆಗೆ ಚರ್ಚೆಗೆ ಬರುತ್ತಿರುವ ಅಥವಾ ಅಭಿವ್ಯಕ್ತಿ ಸ್ವಾತಂತ್ರ್ಯಹರಣವಾಗು ರುವ ವಿಷಯಗಳು ಬಹುಪಾಲು ಧರ್ಮ, ಜಾತಿಯ ವಿಚಾರದಲ್ಲಿಯೇ. ೨೧ನೇ ಶತಮಾನದಲ್ಲಿಯೇ ದೇವರು, ಜಾತಿ, ಧರ್ಮದಂತಹ ವಿಷಯಗಳ ಬಗ್ಗೆ ಮುಕ್ತ ಚರ್ಚೆಗೆ ಅವಕಾಶವಿಲ್ಲದಿರುವಾಗ ೧೨ನೇ ಶತಮಾನದಲ್ಲಿ ಸಾಮಾಜಿಕ ಬದಲಾವಣೆ ಬೇಕೆಂದು ಜಾತಿಯ ಪ್ರಶ್ನೆ ಎತ್ತಿದ ವಿಚಾರವಾದಿ ಬಸವಣ್ಣನವರಿಗೆ ಇದು ಯಾವ ರೀತಿ ಉರುಳಾಗಿತ್ತು ಎಂಬುದನ್ನು ಊಹಿಸಿಕೊಳ್ಳಲೂ ಆಗದು. ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕಿದಷ್ಟೂ ದೇಶದಲ್ಲಿ ದಂಗೆಗಳು ಹೆಚ್ಚಾಗುತ್ತವೆ, ದೇಶದ ಗತಿ ಕುಂಠಿತವಾಗುತ್ತದೆ. ಅಭಿವ್ಯಕ್ತಿ ಸ್ವಾತಂತ್ರ್ಯವೆನ್ನುವುದು ದೇಶದ ಪ್ರಥಮ ಜೆಯಿಂದ ಹಿಡಿದು ಕಟ್ಟಕಡೆಯ ಪ್ರಜೆಯವರೆಗೂ ಸಮಾನವಾಗಿರಬೇಕು. ತಿಯೊಬ್ಬರ ಅಭಿಪ್ರಾಯಗಳೂ ಕೂಡ ಮುಕ್ತಚರ್ಚೆಗೆ ಬಂದಾಗಲೇ ರಾಷ್ಟ್ರದ ಮಸ್ಯಾ ಪ್ರಶ್ನೆಗಳಿಗೆ ಉತ್ತರ ಸಿಗುವುದು.

**ಸರಳ ಮಾರುತಿ ಥಗೆಣ್ಣವರ್**
ದ್ವಿತೀಯ ಬಿ.ಎ. (ಪತ್ರಿಕೋದ್ಯಮ), ಸರ್ಕಾರಿ ಕಲಾ ಕಾಲೇಜು, ಬೆಂಗಳೂರು.

**ಒ**ಬ್ಬರ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವುದು ಎಂದರೆ ಪ್ರಜ್ಞಾ ವಂತರ, ಬುದ್ಧಿಜೀವಿಗಳ ಭಾವನೆಗಳಿಗೆ, ವಿಚಾರವಂತಿಕೆಗೆ ಮಾಡುವ ಅವಮಾನ.

ನೇರವಾಗಿ ವಿಚಾರಕ್ಕೆ ಬಂದುಬಿಡುತ್ತೇನೆ. ನಮ್ಮ ದೇಶ ಇಂದು ಹಲವಾರು ಜ್ವಲಂತ ಸಮಸ್ಯೆಗಳನ್ನು ಎದುರಿಸುತ್ತಿದೆ. ಶಿಕ್ಷಣ, ಬಡತನ, ನಿರುದ್ಯೋಗ, ಅವೈಜ್ಞಾನಿಕ ಮೂಢನಂಬಿಕೆಗಳು, ಕಂದಾಚಾರಗಳು, ಇಡೀ ದೇಶವನ್ನೇ ಡುತ್ತಿರುವ ಅನಿಷ್ಟ ಜಾತಿ ಪದ್ಧತಿ... ದಲಿತರ ಮೇಲೆ ದಬ್ಬಾಳಿಕೆ, ಮಹಿಳಾ ಶೋಷಣೆ, ರೈತಾಪಿ ವರ್ಗದ ನೋವುಗಳು ಇತ್ಯಾದಿ.

ಇವುಗಳನ್ನೆಲ್ಲಾ ಎದುರಿಸಿ ದೇಶವನ್ನು ಸರ್ವಾಂಗೀಣ ಅಭಿವೃದ್ಧಿ ದಿಕ್ಕಿನತ್ತ ಕೊಂಡೊಯ್ಯುವುದರ ಬದಲು ದಟ್ಟ ಅಂಧಕಾರದತ್ತ ಹೋಗುತ್ತಿದ್ದೇವೆ. ಎಂದೂ ಅಣ್ಣ ತಮ್ಮಂದಿರಂತೆ ಬಾಳುತ್ತಿದ್ದ ಜನಗಳಲ್ಲಿ ಆ ಜಾತಿ, ಈ ಜಾತಿ ಎಂದು ಹೇಳಿ ಬೆಂಕಿ ಹಚ್ಚಿ ಮೋಜು ನೋಡುವುದಾಗಿದೆ. ಇದರ ಮುಂದಿನ ಹೆಜ್ಜೆ ವಿಚಾರವಂತಿಕೆಯನ್ನು ಕೊಂದು ಸಮಾಜವನ್ನು ದಟ್ಟ ಅಂಧಕಾರದಲ್ಲಿ, ಮುಳುಗಿಸಿಬಿಡುವುದೇ ಆಗಿದೆ.

ಈ ಎಲ್ಲಾ ಸಮಸ್ಯೆಗಳಿಗೆ ವೈಜ್ಞಾನಿಕವಾಗಿ ಬೆಳಕು ಚೆಲ್ಲುವ ಮತ್ತು ನೋವುಂಡ ನಿಗಳಿಗೆ ಪ್ರತಿಧ್ವನಿಯಾಗುವ, ಅಂದರೆ, ಸಮಾಜದ ಪ್ರಗತಿಗೆ ಸದಾ ತುಡಿಯುವ ವಿಚಾರವಂತರ, ಸಾಹಿತಿ, ಸಂಶೋಧಕರ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಮೊಟಕು ಗೊಳಿಸಲು ಯಾರಿಂದಲೂ ಸಾಧ್ಯವಿಲ್ಲ. ಸಮಾಜಕ್ಕೆ ಬೇಕಾಗಿರುವುದು ಆರೋಗ್ಯದಾಯಕ ಪ್ರಗತಿ, ಸರ್ವತೋಮುಖ ಅಭಿವೃದ್ಧಿ.

ಇಂದಿನ ನಮ್ಮ ಮಹಾನ್ ರಾಜಕಾರಣಿಗಳು ಬುದ್ಧಿಜೀವಿಗಳ, ಕವಿಗಳ, ಪ್ರಜ್ಞಾವಂತರ ವಿಚಾರಲಹರಿಯನ್ನು ಬಳಸಿಕೊಂಡು ದೇಶದ ಅಭಿವೃದ್ಧಿಗೆ ಶ್ರಮಿಸಲು, ಸಮಾಜವನ್ನು ಕಟ್ಟುವ ಕಾಯಕ ಮಾಡಲಿ.

**ಸುರೇಶ್ ಎಂ. ಸಮತಳ**

**ಕ**ಲೆ, ಸಾಹಿತ್ಯಗಳು ಸೃಜನಶೀಲ ಅಭಿವ್ಯಕ್ತಿಗಳು; ಸಂಶೋಧನೆಗಳು ಸತ್ಯಶೋಧನೆಯ ಮಾರ್ಗದ ವ್ಯಾಖ್ಯಾನಗಳು. ಇವೆಲ್ಲ ಅಭಿವ್ಯಕ್ತಿ ವಿಧಾನದ ವಿವಿಧ ಆಯಾಮಗಳು. ಇದರ ಹಿಂದೆ ಚಿಂತನೆ, ಪರಿಶ್ರಮ, ಒಳನೋಟ ಗಳಿರುತ್ತವೆ. ಈ ಯಾವುದರ ಪರಿವೆಯೂ ಇಲ್ಲದ ಪಟ್ಟಭದ್ರರು ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಗದಾಪ್ರಹಾರವನ್ನು ಮಾಡುತ್ತಿದ್ದಾರೆ. ಪೊಳ್ಳು ವ್ಯಕ್ತಿತ್ವದ, ಒಣ ಪ್ರತಿಷ್ಠೆಯ, ಯಾವ ಸುಧಾರಣೆಗೂ ಬದ್ಧರಲ್ಲದ, ಸತ್ಯವನ್ನು ಅರಗಿಸಿಕೊಳ್ಳ ಲಾರದ ನಿಶ್ಚೇತನ ಜನ, ಆಘಾತದ ನೆಪದಲ್ಲಿ ದಾಂಧಲೆ ಎಬ್ಬಿಸುವುದನ್ನು ಕಾಣುತ್ತಿದ್ದೇವೆ. ಇತ್ತೀಚೆಗೆ ಕರ್ನಾಟಕದಲ್ಲಿ ನಡೆಯುತ್ತಿರುವ ಅಭಿವ್ಯಕ್ತಿ ಸ್ವಾತಂತ್ರ್ಯಹರಣದ ದಾಂಧಲೆಗಳು ಬಸವಣ್ಣನ ಸುತ್ತಲೇ ಹಬ್ಬಿರುವುದು ಒಂದು ದೌರ್ಭಾಗ್ಯ. ಲಂಕೇಶರ 'ಸಂಕ್ರಾಂತಿ' ನಾಟಕ ಪ್ರದರ್ಶನಗೊಂಡಾಗ, ಗಿರೀಶ್ ಕಾರ್ನಾಡರ 'ತಲೆದಂಡ' ನಾಟಕ ಪ್ರಕಟವಾದಾಗ, ಎಚ್. ಎಸ್. ಶಿವಪ್ರಕಾಶರ 'ಮಹಾಚೈತ್ರ' ಪಠ್ಯಪುಸ್ತಕವಾದಾಗ ಮತ್ತು ಇತ್ತೀಚೆಗೆ ಬಂಜಗೆರೆ ಜಯಪ್ರಕಾಶರ ಸಂಶೋಧನ ಕೃತಿ 'ಆನುದೇವಾ ಹೊರಗಣವನು...' ಪ್ರಕಟಗೊಂಡಾಗ ಈ ದಾಂಧಲೆಗಳು ಸಮೂಹಸನ್ನಿಯ ರೂಪ ಪಡೆದವು. ಬಸವಣ್ಣನ ಕಾಲದಲ್ಲಿ ನಡೆದಿರಬಹುದಾದ ಘಟನೆಗಳಾಗಲಿ, ಹುಟ್ಟಿನಿಂದ ಕೆಳಜಾತಿಯವನೆಂದಾಗಲಿ ಸಾಬೀತಾದರೆ, ಅವನ ಹೆಸರು ಹೇಳಿಕೊಂಡೇ ಸಮಾಜದಲ್ಲಿ ಉನ್ನತ ಜಾತಿ ಎನಿಸಿಕೊಂಡು, ಉನ್ನತಜಾತಿಯಲ್ಲಿ ಹುಟ್ಟಿದ ಕಾರಣಕ್ಕೆ ಉನ್ನತ ಮನುಷ್ಯರೆಂದು ತಿಳಿದುಕೊಂಡು ಸಮಾಜದಲ್ಲಿ ಸಾಕಷ್ಟು ಗೌರವವನ್ನು ಪಡೆಯುತ್ತಿರುವ ಇವರಿಗೆ ಆಘಾತವಾಗದಿರುತ್ತದೆಯೆ ? ಈ ಎಲ್ಲಾ ಸಂದರ್ಭಗಳಲ್ಲಿಯೂ ಸಂವಿಧಾನ ಬದ್ಧ ಸ್ವಾತಂತ್ರ್ಯವನ್ನು ರಕ್ಷಿಸಬೇಕಾದ ಸರ್ಕಾರವೇ – ದಾಂಧಲೆಕೋರರ ಮಾತಿಗೆ ಮನ್ನಣೆ ನೀಡಿ – ಅದರ ಹರಣ ಮಾಡಿರುವುದು ನಮ್ಮ ಎಲ್ಲಾ ರಾಜಕೀಯ ಮತ್ತು ಸಾಂಸ್ಕೃತಿಕ ಅರಾಜಕತೆಯನ್ನು ತೋರಿಸುತ್ತದೆ.

ಬಸವಣ್ಣ ಯಾವುದೇ ಜಾತಿಯಲ್ಲಿ ಹುಟ್ಟಿದ್ದರೂ ಅವನ ಘನತೆ ಮಾಸುವುದಿಲ್ಲ. ಹುಟ್ಟಿನಿಂದ ಜಾತಿ ನಿರ್ಧರಿಸುವುದನ್ನು ವಿರೋಧಿಸುತ್ತಿದ್ದ ಬಸವಣ್ಣ ಹೇಳಿದ್ದು ಎರಡೇ ಜಾತಿ: 'ಭಕ್ತ' ಮತ್ತು 'ಭವಿ'. ಬಸವಣ್ಣನ ಚಿಂತನೆಗಳ ಬಗ್ಗೆ ಗೌರವವಿದ್ದದ್ದೇ ಆದರೆ ಅವನ ಹುಟ್ಟನಲ್ಲಾಗಲಿ, ಅವನ ಕಾಲದಲ್ಲಿ ಅವನ ಆಸುಪಾಸಿನಲ್ಲೇ ನಡೆದಿರಬಹುದಾದ ಘಟನೆಗಳ ಸತ್ಯಾಸತ್ಯಗಳ ಪರಾಮರ್ಶೆ ಮಾಡುವುದಕ್ಕಾಗಲೀ ಅಭಿವ್ಯಕ್ತಿ ಸ್ವಾತಂತ್ರ್ಯ ಖಂಡಿತ ಇರಲೇಬೇಕಾಗುತ್ತದೆ.

ಭಾರತೀಯನಾಗಿದ್ದ ಮುಸ್ಲಿಮ್ ಲೇಖಕ ಸಲ್ಮಾನ್ ರಶ್ದಿ 'ಸಟಾನಿಕ್ ವರ್ಸಸ್' ಕೃತಿ ರಚನೆ ಮಾಡಿದಾಗಲೂ ಇದೇ ಮೂಲಭೂತವಾದಿಗಳ ಅಟ್ಟಹಾಸ ಮಿತಿಮೀರಿ, ಲೇಖಕ ತಲೆಮರೆಸಿಕೊಂಡು ಬದುಕಬೇಕಾಯಿತು. ಬಾಂಗ್ಲಾ ಲೇಖಕಿ ತಸ್ಲೀಮಾ ನಸ್ರೀನ್ ಅವರ 'ಲಜ್ಜಾ' ಕೃತಿ ಮುಸ್ಲಿಮ್ ಮಹಿಳೆಯರ ವಾಸ್ತವ ಸ್ಥಿತಿಯನ್ನೇ ತಿಳಿಸಿದರೂ ಅವರು ಬಹಿಷ್ಕೃತರಾಗಬೇಕಾಯಿತು.

ಸಾಂಪ್ರದಾಯಿಕ, ಧಾರ್ಮಿಕ, ಸಾಮಾಜಿಕ ಕಾರಣಗಳನ್ನು ಕೊಟ್ಟು ಮಹಿಳೆ ಯರನ್ನು, ದಲಿತರನ್ನು ಹಳ್ಳಕ್ಕೆ ತಳ್ಳಿ , ತಿಳಿವಳಿಕೆ, ಜ್ಞಾನವನ್ನು ಪಡೆಯುವಲ್ಲಿಂದಲೇ ಅವಕಾಶವಂಚಿತರನ್ನಾಗಿ ಮಾಡಿ, ತಾವು ಮೇಲಿದ್ದೇವೆಂದು ಬೀಗುವುದು ಅತ್ಯಂತ ಅನಾಗರಿಕ ವರ್ತನೆಯಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಅವರಿಗೆ ಯಾವ ಭಾವನೆಗಳೂ ಇಲ್ಲ, ಆಘಾತಗಳೂ ಇರುವುದಿಲ್ಲ. ಸತ್ಯಶೋಧನೆಗಳು ಇವರೂ ಅದೇ ವರ್ಗಕ್ಕೆ ಸೇರಿದವರು ಎಂದಾಗ ಮಾತ್ರ ಇವರ ಭಾವನೆಗಳಿಗೆ ಆಘಾತ ವಾಗುತ್ತದೆ. ಇಂತಹ ಆಘಾತಕಾರಿ ಪಟ್ಟಭದ್ರರ ಕಿರುಚಾಟಗಳಿಗೆ ಮನ್ನಣೆ ಕೊಟ್ಟು 'ಪರರ ವಿಚಾರಗಳನ್ನು ಪರಧರ್ಮಗಳನ್ನು ಗೌರವಿಸುವುದೇ ಚಿನ್ನದ ಗುಣ' ಎಂದು ಕನ್ನಡಿಗರ ಔನ್ನತ್ಯವನ್ನು ಎತ್ತಿಹಿಡಿದ ವಿಚಾರಗಳನ್ನು ಮಣ್ಣುಮಾಡಿ ಪ್ರಜಾತಂತ್ರದ ಮುಖ್ಯ ಅಂಶವಾದ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕುವುದು ಮುಂಬರುವ ಅಪಾಯಗಳ ಮುನ್ಸೂಚನೆಯಾಗಿದೆ.

**ಕೆ. ಎಸ್. ಪ್ರಭಾ**
'ಅಭಯ', ಸೋಮೇಶ್ವರ ದೇವಾಲಯ ರಸ್ತೆ, ಗಂಗಾಧರಪುರ
ದೊಡ್ಡಬಳ್ಳಾಪುರ - ೫೬೧೨೦೩, ಬೆಂಗಳೂರು ಗ್ರಾಮಾಂತರ

**ಮ**ನುಷ್ಯನ ಮೂಲಭೂತ ಅವಶ್ಯಕತೆಗಳಲ್ಲಿ ಅನ್ನ ನೀರಿನಷ್ಟೇ ಮುಖ್ಯವಾದದ್ದು ಸ್ವಾತಂತ್ರ್ಯ. ಒಬ್ಬ ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಯಲ್ಲಿ ಒಂದು ಹಂತದ ತನಕ ಸ್ವಾತಂತ್ರ್ಯ ಉತ್ತೇಜಕದಂತೆ ಕೆಲಸ ಮಾಡುತ್ತದೆ; ನಂತರದಲ್ಲಿ ಅದು ಆತನೊಳಗಿರುವ ಸೃಜನಶೀಲತೆಯನ್ನು ಹೊರತರುತ್ತದೆ. ತನ್ನ ಸುತ್ತಲಿನ ಆಗುಹೋಗುಗಳನ್ನು ಪ್ರಶ್ನಿಸುವ, ಅವುಗಳ ಬಗ್ಗೆ ಚಿಂತನೆ ನಡೆಸಿ ತನಗನ್ನಿಸಿದ್ದನ್ನು ಮುಕ್ತವಾಗಿ ಹೇಳಿಕೊಳ್ಳಲು ಅವಕಾಶ ನೀಡುವ ಅಭಿವ್ಯಕ್ತಿ ಸ್ವಾತಂತ್ರ್ಯ ಆರೋಗ್ಯವಂತ ಪ್ರಜಾಪ್ರಭುತ್ವದ ಮುಖ್ಯ ಲಕ್ಷಣ. ಇದೇ ಕಾರಣಕ್ಕಾಗಿ ಸಂವಿಧಾನವೂ ಅಭಿವ್ಯಕ್ತಿ ಸ್ವಾತಂತ್ರ್ಯದ ಬಗ್ಗೆ ವಿಶೇಷ ಗಮನ ನೀಡಿದೆ. ಆದರೆ ಇಂದು, ವ್ಯಕ್ತಿ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯಬೇಕಾದ ಸರ್ಕಾರಗಳು, ಅಧಿಕಾರ ಹಸ್ತಗಳು ಯಾವುದೋ ಒಂದು ವರ್ಗದ ಪ್ರತಿನಿಧಿಗಳಂತಾಡುತ್ತಾ, ತಮ್ಮ ಹಿತಾಸಕ್ತಿಗೆ ಧಕ್ಕೆಯಾಗುತ್ತದೆಂದು ತೋರಿದಾಗಲೆಲ್ಲಾ ದನಿ ಎತ್ತಿದವರ ಬಾಯಿ ಮುಚ್ಚಿಸಲು ಹೊರಡುತ್ತಿರುವುದು ನಮ್ಮ ದೇಶದ ಬಹುದೊಡ್ಡ ವಿಪರ್ಯಾಸ. ಪ್ರಶ್ನೆಗಳಿಗೆ, ಮುಕ್ತಚರ್ಚೆಗೆ ಸ್ವತಃ ತಾನೇ ವೇದಿಕೆ ಕಲ್ಪಿಸಿಕೊಡಬೇಕಾಗಿದ್ದ ಸಮಾಜ, ಪಟ್ಟಭದ್ರ ಹಿತಾಸಕ್ತಿಗಳ ಮುಲಾಜಿಗೆ ಸಿಕ್ಕು, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹತ್ತಿಕ್ಕುವಲ್ಲೆಲ್ಲಾ ಮೌನವಹಿಸಿ ಪ್ರಜಾಪ್ರಭುತ್ವದ ಮೂಲತತ್ವಕ್ಕೆ ಆಘಾತವನ್ನುಂಟು ಮಾಡಿದೆ. ಸಂವಿಧಾನದಲ್ಲಿ, ಇತರರ ಸ್ವಾತಂತ್ರ್ಯಕ್ಕೆ ಕುಂದಾಗದಂತೆ ಮತ್ತು ಅವರ ಭಾವನೆಗಳಿಗೆ ಆಘಾತವಾಗದಂತೆ ನಿನ್ನ ಸ್ವಾತಂತ್ರ್ಯವನ್ನು ಚಲಾಯಿಸಬಹುದೆಂದು, ನಮ್ಮ ಹಕ್ಕುಗಳಿಗಿರುವ ಇತಿಮಿತಿಯನ್ನು ಸ್ಪಷ್ಟವಾಗಿ ಉಲ್ಲೇಖಿಸಿದ್ದರೂ ನಾವು ಹೇಳಿದ ಖಚಿತ ಸತ್ಯದಿಂದ ಯಾರಿಗಾದರೂ ನೋವಾದರೆ ಅವರನ್ನು ಸಮಾಧಾನಿಸಲು ಯಾವ ಕಾಯ್ದೆ ಕಾನೂನುಗಳೂ ಬರಲಾರವು. ಆದರೆ ಇವ್ಯಾವುದನ್ನೂ ಗಣನೆಗೆ ತೆಗೆದುಕೊಳ್ಳದೆ ಜಾತಿ ಧರ್ಮಗಳನ್ನೇ ಬಂಡವಾಳ ಮಾಡಿಕೊಂಡಿರುವವರ ಹಿತ ಕಾಯಲು ಹೊರಟಿರುವ ಕೆಲವು ಸರ್ವಾಧಿಕಾರಿಗಳು ಸೈದ್ಧಾಂತಿಕ ಚರ್ಚೆಯ ಬದಲು ತೋಳ್ಬಲ ಮೆರೆಸಲು ಹೋಗಿ ಸಾಂಸ್ಕೃತಿಕ ಗೂಂಡಾಗಿರಿಗೆ ನಾಂದಿ ಹಾಡಿದ್ದಾರೆ. ದುರದೃಷ್ಟವಶಾತ್ ನ್ಯಾಯಾಂಗದಲ್ಲೂ ಅಲ್ಲಲ್ಲಿ ಇಂಥವರು ಕಂಡು ಬರುತ್ತಿರುವುದು ತಮಿಳುನಾಡು ಬಂದ್ ಪ್ರಕರಣದ ಸಮಯದಲ್ಲಿ ಪತ್ತೆಯಾಗಿದೆ. ಇದು ನಮ್ಮ ಪ್ರಸ್ತುತ ಸಮಾಜದ ಬಹುದೊಡ್ಡ ವ್ಯಂಗ್ಯ. ತನ್ನ ಕೃತಿ ವೈಚಾರಿಕ ಚರ್ಚೆಗೆ ಸದಾ ತೆರೆದಿರುತ್ತದೆ ಎಂದು ಹೇಳಿ ತಾನು ಪ್ರತಿಪಾದಿಸಿದ್ದೇ ಸತ್ಯ ಎಂದು ಪಟ್ಟುಹಿಡಿಯದ ಬಂಜಗೆರೆ ಜಯಪ್ರಕಾಶ್‌ರವರ 'ಅನುದೇವಾ...' ಕೃತಿಯನ್ನು, ತನ್ನ ಅಧಿಕಾರದ ಸೆಲೆ ಎಲ್ಲಿ ಬತ್ತಿಹೋಗುತ್ತದೋ ಎಂದು ಹೆದರಿದ್ದ ಸರ್ಕಾರ ಮುಟ್ಟುಗೋಲು ಹಾಕಿಸಿತು. ಕನ್ನಡ ಸಾಹಿತ್ಯದಲ್ಲೇ ಪ್ರಥಮ ಬಾರಿ ವಿವೇಕದ ಹಂಗು ತೊರೆದು, ಮಾನವೀಯತೆಯಿಂದ ದೂರ ಸರಿದು ರಚಿತವಾಗಿದ್ದ ಕೃತಿಯೊಂದರ ಕೃತಿಕಾರನ ಬಗ್ಗೆ ಮಾತನಾಡಿದ್ದರೆಂದು ಡಾ|| ಯು. ಆರ್. ಅನಂತಮೂರ್ತಿ ಯಂತಹ ಹಿರಿಯ ಸಾಹಿತಿಯ ಮನ ನೋಯುವಷ್ಟು ಹಾರಾಡಿದವರು 'ಆವರಣ'ದ ವಿರುದ್ಧವೇ ನಡೆದ ಪ್ರತಿಭಟನೆಯಿಂದ ಕಲಿಯುವುದು ಬಹಳಷ್ಟಿದೆ.

ನಮ್ಮ ತಾತ್ವಿಕ ಭಿನ್ನಾಭಿಪ್ರಾಯಗಳೇನೇ ಇದ್ದರೂ ಅದನ್ನು ಬೌದ್ಧಿಕ ಚರ್ಚೆಯ ಮೂಲಕ ಸರಿಪಡಿಸಿಕೊಳ್ಳಬೇಕೇ ವಿನಾ ಎದುರಾಳಿಗೆ ಮಾತೇ ಆಡಬೇಡವೆಂದು ತಾಕೀತು ಮಾಡುವ ಹಕ್ಕು ನಮಗಿಲ್ಲ. ಇಂತಿಂಥವರ ಭಾವನೆಗಳಿಗೆ ಇಷ್ಟಿಷ್ಟು ಆಘಾತವಾಗಿದೆ ಎಂದು ತಮ್ಮ ತತ್ವ ಸಿದ್ಧಾಂತಗಳಿಗೆ ವ್ಯತಿರಿಕ್ತವಾಗಿರುವ ಕೃತಿಗಳನ್ನೆಲ್ಲಾ ಮುಟ್ಟುಗೋಲು ಹಾಕುತ್ತಾ ಹೋಗುವುದು ನಮ್ಮ ನೆಲದ ಸಾಂಸ್ಕೃತಿಕ ಆತ್ಮವನ್ನು ನಾಶ ಮಾಡುವುದಕ್ಕೆ ಸಮ. ಕಲೆ, ಸಾಹಿತ್ಯದಲ್ಲಿ ಜಾತಿ ಧರ್ಮಗಳು ನುಸುಳದಂತೆ ಮತ್ತು ಅಂತಿಮವಾಗಿ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಚ್ಯುತಿಬಾರದಂತೆ ನಡೆಯುವ ದಿಕ್ಕಿನಲ್ಲಿ ನಾವಿನ್ನೂ ನಾಗರಿಕರಾಗಬೇಕಾಗಿದೆ.

ಸಾಕೆ...
'ರಾಮ ವಿಲ್ಲಾ', ೨೪/೧೪, ೨೨ನೇ ಮುಖ್ಯರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦

ನಮ್ಮ ಇತ್ತೀಚಿನ ಪ್ರಕಟಣೆಗಳು


ರೂ. 40


ರೂ. 50


ರೂ. 50


ರೂ. 60


ರೂ. 60


ರೂ. 60



ಲೋಹಿಯಾ ಪ್ರಕಾಶನ
ಕಪ್ಪಗಲ್ಲು ರಸ್ತೆ, ಬಳ್ಳಾರಿ – 583 103
ದೂರವಾಣಿ : 08392-257412

**ವ್ಯ**ಕ್ತಿಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯಗಳ ಮರ್ಯಾದೆ ಜೀವಿಸ ಬೇಕಿರುವುದು, ಮರ್ಯಾದೆ ಕಾಪಾಡಬೇಕಿರುವುದು ಅಗತ್ಯ. ಇಲ್ಲಿ ನಮ್ಮೆಲ್ಲರ ಕರ್ತವ್ಯ, ಹಕ್ಕು ಇದೆ. ಸತ್ಯಕ್ಕೆ ಅಪಚಾರವಾಗದೆ, ನಾಡು, ನುಡಿ, ಜನ, ಜೀವನ, ಸತ್ಯಕ್ಕೆ ಎರಡು ಬಗೆಯದೆ ಅವನ್ನು ಪೊರೆವ ಸತ್ಯ ಆನಂದಿಸುವ, ಅರಿಯುವ, ಅಭಿವ್ಯಕ್ತಿಸುವ, ಕಲೆ ಕಲ್ಪಿಸುವ ಸ್ವಾತಂತ್ರ್ಯ ಸರ್ವಸಮ. ಲೋಕ ಸ್ವಾತಂತ್ರ್ಯ, ನಿಯಂತ್ರಣ ನಮ್ಮ ಯಾರೊಬ್ಬರ ಅಥವಾ ಒಂದೊಂದು ಗುಂಪಿನ ಗುತ್ತಿಗೆಯಲ್ಲ, ಅದು ನಮ್ಮ ಎಲ್ಲರ ಸ್ವಾತಂತ್ರ್ಯ, ಅದು ಅಮೂಲ್ಯ. ಬೇಕಾಬಿಟ್ಟಿ ಸ್ವೇಚ್ಛಾಚಾರವಾಗದೆ, ಜಾಗೃತಿ ಕಾಯ್ದುಷ್ಟು ಸಾಲದೆ, ಸತ್ಯ ಸ್ವತಂತ್ರವಾಗಿ ಅರಳುವುದೇ.

ಸತ್ಯ ಅರಿವಿನ, ಅಭಿವ್ಯಕ್ತಿಯ ಅಭಿಪ್ರಾಯ ಭೇದ ಸಹಜ ; ಆದರೆ ಭೇದದ ಅಭಿಪ್ರಾಯ, ಭೇದಕ್ಕೆ ಪ್ರತಿಕ್ರಿಯೆ ಮಾತ್ರ ಅಪಾಯ. ಕಲೆ, ಸಾಹಿತ್ಯ, ಸಂಗೀತ, ಅಭಿವ್ಯಕ್ತಿಗಳೆಲ್ಲಾ ಅನಾವರಣಗೊಳ್ಳುವುದು, ಅರಳುವುದು ಸತ್ಯ! ಆನಂದ ಹೊಂದುವುದು ಸತ್ಯ! ಕದಡದೆ ಒಟ್ಟು ಸಾಮರಸ್ಯ, ಸಾಮಾಜಿಕ ಸ್ವಾಸ್ಥ್ಯ, ತಿರುಚದೆ ಸತ್ಯ, ಇದು ಸ್ವಾತಂತ್ರ್ಯ.

ಜಾತಿ, ಮತ, ಪ್ರದೇಶ, ವ್ಯಕ್ತಿಗಳಿಗೆಲ್ಲ ಬೇರೆ ಬೇರೆಯಲ್ಲ, ಸತ್ಯ. ನಮ್ಮ ಭ್ರಮೆಯೂ ಅಂತಿಮ ಸತ್ಯ!

ಅಭಿಪ್ರಾಯ ಅಭಿವ್ಯಕ್ತವಾದೊಡನೆ ಸತ್ಯ ಸುಳ್ಳಾಗುವುದಿಲ್ಲ, ಸುಳ್ಳು ಸತ್ಯವಾಗುವುದಿಲ್ಲ. ಅಭಿಪ್ರಾಯ ಅಭಿವ್ಯಕ್ತಿಸದೆ, ಕಲ್ಪನೆ ಕಲ್ಪಿಸದೆ, ಸತ್ಯದ ಅನಾವರಣ, ಅರಿವು, ಆನಂದದ ಅನುಭವ ಮತ್ತು ವಿಕಾಸ ಹೇಗೆ ?

ಅಭಿಪ್ರಾಯ ಅಥವಾ ವಿಚಾರವನ್ನು ಒಪ್ಪುವುದು, ಬಿಡುವುದು, ವಿಮರ್ಶಿಸುವುದು, ಪ್ರತಿಕ್ರಿಯಿಸುವುದು ಎಲ್ಲಾ ಸರಿ ; ಅದೆಲ್ಲಾ ವ್ಯಕ್ತಿಯನ್ನು ಪ್ರೀತಿಸುತ್ತ, ಗೌರವಿಸುತ್ತ ಮಾಡಬೇಕಾದ್ದು.

ಡಾ|| ಬಿ. ಶಶಿಕರ ಶೆ...
ಕ್ಷೀರ ಕ್ಲಿನಿಕ್, ಚಾಮರಾಜಪೇಟೆ, ಸಾಗರ - ೫೭೭ ೪...

ಡಾ॥ ಅನಿಲ ಕಮತಿ

ನಾನು ಪ್ರಾಥಮಿಕ ಶಾಲೆಯ ಎರಡನೆಯ ವರ್ಗದಲ್ಲಿದ್ದಾಗ ನಮ್ಮ ಕ್ಲಾಸಿನಲ್ಲಿ ಕೋಕಣೆ ಮಾಸ್ತರು ತುಂಬ ಅಭಿಮಾನದಿಂದ ಒಂದು ಸುದ್ದಿಯನ್ನು ಬಿತ್ತರಿಸಿದರು. ನಮ್ಮೂರ ಪೈಲ್ವಾನ್ ಶ್ರೀಪತಿ ಖಂಚನಾಳ್ 'ಹಿಂದ ಕೇಸರಿ' ಪ್ರಶಸ್ತಿ ಗೆದ್ದ. ಆಗ ನನ್ನ ಪಕ್ಕ ಕುಳಿತಿದ್ದ ಗೆಳೆಯನೊಬ್ಬ ಎದ್ದು ನಿಂತು ತುಂಬ ಶಿಸ್ತಿನಿಂದ ಕೈಕಟ್ಟಿಕೊಂಡು ಕೇಳಿದ, ''ಮಾಸ್ತರ್‍ರೀsss ಹಂಗಾದರ ಮುಂದ ಕೇಸರಿ ಯಾರಾದರ್‍ರಿsss?''



# ನಮ್ಮೂರ ಬಿರುದಾಂಕಿತರು !

ಪುರಾತನಕಾಲದಿಂದಲೂ ಬಿರುದು-ಬಾವಲಿಗಳಿಗೆ ತುಂಬ ಬೆಲೆ (ಬಿರುದು ...ನೋ ಸರಿ! ರಕ್ತ ಹೀರುವವೆಂಬ ಪ್ರತೀತಿಯಿರುವ ಬಾವಲಿಗಳಿಗೆಂಥ ಬೆಲೆ ಎಂದು ...ರಿ ಮತ್ತೆ). ರಾಜಮಹಾರಾಜರು ಪ್ರವೇಶಿಸುವ ಹೊತ್ತಿಗೆ ಅವರಿಗಿದ್ದ ಹತ್ತಾರು ...ರುಗಳನ್ನು ಲಯಬದ್ಧವಾಗಿ ಸುಶ್ರಾವ್ಯವಾಗಿ ಉರುಹೊಡೆಯುವ ಒಂದು ವರ್ಗವೇ ... ವಂದಿಮಾಗಧರೆಂದು ಕರೆಸಿಕೊಳ್ಳುತ್ತಿದ್ದ ಇವರು ದರಬಾರಿನ ದ್ವಾರಕ್ಕೆ ನಿಂತು ...ತದಲ್ಲಿ ದೊರೆ ಪ್ರವೇಶಿಸುತ್ತಿದ್ದಂತೆಯೇ ''ರಾಜಾಧಿರಾಜ...'' ಎಂದು ಪ್ರಾರಂಭಿಸಿ ಆ ...ಗಿದ್ದ ಹತ್ತಿಪ್ಪತ್ತು ಉಪಾಧಿಗಳನ್ನೆಲ್ಲ ಹೇಳಿ ''ಬಹುಪರಾಕ್, ಬಹುಪರಾಕ್'' ಎಂದು ...ತ್ತಿದ್ದುದನ್ನು ನಮ್ಮ ಹಿಂದಿನ ನಾಟಕ, ಸಿನೆಮಾಗಳಲ್ಲಿ ಕೇಳುವುದೇ ಒಂದು ...ನಂದ. ಇಂಥ ವಂದಿಮಾಗಧರ ಪ್ರಸ್ತಾಪವೆಲ್ಲಾ ನಮ್ಮ ಪುರಾಣ, ಚರಿತ್ರೆಗಳಲ್ಲಿ ...ದ್ದಾದರೂ ಈ ಬಿರುದು-ಉಪಾಧಿಗಳನ್ನು ಟಂಕಿಸುತ್ತಿದ್ದವರು, ಪದವಿಗಳನ್ನು ...ನಮಾಡುತ್ತಿದ್ದ ಪ್ರತಿಭಾವಂತರಾರು ಎಂಬ ಪ್ರಸ್ತಾಪವಾದ ಉಲ್ಲೇಖ ಎಲ್ಲಿಯೂ ...ತಿಲ್ಲ. ನನಗೆ ಇಂಥ ಬೌದ್ಧಿಕ ಟಂಕಶಾಲೆಗಳ ಬಗ್ಗೆ ತೀವ್ರ ಕುತೂಹಲ ...ಲಿನಿಂದಲೂ ಇದ್ದುದೇ. ನಾನು ಚಿಕ್ಕವನಾಗಿದ್ದಾಗ ನನ್ನ ಈ ಪ್ರಶ್ನೆಗೆ ನನ್ನ ...ಗಳೊಬ್ಬರ ಉತ್ತರ – 'ರಾಜನಾಶ್ರಯದಲ್ಲಿದ್ದ ದರಬಾರಿನ ಕವಿಗಳು, ...ತ್ನಗಳೆಲ್ಲರ, ಒಂದು ಕೆಲಸ ಇಂಥ ಯಥಾಯೋಗ್ಯ ಬಿರುದುಗಳನ್ನು ಟಂಕಿಸುವುದು!' ...ಖರೇನೊ ನಂಗಂತೂ ಗೊತ್ತಿಲ್ರೀ.

...ನು ಪ್ರಾಥಮಿಕ ಶಾಲೆಯ ಎರಡನೆಯ ವರ್ಗದಲ್ಲಿದ್ದಾಗ ನಮ್ಮ ಕ್ಲಾಸಿನಲ್ಲಿ ...ಣೆ ಮಾಸ್ತರು ತುಂಬ ಅಭಿಮಾನದಿಂದ ಒಂದು ಸುದ್ದಿಯನ್ನು ಬಿತ್ತರಿಸಿದರು. ನಮ್ಮೂರ ಪೈಲ್ವಾನ್ ಶ್ರೀಪತಿ ಖಂಚನಾಳ್ 'ಹಿಂದ ಕೇಸರಿ' ಪ್ರಶಸ್ತಿ ಗೆದ್ದ. ಆಗ ನನ್ನ ಪಕ್ಕ ಕುಳಿತಿದ್ದ ಗೆಳೆಯನೊಬ್ಬ ಎದ್ದು ನಿಂತು ತುಂಬ ಶಿಸ್ತಿನಿಂದ ಕೈಕಟ್ಟಿಕೊಂಡು ಕೇಳಿದ, ''ಮಾಸ್ತರ್‍ರೀsss ಹಂಗಾದರ ಮುಂದ ಕೇಸರಿ ಯಾರಾದರ್‍ರಿsss?''

ಆ ದೇವರೆ ಇರಲಿ, ಆ ಬಿರುದಗೋಳ ಹಿಂದಮುಂದ ಎಲ್ಲಾ ತಕ್ಕೊಂಡ ಹ್ವಾದರ ಅದೇನ ದಂಡಿಗ್ಹತ್ತು ಮಾತಲ್ಲೇಳ್ರಿ. ಅದಕ ಅದನ ಥ್ವಾಡೆ ವ್ಯಾಳೆ ಒತ್ತಟ್ಟಿಗಿಟ್ಟು ಈ ಬಿರುದುಗಳ ಟಂಕಸಾಲಿ ನೋಡಿಬರೋಣು.

ನಮ್ಮೂರು ಅತ್ಲಾಗ ಥಡಾ ಶಹರೂ ಅಲ್ಲ. ಇತ್ಲಾಗ ಥಡಾ ಹಳ್ಳಿನೂ ಅಲ್ಲದ ಮಧ್ಯಮ ಊರರೇನ್ರಪ್ಪಾ. ಶ್ರೀಮಂತಕ್ಯಾಗೂ ಹಂಗs ಥಡಾ ಅತ್ತ ಇಲ್ಲಾ ಥಡಾ ಇತ್ತ ಇಲ್ಲ. ನಮ್ಮೂರಾಗ ಯಾವುದರೆ ಕೊರತಿ ಇದ್ದೀತು, ಆದರ ನಮ್ಮೂರ ಮಂದಿ ಬುದ್ಧಿವಂತಿಕೆಗೆಂದೂ ಕೊರತೆ ಇಲ್ಲಾ ನೋಡ್ರಿ. ಆದ್ರಾಗೂ ಅವರವರ ಭಾವಕ್ಕೆ, ಅವರವರ ಲೆವಲ್ಲಿಗೆ ತಕ್ಕಂಥಾ ಬಿರುದು ಕೊಡೋದ್ರಾಗ ಇವರದು ಎತ್ತಿದ ಕೈ ನೋಡ್ರೀ. ಒಂದೊಂದು ಬಿರುದರೆ ಇಂಥಾವಿದ್ದು, ಅಲ್ಲ ಈ ವ್ಯಕ್ತಿಗೆ ತಕ್ಕಹಂಗ ಈ ಬಿರುದ ಟಂಕಿಸಿದಾಕೋ ಅಥವಾ ಈ ಬಿರುದಿಗಿ ತಕ್ಕಂಗ ಈ ಮೂರ್ತಿನs ಕೆತ್ತಿದಾರೋ ಅಥವಾ ಎರಕಾ ಹೊಯ್ದರೋ ಅಂತ ಸಂಶಯ ಬರತಿತ್ತು.

ನಾ ಇನ್ನೂ ಸಣ್ಣಾಂವ ಇದ್ದಾಗನ ಮಾತು, ಗಾಂಧಿ ಅಂದರ ಮಹಾತ್ಮಾ ಗಾಂಧಿ ಅಂತಷ್ಟ ಜನಕ್ಕೆ ಗೊತ್ತಿತ್ತು. ದಾರೂ ಬಂದಿ ಚಲಾವಣಿದಾಗ ಇತ್ತು. ಆದ್ರೂ ಪೋಲೀಸರ ಕಣ್ಣ ತಪ್ಪಿಸಿ ಮಣ್ಣಿನ ಬಂಡ್ಯಾ ಕೊಡಗೊಳೊಳಗ ಕೊಳತ ಬೆಲ್ಲ, ಬಬಲಿ ಗಿಡದ ತ್ಯಾಟಿ ಮತ್ತೇನೇನೋ ಮಣ್ಣ ಮಸಿ ಹಾಕಿ ತ್ವಾಟ್ದಾಗ ಹುಗದ ಹದನೈದ ದಿನಾ ಬಿಟ್ಟ ತಗದರ ಕೊಡಕ್ಕ ಮುಚ್ಚಿದ್ದ ಪರ್ಯಾಣ ತಳ್ಳಿ ಬುರಗ ಬುರಗಾಗಿ ಉಕ್ಕಿ ಹರೀತಿದ್ದಾಂದು ಭಕ್ತರನ್ನ ಕೂಗಿ ಕರೀತಿತ್ತು. ಇಂಥಾ ವ್ಯಾಳೆದಾಗ ನಮ್ಮೂರ ಜನ ಒಂದ ಸ್ಪರ್ಧಾ ಏರ್ಪಡಿಸಿದರು. ನಮ್ಮೂರಾದರೊಳಗ ಯಾರ ಹೆಚ್ಚ ಕುಡಿದ ದಕ್ಕಿಸಿಕೊಳ್ತಾರೋ ಅವರs ಚಾಂಪಿಯನ್ ಅನ್ನೋವಂಥಾ ಸ್ಪರ್ಧಾ ಅದು. ಪ್ರಿಕ್ವಾರ್ಟರ್, ಕ್ವಾರ್ಟರ್ ಫೈನಲ್, ಸೆಮಿಫೈನಲ್‌ಗಳೆಲ್ಲಾ ಮುಗಿದು ಫೈನಲ್ಲಕ್ಕ ಬಂದಾವರು ಅಂದ್ರ ಕೋಳಿ ಮತ್ತ ಹುಸೇನ

ಅನ್ನೋವಂಥಾವರು. ಒಂದ ಅಮಾವಾಸ್ಯೆ ರಾತ್ರಿ ಫೈನಲ್ ಮುಗಿದ ಮರದಿನಾ ಬೆಳಕ ಹರಿಯೋದ್ರಾಗ ನಮ್ಮೂರಾಗ ಒಂದ ಮಾತ್ ಮನೆ ಮಾತಾಗಿತ್ತು – ''ಗಂಡ್ಸಾ ಹುಸನ್ಯಾ; ಹೆಣ್ಣ್ಯಾ ಕೋಳಿ.''

ಇದಾದ ಸುಮಾರ ಇಪ್ಪತ್ತ-ಇಪ್ಪತ್ತೈದು ವರ್ಷಗಳ ನಂತರ ಮತ್ತ ಅದss ಊರಿಗಿ ಬಂದು ನನ್ನ ವೃತ್ತಿ ಜೀವನ ಆರಂಭಿಸಿದೆ. ಒಂದ ದಿನಾ ಬೆಳಗಾಗೆದ್ದು ಒಂದ ಮುಸ್ಲಿಂ ಜೋಡಿ ಬಂತು. ಪೇಶಂಟ್ ನೋಡಿ ಮುಗಿಸಿ ಔಷಧ ಚೀಟಿ ಬರದ ಕೊಡಬೇಕು ಅಂತ ''ಪೇಶಂಟ ಹೆಸರು ಏನು ?'' ಎಂದ ಕೇಳಿದ ತಕ್ಷಣ ಚಟ್ಟಂತ ಅವನ ಹೆಂಡ್ತಿ – 'ಹುಸನ್ಯಾ' ಅಂತ ಅನ್ನೋದನ ಕೇಳಿ ಗಂಡಗ ರೀ ಹಚ್ಚಿ ಮಾತಾಡತಿದ್ದ ಆ ಯುಗದಾಗ ಒಮ್ಮೆಗೆಲೆ ಆಶ್ಚರ್ಯ ಆಗಿ ಅವಳ ಮುಖಾ ನೋಡಿದಾಗ, ಆಕೆ ನಾಚಿಗಿ ಕಟ್ಟಿಕೊಂಡದ್ದನ್ನ ನೋಡಿ. ಒಮ್ಮೆಲೆ ನನ್ನ ಮಿದುಳಿನಾಗ ಶಂಬರ ವ್ಯಾಟ ಬಲ್ಬ ಹತ್ತಿದ್ಹಾಂಗ ಆಗಿ – ''ಅಹ್ಹಾ, ಗಂಡ್ಯಾ ಹುಸನ್ಯಾ ಅಲ್ಲ ಇಂವಾ ?'' ಅಂತ ಕೇಳಿದಾಗ, ಆಕೆ ನಾಚಿಕೊಂಡ್ಹಾಂಗ ಮಾಡಿ– ''ಕ್ಯಾಜೀ ಆಪ? ಅಭೀ ತಕ ಯಾದ ರಖೇ ?'' ಅಂದಳು. ಮತ್ತೊಮ್ಮೆ ಮುತವರ್ಜಿಯಿಂದ ಅವನ ಮುಖಾ ನೋಡಿ – ''ಏನಪಾ ಗಂಡ್ಯಾ ಹುಸನ್ಯಾ ? ಇನ್ನಾ ಗಟ್ಟಿಮುಟ್ಟ್ಯಾಗ ಇದೀ ಅಲ್ಲಾ?'' ಎಂದು ಆಶ್ಚರ್ಯದಿಂದ ಕೇಳಿದಾಗ, ''ಇಲ್ರೀ ಸಾಹೇಬ್ರss ಇತ್ತಿತ್ಲ್ಯಾಗ ಐದಾರ ವರ್ಷದಾಗ ನಮ್ಮ ದೇಸ ಸಗಡ ಸರಕಾರಿ ನವ್ವದ (ಸರಕಾರ ಸೆರೆ ಬಂದಿ ತಗದು, ತಮ್ಮದ ಸೆರೆ ಅಂಗಡಿ ಸುರು ಮಾಡಿದ ಮೊದಲಲ್ಲಿ ಒಂದು ಕಪ್ಪಿಗೋ/ಒಂದು ಗ್ಲಾಸಿಗೋ ೯೦ ಪೈಸೆ ಕಿಮ್ಮತ್ತಿದ್ದುದರಿಂದ ಅದಕ್ಕೆ 'ನವ್ವದ' (ಮರಾಠಿಯಲ್ಲಿ ೯೦)ಎಂದೇ ನಮ್ಮ ಗಡಿಭಾಗದ ಹಳ್ಳಿಗಾಡಿನ ಜನ ಕರೆಯುತ್ತಿದ್ದರು) ತಗೋಕತ್ತಾಗಿಂದ ತಬಿಯತ್ ಅಷ್ಟ ಅಚ್ಛ ಉಳಿವಲ್ರೀ'' ಎಂದಾಗ ತಬ್ಬಿಬ್ಬಾಗುವ ಸರದಿ ನನ್ನದು.

ಈ ಸರಕಾರಿ ಸೆರೆಗೆ ನಮ್ಮ ಹಳ್ಳಿಗಾಡಿನಲ್ಲಿ ಇಂದಿಗೂ ಪ್ರಚಾರದಲ್ಲಿರುವ ಒಂದು ಹೆಸರು – 'ಕಂಟ್ರಿ'. ತನ್ನ ಯವ್ವನಾವಸ್ಥೆಯಿಂದಲೇ ಈ ಕಂಟ್ರಿ ಪ್ರಿಯನಾಗಿದ್ದ ನನ್ನೊಬ್ಬ ಸೋದರ ಸಂಬಂಧಿಗೆ ಚಿಕ್ಕವರು, ದೊಡ್ಡವರು ಸೇರಿ ಊರೆಲ್ಲ 'ಕಂಟ್ರಿ'

With Best Compliments From

UNIVERSAL INK FACTORY

Mfg : Fine Quality Offset Printing Ink

# 25 (Old C-03), HMT Industrial Estate
I.A.F. Main Road, Jalahalli
BANGALORE - 560 013
Phone : 080-23309670

ಎಂದೇ ಕರೆಯುತ್ತಿತ್ತು. ಇದು ಎಷ್ಟರವರೆಗೆ ಮುಂದುವರಿದಿತ್ತೆಂ[...] ಗುಂಪಿನಲ್ಲಿದ್ದಾಗ ಯಾರಾದರೂ ಪರವೂರವರು ಇವನನ್ನು 'ಶಂಕರಪ್ಪಾ' [...] ಕರೆದರೂ ಇವನೂ ಸೇರಿ ಸುತ್ತಲಿದ್ದವರೆಲ್ಲರೂ ಅತ್ತ-ಇತ್ತ, ಸುತ್ತ-ಮುತ್ತ ನೋ[...] ಹುಡುಕತ್ತಿದ್ದರಂತೆ. ಒಮ್ಮೆ ಹೀಗೇ ಆಯಿತು. ಈತನ ಹೆಸರಿಗೆ ಅಂಚೆ ಮ[...] ಬಂದ ಕೋರ್ಟ ನೋಟೀಸೊಂದು ಪೋಸ್ಟಮ್ಯಾನಿಗೆ 'ವಿಳಾಸ ಸಿಗ[...] ಮರಳಿಹೋಯಿತು. ಹೀಗೆ ಮೂರು ಸಲ ಸಿಗದೇ ಇದ್ದಾಗ, ಒಮ್ಮೆ ಬೇಲಿಫ[...] ಬಂದು ತಿರುಗಿಹೋದ. ಕೊನೆಗೆ ಈತನ ಹೆಸರಿಗೆ ವಾರಂಟ್ ತಂದ [...] ಬೇಲೀಫ ಊರೆಲ್ಲ ಸುತ್ತಿ ಅಲೆದು ಕೊನೆಗೆ ಊರ ಗೌಡರನ್ನು ಕಂಡಾಗ, ಅವ[...] ಅವರಿವರನ್ನು ವಿಚಾರಿಸಿ, ಕೊನೆಗೆ ಹೆಸರಿನ ಮುಂದೆ ಕಂಸಿನಲ್ಲಿ 'ಕಂಟ್ರಿ' ಎ[...] ಬರೆದಾಗಲೇ ಈ ಭೂಪ ಸಿಕ್ಕಿದ್ದು. ಇದರಲ್ಲಿ ಇವನ ತಪ್ಪೇನಿಲ್ಲ ಬಿಡಿ.

ನಮ್ಮಲ್ಲಿ 'ಕಂಟ್ರಿ'ಯಿದ್ದಂತೆಯೇ 'ಮಂತ್ರಿ'ಯೂ ಒಬ್ಬನಿದ್ದಾನೆ. ರಾಜ್ಯದ[...] ಕೇಂದ್ರದಲ್ಲಿ ಯಾವುದೇ ಪಕ್ಷದ ಸುಭದ್ರ-ಅಭದ್ರ ಸರಕಾರವಿದ್ದರೂ[...] ಸಮ್ಮಿಶ್ರ-ದುರ್ಮಿಶ್ರ ಸರಕಾರವಿದ್ದರೂ ಈತನು ಮಂತ್ರಿ ಮಾತ್ರ ಖಾಯ[...] 'ಖಾತೆ ?' ಎಂದಿರೋ, ಈತ ಖಾತೆಯಿಲ್ಲದ ಮಂತ್ರಿ. ನನಗೆ ಗೊತ್ತಿದ್ದಂತೆ [...] ಖಾತೆಯಿಲ್ಲದ ಮಂತ್ರಿಯ ಪ್ರಥ ಆರಂಭಿಸಿದವರು ಶ್ರೀಮತಿ ಇಂದಿರಾ ಗಾಂಧಿ. [...] ಒಂದು ಮಾತು ಪ್ರಚಲಿತದಲ್ಲಿತ್ತು – ಯಾರು ಎಲ್ಲೂ ಸಲ್ಲದವರೋ ಅಥ[...] ಯಾರು ಎಲ್ಲಾ ಖಾತೆಗಳಲ್ಲೂ ಚಂಚು ಪ್ರವೇಶ ಮಾಡಲು, ಮೂಗು ತೂರಿಸ[...] ಯೋಗ್ಯರೋ ಅವರು ಖಾತೆಯಿಲ್ಲದ ಮಂತ್ರಿಗಳಾಗುತ್ತಾರೆ. ಅದೇನೇ ಇದ್ದರೂ[...] ನಮ್ಮ ಮಂತ್ರಿ ಅಲ್ಲೂ, ಇಲ್ಲೂ, ಎಲ್ಲೆಲ್ಲೂ ಸಲ್ಲುವವರು ಬಿಡಿ !

ನಮ್ಮೂರ ಬೀರಪ್ಪನ ಜಾತ್ರೆಗೆ ಪ್ರತಿವರ್ಷ ಜೋಡೆತ್ತಿನ ಗಾಡಿಗಳ ಶರ್ಯತ್ತು[...] ನಡೆಯುತ್ತದೆ. ನಮ್ಮ ಶಾಸಕರು ಈ ಶರ್ಯತ್ತಿನಲ್ಲಿ ಗೆದ್ದವರಿಗೆ [...] ರೂಪಾಯಿಗಳಲ್ಲಿ ಬಹುಮಾನವಿಡುವುದರಿಂದ ನಮ್ಮ ಸುತ್ತೂರುಗಳಲ್ಲೂ ಇದ[...] ಪ್ರಸಿದ್ಧಿ ಬಹಳ. ಈ ಶರ್ಯತ್ತಿನಲ್ಲಿ ಗೆದ್ದ ಮೊದಲ ವಿಜೇತರಿಗೆ ಈ [...] ರೂಪಾಯಿಗಳ ಜೊತೆಗೆ ದೊರೆಯುವುದು ಒಂದು ''ಫಿರತಿ ಢಾಲ''. ಈ ಲಕ್ಷ [...] ರೂಪಾಯಿ ಮತ್ತು ಫಿರತಿ ಢಾಲ ಅಥವಾ ರೋಲಿಂಗ್ ಷೀಲ್ಡ್‌ನ ಪ್ರತಿಷ್ಠೆ ತು[...] ಹೆಚ್ಚು. ಇದನ್ನು ಗೆಲ್ಲುವುದು, ಗೆದ್ದು ನಮ್ಮ ಮನೆಯ ಶೋಕೇಸಿನಲ್ಲಿಡುವುದು ಹೆ[...] ಪ್ರತಿಷ್ಠೆಯ ಸಂಕೇತವೋ ಹಾಗೇ ಇದನ್ನು ಮರುವರ್ಷ ಮರಳಿಸುವುದು ಕರಕಷ್ಟ[...] ಊರೆಂದ ಮೇಲೆ ಎರಡೋ ಮೂರೋ ಪಕ್ಷಗಳು, ಪ್ರತಿಷ್ಠಿತರು, ಚುನಾವಣೆಯ[...] ಸೋಲು-ಗೆಲುವುಗಳೆಲ್ಲ ಇರುವುದು ಸಹಜವೇ. ಒಂದು ವಿಶಿಷ್ಟ ವ್ಯಕ್ತಿತ್ವ ನಮ್ಮೂರ[...] ಸದಾ ಗೆದ್ದವರ ಗುಂಪಿನಲ್ಲಿ ಎದ್ದು ಕಾಣುತ್ತಿದ್ದುದನ್ನು, ಶೋಭೆ ತರುತ್ತಿದ್ದುದ[...] ನಾನು ಗಮನಿಸಿದ್ದೆ. ಈ ವ್ಯಕ್ತಿತ್ವದ ಒಂದು ವಿಶೇಷ ಗುಣವೆಂದರೆ ಪ್ರ[...] ಚುನಾವಣೆಗೂ ಮೊದಲೇ ಆ ಚುನಾವಣೆಯ ಫಲಿತಾಂಶವನ್ನು ಸರಿಯಾ[...] ಊಹಿಸಿ, ಚುನಾವಣೆಗೂ ಒಂದಾರು ತಿಂಗಳು ಮೊದಲೇ ಸರಿಹೊಂದಾಣಿ[...] ಮಾಡಿಕೊಂಡು ಅವರೊಂದಿಗೆ ಠಳಾಯಿಸುವುದು. ಇದು ಊಹಿಸಿದಷ್ಟು ಸುಲ[...] ಸಾಧ್ಯವೂ, ಎಲ್ಲರಿಗೂ ಸಿದ್ಧಿಸುವ ಕಲೆಯೂ ಅಲ್ಲ. ಈ ಅಪರೂಪದ ವ್ಯಕ್ತಿ[...] ನಮ್ಮೂರ ಜನ ಕೊಟ್ಟ ಬಿರುದು – ''ಫಿರತಿ ಢಾಲ''. ಈಗ ನೀವೇ ಹೇಳಿ - ಯಾ[...] 'ಗೆದ್ದೆತ್ತಿನ ಬಾಲ ಹಿಡಿಯುವುದು' ಮುಂತಾದ ಪದಗುಚ್ಛವಾದರೂ ಇಂ[...] ವ್ಯಕ್ತಿತ್ವವನ್ನು ಇಷ್ಟು ತೂಕಬದ್ಧವಾಗಿ ಹಿಡಿದಿಡಬಲ್ಲುದೇ ?

ಒಂದು ದಿನ ನಮ್ಮೂರ ಸಾಹುಕಾರರನ್ನು ಏನೋ ಕೆಲಸದ ನಿಮಿತ್ತ ಕಾಣ[...] ಹೋಗಿದ್ದೆ. ಸಾಹುಕಾರರು ಮೆತ್ತನೆಯ ಕುರ್ಚಿಯ ಮೇಲೆ ಮೀಸೆಯ ಮೇ[...] ಕೈಯಾಡಿಸುತ್ತ ಕಾಲಿನ ಮೇಲೆ ಕಾಲು ಹಾಕಿ ಕಾಲು ಕುಣಿಸುತ್ತ ವಿರಾಜಮಾ[...] ರಾಗಿದ್ದಾರೆ. ಅವರ ಪದತಲದಲ್ಲಿ ಅವರ ಭಕ್ತರೊಳಗಿನವನೊಬ್ಬ ಚಕ್ಕಳಬಕ್ಕ[...] ಹಾಕಿ ಕುಳಿತು ಹಾವಭಾವಗಳೊಂದಿಗೆ ಏನೋ ಹೇಳುತ್ತಿದ್ದಾನೆ. ಎದುರಿನ[...] ಸೋಫಾದಲ್ಲಿ ಆಸೀನರಾಗಿದ್ದ ಕಾಳಕೂಟ ಮಾಸ್ತರರ ಬದಿಯ ಕುರ್ಚಿಯ ಮೇಲೆ[...] ನಾನು ಹೋಗಿ ಕುಳಿತೆ. ಭಕ್ತನ ಬೊಗಳೆ ಮುಂದುವರಿದಿತ್ತು : ''ಯಾನ ಹೇಳುದ[...] ಸಾವ್ಕಾರss, ನಿಮ್ಮ ಮುರೆದ ಹೊಲದಾಗಿನ ತಂಬಾಕ ಎಡಗೈ ಬರೊಬ್ಬರಿ[...] ಹೋಗೆಯ್ತ ನೋಡ್ರೀ. ನಾ ಮೊನ್ನಿ ರಸ್ತಾದ ಮ್ಯಾಲ ನಿಂತ ನೋಡಿದ್ನಿ, ಸ್ವತಾ[...] ಮಹಾರಾಜ ಬಂದ ನಿಂತ ಖುಡೆ ಮುರ್‍ಯಾಕತ್ತಿದ್ಹಾಂಗ ಇತ್ತು.'' (ದತ್ತಾ[...]

ರರರ ಇಷ್ಟದೈವ). ಸಾಹುಕಾರರು ಗತ್ತಿನಿಂದ ಕಿಸೆಗೆ ಕೈಹಾಕಿ ನೂರರ ೊಂದನ್ನು ಭಕ್ತನ ಬೊಗಸೆಗ್ಹಾಕಿದರು. ನನ್ನ ಪಕ್ಕ ಕುಳಿತಿದ್ದ ಕಾಳಕೂಟ ಅಂದರು – ''ನೀ ಹ್ವಾದ ಜನ್ಮದಾಗ ನಕ್ಕೀ 'ಹೆಳವ' ಆಗಿದ್ದಿ ನೋಡಲೇ !'' ರು ಅನ್ನುವದೊಂದು ಜನಾಂಗ. ಅವರು ಅವರ ಪಾಲಿಗೆ ಬಂದ ಮನೆಗೆ ರಾಗಬದ್ಧವಾಗಿ ಹೊಗಳುತ್ತ ಮನೆಯವರ ವಂಶಾವಳಿಯನ್ನೆಲ್ಲ ತ್ತಾರೆ.) ಇದು ನಡೆದದು ಸುಮಾರು ರಾತ್ರಿಯ ೯-೧೦ ಗಂಟೆಯ ಮಧ್ಯೆ. ನ ಬೆಳಕು ಹರಿಯುವಷ್ಟೊತ್ತಿಗೆ ಊರವರೆಲ್ಲರ ಬಾಯಲ್ಲೂ ಈ ಭಕ್ತ . ಇಂದು ಬಹುಶಃ ಈ ಹೆಳವನಿಗೆ ತನ್ನ ಮೂಲ ಹೆಸರೇ ಮರೆತುಹೋಗಿದೆ, ರ್ವಾಂತರ್ಯಾಮಿ ಈತನ ಈ ಬಿರುದು.

ಾರು ಏನೇ ಹೇಳಿದರೂ, ಅಂದರೂ, ಬೈದರೂ ಅಡ್ಡಡ್ಡವಾಗಿ ಗೋಣು ುದು ನಮ್ಮ ಹೈಸ್ಕೂಲ ಹೆಡ್ಮಾಸ್ತರರೊಬ್ಬರ ಚಾಳಿ. ಅವರಿಗಿತ್ತ ಬಿರುದು ಟ್ತ'.

ಲ್ಲರಿಗೂ ತಗ್ಗಿ-ಬಗ್ಗಿ ನಡೆಯುತ್ತ ಸಾಧುಪ್ರಾಣಿಯಂತಿದ್ದ ಬ್ಯಾಂಕ್ ೊಬ್ಬನನ್ನು ಆಡಳಿತ ಮಂಡಳಿಯ ಇಷ್ಟಾನುಸಾರ ಸಿನಿಯಾರಿಟಿ, ರಿಟಿಗಳನ್ನೆಲ್ಲ ಬದಿಗೊತ್ತಿ ಒಮ್ಮೆಲೆ ಮೆನೆಜರ ಹುದ್ದೆಗೇರಿಸಲಾಯ್ತು. ೇ ಹೇಳಿ ಕೇಳಿ ಭೋಳೆ ಮನುಷ್ಯ. ಏಕದಂ ಮೆನೆಜರ ಹುದ್ದೆಗೇರಿದ ವಂತೂ ಎದುರಿಗೆ ಬರುವ ಹಿರಿಯರೋ-ಕಿರಿಯರೋ, ಬಡವರೋ- ೋ ಯಾವುದೇ ಭೇದವೆನ್ನಿಸದೇ ನಮಸ್ಕರಿಸತೊಡಗಿದ. ತಿಂಗಳಂತರ ೇ ಇವರ ಸರ್ವನಾಮ 'ಗೂರ್ಖಾ' ಆಗಿ ಪರಿವರ್ತಿಸಿತು. ಇದನ್ನು ಕೇಳಿದ ನನಗೀ ಮೆನೆಜರು ಎದುರಾದಾಗ ಕೈಜೋಡಿಸಿದರೂ, 'ಸಲಾಂ ಸಾಬ್' ಯಾರೋ ನನ್ನ ಕಿವಿಯಲ್ಲು ಅಂದಂತಾಗುತ್ತದೆ.

ದೆ ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷರನ್ನು ಅಚ್ಛೆ ಮಾಡಿ, ಅವರ ಇಷ್ಟಾನಿಷ್ಟಗಳನ್ನೆಲ್ಲ ಪೂರೈಸಿದ 'ರಾವಸಾಹೇಬ', 'ರಾವಬಹಾದ್ದೂರ'ಗಳ ಊರು ನಮ್ಮದಾದರೂ ಜನಾಶ್ರಯದಲ್ಲಿ ಉತ್ಪತ್ತಿಯಾದ ನಮ್ಮ ಇಂದಿನ ಈ ಬಿರುದುಗಳಿಗೆ, ರಾಜಾಶ್ರಯದ ಆ ಬಿರುದುಗಳೆಲ್ಲಿ ಸಮವಾಗಬೇಕು ?

ಸ್ವಾತಂತ್ರ್ಯಾನಂತರದ ಮೊದಲಲ್ಲಿ ನಮ್ಮ ಭಾಗದ ಒಬ್ಬ ಪುಢಾರಿ ತುಂಬ ಪ್ರಸಿದ್ಧಿಗೆ ಬಂದಿದ್ದರು. ನಮ್ಮ ತಾಲೂಕಿನ ಅಭಿವೃದ್ಧಿ ಅವರ ಯಶಸ್ಸಿನ ಮೂಲಮಂತ್ರ. ಇದನ್ನವರು ಸದಾ ಜಪಿಸುತ್ತಿದ್ದರು. ಪ್ರತಿವರ್ಷ ಆಗಸ್ಟ ೧೫ಕ್ಕೆ ಮತ್ತು ಜನವರಿ ೨೬ಕ್ಕೆ ನಮ್ಮ ತಾಲೂಕಾಫೀಸಿನ ಮೇಲೆ ಧ್ವಜ ಅರಳಿಸಿ, ಭಾಷಣ ಕುಟ್ಟಲು ಪ್ರಾರಂಭಿಸಿದರೆ ಅಂದಿನವರೆಗೆ ಮುಗಿದ ಕೆಲಸಗಳ ಪಟ್ಟಿ ಒಪ್ಪಿಸುವುದು. ಕೆಲ ವರ್ಷಗಳಂತರದಲ್ಲಿ ಇವರಿಗಿದು ಬಾಯಿಪಾಠವಾಗಿ ಹೋಯಿತು. ಯಾಕೆಂದರೆ, ಪ್ರತಿವರ್ಷ ಅದೇ ರಸ್ತೆಗಳು, ಸೇತುವೆಗಳು, ಜಲಕುಂಭಗಳು ನಿರ್ಮಾಣವಾಗುತ್ತಿದ್ದವು, ರಿಪೇರಿಗೊಳ್ಳುತ್ತಿದ್ದವು, ಮೇಲ್ದರ್ಜೆಗೇರಲ್ಪಡುತ್ತಿದ್ದವು. ಇವರಿಗೆ ನಮ್ಮೂರ ಜನತೆ ಕೊಟ್ಟ ಅಭಿಧಾನ – 'ಪ್ರಗತಿ ಪುರೋಹಿತ'. ಇಂದಿಗೂ ನಮ್ಮೂರ ಜನತೆ ಇವರನ್ನು ಈ ರೀತಿ ನೆನೆಸಿಕೊಳ್ಳುತ್ತಾರೆ – ''ನಮ್ಮೂರವರು ನಾವೆಲ್ಲ ನಮ್ಮ ಮಕ್ಕಳಿಗೆ ನಮ್ಮೂರ ಜಾತ್ರೆಗೊಮ್ಮೆ ಮತ್ತು ದೀಪಾವಳಿ ಹಬ್ಬಕ್ಕೊಮ್ಮೆ ಹೇಗೆ ವರುಷದಲ್ಲೆರಡಾವರ್ತಿ ಹೊಸ ಬಟ್ಟೆಗಳನ್ನು ಹೊಲಿಸುತ್ತೇವೆಯೋ, ಹಾಗೆ ಇವರು ನಮ್ಮೂರಿಗೆ ವರುಷದಲ್ಲೆರಡಾವರ್ತಿ ರಸ್ತೆಗಳನ್ನು ನಿರ್ಮಿಸುತ್ತಿದ್ದರು.'' (ಅವುಗಳ ಗುಣಮಟ್ಟ ಅಷ್ಟಿರುತ್ತಿತ್ತು ಎಂಬರ್ಥದಲ್ಲಿ.) ತಲೆಗಳೆಂದರೆ ತಲೆಗಳು - ನಮ್ಮೂರ ಟಂಕಶಾಲೆಗಳು, ಅಲ್ಲವೇ ?


ಡಾ॥ ಅನಿಲ ಕಮತಿ
'ಕಮತಿ ಕ್ಲಿನಿಕ್', ಡಾ॥ ಶಿವರಾಮ ಕಾರಂತ ನಗರ
ಯಕ್ಸಂಬಾ - ೫೯೧೨೪೪, ಬೆಳಗಾವಿ ಜಿಲ್ಲೆ


# ಬಣ್ಣದ ಮಾತು !

ಬಣ್ಣದ ಮಾತಿನ ವೈಖರಿಯಲ್ಲಿ
ಕಣ್ಣು ಕಟ್ಟುವ ಆಟವದು
ಇಂದ್ರಜಾಲದ ಜಾದೂ ಆಟಕೆ
ಬೇಕೇ ಬೇಕು ಮುಖವಾಡ
ಬಣ್ಣದ ಬಟ್ಟೆ, ಬಣ್ಣದ ಕಾಗದ
ಝುಗ ಝುಗಿಸುವ ಬಣ್ಣದ ಬೆಳಕು
ಎಲ್ಲಾ ಬಣ್ಣದ ಥಳುಕೂ ಬೇಕು
ಮಂದಿಯ ಸೆಳೆವ ಜಾದೂ ಆಟಕೆ
ಸೆಳೆತದ ಹಿಂದೆ ಒಂದೇ ಗುಟ್ಟು
ಮಾಯಾಲೋಕದ ಕಣ್ಣು ಕಟ್ಟು
ಕಾಸಿಗೆ ಕಾಸು ಪೇರಿಸಿ ಪೇರಿಸಿ
ಕೌಶಲದಲ್ಲಿ ಗಂಟು ಕಟ್ಟು

ಆದರೆ ಗೆಳೆಯ
ನಾನು–ನೀನು
ಒಂದೇ ನಾಣ್ಯದ ಎರಡು ಮುಖ
ಆತ್ಮದ ಗಂಟಿನ ಪರಮ ಸುಖ

ಬಣ್ಣವೇತಕೆ ಆಡುವ ಮಾತಿಗೆ
ಕಣ್ಣದು ನಿಚ್ಚಳ ತೆರೆದಿರುವಾಗ
ಹೃದಯವು ಸತತ ಮಿಡಿದಿರುವಾಗ
ಮಾತೇ ಬೇಡದ ಈ ಗಳಿಗೆಯಲಿ
ಮೌನದ ಸಿರಿಯ ಉಪ್ಪರಿಗೆಯಲಿ
ಕೊಪ್ಪರಿಗೆ ಧನವೂ ತೃಣಕೆ ಸಮಾನ
ಯಾಕೋ ಬೇಕು ಬಣ್ಣದ ಮಾತು ?
ಅನುದಿನ ಅರಳುವ ಹಂಬಲದಲ್ಲಿ
ಹೂವಿನ ಬಣ್ಣವೆ ಕಿವಿ ಮಾತು !


ಜ್ಯೋತಿ ಗುರುಪ್ರಸಾದ್
'ಕಾವೇರಿ', ತೆಳ್ಳಾರು ರಸ್ತೆ, ೧೬ನೇ ತಿರುವು
ಕಾರ್ಕಳ - ೫೭೪ ೧೦೪




● ಸಂಪಿಗೆ ತೋಂಟದಾರ್ಯ





# 'ವಿಶ್ವದ ವೈವಿಧ್ಯತೆಯ ಹಿಂದಿನ ಏಕತೆ' ತೋರಿದ 'ಕಣ ಸಿದ್ಧಾಂತ'

ನಾವೆಷ್ಟು ಅದೃಷ್ಟವಂತರು! ಇಂತಹ ಸುಂದರ ಸೊಬಗಿನ ಪ್ರಕೃತಿಯ ಸಿರಿ ...ತ್ತ ಭೂಮಿಯೆಂಬ ಗ್ರಹದಲ್ಲಿ ಮನುಷ್ಯರಾಗಿ ಹುಟ್ಟಿ ಅದನ್ನೆಲ್ಲಾ ನೋಡುವ, ...ುಭವಿಸುವ, ಅರಿವು ಪಡೆಯುವ 'ಅದೃಷ್ಟ' ಪಡೆದಿದ್ದೇವಲ್ಲ! ಎಂತಹ ವೈವಿಧ್ಯತೆ, ...ತಹ ರಮಣೀಯತೆ, ಜೊತೆಗೇ ರುದ್ರ ಭಯಾನಕತೆ! ಹರಿವ ಸುಂದರ ನದಿಗಳು ...ದು ಬಗೆಯಾದರೆ ಕುದಿವ ಲಾವಾರಸ ಉಕ್ಕಿಸುವ ಜ್ವಾಲಾಮುಖಿಗಳು ಮತ್ತೊಂದು ...ಿ. ಬಾನಿಂದ ಸುರಿವ ತಣ್ಣನೆಯ ಮಳೆಯ ಜೊತೆಗೇ ಬೆಂಕಿಯಂತೆ ಸುಡುವ ...ರಸಿಡಿಲು, ಕಣ್ಣ ನೋಟವನ್ನು ಮೀರಿ ಹರಡಿರುವ ಸಾಗರಗಳ ಜೊತೆಯೇ ...ಾರವಾಗಿ ಹರಡಿರುವ ಮರುಭೂಮಿ. ಸಿಹಿ ಫಲ ನೀಡುವ ಮಾವೂ, ಕಹಿ ನೀಡುವ ...ವೂ... ಹೀಗೇ... ಎಲ್ಲಾ ವೈರುಧ್ಯಗಳಿಂದ ತುಂಬಿದ್ದರೂ ನಮ್ಮ ಬಾಳಿಗೆ ಇಂಬಾಗಿ, ...್ರಿಯ ತಾಣವಾಗಿ ತಾಯಿ ಮಡಿಲಾಗಿದೆ ಈ ನಮ್ಮ ಭೂಮಿ. ನಮ್ಮನ್ನು, ಅಷ್ಟೆ ಅಲ್ಲ ...-ಜಲಗಳಲ್ಲಿರುವ ಎಲ್ಲಾ ಜೀವ ಸಂಕುಲ, ಸಸ್ಯ ಸಂಕುಲ, ಭೂಭಾಗಗಳನ್ನು ...ವುಗಳ ವೈವಿಧ್ಯತೆಯನ್ನು ಕಾಪಾಡಿಕೊಂಡು ಬರುತ್ತಿದೆ ಈ ಭೂಮಿ.

ಇದನ್ನೆಲ್ಲಾ ನೋಡಿ ಅಚ್ಚರಿಗೊಂಡ ಪ್ರಾಚೀನ ಮಾನವ, ಇದರ ಅರ್ಥವೇನು? ...ರಿಯೇನು? 'ನಾವು' ಎಲ್ಲಿಂದ ಬಂದೆವು? ಎಲ್ಲಿಗೆ ಹೋಗುತ್ತೇವೆ? ಮನುಷ್ಯನಿಗೂ ...ಗತ್ತಿಗೂ ಇರುವ ಸಂಬಂಧ ಏನು? ಈ ಭೂಮಿ, ಈ ಸೂರ್ಯ, ಈ ಚಂದ್ರ, ಈ ನಕ್ಷತ್ರಗಳು ...ಗೆ ಬಂದವು? ಅವುಗಳಿಗಿರುವ ಸಂಬಂಧ ಏನು? ಇತ್ಯಾದಿ ಚಿಂತಿಸತೊಡಗಿದ.

ಸಾವಿರಾರು ವರ್ಷಗಳಿಂದ, ಹಲವಾರು ಕೋಟಿ ಜನರು ಕೋಟಿ ಕೋಟಿ ವೀಕ್ಷಣೆ ...ಲ್ಲಿ, ಆಲೋಚನೆಗಳಲ್ಲಿ, ಧ್ಯಾನಗಳಲ್ಲಿ, ತಪಸ್ಸುಗಳಲ್ಲಿ ಇವುಗಳಿಗೆ ಉತ್ತರವನ್ನು ...ಣಲು' ಪ್ರಯತ್ನಿಸಿದ್ದಾರೆ.

ಎಲ್ಲರೂ ಬೆರಗಾಗುವಂತೆ, ಪ್ರಾಚೀನ 'ಹಿಂದೂ' (?) ಮತ್ತು ಗ್ರೀಕ್ ...ರ್ಶನಿಕರು ಈ ಎಲ್ಲಾ ವೈವಿಧ್ಯತೆಯ ಹಿಂದೆ ಕೆಲವೇ ಕೆಲವು 'ಭೂತ'ಗಳು ಅಥವಾ ...ೂಲ ವಸ್ತುಗಳಿವೆ, ಇವು ಐದು ಇವೆ; ಈ 'ಪಂಚಭೂತ'ಗಳಿಂದಲೇ 'ಈ ಜಗತ್ತು' ಸೃಷ್ಟಿಯಾಗಿದೆ ಎಂದು ಹೇಳಿದರು! ಈ ಐದು ಭೂತಗಳೂ ಎಂತಹವು? ಪರಸ್ಪರ ವೈರುಧ್ಯಗಳಿಂದ ಕೂಡಿದಂತಹವು – ತಣ್ಣನೆ 'ನೀರು', ಸುಡುವ 'ಬೆಂಕಿ', ಚಲಿಸುವ 'ಗಾಳಿ', ಸ್ಥಿರ 'ನೆಲ' ಮತ್ತು ಅನಂತ 'ಆಕಾಶ'. ಸುಮಾರು ಮೂರು ಸಾವಿರ ವರ್ಷಗಳಷ್ಟು ಹಳೆಯ ಕಾಲದಲ್ಲಿ, ಸಹಸ್ರ ಸಹಸ್ರ ಕೋಟಿ ಬಗೆಯಲ್ಲಿ ಮೈದಾಳಿರುವ ಜೀವಿ, ಸಸ್ಯ, ಕಲ್ಲು, ನೆಲ ಇವೆಲ್ಲಾ ಕೇವಲ ಐದು ಮೂಲವಸ್ತುಗಳಿಂದ ಮಾಡಲ್ಪಟ್ಟಿವೆ ಎಂದು ಹೇಳಿದ್ದು ಇವತ್ತು ನಾವು ಜಗತ್ತಿನ ಸೃಷ್ಟಿಯ ಬಗ್ಗೆ ಹೇಳುವ 'ಮೂಲ ಕಣ'ಗಳ ಸಂಗತಿಯಷ್ಟೇ ರೋಮಾಂಚನಕಾರಿಯಾದುದು, ಅಲ್ಲವೆ? ಯೋಚಿಸಿ ನೋಡಿ.

ಆದರೆ ಈ ದಾರ್ಶನಿಕರು ಈ 'ಭೂತ'ಗಳು ಹೇಗೆ ಬಂದವು, ಅವುಗಳ ಒಳಗೆ ಏನಿದೆ, ಇತ್ಯಾದಿಗಳ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳಲಿಲ್ಲ. ಅವರು ಕಂಡ ಜಗತ್ತಿಗೆ ಅಷ್ಟು ಸಾಕಾಗಿತ್ತು. ಅದಕ್ಕೆ ಅವನ್ನು ಅವರು ಮೂಲವಸ್ತು ಅಂದರೆ ಮತ್ತೆ 'ವಿಭಜಿಸಲಾಗದ' ರೂಪಗಳು ಎಂದು ಹೇಳಿದರು. ಹಾಗೇ ಎರಡೂವರೆ ಸಾವಿರ ವರ್ಷಗಳಿಗೂ ಹಿಂದೆ, ಅಂದರೆ ಕ್ರಿಸ್ತಪೂರ್ವ ಐದುನೂರಕ್ಕೂ ಹಿಂದೆ ಗ್ರೀಕ್ ಚಿಂತನಕಾರರಾದ, ಗುರು ಶಿಷ್ಯ ಜೋಡಿ, ಲ್ಯೂಸಿಪಸ್ ಮತ್ತು ಡೆಮೊಕ್ರಿಟಸ್ ಅವರುಗಳು 'ಜಗತ್ತು' ಹಲವಾರು 'ಆ್ಯಟಮ್'ಗಳಿಂದ ಅಂದರೆ 'ವಿಭಜಿಸಲಾಗದ ಕಣ'ಗಳಿಂದ ಆಗಿದೆ ಎಂದರು. (ಈ 'ವಿಭಜಿಸಲಾಗದ ಕಣ'ಕ್ಕೆ ಗ್ರೀಕ್ ಭಾಷೆಯಲ್ಲಿ ಆ್ಯಟಮ್ ಎಂದು ಹೆಸರು.) (ಇವತ್ತು ನಾವು ಬಳಸುವ ಆ್ಯಟಮ್ ಪದ ಇದರಿಂದಲೇ ತೆಗೆದುಕೊಂಡದ್ದು.)

ವೈವಿಧ್ಯತೆಯ ಹಿಂದಿನ ಏಕತೆಯನ್ನು ಕಾಣುವ ಈ ಚಿಂತನಾ ಲಹರಿ ಪ್ರಾಚೀನ ಕಾಲದಿಂದಲೂ ಜ್ಞಾನದ ದಾರಿಯಲ್ಲಿ ಹರಿದುಬರುತ್ತಿದೆ. ಸತ್ಯಾನ್ವೇಷಣೆಯ ಮಾರ್ಗದಲ್ಲಿ ಇದು ಮಹತ್ತರ ಪಾತ್ರದ್ದಾಗಿದೆ.

ಆದರೆ ನಮಗೆ ಒಂದು ಎಚ್ಚರ ಇರಬೇಕು. ನಮ್ಮ ಪ್ರಾಚೀನರು ಎಷ್ಟೇ ಚೆನ್ನಾಗಿ ಹೇಳಿದ್ದರೂ, ಅದು 'ಅವರು ಕಂಡಿದ್ದ ಜಗತ್ತಿಗೆ' ಸೀಮಿತವಾದದ್ದು ಮತ್ತು 'ಅವರ ಜಗತ್ತು' ಇಂದು 'ನಾವು ಕಂಡಿರುವ ಜಗತ್ತಿಗಿಂತ' ಭಿನ್ನವೂ, ತಪ್ಪು ಕಲ್ಪನೆಯದ್ದೂ ಆಗಿತ್ತು

ಎನ್ನುವುದನ್ನು ನಾವು ಮನಗಾಣಬೇಕು. ಅವರ 'ಹೇಳಿಕೆ'ಗಳಲ್ಲಿ, 'ಕಾಣ್ಕೆ'ಗಳಲ್ಲಿ ಕೆಲವು ಸಾಮ್ಯಗಳು ಇಂದಿನ ನಮ್ಮ 'ವಿಜ್ಞಾನದ ಕಾಣ್ಕೆ'ಗಳಲ್ಲಿ ಕಾಣಬರಬಹುದು. ಆದರೆ ಅದಕ್ಕೆ ನಿಸರ್ಗದಲ್ಲಿ ಹುದುಗಿರುವ 'ಸಿಮಿಟ್ರಿ' ಅಥವಾ ಸಾಮ್ಯತೆಯ ಸೂತ್ರವೂ ಕಾರಣವಾಗಿರಬಹುದು. ಆದ್ದರಿಂದ ನಾವೀಗ ಕಂಡಿರುವುದನ್ನೆಲ್ಲಾ ನಮ್ಮ ಪೂರ್ವಿಕರು ಆಗಲೇ ಗ್ರಹಿಸಿದ್ದರು ಎಂಬ ಸರಳೀಕರಣ ಸಾಧುವಾದುದಲ್ಲ.

ನೋಡಿ, ಈಗ ಅವರ ಪ್ರಕಾರ ಭೂಮಿಯೇ ವಿಶ್ವದ ಕೇಂದ್ರವಾಗಿದ್ದು ಸೂರ್ಯ, ಚಂದ್ರ, ನಕ್ಷತ್ರಾದಿಗಳೆಲ್ಲಾ ಭೂಮಿಯ ಸುತ್ತಾ ತಿರುಗುತ್ತಿರುವುದಾಗಿ ನಂಬಿದ್ದರು. (ಇದು ಸಾಮಾನ್ಯ ಗ್ರಹಿಕೆಯ ಮಟ್ಟದಲ್ಲಿ ಕಾಣುವಂತಹದೂ ಆಗಿದೆಯಲ್ಲವೆ ?) ಮನುಷ್ಯ ಭೂಮಿಯಲ್ಲಿ ಒಮ್ಮೆಲೇ ಅವತರಿಸಿದ್ದು, ಜೀವಿಗಳೂ, ನಿರ್ಜೀವಿಗಳೂ ಬೇರೆ ಬೇರೆ. ಜೀವಿಯು ಚೈತನ್ಯ ರೂಪಿಯಾದರೆ, ನಿರ್ಜೀವಿ ಜಡ. ಜಡ ಬೇರೆ ಚೈತನ್ಯ ಬೇರೆ. ಜಗತ್ತು ಶಾಶ್ವತ ನೆಲೆಯಲ್ಲಿ ಸ್ಥಿರವಾಗಿದೆ. ಅಂದರೆ 'ಜಡಕ್ಕೆ ಸಾವಿಲ್ಲ' ಎಂದೆಲ್ಲಾ ನಂಬಿದ್ದರು. ಇವರ ಕಾಣ್ಕೆಗಳು ಮಾನವ ಸಮಾಜವನ್ನು ಹೆಚ್ಚು ಸುಸಂಸ್ಕೃತವಾಗಿ, ವೈಚಾರಿಕವಾಗಿ ಮಾಡುವಲ್ಲಿ ಸಹಕಾರಿಯಾಗಿದ್ದವು. ಆದರೆ ಸಮಾಜ ನಡೆಸುವ ನಾಯಕರು, ಧಾರ್ಮಿಕ ಮುಖಂಡರು, ಇವುಗಳನ್ನು ಅರ್ಥೈಸಿ ಹೇಳುವಲ್ಲಿ ಸೋತರು ಇಲ್ಲವೇ 'ವಂಚಿಸಿದರು' ಎಂದು ಹೇಳಿದರೆ ತಪ್ಪಾಗಲಾರದು. ಉದಾಹರಣೆಗೆ, ನಮ್ಮ ದೇಶದ ಇತಿಹಾಸವನ್ನೇ ನೋಡಿ: ''ಈಶಾ ವಾಸ್ಯಮಿದಂ ಸರ್ವಂ'', ''ಸರ್ವಂ ಖಲ್ವಿದಂ ಬ್ರಹ್ಮ'' ಎಂಬಂತಹ ಕಾಣ್ಕೆಗಳು. ಇವುಗಳ ಅರ್ಥ ''ಎಲ್ಲದರಲ್ಲಿಯೂ ಎಲ್ಲೆಲ್ಲಿಯೂ ಈಶ್ವರ/ಬ್ರಹ್ಮ/ದೇವರು ಇದ್ದಾನೆ'' ಎಂತ. ದೇವರು ಸರ್ವಶಕ್ತ, ಸರ್ವಾಂತರ್ಯಾಮಿ. ಆದರೆ, ಈ ಮಾತು ಜನಸಾಮಾನ್ಯರ ಪ್ರಜ್ಞೆಯೊಳಗೆ ಇಳಿಯಬೇಕಾದ ರೀತಿಯಲ್ಲಿ ಇಳಿಯಲೇ ಇಲ್ಲ. ಇದನ್ನು ಗಮನಿಸಿದ ಕೆಲ ಜ್ಞಾನಿಗಳು ಇವುಗಳನ್ನು ಪ್ರಜ್ಞೆಗೆ ಇಳಿಸಿಕೊಳ್ಳಲು ಸಹಾಯಕವಾಗುವ ಹಾಗೆ ಕೆಲ ಪೌರಾಣಿಕ ಕಥೆ, ಕಲ್ಪನೆಗಳನ್ನು ಸೃಷ್ಟಿಮಾಡಿ ಹೇಳಿದರು. ದುರಂತವೆಂದರೆ, ಈ ಕಲ್ಪನೆಗಳಲ್ಲಿರುವ ಸಂಕೇತಗಳನ್ನು ಅರ್ಥೈಸುವುದು ಬಿಟ್ಟು ಸಂಕೇತವನ್ನೇ ವಾಸ್ತವ ರೂಪವನ್ನಾಗಿ ಮಾಡಿಕೊಂಡು, ಮುಗ್ಧವಾಗಿ ಮೂಢವಾಗಿ ಜನ ಆರಾಧಿಸಲು ಪ್ರಚೋದಿಸಿದವರು ಧಾರ್ಮಿಕ ಮುಖಂಡರು. ಉದಾಹರಣೆಗೆ, ಪ್ರಹ್ಲಾದನ ಕಥೆ ತಗೊಳ್ಳಿ. ಹಿರಣ್ಯಕಶ್ಯಪು ತನ್ನ ಪ್ರಹ್ಲಾದನಿಗೆ ''ಹರಿ ಎಲ್ಲಿದ್ದಾನೆ ?'' ಎಂದು ಪ್ರಶ್ನಿಸಿದಾಗ ಪ್ರಹ್ಲಾದ ''ಹರಿ ಎಲ್ಲೆಲ್ಲೂ ಇದ್ದಾನೆ'' ಅನ್ನುತ್ತಾನೆ. ''ಅಲ್ಲಿರುವನೋ, ಇಲ್ಲಿರುವನೋ'' ಅಂದು ಕಂಭದಲ್ಲಿದ್ದಾನೋ'' ಎನ್ನುತ್ತಾನೆ ಕಶ್ಯಪು (ಕಂಭ ನಿರ್ಜನವಾದ ಕಲ್ಲು, ಮಣ್ಣುಗಳ ಮಾಡಿರುವಂತಹುದಲ್ಲವೆ ?) ''ಹೌದು, ಅದರಲ್ಲಿ ಅಷ್ಟೇ ಅಲ್ಲ, ಅಣು, ರೇ ತೃಣ, ಕಾಷ್ಠಗಳಲ್ಲೆಲ್ಲಾ ಇದ್ದಾನೆ'' ಎಂದು ಪ್ರಹ್ಲಾದ ನುಡಿದಾಗ ಕಶ್ಯಪು ತನ್ನ ಗದೆಯಿ ಕಂಭವನ್ನು ಒಡೆಯುತ್ತಾನೆ. ಆಗ ಅದರಿಂದ 'ನರಸಿಂಹ' (ಈ ರೂಪ ಕಥ ವ್ಯಾಖ್ಯಾನಕ್ಕೆ ಸರಿ ಹೊಂದಲು ಜಾಣ್ಮೆ ಉಪಯೋಗಿಸಿ ಮಾಡಿದ್ದಾಗಿದೆ) (=ಶಕ್ತಿ) ಹ ಬರುತ್ತಾನೆ. 'ಹರಿಯ ವಿರೋಧಿ ನಿಲುವು', 'ದೈವ ವಿರೋಧಿ ನಿಲು ನಾಶವಾಗುತ್ತದೆ. ದೈವಶಕ್ತಿ ಸ್ಥಾಪಿತವಾಗುತ್ತದೆ. ಈ ಕಥೆಯಿಂದ ನಾವು ಭಗವಂತನಿ ವಸ್ತುವೇ ಇಲ್ಲ ಎಂಬ ಭಾವ ಮೂಡಿಸಿಕೊಳ್ಳಬೇಕಾಗಿತ್ತು. ಇದು ನಮ್ಮ ಪ್ರಜ್ಞೆಯೊ ಇಳಿಯಬೇಕಾಗಿತ್ತು. ಹಾಗಾದಾಗ ಎಂತೆಂತಹ ವಸ್ತುವಿನಲ್ಲೂ ಇರುವ ದೇವ 'ಜೀವಿಗಳಲ್ಲಿ ಶ್ರೇಷ್ಠನಾದ(?)ಮನುಷ್ಯನ ಮನಸ್ಸಿನಲ್ಲೂ' ಇದ್ದಾನೆ ಎ ಭಾವಿಸಬೇಕಾಗಿತ್ತು. ಎಲ್ಲಾ ಮನುಷ್ಯರಲ್ಲೂ ಅದೇ ದೇವರು ಇದ್ದಾಗ ಮನುಷ್ಯ ಉಚ್ಚ, ನೀಚ, ಕುಲ ಎಂಬುದು ಉತ್ಪತ್ತಿ ಆಗಲೇಬಾರದಿತ್ತು. ಹಾಗೇ ದೇವರು ಕೇ ಪೂಜಾ ಸ್ಥಳಗಳಲ್ಲಿ ಮಾತ್ರ ಇಲ್ಲ, ಎಲ್ಲೆಲ್ಲಿಯೂ ಇರುತ್ತಾನೆ ಎಂಬು ತಿಳಿಯಬೇಕಾಗಿತ್ತು. ಆದರೆ ನಮ್ಮ ದೇಶದ ಸಾಮಾಜಿಕ, ಸಾಂಸ್ಕೃತಿಕ ಇತಿಹಾಸ ರೀತಿ ಭಾವನೆಗೆ ವಿರುದ್ಧವಾಗಿ ಸಾಗಿಬಂದಿರುವುದು ಗೋಚರವಾಗುತ್ತದೆ. ಇ ರಾಜಕೀಯ, ಸ್ವಾರ್ಥಪರ ನಡವಳಿಕೆಗಳು ಕಾರಣವಾಗಿದ್ದೂ ಅಲ್ಲದೆ ವೈಚಾರಿ ಅರಳುವ ರೀತಿಯಲ್ಲಿ ಸಾಮಾನ್ಯ ಶಿಕ್ಷಣ ರೂಪಿತವಾಗದೆ ಇದ್ದುದೂ ಕಾರಣ.

ಪ್ರಾಚೀನ ವಿಜ್ಞಾನದ ಪ್ರಖರತೆ, ಮತಧರ್ಮಗಳಿಂದಾಗಿ ಕುಂಠಿತಗೊಂಡಿ ಪ್ರಶ್ನಿಸುವ ಮನೋಭಾವನೆ ತಪ್ಪು ಎಂದು ಹೇಳಲಾಯಿತು. ಗುರು ಹಿರಿಯ ಹೇಳಿದ್ದಕ್ಕೆ ಪ್ರತಿ ಆಡದೆ ಗುಲಾಮರಂತಿರುವದೇ ದೊಡ್ಡ ನಡವಳಿಕೆಯ ಬಿಂಬಿಸಲಾಯಿತು. 'ರಾಜನೆಂದೂ ತಪ್ಪು ಮಾಡುವುದಿಲ್ಲ', 'ಧಾರ್ಮಿಕ ಮುಖಂಡ


ನಮ್ಮ ಇತ್ತೀಚಿನ ಪುಸ್ತಕಗಳು


ರೂ. 90



ರೂ. 80


ರೂ. 130


ರೂ. 65


ರೂ. 85


ರೂ. 100



ವಸಂತ ಪ್ರಕಾಶನ
ನಂ.60, ಮೊದಲನೇ ಮಹಡಿ, 10 'ಬಿ' ಮುಖ್ಯರಸ್ತೆ
3ನೇ ಬ್ಲಾಕ್, ಜಯನಗರ, ಬೆಂಗಳೂರು – 560 011
ದೂರವಾಣಿ : 22443996 ಮೊಬೈಲ್: 98440 98336



ರೂ. 130

ದೇವರ ಪ್ರತಿನಿಧಿಗಳು' ಇತ್ಯಾದಿಗಳಿಗೆ ಮಹತ್ವ ಬಂದು, ವಿಜ್ಞಾನ ಮೂಲೆ ಗುಂಪಾಯಿತು. ಪ್ರಾಚೀನ ವಿಜ್ಞಾನ ಎಲ್ಲಿತ್ತೋ ಅಲ್ಲೇ ನಿಂತುಬಿಟ್ಟಿತು. ಭಾರತದ ಮಟ್ಟಿಗಂತೂ ವಿಜ್ಞಾನ ಮರೆತೇಹೋಯಿತೇನೋ ಎನ್ನುವ ಸ್ಥಿತಿ ತಲುಪಿತು.

ಪಾಶ್ಚಾತ್ಯ ದೇಶಗಳಲ್ಲೂ ಮತಧರ್ಮಗಳವರದೇ ಮೇಲುಗೈ ಆಗಿತ್ತು. ಇವರು ಸೃಷ್ಟಿಯಂತೆ ದೃಷ್ಟಿ'ಯನ್ನು ರೂಪಿಸಿಕೊಳ್ಳದೆ ತಮ್ಮ ದೃಷ್ಟಿಯಂತೆ ಸೃಷ್ಟಿಯನ್ನು ಸೃಜಿಸಿದ್ದರು. ಹೀಗಾಗಿ ವಿಶ್ವದ ಬಗೆಗಿನ ನಿಜ ಅರಿವಿನ ಮಾರ್ಗ ಸಾವಿರಾರು ವರ್ಷಗಳವರೆಗೆ ಮನುಷ್ಯನ ಅಳಿವಿಗೆ ಸಿಗದಂತಾಗಿತ್ತು. ಅಧ್ಯಾತ್ಮವಾದಿಗಳು ಎತ್ತಿದ್ದ ಅನೇಕ ಮೂಲಭೂತ ಪ್ರಶ್ನೆಗಳಿಗೆ ಉತ್ತರ ಸಿಗದೆ, ಕಂಡ ಕಾಣ್ಕೆಗಳಿಗೆ ಪ್ರಗತಿ ಸಿಗದೆ ಮನುಷ್ಯ ಭ್ರಮಾಧೀನನಾಗುವಂತೆ ಆಗಿತ್ತು. ಸಾಮಾನ್ಯ ಜನರ ತಿಳುವಳಿಕೆಯ ಮಟ್ಟದ ಬಗ್ಗೆಯಂತೂ ಹೇಳುವುದೇ ಬೇಡ, ತೀರಾ ವಿಷಾದನೀಯ ಸ್ಥಿತಿಯಲ್ಲಿತ್ತು (ಈಗಲೂ ಏನು ಕಡಿಮೆ ಅಂತೀರಾ ?). ಸುಮಾರು ಐದು ನೂರು ವರ್ಷಗಳ ಹಿಂದೆ, ಹದಿನಾರನೇ ಶತಮಾನದಲ್ಲಿ ಮಾತ್ರ ಮೊದಲ ಬಾರಿಗೆ 'ಸಿದ್ಧ ಸಿದ್ಧಾಂತ'ಗಳನ್ನು, 'ಧಾರ್ಮಿಕ ನಂಬಿಕೆ'ಗಳನ್ನು, ತಲೆಕೆಳಗು ಮಾಡುವ ಸಂಗತಿಗಳು ನಡೆದವು. ಸಾವಿರಾರು ವರ್ಷಗಳಿಂದ 'ಭೂಮಿಯೇ ವಿಶ್ವದ ಕೇಂದ್ರ, ಸೂರ್ಯ ಚಂದ್ರ ನಕ್ಷತ್ರಗಳು ಭೂಮಿಯ ಸುತ್ತಾ ತಿರುಗುತ್ತಿವೆ' ಎಂಬ 'ಸಿದ್ಧ ಸಿದ್ಧಾಂತ' ಧಾರ್ಮಿಕ ನಂಬಿಕೆಯೂ ಆಗಿದ್ದರಿಂದ 'ಪ್ರಶ್ನಾತೀತ' ವಾಗಿತ್ತು. ಆದರೆ ಮೊದಲ ಬಾರಿಗೆ ಧಾರ್ಮಿಕ ಅಧಿಕಾರಿಯೇ ಆಗಿದ್ದ ನಿಕೊಲಾಸ್ ಕೊಪರ್ನಿಕಸ್ 'ಸೂರ್ಯ ವಿಶ್ವದ ಕೇಂದ್ರವಾಗಿ ಸ್ಥಿರವಾಗಿ ನೆಲೆಸಿದ್ದು ಇದರ ಸುತ್ತಾ ಎಲ್ಲಾ ಗ್ರಹಗಳೂ ಚಲಿಸುತ್ತವೆ. ಅಲ್ಲದೆ ಭೂಮಿಯು ತನ್ನ ಅಕ್ಷದ ಸುತ್ತಾ ೨೪ ಗಂಟೆಗಳಿಗೊಮ್ಮೆ ತಿರುಗುತ್ತಿದೆ. ಇದರಿಂದಾಗಿ ಹಗಲು-ರಾತ್ರಿಗಳು ಸಂಭವಿಸುತ್ತವೆ' ಎಂದು ತಿಳಿಸಿಬಿಟ್ಟ! ಆ ಕಾಲದಲ್ಲಿ (ಏಕೆ, ಈ ಕಾಲದಲ್ಲಿ ಕೂಡ ಕೆಲವರಿಗೆ) ಭೂಮಿ ತಿರುಗುತ್ತಿದೆ ಎಂಬುದು ನಂಬಲು ಅಸಾಧ್ಯವಾಗಿತ್ತು. ಆದರೆ ಕೊಪರ್ನಿಕಸ್ ರೂಪಿಸಿದ 'ವಿಶ್ವಮಾದರಿ' ಹಬ್ಬ ಹರಿದಿನ ಗಳನ್ನು, ವ್ಯವಸಾಯಕ್ಕೆ ಅನುಕೂಲಕರ ದಿನಗಳನ್ನು , ಲೆಕ್ಕ ಹಾಕಲು ಸಹಕಾರಿಯಾಗಿತ್ತು. ಮೇಲಾಗಿ ಆತ ಧಾರ್ಮಿಕನೂ ಆಗಿದ್ದುದರಿಂದ ಅವನ ಸಿದ್ಧಾಂತದ ಬಗ್ಗೆ ಕಟು ವಿರೋಧ ವ್ಯಕ್ತವಾಗಲಿಲ್ಲ. ಆದರೆ ಇವನು ಬರೆದಿದ್ದ ಈ ಬಗೆಗಿನ ಗ್ರಂಥ ಪ್ರಕಟಗೊಂಡಿದ್ದು ಮಾತ್ರ ಇವನು ಸತ್ತ ನಂತರವೇ.



ಇವನ ನಂತರ ಇಟಲಿಯಲ್ಲಿ ಗೆಲಿಲಿಯೊ ಈ ನಿಟ್ಟಿನಲ್ಲಿ ಹೆಚ್ಚಿನ ರೀತಿಯಲ್ಲಿ ಕೆಲಸ ಮಾಡಿದ. ಭೌತ ವಸ್ತುಗಳ ಚಲನೆಯ ಬಗೆಗೆ ಪ್ರಯೋಗಗಳನ್ನು ಮಾಡಿ, ಅರಿಸ್ಟಾಟಲ್ ಹೇಳಿದ್ದೆಲ್ಲಾ ಸತ್ಯವಲ್ಲ ಎಂದು ತೋರಿಸಿದ. ದೂರದರ್ಶನವನ್ನು ಬಳಸಿ ಖಗೋಳ ವೀಕ್ಷಣೆ ಮಾಡಿ ಕೊಪರ್ನಿಕಸ್ ಸಿದ್ಧಾಂತವನ್ನು ಬದಲಿಸಿದ. ಇದರಿಂದಾಗಿ ಧಾರ್ಮಿಕ ಅಧಿಕಾರಿಗಳಿಂದ ಖಂಡನೆಗೆ ಒಳಗಾಗಿ 'ಗೃಹ ಬಂಧನದಲ್ಲಿ' ಇದ್ದದು ಈಗ ದಂತಕಥೆಯಾಗಿ ನಮ್ಮ ಮುಂದಿದೆ. ಎಲ್ಲಕ್ಕಿಂತ ಮುಖ್ಯವಾಗಿ ವಿಜ್ಞಾನದಲ್ಲಿ ಪ್ರಯೋಗಗಳು ಪ್ರಾಮುಖ್ಯತೆ ಪಡೆಯಲು ಮತ್ತು ಏನೇ ಸಿದ್ಧಾಂತವನ್ನು ಎಷ್ಟೇ ತಾರ್ಕಿಕವಾಗಿ ಮಂಡಿಸಿದರೂ ಅದು ಪ್ರಯೋಗದ ಮೂಲಕ ಸಿದ್ಧವಾಗದ ಹೊರತು ನಂಬಿಕೆಗೆ ಅರ್ಹವಾಗುವುದಿಲ್ಲ ಎಂಬ ಕಠಿಣ ಕಟ್ಟುಪಾಡನ್ನು ವಿಜ್ಞಾನ ತನಗೆ ತಾನೆ ವಿಧಿಸಿಕೊಂಡು ಮುಂದುವರಿಯಲು ಇವನ ಕೆಲಸಗಳು ನಾಂದಿಯಾದವು.

ನಂತರ ಜೊಹಾನ್ ಕೆಪ್ಲರ್ ಗ್ರಹಗಳ ಚಲನೆಯನ್ನೂ ಚಲಿಸುವ ಪಥವನ್ನೂ, ಅದಕ್ಕೆ ತೆಗೆದುಕೊಳ್ಳುವ ಸಮಯವನ್ನೂ ಮತ್ತು ವೇಗವನ್ನೂ ತುಂಬಾ ಕರಾರು ವಾಕ್ಕಾಗಿ ರೂಪಿಸಿದ. ಈಗಲೂ ಇವು 'ಕೆಪ್ಲರ್ ನಿಯಮ'ಗಳೆಂದೇ ಕರೆಯಲ್ಪಡುತ್ತಿವೆ. ಇವೇ ಮುಂದೆ ನ್ಯೂಟನ್‌ಗೆ ಗುರುತ್ವಾಕರ್ಷಣೆ ಸಿದ್ಧಾಂತ ರೂಪಿಸಲೂ ನೆರವಾದವು.

ವಿಜ್ಞಾನ ಪ್ರಖರಗೊಂಡು ಪ್ರಭಾವ ಬೀರಲು ತೊಡಗಿದ್ದು, ಮತ್ತು ಸಿದ್ಧಾಂತ – ಪ್ರಯೋಗಗಳು ಏಕೀಭವಿಸುವ ವಿಧಾನ ಹೆಚ್ಚು ಸ್ಪಷ್ಟವಾಗಿದ್ದು, ನ್ಯೂಟನ್ ಮಾಡಿದ ಕೆಲಸಗಳಿಂದ. ಬೆಳಕಿನಲ್ಲಿರುವ ಏಳು ಬಣ್ಣಗಳನ್ನು ಪ್ರಿಸಂ ಮೂಲಕ ಹಾಯಿಸಿ ತೋರಿಸಿದ ಹಾಗೆ ಅವನು ವಿಜ್ಞಾನದ ವಿವಿಧ ಶಾಖೆಗಳಲ್ಲಿ ತನ್ನ ಪ್ರತಿಭೆಯನ್ನು ಬೆಳಗಿದ, ಹೊಸ ಗಣಿತ ಶಾಸ್ತ್ರವನ್ನು ಸೃಷ್ಟಿಸಿದ. ಅದರಿಂದ ವಸ್ತುಗಳ ಚಲನೆಯನ್ನು ಲೆಕ್ಕ ಹಾಕುವುದನ್ನು ತೋರಿಸಿದ. ಚಲನೆಯ ನಿಯಮಗಳನ್ನು ರೂಪಿಸಿದ. ಇವೇ ಮುಂದೆ ತಂತ್ರಜ್ಞಾನಕ್ಕೆ ಇಂಬಾಗಿರುವುದು ಮತ್ತು ದಿನನಿತ್ಯ ಪ್ರಪಂಚದ ಎಲ್ಲಾ ಚಲನೆಗಳನ್ನೂ ವಿವರಿಸಬಲ್ಲದಾಗಿ ಇರುವುದೂ ಗೊತ್ತಿರುವ ವಿಷಯವೇ ಆಗಿದೆ. ಗುರುತ್ವಾಕರ್ಷಣೆಯ ಸಿದ್ಧಾಂತ ರೂಪಿಸಿ ಭೂಮಿಯ ಕಣ ಕಣವನ್ನು ಜಗತ್ತಿಗೆ ಸಂಬಂಧಿಸುವಂತೆ ಮಾಡಿದ್ದು ಅವನ ಮಹತ್ವದ ಸಾಧನೆಗಳಲ್ಲಿ ಒಂದು (ಇದಕ್ಕೆ 'ಸೇಬು ತಲೆ ಮೇಲೆ ಬಿದ್ದ' ಕಥೆಯೊಂದನ್ನು ಸೃಷ್ಟಿಸಲಾಗಿದೆ). ಈ ಗುರುತ್ವ ಬಲವು ನೈಸರ್ಗಿಕ ಬಲವಾಗಿದ್ದು ಇದಕ್ಕೆ ವಸ್ತುವಿನಲ್ಲಿ ಇರುವ ದ್ರವ್ಯರಾಶಿಯೇ ಮೂಲವಾಗಿದೆ. ಒಂದು ವಸ್ತು ಎಷ್ಟೆಷ್ಟು ಹೆಚ್ಚು ದ್ರವ್ಯರಾಶಿ (ಅಥವಾ ಸಾಮಾನ್ಯ ಭಾಷೆಯಲ್ಲಿ ತೂಕ) ಹೊಂದಿರುತ್ತದೋ ಅಷ್ಟಷ್ಟು ಗುರುತ್ವದ ಬಲ ಹೆಚ್ಚಿರುತ್ತದೆ. ಇದರ ಪ್ರಕಾರ ಪ್ರತಿಯೊಂದು ವಸ್ತುವೂ ಮತ್ತೊಂದು ವಸ್ತುವನ್ನು ಆಕರ್ಷಿಸುತ್ತದೆ. ಈ ಆಕರ್ಷಕ ಬಲವು ವಸ್ತುಗಳ ತೂಕವನ್ನಷ್ಟೆ ಅಲ್ಲದೆ ಅವುಗಳ ನಡುವಿನ ಅಂತರದ ಮೇಲೆ ಇನ್ನೂ ಹೆಚ್ಚು ಅವಲಂಬಿತವಾಗಿರುತ್ತದೆ ಮತ್ತು ಈ ಬಲ ಸರ್ವವ್ಯಾಪಿಯಾಗಿರುತ್ತದೆ ಎಂದೂ ತಿಳಿದುಬಂತು.

ನ್ಯೂಟನ್ ಸಿದ್ಧಾಂತದಲ್ಲಿ 'ಅವಕಾಶ' ಅಂದರೆ 'ಸ್ಪೇಸ್' (space ಜಾಗ) 'ದೇವ' ನಿರ್ಮಿತವಾದದ್ದು. ಆದ್ದರಿಂದ ಅದು ಸ್ಥಿರ, ಪರಿಪೂರ್ಣ – ನ್ಯೂಟನ್ ದೃಷ್ಟಿಯಲ್ಲಿ absolute. ಈ 'ಜಾಗ'ದಲ್ಲಿ ಚಲಿಸುವ ವಸ್ತು, ಅದು ಕ್ರಮಿಸುವ ದೂರ, ದಿಕ್ಕು, ತಲುಪುವ ಗುರಿ, ಅದಕ್ಕೆ ಬೇಕಾಗುವ ಸಮಯ ಇತ್ಯಾದಿ ಗಳನ್ನೆಲ್ಲಾ ನಿರ್ದಿಷ್ಟವಾಗಿ ನಿಖರವಾಗಿ ನಿರ್ಧರಿಸ ಬಹುದು. ಹಾಗಾಗಿ ಕಾಲ, ಅವಕಾಶಗಳು ಅನಾದಿ ಅನಂತ ಎನಿಸಿದವು, 'ಅಬ್ಸಲ್ಯೂಟ್' ಎನಿಸಿದವು. ಇಂತಹ ವಿಶ್ವ ಮಾದರಿ ಕೆಲವು ಭೌತ ಸಂಗತಿಗಳಿಗೆ ಉತ್ತರವನ್ನು ನೀಡಬಲ್ಲು ದಾಗಿದ್ದರೂ ಹಲವಾರು ನ್ಯೂನತೆಗಳನ್ನು ಹೊಂದಿತ್ತು. ಮುಖ್ಯವಾಗಿ ಅದು ಹಳೆಯ ಪ್ರಶ್ನೆ ಗಳಾದ ''ನಾವು ಯಾರು ?'', ''ನಾವು ಎಲ್ಲಿಂದ ಬಂದೆವು ?'', ''ಇಲ್ಲಿ ಏಕೆ ಇದ್ದೇವೆ ?'' ಮುಂತಾದ ಪ್ರಶ್ನೆಗಳಿಗೆ, ಅಂದರೆ ಜೀವಿಗೂ, ಜಗತ್ತಿಗೂ ಇರುವ ಸಂಬಂಧದ ಬಗ್ಗೆ ಉತ್ತರ ಹೇಳುವಲ್ಲಿ ಸೋತಿತ್ತು. ಈ ವಿಶ್ವಮಾದರಿಯಲ್ಲಿ ನಕ್ಷತ್ರಗಳ ಅಸ್ತಿತ್ವವನ್ನು ವಿವರಿಸುವುದು ಸಾಧ್ಯವಿರಲಿಲ್ಲ. 'ಎಲ್ಲವೂ ಕರ್ತಾರನ ಕಮ್ಮಟ'ವಾಗಿತ್ತು!

ಈ ಎಲ್ಲಕ್ಕೂ ಉತ್ತರಿಸಬಲ್ಲ ಶಕ್ತಿಯನ್ನು ವಿಜ್ಞಾನ ಪಡೆದುಕೊಳ್ಳಲು ಸಾಧ್ಯವಾಗಿದ್ದು 'ಕಣ ಸಿದ್ಧಾಂತ'ದಿಂದ ಎಂದು ಹೇಳಬಹುದು. ಇದು ಜಗತ್ತಿನ ಪ್ರತಿ ವಸ್ತುವೂ ಅಂದರೆ ಜಡ-ಜೀವ-ಆಕಾಶಕಾಯಗಳೆಲ್ಲವೂ ಕೆಲವೇ ಬಗೆಯ ಕಣಗಳಿಂದಾಗಿವೆ ಎಂದು ಪ್ರತಿಪಾದಿಸುತ್ತದೆ. (ಲ್ಯೂಸಿಸನ್ ಡೆಮಾಕ್ರಿಟಸ್ ನೆನಪಿಗೆ ಬರುತ್ತಾರಲ್ಲವೆ ?). ಈ ಸಿದ್ಧಾಂತ ನಡೆದುಬಂದ ದಾರಿ ಅತ್ಯಂತ ರೋಚಕವಾದುದು. ಹಾಗೆ ನೋಡಿದರೆ ಆಧುನಿಕ ಭೌತವಿಜ್ಞಾನವೆಲ್ಲವೂ ಇದರ ಕಥೆಯೇ ಆಗಿದೆ. ಆದ್ದರಿಂದ ಅದೆಲ್ಲವನ್ನೂ ವಿವರಿಸಲು ಹೋಗದೆ ಕೇವಲ ಸಾರಾಂಶ ರೂಪದಲ್ಲಿ, ತೀರಾ ಸರಳವಾಗಿ ಹೇಳಲು ಪ್ರಯತ್ನಿಸುತ್ತೇನೆ.

ಒಂದು ವಸ್ತುವನ್ನು, ಉದಾಹರಣೆಗೆ, ನೀರನ್ನು ತೆಗೆದುಕೊಳ್ಳೋಣ (ನೀರು ಪ್ರಾಚೀನ ಕಾಲದ ಮೂಲಭೂತ ವಸ್ತುಗಳಲ್ಲಿ ಒಂದಲ್ಲವೆ ?) ಇದನ್ನು ವಿಭಜಿಸುತ್ತಾ ಹೋದರೆ ಒಂದು ಅತಿ ಸೂಕ್ಷ್ಮ ಹಂತಕ್ಕೆ ಬರುತ್ತೇವೆ. ಅದು ತೀರಾ ತೀರಾ ಹಗುರವಾದ 'ನೀರಿನ ಕಣ'ವಾಗಿ ಉಳಿದಿರುತ್ತದೆ. ಇದು ಒಂದು ರವೆ ಕಾಳಿಗಿಂತ ರವೆಯಷ್ಟು ಅಂದರೆ ಒಂದು 'ಅಣು'ವಿನಷ್ಟು ಇರುತ್ತದೆ ಎನ್ನುವ ಭಾವದಿಂದ ಇದನ್ನು 'ಅಣು' ಎಂದು ನಮ್ಮ ಭಾಷೆಯಲ್ಲಿ ಗುರುತಿಸಬಹುದು. ವಿಜ್ಞಾನದ ಪರಿಭಾಷೆಯಲ್ಲಿ ಈ ಕಣಕ್ಕೆ ಮಾಲಿಕ್ಯೂಲ್ ಎನ್ನುತ್ತಾರೆ (ಲ್ಯಾಟಿನ್ ಭಾಷೆಯಲ್ಲಿ Moles ಅಂದರೆ Mass – ದ್ರವ್ಯರಾಶಿ ಎಂದರ್ಥ. ಇದು ಸೂಕ್ಷ್ಮ, ಹಗುರ ಕಣವಾದ್ದರಿಂದ Molecule ಅಂದರು.)

ಇಂತಹ ನೀರಿನ ಮಾಲಿಕ್ಯೂಲ್‌ನಲ್ಲೂ ಕೆಲವು ಕಣಗಳಿರುವುದನ್ನು ಹದಿನೆಂಟು ಮತ್ತು ಹತ್ತೊಂಬತ್ತನೇ ಶತಮಾನದ ಆದಿಭಾಗದಲ್ಲಿ ರಸಾಯನಶಾಸ್ತ್ರದವರು

ಪತ್ತೆಹಚ್ಚಿದರು. ಅಣುವಿಗಿಂತ ಅಣುವಾದ ಈ ಕಣಗಳು 'ಪರಮ ಅಣು'ಗಳು, 'ಪರಮಾಣು'ಗಳು. ನೀರಿನ ಅಣುವಿನಲ್ಲಿ ಎರಡು ಜಲಜನಕ ಮತ್ತು ಒಂದು ಆಮ್ಲಜನಕ ಪರಮಾಣುಗಳಿವೆ ಎಂಬುದು ತಿಳಿಯಿತು. ಆದ್ದರಿಂದ ನೀರಿನ ಅಣುವನ್ನು $H_2O$ ಎಂದು ಗುರುತಿಸಲಾಯಿತು. ಈ ಪರಮಾಣುಗಳು ಗಟ್ಟಿಗೋಲಿಗಳಂತಿದ್ದು ಮತ್ತೆ ವಿಭಜಿಸಲಾಗದಂತಿವೆ ಎಂದು ನಿರ್ಧರಿಸಿದರು. ಹೀಗಾಗಿ ಇದುವರೆಗೆ ಹಾಗೆ ಹೀಗೆ ಕೇವಲ ಕಲ್ಪನೆ, ತಾತ್ವಿಕತೆಯಲ್ಲೆ ಉಳಿದಿದ್ದ 'ಕಣ ಸಿದ್ಧಾಂತ' ಈಗ ವಾಸ್ತವತೆ ತಳೆದು ಧುತ್ತೆಂದು ಎದುರಿಗೆ ನಿಂತಂತಾಯಿತು. ಹಾಗಾಗಿ ಈ ಪರಮಾಣುವಿಗೆ – ವಿಭಜಿಸಲಾಗದ ಕಣಕ್ಕೆ – 'ಆ್ಯಟಮ್' ಎಂದೇ ಕರೆದರು. ಇದು ಮೂಲ ಕಣವಾಯಿತು. ಅಂದರೆ ವಸ್ತುವು ಏಕವಾಗಿರದೆ, ಕಣಗಳಿಂದ ಕಟ್ಟಲ್ಪಟ್ಟಿದೆ ಎಂದು ಭಾವಿಸಲಾಯಿತು.

ಇದರಿಂದಾಗಿ ನೀರು ಎಂಬುದು ಪ್ರಾಚೀನರ ಕಲ್ಪನೆಯಂತೆ 'ಮೂಲಭೂತ ವಸ್ತು' ಅಲ್ಲ ಎಂದು ಸಿದ್ಧವಾಯಿತು. (ಹಾಗೇ ಉಳಿದ 'ಭೂತ'ಗಳೂ ಕೂಡ ವಿವಿಧ ಪರಮಾಣುಗಳ ಮಿಶ್ರಣ ಎಂಬುದೂ ತಿಳಿಯಿತು.) ಹೀಗೆ ಈ 'ಪಂಚಭೂತ'ಗಳ ಜಾಗದಲ್ಲಿ ಹಲವಾರು ಬಗೆಯ ಪರಮಾಣುಗಳು ಬಂದವು. ಪ್ರಯೋಗಗಳಿಂದ ಪುಷ್ಟೀಕರಿಸಿದ ಈ ರಾಸಾಯನಿಕ ಅಧ್ಯಯನಗಳನ್ನೆಲ್ಲಾ ಕ್ರೋಡೀಕರಿಸಿ ಇಂಗ್ಲೆಂಡಿನ ಜಾನ್ ಡಾಲ್ಟನ್ (೧೮೦೮ರಲ್ಲಿ ತನ್ನ New Systems of Chemical Philosophy ಎಂಬ ಗ್ರಂಥದ ಮೂಲಕ) 'ಆ್ಯಟಾಮಿಕ್ ಥಿಯರಿ – 'ಪರಮಾಣು ಸಿದ್ಧಾಂತ'ವನ್ನು ಪ್ರತಿಪಾದಿಸಿದ. ನಂತರ ವಿಜ್ಞಾನಿಗಳು ''ಎಲ್ಲಾ ವಸ್ತುಗಳೂ ಪರಮಾಣುಗಳಿಂದಲೇ ಆಗಿವೆ'' ಎಂಬುದನ್ನು ಸ್ವೀಕರಿಸಿ ಮುನ್ನಡೆದು ಪ್ರಗತಿ ಸಾಧಿಸಿದರು. ಹೀಗೆ ಪರಮಾಣುಗಳು ಪಕ್ಕಾ ಆಗಿ ನೆಲೆ ನಿಂತವು.

ಆದರೆ ಹತ್ತೊಂಬತ್ತನೇ ಶತಮಾನದ ಕೊನೆ ಭಾಗದಲ್ಲಿ ಒಂದು ಅಸಾಮಾನ್ಯ ತಿರುವು ಬಂತು. ೧೮೯೭ರಲ್ಲಿ ಇಂಗ್ಲೆಂಡಿನಲ್ಲಿ ಜೆ. ಜೆ. ಥಾಮ್ಸನ್ ಅವರು ಎಲ್ಲಾ ಬಗೆಯ ಅನಿಲಗಳಲ್ಲೂ ಒಂದೇ ಬಗೆಯ 'ಋಣ ವಿದ್ಯುತ್ ಕಣ' ಇರುವುದನ್ನು ಕಂಡುಹಿಡಿದರು. ಇದು ವಿದ್ಯುಚ್ಛಕ್ತಿ (ಎಲೆಕ್ಟ್ರಿಸಿಟಿ)ಯನ್ನು ಸಾಗಿಸುವ 'ಚಾರ್ಜ್'ಗಳ ಕನಿಷ್ಠ ಮೊತ್ತ(ಯೂನಿಟ್)ದಷ್ಟೇ ವಿದ್ಯುತ್ತನ್ನು ಹೊಂದಿತ್ತು. ಹೀಗಾಗಿ ಈ ಕಣಕ್ಕೆ 'ಎಲೆಕ್ಟ್ರಾನ್' ಎಂದು ಹೆಸರಿಸಲಾಯಿತು. ಇದು ಅತಿ ಹಗುರಾದ ಪರಮಾಣು ಜಲಜನಕದ ತೂಕಕ್ಕಿಂತ ಸುಮಾರು ಸಾವಿರಪಟ್ಟು ಕಡಿಮೆ ತೂಕ ಹೊಂದಿದೆ ಎಂದೂ ಥಾಮ್ಸನ್ ತೋರಿಸಿದರು. ಈ 'ಎಲೆಕ್ಟ್ರಾನು ಎಲ್ಲಾ ಪರಮಾಣುಗಳಲ್ಲಿವೆ' ಎಂದು ಥಾಮ್ಸನ್ ಘೋಷಿಸಿದರು. ಆದರೆ ಪರಮಾಣು ಒಟ್ಟಾರೆ ಶೂನ್ಯ ವಿದ್ಯುತ್ ಕಣವಾದುದರಿಂದ ಪರಮಾಣುವಿನಲ್ಲಿ ಎಲೆಕ್ಟ್ರಾನುಗಳ ಜೊತೆಯೇ ಅವುಗಳಷ್ಟೇ ಪ್ರಮಾಣದ ಧನವಿದ್ಯುತ್‌ಗಳ ಗೋಳ, ಅದು ಹೇಗೂ ಇದೆ ಎಂದೂ ಥಾಮ್ಸನ್ ಕಲ್ಪಿಸಿದರು. ಒಟ್ಟಾರೆ ಈಗ ಪರಮಾಣು 'ಮೂಲಕಣ'ವಾಗಿ ವಿಭಜಿಸಲಾಗದ ಕಣವಾಗಿ – ಉಳಿಯಲಿಲ್ಲ, ಅದ... ರಚನೆ ಹೊಂದಿದ ಕಣವಾಯಿತು. 'ಎಲೆಕ್ಟ್ರಾನು' ಮೂಲ ಕಣ ಇರಬಹುದೆಂದು ತರ್ಕಿಸಲಾಯಿತು. (ಈಗಲೂ ಎಲೆಕ್ಟ್ರಾನು ಮೂಲಕಣವಾಗೇ ಉಳಿದಿದೆ. ಇದು ಪರಮಾಣುವಿನ ಬಗ್ಗೆ ಹೆಚ್ಚಿನ ಕುತೂಹಲ ಉಂಟಾಗಲು ಕಾರಣವಾಯಿತು.

ಈ ಹೊತ್ತಿಗೆ ಫ್ರಾನ್ಸ್‌ನಲ್ಲಿ ಹೆನ್ರಿ ಬೆಕೆರಲ್ ರೇಡಿಯೊ ಆ್ಯಕ್ಟಿವಿಟಿಯನ್ನು, ಮೇರಿ ಮತ್ತು ಪಿಯರ್ ಕ್ಯೂರಿ ದಂಪತಿಗಳು ಅದುರಿನಿಂದ ರೇಡಿಯಂ ಪಲೋನಿಯಂ ಮುಂತಾದ ರೇಡಿಯೊ ವಿಕಿರಣದ ವಸ್ತುಗಳನ್ನು ಪ್ರತ್ಯೇಕಿಸಿದ್ದರು. ೧೯೦೦ರಲ್ಲಿ ಜರ್ಮನಿಯಲ್ಲಿ ಮ್ಯಾಕ್ಸ್ ಪ್ಲಾಂಕರು ಶಾಖ ಪ್ರಸರಣ ಕುರಿತ ಸಮಸ್ಯೆ ನಿವಾರಿಸುವಲ್ಲಿ ಶಾಖವು ಅಂದರೆ (ವಿದ್ಯುದ್ಕಾಂತ) ಶಕ್ತಿಯು ನಿರಂತರವಾಗಿ ಒಂದೇ ಸಮ... ಪ್ರವಹಿಸದೆ, ಬಿಡಿ ಬಿಡಿಯಾಗಿ 'ಶಕ್ತಿಕಂತೆ'ಗಳ ರೂಪದಲ್ಲಿ ಅಂದರೆ ಶಕ್ತಿಕಣಗಳಾಗಿ ಪ್ರವಹಿಸುತ್ತದೆ ಎಂದು ಸಿದ್ಧಾಂತ ಮಂಡಿಸಿದರು. ಈ 'ಕಂತೆ'ಗಳನ್ನು 'ಕ್ವಾಂಟಾ'ಗಳೆಂದು ಕರೆದರು. ಮುಂದೆ ೧೯೦೫ರಲ್ಲಿ ಐನ್‌ಸ್ಟೈನರು ಇದನ್ನು ಪ್ರಯೋಗದ ಮೂಲಕ ಸಿದ್ಧ ಮಾಡಿ, ಬೆಳಕಿನ (ಬೆಳಕು, ಶಾಖ ಇತ್ಯಾದಿಗಳೆಲ್ಲವೂ ವಿದ್ಯುತ್ಕಾಂತ ಶಕ್ತಿಗಳೇ) ಕಣವನ್ನು 'ಫೋಟಾನ್' ಎಂದು ಕರೆದರು. ಅಂದರೆ ವಸ್ತುವಷ್ಟೆ ಅಲ್ಲ, ಶ... ಕೂಡ ಕಣ ರೂಪದಲ್ಲಿದೆ ಎಂದಂತಾಯಿತು!

ಜೆ. ಜೆ. ಥಾಮ್ಸನ್‌ರ ಸಹೋದ್ಯೋಗಿಯಾಗಿದ...


With Best Wishes From

S. A. ENTERPRISES
R. S. IMPRESSIONS

QUALITY OFFSET PRINTERS
728, 11th Main, 3rd Cross, Muneshwara Layout
Laggere, Bangalore - 560 058
Phone : 28377518

ಮಹಾನ್ ಪ್ರಯೋಗ ವಿಜ್ಞಾನಿ ರದರ್‌ಫರ್ಡ್ ಮತ್ತು ಅವರ ಶಿಷ್ಯ ಪಡೆ ರೇಡಿಯೊ ಆ್ಯಕ್ಟಿವಿಟಿ ಮತ್ತು ಪರಮಾಣು ಬಗೆಗೆ ವಿವರವಾದ ಅಧ್ಯಯನಕ್ಕೆ ತೊಡಗಿದ್ದರು. ರೇಡಿಯೊ ಆ್ಯಕ್ಟಿವಿಟಿಯ ಕಿರಣಗಳನ್ನು ಆಲ್ಫಾ, ಬೀಟಾ ಮತ್ತು ಗಾಮಾ (ಗ್ರೀಕ್ ವರ್ಣಮಾಲೆಯ ಅಕ್ಷರಗಳು) ಎಂದು ಹೆಸರಿಸಿ, ಅವುಗಳ ಗುಣ ವಿಶೇಷಗಳನ್ನು ಪತ್ತೆಹಚ್ಚಿದ್ದರು. ರೇಡಿಯೊ ಆ್ಯಕ್ಟಿವ್ ವಸ್ತುವಿನಿಂದ ಹೊಮ್ಮುವ ಧನ ವಿದ್ಯುತ್ ಉಳ್ಳ ಆಲ್ಫಾ ಕಿರಣಗಳನ್ನು ತೀರಾ ತೆಳುವಾದ ಚಿನ್ನದ ಹಾಳೆ ಮೂಲಕ ಹಾಯಿಸಿ, ಅವುಗಳ ಚದುರುವಿಕೆಯನ್ನು ಅಭ್ಯಾಸ ಮಾಡುತ್ತಿದ್ದರು. ಆಗ ಎಲ್ಲರಿಗೂ ಅತ್ಯಂತ ಅಚ್ಚರಿಯಾಗುವಂತಹ ಸಂಗತಿಯೊಂದು ಬೆಳಕಿಗೆ ಬಂತು. ಅದೆಂದರೆ ಆಲ್ಫಾ ಕಿರಣಗಳು, ಕಡಿಮೆ ಪ್ರಮಾಣದಲ್ಲಿಯಾದರೂ (೨೦,೦೦೦ಕ್ಕೆ ಒಂದು) 'ಹಿಮ್ಮುಖ'ವಾಗಿ ಪುಟಿದು ಬರುತ್ತಿದ್ದವು! ಇದು ನಿಮಗೂ ಅಚ್ಚರಿ ಎನಿಸಬೇಕಾದರೆ, ಭೌತವಿಜ್ಞಾನಿ ರದರ್‌ಫರ್ಡ್ ಅವರ ಮಾತುಗಳನ್ನು ಬಳಸಿ ಹೇಳಬಹುದು: ''ಟಿಶ್ಯೂ ಕಾಗದದ ಹಾಳೆಗೆ ಫಿರಂಗಿಯಿಂದ ಹದಿನೈದು ಇಂಚಿನ ಗುಂಡೊಂದನ್ನು ಹೊಡೆದರೆ ಅದು ಸೀದಾ ಕಾಗದದ ಮೂಲಕ ತೂರಿ ಹೋಗದೆ, ವಾಪಸು ಬಂದು ನಮಗೇ ಬಡಿದುಬಿಟ್ಟರೆ ಹೇಗೆ ಆಗುವುದೋ ಹಾಗೆ ಆಯಿತು.'' ಅಂದರೆ ಪರಮಾಣುವಿನಲ್ಲಿ ಎಲೆಕ್ಟ್ರಾನುಗಳಂತಹ ಕಣಗಳೇ ಇದ್ದರೆ, ಅದೊಂದು ಪೊಳ್ಳು ಜಾಗವಾಗಿರುತ್ತಿತ್ತು. ಆದರೆ ಈಗ ಅದರೊಳಗೇನೋ ಗಟ್ಟಿ ಭಾಗ ಇದೆ. ಅದಕ್ಕೆ ಆಲ್ಫಾ ಕಿರಣ ಡಿಕ್ಕಿ ಹೊಡೆದು ಹಿಂದಕ್ಕೆ ಬಂದಿದೆ ಎಂದು ಊಹಿಸಿದರು. ನಂತರ ಅದರ ಚಹರೆ ಪತ್ತೆ ಹಚ್ಚೇಬಿಟ್ಟರು. ''ಈ ಗಟ್ಟಿ ಭಾಗ ಧನ ವಿದ್ಯುತ್ ಹೊಂದಿದೆ. ಪರಮಾಣುವಿನ ತೂಕವೆಲ್ಲಾ ಇದರಲ್ಲೇ ಕೇಂದ್ರಿತವಾಗಿದೆ. ಇದು ಪರಮಾಣು ವ್ಯಾಸಕ್ಕಿಂತ ($೧೦^{-೮}$ ಸೆಂಟಿಮೀಟರು) ಒಂದು ಲಕ್ಷ ಪಟ್ಟು ಕಡಿಮೆ ($೧೦^{-೧೩}$ ಸೆಂಟಿಮೀಟರು) ಜಾಗದಲ್ಲಿದೆ. ಮತ್ತು ಪರಮಾಣುವಿನ ಕೇಂದ್ರ ಭಾಗದಲ್ಲಿದೆ.'' ಆದ್ದರಿಂದ ಇದನ್ನು 'ನ್ಯೂಕ್ಲಿಯಸ್' ಅಂದರೆ 'ಕೇಂದ್ರ ಭಾಗ'– ಎಂದೇ ಕರೆದರು. ಇದರಿಂದ ಉತ್ತೇಜಿತರಾಗಿ ರದರ್‌ಫರ್ಡ್, ಪರಮಾಣುವಿನಲ್ಲಿ ನ್ಯೂಕ್ಲಿಯಸ್ಸಿನ ಸುತ್ತಾ ಎಲೆಕ್ಟ್ರಾನುಗಳು, 'ಸೂರ್ಯನ ಸುತ್ತಾ ತಿರುಗುವ ಗ್ರಹಗಳ ಹಾಗೆ', ತಿರುಗುತ್ತಿವೆ ಎಂದು ತಮ್ಮ ಪರಮಾಣು ಮಾದರಿಯನ್ನು ಮುಂದಿಟ್ಟರು. ಆದರೆ ಇದಕ್ಕೆ ದೊಡ್ಡ ಅಡೆತಡೆಯಿತ್ತು. ಅದೆಂದರೆ ಗ್ರಹಗಳೇನೂ ವಿದ್ಯುತ್ ಶೂನ್ಯವಾದವು. ಆದರೆ ಎಲೆಕ್ಟ್ರಾನು ವಿದ್ಯುತ್‌ಕಣ. ಆದ್ದರಿಂದ ನ್ಯೂಟನೀಯ ವಿಜ್ಞಾನದ ಆಧಾರದ ಮೇಲೆ ರೂಪಿತವಾಗಿದ್ದ 'ವಿದ್ಯುತ್ಕಾಂತ ಶಾಸ್ತ್ರ'ದ ಪ್ರಕಾರ ''ಚಲಿಸುವ ವಿದ್ಯುತ್ ಕಣ ತನ್ನ ಶಕ್ತಿಯನ್ನು ಒಂದೇ ಸಮ ಕಳೆದುಕೊಳ್ಳುತ್ತಾ ನಿಶ್ಚಲ ಸ್ಥಿತಿಗೆ ಬರಬೇಕು''. ಅಂದರೆ ಪರಮಾಣುವಿನಲ್ಲಿ ಎಲೆಕ್ಟ್ರಾನುಗಳು ಶಕ್ತಿ ಕಳೆದುಕೊಳ್ಳುತ್ತಾ, ಸುರುಳಿಸುತ್ತಿಕೊಂಡು ನ್ಯೂಕ್ಲಿಯಸ್ಸಿನ ಒಳಗೆ ಬೀಳಬೇಕಾಗುತ್ತದೆ. ಆದ್ದರಿಂದ 'ಸೂರ್ಯ ಮಂಡಲ ಮಾದರಿ'ಯ ಪರಮಾಣುವನ್ನು ಹೇಗೆ ಒಪ್ಪಿಕೊಳ್ಳುವುದು ಎಂಬ ಪ್ರಶ್ನೆ ಎದುರಾಯಿತು. (ನ್ಯೂಟನೀಯ ವಿಶ್ವ ಮಾದರಿಯಲ್ಲಿ ಪರಮಾಣುಗಳ ಅಸ್ತಿತ್ವವನ್ನು ವಿವರಿಸಲಾಗುವುದಿಲ್ಲ. ಅದಕ್ಕೇ ಜಗತ್ತನ್ನೂ ವಿವರಿಸಲಾಗುವುದಿಲ್ಲ).

ರದರ್‌ಫರ್ಡ್ ಶಿಷ್ಯರಲ್ಲಿ ಒಬ್ಬರಾದ ಡೆನ್ಮಾರ್ಕ್‌ನ ನೀಲ್ಸ್ ಬೋರ್ 'ಹೊಸ ರೀತಿ' ಯೋಚಿಸಿ ತಮ್ಮದೇ ಆದ ಪರಮಾಣು ಸಿದ್ಧಾಂತವನ್ನು ಮಂಡಿಸಿ ಈ ಸಮಸ್ಯೆಯನ್ನು ಬಗೆಹರಿಸಿದರು. ಇವರು ತಮ್ಮ ಸಿದ್ಧಾಂತವನ್ನು ನ್ಯೂಟನೀಯ ವಿಜ್ಞಾನ ಹಾಗೂ ಪ್ಲಾಂಕರ ಶಕ್ತಿಕಣ ಸಿದ್ಧಾಂತಗಳನ್ನು ಬಳಸಿಯೇ ರೂಪಿಸಿದ್ದರೂ ಸಹ ಕೆಲವು 'ಕ್ರಾಂತಿಕಾರಿ ಊಹೆ'ಗಳನ್ನು ಮಾಡಿದ್ದರು. ಇವುಗಳ ಪ್ರಕಾರ ಪರಮಾಣುವಿನಲ್ಲಿ ಅನೇಕ ಶಕ್ತಿಸ್ತರಗಳಿರುತ್ತವೆ. ಒಂದು ರೀತಿ ಮೆಟ್ಟಿಲುಗಳ ಹಾಗೆ. ಒಂದೊಂದು ಒಂದು ಶಕ್ತಿ ಹೊಂದಿರುತ್ತದೆ. ಇವೆಲ್ಲವೂ ಸ್ಥಿರವಾಗಿರುತ್ತವೆ. ಆದ್ದರಿಂದ ಇವನ್ನು 'stationary states' – 'ಸ್ಥಿರ ಶಕ್ತಿ ಸ್ತರ' ಎಂದು ಕರೆದರು. ಇವುಗಳಲ್ಲಿ ಮಾತ್ರವೇ ಎಲೆಕ್ಟ್ರಾನುಗಳು ಚಲಿಸುತ್ತವೆ ಹಾಗೂ ಇವುಗಳಲ್ಲಿ ಚಲಿಸುವಾಗ ಎಲೆಕ್ಟ್ರಾನುಗಳ ಶಕ್ತಿ ಹ್ರಾಸ ಆಗುವುದಿಲ್ಲ. ಇದು ಈ ಪಥಗಳ ವಿಶೇಷ ಗುಣವಾಗಿದೆ ಎಂದು ಹೇಳಿದರು. ಆದರೆ ಎಲೆಕ್ಟ್ರಾನು ಹೆಚ್ಚಿನ ಶಕ್ತಿ ಸ್ತರದಿಂದ ಕಡಿಮೆ ಶಕ್ತಿಸ್ತರಕ್ಕೆ 'ಧುಮುಕಿದಾಗ' 'ಶಕ್ತಿ ವ್ಯತ್ಯಾಸ'ವು ಎಕ್ಸ್‌ರೇ, ಬೆಳಕು ಇತ್ಯಾದಿ ವಿದ್ಯುತ್ಕಾಂತ ಶಕ್ತಿ ರೂಪದಲ್ಲಿ ಪರಮಾಣುವಿನಿಂದ ಹೊರಹೊಮ್ಮುತ್ತದೆ. ಇದನ್ನೆಲ್ಲಾ ಲೆಕ್ಕ ಹಾಕಿ ತೋರಿಸಿದರು. ಇವರ ಲೆಕ್ಕಾಚಾರಗಳು ಪ್ರಯೋಗಗಳಿಂದ ಬಂದ ಮಾಹಿತಿಗೆ ಒಪ್ಪುವಂತಿದ್ದವು. ಹೀಗಾಗಿ ಈ ಸಿದ್ಧಾಂತದ ಬಗ್ಗೆ ಏನೇ ಶಂಕೆ, ಅಸಮಾಧಾನಗಳಿದ್ದರೂ ಒಪ್ಪಿಕೊಳ್ಳಬೇಕಾದ ಅನಿವಾರ್ಯತೆ ಉಂಟಾಯಿತು. ಮುಂದೆ ಈ ಸಿದ್ಧಾಂತ ಅನೇಕ ಸುಧಾರಣೆಗಳಿಗೆ ಒಳಗಾದರೂ, ಸಾಮಾನ್ಯ ಅರ್ಥದಲ್ಲಿ ಪರಮಾಣುವಿನ ರಚನೆಯನ್ನು ಈ ಮಾದರಿಯಲ್ಲೇ ಅರ್ಥಮಾಡಿಕೊಳ್ಳಲಾಗುತ್ತಿದೆ.




ಈ ಪಟ್ಟಿಯಲ್ಲಿ ಜ್ಯೋತಿಷಿಗಳು ಕಾಣ್ತಾ ಇಲ್ವಲ್ರೀ...!!

ಈಗ ನೋಡಿ: ಪರಮಾಣು, ಮೂಲಕಣದ ಸ್ಥಾನದಿಂದ, ರಚನೆಯುಳ್ಳ ಕಣದ ಸ್ಥಾನಕ್ಕೆ ಬಂತು. ಪರಮಾಣುವಿನಲ್ಲಿ ಎಲೆಕ್ಟ್ರಾನು ಕಣಗಳೂ ನ್ಯೂಕ್ಲಿಯಸ್ಸೂ ಇದ್ದು ಅವುಗಳ ಸಮತೋಲನದಲ್ಲಿ ನಡೆವ ವ್ಯವಸ್ಥೆ ಇದೆ ಎಂದು ತಿಳಿಯಿತು. ಹಾಗಿದ್ದರೆ ಈ ನ್ಯೂಕ್ಲಿಯಸ್ಸಿನಲ್ಲಿ ಏನಿದೆ, ಎನ್ನುವ ಪ್ರಶ್ನೆ ಸಹಜವಾಗಿ ಉದ್ಭವವಾಯಿತು.

೧೯೧೯ರಲ್ಲಿ ರದರ್‌ಫರ್ಡ್ ಅವರೇ ಕಂಡು ಹಿಡಿದಿದ್ದ 'ಪ್ರೋಟಾನ್' (Proton – ಮೊದಲ ಕಣ, ಅಥವಾ ಆದಿ ಕಣ) ಎಂಬ ಧನವಿದ್ಯುತ್ ಕಣ ಚಾರ್ಜಿನಲ್ಲಿ ಎಲೆಕ್ಟ್ರಾನಿನಷ್ಟೇ ಮೊತ್ತದ್ದಾಗಿದ್ದರೂ ಸಹ ತೂಕದಲ್ಲಿ ಮಾತ್ರ ಎಲೆಕ್ಟ್ರಾನಿಗಿಂತ ೧೮೩೬ರಷ್ಟು ಅಧಿಕವಾಗಿತ್ತು ಮತ್ತು ಇದು ಜಲಜನಕದ ನ್ಯೂಕ್ಲಿಯಸ್ಸೇ ಎಂಬುದು ಖಾತ್ರಿಯಾಗಿತ್ತು. ಇದರಿಂದಾಗಿ ನ್ಯೂಕ್ಲಿಯಸ್ಸಿನಲ್ಲಿ ಪ್ರೋಟಾನ್‌ಗಳಿವೆ ಎಂದು ಖಚಿತವಾಗಿ ಹೇಳಬಹುದಿತ್ತು. ಅಲ್ಲದೆ ಪರಮಾಣು ತೂಕ ಕೂಡ (ಅಥವಾ ನ್ಯೂಕ್ಲಿಯಸ್ಸಿನ ತೂಕ ಕೂಡ) ಈ ಪ್ರೋಟಾನಿನ ತೂಕದ ಗುಣಾಂಕಗಳಲ್ಲೆ ಇದ್ದು, ನ್ಯೂಕ್ಲಿಯಸ್ಸಿನಲ್ಲಿ ಎಷ್ಟು ಕಣಗಳಿವೆ ಎಂದು ಹೇಳಲು ಸಾಧ್ಯವಿತ್ತು. ಆದರೆ ಪರಮಾಣು ವಿದ್ಯುತ್ ಶೂನ್ಯವಾದುದರಿಂದ, ಎಲೆಕ್ಟ್ರಾನುಗಳ ಸಂಖ್ಯೆ ಮತ್ತು ಪ್ರೋಟಾನುಗಳ ಸಂಖ್ಯೆ ಸಮಸಮ ಆಗಿರಬೇಕಾಗಿತ್ತು. ಹೀಗೆ ಮಾಡಿದರೆ, ಪರಮಾಣು ತೂಕ ಅರ್ಧದಷ್ಟು ಕಡಿಮೆ ಆಗುತ್ತಿತ್ತು. ಅಲ್ಲದೆ ನ್ಯೂಕ್ಲಿಯಸ್ಸಿನ ಹಲವು ಭೌತೀಯ ಗುಣಗಳನ್ನೂ ಸಹ ವಿವರಿಸುವುದು ಆಗುತ್ತಿರಲಿಲ್ಲ. (ಉದಾಹರಣೆಗೆ, ಹೀಲಿಯಂ ಪರಮಾಣುವಿನಲ್ಲಿ ಎರಡು ಎಲೆಕ್ಟ್ರಾನ್‌ಗಳಿವೆ. ಆದ್ದರಿಂದ ನ್ಯೂಕ್ಲಿಯಸ್ಸಿನಲ್ಲಿ ಎರಡು ಪ್ರೋಟಾನು ಇರಬೇಕಾಯಿತು. ಆದರೆ ತೂಕ ನಾಲ್ಕು ಪ್ರೋಟಾನು ತೂಕ ಇದೆ. ಇದು ಸಮಸ್ಯೆ.) ಇದನ್ನು ಬಗೆಹರಿಸಲು ರದರ್‌ಫರ್ಡ್ ಅವರೇ ಮುಂದಾದರು. ಅವರು ಪ್ರೋಟಾನು (+) ಮತ್ತು ಎಲೆಕ್ಟ್ರಾನು (–) ಎರಡನ್ನೂ ಕೂಡಿಸಿ ಬಿಟ್ಟರೆ ವಿದ್ಯುತ್ ಶೂನ್ಯ (೦) ಆಗುವುದು ಮತ್ತು ತೂಕ ಸುಮಾರಾಗಿ ಪ್ರೋಟಾನಿನಷ್ಟೆ ಆಗುವುದು. ಆದ್ದರಿಂದ ನ್ಯೂಕ್ಲಿಯಸ್ಸಿನಲ್ಲಿ ಈ ವಿದ್ಯುತ್ ಶೂನ್ಯವಾದ ಕಣ – 'ನ್ಯೂಟ್ರಾನ್' (ನ್ಯೂಟ್ರಲ್ ಆದ ಕಣ) ಎಂಬ ಕಣ ಇರಬಹುದು ಎಂದು ತರ್ಕಿಸಿದರು ಮತ್ತು ತಮ್ಮ ಶಿಷ್ಯರಿಗೆ ಇದನ್ನು ಪತ್ತೆಮಾಡುವ ಕೆಲಸ ಹಚ್ಚಿದರು. ಆದರೆ ಇದು ಹೆಣಗಾಡಿಸಿ ಹದಿನೈದು ವರ್ಷಕ್ಕೂ ಹೆಚ್ಚಿನ ಅವಧಿ ತೆಗೆದುಕೊಂಡಿತು. ಕೊನೆಗೆ ೧೯೩೨ರಲ್ಲಿ ರದರ್‌ಫರ್ಡ್ ಶಿಷ್ಯರೇ ಆದ ಜೇಮ್ಸ್ ಚಾಡ್‌ವಿಕ್ ಅವರು ಈ ನ್ಯೂಟ್ರಾನನ್ನು ಪತ್ತೆ ಮಾಡಿಯೇಬಿಟ್ಟರು. ಇದರಿಂದ ನ್ಯೂಕ್ಲಿಯಸ್ಸಿನಲ್ಲಿರುವ ಕಣಗಳ ಸಮಸ್ಯೆ ಮತ್ತು ಇದಕ್ಕೆ ಹೊಂದಿಕೊಂಡ ಇನ್ನಿತರ ಸಮಸ್ಯೆಗಳು ಕೆಲವು ಪರಿಹಾರವಾದವು.

ಇನ್ನು ಈ ನ್ಯೂಕ್ಲಿಯಸ್ಸಿನಂತಹ ಕಿರಿದಾದ ಜಾಗದಲ್ಲಿ ($೧೦^{-೧೩}$ ಸೆಂಟಿಮೀಟರು) ಒಂದೇ ಚಾರ್ಜುಳ್ಳ ಅಂದರೆ ಧನವಿದ್ಯುತ್ ಉಳ್ಳ ಪ್ರೋಟಾನುಗಳೂ, ವಿದ್ಯುತ್ ಶೂನ್ಯವಾದ ನ್ಯೂಟ್ರಾನುಗಳೂ ಅದು ಹೇಗೆ ಒಂದುಗೂಡಿ ಇವೆ? – ವಿದ್ಯುತ್ ಚಾರ್ಜಿನ

ನಿಯಮದ ಪ್ರಕಾರ, ಒಂದೇ ರೀತಿಯ ಚಾರ್ಜಿನವು ವಿಕರ್ಷಣೆಯನ್ನು ಅನುಭವಿಸಬೇಕು. ಅಂದರೆ ಪ್ರೋಟಾನುಗಳು ಪರಸ್ಪರ ದೂರ ತಳ್ಳಿಕೊಂಡು ಈಚೆ ಬರಬೇಕಾಗುತ್ತಿತ್ತು. ಆದರೆ ಅವು ನ್ಯೂಕ್ಲಿಯಸ್ಸಿನಲ್ಲೇ ನ್ಯೂಟ್ರಾನಿನಂತಹ ಕಣಗಳೊಡನೆ ಬಂಧಿತವಾಗಿವೆ ಯಲ್ಲ! ಇದು ಹೇಗೆ? – ಈ ಸಮಸ್ಯೆಯೊಂದು ವಿಜ್ಞಾನಿಗಳ ಎದುರುನಿಂತಿತ್ತು.

ಇದನ್ನು ೧೯೩೫ರಲ್ಲಿ ಜಪಾನಿನ ಪ್ರತಿಭಾವಂತ ವಿಜ್ಞಾನಿ ಯುಕಾವ ಅವರು ತಮ್ಮ ಹೊಸ ಸಿದ್ಧಾಂತ – ನ್ಯೂಕ್ಲಿಯರ್ ಫೋರ್ಸ್ ಥಿಯರಿ – ಮಂಡಿಸಿ ಬಗೆಹರಿಸಿದರು. ಇದರ ಪ್ರಕಾರ ಅತಿಕಿರಿದಾದ ಅಂದರೆ ನ್ಯೂಕ್ಲಿಯಸ್ಸಿನ ವ್ಯಾಪ್ತಿಯಲ್ಲಿ ಮಾತ್ರ ಪ್ರಭಾವವುಳ್ಳ 'ಪ್ರಖರವಾದ, ಆಕರ್ಷಕ ಗುಣ ಹೊಂದಿದ' ನೈಸರ್ಗಿಕ ಬಲವೊಂದಿದೆ. ಅದು ಕಣಗಳ ವಿದ್ಯುತ್ತನ್ನು ಪರಿಗಣಿಸದೆ, ಅಂದರೆ ನ್ಯೂಟ್ರಾನು, ಪ್ರೋಟಾನು ಎಂಬ ಭೇದವಿಲ್ಲದೆ ಎರಡಕ್ಕೂ ಸಮಾನವಾಗಿ ಅದು ಕೆಲಸಮಾಡುತ್ತದೆ ಮತ್ತು ಇದು ವಿದ್ಯುತ್ ಬಲಕ್ಕಿಂತ ಹೆಚ್ಚು ಶಕ್ತಿಯುತವಾಗಿರುತ್ತದೆ. ಹೀಗಾಗಿ ಈ 'ನ್ಯೂಕ್ಲಿಯರ್ ಫೋರ್ಸ್' ಪ್ರೋಟಾನು ಮತ್ತು ನ್ಯೂಟ್ರಾನುಗಳನ್ನು ನ್ಯೂಕ್ಲಿಯಸ್ಸಿನಲ್ಲೆ ಬಂಧಿಸಿ ಇಟ್ಟಿರುತ್ತದೆ. ಇದಕ್ಕೆ ಕೇವಲ ಒಂದು ವರ್ಷ ಮೊದಲು ಅಂದರೆ ೧೯೩೪ರಲ್ಲಿ ಇಟಲಿಯ ಎನ್ರಿಕೊ ಫರ್ಮಿಯವರು ರೇಡಿಯೊ ಆಕ್ಟಿವ್ ನ್ಯೂಕ್ಲಿಯಸ್ಸಿನಿಂದ ಹೊಮ್ಮುವ ಬೀಟಾ ಕಿರಣಗಳ ಬಗ್ಗೆ ಸಿದ್ಧಾಂತವೊಂದನ್ನು ಮಂಡಿಸಿ, ಕೇವಲ ನ್ಯೂಟ್ರಾನು. ಪ್ರೋಟಾನು ಕಣಗಳಷ್ಟರ ವ್ಯಾಪ್ತಿಯಲ್ಲಿ ($೧೦^{-೧೫}$ ಸೆಂಟಿಮೀಟರು) ಪ್ರಭಾವವುಳ್ಳ, ಹೊಸ ನೈಸರ್ಗಿಕ ಬಲ ಇರುವುದನ್ನು ಊಹಿಸಿ ಬೀಟಾ ಆಕ್ಟಿವಿಟಿಯನ್ನು ವಿವರಿಸಿದ್ದರು. ಈ ಬಲಕ್ಕೆ ಅವರು 'ವೀಕ್ ಫೋರ್ಸ್' ಎಂದು ಕರೆದಿದ್ದರು. ಇಲ್ಲಿಗೆ ಮೂಲ ಕಣವೆಂದು ಗುರುತಿಸಬಹುದಾದ ಮೂರು ಕಣಗಳು ಪ್ರೋಟಾನು, ನ್ಯೂಟ್ರಾನು ಮತ್ತು ಎಲೆಕ್ಟ್ರಾನುಗಳು ಮತ್ತು ಶಕ್ತಿಕಣ ಫೋಟಾನು ಇವು ಪತ್ತೆಯಾಗಿದ್ದವು. ಇವೆಲ್ಲವೂ ವಿದ್ಯುತ್ಕಾಂತ ಬಲ (electromagnetic force), ವೀಕ್ ಫೋರ್ಸ್ ಮತ್ತು ನ್ಯೂಕ್ಲಿಯರ್ ಫೋರ್ಸ್‌ಗಳಿಗೆ ಪಕ್ಕಾಗುವಂತಹವು. ಗುರುತ್ವಾಕರ್ಷಣೆಗೆ ದ್ರವ್ಯರಾಶಿ ಮೂಲವಾದ್ದರಿಂದ ತೀರಾ ಸಣ್ಣ ಕಣಗಳಾದ ಇವುಗಳ ನಡುವೆ ಈ ಬಲ ಗಣನೆಗೆ ಬಾರದಷ್ಟಿದ್ದು ಕಣಗಳ ಮಟ್ಟದಲ್ಲಿ ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ. ಈಗ ನೋಡಿ, ಪರಮಾಣು ಎಂಬುದು ಒಂದು ರೀತಿಯಲ್ಲಿ ವ್ಯವಸ್ಥಿತವಾದ ರಚನೆಯುಳ್ಳ ಕಣ, ಮೂಲ ಕಣ ಅಲ್ಲ ಎಂದು ತಿಳಿದಂತಾಯಿತು. ನ್ಯೂಕ್ಲಿಯಸ್ಸಿನಲ್ಲಿರುವ ಪ್ರೋಟಾನುಗಳ ಸಂಖ್ಯೆ ಅನುಸರಿಸಿ ವಿವಿಧ ಬಗೆಯ ಪರಮಾಣುಗಳಾಗಿವೆ ಎಂಬುದು ತಿಳಿಯಿತು. ಅಂದರೆ ಒಂದು ಪ್ರೋಟಾನಿದ್ದರೆ ಹೈಡ್ರೋಜನ್, ಎರಡಿದ್ದರೆ ಹೀಲಿಯಂ, ಎಂಟಿದ್ದರೆ ಆಕ್ಸಿಜನ್ (ಪ್ರಾಣವಾಯು), ಇಪ್ಪತ್ತಾರಿದ್ದರೆ ಕಬ್ಬಿಣ, ನಲವತ್ತೇಳಿದ್ದರೆ ಬೆಳ್ಳಿ, ಎಪ್ಪತ್ತೊಂಬತ್ತಿದ್ದರೆ ಚಿನ್ನ, ತೊಂಬತ್ತೆರಡಿದ್ದರೆ ಯುರೇನಿಯಂ... ಹೀಗೇ....

ಈ ವಿವಿಧ ಬಗೆಯ ಪರಮಾಣುಗಳು, ವಿವಿಧ ಪ್ರಮಾಣಗಳಲ್ಲಿ ಸೇರಿ ವಿವಿಧ ಬಗೆಯ ಅಣುಗಳಾಗಿವೆ (ಉದಾಹರಣೆಗೆ $H_2O$). ಈ ಅಣುಗಳು ರಾಶಿ ರಾಶಿ ಸೇರಿ ವಿವಿಧ ಬಗೆಯ ವಸ್ತುಗಳಾಗಿವೆ.

ಭೂಮಿಯಲ್ಲಿರುವ ವಸ್ತುವೆಲ್ಲವೂ, ಜಡ-ಜೀವ ಎಲ್ಲವೂ, ವಿವಿಧ ಬಗೆಯ ಪರಮಾಣುಗಳನ್ನುಳ್ಳ ಅಣುಗಳ ರಾಶಿ. ನೋಡಲು ಅಪಾರ ವೈವಿಧ್ಯತೆ. ಆದರೆ ಒಳಗೆ ಅವೇ ಎಲೆಕ್ಟ್ರಾನು, ಅವೇ ಪ್ರೋಟಾನು, ಅವೇ ನ್ಯೂಟ್ರಾನು! ಅಂದರೆ ಮನುಷ್ಯ ದೇಹ ಬರಲು ಈ ಕಣಗಳು ವಿವಿಧ ಪ್ರಮಾಣಗಳಲ್ಲಿ ಸೇರಿ ವಿವಿಧ ಬಗೆಯ ಅಣುಗಳಾಗಿ ಸೇರಿರುವುದೇ ಕಾರಣ. ಈ ದೇಹ ಬೆಳೆಯಲು ವಿವಿಧ ಬಗೆಯ ಅಣುಗಳು ದೇಹ ಸೇರುವುದು ಕಾರಣ. ಇದು ಸಸ್ಯಮೂಲದಿಂದ ಬರಬಹುದು; ಪ್ರಾಣಿಮೂಲದಿಂದ ಬರಬಹುದು; ಗಾಳಿ, ನೀರು ಮೂಲಕ ಬರಬಹುದು. ನನ್ನ ದೇಹದಲ್ಲಿ ಈಗ ತುಂಬಿರುವ ಕೋಟ್ಯನುಕೋಟಿ ಪರಮಾಣುಗಳು ಈ ಹಿಂದೆ ಅನೇಕ ಕೋಟಿ ಕೋಟಿ ಬಗೆಯ ಜೀವಿಗಳ ದೇಹದಲ್ಲಿ, ಸಸ್ಯ, ನೆಲ, ನೀರು, ಗಾಳಿಯಲ್ಲಿ ಇದ್ದವೇ. ಇವು ಹಿಂದೆ ಮಹಾ ಸತ್ಪುರುಷರ ದೇಹದಲ್ಲಿದ್ದಿರ ಬಹುದು, ಅತಿ ದುಷ್ಟರ ದೇಹದಲ್ಲಿದ್ದಿರಬಹುದು, ರಾಜರ ದೇಹದಲ್ಲಿದ್ದಿರಬಹುದು, ಸೇವಕನ ದೇಹದಲ್ಲಿ ಇದ್ದಿರಬಹುದು, ಕತ್ತೆಯ ದೇಹದಲ್ಲಿದ್ದಿರಬಹುದು, ನಾಯಿ ನರಿ ದೇಹಗಳಲ್ಲಿದ್ದಿರಬಹುದು, ನೀರು ಗಾಳಿಯಲ್ಲಿ ಇದ್ದಿರಬಹುದು... ಹಾಗಾದರೆ ನಾನು ಯಾರು? ನಾನು ಎಲ್ಲಿಂದ ಬಂದೆ? ನಾನು ಎಲ್ಲಿಗೆ ಹೋಗುವೆ? ಪ್ರಾಚೀನ ಕಾಲದಲ್ಲಿ ಅವರ ಅನುಭವ, ದರ್ಶನಗಳಿಂದ ಅವರು 'ಈಶಾ ವಾಸ್ಯಮಿದಂ ಸರ್ವಂ' ಅಂದರು. ನಾವೀಗ ಅದನ್ನು 'ಕಣೋ ವಾಸ್ಯಮಿದಂ ಸರ್ವಂ' ಅನ್ನುತ್ತೇವೆ. ಅಷ್ಟೇ ಅಲ್ಲ ಖಚಿತವಾಗಿಯೂ ದೃಢವಾಗಿಯೂ ಹೇಳುತ್ತೇವೆ: ಕಣಗಳಿಂದಲೇ ನಿರ್ಮಾಣಗೊಂಡ ವಸ್ತು, ಜೀವ, ನಕ್ಷತ್ರ ಎಲ್ಲವೂ, ಚೈತನ್ಯದ ಮೂಲದಿಂದಲೇ ಬಂದಿವೆ ಮತ್ತು ನಮ್ಮ ದೇಹ ಶವವಾದ ಮೇಲೆ ಮತ್ತೆ ಕಣಗಳಾಗುತ್ತವೆ. ಎಲ್ಲಾ ನಾಶವಾಗುವುದು ಅಂದರೆ ಎಲ್ಲಾ ಮತ್ತೆ 'ನಿರಚ... ಗೊಂಡು ಕಣವಾಗಿ ಅಥವಾ ಕಣಗಳೆಲ್ಲಾ ಶಕ್ತಿಯಾ... ಬಿಡುವುದು. ಶಕ್ತಿ ಮತ್ತು ವಸ್ತು ಪರಸ್ಪರ ಪರಿವರ್ತ... ಗೊಳ್ಳುವಂತಹವು. ಹೀಗಿರುವುದರಿಂದ, ಅಧ್ಯಾ... ವಾದಿಗಳು ಎತ್ತಿದ್ದ ಮೂಲಪ್ರಶ್ನೆಗಳಿಗೆ ಉತ್ತ... ಸಿಕ್ಕಿದಂತಾಯ್ತು. ನಾವು ಈ ಜಗತ್ತಿನಿಂದಲೇ ಬಂದ... ಜಗತ್ತಿನಲ್ಲೇ ಇರುತ್ತೇವೆ. ನಮ್ಮ ಕಣಕಣಗಳೆಲ್ಲಾ ಅ... ಇಲ್ಲಿ ಎಲ್ಲೆಲ್ಲೋ ಸೇರಿಹೋದರೂ ಜಗತ್ತಿನ ಒಟ್ಟ... ಶಕ್ತಿಯಲ್ಲೆ ಇರುತ್ತವೆ. ಹುಟ್ಟು ಸಾವುಗಳು ನೈಸರ್ಗಿ... ವಾದಂತಹವು. ಇವುಗಳ ಬಗ್ಗೆ ಹೆದರಿಕೊಳ್ಳ... ವಂತಹುದೇನಿಲ್ಲ. ಆದರೆ ಬದುಕನ್ನು ಹೇಗೆ ಬದು... ಬೇಕು ಎಂಬುದು ಮಾನವ ಸಮಾಜದ ಶಿಕ್ಷಣ... ಮನುಷ್ಯನಿಗೇ ಸೀಮಿತವಾದ ದೃಷ್ಟಿಗೆ ಸಂಬಂಧಪಟ್ಟದ್ದು... ಆದರೆ ಇವೆಲ್ಲವೂ ಈ ಕಣ ಸಿದ್ಧಾಂತದ ದರ್ಶನಗ... ಹಿನ್ನೆಲೆಯಲ್ಲಿ ರೂಪುಗೊಂಡರೆ ಮಾನವ ಸಮಾ... ಸಹೃದಯವಾದ, ಸಮಾನತೆ, ಸಹಬಾಳ್ವೆಗ... ಜ್ಞಾನವೈಶಾಲ್ಯತೆಗಳಿಂದ ತುಂಬಿದ ಸಮಾಜವಾಗಿರುತ್ತದೆ...

*(ವಿ.ಸೂ: ನಾವು ಇದುವರೆಗೂ ಗಮನಿಸಿದ್ದು... ಭೂಮಿಯ ಮಟ್ಟದಲ್ಲಿ, ನಾವು ನೋಡುವ ಜಗತ್ತಿ... ಸೀಮಿತವಾಗಿ ಕಡಿಮೆ ಶಕ್ತಿ ಸ್ತರದಲ್ಲಿ ನಡೆದ ಕ್ರಿಯೆಗಳ... ಅಧ್ಯಯನದಿಂದ. ಮುಂದೆ ೧೯೪೦-೨೦೦೦ದವರೆ... ನಡೆದಿರುವ ಹೆಚ್ಚಿನ ಶಕ್ತಿ ಸ್ತರಗಳಲ್ಲಿನ ಅಧ್ಯಯನದಿಂ... ನಾವು ಮೂಲಕಣಗಳೆಂದು ಇದುವರೆಗೂ ಹೇಳಿ... ಪ್ರೋಟಾನು, ನ್ಯೂಟ್ರಾನುಗಳೂ ರಚನೆಯುಳ್ಳ ಕ... ಗಳಾಗಿದ್ದು ಅವುಗಳಲ್ಲಿಯೂ ಕಣಗಳಿವೆ ಎಂದು ತಿಳಿ... ಬಂದಿದೆ. ಅವುಗಳಿಗೆ 'ಕ್ವಾರ್ಕ್'ಗಳೆಂದು ಕರೆಯುತ್ತಾರ... ಒಟ್ಟಾರೆ ಆರು ಕ್ವಾರ್ಕ್‌ಗಳಿದ್ದು, ಜೊತೆಗೆ 'ಹಗು... ಕಣ'ಗಳೆನ್ನುವ – 'ಲೆಪ್ಟಾನು'ಗಳಾದ ಎಲೆಕ್ಟ್ರಾನು... ನ್ಯೂಟ್ರಾನೂ ಮುಂತಾದ ಆರು ಕಣಗಳು ಮೂಲಕ... ಗಳೆಂದು ತಿಳಿದುಬಂದಿದೆ. ಇವನ್ನೆಲ್ಲಾ ಸೇರಿ... 'ಸ್ಟಾಂಡರ್ಡ್ ಮಾಡೆಲ್' ಎನ್ನುತ್ತಾರೆ. ಈ ಕಣಗ... ನಡುವಿನ ಚಟುವಟಿಕೆ ವಿವರಿಸಲು ನಾಲ್ಕು ನೈಸರ್ಗಿ... ಬಲಗಳು – ಗುರುತ್ವಾಕರ್ಷಣ, ವಿದ್ಯುತ್ಕಾಂತ, ವೀಕ... ಮತ್ತು ಸ್ಟ್ರಾಂಗ್ ಫೋರ್ಸ್‌ಗಳು – ಇವೆ. ಇವುಗಳನ್ನ... ಅರ್ಥೈಸಿಕೊಂಡು, ಈಗ ಇನ್ನೂ ಹೆಚ್ಚಿನ ಶಕ್ತಿ ಸ್ತರವನ್ನ... ತಲುಪಿದ್ದು ಪ್ರಯೋಗಗಳಿಗೆ ಅತೀತವಾಗಿಬಿಡು... ಹಂತದಲ್ಲಿದ್ದೇವೆ. ಅಂದರೆ ಮುಂದಿನ ಅಧ್ಯಯ... ವಿಶ್ವಶಾಸ್ತ್ರಕ್ಕೆ– ಕಾಸ್ಮಾಲಜಿಗೆ ಸಂಬಂಧಪಡುತ್ತದೆ. ಇ... ಕಣ ಸಿದ್ಧಾಂತ ಕಾಸ್ಮಾಲಜಿಗಳ ಸಂಗಮವಾಗುತ್ತದ... ಹಾಗಾದಾಗ ಕಣಗಳು ಕಣಗಳಾಗಿ ಉಳಿಯದೆ ... ಎಳೆಗಳಾಗಿಬಿಡುತ್ತವೆ ಎಂದು ಭಾವಿಸಲಾಗುತ್ತದ... ಇದನ್ನೆಲ್ಲಾ ತಿಳಿಯಲು ಆಸಕ್ತ ಓದುಗರು ಸ್ಟೀಫನ್... ಹಾಕಿಂಗ್ ಅವರು ಬರೆದಿರುವ 'ದಿ ಬ್ರೀಫ್ ಹಿಸ್ಟರಿ ಆಫ... ಟೈಮ್' (ಎರಡನೇ ಆವೃತ್ತಿ) ಮತ್ತು 'ಯೂನಿವರ್ಸ... ಇನ್ ಎ ನಟ್‌ಶೆಲ್' ಪುಸ್ತಕಗಳನ್ನು ಅಥವಾ ಇನ್ನಿತ... ಸಂಬಂಧಪಟ್ಟ ಪುಸ್ತಕಗಳನ್ನು ಓದಬಹುದು.)*

**ಸಂಪಿಗೆ ತೋಂಟದಾರ್ಯ**
೩೯೪, ಸಂಪಿಗೆ, ೫ನೇ ಅಡ್ಡರಸ್ತೆ, ೮ನೇ ಮುಖ್ಯ ರಸ್ತೆ
ಹಂಪಿನಗರ, ಬೆಂಗಳೂರು - ೫೬೦೦೪೦

## ಪ್ರಶ್ನೆಗುತ್ತರ

ಒಡಲುಬ್ಬಿಸಿ
ಕರುಳ ಕತ್ತರಿಸಿ
ರಕ್ತ ಮಾಂಸ
ಬಸಿದು
ಉಸಿರು ನೀಡಿ
ಹೆಸರಾಗಿಸಿ
ರಕ್ತ – ಹಾಲಾಗಿಸಿ
ಕೊನೆಗೊಮ್ಮೆ ದೊ...ಡ್ಡ
ನಿಟ್ಟುಸಿರ
ಬಿಡುವವಳನ್ನು 'ಅಮ್ಮ'
ಎನ್ನುವರು !

**ಸಂತೇಬೆನ್ನೂರು ಫೈಜ್ನಟ್ರಾಜ್**
ಸರ್ಕಾರಿ ಪ್ರೌಢಶಾಲೆ, ಕಣಿವೆ ಬಿಳಚಿ - ೫೭೭೨೩೧
ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ



# ಹುಟ್ಟು ಅಂಧರ ಕಲಾ ಬೆಡಗು

ಕಲಾವಿದ ಎಫ್. ಎಂ. ಸೂಫಿ ಅವರ ಶಿಷ್ಯ ಮುಸ್ತಫಾ ಖಾನ್ ನಶಿಸಿಹೋಗುತ್ತಿದ್ದ ಅಪಲೇನ್ ಆರ್ಟ್‌ಗೆ ಜೀವಕಟ್ಟ ತುಂಬಿದವರು. ತಮ್ಮ ಕಲಾ ಶಿಕ್ಷಣ ಕೇಂದ್ರದಲ್ಲಿ ಸೌಮ್ಯ ಹಾಗೂ ಆಕಾಶ್, ಕನ್ನಡ-ಇಂಗ್ಲಿಷ್ ತುಟಿಭಾಷೆಯಲ್ಲಿ ತೊಡಗಿದ್ದಾಗ ಅದಕ್ಕನುಗುಣವಾಗಿ ಮಾತನಾಡುವುದನ್ನು ನಿಭಾಯಿಸಬೇಕಾಯಿತು. ಲೂಯಿ ಬ್ರೇಲ್‌ನಂತಹ ಲಿಪಿಗೆ ಸಮಾನವಾಗಿ ಚಿತ್ರಕಲೆಗೆಂದೇ ಪ್ರತ್ಯೇಕ ಭಾಷೆ ವಿಶ್ವದಲ್ಲೆಲ್ಲೂ ಇಲ್ಲ. ನಾಲ್ಕು ವರ್ಷಗಳ ಸಂಶೋಧನೆಯ ಫಲವಾಗಿ ಶೇಕಡ ನೂರರಷ್ಟು ಹುಟ್ಟು ಅಂಧರಲ್ಲಿ ಸುಪ್ತವಾಗಿರುವ ವರ್ಣ ಭಾವಾಭಿವ್ಯಕ್ತಿಯನ್ನು ಕ್ರೆಯಾನ್ ತುದಿಯ ಮೇಲ್ಭಾಗದಲ್ಲಿ ಮೂಡಿಸಿರುವ ವರ್ಣ ಸಂಕೇತಗಳನ್ನು ಸ್ಪರ್ಶಿಸಿ, ವರ್ಣದ ಅರಿವನ್ನು ಮೂಡಿಸಿ, ಸೂಕ್ತವರ್ಣವನ್ನು ಎತ್ತಿಕೊಂಡು ಬರೆಯುವಂತಹ ಸೃಜನಶೀಲ ಹೊಸ ದೃಶ್ಯ ಭಾಷಾ ಚಿತ್ರಕಲೆಯ ವಿಧಾನವನ್ನು ಕಂಡುಹಿಡಿದ ಕೀರ್ತಿ ಇವರದು. ಮೈಸೂರಿನಲ್ಲಿ ೧೦ನೇ ತರಗತಿಯ ಆರ್. ನಾಗಮಣಿ, ಎಸ್. ಮಹಾದೇವಿ, ವಿ. ಕವಿತಾ, ಎಸ್. ಸುಷ್ಮಾ ಹಾಗೂ ರಚನಾ ಎಂಬ ದೈಹಿಕವಾಗಿ ಕಣ್ಣಿಲ್ಲದ ಐವರು ಕಲಾವಿದರು ಈ ಪುಟದಲ್ಲಿರುವ ವರ್ಣರಂಜಿತ ಚಿತ್ರಗಳನ್ನು ಬಿಡಿಸಿದ್ದಾರೆ.

ಪಿ. ಎಂ. ರಾಜನ್
೯೫೭ ತೀರ್ಥಂಕರ ಮಾರ್ಗ, ೯ನೇ ಮುಖ್ಯರಸ್ತೆ
ಸಿದ್ಧಾರ್ಥ ನಗರ, ಮೈಸೂರು - ೫೭೦ ೦೧೧

ಬಣ್ಣದ ಪಾತರಗಿತ್ತಿ (ಚಿಟ್ಟೆ)





ರಾತ್ರಿ



ಭೂ ದೃಶ್ಯ



ಪೊದೆಯ ಹಕ್ಕಿ







# ಚಿತ್ರಸಂತೆ-೨೦೦೭

ವರ್ಷದಿಂದ ವರ್ಷಕ್ಕೆ ಚಿತ್ರಸಂತೆ ಜನಪ್ರಿಯವಾಗುತ್ತಿದೆ. ಡಿಸೆಂಬರ್ ೩೦, ೨೦೦೭ರಂದು ಕುಮಾರ ಕೃಪಾ ರಸ್ತೆ ತೆರೆದ ಆರ್ಟ್ ಗ್ಯಾಲರಿಯಾಗಿ ಪರಿವರ್ತನೆಗೊಂಡಿತ್ತು. ಪ್ರತಿವರ್ಷದಂತೆ ಈ ವರ್ಷ ಸಹ ದೇಶದ ಹಲವು ರಾಜ್ಯಗಳಿಂದ – ಕರ್ನಾಟಕದ ೨೨ ಕಲಾಶಾಲೆಗಳ ಯುವ ಕಲಾವಿದರ ಜೊತೆಗೆ ಹಿರಿಯ ಮತ್ತು ಕಿರಿಯ ಕಲೆಗಾರರು ಸೇರಿದಂತೆ ಆಂಧ್ರ, ತಮಿಳುನಾಡು, ಕೇರಳ, ಮಹಾರಾಷ್ಟ್ರ, ಒರಿಸ್ಸಾ, ಪಶ್ಚಿಮ ಬಂಗಾಳ, ಹಿಮಾಚಲ ಪ್ರದೇಶ – ಸುಮಾರು ೧೭೦೦ರಷ್ಟು ಚಿತ್ರಗಾರರು ಚಿತ್ರಸಂತೆಯಲ್ಲಿ ಭಾಗವಹಿಸಿದ್ದರು. ಜೊತೆಗೆ ಆಸ್ಟ್ರೇಲಿಯದ ಕಲಾವಿದರೊಬ್ಬರು (ಸದ್ಯ ಕರ್ನಾಟಕ ನಿವಾಸಿ) ಭಾಗವಹಿಸಿದ್ದರು.

ಜಲವರ್ಣ, ತೈಲವರ್ಣ, ಪೆನ್ಸಿಲ್ ಸ್ಕೆಚ್, ಚಾರ್‌ಕೋಲ್, ಮರದ ಕೆತ್ತನೆ, ಕಂಚು, ಶಿಲಾಶಿಲ್ಪಗಳು, ಫೈಬರ್‌ಗ್ಲಾಸ್, ಮೈಸೂರು ಮತ್ತು ತಂಜಾವೂರು ಶೈಲಿಯ ಗಾಜಿನ ಮೇಲೆ ರಚಿಸಿದ ಚಿತ್ರಕೃತಿಗಳು – ಹೀಗೆ ಕಲೆಯ ಎಲ್ಲ ಮಾಧ್ಯಮಗಳ ಕೃತಿಗಳು ಪ್ರದರ್ಶನಗೊಂಡು ಕಲಾಸಕ್ತರ ಗಮನ ಸೆಳೆದವು. ಜೊತೆಗೆ ಶ್ರೀ ಲೋಕೇಶ ಮೊಸಳೆ ಮತ್ತು ಶ್ರೀ ಗೌರೀಶ್‌ರಂಥ ಛಾಯಾ ಚಿತ್ರಗ್ರಾಹಕರು ತಮ್ಮ ಚಿತ್ರಕೃತಿಗಳನ್ನು ಪ್ರದರ್ಶಿಸಿದ್ದರು. ಖ್ಯಾತ ಹಿರಿಯ ಕಲಾವಿದರು ಹೊಸ ತಲೆಮಾರಿನವರ ಚಿತ್ರಗಳನ್ನು ಸಂತೆಯಲ್ಲಿ ನಿಧಾನಕ್ಕೆ ತಿರುಗಾಡುತ್ತ ನೋಡಿದರು. ತಮಗೆ ಮೆಚ್ಚಾದುದನ್ನು ಕೂಡಲೇ ಖರೀದಿಸಿ ಬುಟ್ಟಿ ತುಂಬಿಕೊಂಡು ಬೀಗುವ ಕಲಾಪ್ರೇಮಿಗಳ ಕಾರಣ ಚಿತ್ರಗಳ ಮಾರಾಟವೂ ಭರಾಟೆಯಿಂದ ಸಾಗಿತ್ತು. ಆ ಚಿತ್ರಗಳ ಸುಗ್ಗಿಯಲ್ಲಿ ಸುಡುಬಿಸಿಲನ್ನು ಯಾರೂ ಲೆಕ್ಕಿಸದೆ ಕಣ್ಣಿಗೆ ಕಾಣಿಸಿದ ಕಲಾಕೃತಿಗಳನ್ನು ನೋಡಿ ಮೆಚ್ಚುತ್ತ ಸಂತೆಗೆ ಮೆರುಗು ನೀಡಿದರು. ತಮ್ಮ ಚಿತ್ರ ಬರೆಸಿಕೊಳ್ಳಲು ಕಾಯುತ್ತಿದ್ದವರೂ ಇದ್ದರು. ಅನೇಕರ ಚಿತ್ರಗಳು ಹಿರಿಯ ಚಿತ್ರಕಾರರ ಅನುಕರಣೆಗಳಂತೆ ಕಂಡವು! ಇದು ಸಂತೆ. ಇಲ್ಲಿ ಎಲ್ಲವೂ ಉತ್ಕೃಷ್ಟ ಎನ್ನುವಂತಲ್ಲದಿದ್ದರೂ ಬೇರೆ ಬೇರೆ ಮಾಧ್ಯಮಗಳನ್ನು ಬಳಸಿ ನಿರ್ಮಿಸಿದ ಬೇರೆ ಬೇರೆ ಶೈಲಿಯ ಚಿತ್ರಕೃತಿಗಳನ್ನು ಒಂದೆಡೆ ನೋಡುವ ಅವಕಾಶ ದೊರೆಯುತ್ತದೆ. ಅದೇ ಚಿತ್ರಸಂತೆಯ ವೈಶಿಷ್ಟ್ಯ.

– ಚಿತ್ರ-ಲೇಖನ : **ಕೆ. ಪಿ. ಸ್ವಾಮಿ,** ೧೬೭ - ೧೬೮, ೧೦ನೇ ಮುಖ್ಯರಸ್ತೆ
೩ನೇ ಫೇಸ್, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೮











## ಮುದ್ರಕನ ಸಾಹಿತ್ಯ ನಂಟು

*ಶೇಷನಾರಾಯಣ*

**ಪುಟ : ೧೨೦** **ಬೆಲೆ : ರೂ. ೭೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ೫೧೯೬, ಬೆಂಗಳೂರು-೧

ಸುಮಾರು ಐವತ್ತು ವರ್ಷಗಳಷ್ಟು ದೀರ್ಘಕಾಲ ಮುದ್ರಕರಾಗಿ ಕೆಲಸ ಮಾಡಿರುವ ಶೇಷನಾರಾಯಣ ಈ ಕ್ಷೇತ್ರದಲ್ಲಿ ತಮ್ಮ ಅನುಭವಗಳನ್ನು ಹಾಗೂ ತಮ್ಮ ಒಡನಾಟಕ್ಕೆ ಬಂದ ಸಾಹಿತಿ, ...ಹಗಾರರ ಕುರಿತ ನೆನಪುಗಳನ್ನು ಬಿಚ್ಚಿಟ್ಟಿದ್ದಾರೆ. ಮೂವತ್ತು ಜನ ಸಾಹಿತಿಗಳನ್ನು ಕುರಿತ ...ಪುಗಳು ಇಲ್ಲಿವೆ. ಇಲ್ಲಿಯ ಕೆಲವು ವ್ಯಕ್ತಿ ಚಿತ್ರಗಳು 'ಮಯೂರ' ಮಾಸಪತ್ರಿಕೆಯಲ್ಲಿ ...ಪಕನ ಛಾಪು' ಎಂಬ ಶೀರ್ಷಿಕೆಯಲ್ಲಿ ಪ್ರಕಟವಾಗಿವೆ. ಲೇಖಕರೇ ಹೇಳಿಕೊಂಡಂತೆ ...ನ ಬರಹಗಾರರ ಬದುಕು, ಬರಹ, ಶ್ರದ್ಧೆ, ಪಾಂಡಿತ್ಯ, ಪ್ರಕಾಶಕರ, ಮುದ್ರಕರ ...ಪಾಟಲುಗಳನ್ನು ಇಲ್ಲಿ ತಿಳಿಯಬಹುದು. ಆಗ ಪುಸ್ತಕಗಳು ಹೇಗೆ ಮುದ್ರಣ ...ಳ್ಳುತ್ತಿದ್ದವು ಎಂಬುದನ್ನು ಈಗಿನ ಪೀಳಿಗೆಯವರಿಗೆ ಹೇಳುವ ವಿಶಿಷ್ಟ ಕೃತಿ. ...ರರೊಂದಿಗೆ ಲೇಖಕರ ಬದುಕಿನ ಹೋರಾಟಗಳ ಬಗೆಗೂ ಒಳನೋಟ ಹೊಸೆದು ...ಂಡಿವೆ. ಬಿ. ಬಿ. ಪತ್ತಾರ್ ಅವರ ಚಿತ್ರಗಳು ಸುಂದರವಾಗಿವೆ.





## ಸಮಕ್ಷ (ವಿಮರ್ಶಾ ಲೇಖನಗಳು)

*ಡಾ॥ ಲಿಂಗಣ್ಣ ಗೋನಾಲ*

**ಪುಟ : ೧೨೦** **ಬೆಲೆ : ರೂ. ೯೫**

**ಶರಣು ಪ್ರಕಾಶನ,** ದೇವರಗೋನಾಲ, ಸುರಪುರ ತಾಲೂಕು, ಕಲಬುರ್ಗಿ ಜಿಲ್ಲೆ

ಲೇಖಕರು ವಿಮರ್ಶಾ ಕ್ಷೇತ್ರದಲ್ಲಿ ಸಂಶೋಧನೆ ಕೈಗೊಂಡು ಡಾಕ್ಟರೇಟ್ ಪದವಿ ಗಳಿಸಿದವರು. ಪ್ರಸ್ತುತ ಕೃತಿಯಲ್ಲಿ ಅವರು ಕೆಲವು ಕಾವ್ಯ, ಕಥೆ, ಕಾದಂಬರಿ, ಪ್ರವಾಸ ಕಥನ, ಪ್ರಬಂಧ ಹಾಗೂ ಅನುವಾದಿತ ಕೃತಿಗಳನ್ನು ಆಯ್ದು ಚರ್ಚಿಸಿದ್ದಾರೆ. ಕುವೆಂಪು ಕಾವ್ಯದಲ್ಲಿ ಆದರ್ಶ ಪುರುಷರು, ಬಂಡೆದ್ದ ದಲಿತರ ಬೀದಿ ಹಾಡುಗಳು, ಮರಾಠಿ ದಲಿತ ಕಾವ್ಯ, ಕೆ. ವಿ. ತಿರುಮಲೇಶ್ ಅವರ ಕಥಾ ಸಾಹಿತ್ಯ, ಮಾಸ್ತಿಯವರ ಸಣ್ಣ ಕಥೆಗಳು, ಪ್ರವಾಸ ಸಾಹಿತ್ಯದ ಐದು ಕೃತಿಗಳು, ಇಮ್ರಾಪೂರ ಅವರ ಅಂಕಣ ಬರಹಗಳು, ಶೇಕ್ ಫರಿದ್: ಸೂಫೀ ಸಂತನ ದರ್ಶನ, ನಾಗಾರ್ಜುನ: ಬೌದ್ಧ ದಾರ್ಶನಿಕನ ಪರಿಚಯ, ಇತ್ಯಾದಿ ಇಲ್ಲಿ ವಿಮರ್ಶೆಯಾಗಿರುವ ವಿಷಯಗಳು. ಲಿಂಗಣ್ಣ ಗೋನಾಲರೇ ಹೇಳಿಕೊಂಡಂತೆ ಈ ವಿಮರ್ಶಾ ಲೇಖನಗಳಲ್ಲಿ ಎಲ್ಲಿಯೂ ಕಠೋರವಾಗದೆ, ಎಲ್ಲಿಯೂ ಮೃದುವಾಗದೆ ಮಧ್ಯಮ ಮಾರ್ಗವನ್ನು ಅನುಸರಿಸಲಾಗಿದೆ.



## ...ದು ನೂಲಿನ ಜಾಡು (ಕವನ ಸಂಕಲನ)

*...ಕೆ. ರವೀಂದ್ರ ಕುಮಾರ್*

**...ಟ : ೧೨೦** **ಬೆಲೆ : ರೂ. ೬೦**

**...ಚಯ,** ನಂ. ೧೦೦, ೨ನೇ ಮುಖ್ಯರಸ್ತೆ, ೬ನೇ ಬ್ಲಾಕ್, ...ನೇ ಹಂತ, ೩ನೇ ಘಟ್ಟ, ಬನಶಂಕರಿ, ಬೆಂಗಳೂರು-೮೫

...ೀಂದ್ರ ಕುಮಾರರ ನಾಲ್ಕನೇ ಕವನ ಸಂಕಲನ. ಇಲ್ಲಿ ...ತ್ತೆರಡು ಕವಿತೆಗಳಿವೆ. ಆಟಗಳನ್ನು ಕುರಿತ ಪದ್ಯಗಳದು ...ದು ಗುಂಪು. 'ಟೆನ್ನಿಸ್' ಎಂಬ ಕವನದಲ್ಲಿ ಆಟದ ವಿಚಿತ್ರ ...ಕಗಳ ಗಣನೆಯ ಕುರಿತು : 'ಎಣಿಸಿಕೊಳ್ಳಲಿ ಬಿಡಿ ಯಾರಪ್ಪನ ಅಂಕೆ? 'ಅಮ್ಮಾ ...ಜೀ ಸಲಾಂ' ಪದ್ಯದ ಸಾಲುಗಳು: ಪಕ್ಕದ ಮನೆಯ ಅಂಕಲ್ ಹೊರಟರು ಅಂತ ...ುತ್ತೆ/ಅವರ ಕಾರು ರಿವರ್ಸ್ ತಗೊಂಡಾಗೆಲ್ಲ/ವಂದೆ ಮಾತರಂ ನುಡಿಯುತ್ತೆ.' ...ಲಸುಬ್ರಹ್ಮಣ್ಯ ಕಂಜರ್ಪಣೆಯವರ ಮುನ್ನುಡಿಯಿಂದ ಆಯ್ದ ಕೆಲವು ಸಾಲುಗಳು: ಈ ...ತೆಗಳ ವೈವಿಧ್ಯ, ಹರಹು, ವಿಸ್ತಾರ ಬೆರಗುಗೊಳಿಸುವಂಥದ್ದು. ಬಹುತೇಕ ಎಲ್ಲ ...ನಗಳಲ್ಲೂ ಶ್ರದ್ಧೆಯ ಕಾವ್ಯಾಭ್ಯಾಸ, ಬದುಕಿನ ಕುರಿತ ಆಪ್ತ ಸಹವಾಸ, ಆದರ್ಶಗಳನ್ನು ...ಬಾಲಿಸದೆಯೆ ವಾಸ್ತವವನ್ನು ಕೆಣಕುವ ಮೊನಚು ಕಂಡುಬರುತ್ತದೆ. ಅನೇಕ ...ನಗಳು ಬದುಕಿನ ಬೆಡಗನ್ನೂ ಮೀಮಾಂಸೆಯನ್ನೂ ತೋರುತ್ತವೆ ಮತ್ತು ...ಿಪ್ತವಾಗಿ ಭಾವದ ವ್ಯೂಹವನ್ನು ಕಟ್ಟುತ್ತವೆ.



## ಬಿಸಿಲ ಹಂದರ (ಲೇಖನಗಳ ಸಂಗ್ರಹ)

*ಬಾಲಸುಬ್ರಹ್ಮಣ್ಯ ಕಂಜರ್ಪಣೆ*

**ಪುಟ : ೨೩೪** **ಬೆಲೆ : ರೂ. ೧೦೦**

**ಸಂಚಯ,** ನಂ. ೧೦೦, ೨ನೇ ಮುಖ್ಯರಸ್ತೆ, ೬ನೇ ಬ್ಲಾಕ್, ೩ನೇ ಹಂತ, ೩ನೇ ಘಟ್ಟ, ಬನಶಂಕರಿ, ಬೆಂ. - ೮೫

೧೯೯೮ರಿಂದೀಚೆಗೆ ಬರೆದ ಸುಮಾರು ೩೫ ಬಿಡಿ ಲೇಖನಗಳ ಸಂಗ್ರಹ. ಓದಿಸಿಕೊಂಡುಹೋಗುವ ಸರಳ ಭಾಷಾ ಶೈಲಿ, ವಿಮರ್ಶೆ, ಹರಿತವಾದ ಟೀಕೆ – ಈ ಕೃತಿಯ ಮುಖ್ಯಾಂಶ. ಈ ಲೇಖನಗಳಲ್ಲಿ ಬಹುಪಾಲು ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾದಂಥವು. ಕನ್ನಡ ಹಾಗೂ ಕನ್ನಡ ಸಂಸ್ಕೃತಿಯ ಮೇಲೆ ಪೈಪೋಟಿ ನಡೆಸುತ್ತಿರುವ ಇಂಗ್ಲಿಷ್ ಮತ್ತು ಪಾಶ್ಚಾತ್ಯ ಸಂಸ್ಕೃತಿ; ಕನ್ನಡದ ಕೂಗು ಯಾರಿಂದ, ಯಾರಿಗೆ, ಯಾಕಾಗಿ; ಬುದ್ಧಿಜೀವಿ ಮತ್ತು ಸಮಾಜದ ಕೆಲವು ಪರಿಕಲ್ಪನೆಗಳು, ಶಿಕ್ಷಣಕ್ಕೆ ಮಾತೃಭಾಷೆಯ ಅಗತ್ಯ, ತುಳು-ಕೊಡವ ಭಾಷಿಕ ಹಾಗೂ ಸಾಹಿತ್ಯ ಸಂಬಂಧ; ಕುರ್ತಕೋಟಿಯವರ ವಿಮರ್ಶಾ ಅಂಕಣ ಬರಹಗಳ ವಿಮರ್ಶೆ, ಆ್ಯಂಥಾಲಜಿಯ ಜವಾಬ್ದಾರಿಗಳು, ಆನಂದ ಝುಂಜರವಾಡರ ಕಾವ್ಯ, ಕನ್ನಡ ಸಾಹಿತ್ಯ ಪರಿಷತ್ತು, ಸಾಹಿತ್ಯ ಸಮ್ಮೇಳನಗಳು; ಹೊಸ ಶತಮಾನದ ನಿರೀಕ್ಷೆಗಳು, ನಿಗಮ ಮಂಡಳಿಗಳಾಗಿರುವ ಅಕಾಡೆಮಿಗಳು, ವಿಕ್ಷಿಪ್ತ ವಿಚಾರವಾದ, ಅಮೆರಿಕೆಯ (ಅ)ಪ್ರಾಮಾಣಿಕತನ, ವಿಶ್ವಕ್ಕೆ ಏಕರಾಷ್ಟ್ರ ಪ್ರಭುತ್ವ ನೆರಳು – ಹೀಗೆ ಇಲ್ಲಿಯ ಲೇಖನಗಳಲ್ಲಿ ವಿಷಯ ವೈವಿಧ್ಯತೆ ಇದೆ.



## ಗಂಡಭೇರುಂಡ (ಕವನ ಸಂಕಲನ)

*ಆನಂದ ಝುಂಜರವಾಡ*

**ಪುಟ : ೧೨೮** **ಬೆಲೆ : ರೂ. ೭೦**

**ಸಂಚಯ,** ನಂ. ೧೦೦, ೨ನೇ ಮುಖ್ಯರಸ್ತೆ, ೬ನೇ ಬ್ಲಾಕ್, ೩ನೇ ಹಂತ, ೩ನೇ ಘಟ್ಟ, ಬನಶಂಕರಿ, ಬೆಂಗಳೂರು-೮೫

ಮುನ್ನುಡಿ, ಬೆನ್ನುಡಿಗಳ ಹಂಗಿಗೆ ನಿಲುಕದ ವಿಶಿಷ್ಟ ಸಂಕಲನ. ಸುಂದರವಾದ ಮುಖಪುಟ, ನವೀನ ಪುಸ್ತಕ ವಿನ್ಯಾಸ. ಇಲ್ಲಿ ಎಪ್ಪತ್ತೊಂದು ಕವನಗಳಿವೆ. 'ಸುಮ್ಮನೆ' ಎಂಬ ಪದ್ಯದಿಂದ ...ಯ್ದ ಸಾಲುಗಳು:

'ಒಳಹೊಕ್ಕು ಅಗುಳಿಹಾಕಿಕೊಳ್ಳುವ ಅಗುಳಿಗೂ  
ಕುದಿಯುಕ್ಕಿ ಅಕ್ಕಿ ಅನ್ನವಾಗುವ ಕುದಿತ  
ಹಲವು ಹಸೀ ಕಾಳುಗಳ ಮೊಳಕೆಯೊಡಿಸಿ ಕುದ್ದ  
ಸಾಂಬಾರಿನಲ್ಲೂ ನಂಬಿ ಕಲಿಸಿಕೊಂಡಷ್ಟೇ ತುತ್ತಾಗುವ ತತ್ವ  
ತಥಾಗತನ ಬೆತ್ತಲೆ ಬೊಗಸೆಗೂ ಒದಗಿದಷ್ಟೇ ಸತ್ಯ  
ಗುಂಡಿಗೆದೆಗೊಟ್ಟ ಜನಗಣಮನದ ಸ್ವತಂತ್ರ ಸಾತತ್ಯ'.



## ವೇದಾಂಗ ಜ್ಯೋತಿಷ (ಲಗಧಮಹರ್ಷಿಯ ಖಗೋಳ ವಿಜ್ಞಾನ)

*ಡಾ॥ ಎಸ್. ಬಾಲಚಂದ್ರರಾವ್*

**ಪುಟ : viii + ೧೦೭** **ಬೆಲೆ : ರೂ. ೬೦**

**ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಗಾಂಧೀ ಕೇಂದ್ರ,** ಭಾರತೀಯ ವಿದ್ಯಾಭವನ, ನಂ. ೪೩/೧, ರೇಸ್ ಕೋರ್ಸ್ ರಸ್ತೆ, ಬೆಂಗಳೂರು - ೫೬೦ ೦೦೧

ಲೇಖಕರು ಹದಿನೈದು ವರ್ಷಗಳಿಂದ ಪ್ರಾಚೀನ ಭಾರತೀಯ ಗಣಿತ ಮತ್ತು ಖಗೋಳ ಶಾಸ್ತ್ರಗಳಿಗೆ ಸಂಬಂಧಿಸಿದ ಸಂಶೋಧನೆಗಳನ್ನು ಕೈಗೊಂಡಿದ್ದಾರೆ. ಇದು ಆ ಅಧ್ಯಯನಗಳ ಫಲವಾಗಿ ಹೊರಬರುತ್ತಿರುವ ಒಂದು ಕೃತಿ. ವೇದಾಂಗ ಜ್ಯೋತಿಷದ ಕಾಲ, ವರ್ಷಗಳು, ಸಂವತ್ಸರಗಳು, ರಚನೆಯ ಸ್ಥಳ, ವೇದಗಳಲ್ಲಿ ಕಾಲಮಾನ; ಪ್ರಾರ್ಥನೆ ಮತ್ತು ಜ್ಯೋತಿಷದ ಮಹತ್ವ, ನಕ್ಷತ್ರಗಳು ಮತ್ತು ಅಧಿದೇವತೆಗಳು, ತ್ರೈರಾಶಿಕ ನಿಯಮ, ಯುಗದ ಉಪಕರಣಗಳು, ಲಗ್ನಗಳು, ದಿನ ಪ್ರಮಾಣದ ವೃದ್ಧಿ, ಮಹತ್ವದ ದಿನಗಳ ತಿಥಿ ಮತ್ತು ನಕ್ಷತ್ರಗಳು, ಮಂಗಳ ಶ್ಲೋಕಗಳು, ಸೌರಮಾನ ಮತ್ತು ಚಾಂದ್ರಮಾನ ಪದ್ಧತಿಗಳು, ಪಂಚಾಂಗ ಮುಂತಾದ ವಿಷಯಗಳುಳ್ಳ ಉಪಯುಕ್ತ ಕೃತಿ.

– *ಸಹನ, ನಂ. ೩, 'ಕೆರೆಮನೆ' ಅಪಾರ್ಟ್‌ಮೆಂಟ್ಸ್, 'ದೇವರಕೆರೆ' ಎಕ್ಸ್‌ಟೆನ್ಶನ್, ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮*

At Hercules Sport we follow 'Do what you do Best'



HERCULES
*Stronger than ever*

# Hercules Sports Pvt. Ltd.,

THE PROFESSIONAL FITNESS PEOPLE




The Leading & Largest manufacturers of Multigyms, Sports & Fitness Equipments

**The Company is as solid as the equipment**
**Since 25 Years & still going Stroger**

**MANUFACTURERS - IMPORTERS - DISTRIBUTORS - WHOLESELLERS - RETAILERS**

**OFFICIAL SUPPLIERS FOR NATIONAL & INTERNATIONAL MEETS.**

*Mfrs. of :*

- Full range of Hitech Multigyms
- Single Stations, Treadmills
- Sauna, Steam, Jacuzzi
- Heavy duty Commercial Treadmill
- Dumbells, Barbells & barbell Rods
- Gymnastic Equipments
- Rollable & Foldable, Basket ball equip'ts
- Shuttle Badminton Poles, Volleyball Poles
- Game Clock & Timer for All Games
- Giant Score Board for All Games







*Importers of :*

- Imported Treadmills, Exercise Cycles, Elliptical Crosstrainers
- Imported Air bikes, Upright bikes, Recumbent Bikes
- Imported Ab slimmers, Ab Benches, Gym balls, Soft Dumbells. Yoga Mats, Aerobic Step Boards etc., & More for Domestic & Commercial Use





*Dealers & Distributors of :*

- TT Tables & Billiards Tables.
- Available - All major Brands Genuine Sports Goods such as SS, SG, BDM, BAS, KG, COSCO, Nivia Sparton, Yonex, Silvers, Wilson, Jonex, Adidas, Nike, Fila, ASE, Mikado, Champ, Stag, Head.






***We offer complete guidance for Health Club, Layout, Interior, Design & Hi-tech Equipment.***

**CONTACT**

**Fac :** 111, F-2, Bommasandra Indl. Area, Hosur Road, Bangalore - 560 099
Tel : 080-7832515, 7834899 Fax : 7834900, Cell : 98450-59899
**Shop :** 1/1, Berlie Street, Langford Town, Shantinagar, Bangalore - 560 025.
Tel : 080-22108153 / 54, Fax : 080-22107178. Cell : 98450-76000, 98458-24890
E-mail : herculessports@yahoo.co.in

ಅತ್ತಿಂಗನಲ್ ರಾಮರಾವ್ ವಾಸುದೇವ ಮೂರ್ತಿಯವರು ಜನಿಸಿದ್ದು ಡಿಸೆಂಬರ್ ೧೨, ೧೯೨೫, ಕೆಮ್ಮಣ್ಣುಗುಂಡಿಗೆ ಸುಮಾರು ೧೬ ಕಿಲೋಮೀಟರ್ ದೂರವಿರುವ ತರೀಕೆರೆಯಲ್ಲಿ, ಶಾನುಭೋಗ ಕುಟುಂಬ. ಬೀರೂರಿನಲ್ಲಿ ಮಾಧ್ಯಮಿಕ ಶಾಲೆ, ಚಿತ್ರದುರ್ಗದಲ್ಲಿ ಪ್ರೌಢಶಿಕ್ಷಣ ಮುಗಿಸಿ ಹೆಚ್ಚಿನ ವ್ಯಾಸಂಗಕ್ಕಾಗಿ ನೆಲೆಯೂರಿದ್ದು ಬೆಂಗಳೂರಿನಲ್ಲಿ, ಶಾಲೆಯ ಪ್ರತಿ ಪರೀಕ್ಷೆಯಲ್ಲೂ ೨೫ ಅಂಕಗಳಿಗೆ ೨೪ ಅಂಕಗಳನ್ನು ಪಡೆಯುತ್ತಿದ್ದ ಇವರಿಗೆ ಮಾಸ್ತರು ಹೇಳುತ್ತಿದ್ದದ್ದು – ಬರವಣಿಗೆ ಸುಧಾರಿಸಿಕೋ, ಪೂರ್ಣ ಅಂಕ ಗಳಿಸಬಹುದು ಎಂದು. ೧೯೪೫ರಲ್ಲಿ ಬಿ. ಎಸ್ಸಿ, ೧೯೪೭ರಲ್ಲಿ ಎಂ.ಎಸ್ಸಿ, ಮತ್ತು ೧೯೫೪ರಲ್ಲಿ ಡಿ.ಎಸ್ಸಿ . ಪದವಿ ಗಳಿಸಿ, ಪ್ರತಿ ಪರೀಕ್ಷೆಯಲ್ಲಿಯೂ ಮೊದಲ ರ್‍ಯಾಂಕ್ ಗಿಟ್ಟಿಸಿದ್ದರು. ವಿಶ್ವೇಶ್ವರಪುರದಲ್ಲಿರುವ ರಾಮಕೃಷ್ಣ ಸ್ಟೂಡೆಂಟ್ಸ್ ಹೋಂನಲ್ಲಿ ವಾಸ. ಕೆಲವೊಮ್ಮೆ ೭೫ ಜನಕ್ಕೆ ಅಡಿಗೆ ಮಾಡಿದ್ದ ಅನುಭವವೂ ಇವರದು.

ಸಂಶೋಧನೆಗೆ ಆಯ್ಕೆ ಮಾಡಿಕೊಂಡ ವಿಷಯ ಗಂಧಕದ ವಿಶ್ಲೇಷಣೆ. ಇದರೊಂದಿಗೆ ರಂಜಕ, ನೈಟ್ರೋಜನ್, ಫ್ಲೂರಿನ್, ಸಿಲಿಕಾನ್ ಮತ್ತು ಅವುಗಳ ಸಂಯುಕ್ತಗಳ ಅಧ್ಯಯನ. ಮೆಟೀರಿಯಲ್ ಸೈನ್ಸ್ ಅಂಡ್ ಟೆಕ್ನಾಲಜಿಯಡಿ ಹುಡುಕಾಡಿದ್ದು ಎಲೆಕ್ಟ್ರಾನಿಕ್ ವಸ್ತುವನ್ನು ರಿಸರ್ಚ್ ಅಂಡ್ ಡೆವಲಪ್‌ಮೆಂಟ್ ಯೋಜನೆಯಡಿ ಬಿ.ಇ., ಎಂ.ಇ. ವಿದ್ಯಾರ್ಥಿಗಳಿಗೆ ನಿರ್ದೇಶನ ನೀಡಿ ಖನಿಜ ಮತ್ತು ಜಿಯೋಕೆಮಿಸ್ಟ್ರಿಗಳಿಗೆ ಹೊಸರೂಪ ನೀಡಲು ನೆರವಾದರು. ವಿಶೇಷವಾಗಿ ಸಿಲಿಕಾನ್ ಕೊಡುಗೆ ಪ್ರಶಂಸಾರ್ಹ.

ಸಂಸ್ಕೃತ ಭಾಷೆಯಲ್ಲಿರುವ ಗ್ರಂಥಗಳಿಂದ ರಸಾಯನಶಾಸ್ತ್ರದ ಅನೇಕ ವಿಷಯಗಳನ್ನು ಹೆಕ್ಕಿ ತೆಗೆದಿದ್ದಾರೆ.

೧೮೦ಕ್ಕೂ ಮಿಗಿಲಾದ ಸಂಶೋಧನಾ ಲೇಖನಗಳು ಪ್ರಕಟವಾಗಿವೆ. ೬೦ಕ್ಕೂ ಹೆಚ್ಚಿನ ಪಿಎಚ್.ಡಿ. ವಿದ್ಯಾರ್ಥಿಗಳ ಮಾರ್ಗದರ್ಶಕರು. ೧೯೫೪ರಿಂದ ೧೯೮೬ರವರೆಗೆ ಯೂರೋಪ್, ಅಮೆರಿಕಾ ಮತ್ತು ಕೆನಡಾಗಳಲ್ಲಿ ನಡೆದ ಕಾನ್ಫರೆನ್ಸ್, ವರ್ಕ್‌ಶಾಪ್, ಸಿಂಪೋಸಿಯಾ ಮತ್ತು ಸೆಮಿನಾರ್‌ಗಳಲ್ಲಿ ಭಾಗವಹಿಸಿದ್ದಾರೆ. ಯುನೆಸ್ಕೊ ನಡೆಸಿದ 'ಯೂನಿವರ್ಸಿಟಿ ಅಂಡ್ ಇಂಡಸ್ಟ್ರಿ ಇಂಟರ್‍ಯಾಕ್ಷನ್ಸ್ ಇನ್ ಕೆಮಿಸ್ಟ್ರಿ' ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಭಾರತವನ್ನು ಪ್ರತಿನಿಧಿಸಿದ್ದಾರೆ. ಸತತವಾಗಿ ಟೊರಾಂಟೋದಲ್ಲಿ ೧೯೭೮, ಮನಿಲಾದಲ್ಲಿ ೧೯೭೯, ಕೊಲೊಂಬೋದಲ್ಲಿ ೧೯೮೨, ನವದೆಹಲಿಯಲ್ಲಿ ೧೯೮೩, ಕೌಲಾಲಂಪೂರ್‌ನಲ್ಲಿ ೧೯೮೪, ಬಾಂಗ್ಲಾದೇಶದಲ್ಲಿ ೧೯೮೫ ಈ ಸಮ್ಮೇಳನವನ್ನು ಹಮ್ಮಿಕೊಳ್ಳಲಾಗಿತ್ತು. ಇವೆಲ್ಲದರಲ್ಲಿಯೂ ಇವರು ಪಾಲ್ಗೊಂಡಿದ್ದರು. ಏಪ್ರಿಲ್ ೧೯೮೦ರಲ್ಲಿ ದಕ್ಷಿಣ ಏಷಿಯಾದ ಸ್ಥಳೀಯ ಕಾರ್ಯಾಗಾರ ಯುನೆಸ್ಕೊ ವತಿಯಿಂದ ನಡೆಸಲಾಗಿತ್ತು. ಈ ಕಾರ್ಯಾಗಾರದ ಹೊಣೆ ಇವರದಾಗಿತ್ತು.

# "ಬಡವರಿಗೆ ಉಪಯುಕ್ತವಾಗುವಂತಹ ಕೆಲಸ ಮಾಡಬೇಕು."

## — ಪ್ರೊ|| ಎ. ಆರ್. ವಾಸುದೇವ ಮೂರ್ತಿ



ಸಂದರ್ಶನಕಾರರು
'ಹೊಸತು' ಬಳಗದ
ಡಾ|| ಜಿ. ರಾಮಕೃಷ್ಣ,
ಎಸ್. ಸುರೇಂದ್ರ ಮತ್ತು
ಡಾ|| ಎನ್. ಎಸ್. ಲೀಲಾ

ಚಿತ್ರಗಳು
ಕೆ. ಪಿ. ಸ್ವಾಮಿ

ಲೇಖನ ಸಿದ್ಧಪಡಿಸಿದವರು
ಡಾ|| ಎನ್. ಎಸ್. ಲೀಲಾ

ಜಿ.ಆರ್. : 'ಹೊಸತು' ಪ್ರತಿವರ್ಷ ಜನವರಿಯಲ್ಲಿ ಪ್ರಕಟಿಸುವ ವಿಶೇಷ ಸಂಚಿಕೆಗಾಗಿ ತಮ್ಮಂಥ ಹಿರಿಯ ವಿಜ್ಞಾನಿಗಳನ್ನು ಪರಿಚಯಿಸುತ್ತಾ ಅವರ ಸಂದೇಶವನ್ನು ನಮ್ಮ ಓದುಗರಿಗೆ ನೀಡುತ್ತಾ ಬಂದಿದೆ. ಈ ನಿಟ್ಟಿನಲ್ಲಿ ನಮ್ಮ ಓದುಗರಿಗೆ ನಿಮ್ಮ ಸಂದೇಶವೇನು ?



ಎ.ಆರ್.ವಿ. : ನನ್ನ ಮೊದಲ ಸಂದೇಶ ''ಸರ್ವೇ ಜನಾಃ ಸುಖಿನೋ ಭವಂತು''. ಆರೋಗ್ಯವಾದ ಸಮಾಜ ನಿರ್ಮಿಸಲು ಹೇಗೆ ಸಹಾಯ ಮಾಡಬಹುದೆಂಬ ಚಿಂತನೆ ಅತ್ಯಗತ್ಯ. ವಿಜ್ಞಾನ ಮತ್ತು ತಂತ್ರಜ್ಞಾನ ಇಂದು ಭರದಿಂದ ಸಾಗುತ್ತಿವೆ. ಗಾಂಧೀಜಿಯವರ ಸರ್ವೋದಯದ ಕನಸು ಇನ್ನೂ ನನಸಾಗಿಲ್ಲ. ಇದೆಲ್ಲದಕ್ಕೂ ಉತ್ಪಾದನೆ ಅತಿಮುಖ್ಯ. ಹಾಗಾಗಿ ವಿಜ್ಞಾನ ಮತ್ತು ತಂತ್ರಜ್ಞಾನದ ನೆರವಿಲ್ಲದೆ ಅದು ಸಾಧ್ಯವಿಲ್ಲ. ಅದನ್ನು ಹೇಗೆ ಅಳವಡಿಸುವುದೆಂದು ಚಿಂತಿಸಬೇಕಾದರೆ ಮಾರ್ಕ್ಸ್‌ನ ತತ್ವಗಳನ್ನೇ ಆಧರಿಸಬೇಕು. ಉತ್ಪಾದನೆಗೆ ಮೂಲ, ಚಾಲಕಶಕ್ತಿ, ಸಮತಾವಾದಕ್ಕೆ ಮಾರ್ಕ್ಸ್‌ವಾದ ಒಂದು ಸಾಧನವಾಗಬಲ್ಲದೇ ಹೊರತು ಅದೊಂದು ಪರ್ಯಾಯವಲ್ಲ.

ನನ್ನ ಅದೃಷ್ಟವೆಂದರೆ, ನನಗೆ ಜೆ. ಬಿ. ಎಸ್. ಹಾಲ್ಡೇನ್, ಜೆ. ಡಿ. ಬರ್ನಾಲ್ ಅವರಂತಹ ಹಿರಿಯ ವಿಜ್ಞಾನಿಗಳ ಸಂಪರ್ಕವಾದದ್ದು. ಅವರಿಗೂ ಇಂತಹ ಚಿಂತನೆಗಳಲ್ಲೇ ಆಸಕ್ತಿ ಇತ್ತು. Norman ಅಂತ ಕೇಳಿದೀರೋ ಇಲ್ವೋ, ಆತ inter-continental missile ಬಗ್ಗೆ ಧೈರ್ಯವಾಗಿ ತನ್ನ ವಿರೋಧ ತೋರಿಸಿದ್ದ. ಅಂತಹ ವಿಜ್ಞಾನಿಗಳು ನಮಗೆ ಬೇಕಾಗಿರೋದು.

ಒಂದು ದಿನ ಹಾಲ್ಡೇನ್, ರಾಬರ್ಟ್ಸ್, ಇನ್‌ಸ್ಟಿಟ್ಯೂಟ್ ಎಷ್ಟು ದೂರ ಇದೆ ಅಂತ ಕೇಳಿದ್ರು. ಸುಮಾರು ಒಂದು ಕಿಲೋಮೀಟರ್ ಅಂದಾಗ ನಡಿ ಹೋಗೋಣ ಅಂತ ಹೊರಟೇಬಿಟ್ರು. ಒಂದಿನ ರಾತ್ರಿ ಮ ಬಂದಿತ್ತು. ನೆಲ ಎಲ್ಲಾ ಒದ್ದೆ ಆಗಿ ದಾರೀಲಿ ಒಂದಿಷ್ಟು ಗೊದ್ದಗಳು ಹೋ ಇದ್ವು. ಅದನ್ನೇ ನೋಡ್ತಾ ಹಾಲ್ಡೇ ''ಮೂರ್ತಿ, ಈ ಮಣ್ಣಿನ ಉ ಎಷ್ಟಿರಬಹುದು ?'' ಅಂದ್ರು. ನಾನ ತಬ್ಬಿಬ್ಬಾದೆ. ಅದಕ್ಕೆ ಅವರು ವಿಜ್ಞಾನವ ಜನಪ್ರಿಯಗೊಳಿಸ್ತೀನಿ ಅಂತೀಯಾ. ನ ಸುತ್ತಮುತ್ತ ನಡೆಯೋ ಘಟನೆಗಳ ಪ್ರತಿದಿನ ಪರೀಕ್ಷಿಸಬೇಕು. ಘಟ ತಕ್ಕಂತೆ ಮಾರ್ಪಾಟುಗಳನ್ನ ಅಳ ಬೇಕು. ಅದೇ ವಿಜ್ಞಾನ ಅಂದ್ರು.'' ಈ ನ್ಯಾಷನಲ್ ಬುಕ್ ಏಜೆನ್ಸಿ ಕಿರುಹೊ ಗಳನ್ನು ಪ್ರಕಟಿಸುತ್ತಿತ್ತು. ಆ ಪುಸ್ತಕಗಳು ತುಂಬಾ ಆಸಕ್ತಿ ಹುಟ್ಟಿಸ್ತಾ ಇದ್ವು. ಕೇ ಒಂದಾಣೆ ಪುಸ್ತಕಗಳು ಅವು. ನೀವು Gordon Childeನ ಪುಸ್ತಕ ಕೇಳಿದೀರೋ ಅದೇ Man Makes Himself. ಈ ತತ್ವಾನೇ ನಂಗೆ ಭಾರತದ ಸ್ಥಿತಿಗತಿಗ ತಿಳಿದುಕೊಳ್ಳಕ್ಕೆ ಸಹಾಯ ಮಾಡ್ತು. ಆರ್ಥಿಕ ಬೆಳವಣಿಗೆಗೆ ಪೂರಕವಾಗಿ ಸಮಾ ನಿರ್ಮಾಣ ಮಾಡೋದು ಅಷ್ಟೇ ಮುಖ್ಯ ಆಗುತ್ತೆ. ನೋಡಿ ಈಗ ಗೋತ್ರ ಅಂತೀ ಇಂತಹ ಪದ್ಧತಿ ಎಲ್ಲಾ ಜನಾಂಗಗಳಲ್ಲೂ ಇದೆ.

'How to Become a Good Communist' – ಪುಸ್ತಕ ಎಷ್ಟು ಜ ಓದಿದಾರೆ ಅನ್ನೋದು ಗೊತ್ತಿಲ್ಲ.

ಜಿ.ಆರ್. : ಅದು ಈಗ ಕನ್ನಡದಲ್ಲೂ ಬಂದಿದೆ.

ಎ.ಆರ್.ವಿ. : ಆಗ ಆ ಪುಸ್ತಕಗಳೆಲ್ಲ ಒಂದಾಣೆಗೆ ಸಿಗತಿದ್ದವು. ನ್ಯಾಷನಲ್ ಬು ಏಜೆನ್ಸಿ ಅದನ್ನು ಪ್ರಕಟಿಸ್ತಾ ಇತ್ತು.

ಸುರೇಂದ್ರ : ಆ ಪುಸ್ತಕಗಳು ನಿಮ್ಮ ಹತ್ತಿರ ಇವೆಯಾ ?

ಎ.ಆರ್.ವಿ. : ಕೆಲವು ವರ್ಷಗಳ ಹಿಂದೆ ನನ್ನ ಆರೋಗ್ಯ ಸರಿ ಇಲ್ಲ

ಎ.ಆರ್.ವಿ. ಎಂದೇ ಭಾರತೀಯ ವಿಜ್ಞಾನ ಮಂದಿರದ ಇನ್‌ಆರ್ಗಾನಿಕ್ ಮತ್ತು ಫಿಸಿಕಲ್ ಕೆಮಿಸ್ಟ್ರಿ ವಿಭಾಗದಲ್ಲಿ ಚಿರಪರಿಚಿತರಾಗಿದ್ದ ಅತ್ತಿಂಗನಲ್ ರಾಮರಾವ್ ವಾಸುದೇವ ಮೂರ್ತಿ ನನ್ನ ಪಿಎಚ್.ಡಿ. ಪದವಿಯ ಮಾರ್ಗದರ್ಶಕರು. ಬಿಳಿ ಖಾದಿ ಉಡಿಗೆ, (ಹೃದಯದಾಳದ) ನಗೆ ಮತ್ತು ಕೀರಲು ಧ್ವನಿಯಿಂದ ತಮ್ಮದೇ ಆದ ಛಾಪನ್ನು ಈ ವಿದ್ಯಾಸಂಸ್ಥೆಯಲ್ಲಿ ಮೂಡಿಸಿದ್ದರು. ಮುಂಗೋಪಿ ಎಂದೇ ಹೆಸರು ಮಾಡಿದ್ದು, ಅತಿ ಹೆಚ್ಚು ವೇಳೆ ಪ್ರಯೋಗಾಲಯದಲ್ಲೇ ಕಳೆಯುತ್ತಿದ್ದ ವ್ಯಕ್ತಿ. ತಮ್ಮ ೩೭ನೇ ವಯಸ್ಸಿಗೆ ಇನ್‌ಆರ್ಗ್ಯಾನಿಕ್ ಮತ್ತು ಮಿನರಲ್ ಕೆಮಿಸ್ಟ್ರಿ ವಿಭಾಗಕ್ಕೆ ನಿಜಾಮ್ ಪ್ರೊಫೆಸರ್ ಆಗಿ ನೇಮಕಗೊಂಡಿದ್ದರು. ವೇದ ಮತ್ತು ಚಾರ್ವಾಕ ಸಮ್ಮಿಶ್ರಣ ದೃಷ್ಟಿಯಲ್ಲಿ ಆದಿ ಶಂಕರ ಮತ್ತು ಕಾರ್ಲ್ ಮಾರ್ಕ್ಸ್‌ರ ಚಿಂತನೆಗಳನ್ನು ಎತ್ತಿಹಿಡಿದಿದ್ದರು. ಆ ದಿನಗಳಲ್ಲಿ ಪೀಕಿಂಗ್ ರೇಡಿಯೋ ಕಾರ್ಯಕ್ರಮಗಳೇ ಅಲ್ಲದೆ ಕರ್ನಾಟಕ ಸಂಗೀತವನ್ನೂ ಪ್ರೀತಿಸುತ್ತಿದ್ದರು. ಇದೆಲ್ಲದರ ನಡುವೆ ಇದ್ದ ಒಲವು ಇನ್‌ಆರ್ಗ್ಯಾನಿಕ್ ಕೆಮಿಸ್ಟ್ರಿಯಲ್ಲಿ, ಅದರಲ್ಲೂ ವಿಶೇಷವಾಗಿ ಅಲೋಹವಾದ ಸಲ್ಫರ್ (ಗಂಧಕ) ಮತ್ತು ಅದರ ಸಂಯುಕ್ತಗಳಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದರು. ಯಾವುದೇ ಆಧುನಿಕ ಉಪಕರಣಗಳಿಲ್ಲದ ಬ್ಯೂರೆಟ್ – ಪಿಪೆಟ್ ಸಂಸ್ಕೃತಿಯೇ ಮುಖ್ಯ ಸಾಧನವಾಗಿದ್ದ ಸಂಶೋಧನೆಯ ಕಾಲವದು. ಸೆಂಟ್ರಲ್ ಕಾಲೇಜಿನಲ್ಲಿ ಇವರ ಪ್ರಾಧ್ಯಾಪಕರಾಗಿದ್ದ ಪ್ರೊ॥ ಬಿ. ಸಂಜೀವರಾವ್ ಹುಟ್ಟುಹಾಕಿದ್ದ ಸಮಸ್ಯೆಗೆ ಪರಿಹಾರ ಹುಡುಕುವತ್ತ ಎರಡು ದಶಕಗಳವರೆಗೆ ಸಂಶೋಧನೆ ನಡೆಸಿದರು. ಗಂಧಕದ ಉಪಆಕ್ಸೈಡ್ ಅಥವಾ 'SO' ಎಂಬುದೇ ಆ ಜಿಜ್ಞಾಸೆ ಎ.ಆರ್.ವಿ. ಸಂಶೋಧನಾ ಮಾರ್ಗದರ್ಶಕರಾಗಿ ವಿದ್ಯಾರ್ಥಿಗಳಿಗೆ ಸಂಪೂರ್ಣ ಸ್ವಾತಂತ್ರ್ಯದೊಂದಿಗೆ ಆತ್ಮಸ್ಥೈರ್ಯವನ್ನೂ ತುಂಬಿ ಹುರಿದುಂಬಿಸುತ್ತಿದ್ದರು.

ಫ್ಲೂರೋ ಕಾಂಪ್ಲೆಕ್ಸ್‌ಗಳು, ರಂಜಕ ಮತ್ತು ನೈಟ್ರೋಜನ್‌ಗಳಿಂದಾದ ಫಾಸ್‌ಫೋಜ಼ಿನ್ ಸಂಯುಕ್ತಗಳು, ಘನಸ್ಥಿತಿ ಕ್ರಿಯೆಗಳು, ಲೋಹ ಮತ್ತು ಅಂತರ್‌ಲೋಹ ಸಂಯುಕ್ತಗಳು, ಭೂರಸಾಯನ ಹೀಗೆ ಹಲವಾರು ಕ್ಷೇತ್ರಗಳಲ್ಲಿ ಸಂಶೋಧನೆಯ ಅವಕಾಶ ಕಲ್ಪಿಸಿಕೊಂಡಿದ್ದರು.

ಶುದ್ಧ ಸಿಲಿಕಾನ್ ತಯಾರಿಕೆಯಲ್ಲಿ ಎ.ಆರ್.ವಿ. ಅವರು ಪಟ್ಟ ಶ್ರಮ ದೇಶದ ಉನ್ನತಿಗೇ ಕಾರಣವಾಯಿತು ಎನ್ನಬಹುದು. ಪರಿಶುದ್ಧ ಸಿಲಿಕಾನ್ ತಯಾರಿಕೆಗಾಗಿ ಮೊದಲಿಗೆ ಸಿಲಿಕಾನ್ ಟೆಟ್ರಾಕ್ಲೋರೈಡ್‌ನ್ನು ತಯಾರಿಸಲು ಅತಿಯಾಗಿ ಹೊಗೆಯಾಡುವ ಫೆರೋಸಿಲಿಕಾನ್ ಕ್ಲೋರಿನೇಷನ್ ಅಗತ್ಯವಿತ್ತು. ಹಾಗಾಗಿ ಅದನ್ನು ಮಾಡಲು ವಿಭಾಗದಲ್ಲಿದ್ದ ಅನುಪಯುಕ್ತ ವಸ್ತುಗಳನ್ನು ಸಂಗ್ರಹಿಸಿಡುತ್ತಿದ್ದ ಜಾಗವನ್ನೇ ಬಳಸಿಕೊಳ್ಳುತ್ತಿದ್ದರು.

ಎ.ಆರ್.ವಿ. ಅವರು ತಮ್ಮ ೪೦ ವರ್ಷಗಳ ಸುದೀರ್ಘ ಸಂಶೋಧನಾ ಅವಧಿಯಲ್ಲಿ ಹಲವಾರು ಏಳು-ಬೀಳುಗಳನ್ನು ಕಂಡಿದ್ದಾರೆ. ಇವರ ಹಲವಾರು ನಿರ್ಧಾರಗಳು ಚರ್ಚೆಗೆ ಗ್ರಾಸವಾದದ್ದೂ ಉಂಟು. ಅತ್ಯುತ್ತಮ ಅಧ್ಯಾಪಕ ಮತ್ತು ಸಂಶೋಧಕರಾಗಿ ವಿಶೇಷ ಕೊಡುಗೆಗಳನ್ನು ನೀಡಿದ್ದರೂ ಅದಕ್ಕೆ ತಕ್ಕ ಪ್ರತಿಫಲ ಇವರಿಗೆ ದೊರಕಿಲ್ಲವೆಂದೇ ಹೇಳಬಹುದು. ಆದರೂ ಎ.ಆರ್.ವಿ. ಆತ್ಮತೃಪ್ತರು. ವಿಜ್ಞಾನಕ್ಕೆ ಸಾಕಷ್ಟು ಮಾನ್ಯತೆ ದೊರಕುತ್ತಿಲ್ಲವೆಂದು ಗೊಣಗುವ ಇಂದಿನ ಯುವ ಪೀಳಿಗೆಗೆ ಇವರೊಬ್ಬ ಮಾದರಿ ವ್ಯಕ್ತಿಯಾಗಿ ನಿಲ್ಲಬಲ್ಲಂತಹವರು.

– ಪ್ರೊ॥ ಜಿ. ಎ. ಅನಂತ ಐಯ್ಯರ್

ಗುರೋವಾಗ ನನ್ನ ಹತ್ರ ಇದ್ದಿದ್ದ ಪುಸ್ತಕಗಳನ್ನೆಲ್ಲಾ ಲೈಬ್ರರಿಗೆ ಕೊಟ್ಟಿಟ್ಟೆ. ಇಲ್ಲೇ ಸರಸ್ವತಿ ಭಂಡಾರ ಅಂತಿದೆ. ಅದಕ್ಕೆ ಎಲ್ಲಾ ಕೊಟ್ಟುಬಿಟ್ಟೆ.

ಸುರೇಂದ್ರ: ಅದನ್ನು ಯಾರಾದ್ರೂ ಬಳಸ್ತಾ ಇದಾರಾ ?

ಎ.ಆರ್.ವಿ.: ಯಾವತ್ತೋ ಯಾರಿಗೋ ಅದು ಉಪಯೋಗಕ್ಕೆ ಬರಬಹುದು. ಈಗ ನಮ್ಮ ಉಪನಿಷತ್ತಿನಲ್ಲಿ ಸತ್ಯಂ ವದ, ಧರ್ಮಂ ಚರ ಅಂತ ಸರಳವಾಗಿ ಹೇಗೆ ಹೇಳುತ್ತೇ ನೋಡಿ. ಮಂತ್ಲಿ ರಿವ್ಯೂ ಅಂತ ಬರ್ತಿತ್ತು.

ಜಿ.ಆರ್.: ಅದು ಈಗಲೂ ಬರ್ತಿದೆ.

ಎ.ಆರ್.ವಿ.: ಅದರೊಳಗೆ, First Principles of Communism ಬಗ್ಗೆ ವಿವರಗಳಿದ್ದವು, ಇವೆಲ್ಲಾ ಒಂದು ರೀತೀಲಿ ಪ್ರಭಾವ ಆಯ್ತು. ಶತಪಥ ಬ್ರಾಹ್ಮಣ, ಬೃಹದಾರಣ್ಯಕ ಉಪನಿಷತ್ತು ಎಲ್ಲಾ ಹೇಳೋದು ಒಂದೇ. ೧೮೪೩ರಲ್ಲಿ ಪ್ರಕಟ ಆಗಿರೋ ಈ ಪುಸ್ತಕಗಳು ಲಂಡನ್ ಲೈಬ್ರರೀಲಿ ಈಗಲೂ ಇವೆ. ಜರ್ಮನ್ ಭಾಷೆಗೂ ತರ್ಜುಮೆ ಆಗಿವೆ. ಗೋ ಮಾತೆಯಲ್ಲಿ ೩೩ ಕೋಟಿ ದೇವತೆಗಳಿದಾರೆ ಅಂದ್ರೆ ಅದೆಲ್ಲಾ ಕಂತೆ ಪುರಾಣ. How Indian society has evolved ಅನ್ನೋ ಪ್ರಶ್ನೆಗೆ ಉತ್ತರ ಹುಡುಕೋದೇ ಒಂದು ಸಾಹಸ ಆಗಿದೆ. ಸಿಮ್ಲಾದಲ್ಲಿ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ಡ್ ಸ್ಟಡೀಸ್ ಅಂತ ಇದೆ. ಅಲ್ಲಿ ಯು.ಪಿ.ಎಸ್.ಸಿ.ನಲ್ಲಿ ಕೆಲಸ ಮಾಡಿದ್ದ ಅಪ್ಪಾದೊರೈ ಅನ್ನೋರೊಬ್ಬರು ಇದ್ರು. ವಯಸ್ಸಾದ ಮನುಷ್ಯ. ಅವರಿಂದ ನಾನು ಬೇಕಾದಷ್ಟು ಕಲ್ತೆ ಅನ್ನೋದು. ಹಾಗೇ ಇರಾವತಿ ಕರ್ವೆ ಪ್ರಸಿದ್ಧ ಸಮಾಜಶಾಸ್ತ್ರಜ್ಞರು. ಮಾನವ ವಿಕಾಸ ಕುರಿತ ಚರ್ಚೆಗಳು ಸಾಕಷ್ಟಿವೆ.

ನಿಮ್ಮ 'ಹೊಸತು'ವಿನಲ್ಲಿ ಸುಧಾ ಸೀತಾರಾಮನ್ ಅನ್ನೋ ಪ್ರಾಧ್ಯಾಪಕರು ಒಂದು ಲೇಖನ ಬರೆದಿದ್ದು ಓದಿದ್ದೆ. ಅಂತಹ ಲೇಖನಗಳು ನಮ್ಮ ಸಮಾಜಕ್ಕೆ ಈಗ ಅಗತ್ಯ ಇವೆ. ಮಾನವಶಾಸ್ತ್ರದ ಬಗೆಗೆ ಹೆಚ್ಚು ಹೆಚ್ಚು ವಿಷಯಗಳು ಬೇಕು. ಇದನ್ನೆಲ್ಲಾ ಯಾರು ಮಾಡಬೇಕು? ಮಾರ್ಕ್ಸ್ ಕೂಡ ರಾಮರಾಜ್ಯದಂತೆ ಮಾದರಿ ಸಮಾಜದ ಕನಸೇ ಕಂಡಿದ್ದ. ಆದರೆ ವಾಸ್ತವ ಸ್ಥಿತೀನೇ ಬೇರೆ.

ನೋಡಿ, ನಾನೊಬ್ಬ ಬಡ ವಿದ್ಯಾರ್ಥಿ ಆಗಿದ್ದೆ. ಫೀಜು ಕಟ್ಬೇಕು, ನನ್ನ ಹತ್ರ ದುಡ್ಡಿರಲಿಲ್ಲ. ಸ್ಕಾಲರ್‌ಷಿಪ್ ಬರ್ತಿತ್ತು. ನಾನು ಕೆಮಿಸ್ಟ್ರಿ ಆನರ್ಸ್ ವಿದ್ಯಾರ್ಥಿ ಆಗಿದ್ದಾಗ ಹಲವೊಂದು ಕಾರ್ಖಾನೆಗಳಿಗೆ ಭೇಟಿ ನೀಡಬೇಕಾಗಿತ್ತು. ಆಗ ಮೈಸೂರಿನಲ್ಲಿ ಸಾಕಷ್ಟು ಕಾರ್ಖಾನೆಗಳೂ ಇದ್ದವು. ನಾವು ಮೊಟ್ಟಮೊದಲಿಗೆ ಹೋಗಿದ್ದು ಬೆಳಗೊಳ ಫ್ಯಾಕ್ಟರಿಗೆ. ಅಲ್ಲಿ ಸಲ್ಫ್ಯೂರಿಕ್ ಆಸಿಡ್, ಅಮೋನಿಯಾ ಗೊಬ್ಬರಗಳನ್ನು ತಯಾರಿಸುತ್ತಿದ್ದರು. ಮೈಸೂರು-ಬೆಂಗಳೂರು ರಸ್ತೇಲಿ ಫೆರೋ ಸಿಲಿಕಾನ್ ಪ್ಲಾಂಟ್ ಇತ್ತು. ಆದರೆ ಆಮೇಲೆ ಅದನ್ನು ಭದ್ರಾವತಿಗೆ ವರ್ಗಾವಣೆ ಮಾಡಿದ್ರು. ಸರ್ ಎಂ. ವಿಶ್ವೇಶ್ವರಯ್ಯ ಒಂದು ಒಳ್ಳೇ ಕೆಲಸ ಮಾಡಿದ್ರು. ೧೯೩೦ರ ದಶಕದಲ್ಲಿ ಇದನ್ನೆಲ್ಲಾ ನೋಡಿ ಇಂತಹುದೇ ಒಂದು ಏನಾದ್ರೂ ಕೆಲಸ ಮಾಡಬೇಕು ಅಂತ ನಿರ್ಧರಿಸಿದೆ.



*ಚಿತ್ರದಲ್ಲಿ: (ಎಡದಿಂದ ಬಲಕ್ಕೆ) ಡಾ|| ಜಿ. ರಾಮಕೃಷ್ಣ, ಎಸ್. ಸುರೇಂದ್ರ, ಡಾ|| ಎಸ್. ಎಸ್. ಲೀಲಾ ಮತ್ತು ಪ್ರೊ|| ಎ. ಆರ್. ವಾಸುದೇವ ಮೂರ್ತಿ*

ಲೀಲಾ: ನಿಮ್ಮನ್ನ Father of Silicon Technology ಅಂತ್ಲೆ ಗುರ್ತಿಸಿದ್ದಾರೆ. ಅದ್ಯಾಕೆ ?

ಎ.ಆರ್.ವಿ.: (ತಾವು ಬರೆದ 'Development of Indigenous Technology for the Manufacture of Modern Silicon Materials' ಎಂಬ ಲೇಖನ ತೋರಿಸುತ್ತಾ) ನೋಡಿ, ಈ ಲೇಖನವನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿದ್ದಾರೆ. ನನಗೆ ದೇಶದ ದಾರಿದ್ರ್ಯ ಬಗೆಹರಿಸೋಕೆ ಏನಾದರೂ ಮಾಡ್ಬೇಕು ಅನ್ನಿಸಿತ್ತು. ನಮ್ಮ ದೇಶದ ಅತ್ಯುನ್ನತ ಕೈಗಾರಿಕೋದ್ಯಮಿ ಅಂದ್ರೆ ಜೆ.ಆರ್.ಡಿ. ಟಾಟಾ. ಅವರನ್ನು ಒಮ್ಮೆ ಭೇಟಿ ಆದಾಗ "ಏನು ಚಿಪ್ಸ್ ತಯಾರಿಸ್ತಿದೀರಾ" ಅಂತ ಕೇಳಿದ್ರು. ಆಗ ನಾನು "ಚಿಪ್ಸ್ ತಯಾರಿಕೆಗೆ ಬೇಕಾದ ವಸ್ತು ಬೇರ್ಪಡಿಸೋ ಕೆಲಸ ಮಾಡ್ತಿದೀನಿ" ಅಂದಿದ್ದೆ. ಆಗ ಯಾರೋ "ನೀವು ಸಂತೋಷವಾಗಿದೀರಾ" ಅಂತ ಕೇಳ್ದಾಗ, ಟಾಟಾ ಅವರು "ಭಾರತೀಯನಾಗಿ ಸಂತೋಷವಾಗಿರೋಕೆ ಹೇಗೆ ಸಾಧ್ಯ" ಅಂದ್ರು. ಆಗ ನಾನು, "ನನಗೆ ತೃಪ್ತಿ ಆಗೋ ಅಷ್ಟಿದೆ. ನನ್ನ ಆಸೆ ಅಂದ್ರೆ ಬಡವರಿಗೆ ಉಪಯುಕ್ತವಾಗುವಂತಹ ಕೆಲಸ ಏನನ್ನಾದರೂ ಮಾಡಬೇಕು ಅನ್ನೋದು" ಅಂದಿದ್ದೆ. ಆಗಲೇ ಈ ಬಿಳಿಕಲ್ಲು ನನ್ನನ್ನ ಆಕರ್ಷಿಸಿದ್ದು. ಭದ್ರಾವತಿ ಹತ್ತಿರ ಬಿಳಿಕಲ್ಲು ಗುಡ್ಡ ಅಂತಾನೇ ಇದೆ.

ಲೀಲಾ: ಅದೇ ತಾನೆ ಬೆಣಚುಕಲ್ಲು.

ಎ.ಆರ್.ವಿ: ಹ್ಞಾ, ಹೌದು. ಎರಡು ಕಲ್ಲು ಉಜ್ಜಿದರೆ ಬೆಂಕಿ ಬರುತ್ತೆ.

ಲೀಲಾ: ಬೆಂಕಿ ಆವಿಷ್ಕಾರ ಆಗಿದ್ದೆ ಹಾಗಲ್ವೆ ?

ಸುರೇಂದ್ರ: ನಿಮಗೆ ಈ ಸಿಲಿಕಾನ್ ಬಗ್ಗೆ ಆಸಕ್ತಿ ಬಂದಿದ್ದೇಗೆ ?

ಎ.ಆರ್.ವಿ: ಅದೇನೋ ಗೊತ್ತಿಲ್ಲ. ಅದೇನು ಅಂತಃಪ್ರಜ್ಞೆಯೋ, ದೈವ ಪ್ರೇರಣೆಯೋ! ಈ ಬಿಳಿಕಲ್ಲು ನೋಡಿದ ಕೂಡಲೇ ಇದರ ಬಗ್ಗೆ ಹೆಚ್ಚು ತಿಳಿಕೋಬೇಕು ಅನ್ನಿಸ್ತು. ಸಾಕಷ್ಟು ಕೆಮಿಸ್ಟ್ರಿ ಬಗ್ಗೆ ಗೊತ್ತಿತ್ತು. ೧೯೪೩ರ ಡಿಸೆಂಬರ್‌ನಲ್ಲಿ ಹಾಗೆ ಅನ್ನಿದ್ದು ೧೯೪೪ರಲ್ಲಿ ಕೊನೆ ವರ್ಷದ ಆನರ್ಸ್‌ಗೆ ಬಂದೆ. ೧೯೪೫ರಲ್ಲಿ ಪದವಿ ಪರೀಕ್ಷೆ ಮುಗೀತು. ಅತಿ ಹೆಚ್ಚು ಅಂಕವನ್ನೂ ಗಳಿಸಿದ್ದೆ. ಮೊದಲನೇ ರ್‍ಯಾಂಕ್ ಪಡೆದಿದ್ದೆ. ಆಗ ನಮ್ಮ ಪ್ರೊಫೆಸರ್ ಸಂಜೀವರಾವ್ ನನ್ನನ್ನು ಕರೆದು "ಯಾಕಪ್ಪ ನನ್ನ ತರಹ ಮೇಷ್ಟ್ರಾಗ್ತೀಯಾ, ಯಾವುದಾದರೂ ಸ್ಪರ್ಧಾ ಪರೀಕ್ಷೆ ತೊಗೊಂಡು ಸರ್ಕಾರದ ಉನ್ನತ ಹುದ್ದೆ ತೊಗೋ" ಅಂತ ಸಲಹೆ ಕೊಟ್ಟಿದ್ರು. ಆದ್ರೆ ನಂಗೆ ಅದ್ಯಾವುದೂ ಬೇಕಿರಲಿಲ್ಲ. ಭಾರತೀಯ ವಿಜ್ಞಾನ ಮಂದಿರ ಸೇರಿದೆ. ಇದು ನಿಜವಾಗ್ಲೂ ದೇವಮಂದಿರ. ಒಳ್ಳೆ ಅವಕಾಶ ಸಿಕ್ತು. ಇಡೀ ಜಗತ್ತಿನಲ್ಲಿ ಇಂತಹ ಕೆಲವೇ ಸಂಸ್ಥೆಗಳು ಸಂಶೋಧನಾ ಕೃಷಿಗೆ ಒಳ್ಳೆ ವೇದಿಕೆ ಕೊಡುವಂತಹವು.

ಸುರೇಂದ್ರ: ನಿಮಗೆ ಈ ಹೊತ್ತಿಗೆ ಸಿಲಿಕಾನ್ ಮಹತ್ವದ ಬಗ್ಗೆ ಒಂದು ಪೂರ್ವಗ್ರಹ ಜ್ಞಾನ ಇತ್ತು. ಅವತ್ತಿಗೂ ಇವತ್ತಿಗೂ ಈ ವಿಷಯದ ಸಂಶೋಧನೆಗಳಲ್ಲಿ ವ್ಯತ್ಯಾಸವೇನಾದರೂ ಇದೆಯೇ ?

ಎ.ಆರ್.ವಿ.: ಅದಕ್ಕೇ ಬರ್ತಿದೀನಿ ನೋಡಿ. ಒಂದು ಮೂಲಭೂತ ಜ್ಞಾನದ ಪರಿಚಯ ಮಾಡಿಕೊಂಡ್ರೆ ಅದನ್ನ ನಮಗೆ ಬೇಕಾದ ಹಾಗೆ ಅಳವಡಿಸಿಕೊಂಡು ಬಳಸಬಹುದು. ಈಗ ನೀವು ಸಿಲಿಕಾನ್ ಚಿಪ್ಸ್ ಕೇಳಿದೀರಾ. ಇದಕ್ಕೂ ಮುಂಚೆ ಟ್ರಾನ್ಸಿಸ್ಟರ್ ಬಳಕೆಗೆ ಬಂತು. ಡಯೋಡ್‌ಗಳು ತಯಾರಾದವು. ಈಗ ಚಿಪ್ಸ್ ಬಂದಿದೆ. ವಿದ್ಯುತ್ ಸರಬರಾಜಿಗೆ ಒಂದು ಒಳ್ಳೆ ವಿದ್ಯುತ್ ವಾಹಕ ಬೇಕು. ತಾಮ್ರ, ಬೆಳ್ಳಿ, ಚಿನ್ನ – ಹೀಗೆ ಯಾವುದಾದ್ರೂ ಆಗಬಹುದು. ಈ ವಾಹಕದ ಪೂರ್ಣ ಪ್ರಮಾಣದ ಕಾರ್ಯಕ್ಕೆ ಅದನ್ನು ನಿರೋಧಕ ವಸ್ತುವಿನಿಂದ ಲೇಪಿಸಬೇಕು. ಅದಕ್ಕೆ ಈ ಪಿಂಗಾಣಿ ಲೇಪನ ಅತ್ಯುತ್ತಮ. ಅದೆಲ್ಲಿಂದ ಬರುತ್ತೆ? ಸಿಲಿಕೇಟ್

ವಸ್ತುವಿನಿಂದ. ಆದಕ್ಕಾಗಿ ಪ್ರೋಸ್ಲೀನ್ ಫ್ಯಾಕ್ಟರಿ ಪ್ರಾರಂಭ ಆಯಿತು. ಅಂದರೆ ವಿದ್ಯುತ್ ಹರಿಸಲು ಒಳ್ಳೆ ವಿದ್ಯುತ್‌ವಾಹಕ ಮತ್ತು ನಿರೋಧಕ ವಸ್ತುವಿನ ಲೇಪನ ಎರಡೂ ಮುಖ್ಯ. Quantity changes the quality ಅಂತ ಕೇಳಿದೀರೋ ಇಲ್ವೋ? ಅದಕ್ಕೆ ವಿಜ್ಞಾನ ಮತ್ತು ತಂತ್ರಜ್ಞಾನದ ಅಳವಡಿಕೆ ಮುಖ್ಯ ಆಗುತ್ತೆ. ತಂತ್ರಜ್ಞಾನ ಅಭಿವೃದ್ಧಿ ಆದಷ್ಟೂ ಕಾರ್ಯ ಕ್ಷಮತೆ ಹೆಚ್ಚಾಗುತ್ತಾ ಹೋಗಬಹುದು. $೧೦^{೩೦೦}$ ವರೆಗೂ ಸಾಮರ್ಥ್ಯ ಹೊಂದಬಹುದು. $೧೦^{೩}$ ಅಂದರೆ ಸಾವಿರ ಪಟ್ಟು, $೧೦^{೩೦೦}$ ಅಂದ್ರೆ ನೋಡ್ಕೊಳ್ಳಿ ಎಷ್ಟಾಗಬಹುದು.

ಲೀಲಾ : ಈಗ ಅದೇ ತಾನೇ ನ್ಯಾನೋ ಟೆಕ್ನಾಲಜಿ ಅನ್ನಸ್ಕೋಂಡಿರೋದು.

ಎ.ಆರ್.ವಿ : ಈಗೊಂದು ೫-೧೦ ವರ್ಷದಿಂದ ನ್ಯಾನೋ ಟೆಕ್ನಾಲಜಿ ಘೋಷಣೆ ಕೇಳ್ತಾ ಇದೀವಿ. ಇದಕ್ಕೂ ಮುಂಚೆ ಸೂಪರ್‌ಕಂಡಕ್ಟರ್ ಮನೆ ಮಾತಾಗಿತ್ತು. ನಮ್ಮ ದೇಶದ ವಿಜ್ಞಾನಿಗಳು ಇದನ್ನ ಹೇಳ್ಕೊಂಡು ಭಾರಿ ಗದ್ದಲ ಮಾಡಿದ್ರೇ ಹೊರತು ಉಪಯುಕ್ತವಾಗೋ ಅಂತಹ ಯಾವ ಸಂಶೋಧನೆಗಳೂ ಇಲ್ಲಿ ನಡೀಲಿಲ್ಲ.

'ಸಿಲಿಕಾನ್' – ಕೂಡ ಒಂದು ಸೆಮಿ-ಕಂಡಕ್ಟರ್. ಪೀರಿಯಾಡಿಕ್ ಟೇಬಲ್‌ನಲ್ಲಿ ಇದಕ್ಕೂ ಮುಂಚೆ ಜರ್ಮೇನಿಯಂ ಅನ್ನೋ ವಸ್ತು ಇದೆ. ಇವೆರಡೂ ನೈಜ ಅರೆವಾಹಕಗಳು. ಜರ್ಮೇನಿಯಂ ರಸಾಯನ ಕ್ಷೇತ್ರಕ್ಕೆ ಪರಿಚಯ ಆದಾಗ ಎಲೆಕ್ಟ್ರಾನಿಕ್ ಉದ್ಯಮದಲ್ಲಿ ಭಾರಿ ಮಹತ್ವ ಪಡೀತು. ಜರ್ಮೇನಿಯಂಗಿಂತ ಸಿಲಿಕಾನ್ ಹೆಚ್ಚು ಶಾಖವನ್ನ ತಾಳಬಲ್ಲದ್ದಾದ್ದರಿಂದ ಸೌರಕೋಶಗಳಲ್ಲಿ, ಎಲೆಕ್ಟ್ರಾನಿಕ್ ಚಿಪ್ಸ್‌ಗಳಲ್ಲಿ ಉಪಯುಕ್ತ ಅನ್ನಿಸಿತು.

ನಿಸರ್ಗದಲ್ಲಿ ಸಿಲಿಕಾ – ಅಂದ್ರೆ ಮರಳಿನ ರೂಪದಲ್ಲಿ, ಸಿಲಿಕೇಟ್ ರೂಪದಲ್ಲಿ ಹೇರಳವಾಗಿ ಸಿಲಿಕಾನ್ ದೊರಕಿದ್ರೂ, ಅದರ ಸಂಸ್ಕರಣೆ ಒಂದು ದೊಡ್ಡ ಸಮಸ್ಯೆ. ಶುದ್ಧ ಸಿಲಿಕಾನ್ ತಯಾರಿಕೆ ದುಬಾರಿ. ಕರ್ನಾಟಕ, ತಮಿಳುನಾಡು, ಕೇರಳ ಎಲ್ಲಾ ಕಡೇನೂ ಹೇರಳವಾಗಿ ಬಿಳಿಕಲ್ಲು ಸಿಗುತ್ತೆ. ಆದ್ರೂ ಸಿಲಿಕಾನ್ ಆಮದು ಮಾಡಿಕೊಳ್ಳೊ ಪರಿಸ್ಥಿತಿ. ಇದಕ್ಕೆಲ್ಲಾ ದುಡ್ಡು ಎಲ್ಲಿಂದ ಬರಬೇಕು?

ಕೇಂದ್ರ ಸರ್ಕಾರದಲ್ಲಿ ಗೋಪಿ ಅರೋರ ಎಂಬುವರು ಇದ್ರು. ಅವರು ನನ್ನನ್ನ "ನೀವು ಸಿಲಿಕಾನ್ ತಂತ್ರಜ್ಞಾನ ನಮ್ಮಲ್ಲಿದೆ ಅಂತೀರಾ, ನಿಮ್ಮ ಸಹೋದ್ಯೋಗಿಗಳ ಅಂತಹ ತಂತ್ರಜ್ಞಾನ ನಮ್ಮಲ್ಲಿ ಇಲ್ಲ ಅಂತಾರೆ. ನೀವೇ ಹೇಳಿ, ನಾನು ಪ್ರಧಾನಿಗಳ ಏನಂತ ಶಿಫಾರಸ್ಸು ಮಾಡಬೇಕು?" ಅಂತ ಕೇಳಿದ್ರು.

ಈ ತಂತ್ರಜ್ಞಾನ, ಎಲ್ಲಾ ವಿಜ್ಞಾನ ಶಾಖೆಗಳ ಮೂಸೆಯಿಂದ ಹೊರಹೊಮ್ಮ ವಂತಹದ್ದು. ಸಿಲಿಕಾನ್ ಬಹೂಪಯೋಗಿ ಧಾತು. ಅದಿಲ್ಲದೇ ಜೀವನವೇ ಇಲ್ಲ ಹಾಸುಹೊಕ್ಕಾಗಿದೆ ಅಂತ ಹೇಳ್ತಾರಲ್ಲ ಹಾಗೆ. ಭಾರಿ ಕಲ್ಲು ಬಂಡೆಯಿಂದ ಹಿಡಿದು ಮೈಕ್ರೋಫೋನ್, ಟಿ.ವಿ., ಕಂಪ್ಯೂಟರ್ಸ್ ಎಲ್ಲದರಲ್ಲೂ ಸಿಲಿಕಾನ್ ಇದೆ. ಅಷ್ಟೇ ಏಕೆ ಹೊಟ್ಟೆ ಕೆಟ್ಟಿದೆ ಅಂತ ಮಿಲ್ಕ್ ಆಫ್ ಮೆಗ್ನಿಸಿಯಾ ತೊಗೋತೀರಲ್ಲ, ಅದರಲ್ಲ ಇದೆ. ಭತ್ತ ಬೆಳೆಯೊಕ್ಕೆ ಜಾಸ್ತಿ ನೀರು ಬೇಕಾಗುತ್ತೆ. ಭತ್ತದ ಹೊಟ್ಟನ್ನ ಸುಟ್ಟು ಬೂದಿ ಮಾಡಿದ್ರೆ ಅದರಲ್ಲಿ ಶೇಕಡ ೯೯ರಷ್ಟು ಸಿಲಿಕಾನ್ ಇರುತ್ತೆ. ಸಿಲಿಕಾನ್ ನೀರಿನಲ್ಲಿ ಸುಲಭವಾಗಿ ಕರಗುವುದಿಲ್ಲ. ರೈತರು ಭತ್ತದ ಹೊಟ್ಟನ್ನ ಸುಟ್ಟುಹಾಕಿಬಿಡ್ತಿದ್ದರು. ಆದರೆ ಬಿ.ವಿ. ಪಂಡಿತರು ಭತ್ತದ ಹೊಟ್ಟನ್ನು ಸುಟ್ಟು ಬೂದಿಮಾಡಿ ನಂಜನಗೂಡು ಹಲ್ಲುಪುಡಿ ತಯಾರಿಸಿ ದುಡ್ಡು ಮಾಡಿದ್ರು.

ಬಸುಮತಿ ಅಕ್ಕಿ ಕೆ.ಜಿ.ಗೆ ೪೦ ರೂಪಾಯಿ, ಸಾಧಾರಣ ಅಕ್ಕಿಗೆ ಕೇವಲ ೨೦ ರೂಪಾಯಿ. ಇಲ್ಲೇ ಇರೋದು ನೋಡಿ ಸೂಕ್ತ ವಿಜ್ಞಾನದ ಅಳವಡಿಕೆ ಮತ್ತು ತಂತ್ರಜ್ಞಾನದ ಬಳಕೆ. ಉಪಯುಕ್ತ ವಸ್ತುಗಳನ್ನು ಪಡೆಯುವ ಸಾಧನವೇ ತಂತ್ರಜ್ಞಾನವಾಗಬೇಕು.

**ಸುರೇಂದ್ರ :** ನಿಮ್ಮ ಕಾಲದಲ್ಲಿ ಸಂಶೋಧನೆ ಮಾಡುವ ಸವಲತ್ತುಗಳು ಏನೂ ಇರಲಿಲ್ಲ. ಆದರೂ ನೀವು ಹೇಗೆ ಇಷ್ಟೆಲ್ಲಾ ಸಾಧಿಸಲು ಸಾಧ್ಯವಾಯಿತು?

ಎ.ಆರ್.ವಿ. : ಬರ್ನಾಲರ Social Function of Science ಎಂಬ ಅದ್ಭುತ ಪುಸ್ತಕ ಓದಿದ್ದೀರಲ್ಲಾ! ಮೈಸೂರಿನಲ್ಲಿ ಹೆಚ್. ಎಸ್. ಕೃಷ್ಣಮೂರ್ತಿ 'ದೇಶಬಂಧು' ಅನ್ನೋ ಮಾಸ (ವಾರ)? ಪತ್ರಿಕೆ ಪ್ರಕಟಿಸುತ್ತಿದ್ದರು. ಪ್ರತಿ ಸಂಪುಟಕ್ಕೂ ವಿಜ್ಞಾನದ ಉಪಯುಕ್ತತೆಯ ಬಗೆಗೆ ಲೇಖನ ಬರೆಯುತ್ತಿದ್ದೆ.

**ಸುರೇಂದ್ರ :** ವೈಜ್ಞಾನಿಕ ಜ್ಞಾನ ಮತ್ತು ಕೈಗಾರಿಕಾ ಕ್ರಾಂತಿಗಳಿಗೆ


With Best Compliments From



B. I. PUBLICATIONS PVT. LTD.

147, Infantry Road, Bangalore - 560 001
Ph : 22204652, 22260542, 22207717 Fax: 91-080-22205696
e-mail : bangalore@bipgroup.com

Regd. Office : 359, D.N. Road, Mumbai - 400 023 H. O: B. I. House, 54, Janpath, New Delhi - 110 001

**BRANCHES :** AHMEDABAD-1, Aishwarya Apartments, 9-B, Kumkum Society, Near Sardar Patel Statue, Stadium Road, Ahmedabad - 380 014 CHENNAI-9/10, Agurchand Mansion (1st Floor), 150, Mount Road, Chennai - 600 002 • KOLKATA- 13/1A, Govt. Place East, Kolkata - 700 069 • MUMBAI - Lansdowne House, 18 Lansdowne Road (Behind Regal Cinema), Mumbai - 400 039 • NEW DELHI- 13, Daryaganj, New Delhi - 110 002 • THIRUVANANTHAPURAM-28/2758, Geethanjali, Chettikulangara, Tiruvananthapuram-695 001






ಂಬಂಧವಿದೆಯೇ ? ಅದರಿಂದಾದ ಬದಲಾವಣೆಗಳಲ್ಲಿ ನಿಮ್ಮ ಪಾತ್ರವೇನಿತ್ತು ?

**ಎ.ಆರ್.ವಿ.** : ಈಗ ನೋಡಿ ಅಕ್ಕಿ ಇದ್ರೆ ಅದರಲ್ಲಿ ಚಿತ್ರಾನ್ನಾನೂ ಮಾಡಬಹುದು, ೇಸರಿಬಾತ್‌ಅನ್ನೂ ಮಾಡಬಹುದು. ಅಂದ್ರೆ ಮೂಲವಸ್ತು ಒಂದಿದ್ರೆ ಅದನ್ನು ುಪಯುಕ್ತವಾಗಿ ಬಳಸುವಂತಹ ತಂತ್ರಜ್ಞಾನ ರೂಪಿಸಬಹುದು.

**ಸುರೇಂದ್ರ** : ಈ ನಿಮ್ಮ ಎಲ್ಲಾ ಪ್ರಯತ್ನಗಳಿಗೂ ಮನ್ನಣೆ ಸಿಕ್ಕಿತೇ ?

**ಎ.ಆರ್.ವಿ.** : ಯಾರಿಂದ ? ನಮ್ಮಲ್ಲಿ ನಿಷ್ಕಾಮ ಕರ್ಮ ಅಂತ ಇದೆಯೋ ಲ್ಲವೋ ? ಹಲವಾರು ವಿಜ್ಞಾನಿಗಳು ಫಲಾಪೇಕ್ಷೆಯಿಲ್ಲದೆ ಜಗತ್ತಿನ ಒಳಿತಿಗೆ ುಡಿದಿದ್ದಾರೆ. ಎಷ್ಟೋ ಜನ ಪೇಟೆಂಟ್ ಮಾಡಿಬಿಡಿ ಅಂತಾನೂ ಹೇಳ್ತಿದ್ರು.

ನನ್ನ ಹೆಸರು ಯಾರು ಕೊಟ್ರೊ ಗೊತ್ತಿಲ್ಲ. ಡಿಸೆಂಬರ್ ೧೯೭೮ರಲ್ಲಿ ಯುನೆಸ್ಕೋ ತಿಯಿಂದ ಅಂತಾರಾಷ್ಟ್ರೀಯ ಸಮ್ಮೇಳನ ಟೊರಾಂಟೋದಲ್ಲಿ ನಡೆದಾಗ University and Industry Interaction in Chemistryಗೆ ಭಾರತವನ್ನು ್ರತಿನಿಧಿಸುವ ಅವಕಾಶ ಲಭಿಸಿತ್ತು. ಅಲ್ಲಿ ಹೋಗಿ ನೋಡಿದ್ರೆ ಈ ದಿಶೆಯಲ್ಲಿ ಾವುದೇ ದೇಶದ ಪ್ರಗತಿಗಿಂತ ನಮ್ಮಲ್ಲೇ ಹೆಚ್ಚಾಗಿದೆ ಅನ್ನೋ ಅರಿವಾಯಿತು. ಂದು ಒಂದು ಸಣ್ಣ ಸಂಶೋಧನಾ ಲೇಖನ ಆಗಿತ್ತು, ಎಲೆಕ್ಟ್ರಾನಿಕ್ಸ್ ಪಿಎಚ್. ಡಿ. ಡೆದಿದ್ದ ಮೆಟ್ಟೂರ್ ಕೆಮಿಕಲ್ ಅಂಡ್ ಇಂಡಸ್ಟ್ರಿಯಲ್‌ನ ಮ್ಯಾನೇಜಿಂಗ್ ಡೈರೆಕ್ಟರ್ ದರಲ್ಲಿ ಆಸಕ್ತಿ ತೋರಿದ್ದರು. ತಂತ್ರಜ್ಞಾನ ಅಳವಡಿಸಿಕೊಂಡು ಟನ್ನುಗಟ್ಟಲೆ ಲೆಕ್ಟ್ರಾನಿಕ್ಸ್ ಗ್ರೇಡ್ ಸಿಲಿಕಾನ್ ತಯಾರಿಸೋ ಕಾರ್ಯವನ್ನೂ ಪ್ರಾರಂಭಿಸಿದರು.

ರಾಜೀವ್ ಗಾಂಧಿ ಪ್ರಧಾನಿಯಾಗಿದ್ದಾಗ ಇಂತಹ ತಂತ್ರಜ್ಞಾನದ ಅಳವಡಿಕೆಯನ್ನು ್ಲಾಘಿಸಿ ಮ್ಯಾನೇಜಿಂಗ್ ಡೈರೆಕ್ಟರ್‌ರಿಗೆ ಪದ್ಮಶ್ರೀ ಮತ್ತು ನನಗೆ ಪದ್ಮಭೂಷಣ ೊಡುವ ಶಿಫಾರಸ್ಸು ಮಾಡಿದ್ರು. ರಾತ್ರೋರಾತ್ರಿ ಪೊಲೀಸರು ಬಂದು ಮಾಹಿತಿ ಳನ್ನೆಲ್ಲಾ ಸಂಗ್ರಹಿಸುವ ಹಂತಕ್ಕೂ ಬಂದಿತ್ತು. ದುರದೃಷ್ಟವಶಾತ್ ಪ್ರಧಾನಿಯೇ ೊಲೆಯಾದ್ದರಿಂದ ಅಂತಹ ಪ್ರಯತ್ನ ನೆನೆಗುದಿಗೆ ಬಿದ್ದಿತು. ಆಮೇಲೆ ಏನಾಯ್ತೋ ನನಗಂತೂ ಗೊತ್ತಿಲ್ಲ. ಒಮ್ಮೆ ರಾಜೀವ ಗಾಂಧಿ ನನ್ನೊಡನೆ ಆರು ಗಂಟೆ ಕಾಲ ಕೂತು ಿಲಿಕಾನ್ ತಂತ್ರಜ್ಞಾನದ ಒಳಸುಳಿವುಗಳನ್ನೆಲ್ಲಾ ತಿಳಿದುಕೊಂಡು ಅದರ ಬೆಳೆವಣಿಗೆಗೆ ್ಯತೆ ನೀಡಬೇಕೆಂದು ತೀರ್ಮಾನಿಸಿದ್ದರು.

**ಸುರೇಂದ್ರ** : ಕರ್ನಾಟಕದವರೇ ಆದ ನೀವು ಕೈಗಾರಿಕಾ ಕ್ರಾಂತಿಯ ಹೆಸರಿನಲ್ಲಿ ಮ್ಮ ರಾಜ್ಯವನ್ನು ಬಿಟ್ಟು ತಮಿಳುನಾಡನ್ನೇ ಯಾಕೆ ಆರಿಸಿಕೊಂಡ್ರಿ ?

**ಎ.ಆರ್.ವಿ.** : ಮೆಟ್ಟೂರ್ ಕೆಮಿಕಲ್ ಅಂಡ್ ಇಂಡಸ್ಟ್ರಿಯಲ್ ಕಾರ್ಪೊರೇಷನ್ ಿಮಿಟೆಡ್‌ನಲ್ಲಿ ಹೈ ಗ್ರೇಡ್ ಪ್ಯೂರಿಟಿ (ಪರಿಶುದ್ಧ) ಸಿಲಿಕಾನ್ ತಯಾರಿಕೆಗೆ ಬೇಕಾದ ಮೂಲಭೂತ ವ್ಯವಸ್ಥೆಯ ಪರಿಸರ ಇತ್ತು. ಹಾಗಾಗಿ ಅಲ್ಲೇ ಪ್ರಾರಂಭ ಮಾಡಿದ್ವಿ.

(ಅವರಲ್ಲಿ ಸಂಗ್ರಹ ಮಾಡಿಕೊಂಡಿದ್ದ ಸಿಲಿಕಾನ್‌ನ ಬಹುರೂಪಿ ಸಂಯುಕ್ತಗಳನ್ನು ೋರಿಸುತ್ತಾ) ಈ ಒಂದೊಂದು ಸಿಲಿಕಾನ್ ಕಾಯಗಳನ್ನು ಕುರಿತ ಸ್ವಾರಸ್ಯಕರ ಭಾಷಣಗಳನ್ನೇ ಕೊಡಬಹುದು. ಕಪ್ಪು ವಜ್ರದಂತೆ ಮಿರುಗುತ್ತಿರುವ ಇದನ್ನು ನೋಡಿ, ಇದೇ ಸಿಲಿಕಾನ್ ಕಾರ್ಬೈಡ್.

**ಲೀಲಾ** : ಇದು ಪ್ರಾಕೃತಿಕವಾಗಿ ಹೀಗೇ ಸಿಗುತ್ತಾ ?

**ಎ.ಆರ್.ವಿ.** : ಇಲ್ಲ. ಇದನ್ನು ತಯಾರು ಮಾಡಬೇಕು. ಇದರಲ್ಲಿ ಶೇಕಡ ೯೮ ಭಾಗ ಸಿಲಿಕಾನ್ ಇದೆ. ಕಾರ್ಬನ್ ಜೊತೆ ಅತಿ ಹೆಚ್ಚು ಶಾಖಕ್ಕೆ ಒಡ್ಡಿದಾಗ ಈ ಥರ ಹೊಳೆಹೊಳೆಯುವ ವಸ್ತು ತಯಾರಿಸಬಹುದು. ಸಿಲಿಕಾನ್ ಮೇಲೆ ಹರಿಕಥೆ ಮಾಡು ಅಂದ್ರೆ ಒಂದಿನಾ ಪೂರ್ತಿ ಮಾಡ್ತೀನಿ ಬೇಕಾದ್ರೆ.

**ಸುರೇಂದ್ರ** : ತುಂಬಾ ಸ್ವಾರಸ್ಯವಾಗಿ ವಿವರಿಸುತ್ತೀರಿ ನೀವು !

**ಎ.ಆರ್.ವಿ** : ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್‌ವತಿಯಿಂದ ದಾವಣಗೆರೇಲಿ ಒಂದು ಭಾಷಣ ನೀಡಿದ್ದೆ. ಆಗ ೨-೩ ಸಾವಿರ ಜನ ಬಂದಿದ್ರು.

**ಸುರೇಂದ್ರ** : ಈ ಸಿಲಿಕಾನ್ ಸಂಶೋಧನೆ ನಮ್ಮಲ್ಲಿ ಪ್ರಾರಂಭವಾಗಿದ್ದು ಯಾವಾಗ ?

**ಎ.ಆರ್.ವಿ.** : ಸೆಂಟ್ರಲ್ ಕಾಲೇಜಿನಲ್ಲಿ ನಮ್ಮ ಪ್ರೊಫೆಸರ್ ಬಿ. ಸಂಜೀವ್‌ರಾವ್ ಮತ್ತು ಅವರ ಸಂಶೋಧನಾ ತಂಡ ಇದನ್ನು ಹುಟ್ಟುಹಾಕಿತು. ಸಿಲಿಕಾ ಜೆಲ್, ಅದರ ಲಕ್ಷಣಗಳು ಇದರ ಬಗೆ ಎಲ್ಲಾ ಅಧ್ಯಯನ ನಡೀತಿತ್ತು. 'ಸಿಲಿಕಾನ್' – ಕುರಿತ ಚಿಂತನೆ ನಾನೇ ಹುಟ್ಟುಹಾಕಿದ್ದು. ಆಗ ನಮ್ಮ ಪ್ರೊಫೆಸರ್ ''ನಾನು ಮಾಡದೇ ಇರೋ ಕೆಲಸ ನೀ ಮಾಡ್ತಾ ಇದ್ದಿಯಾ'' ಅಂದಿದ್ರು.

**ಲೀಲಾ** : ಈ ಸಣ್ಣ ತುಣುಕುಗಳ ತರಹ ಇದೆಯಲ್ಲ ಇದೇನು ?

**ಎ.ಆರ್.ವಿ.** : ಇದು ಮಾಲಿಕ್ಯುಲಾರ್ ಸೀವ್ – ಅಣು ಜರಡಿ (ವಂದರಿ). ಇದನ್ನು ನೀರು ಶುದ್ಧೀಕರಣದಲ್ಲಿ ಸೋಸುವುದಕ್ಕೆ ಉಪಯೋಗಿಸಬಹುದು.

**ಸುರೇಂದ್ರ** : ಸ್ಫಟಿಕಾನಾ ?

**ಎ.ಆರ್.ವಿ.** : ಅಲ್ಲ. ಪಟಿಕಾ – ಪೊಟಾಸಿಯಂ ಅಲ್ಯುಮಿನಿಯಂ ಸಲ್ಫೇಟ್. ಆದರೆ ಈ ಮಾಲಿಕ್ಯುಲಾರ್ ಸೀವ್‌ನಲ್ಲಿ ಸಿಲಿಕಾ ಇದೆ. ಬಿಳಿ ಶಿಲೆ – ಸ್ಫಟಿಕಾ. ಅಂದ್ರೆ ಪಟಿಕಾ ಮತ್ತು ಸ್ಫಟಿಕಾ ಬೇರೆ ಬೇರೆ. ಅವುಗಳ ರಾಸಾಯನಿಕ ಸಂಯೋಜನೆಯೇ ಬೇರೆ. ಈಗ ರಾಸಾಯನಿಕ ಕ್ರಿಯೆಗಳ ಬಗ್ಗೆ ಸ್ವಲ್ಪ ತಿಳಕೊಂಡ್ರೆ ಸಾಕು. ಅವುಗಳ ಬಣ್ಣ, ರೂಪ, ಗುಣ ಎಲ್ಲಾನೂ ಬದಲಾಯಿಸಬಹುದು. ಕೃತಕವಾಗಿ Ruby ತಯಾರಿಸ ಬಹುದು. ಅದು Alumina - chromium. ಮೆಟ್ಟುಪಾಳ್ಯಂನಲ್ಲಿ ಒಬ್ಬ ಚಂದ್ರಪ್ಪ ಅಂತ ಇದ್ದ. ಆತ ಈ ತನಕ Rubyನ ತಯಾರಿಸಿ ಒಳ್ಳೆ ವ್ಯಾಪಾರ ಮಾಡ್ತಿದ್ದ. ಈಗ ನೋಡಿ ಈ ಬಿಳಿಕಲ್ಲು ಒರಳುಕಲ್ಲು ಆಗತ್ತೆ, ಶಿವಲಿಂಗಾನೂ ಆಗುತ್ತೆ. ಆಂಧ್ರದಲ್ಲಿ ಗುಂಟೂರಿನ ಹತ್ತಿರ ಅಮರಾವತಿ ಅಂತ ಇದೆ. ನೀವು ನೋಡಿದೀರೋ ಇಲ್ವೋ. ಅಲ್ಲಿ ಬುದ್ಧನ ಸ್ತೂಪಗಳಿವೆ. ಕೃಷ್ಣಾನದಿ ದಂಡೆ ಮೇಲೆ ಅಮರೇಶ್ವರನ ಗುಡೀಲಿ ಸ್ಫಟಿಕ ಲಿಂಗ ಇದೆ.






ಸುರೇಂದ್ರ : ನಿಮಗೆ ಸರ್ಕಾರ ಅಥವಾ ಯಾವುದೇ ಬೇರೆ ಸಂಸ್ಥೆಯಿಂದ ಈ ತಂತ್ರಜ್ಞಾನ ಅಳವಡಿಸಿಕೊಳ್ಳೋಕೆ ಸಹಕಾರ ಸಿಗಲಿಲ್ವೆ ?

ಎ.ಆರ್.ವಿ. : ೧೯೮೩-೮೪ರಲ್ಲಿ ಪ್ರಧಾನಿ ಆಗಿದ್ದ ಇಂದಿರಾ ಗಾಂಧಿ ಇಂತಹದ್ದೊಂದು ತಂತ್ರಜ್ಞಾನವನ್ನು ವಿದೇಶದಿಂದ ಆಮದು ಮಾಡಿಕೊಳ್ಳೋಕೆ ಬಿಟ್ಟಿರಲಿಲ್ಲ. ಅವರ ನಂತರ ಸಿಲಿಕಾನ್ ತಂತ್ರಜ್ಞಾನಕ್ಕೆ ಒತ್ತು ನೀಡುವ ಪ್ರಯತ್ನ ಗಳಾದವು. ಕೆಲವು ವಿಜ್ಞಾನಿಗಳು, ಅಧಿಕಾರಿಗಳು ಇದಕ್ಕೆ ವಿರೋಧ ತೋರಿಸಿದ್ರು. ಆಗ ಮಹೇಶ್ವರ್ ದಯಾಳ್ ಅನ್ನೋ ಒಬ್ಬ ಸೆಕ್ರೆಟರಿ ಇದ್ರು. ಅವರು ನನ್ನನ್ನು ಕರೆಸಿ, ''ಮೂರ್ತಿ, ನೀವು ಇಂತಹದ್ದೊಂದು ತಂತ್ರಜ್ಞಾನ ನಮ್ಮಲ್ಲಿದೆ ಅಂತೀರಿ. ಆದರೆ ಉಳಿದ ವಿಜ್ಞಾನಿಗಳು ಅಂತಹುದೊಂದು ವಿಧಾನ ನಮ್ಮಲ್ಲಿ ಇಲ್ಲ ಅಂತಾರೆ ?'' ಅಂತ ಕೇಳಿದ್ರು. ಆಮೇಲೆ ನನ್ನ ವಿವರಣೆ ಕೇಳಿ ಆಗಿನ ಪ್ರಧಾನಿ ಆಗಿದ್ದ ರಾಜೀವ್ ಗಾಂಧಿಗೆ ಈ ತಂತ್ರಜ್ಞಾನದ ಶಿಫಾರಸ್ಸು ಮಾಡಿದ್ರು. ೧೯೮೫ರಲ್ಲಿ ಪ್ರಾರಂಭ ಮಾಡಿ ಅಂತ ಕೇಳ್ಕೊಂಡ್ರು. ಆಗ ನಾನು ಒಂದು ವರ್ಷ ಕಾಲಾವಕಾಶ ಕೊಡಿ, ಎಲ್ಲಾ ತಯಾರಿ ಮಾಡಿಕೊಡ್ತೇನೆ, ಅಂತ ಕೇಳ್ಕೊಂಡೆ. ಅವರಿಗೆ ಎಲ್ಲಾ ತರಾತುರೀಲೇ ನಡೀಬೇಕಾಗಿತ್ತು. ಇಷ್ಟೊಂದು ವರ್ಷಗಳೇ ಕಾದಿದ್ರಿ. ಒಂದು ವರ್ಷ ಕಾಯೋದು ನಷ್ಟ ಆಗೋಲ್ಲ ಅಂತ ಕೇಳ್ಕೊಂಡಾಗ ಕೈಗಾರಿಕಾ ಹಂತದಲ್ಲಿ ಕಾರ್ಯನಿರತರಾಗಕ್ಕೆ ಅವಕಾಶ ಮಾಡಿಕೊಟ್ಟಿದ್ದರು.

ನಾನು ಮದ್ರಾಸಿನ ಕಲಾಕ್ಷೇತ್ರದಲ್ಲಿ ನನ್ನ ಮಕ್ಕಳ ಜೊತೆಗೆ ಶಾಕುಂತಲ ನಾಟಕ ನೋಡ್ತಾ ಕೂತಿದ್ದೆ. ಮೆಟ್ಟೂರ್ ಕೆಮಿಕಲ್ಸ್ ಅಂಡ್ ಇಂಡಸ್ಟ್ರಿಯಲ್ ಕಾರ್ಪೊರೇಷನ್‌ನ ಮ್ಯಾನೇಜಿಂಗ್ ಡೈರೆಕ್ಟರ್ ರಮಣಿಯವರ ಜೊತೆ ಮರುದಿನಾನೇ ದೆಹಲಿಗೆ ಹೋಗಬೇಕು ಅನ್ನೋ ಕರೆ ಬಂತು. ಬರೀ ಖಾದಿ ಬಟ್ಟೆ ಮಾತ್ರ ತೊಗೊಂಡು ಹೋಗಿದ್ದೆ. ಅದೇ ಬಟ್ಟೆಗಳನ್ನೇ ಹಾಕಿಕೊಂಡು ದೆಹಲಿಗೆ ಹೋದೆ. ಅಲ್ಲಿ ಛಳೀನೋ ಛಳಿ. ಸರ್ಕಾರ ಒಂದು ವರ್ಷದ ಅವಧಿ ಕೊಡೋದಕ್ಕೆ ಒಪ್ಪಿಕೊಂಡ್ರು. ಅದನ್ನೇ ಸವಾಲಾಗಿ ತೊಗೊಂಡು ಹತ್ತು ತಿಂಗಳಲ್ಲಿ ಯೋಜನೆ ಯಶಸ್ವಿ ಆಗೋ ಹಾಗೆ ಮಾಡಿದ್ವಿ. ನಮ್ಮ ವಿದ್ಯಾರ್ಥಿಗಳು, ಕೈಗಾರಿಕೆಯಲ್ಲಿ


# M. I. PUBLICATIONS

First Floor, Maruti Tower, 20/4, Sanjay Place, AGRA-282 002

Useful books for college students, ICSE, CBSE, Higher Secondary, +2 and competitive examinations

By Prof. R. P. Chaturvedi

**HINDI-HINDI-ENGLISH DICTIONARY**
WITH PRONUNCIATION IN ENGLISH

**HINDI-ENGLISH DICTIONARY**

**ENGLISH-ENGLISH DICTIONARY** (MINI)

**Unparalleled Books by Prof. M. P. Bhatia**
*For I.A.S. P.C.S., College Students and all other higher competitive examination*

**LATEST ESSAYS**

**ADVANCED ESSAYS**

The books contain all latest important topics with detailed analysis of the subject/topic




ಪ್ರೊ|| ಎ. ಆರ್. ವಾಸುದೇವ ಮೂರ್ತಿ ಮತ್ತು ಅವರ ಶ್ರೀಮತಿಯವರು

ಕೆಲಸಕ್ಕಿದ್ದೋರು ಹಗಲಿರುಳು ಶ್ರಮಿಸಿ ಅದನ್ನ ಕಾರ್ಯಗತಗೊಳಿಸಿದರು.

ಕಚ್ಚಾವಸ್ತುನ ರಫ್ತು ಮಾಡಿದ್ರೆ ಒಂದು ಟನ್‌ಗೆ ಸುಮಾರು ೪೦ ಡಾಲರ್ ಸಿಗಬಹುದು. ಆದರೆ ಅದೇ ಸಿಲಿಕಾನ್ ರೂಪದಲ್ಲಿ ಸಿದ್ಧಪಡಿಸಿ ಕಳಿಸಿದ್ರೆ ೪ ಕೋ[...] ಮಾಡಬಹುದು. ಇದಕ್ಕೆ ಮೂಲಭೂತವಾಗಿ ಬೇಕಾದ ಸೌಕರ್ಯಗಳನ್ನ ಒದಗಿಸಬೇಕು.

ರಾಮಕೃಷ್ಣ ಪರಮಹಂಸರು ಒಂದು ಕಡೆ ಹೇಳಿದಾರೆ ನೋಡಿ, ಹೂ ಅರಳಿದ[...] ದುಂಬಿಗಳನ್ನು ಆಹ್ವಾನಿಸಬೇಕಾದ್ದಿಲ್ಲ ಅಂತ. ಹಾಗೆ ಒಳ್ಳೆ ಕೆಲಸ ಮಾಡಿದಾಗ ಅದ[...] ಆರೋಗ್ಯಕರ ರೀತಿಯಲ್ಲಿ ಅರ್ಥೈಸುವಂಥ ಮನೋಭಾವ ಬೆಳೆಸಿಕೊಳ್ಳಬೇಕು.

ವಿಜ್ಞಾನಿಗಳೂ ಮನುಷ್ಯರೇ ತಾನೆ. ಅಲ್ಲೂ ಅಸೂಯೆ, ಈರ್ಷ್ಯೆ ಎಲ್ಲಾ ಇರುತ್[...] ಅದೇ ಮುಖ್ಯ ಆಗಬಾರದು ಅಷ್ಟೇ. ಸರ್ ಸಿ. ವಿ. ರಾಮನ್‌ರಿಗೆ 'ಭಾರತ ರತ್ನ' ಪ್ರಶ[...] ಬಂದಾಗ ನಾನು ಹೋಗಿ ಅವರನ್ನ ಅಭಿನಂದಿಸಿದ್ದೆ. ಆಗ ಅವರು ನೀನ[...] ಇಂತಹದ್ದನ್ನೆಲ್ಲಾ ನಂಬೋನಲ್ಲ ಅಂತ ನನಗೆ ಗೊತ್ತು ಅಂದಿದ್ದರು. ನಿಮ್ಮನ್ನ ಸರ್ಕಾ[...] ಸನ್ಮಾನಿಸಿದೆ. ನಿಮ್ಮನಲ್ಲದೆ ಇನ್ಯಾರನ್ನು ಗೌರವಿಸಬೇಕು ಅಂದಿದ್ದೆ. ಆತ ನಿಜವಾ[...] ಅರ್ಥದಲ್ಲಿ ದೊಡ್ಡ ವ್ಯಕ್ತಿ. ಕಾಳಿದಾಸನ ಪ್ರಸಿದ್ಧಿ ಗುರುತಿಸುವಾಗ ಆತನ ನಂತರ[...] ಎಣಿಕೆಗೆ ಎರಡನೆಯ ವ್ಯಕ್ತಿಯೇ ಸಿಗದಿದ್ದಾಗ ಎರಡನೇ ಬೆರಳಿಗೆ ಅನಾಮಿಕ ಎಂತಲೆ[...] ಹೆಸರಾಗಲಿಲ್ಲವೇ ಹಾಗೆ.

(ಈ ಚರ್ಚೆಗಳಾಗುತ್ತಿದ್ದಾಗ ಶ್ರೀಮತಿ ವಾಸುದೇವ ಮೂರ್ತಿಯವರು ಕಾಫಿಯ[...] ಸತ್ಕಾರ ಮಾಡಿದರು. ನಮಗೆ ಮಾತ್ರ ನೀಡಿ ಪ್ರೊಫೆಸರ್‌ಗೆ ಕಾಫಿ ಕೊಡಲಿಲ್ಲ.)

**ಸುರೇಂದ್ರ :** ತಮಗೆ ಸಾರ್ ?

**ಎ.ಆರ್.ವಿ. :** ನಾನು ಕುಡಿಯೊಲ್ಲ.

**ಜಿ.ಆರ್. :** ಯಾವಾಗ್ಲೂ ಕುಡಿಯಲ್ವೋ, ಈಗ ಮಾತ್ರಾನೋ ?

**ಎ.ಆರ್.ವಿ. :** ನನ್ನ ಜೀವಮಾನದಲ್ಲೇ ನಾನು ಕಾಫಿ ರುಚಿ ನೋಡಿಲ್ಲ. ನೀರನ[...] ಬಿಟ್ಟು ನಾನು ಏನೂ ಕುಡಿಯುವುದಿಲ್ಲ.

* * *

**ಸುರೇಂದ್ರ :** ಸಿಲಿಕಾನ್ ಉಪಯೋಗಗಳು ಇಷ್ಟೊಂದು ಇವೆ ಅನ್ನೋ[...] ಆಶ್ಚರ್ಯ.

**ಎ.ಆರ್.ವಿ. :** ಬೆಂಗಳೂರಿನ ಸುತ್ತಾಮುತ್ತಾ ಬೇಕಾದಷ್ಟು ಸಿಲಿಕಾನ[...] ಉದ್ಯೋಗಗಳು ನಡೀತಿವೆ. ವೈಟ್‌ಫೀಲ್ಡ್ ಹತ್ರ ಒಬ್ಬ ಗುಜರಾತಿ ಬಿಯರ[...] ಬಾಟಲಿಗಳನ್ನ ತಯಾರಿಸುತ್ತಿದ್ದಾನೆ. ನಾವು ಬಳಸೊ ಪ್ಲೇಟ್‌ಪೌಡರ್ ಇದ್ಯಲ್ಲ[...] ಸಬೀನಾ, ಅದೂನೂ ಸಿಲಿಕಾ ಸಂಯುಕ್ತವೇ. ಮಾಗಡಿ ರೋಡ್‌ನಲ್ಲಿ ಒಬ್ಬ[...] ಉದ್ಯೋಗಪತಿ ಇದಾನೆ, ಆಗಾಗ ನನ್ನ ಹತ್ರ ಚರ್ಚೆಗೆ ಬರ್ತಿದ್ದ. ಅವನು ನೀವ[...] ಬ್ರಾಹ್ಮಣರು, ವ್ಯಾಪಾರ ಮಾಡಕ್ಕೆ ಗೊತ್ತಿಲ್ಲ ಸಾರ್. ಬೇರೆಯವರಾಗಿದ್ದರೆ ತಮ[...] ಮನೆಯಲ್ಲೇ ಕೂತು ಏನೆಲ್ಲಾ ಮಾಡ್ಕೊಂಡ್‌ಬಿಡ್ತಿದ್ರು ಅಂದಿದ್ದ. ನನ್ನಂತಹವರ[...] ಬೇಕಾದಷ್ಟು ಜನ ಸಿಗ್ತಾರೆ. ಈ ಆಧುನಿಕ ವಿಜ್ಞಾನ ಬೆಳೆದು ಬಂದಿದ್ದಾಗ್ಲೂ ಹೇಗೆ [...] ಆಯುರ್ವೇದ, ರಸ ಶಾಸ್ತ್ರ – ಇದೆಲ್ಲಾ ವಿಜ್ಞಾನದ ಬೆಳವಣಿಗೆಯ ಹೆಜ್ಜೆಗಳು[...] ಲೋಹಗಳು, ಗಣಿಗಾರಿಕೆ, ಶಸ್ತ್ರಗಳು ಎಲ್ಲಾ ವಿಷಯಗಳ ಬಗೆಗೂ ವಿವರಣೆ ಸಿಗುತ್ತೆ[...] ನಮ್ಮಲ್ಲಿ ಕೆಲವು ಸಂಸ್ಥೆಗಳು ಭಾರತೀಯ ವಿಜ್ಞಾನ-ತಂತ್ರಜ್ಞಾನ ಪರಂಪರೆ ಕುರಿ[...]

ಪ್ರೊ॥ ಎ. ಆರ್. ವಾಸುದೇವ ಮೂರ್ತಿಯವರ ಅನೇಕ ಪಿಎಚ್.ಡಿ. ಶಿಷ್ಯರಲ್ಲಿ ನಾನೂ ಒಬ್ಬಳು. ನಾವು ಕಂಪ್ಯೂಟರ್ ಪೂರ್ವಯುಗದ ಸಂಶೋಧಕರು. ಹಾಗಾಗಿ ಸಂಶೋಧನಾ ಸಾರಾಂಶಗಳ ಪೂರ್ಣ ಮಾಹಿತಿಗಳನ್ನು ಸಂಗ್ರಹಿಸುವ ಕಾರ್ಯ ಅತಿ ಪ್ರಯಾಸದ್ದಾಗಿತ್ತು. ನಮ್ಮ ಗುರುಗಳು ಯಾವುದೇ ಸಂಶೋಧನಾ ಸಮಸ್ಯೆ ಕೈಗೆತ್ತಿಕೊಳ್ಳುವ ಮುನ್ನ ಅದರ ಸಂಪೂರ್ಣ ಪರಿಷ್ಕರಣೆ ನಡೆಸದೇ ಕಾರ್ಯಗತಮಾಡುವುದರಲ್ಲಿ ನಂಬಿಕೆ ಇಡಬಾರದೆಂಬ ಮೊದಲ ಪಾಠ ಕಲಿಸಿದ್ದರು. ಪ್ರತಿಯೊಂದು ಹಂತದಲ್ಲೂ ವೈಯಕ್ತಿಕ ಆಸ್ಥೆ ತೋರಿಸಿ, ಪರೀಕ್ಷಿಸಿ, ಸೂಕ್ತ ಸಲಹೆಗಳನ್ನು ಆಗಿಂದಾಗ್ಗೆ ನೀಡುತ್ತಿದ್ದರು. ಶಿಷ್ಯರಿಗೆ ವಿಷಯದ ಬಗೆಗೆ ಚರ್ಚಿಸುವ ಪೂರ್ಣ ಸ್ವಾತಂತ್ರ್ಯವಿತ್ತು. ಸಂಶೋಧನಾ ಲೇಖನಗಳನ್ನು ಪ್ರಕಟಣೆಗೆ ಕಳುಹಿಸುವ ಮುನ್ನ ಹಸ್ತಪ್ರತಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಿಯೇ ರವಾನಿಸುತ್ತಿದ್ದರು. ಅವರೊಬ್ಬ ಅಸಾಮಾನ್ಯ ಸಂಶೋಧನಾ ಮಾರ್ಗದರ್ಶಕರೆಂದೇ ನನ್ನ ಭಾವನೆ. ನಾವು ಅವರಿಂದ ಶಿಸ್ತಿನ ಸಂಶೋಧನಾ ಸೂಕ್ಷ್ಮಗಳನ್ನು ಅರಿತಿದ್ದಲ್ಲದೆ ಅವನ್ನು ಮುಂದೆಯೂ ಅಳವಡಿಸಿಕೊಳ್ಳಲು ಸಾಧ್ಯವಾಯಿತು.

ಮೆಟ್ಟೂರ್ ಕೆಮಿಕಲ್ಸ್‌ನೊಂದಿಗೆ ಎ.ಆರ್.ವಿ. ಮಾಡಿಕೊಂಡಿದ್ದ ಯೋಜನೆಯ ಅಂತಿಮ ಹಂತದಲ್ಲಿ ಅದನ್ನು ನೋಡಿಕೊಳ್ಳುವ ಅವಕಾಶ ನನಗೆ ದೊರಕಿತ್ತು.

ಮೂಲದಿಂದ ಅಂತಿಮ ಘಟ್ಟದ ಎಲೆಕ್ಟ್ರಾನಿಕ್ ಗ್ರೇಡ್ ಪ್ಯೂರ್ ಸಿಲಿಕಾನ್ ತಯಾರಿಕೆಯಲ್ಲಿ ಅತ್ಯಂತ ಉತ್ಸಾಹದಿಂದ ತಮ್ಮನ್ನು ತೊಡಗಿಸಿಕೊಂಡಿದ್ದರು. ಈ ಸಿಲಿಕಾನ್ ತಯಾರಿಕೆ ಡೋಪ್ಡ್ ಸಿಲಿಕಾನ್ (ಬೇರೊಂದು ವಸ್ತುವನ್ನು ಸಿಲಿಕಾನ್‌ನೊಂದಿಗೆ ಬೆರೆಸಿದ್ದು) ಚಿಪ್ಸ್ ತಯಾರಿಕೆಯಲ್ಲಿ ಉಪಯುಕ್ತ ವಸ್ತು.

ಇದನ್ನು ಬಳಸಿ ಸೂರ್ಯಶಕ್ತಿಯನ್ನು ವಿದ್ಯುಚ್ಛಕ್ತಿಯಾಗಿ ಪರಿವರ್ತಿಸಬಹುದಾದ ಸೌರಕೋಶಗಳನ್ನು ತಯಾರಿಸಬಹುದು. ವಿಶೇಷವಾಗಿ ಗುಡ್ಡಗಾಡು ಪ್ರದೇಶಗಳಲ್ಲಿ ಬೀದಿ ದೀಪಗಳನ್ನು ಬೆಳಗಿಸಲು ಇವುಗಳನ್ನು ಬಳಸಲಾಗಿತ್ತು.

ಇವರೊಂದಿಗೆ ಭೌತಶಾಸ್ತ್ರ ವಿಭಾಗದಲ್ಲಿ ಪ್ರೊಫೆಸರ್ ಆಗಿದ್ದ ಪ್ರೊ॥ ಜಿ. ಸೂರ್ಯನ್ ಅವರ ಸಹಕಾರದಿಂದ ಅಂತಾರಾಷ್ಟ್ರೀಯ ಮಟ್ಟದಲ್ಲಿ ಹಣಕಾಸು ವಿನಿಮಯಕ್ಕೂ ರಾಷ್ಟ್ರಮಟ್ಟದಲ್ಲಿ ಅಪಾರ ಹಣದ ಉಳಿತಾಯಕ್ಕೂ ಕಾರಣವಾಯಿತು.

ಅವರೊಂದಿಗೆ ನಡೆಸುತ್ತಿದ್ದ ಚರ್ಚೆಗಳಿಂದ ಕಲಿತ ಪಾಠ ನನ್ನ ವೃತ್ತಿ ಜೀವನಕ್ಕೆ ಸೋಪಾನವಾಯಿತೆಂದರೆ ಅತಿಶಯೋಕ್ತಿಯೇನಲ್ಲ.

– ಪ್ರೊ॥ ಡಿ. ಕೆ. ಪದ್ಮಾ

ಅನೇಕ ಭಾಷಣಗಳನ್ನ ಏರ್ಪಡಿಸುತ್ತಿರುತ್ತವೆ. ಮಹಾಭಾರತದಲ್ಲಿ ಮಸೂರದ ಬಗೆಗೆ ವಿವರಣೆ ಸಿಗತ್ತೆ. ಮಸೂರ ಬಳಸಿ ಸೂಕ್ಷ್ಮ ವಸ್ತುಗಳನ್ನು ದೊಡ್ಡದಾಗಿ ಮಾಡಿ ಹೇಗೆ ನೋಡಬಹುದು ಅನ್ನೋ ವಿವರಣೆ ಇದೆ. ಮಸೂರ ಬಳಸಿ ಸೂರ್ಯನಿಂದ ಹೇಗೆ ಬೆಂಕಿ ಮಾಡಬಹುದು ಅನ್ನೋದಕ್ಕೆ ಒಣಗಿದ ಸೆಗಣಿ ಮೇಲೆ ಮಸೂರ ಬಳಸಿ ಸೂರ್ಯ ರಶ್ಮಿಯನ್ನ ಕೇಂದ್ರೀಕರಿಸಿದರೆ ಬೆಂಕಿ ಹಚ್ಚಬಹುದು ಅನ್ನುತ್ತೆ.

ಇಷ್ಟೆಲ್ಲಾ ವೈಜ್ಞಾನಿಕ ಹಿನ್ನೆಲೆಯಲ್ಲಿ ನಾವು ಬೆಳೆದಿದ್ದರೂ ಈಗಲೂ ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ಪರ್ಧಿಸಲು ಸೋತಿದ್ದೇವೆ. ಮೆಟ್ಟೂರ್‌ನಿಂದ ಫೆರೋಸಿಲಿಕಾನ್‌ಅನ್ನು ಸೋವಿಯತ್ ಯೂನಿಯನ್ ಆಮದು ಮಾಡಿಕೊಳ್ಳುತ್ತಿತ್ತು. ಆದರೆ ಈಗ ಚೀನಾ ಅದನ್ನು ಪೂರೈಸುತ್ತಾ ಇದೆ. ಯಾಕಂದ್ರೆ, ಅದು ಅಗ್ಗದ ಬೆಲೆಗೆ ಪೂರೈಸುತ್ತೆ. ಸರ್ಕಾರದ ವಿಧಿ-ವಿಧಾನಗಳೇ ಇದಕ್ಕೆ ಕಾರಣ. ಹಾಗಾಗಿ ಚೀನಾ ಮುಂದುವರೆಯುತ್ತಿದೆ. ನಾವು ಹಿಂದುಳಿಯುತ್ತಿದ್ದೇವೆ.

**ಜಿ.ಆರ್.** : ನೀವು ಭಾರತೀಯ ವಿಜ್ಞಾನ ಇತಿಹಾಸವೇ ಅಲ್ಲದೆ ಭಾರತದ ಇತಿಹಾಸದ ಬಗೆಗೂ ಆಸಕ್ತಿ ಬೆಳೆಸಿಕೊಂಡಿದ್ದೀರಿ.



**ಎ.ಆರ್.ವಿ.** : ಪ್ರೌಢಿಮೆ ಇಲ್ಲ. ''ಅಲ್ಪಸ್ಯ ಕಾಲೇ ಬಹ್ವಸ್ಯ ವಿದ್ಯಾ'' ಅನ್ನೋ ಹಾಗೆ.

**ಲೀಲಾ** : ನೀವು ಸಂಸ್ಕೃತದಲ್ಲಿನ ರಸಾಯನಶಾಸ್ತ್ರದ ಬಗೆಗಿನ ಗ್ರಂಥಗಳ ಕೃಷಿಯನ್ನೂ ಮಾಡಿದ್ದೀರಲ್ವಾ ?

**ಎ.ಆರ್.ವಿ.** : ಆಗಲೇ ಹೇಳಿದ್ದೀನಲ್ಲಾ, ಭಾರತದ ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಪರಂಪರೆ ಅರ್ಥಮಾಡ್ಕೋಬೇಕು ಅಂದ್ರೆ ಸಂಸ್ಕೃತ ಭಾಷೆ ಮೊದಲು ಕಲಿತುಕೋಬೇಕು. ಸಂಸ್ಕೃತ ಗೊತ್ತಿಲ್ಲದಿದ್ದರೆ ಭಾರತೀಯತೆ ಅರ್ಥಮಾಡಿಕ್ಕೊಳ್ಳೋಕೆ ಸಾಧ್ಯವಿಲ್ಲ.

**ಲೀಲಾ** : ನೀವು ಸಂಶೋಧನೆ ಮಾಡ್ತಿದ್ದಾಗ ನಡೆದ ಯಾವುದಾದರೂ ಸ್ವಾರಸ್ಯಕರ ಘಟನೆ ಬಗೆಗೆ ಹೇಳ್ತೀರಾ ?

**ಎ.ಆರ್.ವಿ.** : ಒಂದು ಸರ್ತಿ ಸಲ್ಫರ್ ನೈಟ್ರೈಡ್ ತಯಾರಿ ಮಾಡಬೇಕಿತ್ತು. ಆ ರಾಸಾಯನಿಕ ಕ್ರಿಯೆಗೆ ಅಮೋನಿಯಾ ಸೇರಿಸೋ ಹಂತದಲ್ಲಿ ಕಾಯಿಸುತ್ತಿದ್ದ ಪಾತ್ರೆಯ ಮುಚ್ಚಳ ತೆಗೆದಾಗ ಒಂದು ೧೪. ಕೆ.ಜಿ. ತೂಕದ ರಾಸಾಯನಿಕ ವಸ್ತು ಇದ್ದ ಪಾತ್ರೆ ಸಿಡಿದು ಇಡೀ ಕೊಠಡಿ ಹೊಗೆಯಿಂದ ತುಂಬಿಕೊಂಡುಬಿಡ್ತು. ಅದು ತುಂಬಾ ವಿಷಕಾರಕ. ತಕ್ಷಣ ಕೊಠಡಿಗೆ ಬೀಗ ಹಾಕಿ ಹೊಗೆಯೆಲ್ಲಾ ಶಾಂತ ಆಗೋವರೆಗೂ ಎರಡು ದಿನಗಳ ಕಾಲ ತೆಗೀಲೇ ಇಲ್ಲ. ಈ ಸಂಶೋಧನೆ ಒಂದು ಧಾರ್ಮಿಕ ಆಚರಣೆಯ ತರಹ. ಕೆಲವೊಂದು ಸಲ ಅಚಾತುರ್ಯಗಳು ನಡೆದುಬಿಡುತ್ವೆ. ನಮ್ಮಲ್ಲಿ ಕೆಂಪಯ್ಯ ಅಂತ ಒಬ್ಬ ಅಟೆಂಡರ್ ಇದ್ದ. ಅವನು ತುಂಬಾ ನಿಷ್ಠಾವಂತ. ನಮ್ಮ ಕಾರ್ಯಾಚರಣೆ ಕುರಿತ ಸಾಕ್ಷ್ಯಚಿತ್ರ ತೆಗೆಯೋವಾಗ ಈತನ ಕೊಡುಗೆಯ ಬಗೆಗೂ ಮಾಹಿತಿ ಸೇರಿಸಿದ್ವಿ. ಪಾಪ, ಹೀಗೆ ಆಸಿಡ್‌ಗಳ ಜತೆ ಕೆಲಸ ಮಾಡೋವಾಗ ಮೂರು ಬೆರಳು ಮತ್ತು ಒಂದು ಕಣ್ಣು ಕಳೆದುಕೊಂಡುಬಿಟ್ಟ.

**ಜಿ.ಆರ್.** : ನಿಮ್ಮ ಸಮಯವನ್ನ ನಮಗಾಗಿ ನೀಡಿದ್ದಕ್ಕೆ ಧನ್ಯವಾದಗಳು. ನಮಸ್ಕಾರ. 'ಹೊಸತು' ಓದುಗರಾಗಿ ದಯವಿಟ್ಟು ಮಾರ್ಗದರ್ಶನ ನೀಡುತ್ತಿರಿ.

---

ಡಾ॥ ಎನ್. ಎಸ್. ಲೀಲಾ
ಸಂಖ್ಯೆ ೧೦೫, ವೆಸ್ಟ್ ಪಾರ್ಕ್ ಅಪಾರ್ಟ್‌ಮೆಂಟ್, ೧೪-'ಎ' ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೩

*With Best Compliments From*




**Kamadhenu Sales Corporation**

Dealers in : Graphic Chemicals & Materials for Offset, Blockmakers, P.C.B & Screen Printing etc.

No. 9, 1st Cross, K. G. Road, Hotel Vasanth Building
(Next to Menaka Talkies) Bangalore - 560 009
Ph. : 22204195, 22204196. Telefax : 080-22252192
E-mail : kamdhenu@bgl.vsnl.net.in

With Best Compliments From



**M/S. STANDARD CARTONS**

Manufactuerers of
EFLUTED & CORRUGATED BOXES

No. B-97. 2nd Cross, 1st Stage
Peenya Industrial Estate
Bangalore - 560 058
Phone : 28394588
Cell : 9845131027/9880704203



ರೂ. 280



ರೂ. 350



ರೂ. 325



ರೂ. 300



ರೂ. 320



ರೂ. 280



ರೂ. 300



ರೂ. 350



**ಐ.ಬಿ.ಎಚ್. ಪ್ರಕಾಶನ**

77, ರಾಮರಾವ್ ಲೇಔಟ್, 2ನೇ ಮುಖ್ಯರಸ್ತೆ
ಬನಶಂಕರಿ ಮೂರನೇ ಹಂತ
ಬೆಂಗಳೂರು - 560 085
ದೂರವಾಣಿ : 26698088, 65598689




ರೂ. 165



ರೂ. 100

ಶಾಖೆ : ಪುಸ್ತಕ ಲೋಕ, 'ಜನಪದ ಲೋಕ ಆವರಣ', ಬೆಂಗಳೂರು–ಮೈಸೂರು ಹೆದ್ದಾರಿ, ರಾಮನಗರ – 571 511. ಮೊ : 98450 70613

# ಮಾಡು ಇಲ್ಲವೆ ಮಡಿ ಚಳವಳಿಯಲ್ಲಿ ಕರ್ನಾಟಕದ ಪಾತ್ರ

ಡಾ॥ ಎಚ್. ಎಸ್. ಗೋಪಾಲ ರಾವ್

ಭಾರತೀಯ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟದ ಂತಿಮ ಹಾಗೂ ನಿರ್ಣಾಯಕ ಘಟ್ಟದಲ್ಲಿ ಮಹಾತ್ಮಾ ಂಧಿ ಭಾರತೀಯ ಜನತೆಗೆ ಕೊಟ್ಟ ಕರೆ 'ಮಾಡು ಲ್ಲವೆ ಮಡಿ' ಮತ್ತು ಬ್ರಿಟಿಷರಿಗೆ ಕೊಟ್ಟ ಕರೆ 'ಭಾರತ ಟ್ಟುತೊಲಗಿ' (ಕ್ವಿಟ್ ಇಂಡಿಯಾ). ಎರಡೂ ಕರೆಗಳು ತ್ಯಂತ ಮಹತ್ವ ಪಡೆದವು. ಭಾರತದ ಇಡೀ ಜನತೆ ್ವತಂತ್ರ್ಯವನ್ನು ಪಡೆದೇ ತೀರುವ ದೃಢ ನಿರ್ಧಾರ ಾಡಿತು. ಸ್ವಾತಂತ್ರ್ಯಕ್ಕಾಗಿ ನಡೆದ ಈ ಹೋರಾಟವನ್ನು ಗಸ್ಟ್ ಚಳವಳಿ ಎಂದೂ ಕರೆಯಲಾಗಿದೆ. ೧೯೧೮ ಂದ ೧೯೪೨ರವರೆಗೆ ಗಾಂಧೀಜಿ ನಡೆಸಿದ ಆರು ುಖ ಅಹಿಂಸಾತ್ಮಕ ಚಳವಳಿಗಳ ಪೈಕಿ, ಕೊನೆಯದಾದ ್ವಟ್ ಇಂಡಿಯಾ' ಚಳವಳಿಯು ನಿರ್ಣಾಯಕವೇ ಯಿತು. ಆ ಕರೆಗೆ ಪ್ರೇರಣೆಯಾದದ್ದು ಜರ್ಮನಿಯ ಟ್ಲರ್ ಆರಂಭಿಸಿದ ಎರಡನೆಯ ವಿಶ್ವಯುದ್ಧ.

ಭಾರತದ ವೈಸ್‌ರಾಯ್ ಭಾರತದ ಯಾವುದೇ ಾಯಕರನ್ನು ಕೇಳದೆ, ೧೯೩೯ರ ಸೆಪ್ಟೆಂಬರ್ ೩ರಂದು ರ್ಮನಿಯ ಮೇಲೆ ಯುದ್ಧ ಘೋಷಿಸಿದರು. ಯಾವ ಾರತೀಯ ನಾಯಕರೂ ಭಾರತವು ಯುದ್ಧದಲ್ಲಿ ಾಲುದಾರನಾಗುವುದನ್ನು ಒಪ್ಪಲಿಲ್ಲ. ಜರ್ಮನಿಯ ಟ್ಲರನ ಸರ್ವಾಧಿಕಾರಿ ಧೋರಣೆಯನ್ನು ವಿರೋಧಿಸಿ, ್ರಿಟನ್ ಯುದ್ಧ ಆರಂಭಿಸಿದೆ ಎಂಬುದು ಬ್ರಿಟನ್ ಾಯಕರ ಅಭಿಪ್ರಾಯವಾಗಿತ್ತು. ಭಾರತದ ಸ್ವಾತಂತ್ರ್ಯ ನ್ನೇ ಅಪಹರಿಸಿರುವ ಬ್ರಿಟನ್‌ನ ನಿರಂಕುಶಾಧಿಕಾರ ನ್ನು ಭಾರತ ಒಪ್ಪಲಿಲ್ಲ. ಭಾರತಕ್ಕೆ ಪೂರ್ಣ ಸ್ವಾತಂತ್ರ್ಯ ೊಟ್ಟು ಅನಂತರ ನೆರವು ಕೇಳಿ ಎಂದು ಭಾರತೀಯ ಾಯಕರು ಸೂಚಿಸಿದರು. ಕಾಂಗ್ರೆಸ್‌ನ ಸೂಚನೆಗೆ ್ರಿಟನ್ ಒಪ್ಪಲಿಲ್ಲ. ಆಗ ಕಾಂಗ್ರೆಸ್ ಪಕ್ಷ ಅಧಿಕಾರ ದಲ್ಲಿದ್ದ ಪ್ರದೇಶಗಳಲ್ಲಿ ಮಂತ್ರಿಗಳು ಮತ್ತು ಸದಸ್ಯರು ಾಜೀನಾಮೆ ನೀಡಿ, ಆಡಳಿತದಿಂದ ದೂರ ಉಳಿದರು. ಆದರೆ ಭಾರತವನ್ನು ವಶಪಡಿಸಿಕೊಳ್ಳಲು ಜಪಾನ್ ಈಶಾನ್ಯ ದಿಕ್ಕಿನಿಂದ ಮುನ್ನುಗ್ಗುತ್ತಿರುವ ಸಮಯದಲ್ಲಿ ಅದನ್ನು ಹೇಗಾದರೂ ತಡೆಯಲು ಬ್ರಿಟನ್‌ಗೆ ನೆರವು ನೀಡಬೇಕಾಗಬಹುದು ಎಂಬ ವಿಷಯದಲ್ಲಿ ಕೆಲವು ಕಾಂಗ್ರೆಸ್ ಮುಖಂಡರಲ್ಲಿ ಭಿನ್ನಾಭಿಪ್ರಾಯವಿತ್ತು. ಯುದ್ಧದ ಸನ್ನಿವೇಶದಲ್ಲಿ ನೆರವು ಕೇಳುವುದು ಸ್ವಾಭಾವಿಕವಾದ್ದರಿಂದ, ಸಂದರ್ಭದ ಸದುಪಯೋಗ ಮಾಡಿಕೊಳ್ಳಬಯಸಿದ ಮುಸ್ಲಿಂ ಲೀಗ್ ಸ್ವತಂತ್ರ ಪಾಕಿಸ್ತಾನಕ್ಕೆ ಬೇಡಿಕೆಯನ್ನು ಮುಂದಿಟ್ಟಿತು.

ವಿಶ್ವದ ಎರಡನೆಯ ಮಹಾಯುದ್ಧವು ಜನರಲ್ಲಿ ಹೊಸ ಆಲೋಚನೆಗಳನ್ನು ಬಿತ್ತಿತ್ತು. ಬ್ರಿಟನ್ ಸರ್ಕಾರ ತನ್ನ ಆಡಳಿತ ಕಕ್ಷೆಯಲ್ಲಿದ್ದ ಎಲ್ಲ ಪ್ರದೇಶಗಳ ನೆರವನ್ನು ಅಪೇಕ್ಷಿಸಿತು. ಈ ಸಂದರ್ಭವು ಭಾರತದ ರಾಜಕೀಯ ಚಿಂತನೆಗೆ ಹೊಸ ಆಯಾಮವೊಂದನ್ನು ಒದಗಿಸಿತು. ಯುದ್ಧದಲ್ಲಿ ಸಹಕಾರ ಬೇಕಾದರೆ ಸ್ವಾತಂತ್ರ್ಯ ಅತ್ಯವಶ್ಯಕ ಎಂಬುದು ಭಾರತೀಯ ನಾಯಕರ ಒಂದೇ ಬೇಡಿಕೆಯಾಯಿತು. ಭಾರತಕ್ಕೆ ಸ್ವಾತಂತ್ರ್ಯದ ಬದಲು ಸಂಸ್ಥಾನೀ (ಡೊಮಿನಿಯನ್) ಸ್ಥಾನ ನೀಡುವುದು ಬ್ರಿಟನ್‌ನ ಇಂಗಿತವಾಗಿತ್ತು.

ಈ ಸಂದರ್ಭದಲ್ಲಿ ಭಾರತದ ರಾಜಕೀಯ ಸಮಸ್ಯೆಗಳಿಗೆ ಪರಿಹಾರ ಹುಡುಕುವ ನೆಪದಲ್ಲಿ ಬ್ರಿಟಿಷ್ ಸರ್ಕಾರ ಕ್ರಿಪ್ಸ್ ಆಯೋಗವನ್ನು ನೇಮಿಸಿತು. ೧೯೪೨ರ ಮಾರ್ಚ್ ೨೨ರಿಂದ ಏಪ್ರಿಲ್ ೧೨ರವರೆಗೆ ಭಾರತದ ವಿವಿಧ ರಾಜಕೀಯ ಮುಖಂಡರನ್ನು ಸಂದರ್ಶಿಸಿದ ಸ್ಟಾಫರ್ಡ್ ಕ್ರಿಪ್ಸ್ ನೀಡಿದ ಕೆಲವು ಸಲಹೆಗಳ ಪೈಕಿ ಯುದ್ಧ ಮುಗಿದ ತಕ್ಷಣ ಭಾರತದಲ್ಲಿ ಚುನಾಯಿತ ರಾಜ್ಯಾಂಗದ ವ್ಯವಸ್ಥೆ ಸ್ಥಾಪನೆ ಆಗುತ್ತದೆ ಮತ್ತು ಆಗ ವೈಸ್‌ರಾಯ್ ಅವರ ಅಧಿಕಾರವು ಈಗಿರುವ ರೀತಿಯಲ್ಲೇ ಮುಂದುವರಿಯುತ್ತದೆ ಎಂಬವು ನಾಯಕರ ಗಮನ ಸೆಳೆದವು. ಈ ಯಾವ ಸಲಹೆಯನ್ನೂ ಯಾವುದೇ ಭಾರತೀಯ ನಾಯಕರು ಒಪ್ಪುವ ಸ್ಥಿತಿಯಲ್ಲಿರಲಿಲ್ಲ.

ಜಪಾನ್ ಯಾವುದೇ ಸಂದರ್ಭದಲ್ಲಿ ಭಾರತವನ್ನು ಆಕ್ರಮಿಸಿಕೊಳ್ಳುವ ಸಾಧ್ಯತೆಗಳು ಹೆಚ್ಚಾಗಿದ್ದವು. ಭಾರತವು ಜಪಾನ್‌ನ ವಶವಾದರೆ ಅದು ಮಿತ್ರ ರಾಷ್ಟ್ರಗಳಿಗೆ ದೊಡ್ಡ ಪೆಟ್ಟಾಗುತ್ತಿತ್ತು. ಅಮೆರಿಕಾದ ಅಧ್ಯಕ್ಷ ರೂಸ್‌ವೆಲ್ಟ್ ಬ್ರಿಟನ್‌ನ ಪ್ರಧಾನಿ ಚರ್ಚಿಲ್‌ಗೆ ಭಾರತದ ಬೇಡಿಕೆಗಳನ್ನು ಈಡೇರಿಸುವುದು ಸೂಕ್ತ ಎಂಬ ಸಲಹೆ ನೀಡಿದರು. ಆದರೆ, ಚರ್ಚಿಲ್ ಯಾವುದೇ ಕಾರಣದಿಂದ ತಾನು 'ಅರೆನಗ್ನ ಫಕೀರ' ಗಾಂಧಿಯ ಸಲಹೆಗಳನ್ನು ಕೇಳುವ ಸ್ಥಿತಿಯಲ್ಲಿಲ್ಲ ಎಂದು ಘೋಷಿಸಿದ. ಸಿಂಗಪುರ, ಮಲಯ ಮತ್ತು ಬರ್ಮಾಗಳನ್ನು ವಶಪಡಿಸಿಕೊಂಡಿದ್ದ ಜಪಾನ್ ಭಾರತವನ್ನು ವಶಪಡಿಸಿಕೊಂಡರೆ ಅದನ್ನು ಸಂಪೂರ್ಣ ಅಸಹಕಾರ ಚಳವಳಿಯ ಮೂಲಕ ಎದುರಿಸುವ ಶಕ್ತಿ ಭಾರತಕ್ಕೆ ಇದೆಯಾದ್ದರಿಂದ ಬ್ರಿಟಿಷರಿಗೆ ಗಾಂಧೀಜಿ ಹೇಳಿದ್ದು "ಭಾರತವನ್ನು ಬಿಟ್ಟುಹೋಗಿ; ಉಳಿದದ್ದು ದೇವರ ಇಚ್ಛೆಯಂತೆ ನಡೆಯುತ್ತದೆ". ಈ ಮಧ್ಯೆ ಸುಭಾಷ್ ಚಂದ್ರ ಬೋಸ್ ಜಪಾನ್‌ನ ಪರವಾಗಿ ನಿಂತು ಬ್ರಿಟಿಷರ ವಿರುದ್ಧ ಹೋರಾಡಿ, ಸ್ವಾತಂತ್ರ್ಯವನ್ನು ಗಳಿಸಿಕೊಳ್ಳುವ ಪ್ರಯತ್ನ ನಡೆಸಿದರು. ಈ ಎಲ್ಲ ಭಿನ್ನಾಭಿಪ್ರಾಯಗಳ ಕಾರಣದಿಂದ ನಾಯಕತ್ವದಿಂದ ದೂರ ಉಳಿದಿದ್ದ ಗಾಂಧೀಜಿಯವರನ್ನು ಪುನಃ ನಾಯಕತ್ವ ವಹಿಸಿಕೊಳ್ಳಬೇಕು ಎಂದು ಎಲ್ಲ ಮುಖಂಡರೂ ಮನವಿ ಮಾಡಿದರು. ಗಾಂಧೀಜಿ ಮನವಿಯನ್ನು ಮಾನ್ಯ



ಭಾರತೀಯ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟದ ಅಂತಿಮ ಹಾಗೂ ನಿರ್ಣಾಯಕ ಘಟ್ಟದಲ್ಲಿ ಮಹಾತ್ಮಾ ಗಾಂಧಿ ಭಾರತೀಯ ಜನತೆಗೆ ಕೊಟ್ಟ ಕರೆ 'ಮಾಡು ಇಲ್ಲವೆ ಮಡಿ' ಮತ್ತು ಬ್ರಿಟಿಷರಿಗೆ ಕೊಟ್ಟ ಕರೆ 'ಭಾರತ ಬಿಟ್ಟು ತೊಲಗಿ' (ಕ್ವಿಟ್ ಇಂಡಿಯಾ). ಎರಡೂ ಕರೆಗಳು ಅತ್ಯಂತ ಮಹತ್ವ ಪಡೆದವು. ಭಾರತದ ಇಡೀ ಜನತೆ ಸ್ವಾತಂತ್ರ್ಯವನ್ನು ಪಡೆದೇ ತೀರುವ ದೃಢ ನಿರ್ಧಾರ ಮಾಡಿತು. ಸ್ವಾತಂತ್ರ್ಯಕ್ಕಾಗಿ ನಡೆದ ಈ ಹೋರಾಟವನ್ನು ಆಗಸ್ಟ್ ಚಳವಳಿ ಎಂದೂ ಕರೆಯಲಾಗಿದೆ.

ಮಾಡಿದರು. ಇದರ ಫಲವಾಗಿ ೧೯೪೨ರ ಜುಲೈ ೧೪ರಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ''ಬ್ರಿಟಿಷರೇ, ಭಾರತ ಬಿಟ್ಟು ಹೊರಡಿ'' ಎಂಬ ನಿರ್ಣಯವನ್ನು ಅನುಮೋದಿಸಿತು.

ಯುದ್ಧದ ಕಾರಣದಿಂದ ಶತ್ರುವಿನ ಆಕ್ರಮಣದ ಭೀತಿ ಮಾತ್ರವಲ್ಲದೆ ಅಗತ್ಯ ವಸ್ತುಗಳ ಮೇಲಿನ ಬೆಲೆಗಳ ತೀವ್ರ ಏರಿಕೆಯ ಜೊತೆಗೆ ಅವುಗಳ ಕೊರತೆ ಜನರ ಕೋಪಕ್ಕೆ ಕಾರಣವಾಗಿದ್ದುವು. ಯುದ್ಧದಲ್ಲಿ ಬ್ರಿಟನ್ ಸೈನ್ಯಕ್ಕೆ ಆಗುತ್ತಿದ್ದ ಹಿನ್ನಡೆ ಮತ್ತು ಬರ್ಮಾದಿಂದ ಹಿಂದಿರುಗುತ್ತಿದ್ದ ಯುದ್ಧ ಖೈದಿಗಳ ಸಮಸ್ಯೆಯು ಜನತೆಯ ಅಸಂತುಷ್ಟಿಯನ್ನು ಹೆಚ್ಚಿಸಿದುವು. ಬ್ರಿಟಿಷ್ ಆಳ್ವಿಕೆಯ ಅಸ್ಥಿರತೆಯ ಕಾರಣದಿಂದ ಬ್ಯಾಂಕ್ ಮತ್ತು ಅಂಚೆ ಕಚೇರಿಗಳ ಉಳಿತಾಯ ಖಾತೆಗಳಲ್ಲಿ ಇಡಲಾಗಿದ್ದ ಹಣವನ್ನು ಖಾತೆದಾರರು ಹಿಂಪಡೆದರು. ಇಂತಹ ಒಂದು ಸಂದರ್ಭವನ್ನು ನಿರೀಕ್ಷಿಸಿದಂತಿದ್ದ ಗಾಂಧೀಜಿ ಲೂಯಿ ಫಿಷರ್‌ಗೆ ನೀಡಿದ ಒಂದು ಸಂದರ್ಶನದಲ್ಲಿ 'ಹೋರಾಟಕ್ಕೆ ಇದು ಸಕಾಲ' ಎಂದು ತಿಳಿಸಿದರು.

೧೯೪೨ರ ಜುಲೈ ೬ರಿಂದ ೧೪ರವರೆಗೆ ವಾರ್ಧಾದಲ್ಲಿ ಕಾಂಗ್ರೆಸ್ ಕಾರ್ಯಕಾರಿಣಿ ಸಭೆ ನಡೆಯಿತು. ೧೪ರಂದು ಸಭೆಯಲ್ಲಿ ಸ್ವೀಕರಿಸಲಾದ ನಿರ್ಣಯದಲ್ಲಿ ಹೋರಾಟಕ್ಕೆ ಅಣಿಯಾಗುವ ಸೂಚನೆ ದೊರೆಯಿತಾದರೂ, ಮುಂದೆ ಮುಂಬಯಿಯಲ್ಲಿ ನಡೆಯಲಿದ್ದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸಭೆಯಲ್ಲಿ ಅಂತಿಮ ನಿರ್ಣಯ ಸ್ವೀಕರಿಸುವ ನಿರ್ಧಾರ ಮಾಡಿತು. ನಿರ್ಣಯ ಸ್ವೀಕಾರಕ್ಕೆ ಮೊದಲು ಗಾಂಧೀಜಿ ಕಾಂಗ್ರೆಸ್‌ನ ಬಹುತೇಕ ಎಲ್ಲ ನಾಯಕರ ಜೊತೆ ವಿಚಾರ ವಿನಿಮಯ ಮಾಡಿದ್ದರು. ನಿರ್ಣಯವನ್ನು ದೆಹಲಿಯಲ್ಲಿದ್ದ ವೈಸ್‌ರಾಯ್‌ಗೆ ತಿಳಿಸಲು ಗಾಂಧೀಜಿಯ ಆಪ್ತವರ್ಗಕ್ಕೆ ಸೇರಿದ ಮೀರಾಬೆನ್ ಹೋದರು. ವೈಸ್‌ರಾಯ್ ಮೀರಾಬೆನ್ ಅನ್ನು ಕಾಣುವ ಸೌಜನ್ಯವನ್ನೂ ತೋರಲಿಲ್ಲ.

ವಾರ್ಧಾದಲ್ಲಿ ಮೊದಲೇ ತೀರ್ಮಾನಿಸಿದ್ದಂತೆ ೧೯೪೨ರ ಆಗಸ್ಟ್ ೭ರಂದು ಮುಂಬಯಿಯ ಗೊವಾಲಿಯಾ ಕೆರೆಯ ಮೈದಾನದಲ್ಲಿ, ಕಾಂಗ್ರೆಸ್ ಅಧ್ಯಕ್ಷ ಮೌಲಾನಾ ಅಬುಲ್ ಕಲಾಂ ಆಜಾದ್ ಅವರ ಅಧ್ಯಕ್ಷತೆಯಲ್ಲಿ ಸಮಾವೇಶಗೊಂಡ ಅಖಿಲ ಭಾರತ ಕಾಂಗ್ರೆಸ್ ಕಾರ್ಯಕಾರಿಣಿ ಸಭೆಯು ಎರಡು ದಿನಗಳ ಕಾಲ ನಿರಂತರವಾಗಿ ವಿವರವಾದ ಚರ್ಚೆ ನಡೆಸಿ, ೧೯೪೨ರ ಆಗಸ್ಟ್ ೮ರಂದು ಭಾರತದ ಸೈನ್ಯವನ್ನು ಜಪಾನ್‌ನಿಂದ ಹಿಂದಕ್ಕೆ ಪಡೆದು, ಭಾರತಕ್ಕೆ ಸಂಪೂರ್ಣ ಸ್ವಾತಂತ್ರ್ಯ ನೀಡುವ ಷರತ್ತಿನೊಂದಿಗೆ ಸ್ವಾತಂತ್ರ್ಯಾನಂತರ ಬ್ರಿಟನ್‌ಗೆ ಯುದ್ಧದಲ್ಲಿ ನೆರವು ನೀಡುವ ಆಶ್ವಾಸನೆ ನೀಡಿತು. ನಿರ್ಣಯವನ್ನು ಮಂಡಿಸುತ್ತಾ, ಗಾಂಧೀಜಿ ''ನಾವು ಯಾರಿಗೂ ಆದರೂ ವೈಯಕ್ತಿಕವಾಗಿ ಯಾವುದೇ ಸಂದೇಶವನ್ನು ನೀಡಲು ಸಾಧ್ಯವಿಲ್ಲ. ಆದ್ದರಿಂದ ಈ ಚಳವಳಿಯಲ್ಲಿ ಪಾಲ್ಗೊಳ್ಳುವ ಎಲ್ಲರೂ ತಮ್ಮ ತಮ್ಮ ವಿವೇಚನೆಗೆ ತಕ್ಕಂತೆ ಪ್ರತಿಭಟನೆ ಮಾಡತಕ್ಕದ್ದು. ಆದರೂ ಯಾವುದೇ ಪ್ರತಿಭಟನೆಯು ಹಿಂಸಾತ್ಮಕವಾಗಿರಕೂಡದು. ಸ್ವಾತಂತ್ರ್ಯಾಪೇಕ್ಷಿಯಾದ ಎಲ್ಲ ಭಾರತೀಯರೂ ಅದನ್ನು ಪಡೆಯಲು ಶ್ರಮಿಸಬೇಕು'' ಎಂದು ಕರೆ ನೀಡಿದರು. ೧೯೪೨ರ ಆಗಸ್ಟ್ ೮ರಂದು ಮಹಾತ್ಮಾ ಗಾಂಧಿ ಅವರು ಆಡಿದ ಎಂದಿನ ತಮ್ಮ ನಿಧಾನಗತಿಯ, ಮೆಲುದನಿಯ ಖಚಿತ ಮಾತುಗಳು ಕೇಳಿದವರಲ್ಲಿ ವಿದ್ಯುತ್ ಕಂಪನ ಮೂಡಿಸಿದವು. ಅದಕ್ಕೂ ಮೊದಲು ಒಮ್ಮೆ ಗಾಂಧೀಜಿ ಹೇಳಿದ್ದರು: ''ನಮ್ಮ ನಿಜವಾದ ಹೋರಾಟ ಇನ್ನೂ ಆರಂಭವಾಗಿಲ್ಲ. ನಿಮ್ಮೆಲ್ಲರ ಅಧಿಕಾರವನ್ನು ನನ್ನ ಕೈಗಳಲ್ಲಿಟ್ಟಿದ್ದೀರಿ. ನಾನು ವೈಸ್‌ರಾಯ್ ಅವರ ಬಳಿ ಕಾಂಗ್ರೆಸ್‌ನ ಬೇಡಿಕೆಯನ್ನು ಒಪ್ಪಿಕೊಳ್ಳುವಂತೆ ಮನವಿ ಮಾಡುತ್ತೇನೆ. ಇದಕ್ಕೆ ಎರಡು ಅಥವಾ ಮೂರು ವಾರಗಳು ಬೇಕಾಗಬಹುದು. ನಾನು ವೈಸ್‌ರಾಯ್ ಅಥವಾ ಯಾವುದೇ ಸಚಿವರ ಜೊತೆಗೆ ಚೌಕಾಶಿ ಮಾಡುವುದಿಲ್ಲ. ಸಂಪೂರ್ಣ ಸ್ವಾತಂತ್ರ್ಯಕ್ಕಿಂತ ಕಡಿಮೆಯಾಗಿ ನಾನು ಏನನ್ನೂ ಒಪ್ಪಿಕೊಳ್ಳುವುದಿಲ್ಲ. ಅವರು ಉಪ್ಪಿನ ಮೇಲಿನ ತೆರಿಗೆಯ ವಿನಾಯಿತಿ ಅಥವಾ ಮದ್ಯಪಾನ ನಿಷೇಧ ಇತ್ಯಾದಿ ಆಮಿಷಗಳನ್ನು ಒಡ್ಡಬಹುದು. ಆದರೆ ನಾನು ಹೇಳುತ್ತೇನೆ: ಕೊಡುವುದಾದರೆ ಸಂಪೂರ್ಣ ಸ್ವಾತಂತ್ರ್ಯ ಕೊಡಿ. ಇಲ್ಲವಾದರೆ ನೀವು ಭಾರತ ಬಿಟ್ಟು ಹೋಗಿ. ನಾವು ಈಗ ಉಚ್ಚರಿಸುವ ಮಂತ್ರ ಒಂದೇ. ಅದು ಮಾಡು ಇಲ್ಲವೆ ಮಡಿ. ನಮ್ಮ ಪ್ರಯತ್ನದಲ್ಲಿ ನಾವು ಭಾರತವನ್ನು ದಾಸ್ಯದಿಂದ ಬಿಡುಗಡೆ ಮಾಡುತ್ತೇವೆ; ನಮ್ಮ ದಾಸ್ಯ ಮುಂದುವರಿಯುವುದನ್ನು ನೋಡಲು ನಾವು ಯಾರೂ ಉಳಿದಿರುವುದಿಲ್ಲ.''

With Best Compliments From

M/S. MISBHA CORRUGATORS
Manufacturers of High Quality Corrugated Boxes

No. 96. Hegganahalli Cross
Behind K. T.G. Hospital, Bangalore - 560 091
Phone : 28364498. Cell : 9886090935

With Best Compliments From

RAMAS INKS & CHEMICALS
#11, Shetty Muddanna Lane
C.G.R. Mansions, Akkipet, Bangalore - 560 053
E-mail : ramink@rediffmail.com
Ph: 26702695, 9845140526, 9448382695

RAMA IMPEX PVT. LTD. KMI
3/1443/1, Sattur Road
Sivakasi - 626 189, TAMILNADU
Ph: (04562) 279348, 278350
Fax: 279345. e-mail: ramaimpex@eth.net

KMi PERFECT GRAPHICS CONTI - AIR

Royal - G & MC Process Inks | Offset Chemicals | Printing Blanket (Germany)

ಂಧೀಜಿಯವರ ಭಾಷಣದಲ್ಲಿ ಪ್ರತಿಭಟನೆಯ ಸ್ವರೂಪದ ಬಗ್ಗೆ ಕೆಲವು ಚನೆಗಳಂತೂ ಇದ್ದುವು. ಯಾವ ಯಾವ ವರ್ಗಗಳು ಏನೇನು ಮಾಡಿದರೆ ಕೂಲವಾಗುತ್ತದೆ ಎಂದು ಗಾಂಧೀಜಿ ಸೂಚ್ಯವಾಗಿ ತಿಳಿಸಿದ್ದರು.

೧೯೪೨ರ ಆಗಸ್ಟ್ ೮ರಂದು ರಾತ್ರಿ ಸುಮಾರು ೧೦ ಗಂಟೆಯ ವೇಳೆಗೆ ಅಖಿಲ ರತ ಕಾಂಗ್ರೆಸ್ ಸಮಿತಿ ಸಭೆ ಮುಕ್ತಾಯವಾಯಿತು. ಗಾಂಧೀಜಿ ಭಾರತೀಯರಿಗೆ ಡಿದ್ದ 'ಮಾಡು ಇಲ್ಲವೆ ಮಡಿ' ಮತ್ತು ಬ್ರಿಟಿಷರಿಗೆ ನೀಡಿದ್ದ 'ಭಾರತ ಬಿಟ್ಟು ತೊಲಗಿ' ಟ್ ಇಂಡಿಯಾ) ಕರೆಯನ್ನು ಎಲ್ಲ ಕಾಂಗ್ರೆಸ್ ನಾಯಕರೂ ಒಪ್ಪಿದ್ದರು. ತಮ್ಮ ತಮ್ಮ ತ್ರಗಳಿಗೆ ಹೋಗಿ ಚಳವಳಿ ನಡೆಸಲು ನಾಯಕರುಗಳು ಹೋರಾಡುವ ಸನ್ನಾಹ ಡುತ್ತಿದ್ದರು. ಆದರೆ ಆಗಸ್ಟ್ ೯ನೇ ತಾರೀಖು ಬೆಳಕು ಹರಿಯುವ ಮೊದಲೇ ೇಕ ನಾಯಕರ ಬಂಧನವಾಯಿತು. ಮಹಾತ್ಮಾ ಗಾಂಧಿ, ಮೌಲಾನಾ ಅಬುಲ್ ಾಂ ಆಜಾದ್ ಮುಂತಾದ ಹಿರಿಯರು ಸೆರೆಮನೆ ಸೇರಿದರು. ಕೆಲವು ನಾಯಕರನ್ನು ಞಾತ ಸ್ಥಳಗಳಿಗೆ ರವಾನಿಸಲಾಯಿತು. ಮಹಾತ್ಮಾ ಗಾಂಧಿ ಅವರನ್ನು ಪೂನಾದ ಖಾನ್ ಅರಮನೆಯಲ್ಲಿ ಬಂಧಿಸಿಡಲಾಯಿತು.

ಮಹಾತ್ಮಾ ಗಾಂಧಿ ಅವರೂ ಸೇರಿದಂತೆ ಅನೇಕ ನಾಯಕರ ಬಂಧನದ ಸುದ್ದಿ ಯುತ್ತಿದ್ದಂತೆಯೇ ಜನ ಸಿಟ್ಟಿಗೆದ್ದರು. ಮುಂಬಯಿಯಲ್ಲಿ ಮಾತ್ರವಲ್ಲದೆ ದೆಹಲಿ, ಮದಾಬಾದ್ ಮತ್ತು ಪೂನಾಗಳಲ್ಲೂ ಹರತಾಳ ಆರಂಭವಾಯಿತು. ಪ್ರತಿಭಟನಾ ರವಣಿಗೆಗಳು ನಡೆದವು. ಪ್ರತಿಭಟನೆಯನ್ನು ಹತ್ತಿಕ್ಕಲು ಸರ್ಕಾರಗಳು ಹಲವು ಯ ಪ್ರಯತ್ನಗಳನ್ನು ನಡೆಸಿದವು. ಪ್ರತಿಭಟನಾ ಮೆರವಣಿಗೆಗಳು ಪೂರ್ಣ ತಿಯುತವಾಗಿದ್ದುವು. ಆದರೂ ಕೆಲವೆಡೆ ಲಾಠಿ ಮತ್ತು ಬಂದೂಕಿನ ೋಗಗಳೂ ನಡೆದವು. ಯಾವುದೇ ಬಲಾತ್ಕಾರವಿಲ್ಲದೆ ಅಂಗಡಿಗಳು ಮತ್ತು ೋಟೆಲ್‌ಗಳು ಮುಚ್ಚಲ್ಪಟ್ಟವು. ಪತ್ರಿಕೆಗಳು ವಿಷಯವನ್ನು ಜನತೆಗೆ ತಿಳಿಸುವ ಸದಲ್ಲಿ ಸಂಪೂರ್ಣ ಸಹಕಾರ ನೀಡಿದವು. ಕೆಲವು ಪತ್ರಿಕೆಗಳು ಚಳವಳಿಯ ದರ್ಭದಲ್ಲಿ ಪ್ರಕಟಣೆಯನ್ನೇ ನಿಲ್ಲಿಸಿದವು.

೧೯೪೨ರ ಆಗಸ್ಟ್ ೮ರಂದು ಮುಂಬಯಿಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ತಿಯ ಸಭೆಯಲ್ಲಿ ಭಾಗವಹಿಸಿದ್ದ ಕರ್ನಾಟಕದ ನಾಯಕರಲ್ಲಿ ಒಬ್ಬರಾದ ॥ ಆರ್. ಆರ್. ದಿವಾಕರ್, ಗಾಂಧೀಜಿಯ ಸಮೀಪವೇ ಕುಳಿತಿದ್ದು, ಂಧೀಜಿಯವರನ್ನು ಕರ್ನಾಟಕದ ಜನತೆಗೆ ಒಂದು ಸಂದೇಶ ಕೊಡಿ ಎಂದು ಿದರು. ಆಗ ಗಾಂಧೀಜಿ ಕರ್ನಾಟಕದ ಜನತೆಗೆ ಕೊಟ್ಟ ಸಂದೇಶ ಹೀಗಿದೆ:

**ಗಾಂಧೀಜಿಕಾ ಸಂದೇಶ್**

ೇರಿ ಉಮೀದ್ ಹೈ ಕಿ ಇಸ್ ಯಜ್ಞ್ ಮೆ ಸಬ್ ಕರ್ನಾಟಕಿ ಪೂರಾ ಹಿಸ್ಸಾ ದೇಗಾ

– ಮೋ. ಕ. ಗಾಂಧಿ

೮-೮-೪೨

**ಗಾಂಧೀಜಿಯವರ ಸಂದೇಶ**

ಈ ಯಜ್ಞದಲ್ಲಿ ಎಲ್ಲ ಕರ್ನಾಟಕಸ್ಥರು
ಪೂರ್ಣ ಭಾಗವಹಿಸುವರೆಂದು ನನ್ನ ಭರವಸೆ ಇದೆ.

– ಮೋ. ಕ. ಗಾಂಧಿ

೮-೮-೪೨

''ಕರೇಂಗೆ ಯಾ ಮರೇಂಗೆ - ಮಾಡುವೆ ಇಲ್ಲವೆ ಸಾಯುವೆ.''

–ಗಾಂಧೀಜಿ

ಭಾರತದ ಎಲ್ಲೆಡೆ ಪ್ರತಿಭಟನಾ ಮೆರವಣಿಗೆಗಳು ನಡೆದವು. ಸಾರ್ವತ್ರಿಕವಾಗಿ ರ್ವಜನಿಕ ಪ್ರತಿಭಟನೆಗಳು ಪ್ರಬಲವಾಗಿಯೇ ನಡೆದವು. ಸರ್ಕಾರದ ಳಿತವನ್ನು ಅಸ್ತವ್ಯಸ್ತಗೊಳಿಸುವ ಸಲುವಾಗಿ ಸಂಪರ್ಕ ಮತ್ತು ಸಂಚಾರ ವಸ್ಥೆಯನ್ನು ಹದ ಗೆಡಿಸುವುದು ಚಳವಳಿಕಾರರ ಉದ್ದೇಶವಾಗಿತ್ತು. ರೈಲು ಗಳನ್ನು ಹಾಳು ಮಾಡುವುದು, ರೈಲ್ವೆ ಸ್ಟೇಷನ್‌ಗಳಿಗೆ ಮುತ್ತಿಗೆ ಹಾಕುವುದು, ಟ್ ರಹಿತ ಪ್ರಯಾಣ ಮಾಡುವುದು, ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸುವುದು, ಚೆ ಕಚೇರಿಗಳಿಗೆ ಮುತ್ತಿಗೆ ಹಾಕುವುದು, ವಿದ್ಯುತ್ ಸರಬರಾಜನ್ನು ನಿಲ್ಲಿಸುವುದು, ಸುವೆಗಳನ್ನು ಹಾಳು ಮಾಡುವುದು ಇತ್ಯಾದಿ ಆಡಳಿತಕ್ಕೆ ಹಾನಿಯಾಗುವ ರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಸಾರ್ವಜನಿಕ ಕಟ್ಟಡಗಳ ಮೇಲೆ ಷ್ಟ್ರಧ್ವಜವನ್ನು ಹಾರಿಸುವುದು ಒಂದು ಪ್ರಮುಖ ಕರ್ತವ್ಯ ಎಂದು ತಿಳಿಸಲಾಯಿತು. ೋರಾಟದಲ್ಲಿ ಆಯಾ ಸ್ಥಳಗಳ ನಾಯಕರೇ ಸೂಕ್ತ ಕ್ರಮವನ್ನು ಆಯ್ಕೆಮಾಡಿಕೊಳ್ಳ ಬಹುದೆಂಬ ಸಾರ್ವತ್ರಿಕ ಸೂಚನೆ ಇದ್ದುದರಿಂದ, ಮುಂಚೂಣಿಯಲ್ಲಿ ನಿಂತವರ ಸೂಚನೆಯಂತೆ ಹೋರಾಟಗಳು ನಡೆದವು. ಶಾಲಾ-ಕಾಲೇಜುಗಳ ವಿದ್ಯಾರ್ಥಿಗಳೂ ಚಳವಳಿಯಲ್ಲಿ ಸ್ವಪ್ರೇರಣೆಯಿಂದ ಪಾಲ್ಗೊಂಡರು. ಆ ನಿಟ್ಟಿನಲ್ಲಿ ನಂತರ ಶಾಲಾ ಕಾಲೇಜುಗಳ ಬೋಧಕ ವರ್ಗವೂ ಜೊತೆಗೂಡಿತು. ಈಗ ನಡೆಯುತ್ತಿರುವುದು ಸ್ವಾತಂತ್ರ್ಯಕ್ಕಾಗಿ ನಡೆಯುತ್ತಿರುವ ಅಂತಿಮ ಹೋರಾಟವಾದ್ದರಿಂದ ವಿದ್ಯಾರ್ಥಿ-ಬೋಧಕ, ಮಾಲಿಕ- ಕಾರ್ಮಿಕ, ಶ್ರೀಮಂತ-ಬಡವ, ಆ ಜಾತಿ-ಈ ಜಾತಿ ಎಂಬ ಯಾವ ಭೇದವೂ ಇಲ್ಲದೆ ಎಲ್ಲ ಭಾರತೀಯರೂ ಒಂದಾಗಿ ಹೋರಾಡಬೇಕೆಂಬ ಸೂಚನೆ ಎಲ್ಲ ನಾಯಕರಿಂದ ಬಂದಿದ್ದ ಕಾರಣ ಎಲ್ಲ ವರ್ಗದ ಜನರೂ ಹೋರಾಟದಲ್ಲಿ ಪಾಲ್ಗೊಂಡರು. ಆಗಸ್ಟ್ ೯ರಂದು ನಾಯಕರ ಬಂಧನದ ಸುದ್ದಿ ತಿಳಿಯುತ್ತಿದ್ದಂತೆಯೇ ಮುಂಬಯಿಯ ಕಾರ್ಮಿಕರು ಒಂದು ವಾರಕ್ಕೂ ಹೆಚ್ಚು ಕಾಲ ಕೆಲಸಕ್ಕೆ ಹಾಜರಾಗಲಿಲ್ಲ. ಜಂಷೆಡ್‌ಪುರದಲ್ಲಿ ಕಾರ್ಮಿಕರ ಮುಷ್ಕರ ಹದಿಮೂರು ದಿನ ಮುಂದುವರಿಯಿತು. ಪೂನಾ ಮತ್ತು ಅಹಮದ್‌ನಗರಗಳಲ್ಲಿ ಹಲವು ತಿಂಗಳುಗಳ ಕಾಲ ಮುಷ್ಕರ ನಡೆಯಿತು.

ಹೋರಾಟವು ನಗರ ಮತ್ತು ಪಟ್ಟಣ ಕೇಂದ್ರಿತವಾಗುತ್ತಿದ್ದುದನ್ನು ಗಮನಿಸಿದ ರಾಜಕೀಯ ಮುಖಂಡರು ಹೋರಾಟವನ್ನು ಗ್ರಾಮೀಣ ಪ್ರದೇಶಗಳಿಗೂ ವಿಸ್ತರಿಸುವ ಸೂಚನೆ ನೀಡಿದರು. ಬನಾರಸ್ ಹಿಂದೂ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ಕಾಲೇಜುಗಳನ್ನು ತೊರೆದು ತಮ್ಮ ತಮ್ಮ ಹಳ್ಳಿಗಳಿಗೆ ಹೋಗಿ 'ಮಾಡು ಇಲ್ಲವೆ ಮಡಿ' ಸಂದೇಶವನ್ನು ತಲುಪಿಸುವ ನಿರ್ಧಾರ ಮಾಡಿದರು. ಅದಕ್ಕಾಗಿ ಅವರು ರೂಪಿಸಿದ ಕೆಲವು ಘೋಷಣೆಗಳು ಹೀಗಿವೆ: 'ಥಾಣಾ ಜಲೋ', 'ಸ್ಟೇಷನ್ ಫೂಂಕ್‌ದೋ', 'ಅಂಗ್ರೇಜ್ ಭಾಗ್ ಗಯಾ' ಇತ್ಯಾದಿ. ಪ್ರತಿಭಟನೆಯ ನಂತರ ಬಂಧನಕ್ಕೊಳಗಾಗುತ್ತಿದ್ದ ಹೋರಾಟಗಾರರ ಮೇಲೆ ಮೊಕದ್ದಮೆ ಹೂಡಲಾಗುತ್ತಿತ್ತು. ವಿಚಾರಣೆ ನಡೆದು ಶಿಕ್ಷೆಯೂ ಆಗುತ್ತಿತ್ತು. ಒಂದು ಮಾಹಿತಿಯ ಪ್ರಕಾರ ೧೯೪೨ರ ಅಂತ್ಯದ ವೇಳೆಗೆ ಸುಮಾರು ೬೦,೦೦೦ ಹೋರಾಟಗಾರರ ಬಂಧನವಾಯಿತು. ೨೬,೦೦೦ ಜನರನ್ನು ಅಪರಾಧಿಗಳು ಎಂದು ತೀರ್ಮಾನಿಸಿ ಶಿಕ್ಷೆ ವಿಧಿಸಲಾಯಿತು. ಸುಮಾರು ೧೮,೦೦೦ ಜನರನ್ನು ಭಾರತೀಯ ರಕ್ಷಣಾ ಸಂಹಿತೆಯ ಪ್ರಕಾರ ಸ್ಥಾನಬದ್ಧತೆಯಡಿ ಜೈಲುಗಳಲ್ಲಿ ಬಂಧಿಸಿಡಲಾಯಿತು. ಸಂಯುಕ್ತ ಸಂಸ್ಥಾನಗಳ ಒಂದು ವರದಿಯ ಪ್ರಕಾರ ಟೆಲಿಫೋನ್ ಮತ್ತು ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸಿ ಹಾನಿ ಮಾಡಿದ ೪೨೫ ಪ್ರಕರಣಗಳು, ೧೯ ಅಂಚೆ ಕಚೇರಿಗಳನ್ನು ನಾಶಮಾಡಿದ ಅಥವಾ ಗಂಭೀರವಾಗಿ ಹಾನಿ ಮಾಡಿದ ಹಾಗೂ ಅಂಚೆ ಮತ್ತು ತಂತಿ ಇಲಾಖೆಯ ೩೨ ಜನ ಸಿಬ್ಬಂದಿಯ ಮೇಲೆ ಆಕ್ರಮಣ ಮಾಡಿದ ಪ್ರಕರಣಗಳು ದಾಖಲಾಗಿದ್ದವು.

೧೯೪೩ರ ಫೆಬ್ರವರಿ ೧೨ರಂದು ಕೇಂದ್ರ ಸಂಸತ್‌ನಲ್ಲಿ ನೀಡಲಾದ ಅಧಿಕೃತ ಹೇಳಿಕೆಯ ಪ್ರಕಾರ ೧೯೪೨ರ ಆಗಸ್ಟ್ ೯ರಿಂದ ಡಿಸೆಂಬರ್ ಅಂತ್ಯದವರೆಗೆ ಭಾರತದಾದ್ಯಂತ ೫೩೮ ಬಾರಿ ಗೋಲೀಬಾರ್ ನಡೆದು, ೯೪೦ ಜನ ಸತ್ತು, ೧೬೩೦ ಜನ ಗಾಯಗೊಂಡಿದ್ದರು. ಆದರೆ, ಜವಹರಲಾಲ್ ನೆಹರೂ ಅವರ ಪ್ರಕಾರ ೧೯೪೨ರ ಕ್ವಿಟ್ ಇಂಡಿಯಾ ಚಳವಳಿಯ ಸಂದರ್ಭ ಅಧಿಕೃತವಾಗಿ ಸತ್ತವರ ಸಂಖ್ಯೆ ೧೦೨೮ ಮತ್ತು ಗಾಯಗೊಂಡವರ ಸಂಖ್ಯೆ ೩೨೦೦. ಮತ್ತೊಂದು ಮಾಹಿತಿಯ ಪ್ರಕಾರ ೧೯೪೨ರ ಆಗಸ್ಟ್ ೯ರಿಂದ ಆ ವರ್ಷದ ಅಂತ್ಯದವರೆಗೆ ಬಂಧಿತರಾದವರ ಸಂಖ್ಯೆ ಸುಮಾರು ೬೦,೨೨೯ ಮತ್ತು ಶಿಕ್ಷೆಗೆ ಗುರಿಯಾದವರ ಸಂಖ್ಯೆ ೨೬,೦೦೦ ಮತ್ತು ವಿಚಾರಣಾಧೀನ ಬಂಧನದಲ್ಲಿದ್ದವರ ಸಂಖ್ಯೆ ೧೮,೦೦೦. ಈ ಸಂಖ್ಯೆಗಳು ಖಚಿತವಲ್ಲ; ಸತ್ತವರ ಮತ್ತು ಗಾಯಗೊಂಡವರ ಸಂಖ್ಯೆ ಇನ್ನೂ ಹೆಚ್ಚು ಎಂಬ ಅಭಿಪ್ರಾಯವೂ ಹಲವು ನಾಯಕರದಾಗಿತ್ತು.

೧೯೪೨ರ ೯ರಂದೇ ಗಾಂಧೀಜಿ ಅವರ ಬಂಧನವಾಯಿತು. ಅದಕ್ಕೆ ಮೊದಲು ಅವರು ಚಳವಳಿಯ ರೂಪುರೇಷೆಗಳ ಬಗ್ಗೆ ಯಾವುದೇ ನಿರ್ದೇಶನ ನೀಡಿರಲಿಲ್ಲ. ಕಾಂಗ್ರೆಸ್‌ನ ಪ್ರಮುಖ ನಾಯಕರೆಲ್ಲರ ಬಂಧನ ಆಗಿದ್ದುದರಿಂದ ಚಳವಳಿಯ ನಾಯಕತ್ವ ವಹಿಸುವವರೇ ಇರಲಿಲ್ಲ. ಅಹಿಂಸಾತ್ಮಕವಾದ ಮತ್ತು ಸರ್ಕಾರವು ಆಡಳಿತ ನಡೆಸಲು ಸಾಧ್ಯವಾಗದ ಸ್ವರೂಪದ ಹೋರಾಟ ನಡೆಯಬೇಕೆಂಬುದು ಬಂಧಿತ ನಾಯಕರ ಆಲೋಚನೆಯಾಗಿತ್ತು. ಗಾಂಧೀಜಿ ಹೋರಾಟದಲ್ಲಿ ಭಾಗವಹಿಸುವ ಎಲ್ಲರೂ ನಾಯಕರೇ ಮತ್ತು ಅಂದಂದಿನ ಮತ್ತು ಆಯಾ ಪ್ರದೇಶಗಳಲ್ಲಿನ ಅಗತ್ಯಗಳು ಮತ್ತು ಅನುಕೂಲಗಳಿಗೆ ತಕ್ಕಂತೆ ಹೋರಾಟ ನಡೆಯಬೇಕು ಎಂಬ ಸೂಚನೆ ನೀಡಿದ್ದುದರಿಂದ ಹೋರಾಟದಲ್ಲಿ ಪಾಲ್ಗೊಂಡಿದ್ದವರು ಕೆಲವು ಸಂದರ್ಭಗಳಲ್ಲಿ ಸರ್ಕಾರದ ಆಸ್ತಿಪಾಸ್ತಿಗಳಲ್ಲದೆ ಸಾರ್ವಜನಿಕ ಆಸ್ತಿಪಾಸ್ತಿಗಳಿಗೂ ಹಾನಿ ಮಾಡಿದರು. ೧೯೪೨ರ ಕ್ವಿಟ್

ಇಂಡಿಯಾ ಚಳವಳಿಯಲ್ಲಿ ರಾಜಕೀಯ ನಾಯಕರಿಗಿಂತ ಹೆಚ್ಚಾಗಿ ಪಾಲ್ಗೊಂಡವರು ವಿದ್ಯಾರ್ಥಿಗಳು, ಕಾರ್ಮಿಕರು ಮತ್ತು ಕೃಷಿಕರು. ಕೆಳಮಧ್ಯಮ ವರ್ಗದ ಜನರೇ ಹೆಚ್ಚಾಗಿ ಪಾಲ್ಗೊಂಡ ಹೋರಾಟದಲ್ಲಿ ಶ್ರೀಮಂತರ ಮತ್ತು ಬುದ್ಧಿಜೀವಿಗಳ ಪಾತ್ರ ಕಡಿಮೆ ಇತ್ತು.

೧೯೪೨ರ ಆಗಸ್ಟ್ ೯ರಂದು ಮುಂಬಯಿಯ ಪತ್ರಿಕೆಗಳಲ್ಲಿ ಮಹಾತ್ಮಾ ಗಾಂಧಿ ಅವರ ಭಾಷಣದ ಆಯ್ದ ಭಾಗಗಳು ಮಾತ್ರ ಪ್ರಕಟವಾದವು. ರಾಜಕೀಯ ನಾಯಕರ ಬಂಧನದ ಸುದ್ದಿ ಪತ್ರಿಕೆಗಳಲ್ಲಿ ಪ್ರಕಟವಾಗಲಿಲ್ಲ. ಆದರೆ ಸುದ್ದಿ ಹುಬ್ಬಳ್ಳಿಯವರೆಗೂ ತಲುಪಿತ್ತು. ೯ರಂದು ಬೆಳಕು ಹರಿಯುವ ವೇಳೆಗಾಗಲೇ ಹುಬ್ಬಳ್ಳಿಯ ರಸ್ತೆಗಳ ಮೇಲೆ ಸುಣ್ಣದಿಂದ ರಾಜಕೀಯ ನಾಯಕರ ಬಂಧನದ ಸುದ್ದಿಯನ್ನು ಬರೆದು ತಿಳಿಸಲಾಗಿತ್ತು. ಬೆಂಗಳೂರಿನಲ್ಲಿ 'ತಾಯಿನಾಡು' ಪತ್ರಿಕೆಯ ಪ್ರತಿನಿಧಿಯೊಬ್ಬರು ರಸ್ತೆ ಮತ್ತು ಗೋಡೆಗಳ ಮೇಲೆ ಸೀಮೆಸುಣ್ಣದಿಂದ ನಾಯಕರ ಬಂಧನದ ಸುದ್ದಿಯನ್ನು ಬರೆಯುತ್ತಿದ್ದುದನ್ನು ಹಲವರು ಗಮನಿಸಿದ್ದರು. ಬೆಂಗಳೂರಿನ ದೊಡ್ಡಪೇಟೆಯ ಕೆಲವು ಅಂಗಡಿಗಳಲ್ಲಿ ನಾಯಕರ ಬಂಧನದ ಸುದ್ದಿಯನ್ನು ಫಲಕಗಳ ಮೇಲೆ ಬರೆದು ಪ್ರದರ್ಶಿಸಲಾಯಿತು.

ಅಖಿಲ ಭಾರತ ಕಾಂಗ್ರೆಸ್ ಸಮಿತಿಯು ಪ್ರತಿಭಟನಾ ಕ್ರಮವಾಗಿ ಸೂಚಿಸಿ, ಕರೆ ನೀಡಿದ್ದ ಕೆಲವು ಅಂಶಗಳು ಹೀಗಿವೆ:

೧. ಕೃಷಿಕರು ಭೂಕಂದಾಯವನ್ನು ಕೊಡಲು ನಿರಾಕರಿಸತಕ್ಕದ್ದು. ಕಂದಾಯ ಅಧಿಕಾರಿಗಳು ಮತ್ತು ಪೊಲೀಸ್ ಅಧಿಕಾರಿಗಳು ಕಂದಾಯ ವಸೂಲಿಗೆ ಬಂದಾಗ ತಡೆಯೊಡ್ಡತಕ್ಕದ್ದು.

೨. ಆಹಾರ ಧಾನ್ಯಗಳು ಮತ್ತು ಗೋವುಗಳನ್ನು ಮಾರಕೂಡದು.

೩. ಹಣವನ್ನು ಕಾಗದ ರೂಪದಲ್ಲಿ ನಿರಾಕರಿಸತಕ್ಕದ್ದು.

೪. ಆಹಾರ ಮತ್ತು ಬಟ್ಟೆಯ ಕೊರತೆಯ ಬಗ್ಗೆ ಜನರಿಗೆ ತಿಳಿವು ನೀಡತಕ್ಕದ್ದು.

೫. ಗ್ರಾಮಗಳಲ್ಲಿ ಸ್ವರಾಜ್ ಪಂಚಾಯಿತಿಯನ್ನು ರಚಿಸಿಕೊಂಡು ಸರ್ಕಾರದ ಯಾವುದೇ ಕಂದಾಯ ಮತ್ತು ಪೊಲೀಸ್ ಅಧಿಕಾರಿಗೆ ಪ್ರವೇಶ ನಿರಾಕರಿಸತಕ್ಕದ್ದು.

೬. ಬ್ರಿಟಿಷ್ ಸೈನ್ಯದ ಸೋಲಿಗಾಗಿ ರಸ್ತೆ, ಟೆಲಿಗ್ರಾಫ್ ಮತ್ತು ರೈಲ್ವೆ ವ್ಯವಸ್ಥೆಯನ್ನು ನಾಶಪಡಿಸತಕ್ಕದ್ದು.

ಈ ಯಾವುದೇ ಸೂಚನೆಗಳನ್ನು ಮೀರಿ ಚಳವಳಿಗಾರರು ಕಾರ್ಯನಿರತರಾಗಿದ್ದರು.


With Best Compliments From

JANET PACKAGING CENTRE



Ravi John

*Proprietor*

Tele fax : 080-41467855
Mob : 98442 28009, 93424 83404

Mfg : P. P. Straping Sealing Machine
We undertake all types of Straping Machine, Sales, Servicing
Supply : P. P. Strap Roll & BOPP Tapes

# 31/2, 7th Cross, BTS Main Road, Wilson Garden
Bangalore - 560 027
E-mail : janetpackaging@yahoo.co.in

Head Office

K. 121/122 Udyog Vihar Indl. Estate, Vitthalwadi Station (W) Mumbai


ಮುಂಬಯಿಯಲ್ಲಿ ಮೊದಲಿಗೆ ಹಿಂದಿನ ದಿನ ಸಭೆ ನಡೆದಿದ್ದ ಗೊವಾಲಿಯಾ ಕೆರ ಮೈದಾನದಲ್ಲಿ ಮತ್ತು ನಂತರ ಶಿವಾಜಿ ಪಾರ್ಕ್‌ನಲ್ಲಿ ೧೯೪೨ರ ಆಗಸ್ಟ್ ೯ರಂದು ಭ ಸಭೆಗಳು ನಡೆದವು. ಗೊವಾಲಿಯಾ ಕೆರೆ ಮೈದಾನದಲ್ಲಿ ಗೋಲೀಬಾರ್ ಆಗಿ ೮ ಜ ಮೃತರಾದರು ಮತ್ತು ೧೬೯ ಜನ ಗಾಯಗೊಂಡರು. ಆ ಸಭೆಗಳಲ್ಲಿ ವಿದ್ಯಾರ್ಥಿಗ ಹೆಚ್ಚಿನ ಸಂಖ್ಯೆಯಲ್ಲಿ ಪಾಲ್ಗೊಂಡರು. ೧೦ನೆಯ ತಾರೀಖೂ ಮುಂದುವರಿದ ಸಭೆಗ ಹಿಂಸಾಸ್ವರೂಪ ಪಡೆದವು. ಸರ್ಕಾರೀ ಕಟ್ಟಡಗಳು ಹಾಗೂ ಸಾರಿಗೆ ಮತ್ತು ಸಂಪಕ ಮಾಧ್ಯಮಗಳಿಗೆ ಹೆಚ್ಚು ಧಕ್ಕೆ ಆಯಿತು. ಪ್ರತಿಭಟನೆಯು ಭಾರತದ ಎಲ್ಲ ಭಾಗಗಳ ಹರಡಿತು. ಮಹಾರಾಷ್ಟ್ರದ ಮುಂಬಯಿ, ಪೂನಾ, ಶೋಲಾಪುರ, ನಾಸಿಕ್, ಅಹಮ ನಗರ ಮತ್ತು ಸತಾರಾಗಳಲ್ಲಿ ಪ್ರತಿಭಟನೆಯು ತೀವ್ರವಾಗಿತ್ತು. ಪೂನಾವು ನಾಲ್ಕು ದಿನಗ ಕಾಲ ಸಂಪೂರ್ಣವಾಗಿ ಮಿಲಿಟರಿಯ ನಿಯಂತ್ರಣದಲ್ಲಿತ್ತು. ಗುಜರಾತ್‌ನ ಅನೆ ಸ್ಥಳಗಳಲ್ಲಿ ಮೂರು ದಿನಗಳಿಂದ ಒಂದು ವಾರ ಕಾಲ ಪ್ರತಿಭಟನಾ ಮೆರವಣಿಗೆಗಳ ಹರತಾಳ, ಮುಷ್ಕರ ನಡೆದವು. ಎಲ್ಲಾ ಬಟ್ಟೆಯ ಕಾರ್ಖಾನೆಗಳು ಮತ್ತು ಅಂಗಡಿಗಳ ಸಂಪೂರ್ಣ ಬಂದ್ ಆಗಿದ್ದವು. ಶಾಲಾ ಕಾಲೇಜುಗಳು ಆರು ತಿಂಗಳಿಗೂ ಹೆ ಕಾಲ ಮುಚ್ಚಿದ್ದವು. ನಾಡಿಯಾದಲ್ಲಿ ಪ್ರತಿಭಟನಾ ಮೆರವಣಿಗೆ ಮುಗಿಸಿಕೊಂ ಹಿಂದಿರುಗುತ್ತಿದ್ದ ೫೦ ವಿದ್ಯಾರ್ಥಿಗಳ ಒಂದು ತಂಡವನ್ನು ಕೂರಲು ತಿಳಿಸಿ ಪೊಲೀಸರು ಅವರೆಲ್ಲರನ್ನೂ ಗುಂಡಿಟ್ಟು ಕೊಂದರು. ಬಿಹಾರ ರಾಜ್ಯದ ಪಾಟ್ನಾದಲ ವಿದ್ಯಾರ್ಥಿಗಳ ಪ್ರತಿಭಟನಾ ಮೆರವಣಿಗೆಯ ಮೇಲೆ ಸೈನಿಕರು ೧೩/೧೪ ಸು ಗುಂಡು ಹಾರಿಸಿ ಏಳು ಜನ ವಿದ್ಯಾರ್ಥಿಗಳ ಸಾವಿಗೆ ಕಾರಣರಾದರು. ಭಾರತದಾದ್ಯ ವಿಸ್ತರಿಸಿದ ಪ್ರಭಾವಶಾಲಿ ಪ್ರತಿಭಟನೆ ಸಾವು ನೋವುಗಳಿಗೆ ಕಾರಣವಾಯಿತು.

ಕರ್ನಾಟಕದಲ್ಲಿ ನಡೆದ ಪ್ರತಿಭಟನೆಯು 'ಕರ್ನಾಟಕ ಮಾದರಿ' ಎಂದೇ ಪ್ರಸಿ ವಾಯಿತು. ಕರ್ನಾಟಕದ ಪ್ರಮುಖ ನಾಯಕರು ಭೂಗತರಾಗಿದ್ದರೂ ಸ ವಿದ್ಯಾರ್ಥಿಗಳು, ರೈತರು, ಕಾರ್ಮಿಕರು ಮತ್ತು ಸರ್ಕಾರಿ ನೌಕರರು ಸೇರಿ ನಡೆಸಿ ಪ್ರತಿಭಟನೆ, ಸರ್ಕಾರದ ಆಡಳಿತದ ಮೇಲೆ ಪರಿಣಾಮ ಬೀರಿತು. ಟೆಲಿಗ್ರಾ ತಂತಿಗಳ ಕಡಿತ, ರೈಲುಗಳ ಸಂಚಾರಕ್ಕೆ ಅಡ್ಡಿ, ಶಾಲಾ ಕಾಲೇಜುಗಳ ಬಂದ್‌ಗ ಹೆಚ್ಚಿನ ಪ್ರಮಾಣದಲ್ಲಿದ್ದುದು ಮಾತ್ರವಲ್ಲದೆ, ಸರ್ಕಾರವನ್ನು ತಲ್ಲಣಗೊಳಿಸಿದುವು.

೯-೮-೧೯೪೨ರಂದು ಮೈಸೂರು ಮಹಾರಾಜ ಕಾಲೇಜಿನ ಕನ್ನಡ ಸಂಘದ ಶ್ರೀರಂಗ (ಆದ್ಯ ರಂಗಾಚಾರ್ಯ) ಅವರ ಭಾಷಣವಿತ್ತು. ಅದು ಮುಗಿದ ನಂತ ವಿದ್ಯಾರ್ಥಿಗಳು ಮೆರವಣಿಗೆ ಮಾಡಿ, ಸುಬ್ಬರಾಯನ ಕೆರೆ ಮೈದಾನದಲ್ಲಿ ಸಭೆ ಸೇ ಮಾರನೆಯ ದಿನ ಅಂದರೆ ೧೦ನೆಯ ತಾರೀಖಿನಂದು ಮುಷ್ಕರ ಹೂಡುವ ನಿರ್ಧಾ ಮಾಡಿದರು. ೧೦ನೆಯ ತಾರೀಕು ಪ್ರಕಟಗೊಂಡ ತಾಯಿನಾಡು ಪತ್ರಿಕೆಯ ವಿಶೇ ಸಂಚಿಕೆಯು ಮಹಾತ್ಮಾ ಗಾಂಧಿ ಅವರೂ ಸೇರಿದಂತೆ, ಬಹುತೇಕ ಎಲ್ಲ ಸ್ವಾತಂ ಹೋರಾಟಗಾರರ ಬಂಧನವಾಗಿ ಇರುವುದನ್ನು ಅಧಿಕೃತವಾಗಿ ಖಚಿತಪಡಿಸಿತ ಅಂದು ಭಾನುವಾರವಾದರೂ ಸಹ ಧಾರವಾಡದ ವಿದ್ಯಾರ್ಥಿಗಳು ಪ್ರತಿಭಟನ ಮೆರವಣಿಗೆ ಮಾಡಿದರು. ಪೊಲೀಸರು ಮೆರವಣಿಗೆಗೆ ಅಡ್ಡಿ ಮಾಡಿದಾಗ ರಸ್ತೆಯಲ ಕುಳಿತು ರಾಮನಾಮ ಸ್ಮರಣೆ ಮಾಡತೊಡಗಿದರು. ಹುಬ್ಬಳ್ಳಿ ಮತ್ತು ಬೆಳಗಾವಿಗಳಲ ಸಾರ್ವಜನಿಕ ಪ್ರತಿಭಟನಾ ಸಭೆಗಳು ನಡೆದವು. ಎರಡೂ ಸ್ಥಳಗಳಲ್ಲಿ ಹಲ ನಾಯಕರ ಬಂಧನವಾಯಿತು. ಮೈಸೂರಿನಲ್ಲೂ ವಿದ್ಯಾರ್ಥಿಗಳ ಮೆರವಣಿಗೆ ಮ ಪ್ರತಿಭಟನಾ ಸಭೆ ನಡೆಯಿತು. ಅದೇ ರೀತಿಯಲ್ಲಿ ಶಿವಮೊಗ್ಗ, ಹುಣಸೂ ಚಾಮರಾಜನಗರ, ಧಾರವಾಡ, ಅಂಕೋಲ, ಮಂಗಳೂರು, ಗದಗ, ಹಾಸನ ಇತ್ಯಾ ಸ್ಥಳಗಳಲ್ಲೂ ಪ್ರತಿಭಟನಾ ಮೆರವಣಿಗೆಗಳು ನಡೆದುವು. ಮೊದಲಿಗೆ ಮೆರವಣಿ ಅಥವಾ ಸಭೆಗಳು ಶಾಂತಿಯುತವಾಗಿಯೇ ಇದ್ದುವು. ಯಾವುದೇ ರೀತಿಯ ಬಲಾತ್ಕಾ ಯಾವುದರಲ್ಲೂ ಇರಲಿಲ್ಲ. ೧೧-೮-೧೯೪೨ರಂದು ಬೆಂಗಳೂರಿನ ಸೆಂಟ್ರ ಕಾಲೇಜಿನ ಕ್ರಿಕೆಟ್ ಮೈದಾನದಲ್ಲಿ ನಡೆದ ವಿದ್ಯಾರ್ಥಿಗಳ ಸಭೆಯಲ್ಲಿ ೧೨,೦೦೦ಕ್ಕ ಹೆಚ್ಚು ಜನ ಪಾಲ್ಗೊಂಡಿದ್ದರು. ಮೈಸೂರಿನ ಪ್ರೊ॥ ಎಂ. ವಿ. ಜಂಬುನಾಥ್ ಮ ಪ್ರೊ॥ ಕೃಷ್ಣಮೂರ್ತಿ, ಬೆಂಗಳೂರಿನ ಹಿಂದೂಸ್ತಾನ್ ಏರ್‌ಕ್ರಾಫ್ಟ್ ಸಂಸ್ಥೆಯ ಅಧಿಕಾ ಎಂ. ಎಚ್. ಷಾ ಅವರು ತಮ್ಮ ಕೆಲಸಗಳಿಗೆ ರಾಜೀನಾಮೆ ನೀಡಿದ ವಿಷಯವನ್ನು ಅದ ಸಭೆಯಲ್ಲಿ ಪ್ರಕಟಿಸಲಾಯಿತು. ಸರ್ಕಾರಿ ಕೆಲಸಗಳಿಗೆ ರಾಜೀನಾಮೆ, ಸರ್ಕಾರಿ ಆ ಗಳನ್ನು ಧಿಕ್ಕರಿಸುವುದು, ಟೆಲಿಫೋನ್ ಮತ್ತು ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸುವುದು ಮದ್ಯದ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡುವುದು, ರೈಲುಗಳಲ್ಲಿ ಟಿಕೆ ರಹಿತ ಪ್ರಯಾಣ ಮಾಡುವುದು ಇತ್ಯಾದಿ ವಿಧಾನಗಳಿಂದ ಪ್ರತಿಭಟನೆಗಳನ

ಂಡಲಾಯಿತು. ವಿದ್ಯಾರ್ಥಿಗಳು ಶಾಲಾ ಕಾಲೇಜು ನ್ನು, ನೌಕರರು ಕಾರ್ಖಾನೆಗಳನ್ನು, ನ್ಯಾಯವಾದಿ ು ನ್ಯಾಯಾಲಯಗಳನ್ನು ಬಹಿಷ್ಕರಿಸುವುದರ ೂಲಕ ಪ್ರತಿಭಟಿಸಿದರು.

ಹಾಸನದಲ್ಲಿ ಕನ್ನಡದ ಹೆಸರಾಂತ ಸಾಹಿತಿ ುರೂರು ರಾಮಸ್ವಾಮಿ ಅಯ್ಯಂಗಾರ್ ಅವರು -೮-೧೯೪೨ರಂದು ಹಾಸನ ಜಿಲ್ಲಾ ಬೋರ್ಡ್‌ನ ಸ್ಯತ್ವಕ್ಕೆ, ರಾಜ್ಯದ ಗೃಹ ಕೈಗಾರಿಕಾ ಸಮಿತಿ ಮತ್ತು ಲ್ಲಾ ವಯಸ್ಕರ ಶಿಕ್ಷಣ ಸಮಿತಿಯ ಸದಸ್ಯತ್ವಗಳಿಗೆ ಜೀನಾಮೆ ಸಲ್ಲಿಸಿದರು. ಅಂದೇ ಚಿಕ್ಕಮಗಳೂರು, ಮೊಗ್ಗ, ಬಳ್ಳಾರಿ, ಬೆಳಗಾವಿ, ಜಮಖಂಡಿ, ಕೋಲ, ಶಿರಸಿ, ಗದಗ, ತಿಪಟೂರು, ಕಾರ್ಕಳ, ೋಲಾರ, ಕೆ.ಜಿ.ಎಫ್.ನ ರಾಬರ್ಟ್‌ಸನ್ ಪೇಟೆ ತ್ತು ಹುಬ್ಬಳ್ಳಿಗಳಲ್ಲೂ ಪ್ರತಿಭಟನಾತ್ಮಕ ುವಳಿಗಳು ನಡೆದ ವರದಿಗಳು ಸರ್ಕಾರವನ್ನು ುಪಿದವು. ಎಲ್ಲ ಕಡೆಯೂ ವಿದ್ಯಾರ್ಥಿಗಳ ತ್ರವೇ ಪ್ರಮುಖವಾಗಿತ್ತು.



೧೨ನೆಯ ತಾರೀಕಿನಂದು ಚಳವಳಿಯು ತೀವ್ರ ಸ್ವರೂಪ ಪಡೆಯಿತು. ದಿನದಿಂದ ಕ್ಕೆ ನಗರಗಳು ಮತ್ತು ಪಟ್ಟಣಗಳಲ್ಲದೆ ಹಳ್ಳಿ ಹಳ್ಳಿಗಳೂ ಪ್ರತಿಭಟನಾ ರವಣಿಗೆಗಳನ್ನು ಹಮ್ಮಿಕೊಂಡವು. ಶಾಲಾ ಕಾಲೇಜುಗಳ ವಿದ್ಯಾರ್ಥಿಗಳು ಹೆಚ್ಚು ಚ್ಚು ಸಂಖ್ಯೆಯಲ್ಲಿ ಪ್ರತಿಭಟನಾ ಮೆರವಣಿಗೆಗಳಲ್ಲಿ ಭಾಗವಹಿಸಿದರು. ಆ ದಿನ ುಂಬಯಿಯಿಂದ ಹಿಂದಿರುಗುತ್ತಿದ್ದ ಮೈಸೂರು ಕಾಂಗ್ರೆಸ್‌ನ ನಾಯಕರುಗಳನ್ನು ಶವಂತಪುರ ರೈಲ್ವೆ ನಿಲ್ದಾಣದಲ್ಲಿ ಬಂಧಿಸಲಾಯಿತು. ಬಂಧಿತರಾದ ಪ್ರಮುಖರ ಿ ಕೆ. ಟಿ. ಭಾಷ್ಯಂ, ಎಸ್. ನಿಜಲಿಂಗಪ್ಪ, ತಾಳಕೆರೆ ಸುಬ್ರಹ್ಮಣ್ಯಂ ಮತ್ತಿತರರು ದ್ದರು. ಅದೇ ದಿನ ಮಂಗಳೂರಿನಲ್ಲಿ ಕೆ. ಆರ್. ಕಾರಂತರ ಬಂಧನವಾಯಿತು. ಸೂರಿನ ಸುಬ್ಬರಾಯನ ಕೆರೆಯಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಎಂ. ವಿ. ನಂದ ಅವರನ್ನು ಕಮ್ಯಾಂಡ್‌ನ ಪ್ರಮುಖರನ್ನಾಗಿ ನೇಮಿಸಲಾಯಿತು.

ಬೆಳಗಾವಿಯಲ್ಲೂ ಹಲವು ನಾಯಕರ ಬಂಧನವಾಯಿತು. ಜಿಲ್ಲೆಯ ಬಹುತೇಕ ಗಗಳಲ್ಲಿ ಪ್ರತಿಭಟನಾತ್ಮಕ ಮೆರವಣಿಗೆಗಳು ನಡೆದವು. ಅದೇ ದಿನ ಬೆಂಗಳೂರಿನಲ್ಲಿ ರ್ಖಾನೆಗಳ ಕಾರ್ಮಿಕ ವರ್ಗದ ನಾಯಕರು ಚಳವಳಿಯಲ್ಲಿ ಪಾಲ್ಗೊಂಡರು. ಬಿನ್ನಿ ಲ್, ಸರ್ಕಾರಿ ಮುದ್ರಣಾಲಯ, ಪೋರ್ಸ್‌ಲೀನ್ ಫ್ಯಾಕ್ಟರಿ, ಅಂಕೋ ಫ್ಯಾಕ್ಟರಿ ತ್ಯಾದಿ ಕಾರ್ಖಾನೆಗಳ ಕಾರ್ಮಿಕ ನಾಯಕರು ತಮ್ಮ ಕೆಲಸಗಳಿಗೆ ರಾಜೀನಾಮೆ ನೀಡಿ ಳವಳಿಗೆ ಧುಮುಕಿದರು. ಕಾಲಕ್ರಮೇಣ ಮೈಸೂರು ಸಂಸ್ಥಾನದ ಮಾತ್ರವಲ್ಲದೆ ರ್ನಾಟಕದ ಬಹುತೇಕ ಪ್ರಮುಖ ಕಾರ್ಖಾನೆಗಳ ಕಾರ್ಮಿಕರು ರಜಾ ಹಾಕಿಯಾದರೂ ಳವಳಿಯಲ್ಲಿ ಪಾಲ್ಗೊಂಡರು. ಅದೇ ದಿನ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಭಾರತ ವಹಾರಗಳ ಕಾರ್ಯದರ್ಶಿ ಎಲ್. ಎಸ್. ಅಮೆರಿ ನೀಡಿದ ಹೇಳಿಕೆಯ ಪ್ರಕಾರ ಡಿಯಾಗಿ ಭಾರತದಲ್ಲಿ ನಡೆಯುತ್ತಿದ್ದ ಚಳವಳಿಯಲ್ಲಿ ಪ್ರತಿಭಟನಾ ಮೆರವಣಿಗೆ, ಯಾಲಯಗಳ ಬಹಿಷ್ಕಾರ, ಟೆಲಿಗ್ರಾಫ್ ಮತ್ತು ಟೆಲಿಫೋನ್ ತಂತಿಗಳ ಕಡಿತ, ಸೈನಿಕ ಮಕಾತಿ ಕೇಂದ್ರಗಳ ಮುಚ್ಚಿಸುವಿಕೆ ಇತ್ಯಾದಿ ಕಾರ್ಯಕ್ರಮಗಳು ಸೇರಿದ್ದುವು.

೧೩ನೆಯ ತಾರೀಕು ಬೆಂಗಳೂರಿನಲ್ಲಿ ಮುಂದುವರಿದ ಹೋರಾಟದಲ್ಲಿ ಬಿನ್ನಿ ಲ್, ಮೈಸೂರು ಮಿಲ್, ಮಿನರ್ವಾ ಮಿಲ್, ಟಿ. ಆರ್. ಮಿಲ್, ಮೈಸೂರು ಲ್ಯಾಂಪ್ಸ್ ತ್ಯಾದಿ ಕಾರ್ಖಾನೆಗಳ ಕಾರ್ಮಿಕರು ಕೆಲಸಕ್ಕೆ ಹಾಜರಾಗದೆ ಪ್ರತಿಭಟನಾ ಮೆರವಣಿಗೆ ಹಿಸಿ ಧರ್ಮಾಂಬುಧಿ ಕೆರೆಯ ಏರಿಯ ಮೇಲಿದ್ದ ಹೆಂಡದಂಗಡಿಗೆ ಮುತ್ತಿಗೆ ಹಾಕಿದರು.

ಮಹಾತ್ಮಾ ಗಾಂಧಿಯವರ ಸಹಾಯಕರಾಗಿದ್ದ ಮಹದೇವ ದೇಸಾಯಿ ಅವರು ಗಸ್ಟ್ ೧೫ನೆಯ ತಾರೀಖು ಬೆಳಗ್ಗೆ ೮-೩೦ಕ್ಕೆ ಪುಣೆಯಲ್ಲಿ ನಿಧನರಾದ ವಿಷಯ ನೆಯ ತಾರೀಕಿನ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಅನಂತರ ಪ್ರತಿಭಟನೆಗಳು ಬಲವಾದುವು. ಬ್ರಿಟಿಷ್ ಸರ್ಕಾರ ಆಗ ಪ್ರತಿಭಟನೆಯನ್ನು ಹತ್ತಿಕ್ಕಲು ಮೆರವಣಿಗೆಗಳ ೇಲೆ ಲಾಠಿ ಚಾರ್ಜ್, ಗೋಲೀಬಾರ್, ಬಂಧನ ಇತ್ಯಾದಿ ಕ್ರಮಗಳನ್ನು ಕೈಗೊಂಡಿತು. ಂದು ಸಂಜೆ ಹುಬ್ಬಳ್ಳಿಯ ದುರ್ಗದಬೈಲು ಪೊಲೀಸ್ ಸ್ಟೇಷನ್‌ನ ಬಳಿ ನಡೆದ ೋಲೀಬಾರ್‌ನಲ್ಲಿ ಒಬ್ಬ ವ್ಯಕ್ತಿ ಸತ್ತು ಒಂಬತ್ತು ಜನ ತೀವ್ರವಾಗಿ ಗಾಯಗೊಂಡರು.

ರಾಷ್ಟ್ರೀಯ ಹೋರಾಟಕ್ಕೆ ಪ್ರಸಿದ್ಧವಾಗಿದ್ದ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಕಡಿವೆ ಶಿವಪುರವನ್ನು ೧೩ನೆಯ ತಾರೀಖು ನಡೆದ ಪ್ರತಿಭಟನೆಯ ಸಂದರ್ಭದಲ್ಲೇ ರಾಷ್ಟ್ರೀಯ ಗ್ರಾಮವೆಂದು ಘೋಷಿಸಲಾಗಿತ್ತು. ಪ್ರತಿದಿನ ಬೆಳಗ್ಗೆ ಊರಿನ ಛಾವಡಿಯ ಮುಂದೆ ಪ್ರಭಾತ್‌ಫೇರಿ ಆಗುತ್ತಿತ್ತು. ಎಂದಿನಂತೆ ೧೫ನೆಯ ತಾರೀಕೂ ಪ್ರಭಾತ್ ಫೇರಿಗೆ ಜನ ಮೆರವಣಿಗೆಯಲ್ಲಿ ಬಂದಾಗ ಪೊಲೀಸ್ ಅಧಿಕಾರಿಗಳು ಮೆರವಣಿಗೆಯನ್ನು ತಡೆಯಲು ಪ್ರಯತ್ನಿಸಿದರು. ಅವರಿಗೂ ಸತ್ಯಾಗ್ರಹಿಗಳಲ್ಲಿ ಒಬ್ಬನಾದ ಸಾತಪ್ಪ ಟೋಪಣ್ಣನವರ್‌ಗೂ ಮಾತಿನ ಚಕಮಕಿ ನಡೆಯಿತು. ಸಾತಪ್ಪ ಪೊಲೀಸರ ಮೇಲೆ ಹಲ್ಲೆ ಮಾಡಿದರು. ಆಗ ನಡೆದ ಗೋಲೀಬಾರ್‌ನಲ್ಲಿ ಸಾತಪ್ಪ ಸ್ಥಳದಲ್ಲೇ ತೀರಿಕೊಂಡ. ಸವದತ್ತಿಯಲ್ಲಿ ಹೋರಾಟ ಎಂದಿನಂತೆ ಮುಂದುವರಿಯಿತು.

೧೬ನೆಯ ತಾರೀಕು ಬೆಂಗಳೂರಿನಲ್ಲಿ ನಡೆದ ಪ್ರತಿಭಟನಾ ಮೆರವಣಿಗೆ ಮತ್ತು ನಂತರ ನಡೆದ ಗೋಲೀಬಾರ್ ಇಡೀ ರಾಷ್ಟ್ರದ ಗಮನ ಸೆಳೆಯಿತು. ಪ್ರತಿಭಟನೆಯನ್ನು ತಡೆಯಲು ಪೊಲೀಸರ ಬದಲು ಸೈನಿಕರನ್ನು ನಿಯೋಜಿಸಲಾಯಿತು. ಮೈಸೂರು ಬ್ಯಾಂಕ್ ಚೌಕದ ಬಳಿ ಸಂಜೆ ೫-೩೦ರ ಸುಮಾರಿಗೆ ಸಾವಿರಾರು ಜನ ಪ್ರತಿಭಟನಾಕಾರರು ಸೇರಿದ್ದರು. ಆ ಪ್ರದೇಶದಲ್ಲಿ ಅವೆನ್ಯೂ ರಸ್ತೆ ಮತ್ತು ಕೆಂಪೇಗೌಡ ರಸ್ತೆಗಳಲ್ಲಿ ನಿಷೇಧಾಜ್ಞೆ ಜಾರಿಯಲ್ಲಿದ್ದರೂ ಪ್ರತಿಭಟನಾ ಮೆರವಣಿಗೆಗೆ ಸಾವಿರಾರು ಜನ ಸಮಾವೇಶಗೊಂಡಿದ್ದರು. ಕೆಂಪೇಗೌಡ ರಸ್ತೆಯಲ್ಲಿ ಜನಸಂದಣಿಯನ್ನು ನಿಯಂತ್ರಿಸಲು ಪೊಲೀಸರು ಲಾಠಿಪ್ರಹಾರ ಮಾಡಿದರು. ಇದರಿಂದ ಉದ್ರಿಕ್ತರಾದ ಜನ ಕಲ್ಲೆಸತಕ್ಕೆ ಮುಂದಾಗಿ ಪೊಲೀಸರನ್ನು ಅಟ್ಟಿಸಿಕೊಂಡು ಹೋದರು. ಪೊಲೀಸರು ನಿರ್ಗಮಿಸಿದರು. ಜನರನ್ನು ಚದುರಿಸಲು ಅಶ್ವದಳಕ್ಕೆ ಕರೆ ನೀಡಲಾಯಿತು. ಕುದುರೆಗಳು ಬರುವುದನ್ನು ತಿಳಿದ ಜಾಣ ಜನ ರಸ್ತೆಯ ಮೇಲೆ ರಾಗಿಯನ್ನು ಚೆಲ್ಲಿದರು. ಕುದುರೆಗಳು ನಡೆಯಲಾಗದೆ ಮುಗ್ಗರಿಸಿಬಿದ್ದುವು. ಜನರ ಸಿಟ್ಟು ಹೆಚ್ಚಿತು. ಅವೆನ್ಯೂ ರಸ್ತೆಯ ಪೋಸ್ಟ್ ಆಫೀಸಿಗೆ ಬೆಂಕಿ ಹಚ್ಚಲಾಯಿತು. ಆಗ ಬೇರೆ ದಾರಿಯಿಲ್ಲದೆ ಗೋಲೀಬಾರಿಗೆ ಆಜ್ಞೆ ಮಾಡಲಾಯಿತು. ೩೨ ಸುತ್ತು ಗುಂಡು ಹಾರಿಸಲಾಯಿತು. ಒಬ್ಬ ವ್ಯಕ್ತಿ ಸತ್ತು ೩೮ ಜನರಿಗೆ ತೀವ್ರ ಗಾಯಗಳಾದವು. ೨೭ಜನ ಸೈನಿಕರಿಗೂ ಏಟು ಬಿದ್ದಿತ್ತು. ಸತ್ತ ವ್ಯಕ್ತಿಯನ್ನು ಮಾರನೆಯ ದಿನ ನಗರ್ತಪೇಟೆಯ ತಿಮ್ಮಣ್ಣದಾಸ್ ಎಂದು ಗುರುತಿಸಲಾಯಿತು.

೧೬ನೆಯ ತಾರೀಕು ಕರ್ನಾಟಕದ ಇನ್ನೂ ಹಲವು ಸ್ಥಳಗಳಲ್ಲಿ ಗಲಭೆಗಳು ತೀವ್ರಗೊಂಡವು. ೧೭ನೆಯ ತಾರೀಕು ಬೈಲಹೊಂಗಲ ಮತ್ತು ನಿಪ್ಪಾಣಿಗಳಲ್ಲಿ ಜನತೆಯ ಪ್ರತಿಭಟನೆ ತೀವ್ರಸ್ವರೂಪ ಪಡೆಯಿತು. ೧೦ನೆಯ ತಾರೀಕಿನಿಂದಲೂ ಬೈಲಹೊಂಗಲದಲ್ಲಿ ಗಂಭೀರವಾದ ಪ್ರತಿಭಟನೆ ಇತ್ತು. ಪ್ರತಿದಿನವೂ ಜನರು ಬ್ರಿಟಿಷ್ ಸರ್ಕಾರ ಮತ್ತು ಅಧಿಕಾರಿಗಳಿಗೆ ಧಿಕ್ಕಾರ ಹಾಕುತ್ತಿದ್ದರು. ೧೭-೮-೧೯೪೨ರಂದು ಪಟ್ಟಣದ ಕಲ್ಮಠದಲ್ಲಿ ಗುಪ್ತಸಭೆ ನಡೆದಿತ್ತು. ಅದರ ಸುಳಿವು ತಿಳಿದ ಪೊಲೀಸರು ಕಲ್ಮಠವನ್ನು ಸುತ್ತುವರಿದು, ಏಳು ಜನರನ್ನು ಬಂಧಿಸಿ ಪೊಲೀಸ್ ವ್ಯಾನಿನಲ್ಲಿ ಕಛೇರಿಗೆ ಕರೆದುಕೊಂಡು ಹೋಗಲು ಮುಂದಾದರು. ಪೊಲೀಸ್ ವಾಹನವನ್ನು ಪ್ರತಿಭಟನಾಕಾರರು ಸುತ್ತುವರಿದು, ಬ್ರಿಟಿಷ್ ವಿರೋಧಿ ಘೋಷಣೆಗಳನ್ನು ಕೂಗುತ್ತಾ ಕಲ್ಲು ತೂರಾಟಕ್ಕೆ ಆರಂಭಿಸಿದರು. ಗೋಲೀಬಾರ್‌ಗೆ ಆಜ್ಞೆ ಮಾಡಲಾಯಿತು. ಗಾಳಿಯಲ್ಲಿ ಗುಂಡು ಹಾರಿಸಿದಾಗಲೂ ಜನತೆಯನ್ನು ನಿಯಂತ್ರಿಸಲು ಸಾಧ್ಯವಾಗದಿದ್ದಾಗ, ಪೊಲೀಸ್ ಅಧಿಕಾರಿಯು ತನ್ನ ಏಳು ಗುಂಡಿನ ಪಿಸ್ತೂಲಿನಿಂದ ಜನರ ಮೇಲೆ ಗುಂಡು ಹಾರಿಸಿದ. ಏಳು ಜನ ಮೃತಪಟ್ಟರು. ಇದರಿಂದ ಕ್ರುದ್ಧರಾದ ಜನ ವಿನಾಶಕಾರೀ ಕೃತ್ಯಗಳನ್ನು ಮುಂದುವರಿಸಿದರು.

೧೭ನೆಯ ತಾರೀಕು ಬೆಂಗಳೂರಿನ ಮೈಸೂರು ಬ್ಯಾಂಕ್ ಚೌಕದಲ್ಲಿ ಗಲಭೆಗಳು ತೀವ್ರ ಸ್ವರೂಪದಲ್ಲಿ ಮುಂದುವರಿದವು. ಅಂದು ಸಂಜೆ ಒಂದು ಅಂಚೆ ಪೆಟ್ಟಿಗೆಗೆ ಧಕ್ಕೆ ಮಾಡಲಾಯಿತು. ಬಹುತೇಕ ಎಲ್ಲ ಸಂಪರ್ಕ ಮಾಧ್ಯಮಗಳಿಗೂ ಹಾನಿ ಮಾಡ

ಲಾಯಿತು. ೨೦೦೦ಕ್ಕೂ ಹೆಚ್ಚು ಜನರಿದ್ದ ಒಂದು ತಂಡ ಅರಳೇಪೇಟೆಯ ಅಂಚೆ ಕಛೇರಿಗೆ ಮುತ್ತಿಗೆ ಹಾಕಿತು. ಮತ್ತೊಂದು ತಂಡ ಕೆಂಗೇರಿ ಗೇಟ್ ಪೊಲೀಸ್ ಸ್ಟೇಷನ್‌ಗೆ ಮುತ್ತಿಗೆ ಹಾಕಿ ಕೊಠಡಿಗಳಿಗೆ ಹಾನಿ ಮಾಡಿ, ಅಲ್ಲಿಯೇ ಸೈಕಲ್‌ಗಳನ್ನು ನಿಲ್ಲಿಸಿತು. ಸ್ಟೇಷನ್‌ಗೆ ಬೆಂಕಿ ಹಚ್ಚುವ ಪ್ರಯತ್ನಗಳೂ ನಡೆದವು. ಸ್ವರಕ್ಷಣೆಗಾಗಿ ಪೊಲೀಸರು ಗುಂಡು ಹಾರಿಸಬೇಕಾಯಿತು. ಆರ್ಕಾಟ್ ಶ್ರೀನಿವಾಸಾಚಾರ್ ರಸ್ತೆಯ ಅಂಚೆ ಕಛೇರಿಗೆ ಬೆಂಕಿ ಹಚ್ಚಲಾಯಿತು. ಅಲ್ಲಿ ಕಾರ್ಯನಿರತರಾಗಿದ್ದ ಏಳು ಜನ ಪೊಲೀಸ್ ಕಾನ್‌ಸ್ಟೇಬಲ್‌ಗಳ ಸಮವಸ್ತ್ರಗಳನ್ನು ಕಳಚಿಹಾಕಲಾಯಿತು. ನಗರ ಅಂಚೆ ಕಛೆರಿ, ಬಳೇಪೇಟೆ ಅಂಚೆ ಕಛೇರಿ ಮತ್ತು ಅರಳೇಪೇಟೆ ಅಂಚೆ ಕಛೇರಿಗಳ ಬಳಿಯೂ ಗೋಲೀಬಾರ್ ಆಯಿತು. ಈ ಎಲ್ಲ ಗೋಲೀಬಾರ್‌ಗಳಲ್ಲಿ ಒಂಬತ್ತು ಜನರ ಸಾವು ಮತ್ತು ೩೯ ಜನರ ತೀವ್ರ ಗಾಯಗಳ ಬಗ್ಗೆ ವರದಿಯಾಗಿದೆ. ಸತ್ತ ಒಂಬತ್ತು ಜನರ ಪೈಕಿ ಆರು ಜನರ ಗುರುತು ಮಾತ್ರ ಸಿಕ್ಕಿತು. ಅವರುಗಳೆಂದರೆ, ತಿಪ್ಪಯ್ಯ, ಅಪ್ಪಯ್ಯ, ಎಚ್. ಆರ್. ಶ್ರೀನಿವಾಸನ್, ಪೊನ್ನುಸ್ವಾಮಿ, ನಾರಾಯಣಾಚಾರ್ಯ ಮತ್ತು ಸುಭಾಸಿಂಗ್. ಇವರಲ್ಲಿ ಮೊದಲ ನಾಲ್ಕು ಜನ ಯುವಕರು. ಉಳಿದಿಬ್ಬರು ವಯಸ್ಕರು.

ದಿನದಿಂದ ದಿನಕ್ಕೆ ತೀವ್ರಗೊಂಡ ಕ್ವಿಟ್ ಇಂಡಿಯಾ ಚಳವಳಿಯ ಪರಿಣಾಮವಾಗಿ ಕಾರ್ಖಾನೆಗಳಲ್ಲಿ ಮತ್ತು ಶಾಲಾ ಕಾಲೇಜುಗಳಲ್ಲಿ ಹಾಜರಾತಿ ಕಡಿಮೆಯಾಯಿತು. ವಿದ್ಯಾರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ ಮೆರವಣಿಗೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಟೆಲಿಗ್ರಾಫ್ ಮತ್ತು ಟೆಲಿಫೋನ್ ತಂತಿಗಳನ್ನು ಹೆಚ್ಚಾಗಿ ಕತ್ತರಿಸುತ್ತಿದ್ದವರೇ ವಿದ್ಯಾರ್ಥಿಗಳು. ೧೭ನೆಯ ಮತ್ತು ೧೮ನೆಯ ತಾರೀಕು ಬಾಣಾವರದಲ್ಲಿ ನಡೆದ ವಿದ್ಯಾರ್ಥಿಗಳ ಪ್ರತಿಭಟನೆ ತೀವ್ರ ಸ್ವರೂಪದ್ದಾಗಿತ್ತು. ೧೭ನೆಯ ತಾರೀಕು ಅರಸೀಕೆರೆಗೆ ಹೋಗುತ್ತಿದ್ದ ರೈಲಿನಲ್ಲಿ ಹೆಚ್ಚು ಪ್ರಯಾಣಿಕರು ಬ್ರಿಟಿಷ್ ಸೈನ್ಯದವರಾಗಿದ್ದರು. ಇವರೆಲ್ಲ ತಿಪಟೂರಿನಿಂದ ಅರಸೀಕೆರೆಗೆ ಹೋಗುತ್ತಿದ್ದರು. ತಿಪಟೂರಿನಲ್ಲಿ ಮಹದೇವ ಭಾಯಿ ದೇಸಾಯಿ ಅವರ ನಿಧನಕ್ಕೆ ಸಂತಾಪ ಸೂಚಿಸಿ ಹಮ್ಮಿಕೊಂಡಿದ್ದ ಸಭೆಯಲ್ಲಿದ್ದ ಜನರು ರೈಲಿನಲ್ಲಿದ್ದ ಬ್ರಿಟಿಷ್ ಸೈನಿಕರನ್ನು ಕಂಡು ಸಿಟ್ಟಿಗೆದ್ದು, ಅವರತ್ತ ಕಲ್ಲೆಸೆದರು. ಆಗ ಮಿಲಿಟರಿ ಸೈನಿಕರು ಗುಂಡು ಹಾರಿಸಿದರು. ಆಗ ಗುಂಡೇಟು ತಗುಲಿದ ಮಾರನಗೆರೆಯ ರೈತ ಸಿದ್ದಪ್ಪ ಮಾರನೆಯ ದಿನ ಮೃತಪಟ್ಟ. ಕುಪಿತರಾದ ಜನ ರೈಲ್ವೇ ಸ್ಟೇಷನ್‌ಗೆ ಬೆಂಕಿ ಹಚ್ಚಿದರು. ಅಲ್ಲಿ ನಿಂತಿದ್ದ ಗೂಡ್ಸ್ ಗಾಡಿಗಳಿಗೂ ಬೆಂಕಿ ಹಚ್ಚಲಾಯಿ

ಕರ್ನಾಟಕದಲ್ಲಿ ನಡೆಯುತ್ತಿದ್ದ ಭಾರತ ಬಿಟ್ಟು ತೊಲಗಿ ಚಳವಳಿಯ ಸ್ವರೂಪವ ಗಾಂಧೀಜಿ 'ಕರ್ನಾಟಕ ಮಾದರಿ' ಎಂದೇ ವಿಶೇಷವಾಗಿ ಗುರುತಿಸಿದ್ ಪ್ರತಿಯೊಂದು ತಂಡವೂ ನಿರ್ದಿಷ್ಟ ದಿನಗಳಂದು ಪ್ರತ್ಯೇಕವಾದ ಒಂದು ನಿರ್ದಿ ಸ್ವರೂಪದ ಪ್ರತಿಭಟನೆಯನ್ನು ಹಮ್ಮಿಕೊಳ್ಳುತ್ತಿದ್ದುವು. ಮಿಂಚಿನಂತೆ ಕಾರ್ಯಾಚರ ನಡೆಸಿ ಮಾಯವಾಗುತ್ತಿದ್ದ ಗುಂಪುಗಳನ್ನು ಸುಲಭವಾಗಿ ಬೆನ್ನಟ್ಟಲಾಗುತ್ತಿರಲಿ ಟೆಲಿಗ್ರಾಫ್ ಮತ್ತು ಟೆಲಿಫೋನ್ ತಂತಿಗಳನ್ನು ಕತ್ತರಿಸುವ, ರೈಲು ಪ್ರಯಾಣ ಅಡ್ಡಿಪಡಿಸುವ, ಅಂಚೆ ಕಛೇರಿಗಳಿಗೆ ಬೆಂಕಿ ಇಡುವ, ಅಂಚೆ ಪೆಟ್ಟಿಗೆಗಳ ನಾಶಮಾಡುವ, ಸರ್ಕಾರಿ ಕಛೇರಿಗಳನ್ನು ಸುಡುವ ಕಾರ್ಯಕ್ರಮಗಳನ್ನು ಪ್ರತಿಭಟ ತಂಡಗಳು ಹಮ್ಮಿಕೊಳ್ಳುತ್ತಿದ್ದವು. ಬೆಳಗಿನ ಹೊತ್ತು ಪ್ರಭಾತ್‌ಫೇರಿ ನಡೆಸಿ, ಗ್ರಾಮ ಆಡಳಿತ ವ್ಯವಸ್ಥೆಯನ್ನು ತಾವೇ ನೋಡಿಕೊಳ್ಳುವ ಕ್ರಮಗಳೂ ಕರ್ನಾಟ ಮಾದರಿಯಲ್ಲಿ ಸೇರಿವೆ. ಇಡೀ ರಾತ್ರಿ ಚಳಿಯಲ್ಲಿಯೇ ಕಾರ್ಯಕ್ರಮಗಳನ್ನು ರೂಪಿ ಬೆಳೆದ ಹೊಲ ಗದ್ದೆಗಳ ನಡುವೆಯೇ ಇದ್ದು, ರೂಪಿಸಿಕೊಂಡಿದ್ದ ಕಾರ್ಯಕ್ರ ಗಳನ್ನು ಮಾರನೆಯ ದಿನ ಮಿಂಚಿನಂತೆ ನಡೆಸಿ ಮರೆಯಾಗಿಹೋಗುತ್ತಿ ಪ್ರತಿಭಟನಾಕಾರರ ಹಲವು ತಂಡಗಳಿದ್ದುವು. ಗುಪ್ತ ಕಾರ್ಯಾಚರಣೆ ಮಾಡುತ್ತಿ ಮುಖಂಡರ ಬಂಧನಕ್ಕೆ ಬ್ರಿಟಿಷ್ ಸರ್ಕಾರವು ಅನೇಕ ರೀತಿಯಲ್ಲಿ ಪ್ರಯತ್ನಿಸುತ್ತಿ ಒಂದು ಗುಪ್ತ ಕಾರ್ಯಾಚರಣಾ ತಂಡದಲ್ಲಿದ್ದ ಆರ್. ಆರ್. ದಿವಾಕರರ ಹಿಡಿದುಕೊಟ್ಟವರಿಗೆ ಐದು ಸಾವಿರ ರೂಪಾಯಿಗಳ ಬಹುಮಾನ ಘೋಷಿಸಲಾಗಿತ್ತು

ವಿಸ್ತರಿಸಿದ ಚಳವಳಿಯ ಸ್ವರೂಪ ಕ್ರಮೇಣ ಸೂಕ್ತವಾಗಿ ಬದಲಾಗು ಹೋಯಿತು. ವಾರದ ಸಂತೆ ನಡೆಯುತ್ತಿದ್ದ ಸ್ಥಳಗಳಿಗೆ ಸಂತೆಯ ದಿನ ಹೋಗಿ ಸರ್ಕಾರ ಸುಂಕವನ್ನು ಪಾವತಿ ಮಾಡದಂತೆ ತಡೆಯೊಡ್ಡುವುದು, ಮದ್ಯಪಾನ ನಿಷೇಧಕ್ಕೆ ಮನ ಮಾಡುವುದು, ಸಾರಾಯಿ/ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ನಡೆಸುವುದ ಈಚಲು ಮರಗಳನ್ನು ಕಡಿಯುವುದು ಇತ್ಯಾದಿ ಸ್ವರೂಪದಲ್ಲಿ ಚಳವಳಿ ಮುಂದುವರಿಯಿತ

ಮಾಡು ಇಲ್ಲವೆ ಮಾಡಿ ಘೋಷಣೆಯ ಅಡಿ ನಡೆದ ಚಳವಳಿಯಲ್ಲಿ ಈಸೂ ಮತ್ತು ಹೊಸ ರೀತಿಯ ಘಟನೆಗಳು ವಿಶೇಷವಾಗಿ ಎಲ್ಲರ ಗಮನ ಸೆಳೆದಿವೆ. ಶಿವಮೊ


*With Best Compliments From*



**ESS CEE ENTERPRISES**

Offset Printing, Lamination, Punching & Pasting of
Carton Boxes & Window Lamination

No. 1, M.S.R. Industrial Estate, Mathikere
Bangalore - 560 054

Contact Nos. :
Ph : 23608427, 9845582493, 9845041914

ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಈಸೂರು ಒಂದು ಚಿಕ್ಕ ಹಳ್ಳಿ. ಈ ಊರಿನ ಮರಿಸ್ವಾಮಿ ಹಿರೇಮಠ ಮತ್ತು ವಾಸಪ್ಪ ಗೋಗಿ ಎನ್ನುವವರು ಮೊದಲಿನಿಂದಲೂ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದರು. ಮೈಸೂರು ಸಂಸ್ಥಾನ ಮತ್ತು ಬ್ರಿಟಿಷ್ ಆಳ್ವಿಕೆಗೆ ಸೇರಿದ್ದ ಉತ್ತರ ಕನ್ನಡ ಜಿಲ್ಲೆಗಳ ಗಡಿ ತಾಲ್ಲೂಕಾದ ಶಿಕಾರಿಪುರವು ಸಹಜವಾಗಿಯೇ ಎರಡೂ ಪ್ರದೇಶಗಳ ಆಗುಹೋಗುಗಳ ಬಗ್ಗೆ ಸದಾ ಲಕ್ಷ್ಯ ಇರಿಸಿಕೊಂಡಿತ್ತು. ಮಾಡು ಇಲ್ಲವೆ ಮಡಿ ಎಂಬ ಘೋಷಣೆಯೊಡನೆ ಉತ್ಸಾಹದಿಂದ ಸರ್ಕಾರವನ್ನು ತಿರಸ್ಕರಿಸಲು ಸನ್ನದ್ಧವಾದ ಈಸೂರಿನಲ್ಲಿ ಪ್ರತಿ ಸರ್ಕಾರವೂ ಕಾರ್ಯಾರಂಭ ಮಾಡಿತು. ಸುಮಾರು ೦೦೦ ಜನಸಂಖ್ಯೆಯ ಈಸೂರು ಮಲೆನಾಡಿನ ಒಂದು ಸುಂದರ ಹಾಗೂ ಶಾಂತ ಜನ ವಸತಿ ಪ್ರದೇಶ. ಪ್ರತಿನಿತ್ಯ ಊರಿನಲ್ಲಿ ಪ್ರಭಾತ್ ಫೇರಿ ನಡೆಯುತ್ತಿತ್ತು. ಊರಿನ ವೀರಭದ್ರೇಶ್ವರ ದೇವಾಲಯವು ಎಲ್ಲ ಚಟುವಟಿಕೆಗಳ ಕೇಂದ್ರವಾಯಿತು. ಊರಿನ ಎಲ್ಲ ಯುವಕ-ಯುವತಿಯರು ಪ್ರತಿ ದಿನ ಮೆರವಣಿಗೆ ಮಾಡುತ್ತಾ, 'ಗೌಡ ಮತ್ತು ಶ್ಯಾನುಭೋಗರ ಪುಸ್ತಕಗಳಿಗೆ ಬೆಂಕಿ ಇಡಿ', 'ಕಛೇರಿಗಳಿಗೆ ಬೆಂಕಿ ಹಾಕಿ', 'ಸರ್ಕಾರಿ ಅಧಿಕಾರಿಗಳಿಗೆ ಗೌರವ ಕೊಡಕೂಡದು. ಗೌರವ ಕೊಟ್ಟವರ ಮನೆಗಳಿಗೆ ಬೆಂಕಿ ಇಡಿ', 'ಕಂದಾಯ ನೀಡಬೇಡಿ', 'ಸುಂಕ ಕಟ್ಟಬೇಡಿ', 'ತೇಗದ ಮರ ಕಡಿಯಿರಿ' ಇತ್ಯಾದಿ ಘೋಷಣೆಗಳನ್ನು ಕೂಗುತ್ತಿದ್ದುದು ಮಾತ್ರವಲ್ಲದೆ, ಆ ಘೋಷಣೆಗಳನ್ನು ಎಲ್ಲರಿಗೂ ಕಾಣುವಂತೆ ವೀರಭದ್ರ ದೇವಾಲಯದಲ್ಲಿ ಬರೆದಿದ್ದರು. ಊರನ್ನು ಪ್ರವೇಶಿಸುವ ಸ್ಥಳದಲ್ಲಿ 'ಸ್ವತಂತ್ರ ಹಳ್ಳಿ', 'ಬೇಜವಾಬ್ದಾರಿ ಸರ್ಕಾರೀ ನೌಕರರಿಗೆ ಪ್ರವೇಶವಿಲ್ಲ', 'ಕ್ವಿಟ್ ಇಂಡಿಯಾ' ಇತ್ಯಾದಿ ಘೋಷಣೆಗಳಿದ್ದ ಫಲಕಗಳನ್ನು ಹಾಕಲಾಗಿತ್ತು. ಅಲ್ಲೇ ಒಂದು ಚಪ್ಪರವನ್ನು ಹಾಕಿ, ಅಲ್ಲಿಂದಲೇ ಆಡಳಿತ ನಡೆಸಲಾಗುತ್ತಿತ್ತು. ಆಗಸ್ಟ್ ೧೭ನೆಯ ತಾರೀಕಿನಿಂದಲೇ ಆರಂಭವಾದ ಪ್ರತಿಭಟನಾತ್ಮಕ ಪ್ರತಿ ಸರ್ಕಾರಕ್ಕೆ ಆಡಳಿತಾತ್ಮಕ ನೆರವು ನೀಡಲು ಇಂಟರ್‌ಮೀಡಿಯೆಟ್ ಕಾಲೇಜಿನ ವಿದ್ಯಾರ್ಥಿ ಲಿಂಗೋಜಿ ಮತ್ತು ಪ್ರೌಢಶಾಲೆಯ ಮೂವರು ವಿದ್ಯಾರ್ಥಿಗಳು ಮುಂದೆ ಬಂದಿದ್ದರು. ಊರಿನ ಶ್ರೀಮಂತ ಬಸವಣ್ಣಪ್ಪನವರ ಸಂಬಂಧಿ, ತರುಣ ಜಯಪ್ಪನನ್ನು ಊರಿನ ಜನ ಅಮಲ್ದಾರ್ ಎಂದು ಘೋಷಿಸಿದರು. ಸ್ಥಳೀಯ ಜೈಲಿನ ಅಧಿಕಾರಿಯ ಮಗ ಮಲ್ಲಪ್ಪ ಎಂಬ ಹುಡುಗನನ್ನು 'ಡಿಕ್ಟೇಟರ್' ಎಂದು ನೇಮಿಸಲಾಯಿತು. ಊರಿನ ಜನರೆಲ್ಲರೂ ಗಾಂಧಿ ಟೋಪಿಯನ್ನು ಧರಿಸಬೇಕೆಂದು ಆಜ್ಞೆ ಮಾಡಲಾಯಿತು. ಊರಿನ ಜನರಿಗೆ ಸಮಾವೇಶದ ಅಥವಾ ಎಚ್ಚರಿಕೆಯ ಸೂಚನೆ ನೀಡಲು ವೀರಭದ್ರ ದೇವಾಲಯದ ಘಂಟೆಯನ್ನು ಬಾರಿಸಲಾಗುವುದೆಂದು ತಿಳಿಸಲಾಯಿತು. ಆಗಸ್ಟ್ ೧೪ರಂದು ನಡೆದ ಸಭೆಯಲ್ಲಿ ಶಾಲೆಗಳಿಗೆ ಮಕ್ಕಳನ್ನು ಕಳುಹಿಸದಿರಲು, ಕಂದಾಯವನ್ನು ಕಂದಾಯ ಮಾಡದಿರಲು ಮತ್ತು ಸರ್ಕಾರಿ ನೌಕರರಿಗೆ ಯಾವುದೇ ರೀತಿಯಲ್ಲಿ ಸಹಕರಿಸದಿರಲು ಕರೆ ನೀಡಲಾಯಿತು. ಇಂತಹ ಸಭೆಗಳು ಆಗಸ್ಟ್ ೨೭ ಮತ್ತು ೨೮, ಸೆಪ್ಟೆಂಬರ್ ೧೩ ಮತ್ತು ೧೪ರಂದೂ ನಡೆದವು. ಸೆಪ್ಟೆಂಬರ್ ೧೩ ಮತ್ತು ೧೪ನೆಯ ತಾರೀಕಿನ ಸಭೆಗಳಲ್ಲಿ ಶಿಕಾರಿಪುರದ ವಿದ್ಯಾರ್ಥಿ ಮುಖಂಡರಾದ ನೀಲಕಂಠಪ್ಪ, ನಾಗವಂದದ ಭರಮಣ್ಣ ಮತ್ತು ರಟ್ಟಿಹಳ್ಳಿಯ ಮಲ್ಲಾರಿ ಜೋಯಿಸ್ ಮಾತನಾಡಿದರು. ಅಂತಹುದೇ ಸಭೆಯು ಆಗಸ್ಟ್ ೧೫ರಂದು ಸಮೀಪದ ಗಾಮ ಗ್ರಾಮದಲ್ಲಿಯೂ ನಡೆಯಿತು. ಆಗಸ್ಟ್ ೧೭ ಮತ್ತು ೧೯ನೆಯ ತಾರೀಕು ಶಿಕಾರಿಪುರದಿಂದ ಈಸೂರಿಗೆ ಬಂದಿದ್ದ ಪೊಲೀಸ್ ಕಾನ್‌ಸ್ಟೇಬಲ್‌ಗಳಿಗೆ ಗಾಂಧಿ ಟೋಪಿ ಹಾಕಿ ಹಳ್ಳಿಯಲ್ಲೆಲ್ಲಾ ಮೆರವಣಿಗೆ ಮಾಡಲಾಯಿತು. ಹಾಗೆಯೇ ಪರಿಶೀಲನೆಗೆ ಬಂದಿದ್ದ ಲೋಕೋಪಯೋಗಿ ಇಲಾಖೆಯ ಸಹಾಯಕ ಎಂಜಿನಿಯರ್‌ಗೂ ಗಾಂಧಿ ಟೋಪಿ ಹಾಕಿದ್ದು ಮಾತ್ರವಲ್ಲದೆ, ಅವರು ಹಾಕಿಕೊಂಡು ಬಂದಿದ್ದ ಹ್ಯಾಟ್‌ಅನ್ನು ವಶಪಡಿಸಿಕೊಳ್ಳಲಾಯಿತು. ೨೩ನೆಯ ತಾರೀಕು ನ್ಯಾಮತಿಯಿಂದ ಬಂದ ಕಾನ್‌ಸ್ಟೇಬಲ್‌ಗೂ ಗಾಂಧಿ ಟೋಪಿ ಹಾಕಲಾಗಿದ್ದು ಮಾತ್ರವಲ್ಲದೆ, ಆತ ತಂದಿದ್ದ ಚೀಲವನ್ನು ವಶಪಡಿಸಿಕೊಳ್ಳಲಾಯಿತು. ಹೊನ್ನಾಳಿ-ಶಿಕಾರಿಪುರ ರಸ್ತೆಯಲ್ಲಿ ಬಾಳೂರಿನ ಬಳಿಯ ಸೇತುವೆಯನ್ನು ಒಡೆಯಲಾಯಿತು. ೨೪ನೆಯ ತಾರೀಕು ರಾತ್ರಿ ಈಸೂರು, ಗಾಮ, ಚಿಕ್ಕಜೋಗಿಹಳ್ಳಿ, ಚುರ್ಚುಗುಂಡಿ ಮತ್ತು ಅರಸಿನಗೆರೆಯ ಜನ ಹಾರೋಗೊಪ್ಪದ ಬಳಿ ಮುಖ್ಯ ರಸ್ತೆಯ ಸೇತುವೆಗೆ ಧಕ್ಕೆ ಮಾಡಿದ್ದಲ್ಲದೆ, ಮರಗಳನ್ನು ಕಡಿದು ರಸ್ತೆಗೆ ಅಡ್ಡಲಾಗಿ ಹಾಕಿ ಯಾವುದೇ ವಾಹನ ತಮ್ಮ ಊರನ್ನು ಪ್ರವೇಶಿಸದಂತೆ ಮಾಡಿದರು. ೨೫ನೆಯ ತಾರೀಕು ನೆರೆಯ ಊರಿನಲ್ಲಿ ವಾಸವಿದ್ದ ಈಸೂರಿನ ಶ್ಯಾನುಭೋಗ ಮತ್ತು ಪಟೇಲರು ಕಂದಾಯ ವಸೂಲಿಗೆಂದು ಈಸೂರಿಗೆ ಬಂದರು. ಅವರ ಕಾಗದ ಪತ್ರಗಳನ್ನೆಲ್ಲಾ ಮುಟ್ಟುಗೋಲು ಹಾಕಿಕೊಳ್ಳಲಾಯಿತು. ಅವರು ಪೊಲೀಸರಿಗೆ ದೂರು ನೀಡಲು ಶಿಕಾರಿಪುರಕ್ಕೆ ಹೋದರು. ೨೬ನೆಯ ತಾರೀಕು ಖಾಸಗಿ ಕೆಲಸದ ಮೇಲೆ ಈಸೂರಿಗೆ ಬಂದಿದ್ದ ಸ್ಥಳದವನೇ ಆದ ಕಾನ್‌ಸ್ಟೇಬಲ್ ಗುಟ್ಟೆಯಪ್ಪನಿಗೆ ಮಧ್ಯರಾತ್ರಿಯವರೆಗೆ ಊರಿನ ಒಳಕ್ಕೆ ಬರಗೊಡಲಿಲ್ಲ. ಪೊಲೀಸ್ ಸಬ್‌ಇನ್‌ಸ್ಪೆಕ್ಟರ್‌ನ ೨೬ನೆಯ ತಾರೀಕಿನ ವರದಿಯ ಪ್ರಕಾರ ಈಸೂರಿನಲ್ಲಿ ನಾಯಕರು ಎನಿಸಿಕೊಂಡವರೆಂದರೆ ಅನ್ನದಾನಿ ಸಿದ್ಧಲಿಂಗಪ್ಪ, ಕೂಗತಿ ಮಹದೇವಪ್ಪ, ಸಾಹುಕಾರ್ ಬಸವಣ್ಣಪ್ಪ, ನಿರ್ವಾಣಿ ಹಾಲಪ್ಪ, ದೇವಾಂಗ ಶಂಕರಪ್ಪ ಮತ್ತು ಗಾಮದ ಗುರು ಬಸವಯ್ಯ. ೨೭ನೆಯ ತಾರೀಖು ಈಸೂರಿನ ಶ್ಯಾನುಭೋಗ ಮತ್ತು ಪಟೇಲ ಪುನಃ ಈಸೂರಿಗೆ ಬಂದರು. ಅವರನ್ನು ಊರಿನ ಜನರು ನೇಮಿಸಿದ್ದ ಅಮಲ್ದಾರರ ಬಳಿಗೆ ಕರೆದೊಯ್ಯಲಾಯಿತು. ಊರ ಬಾಗಿಲಿನಲ್ಲಿ ಪ್ರವೇಶ ನಿಷೇಧದ ಫಲಕವಿದ್ದರೂ, ಕಾನೂನನ್ನು ಉಲ್ಲಂಘಿಸಿ ಊರನ್ನು ಪ್ರವೇಶಿಸಿದ ತಪ್ಪಿಗಾಗಿ ಶ್ಯಾನುಭೋಗ ಮತ್ತು ಪಟೇಲ ಇಬ್ಬರನ್ನೂ ಇಡೀ ದಿನ ಒಂಟಿ ಕಾಲಿನ ಮೇಲೆ ಬಿಸಿಲಿನಲ್ಲಿ ನಿಲ್ಲಿಸಲಾಯಿತು. ೨೮ನೆಯ ತಾರೀಕು ಶಿಕಾರಿಪುರದ ತಹಸೀಲ್ದಾರ್, ಪೊಲೀಸ್ ಇನ್‌ಸ್ಪೆಕ್ಟರ್, ಕಂದಾಯ ಅಧಿಕಾರಿ ಮತ್ತಿನ್ನೂ ಕೆಲವು ಅಧಿಕಾರಿಗಳು ಚಿಕ್ಕಜೋಗಿಹಳ್ಳಿಯವರೆಗೆ ಸೈಕಲ್‌ಗಳಲ್ಲಿ ಹೋಗಿ ಮುಂದಕ್ಕೆ ಈಸೂರಿಗೆ ನಡೆದೇಹೋದರು. ಗ್ರಾಮಸ್ಥರಿಗೆ ಬುದ್ಧಿ ಹೇಳಲೆಂದೇ ಆ ಅಧಿಕಾರಿಗಳು ಬಂದಿದ್ದರು. ಊರಬಾಗಿಲಿನಲ್ಲಿ ಇದ್ದ ಪ್ರವೇಶ ನಿಷೇಧ ಕಾಯ್ದೆಯ ಫಲಕವನ್ನು ಪೊಲೀಸ್ ಇನ್‌ಸ್ಪೆಕ್ಟರ್ ತೆಗೆಯುತ್ತಿದ್ದಂತೆ ಜನತೆ ಉದ್ವೇಗಗೊಂಡರು. ಬಂದಿದ್ದ ಅಧಿಕಾರಿಗಳು ವೀರಭದ್ರ ದೇವಾಲಯ ತಲುಪುವ ಹೊತ್ತಿಗೆ ಅಧಿಕ



ಸಂಖ್ಯೆಯಲ್ಲಿ ಜನ ದೇವಾಲಯದ ಬಳಿ ಗುಂಪು ಗೂಡಿದ್ದರು. ಜನರು ಅಧಿಕಾರಿಗಳಿಗೆ ಟೋಪಿ ಹಾಕಲು ಮುಂದಾದರು. ಅವರ ವಿರುದ್ಧ ಘೋಷಣೆ ಕೂಗಿದರು. ಇದ್ದಕ್ಕಿದ್ದಂತೆಯೇ ಇಡೀ ವಾತಾವರಣ ಬಿಗುವಾಯಿತು. ಯಾರೋ ಒಬ್ಬ ವ್ಯಕ್ತಿ ವೀರಭದ್ರ ದೇವಾಲಯದ ಘಂಟೆ ಬಾರಿಸಿದ. ಇಡೀ ಊರಿನ ಜನ ದೇವಾಲಯದ ಬಳಿಗೆ ಬಂದರು. ತಹಸೀಲ್ದಾರ್ ಮತ್ತು ಸಬ್‌ಇನ್‌ಸ್ಪೆಕ್ಟರ್‌ರನ್ನು ಕೊಲ್ಲಲಾಯಿತು. ಚುರ್ಚು ಗುಂಡಿಯ ಕಾಡಪ್ಪ ಎಂಬ ಕಾಂಗ್ರೆಸ್ ಕಾರ್ಯಕರ್ತನ ಸೂಚನೆಯ ಮೇರೆಗೆ ಶವಗಳನ್ನು ತೆಗೆದು, ಬಂಧಿಸಿದ್ದ ಗಾಯಾಳುಗಳನ್ನು ಬಿಡುಗಡೆ ಮಾಡಲಾಯಿತು. ಕಾಡಪ್ಪನ ಸೂಚನೆಯ ಮೇರೆಗೆ ಈಸೂರಿನ ಜನ ಊರು ಬಿಟ್ಟರು. ಮೂರನೆಯ ದಿನ ಜಿಲ್ಲೆಯ ಡೆಪ್ಯೂಟಿ ಕಮೀಷನರ್ ಮಿಲಿಟರಿ ಪಡೆಯ ಜೊತೆಗೆ ಈಸೂರಿಗೆ ಬಂದು, ತಮಗಿಷ್ಟ ಬಂದ ರೀತಿ ಕ್ರಮ ತೆಗೆದುಕೊಳ್ಳಲು ಮಿಲಿಟರಿ ಪಡೆಗೆ ಆಜ್ಞೆ ಮಾಡಿದ. ಸೈನಿಕರು ಇಡೀ ಊರನ್ನು ಹಾಳು ಮಾಡಿದರು. ಸಾಹುಕಾರ್ ಬಸವಣ್ಣಪ್ಪನ ಮನೆಯ ಕಬ್ಬಿಣದ ಪೆಟ್ಟಿಗೆಯನ್ನು ಒಡೆದು ಆಭರಣಗಳನ್ನು ಲೂಟಿ ಮಾಡಿ ಮನೆಗೆ ಬೆಂಕಿ ಇಟ್ಟರು. ಊರಿನ ಜನರನ್ನು ಮನಸೋಇಚ್ಛೆ ಹೊಡೆಯಲಾಯಿತು. ಕೆಲವು ಹೆಂಗಸರ ಮೇಲೆ ಅತ್ಯಾಚಾರ ಮಾಡಲಾಯಿತು. ಆ ಕಾಲಕ್ಕೆ ಎರಡು ಲಕ್ಷ ರೂಪಾಯಿ ಬೆಲೆ ಬಾಳುವಷ್ಟು ಆಸ್ತಿಪಾಸ್ತಿಯನ್ನು ಲೂಟಿ ಮಾಡಿದ ಸೈನಿಕರು ಈಸೂರಿನ ೪೧ ಜನರನ್ನು ಬಂಧಿಸಿದರು. ವಿಚಾರಣೆಗೆಂದು ಸಾಗರದಲ್ಲಿ ವಿಶೇಷ ನ್ಯಾಯಾಲಯವನ್ನೂ ಅಣಿಗೊಳಿಸಲಾಯಿತು. ೧೯೪೨ರ ಡಿಸೆಂಬರ್ ೫ರಂದು ನ್ಯಾಯಾಲಯವು ೧೧ ಜನರಿಗೆ ಮರಣದಂಡನೆಯನ್ನೂ, ೧೫ ಜನರಿಗೆ ಜೀವಾವಧಿ ಶಿಕ್ಷೆಯನ್ನೂ, ಇನ್ನೂ ಕೆಲವರಿಗೆ

ಬೇರೆ ಬೇರೆ ಸ್ವರೂಪದ ಶಿಕ್ಷೆಗಳನ್ನೂ ವಿಧಿಸಿತು. ರಾಜ್ಯದ ಉಚ್ಚ ನ್ಯಾಯಾಲಯವು ಐದು ಜನರ ಮೇಲಿನ ಮರಣ ದಂಡನೆಯನ್ನು ಸ್ಥಿರ ಗೊಳಿಸಿತು. ಏಳು ಜನರಿಗೆ ಜೀವಾವಧಿ ಶಿಕ್ಷೆಯನ್ನೂ ಸ್ಥಿರ ಗೊಳಿಸಿತು. ಮರಣದಂಡನೆ ವಿಧಿಸಿದ್ದ ಐವರ ಪೈಕಿ ೮-೩-೧೯೪೩ರಂದು ಗುರಪ್ಪ ಮತ್ತು ಮಲ್ಲಪ್ಪ ಎಂಬುವವರನ್ನು, ೯-೩-೧೯೪೩ರಂದು ಸೂರ್ಯ ನಾರಾಯಣಾಚಾರಿ ಮತ್ತು ಹಾಲಪ್ಪ ಅವರನ್ನೂ, ೧೦-೩-೧೯೪೩ರಂದು ಜಿ. ಶಂಕರಪ್ಪನನ್ನೂ ಬೆಂಗಳೂರಿನ ಕೇಂದ್ರ ಕಾರಾಗೃಹದಲ್ಲಿ ಗಲ್ಲಿಗೆ ಹಾಕಲಾಯಿತು. ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಈಸೂರಿನ ದುರಂತವು ಮಾಸದ ನೆನಪಾಗಿ ಉಳಿಯಿತು.

ಕ್ವಿಟ್ ಇಂಡಿಯಾ ಚಳವಳಿ ಕರ್ನಾಟಕದ ಎಲ್ಲ ಭಾಗಗಳಲ್ಲೂ ಅತ್ಯಂತ ಪರಿಣಾಮಕಾರಿಯಾಯಿತು. ಇಂತಹ ಹಳ್ಳಿ ಚಳವಳಿಯಿಂದ ದೂರ ಉಳಿಯಿತು ಎಂದು ಹೇಳುವಂತಿರಲಿಲ್ಲ. ಅಹಿಂಸೆಯ ಅವಾಸ ಸ್ಥಾನ ಎನ್ನಬಹುದಾದ ಶ್ರವಣಬೆಳಗೊಳದಲ್ಲೂ ಅಕ್ಟೋಬರ್ ೧೦ರಂದು ನಡೆದ ಪಿಕೆಟಿಂಗ್ ಸಂದರ್ಭದಲ್ಲಿ ಒಬ್ಬ ಪೊಲೀಸ್ ಸಿಬ್ಬಂದಿ ಮೃತನಾದ. ಬೆಳಗಾವಿಯಿಂದ ಚಾಮರಾಜನಗರ ದವರೆಗೆ ಎಲ್ಲೆಡೆಯೂ ಪಿಕೆಟಿಂಗ್, ಸರ್ಕಾರದ ಆಡಳಿತ ಯಂತ್ರಕ್ಕೆ ತೊಂದರೆಯಾಗುವ ವಿನಾಶ-ಕಾರೀ ಅಡ್ಡಿ - ಆತಂಕಗಳು ಮುಂದುವರಿದುವು.

ಊಟಿ ಬಾಂಬ್ ಪ್ರಕರಣದಲ್ಲಿ ಶಿಕ್ಷೆಗೆ ಗುರಿಯಾಗಿದ್ದ ತಮಿಳುನಾಡಿನ ಕ್ರಾಂತಿಕಾರಿ ಟಿ. ಸಚ್ಚಿದಾನಂದ ಶಿವಮ್, ೧೯೩೭ರಲ್ಲಿ ಬಿಡುಗಡೆ ಆದ ನಂತರ ೧೯೪೦ರಲ್ಲಿ ಸೈನ್ಯಕ್ಕೆ ಸೇರಿದ್ದನಾದರೂ ಕಾಂಗ್ರೆಸ್‌ನ ಸಂಪರ್ಕವನ್ನು ಇಟ್ಟುಕೊಂಡಿದ್ದ. ಸೈನ್ಯದಲ್ಲಿ ಕಾಂಗ್ರೆಸ್‌ನ ಕರಪತ್ರಗಳನ್ನು ಹಂಚುತ್ತಿದ್ದ. ಸೈನ್ಯದಲ್ಲಿ ಒಳಗೊಳಗೇ ಕ್ವಿಟ್ ಇಂಡಿಯಾ ಚಳವಳಿಯ ಪರವಾದ ಹೋರಾಟಕ್ಕೆ ಸಿದ್ಧತೆಗಳು ನಡೆದಿದ್ದುವು. ಮದ್ದುಗುಂಡುಗಳ ಉಗ್ರಾಣವನ್ನು ನಾಶಮಾಡುವ ಸಂಚು ನಡೆಸುತ್ತಿದ್ದಾಗ ಸಿಕ್ಕಿಬಿದ್ದು ಶಿಕ್ಷೆಗೆ ಗುರಿಯಾದರು. ವಿದ್ಯಾರ್ಥಿಗಳು, ಕೃಷಿಕರು, ಕಾರ್ಮಿಕರು, ನ್ಯಾಯವಾದಿಗಳು, ರಾಜಕೀಯ ಮುಖಂಡರು ಮಾತ್ರವಲ್ಲದೆ ಸೈನಿಕರೂ ಸ್ವಾತಂತ್ರ್ಯ ಹೋರಾಟಕ್ಕೆ ಮುಂದೆಬಂದರು.

ಬ್ಯಾಡಗಿಯ ಸಮೀಪದ ಮೋಟೆಬೆನ್ನೂರಿನಲ್ಲಿ ಹುಟ್ಟಿದ ಮೈಲಾರ ಮಹದೇವಪ್ಪ, ಹರ್ಡೀಕರ್ ಮಂಜಪ್ಪ, ಗುದ್ಲೆಪ್ಪ ಹಳ್ಳಿಕೇರಿ ಮುಂತಾದ ನಾಯಕರ ಮಾತು ಮತ್ತು ಕೃತಿಗಳಿಂದ ಪ್ರೇರಿತನಾಗಿ ದೇಶಸೇವೆಯ ಪಣ ತೊಟ್ಟ ಕ್ರಾಂತಿಕಾರಿ, ಬಹಿರಂಗಕ್ಕೆ ಗಾಂಧೀ ತತ್ವಗಳ ಅನುಯಾಯಿ ಎನಿಸಿದರೂ, ಅಂತರಂಗದಲ್ಲಿ ಕ್ರಾಂತಿಕಾರಿಯಾಗಿದ್ದ ಮೈಲಾರ ಮಹದೇವಪ್ಪ ತನ್ನ ಗೆಳೆಯರ ಜೊತೆ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ವಹಿಸಿದ ಪಾತ್ರ ವಿಶೇಷ ಮನ್ನಣೆಗೆ ಪಾತ್ರವಾಗಿದೆ. ಗಾಂಧೀಜಿಯವರ ಸಾಬರಮತಿ ಆಶ್ರಮದ ಮಾದರಿಯಲ್ಲಿ ವರದಾ ನದಿಯ ದಂಡೆಯ ಮೇಲಿನ ಕೊರಡೂರಿನಲ್ಲಿ ಆಶ್ರಮವನ್ನು ಸ್ಥಾಪಿಸಿದ್ದ ಮಹದೇವಪ್ಪ ತನ್ನ ಹೆಂಡತಿ ಸಿದ್ದಮ್ಮಳನ್ನು ತರಬೇತಿಗಾಗಿ ಸಾಬರಮತಿ ಆಶ್ರಮಕ್ಕೆ ಕಳುಹಿಸಿದ್ದ. ಅಹಿಂಸಾತ್ಮಕ ಹೋರಾಟಗಳಲ್ಲಿ ಮೈಲಾರ ಮಹದೇವಪ್ಪನವರಿಗೆ ಹೆಚ್ಚು ಆಸಕ್ತಿ ಇದ್ದಂತಿರಲಿಲ್ಲ. ಬಲಶಾಲಿಗಳಾದ ೨೦ ಜನ ತರುಣರ ತಂಡವನ್ನು ಅಣಿಗೊಳಿಸಿದ್ದ ಮಹೇದವಪ್ಪ ಸರ್ಕಾರವನ್ನು ಪೇಚಿಗೆ ಸಿಕ್ಕಿಸುವ ನಿಟ್ಟಿನಲ್ಲಿ ಹೆಚ್ಚು ಕಾರ್ಯಪ್ರವೃತ್ತರಾಗಿದ್ದರು. ತಮ್ಮ ತಂಡದ ಕಾರ್ಯ ಚಟುವಟಿಕೆಗಳಿಗೆ ಬೇಕಾದ ಹಣವನ್ನು ಸರ್ಕಾರದ ಖಜಾನೆಗಳನ್ನು ಲೂಟಿ ಮಾಡಿ ಸಂಗ್ರಹಿಸುತ್ತಿದ್ದರು. ಸರ್ಕಾರವು ಹಣವನ್ನು ರೈಲಿನಲ್ಲಿ ಸಾಗಿಸುವಾಗ ರೈಲಿನ ಮೇಲೆ ಧಾಳಿ ಮಾಡಿ ಹಣವನ್ನು ಅಪಹರಿಸುವುದು, ಆಹಾರ ಧಾನ್ಯಗಳನ್ನು ಶ್ರೀಮಂತರಿಂದ ಲೂಟಿ ಮಾಡುವುದು ಇತ್ಯಾದಿ ಕಾರ್ಯ ಚಟುವಟಿಕೆಗಳಲ್ಲಿ ಮಹದೇವಪ್ಪ ಮತ್ತು ಅವರ ತಂಡ ನಿರತವಾಗಿತ್ತು. ಮಹದೇವಪ್ಪ ಅವರನ್ನು ಹಿಡಿದುಕೊಟ್ಟವರಿಗೆ ಅಥವಾ ಹಿಡಿಯಲು ಸಹಕರಿಸಿದವರಿಗೆ ಸರ್ಕಾರವು ರೂ. ೩೦೦ ಬಹುಮಾನ ನೀಡುವ ಆಶ್ವಾಸನೆ ಪ್ರಕಟಿಸಿತ್ತು.

ಹಾವೇರಿ ತಾಲ್ಲೂಕಿನ ಹೊಸರಿತ್ತಿಯಲ್ಲಿ ಒಂದು ಗಾಂಧಿ ಆಶ್ರಮವಿತ್ತು. ಆ ಊರಿನ ಎಲ್ಲ ಜನರೂ ದೇಶಭಕ್ತರೆಂದು ಹೆಸರಾಗಿದ್ದರು. ಅಲ್ಲಿಗೆ ಮಹದೇವಪ್ಪ ಬರುವ ನಿರೀಕ್ಷೆ ಸರ್ಕಾರದ ಕೆಲವು ಅಧಿಕಾರಿಗಳದಾಗಿತ್ತು. ಮಹದೇವಪ್ಪನನ್ನು ಅಲ್ಲಿಗೆ ಆಕರ್ಷಿಸುವ ನೆಪದಲ್ಲಿ ಸಂಗ್ರಹವಾಗಿದ್ದ ಕಂದಾಯ ಹಣವನ್ನು ಅಧಿಕಾರಿಗಳು ಹೊಸರಿತ್ತಿಯ ವೀರಭದ್ರ ದೇವರ ಗುಡಿಯಲ್ಲಿ ಇಡುತ್ತಿದ್ದರು. ಸುಮಾರು ಎಂಟು ತಿಂಗಳಿನಿಂದ ಸಮರ್ಥವಾಗಿ ೭೪ ಯಶಸ್ವಿ ಕಾರ್ಯಾಚರಣೆಗಳನ್ನು ಮಾಡಿದ್ದ ಮಹದೇವಪ್ಪ ಮತ್ತು ಅವರ ತಂಡ ೧೯೪೩ರ ಏಪ್ರಿಲ್ ಒಂದನೆಯ ತಾರೀಕು ೭೫ನೆಯ ಕಾರ್ಯಾಚರಣೆಗೆ ಹೊಂಚುಹಾಕುತ್ತಿದ್ದರು. ಹೊಸರಿತ್ತಿಯ ವೀರಭದ್ರ ದೇವಾಲಯದಲ್ಲಿ ಇಡಲಾಗಿದ್ದ ಸರ್ಕಾರಿ ಹಣವನ್ನು ದೋಚುವ ತಂತ್ರಗಾರಿಕೆ ಸಿದ್ಧವಾಗಿತ್ತು. ಮಾರ್ಚ್ ೩೧ರ ರಾತ್ರಿ ಮಹದೇವಪ್ಪ ಮತ್ತು ಅವರ ಸ್ನೇಹಿತರು ಹೊಸರಿತ್ತಿಗೆ ಸಮೀಪದ ಕಾಡಿನಲ್ಲಿದ್ದು, ಏಪ್ರಿಲ್ ೧ನೆಯ ತಾರೀಕು ಬೆಳಿಗ್ಗೆ ಹೊಸರಿತ್ತಿಗೆ ಬಂದಾಗ ಸರ್ಕಾರಿ ಹಣವನ್ನಿಟ್ಟಿದ್ದ ದೇವಾಲಯದಲ್ಲಿ ಕೇವಲ ಮೂರು ಜನ ಪೊಲೀಸರು ಕಾವಲಿಗಿದ್ದರು. ಉಳಿದವರು ಸ್ನಾನಕ್ಕಾಗಿ ನದಿಯ ಬಳಿ ಹೋಗಿದ್ದರು. ಮಹದೇವಪ್ಪ ತನ್ನ ಗೆಳೆಯರಾದ ತಿರುಕಪ್ಪ ಕೋಗನೂರು ಮತ್ತು ವೀರಯ್ಯ ಎಂಬ ಇಬ್ಬರನ್ನು ಮಾತ್ರ ಉಳಿಸಿಕೊಂಡು ಉಳಿದವರನ್ನು ನದಿಯ ಬಳಿಗೆ ಕಳುಹಿಸಿದ. ಮಹದೇವಪ್ಪ ಒಂಟಿಯಾಗಿ ಕಾವಲು ಪೊಲೀಸಿನವನ ಮೇಲೆ ಹಲ್ಲೆ ಮಾಡಿದ. ಅವನನ್ನು ತನ್ನ ಗೆಳೆಯರ ವಶಕ್ಕೆ ಒಪ್ಪಿಸಿ ಮಹದೇವಪ್ಪ, ಬಂದೂಕನ್ನು ಎತ್ತಿಕೊಳ್ಳಲು ಪ್ರಯತ್ನಿಸುತ್ತಿದ್ದ ಮತ್ತೊಬ್ಬ ಪೊಲೀಸನ ಮೇಲೆ ಬಿದ್ದ. ಮೂರನೆಯ ಪೊಲೀಸ್ ಹೆದರಿ ಗರ್ಭಗುಡಿಯನ್ನು ಪ್ರವೇಶಿಸಿದ. ಮಹದೇವಪ್ಪ ಮತ್ತು ಅವನ ಗೆಳೆಯರು ಹಣದ ಪೆಟ್ಟಿಗೆಯನ್ನು ಎತ್ತಿಕೊಂಡು ಹೋಗಲು ಪ್ರಯತ್ನಿಸಿದರು. ಆದರೆ, ಭಾರವಿದ್ದ ಪೆಟ್ಟಿಗೆಯನ್ನು ಸುಲಭವಾಗಿ ಎತ್ತಲಾಗಲಿಲ್ಲ. ಹಣದ ಪೆಟ್ಟಿಗೆಯನ್ನು ಎತ್ತುವ ಪ್ರಯತ್ನ ನಡೆದಿದ್ದಾಗ, ಗರ್ಭಗುಡಿಯ ಒಳಗೆ ಸೇರಿಕೊಂಡಿದ್ದ ಪೊಲೀಸ್ ಧೈರ್ಯಮಾಡಿ ಗುಂಡು ಹಾರಿಸಿದ. ಆ ಗುಂಡು ಮಹದೇವಪ್ಪನ ಕೈಗೆ ಬಿತ್ತು. ಪೊಲೀಸ್ ಹೊಡೆದ ಎರಡನೇ ಗುಂಡು ಮಹದೇವಪ್ಪನ ತಲೆಗೇ ಬಿದ್ದು, ಆತ ಸ್ಥಳದಲ್ಲೇ ತೀರಿಕೊಂಡ. ತೀರಿಕೊಳ್ಳುವ ಮೊದಲು, ಗುಂಡು ಹೊಡೆದ ಪೊಲೀಸನ ಮೇಲೆ ಹಲ್ಲೆ ನಡೆಸಲು ಮುಂದಾದ ಗೆಳೆಯರನ್ನು ತಡೆದು, ಅಹಿಂಸೆಯ ದಾರಿಯನ್ನು ಹಿಡಿಯಲು ಸೂಚನೆ ನೀಡಿದ. ಮಹದೇವಪ್ಪನ ಶವವನ್ನು ಸಾಗಿಸಲು ತಿರುಕಪ್ಪ ಮತ್ತು ವೀರಯ್ಯ ಪ್ರಯತ್ನ ನಡೆಸಿದರು. ಆದರೆ, ದೇವಸ್ಥಾನದ ಒಳಗಿನಿಂದ ಗುಂಡಿನ ಸದ್ದು ಕೇಳಿದ ಉಳಿದ ಪೊಲೀಸರು ಓಡಿಬಂದು, ಮಹದೇವಪ್ಪನ ಶವವನ್ನು ಸಾಗಿಸಲು ಶ್ರಮಿಸುತ್ತಿದ್ದ ತಿರುಕಪ್ಪ ಮತ್ತು ವೀರಯ್ಯನ ಮೇಲೆ ಗುಂಡು ಹಾರಿಸಿ ಕೊಂದರು. ಅಂತರಂಗದಲ್ಲಿ ಅಹಿಂಸಾವಾದಿಯಾದರೂ, ಬ್ರಿಟಿಷರ ಪಾಲಿಗೆ ಕ್ರಾಂತಿಕಾರಿಯಾಗಿದ್ದ ಮಹದೇವಪ್ಪ ೧-೪-೧೯೪೩ರಂದು ಹುತಾತ್ಮರಾದರು.

ಮಹಾತ್ಮಾ ಗಾಂಧಿ ಅವರ 'ಭಾರತೀಯರೇ, ಮಾಡಿರಿ ಇಲ್ಲವೆ ಮಡಿಯಿರಿ' ಮತ್ತು 'ಬ್ರಿಟಿಷರೇ, ಭಾರತ ಬಿಟ್ಟು ತೊಲಗಿ' ಎಂಬ ಎರಡೂ ಘೋಷಣೆಗಳು ಎಲ್ಲ ಭಾರತೀಯರಂತೆಯೇ ಕರ್ನಾಟಕದ ಜನತೆಯ ಮೇಲೂ ವಿಶೇಷ ಪರಿಣಾಮ ಬೀರಿದವು. ಕನ್ನಡಿಗರೆಲ್ಲರೂ ಗರ್ವಪಡುವಂತೆ ನಮ್ಮ ಹಿರಿಯರು ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ್ದಾರೆ. ಕೆಲವರು ಹುತಾತ್ಮರಾಗಿ ಅಮರತ್ವ ಪಡೆದಿದ್ದಾರೆ.

ಡಾ॥ ಎಚ್. ಎಸ್. ಗೋಪಾಲ ರಾವ್
'ಸ್ವಸ್ತಿಶ್ರೀ ಸ್ಕಂದ', ಅರಸಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨೧೨೩

## ದೊಡ್ಡದು

ಅಧ್ಯಾತ್ಮಪರರನೇಕರಿಗೆ ಅದ್ವೈತ, ಸಮಾಧಿ -
ಗಳೆ ಪರಮಧ್ಯೇಯ, ಈ ಲೋಕವೆಂಬುದು ಮಿಥ್ಯೆ,
ಬ್ರಹ್ಮವೊಂದೇ ಸತ್ಯ ! ಆದರೆ ನೀನಪವಾದ
ಶ್ರೀ ರಾಮಕೃಷ್ಣ ಗುರುದೇವ ! "ನನಗೆ ಸಮಾಧಿ
ಸಾತತ್ಯವನು ಕರುಣಿಸಿರಿ" ಎಂದು ಆ ವಿವೇ-
ಕಾನಂದರಂದು ಕೇಳಲು, ನೀವು ಕೊಟ್ಟದ್ದು
ಲೋಕೋತ್ತರೋತ್ತರ : "ಸಮಾಧಿಗಿಂತ, ನರೇಂದ್ರ,
ದೊಡ್ಡದಿದೆ !" ಇಂತಾರು ನುಡಿದವರು ನಿಮಗಿಂತ
ಮುನ್ನ! ಯಾವುದು ಸಮಾಧಿ ಸುಖವನು ಮಿಕ್ಕ
ಪರವಸ್ತು ? ಅಲ್ಲ, ಇಹ ವಸ್ತುವದು: ಸಮುದಾಯ;
ದೊಡ್ಡದು ಸಮಾಧಿಗಿಂತಲು ! ಮಂದಿ ಅಳುತಿರಲು,
ಕಂಬನಿಯನೊರೆಸುವುದೆ ಬ್ರಹ್ಮಕಿಂತಲು ಮಿಗಿಲು !

ಸಿ.ಪಿ.ಕೆ.
ಸಂಖ್ಯೆ ೨೨೬೫/೧೯, 'ಭಾರತಿ', ೪ನೇ ಮುಖ್ಯರಸ್ತೆ, ೬ನೇ ಅಡ್ಡರಸ್ತೆ
ವಿನಾಯಕನಗರ, ಮೈಸೂರು - ೫೭೦ ೦೧೨

ಂದು ಪದ್ಯ :

*ಪೂರ್ಣವಾಗದ ಕಾಯಕಗಳು ಮಾತ್ರ*
*ಅರ್ಥಪೂರ್ಣ.* — ಬರ್ಟೋಲ್ಟ್ ಬ್ರೆಕ್ಟ್

'ದಿ ಕಾರ್ಪೆಟ್ ವೀವರ್ಸ್ ಆಫ್ ಕುಯಾನ್-ಬುಲಾಕ್ ಆನರ್ ಲೆನಿನ್' ಎಂಬ ಬ್ರೆಕ್ಟ್‌ನ ಪದ್ಯ ಂದಿದೆ. ಎರಡನೇ ಮಹಾಯುದ್ಧದ ಕಾಲದಲ್ಲಿ ಿಯಿಂದ ಜರ್ಮನಿಯಿಂದ ದೇಶಭ್ರಷ್ಟನಾಗಿ ಅಲೆ ಾಡುತ್ತಿದ್ದ ಹೊತ್ತಿಗೆ ಬ್ರೆಕ್ಟ್ ಬರೆದ ಕವನಗಳಲ್ಲಿ ಇದೂ ಂದು. ಈ ಕಾಲಘಟ್ಟದ ಅವನ ಪದ್ಯಗಳನ್ನು 'ಬಿಕ್ಕಟ್ಟಿನ ಾಲದ ಕವಿತೆಗಳು' ಎಂದು ಗುರುತಿಸುವುದು ವಾಡಿಕೆ ಯಾಗಿದೆ. ಬಂಡವಾಳಶಾಹಿಯ ಕಡು ಧನದಾಹದ ಲವಾದ ಈ ಮಹಾಯುದ್ಧ ಹಿಂಸೆಯ ಹೊಸ ೂಪಗಳನ್ನು ಹುಟ್ಟುಹಾಕಿತು. ತಮಗೇ ಕೇಡು

"ಒಂದು ಪದ್ಯ ಹಾಗೂ ಒಂದು ರಾಜಕೀಯದ ಸಮುಖ ಆತಂಕಿತ ಚಿಂತನೆ" ಎಂಬ ಉಪಶೀರ್ಷಿಕೆಯನ್ನುಳ್ಳ ಈ ಲೇಖನದಲ್ಲಿ ಪ್ರಸಕ್ತ ಸಮಸ್ಯೆಯೊಂದನ್ನು ಕುರಿತಂತೆ ಗಂಭೀರ ಚರ್ಚೆಯನ್ನು ಆರಂಭಿಸಲಾಗಿದೆ. ಇದು ದೂಷಣೆಯ ಪ್ರಶ್ನೆಯಲ್ಲ; ಮುಂದಿನ ಹಾದಿಗೆ ಮಾರ್ಗದರ್ಶಿ ಸೂತ್ರಗಳ ಬಗೆಗಿನ ಕಾಳಜಿ. ಚರ್ಚೆಯನ್ನು ಮುಂದುವರಿಸುವ ಅಗತ್ಯವೂ ಇದೆ.

ಸರ್ರಿಯಲಿಸಮ್ ನಂತಹ ಕಲಾ ಪ್ರಕಾರಗಳೂ ಹುಟ್ಟಿದವು. ನಿತ್ಯ ಬದುಕಿಗೂ, ಸೌಂದರ್ಯ ಶಾಸ್ತ್ರಕ್ಕೂ ಕಡು ಕಷ್ಟಕರವಾದ ಇಂಥ ಹೊತ್ತಿನಲ್ಲೇ ಚಾರ್ಲಿ ಚಾಪ್ಲಿನ್‌ನ ಸಿನಿಮಾಗಳು ಹಾಗೂ ಬ್ರೆಕ್ಟ್‌ನ ನಾಟಕ ಮತ್ತು 'ಬಿಕ್ಕಟ್ಟಿನ ಕಾಲದ ಕವಿತೆಗಳು' ರಚನೆಯಾದವು ಎಂದು ಸೂಚಿಸುವುದಕ್ಕೆ ಪ್ರಯತ್ನಿಸುತ್ತಿದ್ದೇನೆ. ಬ್ರೆಕ್ಟ್ ಮತ್ತು ಚಾಪ್ಲಿನ್, ಜನ ಹೊಟ್ಟೆಪಾಡಿನ ಸಲುವಾಗಿ ಯಾವ ರಾಜಿಯನ್ನೂ

ಅಂತರಂಗದ ವಿಲಕ್ಷಣತೆಯನ್ನು ಕಾಣಬಲ್ಲ ಚಾಪ್ಲಿನ್ ಹಾಗೂ ಬ್ರೆಕ್ಟರ ಕೃತಿಗಳಲ್ಲಿ ಅದು ಲೋಕಸಾಧ್ಯವಾದ ಕಲಾಸಂಕಲ್ಪವಂತೂ ಹೌದು. ಈ ನಿಟ್ಟಿನಿಂದ, ಒಂದು ವಾಸ್ತವಿಕ ಘಟನೆಯ ಸರಳ ನಿರೂಪಣೆಯ ಬಂಧ ಹೊಂದಿರುವ 'ದಿ ಕಾರ್ಪೆಟ್ ವೀವರ್ಸ್ ಆಫ್ ಕುಯಾನ್-ಬುಲಾಕ್ ಆನರ್ ಲೆನಿನ್' ಪದ್ಯದ ಧ್ವನಿಯನ್ನು ಅರ್ಥೈಸಿಕೊಳ್ಳಬಹುದು.





# ಬ್ರೆಕ್ಟ್‌ನ 'ಕುಯಾನ್-ಬುಲಾಕ್' ಮತ್ತು ಬುದ್ಧದೇವನ 'ನಂದಿಗ್ರಾಮ'

ಡಾ॥ ಕೆ. ಫಣಿರಾಜ್

ುಗೆಯುವ ಅಧಿಕಾರಸ್ಥರ ಪರವಾಗಿ ಬಡವರು, ಂಸಾರಸ್ಥರು ಹಿಂಸೆಯ ಸಂಕಲ್ಪ ತೊಡುವಂತೆ ಮಾಡುವ ಫ್ಯಾಸಿಸಮ್' ಈ ಕಾಲಘಟ್ಟದಲ್ಲಿ ಆಕಾರ ಪಡೆದ ಒಂದು ಮಾದರಿಯಾದರೆ, ಎಂಥಾ ಹಿಂಸೆ ಯನ್ನೂ ಸಭ್ಯ ಾಗೂ ಸಹ್ಯ ಎನ್ನುವಂತೆ ನಿರೂಪಿಸುವ 'ಪರ್ಸನಲ್ ಲೇಶನ್ (ಪಿ. ಆರ್.)' ಮಾದರಿ ಮತ್ತೊಂದು. ಈ ಬಗೆಯ ಹಿಂಸ್ರಾಲಯದಲ್ಲಿ ವಿವೇಕ ಶೂನ್ಯರಂತೆ ನ ಹಿಂಸೆಯ ಸಲಕರಣೆಗಳಾಗುತ್ತಿದ್ದ ಹೊತ್ತು ಅದು; ವಿವೇಚನೆ ಇಲ್ಲದ ಬಗೆಗಳಲ್ಲಿ ಬದುಕುವುದೇ ಮನುಷ್ಯರ ವಿಧಿ ಎಂಬಂತಹ ಗಳಿಗೆಯಲ್ಲಿಯೇ ಹಲವು ಮೂನೆಯ ಅಸ್ತಿತ್ವವಾದಿ ತತ್ವಚಿಂತನೆಗಳೂ (ನೀಷೆ, ಾರ್ತ್ರ್, ಹೈಡೆಗರ್, ಕಮೂ), ಅಬ್ಸರ್ಡಿಟಿ,

ಮಾಡಿಕೊಳ್ಳ ಬಲ್ಲವರು, ನ್ಯಾಯ-ನೈತಿಕತೆಯ ಗೆರೆಗಳನ್ನು ಸಂದರ್ಭಾನುಸಾರ ಹಿಗ್ಗಿಸಬಲ್ಲವರೂ ಆಗಿರುತ್ತಾರೆ ಎಂದು ಅರಿತಿದ್ದರು. ತುತ್ತಿನ ಚೀಲ ತುಂಬುವುದಕ್ಕೆ ದಗಾಕೋರರಾಗಲೂ ಹಿಂಜರಿಯದ ಇವರ ಪಾತ್ರಗಳು, ಅನ್ಯಾಯದ ಪರಮಾವಧಿ ಎದುರಾದಾಗ, ಅದುಮಿಟ್ಟ ಸ್ಪ್ರಿಂಗಿನ ಹಾಗೆ ತಮ್ಮ ವಿವೇಕವನ್ನು ಪುಟಿದೆಬ್ಬಿಸಿ 'ಇದರಲ್ಲಿ ನಾನಿಲ್ಲ' ಎಂದು ಸೆಟೆದೆದ್ದು ನಿಲ್ಲುವ ಛಾತಿ ತೋರಿಸುತ್ತವೆ. ಈ ಬಗೆಯ ಛಾತಿ ಸಹಜ ವಾಸ್ತವವಲ್ಲ ಎಂದಿಟ್ಟುಕೊಂಡರೂ, ಮನುಷ್ಯರ

ಕುಯಾನ್-ಬುಲಾಕ್ ಮಾಜಿ ಸೋವಿಯತ್ ಯೂನಿಯನ್‌ನ ಭಾಗವಾಗಿದ್ದ ತುರ್ಕ್‌ಮೆನಿಸ್ತಾನದಲ್ಲಿರುವ ಒಂದು ಹಳ್ಳಿ. ಹಳ್ಳಿಯ ಜನರೆಲ್ಲ ಬಡತನದಲ್ಲಿರುವ ನೇಕಾರರು. ಆ ಊರಿನ ಮೂಲಕ ಹಾದುಹೋಗುವ ರೈಲುಹಳಿಯ ಒಂದು ಪಕ್ಕದಲ್ಲಿ ನೇಕಾರರ ವಾಸ, ಮತ್ತೊಂದು ಬದಿಯಲ್ಲಿ ಸದಾ ನೀರು ತುಂಬಿರುವ ದೊಡ್ಡದೊಂದು ಗುಂಡಿ. ಆ ಗುಂಡಿಯಿಂದ ಎದ್ದೇಳುವ ಸೊಳ್ಳೆಗಳ ದಾಳಿಯಿಂದಾಗಿ ಊರಿನ ನೇಕಾರರು ಸದಾ ರೋಗಿಷ್ಠರು. 'ಅಕ್ಟೋಬರ್ ಕ್ರಾಂತಿ' ನಡೆದು 'ಕೆಂಪು ಸೇನೆ' ಸಮಾಜವಾದಿ ಆಡಳಿತ ಸ್ಥಾಪಿಸಲು ಸನ್ನದ್ಧವಾಗಿದ್ದ ಕಾಲವದು. ಕುಯಾನ್-ಬುಲಾಕ್‌ನಲ್ಲೂ ಒಬ್ಬ 'ಕೆಂಪು ಸೇನೆಯ' ನಾಯಕ




'ಪುಸ್ತಕ ಪ್ರಕಾಶನ' ಕನ್ನಡ ಪ್ರಕಾಶನ ಕ್ಷೇತ್ರದಲ್ಲಿ ಒಂದು ಅಸದೃಶ ಸಾಹಸ. ವಸ್ತು, ವಿಷಯ, ಪುಸ್ತಕದ ಕಾಗದ, ರಕ್ಷಾಪುಟ ವಿನ್ಯಾಸ, ಶ್ರೇಷ್ಠ ಮುದ್ರಣ, ಓದುಗರಿಗೆ ವಿಚಾರ ತಲುಪಿಸುವ ಗದ್ಯಶೈಲಿ, ಪ್ರತಿಯೊಂದರಲ್ಲೂ ಜಗತ್ತಿನ ಅತ್ಯುತ್ತಮ ಪ್ರಕಾಶನಗಳಿಗೆ ಸರಿಗಟ್ಟುವ ಸಾಧನೆ ಮಾಡಬೇಕೆಂಬ ನಿರ್ಧಾರದಿಂದ ನಾಡಿನ ಅಗ್ರಮಾನ್ಯ ಲೇಖಕರ, ಕಲಾವಿದರ, ತಂತ್ರಜ್ಞರ, ಮುದ್ರಕರ ಅವಿರತ ಶ್ರಮ, ಸಾಧನೆ, ಸಹಕಾರಗಳೊಂದಿಗೆ ಹೊರಟಿರುವ ಸಾಹಸ. ನೆನಪಿರಲಿ 'ಪುಸ್ತಕ ಪ್ರಕಾಶನ' ಕೇವಲ ಪುಸ್ತಕಗಳನ್ನು ಬಿಕರಿ ಮಾಡುವ ವ್ಯಾಪಾರಿ ಸಂಸ್ಥೆಯಲ್ಲ. ಅದೊಂದು ಗುರಿ ಮತ್ತು ಆದರ್ಶಗಳನ್ನುಳ್ಳ ಉದ್ದೇಶಪೂರ್ವಕ ಸಾಹಸ.

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ**

1. ಕಿರಗೂರಿನ ಗಯ್ಯಾಳಿಗಳು 66-00
2. ಕರ್ವಾಲೋ 75-00
3. ಚಿದಂಬರ ರಹಸ್ಯ 132-00
4. ಸಹಜ ಕೃಷಿ 36-00
5. ಪರಿಸರದ ಕತೆ 66-00
6. ಮಿಸ್ಸಿಂಗ್ ಲಿಂಕ್ 69-00
7. ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ 87-00
8. ಜುಗಾರಿ ಕ್ರಾಸ್ 132-00
9. ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು 57-00
10. ಫ್ಲೈಯಿಂಗ್ ಸಾಸರ್ಸ್ ಭಾಗ ೧, ೨ ತಲಾ 57-00
11. ಕಾಡಿನ ಕತೆಗಳು ೧, ೨, ೩, ೪ ತಲಾ 51-00
12. ರುದ್ರಪ್ರಯಾಗದ ಭಯಾನಕ ನರಭಕ್ಷಕ 72-00
13. ಕನ್ನಡನಾಡಿನ ಹಕ್ಕಿಗಳು ೧ - ಮಿಂಚುಳ್ಳಿ 69-00
14. ಕನ್ನಡನಾಡಿನ ಹಕ್ಕಿಗಳು ೨ - ಹೆಜ್ಜೆ ಮೂಡದ ಹಾದಿ 69-00
15. ಹಕ್ಕಿ ಪುಕ್ಕ (ಕನ್ನಡನಾಡಿನ ಹಕ್ಕಿಗಳ ಪುಸ್ತಕ, ಪಕ್ಷಿವೀಕ್ಷಕರ ಕೈಪಿಡಿ) 300-00
16. ಅಣ್ಣನ ನೆನಪು 138-00
17. ಅಬಚೂರಿನ ಪೋಸ್ಟಾಫೀಸು (ಕಥಾ ಸಂಕಲನ) 69-00
18. ಹುಲಿಯೂರಿನ ಸರಹದ್ದು ಮತ್ತು ನಿಗೂಢ ಮನುಷ್ಯರು 72-00
19. ಮಾಯಾಲೋಕ - ೧ 198-00

**ಶ್ರೀ ತೇಜಸ್ವಿಯವರ ಮಿಲನಿಯಂ ಸರಣಿಯ ಪುಸ್ತಕಗಳು**

20. ಹುಡುಕಾಟ - ಮಿಲನಿಯಮ್ ೧ 51-00
21. ಜೀವನ ಸಂಗ್ರಾಮ - ಮಿಲನಿಯಮ್ ೨ 57-00
22. ಪೆಸಿಫಿಕ್ ದ್ವೀಪಗಳು - ಮಿಲನಿಯಮ್ ೩ 57-00
23. ಚಂದ್ರನ ಚೂರು - ಮಿಲನಿಯಮ್ ೪ 57-00
24. ನೆರೆಹೊರೆಯ ಗೆಳೆಯರು - ಮಿಲನಿಯಮ್ ೫ 45-00
25. ಮಹಾಯುದ್ಧ-೧,೨,೩ - ಮಿಲನಿಯಮ್ ೬,೭,೮ ತಲಾ 57-00
26. ದೇಶವಿದೇಶ-೧,೨,೩,೪-ಮಿಲನಿಯಮ್ ೯,೧೦,೧೧,೧೨ ತಲಾ 57-00
27. ವಿಸ್ಮಯ ವಿಶ್ವ -೧ - ಮಿಲನಿಯಮ್ ೧೩ 57-00
28. ಮಹಾ ಪಲಾಯನ - ಮಿಲನಿಯಮ್ ೧೪ 57-00
29. ವಿಸ್ಮಯ ವಿಶ್ವ - ೨ - ಮಿಲನಿಯಮ್ ೧೫ 57-00
30. ಅಡ್ವೆಂಚರ್ - ಮಿಲನಿಯಮ್ ೧೬ 57-00
31. ಹಕ್ಕಿಗಳ ಗ್ರೀಟಿಂಗ್ ಕಾರ್ಡ್ (೩೦ ಬಗೆಗಳು) ಒಂದು ಕಾರ್ಡ್ ಬೆಲೆ 13-00
32. The Stories of my Environment 144-00

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ ಹಾಗೂ ಶ್ರೀ ಪ್ರದೀಪ ಕೆಂಜಿಗೆ**

33. ವಿಸ್ಮಯ ೧, ೨, ೩ ತಲಾ 57-00
34. ಪ್ಯಾಪಿಲಾನ್ ೧, ೨ ತಲಾ 132-00

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ ಹಾಗೂ ಶ್ರೀ ವಿ. ವಿ. ಬೆಳವಾಡಿ**

35. ಕೀಟಗಳ ವಿಶ್ವಕೋಶ (೧) ನಡೆಯುವ ಕಡ್ಡಿ! ಹಾರುವ ಎಲೆ! 45-00

**ಶ್ರೀ ಪ್ರದೀಪ ಕೆಂಜಿಗೆ**

36. ಬರ್ಮುಡಾ ಟ್ರ್ಯಾಂಗಲ್ 45-00
37. ಅದ್ಭುತಯಾನ 60-00

**ಶ್ರೀ ಜಿ. ಪಿ. ಬಸವರಾಜು**

38. ಭೂಕಂಪದ ಅಂತರಂಗ 40-00

**ವಿದ್ವಾನ್ ಶ್ರೀ ಕೋಳಂಬೆ ಪುಟ್ಟಣ್ಣ ಗೌಡರು**

39. ಅಚ್ಚಗನ್ನಡ ನುಡಿಕೋಶ 360-00

**ಶ್ರೀ ಎಂ. ಶಿವಕುಮಾರ್**

40. ಸೈಕಲ್ ವಾಲ 40-00
41. ಯೋಗಿ ಮತ್ತು ಅಪ್ಸರೆ 66-00
42. ಕಂಪ್ಯೂಟರ್ ಕಲಿಯಿರಿ 120-00

**ಶ್ರೀ ನರೇಂದ್ರ ರೈ ದೇರ್ಲ**

43. ಸಾವಯವ ಕೃಷಿ 45-00

**ಲಾರಾ ಇಂಗಲ್ಸ್ ವೈಲ್ಡರ್, ಅನು : ಶ್ರೀ ಎಸ್. ಅನಂತನಾರಾಯಣ**

44. ದೊಡ್ಡ ಕಾಡಿನಲ್ಲಿ ಪುಟ್ಟ ಮನೆ ಭಾಗ -೧ 60-00
45. ಚಳಿಯ ಸುಳಿಯಲ್ಲಿ - ಭಾಗ ೬ 75-00
46. ಹುಲ್ಲುಗಾವಲಿನಲ್ಲಿ ಪುಟ್ಟ ಪಟ್ಟಣ - ಭಾಗ ೭ 75-00

**ಶ್ರೀ ಆಲನಹಳ್ಳಿ ಶ್ರೀಕೃಷ್ಣ**

47. ಗೋಡೆ (ನೀಳ್ಗತೆಗಳ ಸಂಕಲನ) 66-00

**ಶ್ರೀ ಕೃಪಾಕರ ಹಾಗೂ ಶ್ರೀ ಸೇನಾನಿ**

48. ಸೆರೆಯಲ್ಲಿ ಕಳೆದ ಹದಿನಾಲ್ಕು ದಿನಗಳು 93-00

**ಶ್ರೀ ದೇವನೂರ ಮಹಾದೇವ**

49. ಕುಸುಮ ಬಾಲೆ 60-00

**ಡಾ. ಎಸ್. ಎಂ. ವೃಷಭೇಂದ್ರ ಸ್ವಾಮಿ**

50. ತರಗತಿಗಳಲ್ಲಿ ಕುವೆಂಪು : ತೌಲನಿಕ ಕಾವ್ಯ ಮೀಮಾಂಸೆ 180-00

**ಶ್ರೀಮತಿ ತಾರಿಣಿ ಚಿದಾನಂದ**

51. ಮಗಳು ಕಂಡ ಕುವೆಂಪು 240-00

ವಿ. ಸೂ : ಕಚ್ಚಾ ಸಾಮಗ್ರಿಗಳ ಬೆಲೆ ವ್ಯತ್ಯಾಸವಾಗುವುದರಿಂದ ಹೊಸ ಆವೃತ್ತಿ ಬಿಡುಗಡೆಗೊಂಡಾಗ ಪುಸ್ತಕದ ಬೆಲೆಯಲ್ಲಿ ವ್ಯತ್ಯಾಸವಾಗುತ್ತದೆ.

ಮಾರಾಟಕ್ಕಾಗಿ

**ಪುಸ್ತಕ ಪ್ರಕಾಶನ**

91, 9ನೇ ಮೇನ್, ಸರಸ್ವತಿಪುರಂ, ಮೈಸೂರು - 570 009

ಫೋನ್ : 0821-2545774 bnsrama@sancharnet.in

ಪೋಸ್ಟ್ ಮುಖಾಂತರ ವ್ಯವಹರಿಸುವವರಿಗೆ

**ಪುಸ್ತಕ ಪ್ರಕಾಶನ**

ಫೋನ್ : 08263 - 228353
08263 - 240202

ಪೋಸ್ಟ್ ಬಾಕ್ಸ್ 58, ಮೂಡಿಗೆರೆ - 577 132 ptejaswi@sancharnet.in

ಡುಬಿಟ್ಟಿದ್ದಾನೆ. ಆಗ ಲೆನಿನ್ ಹುಟ್ಟುಹಬ್ಬದ ದಿನ ಹತ್ತಿರ ಬರುತ್ತಿದೆ. ತ್ತಿನಾದ್ಯಂತ ಹಲವು ಬಗೆಗಳಲ್ಲಿ ಜನ ಲೆನಿನ್‌ಗೆ ಗೌರವ ಸೂಚಿಸುತ್ತಾರೆ ಎಂದು ಮಕೊಂಡಿರುವ ಈ ಹಳ್ಳಿಯ ಕಾಯಿಲೆಗ್ರಸ್ತ ಬಡವರು ತಾವೂ ಲೆನಿನ್ ರವಾರ್ಥ ಏನಾದರೂ ಮಾಡಬೇಕು ಎಂದು ಇಚ್ಛಿಸುತ್ತಾರೆ; ಹಾಗೆ ಸಭೆ ಸೇರಿ, ರಿನ ರೈಲು ನಿಲ್ದಾಣದಲ್ಲಿ ಲೆನಿನ್ನನ ಪ್ರತಿಮೆಯೊಂದನ್ನು ಸ್ಥಾಪಿಸುವುದು ಎಂದು ರ್ಮಾನಿಸಿ ಕಾಸು ಒಟ್ಟುಮಾಡುತ್ತಾರೆ. ಈ ಸುದ್ದಿ ತಿಳಿದ 'ಕೆಂಪು ಸೇನೆ'ಯ ನಾಯಕ ನ್ನನ್ನು ಗೌರವಿಸಲು ಮೂರ್ತಿ ನೆಡುವುದಕ್ಕಿಂತಲೂ ಉತ್ತಮ ದಾರಿಗಳಿವೆ; ದಾಹರಣೆಗೆ, ನೀವು ಒಟ್ಟು ಮಾಡಿರುವ ಹಣದಿಂದ ಸೊಳ್ಳೆಗಳನ್ನು ನಿವಾರಿಸುವ ಟ್ರೋಲಿಯಮ್ ಖರೀದಿಸಿ ಊರಿನ ರೋಗಕ್ಕೆ ಕಾರಣವಾಗಿರುವ ಗುಂಡಿಯಲ್ಲಿ ಯಬಹುದು ಎಂದು ಸೂಚಿಸುತ್ತಾನೆ. ಕುಯಾನ್-ಬುಲಾಕಿನ ಜನರಿಗೆ ಅವನ ತಿನಲ್ಲಿ ವಿವೇಕವಿದೆ ಎನ್ನಿಸುತ್ತದೆ; ಹಾಗೇ ಮಾಡುತ್ತಾರೆ ಮತ್ತು ತಾವು ಲೆನಿನ್ ರವಾರ್ಥ ಮಾಡಿದ ಕೆಲಸದ ಸಕಲ ವಿವರಗಳನ್ನುಳ್ಳ ಫಲಕವೊಂದನ್ನು ಊರಿನ ು ನಿಲ್ದಾಣದಲ್ಲಿ ನೆಡುತ್ತಾರೆ. 'ಲೆನಿನ್‌ನನ್ನು ಗೌರವಿಸಿ ಅವರು ತಮ್ಮ ಒಳಿತನ್ನು ಸಾಧಿ ರು/ತಮ್ಮ ಒಳಿತನ್ನು ಕಂಡುಕೊಳ್ಳುವ ಮೂಲಕ ಅವರು ಲೆನಿನ್‌ನನ್ನು ರವಿಸಿದರು/ಹೀಗೆ ಅವರು ಲೆನಿನ್‌ನನ್ನು ಚೆನ್ನಾಗಿಯೇ ಅರ್ಥೈಸಿಕೊಂಡರು' ಬ ಕವನದ ಸಾಲುಗಳು 'ತಮಗೆ ಒಳಿತಾಗುವಂತೆ ನಡೆವವರಿಗೆ ದೇವರ ಕೃಪೆ ಯೇ ಇರುತ್ತದೆ' ಎಂಬ ಕ್ಯಾಲ್ವಿನಿಸ್ಟ್ ಪಂಥದ ಹಿತವಚನದ ತದ್ರೂಪಿಯಾಗಿವೆ.

ಬ್ರೆಕ್ಟ್‌ನ ಕುಯಾನ್-ಬುಲಾಕ್ ಎಂಬುದು ಜಗತ್ತಿನಿಂದ ಕಡಿದುಕೊಂಡು, ತಮ್ಮ ಂಪರಾನುಗತ ಕಸುಬು ಮಾಡಿಕೊಂಡಿರುವ ಜನರು ವಾಸಿಸುವ ಊರಲ್ಲ; ಅಲ್ಲಿ ು, ಪೆಟ್ರೋಲಿಯಮ್, 'ಅಕ್ಟೋಬರ್ ಕ್ರಾಂತಿ'ಯ ಅರಿವು, 'ಕೆಂಪು ಸೇನೆ'ಯ ಯಕ ಹಾಗೂ ಲೆನಿನ್ – ಇವೆಲ್ಲ ಮಿಕ್ಕ ಜಗತ್ತಿನ ಸಂಚಲನೆಯೊಳಗೆ ಈ ಊರು ಸಿದುಕೊಂಡಿರುವುದನ್ನು ಸೂಚಿಸುವ ಧ್ವನಿ ರೂಪಕಗಳು. ಇಲ್ಲಿ ಒಂದು ಗ್ಯವೂ ಇದೆ. ಲೆನಿನ್‌ನ ಸಿದ್ಧಾಂತದ ಪ್ರಕಾರ 'ಸಮಾಜವಾದಿ ಪ್ರಪಂಚ'ದ ದ್ರವು 'ಮುಂಚೂಣಿ ಪಕ್ಷ' (ವ್ಯಾನ್‌ಗಾರ್ಡ್ ಪಾರ್ಟಿ); ಜನರಿಗೆ ಒಳಿತು-ಡುಕುಗಳ ಬಗ್ಗೆ ಎಚ್ಚರಿಸುವುದು, ಸಮಾಜವಾದದ ಭಾಷೆಯನ್ನು ಕಲಿಸುವುದು, ವರನ್ನು 'ಸರಿಯಾದ ದಾರಿ'ಯಲ್ಲಿ ನಡೆಯುವಂತೆ ನೋಡಿಕೊಳ್ಳುವುದು, ಇವು ಮುಂಚೂಣಿ ಪಕ್ಷ'ದ ಆದ್ಯಕರ್ತವ್ಯ ; 'ಮುಂಚೂಣಿ ಪಕ್ಷ'ದ ಮುಂದಾಳತ್ವದಲ್ಲಿ ಸಂದೇಹ ನಂಬಿಕೆಯನ್ನಿಟ್ಟುಕೊಂಡ ಹಿಂಬಾಲಕರಾಗುವ ಜನಸಮುದಾಯ ನ್‌ನ 'ಮಾದರಿ ಸಮುದಾಯ'. ಆದರೆ ಬ್ರೆಕ್ಟ್‌ಗೆ ತಮ್ಮ ಅಂತಃಶಕ್ತಿಯನ್ನು ಡುಕೊಂಡು, ತಮ್ಮ ಸಾಮುದಾಯಿಕ ಒಳಿತನ್ನು ತಾವೇ ನಿರೂಪಿಸಿಕೊಳ್ಳುವ ಸಮುದಾಯ ಸಮಾಜವಾದದ ಕೇಂದ್ರ; ಲೆನಿನ್‌ನಂತಹ ನಾಯಕರು ತತ್ವ ಾರ ಪ್ರೇರಕರು; 'ಕೆಂಪು ಸೇನೆ'ಯ ನಾಯಕನದ್ದು ವಿವೇಕ ಸೂಚನೆಯ ತ್ರ. – ಇಬ್ಬರೂ ಮುಖ್ಯರು, ಆದರೆ ಅಂಚಿಗೆ ಇರಬೇಕಾದವರು. ಜನ ಯಾನ್-ಬುಲಾಕ್‌ನಂಥ ಹಳ್ಳಿಗಳ ದುರ್ಬಲರಂತೆ ಕಾಣುವ ಸಮುದಾಯ ಗಿದ್ದರೂ, ತಮ್ಮ ಒಳಿತು-ಕೆಡುಕುಗಳನ್ನು ವಿವೇಚಿಸಿಕೊಂಡು ಕಾರ್ಯಶೀಲರಾಗುವ ಲಕ ಸಮಾಜವಾದವನ್ನು ರೂಢಿಸುವ ಶಕ್ತಿಗಳು ಈ ಜನ ಎನ್ನುವುದು ಬ್ರೆಕ್ಟ್‌ನ ರ್ಶನ. ಕನ್ನಡದ ವಚನ, ದಾಸ ಕೀರ್ತನೆಗಳಂತೆ ಸರಳ ವಾಙ್ಮಯ ಹಾಗೂ ೋಕಚಾತುರ್ಯದ ಅರಿವುಳ್ಳ ಇಂತಹ ಅನೇಕ ಪದ್ಯಗಳನ್ನು ಆ ಕಾಲದಲ್ಲಿ ಬ್ರೆಕ್ಟ್ ದ. ಇಂದಿನ ಓದಿಗೆ ಅವು, ಲೆನಿನ್‌ವಾದ ಪ್ರಣೀತ ಸಮಾಜವಾದಕ್ಕಿಂತ ಭಿನ್ನವಾದ ವಿನಿಂದ ಬೆಳಗುತ್ತಿರುವಂತೆ ಕಾಣುತ್ತಿದೆ.

'ಅಯ್ಯೋ, ರಾಜಕೀಯ ಇಷ್ಟು ಸರಳವಾದುದಲ್ಲ; ಅಲ್ಲಿ ನಿಮ್ಮ ಭೋಳೆ ತ್ಯಮೀಮಾಂಸೆ ನಡೆಯುವುದಿಲ್ಲ' ಎನ್ನುವ 'ಸಮಾಜವಾದಿ'ಗಳಿಗೇನೂ ಮೆ ಇಲ್ಲ; ಬ್ರೆಕ್ಟ್ ಅಂಥ ಭೋಳೆ ಮನುಷ್ಯನೇನೂ ಅಲ್ಲ, ಅದಕ್ಕೇ ಅವನು ದದ್ದು:

*ಲೋಕೋಪಯುಕ್ತ ಕೆಲಸಕ್ಕೆ*
*ಬೇಕು ಲೋಕದ ಜನ.*
*ಕಲಾಕೃತಿಗಳಲ್ಲಿ*
*ಕಲೆ ವಾಸವಾಗಿರುತ್ತದೆ.*
*ಬುದ್ಧಿವಂತ ಕೆಲಸದಲ್ಲಿ*
*ಇರಬೇಕು ಲೋಕಜ್ಞಾನ.*

**ಒಂದು ರಾಜಕೀಯ :**

"ನಂದಿಗ್ರಾಮದ ಇತ್ತೀಚಿನ ವಿದ್ಯಮಾನಗಳು ಭಾರತದ ಎಡಪಂಥದ ಇತಿಹಾಸದಲ್ಲೇ ಅತ್ಯಂತ ಕರಾಳವಾದ ಅಧ್ಯಾಯವನ್ನು ಬರೆದಿವೆ. ಎಡ ಪಕ್ಷಗಳು – ಅದರಲ್ಲೂ ಮುಖ್ಯವಾಗಿ ಸಿ.ಪಿ.ಎಂ. – ಸಿದ್ಧಾಂತ ಹಾಗೂ ಧ್ಯೇಯೋದ್ದೇಶಗಳ ಮಾರ್ಗದರ್ಶಿತ್ವದಲ್ಲಿ ಕೆಲಸ ಮಾಡುತ್ತ ನಮ್ಮ ರಾಜಕೀಯ ರಂಗದಲ್ಲಿ ವಿರಳವಾಗಿರುವ ತತ್ವಬದ್ಧತೆಯನ್ನು ಎತ್ತಿಹಿಡಿಯುವ ಪಕ್ಷಗಳು ಎಂಬ ನಂಬಿಕೆಯನ್ನು ರೂಢಿಸಿದ್ದವು; ಎಡಪಕ್ಷಗಳು, ಸಾಂವಿಧಾನಿಕ ಮೌಲ್ಯಗಳನ್ನೂ ಸಾರ್ವಜನಿಕ ಮಾನವಂತಿಕೆಯನ್ನೂ ಎತ್ತಿಹಿಡಿಯುತ್ತವೆ, ಎಂತಹ ಕಠಿಣ ವಿವಾದಗಳನ್ನೂ ಸಂಧಾನ ವಿವೇಕದಿಂದ ಬಗೆಹರಿಸುತ್ತವೆ; ಬಡವರನ್ನು ಪ್ರತಿನಿಧಿಸುತ್ತವೆ ಮತ್ತು ನಮ್ಮ ಪ್ರಜಾಪ್ರಭುತ್ವಕ್ಕೆ ಕಳೆ ತಂದುಕೊಡುತ್ತವೆ ಎಂಬ ವಿಶ್ವಾಸವನ್ನು ಮೂಡಿಸಿದ್ದವು. ಈಗ ಅಂಥಾ ಹೆಗ್ಗಳಿಕೆ ಮಣ್ಣುಪಾಲಾಗಿದೆ. ... ಸರಕಾರದ ಮೇಲೆ ಸಿ.ಪಿ.ಎಂ. ಕಾನೂನು ಬಾಹಿರ ಒತ್ತಡ ಹೇರದೆ ಮತ್ತು ಸರಕಾರ ಸಹಮತಿಯಿಂದ ಕೈಜೋಡಿಸದೇ ನಂದಿಗ್ರಾಮದ ಹಿಂಸಾಕೃತ್ಯಗಳು ನಡೆಯುವುದು ಸಾಧ್ಯವಿರಲಿಲ್ಲ. ಇಂತಹ ಕೃತ್ಯದ ಪರಿಣಾಮಗಳು ಕಳವಳಕಾರಿಯಾಗಿವೆ. ಒಂದು ರಾಜಕೀಯ ಪಕ್ಷ ಹಾಗೂ ಅದರ ಅನುವರ್ತಿ ಸಂಘಟನೆಗಳು (ಉದಾಹರಣೆಗೆ, ಆರ್.ಎಸ್.ಎಸ್.) ಸರಕಾರದ ಕಾರ್ಯದಲ್ಲಿ ಮೂಗು ತೂರಿಸುವುದು ಪ್ರಜಾಪ್ರಭುತ್ವದ ತಳಪಾಯವನ್ನೇ ನಾಶ ಗೊಳಿಸುತ್ತದೆ ಎಂಬ ಪ್ರಜಾತಾಂತ್ರಿಕ – ಉದಾರವಾದಿ – ಸೆಕ್ಯುಲರ್ ತತ್ವದ ಆಧಾರದಲ್ಲಿ, ಎಡಪಕ್ಷಗಳೂ ಸೇರಿದ ಹಾಗೆ, ನಾವು ಬಲಪಂಥದ ಮತೀಯ ಶಕ್ತಿಗಳನ್ನು ವಿರೋಧಿಸುತ್ತಿದ್ದೇವಲ್ಲ; ಪ್ರಸ್ತುತ ಕೃತ್ಯಗಳನ್ನು (ನಂದಿಗ್ರಾಮದ ಹಿಂಸೆ) ಸಮರ್ಥಿಸಿಕೊಳ್ಳುವುದು ಅಂತಹ ತತ್ವಗಳನ್ನು ಬಲಹೀನಗೊಳಿಸುತ್ತದೆಯಷ್ಟೆ."

– 'ಬ್ಲಡ್ ಆನ್ ದೇರ್ ಹ್ಯಾಂಡ್ಸ್', ಪ್ರಫುಲ್ಲ ಬಿದ್ವಾಯ್,
ಟೈಮ್ಸ್ ಆಫ್ ಇಂಡಿಯ, ೨೧-೧೧-೨೦೦೭

ಭಾರತದ ಕೇಂದ್ರ ಸರಕಾರ ೨೦೦೦ನೇ ಇಸವಿಯಲ್ಲಿ 'ವಿಶೇಷ ಅರ್ಥ ವಲಯ' (Special Economic Zones – SEZ) ನೀತಿಯನ್ನು ಜಾರಿಗೆ ತಂದಿತು. ದೇಶ-ವಿದೇಶದ ಬಂಡವಾಳಶಾಹಿಗಳಿಗೆ 'ಹೆಚ್ಚಿನ ಕಿರಿಕಿರಿ' (ಇದು ಕೇಂದ್ರ ವಾಣಿಜ್ಯ ಮತ್ತು ಕೈಗಾರಿಕಾ ಮಂತ್ರಾಲಯದ ಪದಪ್ರಯೋಗ) ಇಲ್ಲದೆ ತಮ್ಮ ಉತ್ಪಾದನಾ ಘಟಕಗಳನ್ನು ಸ್ಥಾಪಿಸಲು ಅನುಕೂಲ ಮಾಡಿಕೊಡುವ ಯೋಜನೆ ಇದು. 'ಹೆಚ್ಚಿನ ಕಿರಿಕಿರಿ' ಎಂದರೇನು ? ಒಂದು ಕೈಗಾರಿಕೆಯ ಉತ್ಪಾದನಾ ಘಟಕ ಸ್ಥಾಪಿಸಲು ಪ್ರಶಸ್ತವಾದ ಒಂದು ನಿವೇಶನ ಬೇಕು; ಆ ನಿವೇಶನವನ್ನು ಆಯಾ ಖಾಸಗಿ ಬಂಡವಾಳದಾರರೇ ಭೂಮಿಯ ಒಡೆತನ ಉಳ್ಳವರ ಜೊತೆ ವ್ಯವಹಾರ ಮಾಡಿ ಪಡೆಯಬೇಕು. ಘಟಕ ಸ್ಥಾಪನೆಗಾಗಿ ಸಂಬಂಧಪಟ್ಟ ಪ್ರದೇಶದ ಸರಕಾರಿ ಇಲಾಖೆ ಗಳಲ್ಲಿ ಅನುಮತಿ ಪಡೆಯಲು ವ್ಯವಹರಿಸಬೇಕು. ಉತ್ಪಾದನೆಗೆ ಬೇಕಾದ ಮೂಲ ಸೌಲಭ್ಯಗಳನ್ನು ಖಾಸಗಿ ಬಂಡವಾಳದಾರರೇ ಹೊಂದಿಸಿಕೊಳ್ಳಬೇಕು, ಉತ್ಪಾದನೆ ಶುರು ಮಾಡಿದ ನಂತರ, ಸರಕಿನ ಉತ್ಪಾದನೆ ಹಾಗೂ ಉತ್ಪಾದಿತ ಸರಕಿನ ಮೌಲ್ಯಕ್ಕೆ ಅನುಗುಣವಾಗಿ ವಿವಿಧ ತೆರಿಗೆಗಳನ್ನು ಪಾವತಿಸಬೇಕು. ಒಂದು ಸಂಸಾರ ನಡೆಯಲು ಸಹಜವಾದ ನಿತ್ಯ ಶ್ರಮ ಹೇಗೆ ಅಗತ್ಯವೋ ಹಾಗೇ ಒಂದು ಸರಕು ಉತ್ಪಾದನೆಗೂ ತನ್ನದೇ ಆದ ನಿತ್ಯ ಶ್ರಮವಿರುತ್ತದೆ. ಈ ಅಗತ್ಯ ಶ್ರಮವೇ 'ಹೆಚ್ಚಿನ ಕಿರಿಕಿರಿ'ಯಾಗಿ ಕಾಣಲು ಶುರುವಾಯಿತು. ನಾವು ಬಂಡವಾಳ ಹೂಡಿ, ಉತ್ಪಾದನಾ ಘಟಕ ಸ್ಥಾಪಿಸಿ, ಸರಕನ್ನು ಉತ್ಪಾದಿಸಿ, ಮಾರಾಟ – ನಿರ್ಯಾತ ಮಾಡುತ್ತೇವೆ, ಹಾಗೂ ಅದರಿಂದ ಬರುವ ಸಂಪೂರ್ಣ ಲಾಭವನ್ನು ನಮ್ಮ ಖಜಾನೆಗೆ ಇಳಿಸುತ್ತೇವೆ. ಆದರೆ ಉಳಿದ 'ಹೆಚ್ಚಿನ ಕಿರಿಕಿರಿಗಳನ್ನು' ಹೆಚ್ಚುಕಮ್ಮಿ ಸರಕಾರವೇ ನಿಭಾಯಿಸಿಕೊಂಡು ಹೋಗುವ ವ್ಯವಸ್ಥೆ ಕಲ್ಪಿಸಿಕೊಡಬೇಕು ಎನ್ನುವುದು ಬಂಡವಾಳಗಾರರ ಲಾಗಾಯ್ತಿನ ಬೇಡಿಕೆ. ಅಂಥ ಬೇಡಿಕೆಯನ್ನು ಈಡೇರಿಸುವ ಸಲುವಾಗಿ ಜಾರಿಯಾದದ್ದು ಈ SEZ ನೀತಿ. ಈ ನೀತಿಯು ೨೦೦೪ರಲ್ಲಿ ಸುಗ್ರೀವಾಜ್ಞೆಯಾಗಿಯೂ, ೨೦೦೬ರಲ್ಲಿ ಸಂಸತ್ತಿನ ಸಹಮತ ದೊರಕಿಸಿಕೊಂಡ ನಿಯಮವಾಗಿಯೂ ಬೆಳೆಯಿತು. ಈಗ ದೇಶದಲ್ಲಿ ನಾನ್ನೂರಕ್ಕೂ ಮಿಕ್ಕಿದ SEZ ಗಳನ್ನು ಸ್ಥಾಪಿಸುವ ಯೋಜನೆ ಇದೆ. ಈ ಕತೆಯೆಲ್ಲ ಸರಿಯಪ್ಪ, ಸಮಸ್ಯೆ ಏನು ? ಈಗ ಸ್ಥಾಪಿಸಲು ಉದ್ದೇಶಿಸಲಾಗಿರುವ SEZ ಗಳಿಗೆ ಭಾರತದಲ್ಲಿ ಸಾಕಷ್ಟು ಖಾಲಿ ಪ್ರದೇಶಗಳಿವೆ. 'ಉದಾಹರಣೆಗೆ, ಥಾರ್ ಮರುಭೂಮಿ. ಇದು ಹಾಗಾಗುವುದಿಲ್ಲ. ಇಡೀ ಯೋಜನೆಯ ಉದ್ದೇಶವೇ ಬಂಡವಾಳದಾರರಿಗೆ ಲಾಭದಾಯಕವಾಗುವಂತಹದಾದ್ದರಿಂದ, ಅವರಿಗೆ ಅನುಕೂಲಕರವಾದ ಜಾಗಗಳನ್ನು

ಂದ್ರ-ರಾಜ್ಯ ಸರಕಾರಗಳು ಒದಗಿಸಿಕೊಡಬೇಕು. ಗ ಅನುಮತಿ ನೀಡಿರುವ ಯೋಜನೆಗಳು ತಮಗೆ ಸ್ತವೆಂದು ಆಯ್ಕೆಮಾಡಿಕೊಂಡಿರುವ ಶೇಕಡ ರಷ್ಟು ಭೂಮಿ ಕೃಷಿಯೋಗ್ಯ ಭೂಮಿಯಾಗಿದೆ; ಲ್ಲಿ ಕೃಷಿಯನ್ನು ನಂಬಿಕೊಂಡು ಬದುಕುತ್ತಿರುವ ಕ್ಷಾಂತರ ಕುಟುಂಬಗಳಿವೆ. ಈ ಕುಟುಂಬಗಳನ್ನು ರ್ಸಿತರನ್ನಾಗಿಸದೆ, ಕೃಷಿಯೋಗ್ಯ ಭೂಮಿಯನ್ನು ರಿಂದ – ಯಾವ ವಿಧದಲ್ಲಾದರೂ ಸರಿ – ತೆಯದೆ, ಈ ಯೋಜನೆಗಳು ಜಾರಿಯಾಗುವುದಿಲ್ಲ. ಶ್ಚಿಮ ಬಂಗಾಳದ ದಕ್ಷಿಣ ಮಿಡ್ನಾಪುರ್ ಜಿಲ್ಲೆಯ ದಿಗ್ರಾಮ ಪ್ರದೇಶ ಇಂತಹ ಕೃಷಿಯಾಧಾರಿತ ಮುದಾಯವನ್ನು SEZ ಗೋಸ್ಕರ ಎತ್ತಂಗಡಿ ಮಾಡ ಕಾಗಿರುವ ಪ್ರದೇಶ. ಅಲ್ಲಿ ರಾಸಾಯನಿಕ ಉತ್ಪನ್ನಗಳ ಟಕವನ್ನು ಸ್ಥಾಪಿಸಲು ಇಂಡೋನೇಷ್ಯಾದ ಸಲೀಮ್ ಪನ್ನು ಸ್ವಂತ ಉತ್ಸಾಹದಿಂದ ಆಹ್ವಾನಿಸಿರುವುದು ಶ್ಚಿಮ ಬಂಗಾಳದಲ್ಲಿ ಅಧಿಕಾರದಲ್ಲಿರುವ ಸಿ.ಪಿ.ಎಂ. ತೃತ್ವದ ಎಡರಂಗದ ಸರಕಾರ. ೨೦೦೭ರ ಜನವರಿ ಲ್ಲಿ ನಂದಿಗ್ರಾಮದ ಜನರಿಗೆ ತಮ್ಮ ಊರು ಲ್ಲಿ ಇಂಥಾದ್ದೊಂದು ಆಪತ್ತು ಬರಲಿದೆ ಎಂದು ತ್ತಾದದ್ದೇ, 'ಭೂಮಿ ಉಚ್ಛಾಡ್ ಪ್ರತಿರೋಧಿ ುತಿ' ಎಂಬ ಸಂಘಟನೆಯಡಿ ಪ್ರತಿಭಟನೆ ಶುರು ಯಿತು. ಆಡಳಿತಾರೂಢ ಸಿ.ಪಿ.ಎಂ. ಕಾರ್ಯ ರ್ತರು ಹಾಗೂ ಭೂ.ಉ.ಪ್ರ.ಸ.ಯ ಬೆಂಬಲಿಗರ ಧ್ಯೆ ಸಂಘರ್ಷಗಳೂ ನಡೆದವು. ಪ್ರತಿಭಟನಾ ರರು ರಸ್ತೆಗಳನ್ನು ಅಗೆದು, ಸೇತುವೆಗಳನ್ನು ಕಡಿದು ಕಾರದ ಅಧಿಕಾರಿಗಳು ಗ್ರಾಮ ಪ್ರವೇಶಿಸದಂತೆ ತಯೊಡ್ಡಿದರು. ಆಗಲೇ, ಸಿ.ಪಿ.ಎಂ.ನ ರೈತ ಘಟನೆಯ ನಾಯಕ ಬಿನೋಯ್ ಕೊನಾರ್, ಲ ಕೂಡಿ ಬರಲಿ. ನಾಲ್ಕೂ ಕಡೆಗಳಿಂದ ನಾವು ಮವನ್ನು ಮುತ್ತಿ ತಮಾಷೆ ತೋರಿಸೋಣ' ದಿದ್ದರು. ಮಾರ್ಚ್ ತಿಂಗಳ ೧೪ರಂದು ನಂದಿಗ್ರಾಮ ಲ್ಲಿ ನಡೆದ ಪೊಲೀಸರ ಗೋಲಿಬಾರಿಗೆ ೧೪ ಜನ ಣ ಕಳೆದುಕೊಂಡರು. ಬಂಗಾಳ ಸರಕಾರದ ಪ್ರಕಾರ, ಲೀಸ್ ಬಲದೊಂದಿಗೆ ನಂದಿಗ್ರಾಮ ಪ್ರವೇಶಿಸಲು ೀದಾಗ, ಸರಕಾರವೇ ನಿರೀಕ್ಷಿಸದ ಪ್ರತಿರೋಧ ುರಾಯಿತು; ಸಶಸ್ತ್ರ ಪೊಲೀಸರೂ ಆ ಪ್ರದೇಶವನ್ನು ವೇಶಿಸಲು ಆಗದ ಹಾಗೆ ರಸ್ತೆಗಳನ್ನು ಅಗೆದು, ತುವೆಗಳನ್ನು ನಾಶಪಡಿಸಲಾಗಿತ್ತು; ಜನ ಪೊಲೀಸರಿಗೆ ುರಾಗಿ ದಾಳಿಯನ್ನೂ ಮಾಡಿದರು; ಈ ಸಂದರ್ಭ ಲ್ಲಿ ಗೋಲಿಬಾರ್ ನಡೆಯಿತು. ನಂದಿಗ್ರಾಮ ಸಶಸ್ತ್ರ ಂಪಿನ ವಶವಾಗಿದ್ದು, ತನ್ನ ಸಾವಿರಾರು ಜನ ಬಲಿಗರ ಮೇಲೆ ಹಲ್ಲೆ ಮಾಡಿ, ನಂದಿಗ್ರಾಮ ವೇಶದಿಂದ ಹೊರಗಟ್ಟಲಾಗಿದೆ ಎನ್ನುವುದು ಿ.ಎಂ. ಪಕ್ಷದ ವಿವರಣೆಯಾಗಿತ್ತು. ಅದು ಏನೇ ದ್ದರೂ, ಪಶ್ಚಿಮ ಬಂಗಾಳದ ಮುಖ್ಯಮಂತ್ರಿ ದ್ಧದೇವ್ ಭಟ್ಟಾಚಾರ್ಯ, ಗೋಲಿಬಾರಿನ ಹೊಣೆ ುತ್ತು ಕ್ಷಮೆ ಯಾಚಿಸಿದರು ಮಾತ್ರವಲ್ಲ, ನಂದಿ ಮ ಯೋಜನೆಯನ್ನು ರದ್ದುಪಡಿಸಿರುವುದಾಗಿಯೂ ೀಷಿಸಿದರು. ಮಾರ್ಚ್ ೧೪ರ ಹಿಂಸಾಚಾರದ ಶೋಧನೆ ನಡೆಸಿದ ನಿವೃತ್ತ ನ್ಯಾಯಾಧೀಶ




ಭಾರ್ಗವ ನೇತೃತ್ವದ 'ಸಿಟಿಜನ್ಸ್ ಟ್ರಿಬ್ಯುನಲ್ ವರದಿ'ಯ ಪ್ರಕಾರ, ಅಂದು ಪೊಲೀಸರ ಜೊತೆ, ಪೊಲೀಸರ ವೇಷದಲ್ಲಿ ಸಶಸ್ತ್ರಧಾರಿಗಳಾದ ಸಿ.ಪಿ.ಎಂ. ಕಾರ್ಯಕರ್ತರೂ ಇದ್ದರು; ಅವರು ಗ್ರಾಮಗಳಿಗೆ ನುಗ್ಗಿ ವ್ಯವಸ್ಥಿತವಾಗಿ ಹಿಂಸಾಚಾರ ನಡೆಸಿದರು; ಹೆಂಗಸರ ಮೇಲೆ ಅತ್ಯಾಚಾರವೂ ನಡೆಯಿತು. ಅಷ್ಟು ಹೊತ್ತಿಗಾಗಲೆ, ಸಿ.ಪಿ.ಎಂ. ಪಕ್ಷದ ಕಾರ್ಯಕರ್ತರು ಮತ್ತು ಬೆಂಬಲಿಗರನ್ನು ನಂದಿಗ್ರಾಮ ಪ್ರದೇಶದಿಂದ ಹೊರದೂಡಲಾಗಿತ್ತು ಎನ್ನುವ ಸಂಗತಿಯನ್ನೂ ವರದಿ ದಾಖಲಿಸಿದೆ. ವರದಿಯು, ಹಿಂಸೆಯ ಖಚಿತ ವಿವರಗಳನ್ನು ನೀಡಿ, ಸರಕಾರ ಸಂತ್ರಸ್ತರಿಗೆ ತಕ್ಕ ನ್ಯಾಯ ಒದಗಿಸಬೇಕು, ತಪ್ಪಿತಸ್ಥರ ವಿರುದ್ಧ ಪಕ್ಷಪಾತವಿಲ್ಲದೆ ಕಾನೂನು ಕ್ರಮ ಜರುಗಿಸಬೇಕು, ಎರಡೂ ಕಡೆಯ ಗುಂಪುಗಳನ್ನು ನಿಶ್ಯಸ್ತ್ರಗೊಳಿಸಿ ಸಂಧಾನದ ರಾಜಕೀಯ ಕ್ರಿಯೆಯನ್ನು ಪ್ರಾರಂಭಿಸಬೇಕು ಎಂಬ ಸಲಹೆಗಳನ್ನು ನೀಡಿತ್ತು. ಪ್ರಸ್ತುತ ವರದಿಯನ್ನು ಸತ್ಯಶೋಧನಾ ಸಮಿತಿಯು ಆಗಸ್ಟ್ ತಿಂಗಳಲ್ಲಿ ಪಶ್ಚಿಮ ಬಂಗಾಳದ ರಾಜ್ಯಪಾಲರಿಗೆ ಸಲ್ಲಿಸಿತು. ಬಂಡಾಯ ಭುಗಿಲೆದ್ದ ಪ್ರದೇಶದಲ್ಲಿ ಶಾಂತಿ ಸ್ಥಾಪಿಸುವ ಸಲುವಾಗಿ ಎಡ ರಂಗದ ಸರಕಾರ ಸರ್ವಪಕ್ಷಗಳ ಜೊತೆ ಮಾತುಕತೆ ಯನ್ನು ಪ್ರಾರಂಭಿಸಿತ್ತು. ಭೂ.ಉ.ಪ್ರ.ಸ.ಯ ನೇತೃತ್ವ ವಹಿಸಿದ್ದ ತೃಣಮೂಲ ಕಾಂಗ್ರೆಸ್ ನಾಯಕಿ ಮಮತಾ ಬ್ಯಾನರ್ಜಿ ಒಂದಲ್ಲ ಒಂದು ಕಾರಣ ನೀಡಿ ಸಂಧಾನ ಪ್ರಯತ್ನದಿಂದ ಹೊರಗುಳಿದರು. ನವೆಂಬರ್ ತಿಂಗಳ ವರೆಗೂ ನಂದಿಗ್ರಾಮ ಸರಕಾರದ ಆಡಳಿತ ಯಂತ್ರದಿಂದ ಮುಕ್ತವಾದಂಥ ಪ್ರದೇಶವಾಗಿಬಿಟ್ಟಿತು! ನವೆಂಬರ್ ೧ರಂದು ಕೊಲ್ಕತ್ತದಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಸಿ.ಪಿ.ಎಂ. ನಾಯಕಿ ಬೃಂದಾ ಕಾರಟ್, ಕಾರ್ಯಕರ್ತರಿಗೆ ನಂದಿಗ್ರಾಮದಲ್ಲಿ 'ದಮ್ ದಮ್ ದವೈ' (ಸಾರ್ವಜನಿಕವಾಗಿ ಚಚ್ಚುವುದು) ಶುರುಮಾಡಿ ಪ್ರದೇಶವನ್ನು ಮುಕ್ತಗೊಳಿಸಿ ಎಂದು ಕರೆಕೊಟ್ಟರು. ಇಷ್ಟು ಹೊತ್ತಿಗಾಗಲೇ ಪಶ್ಚಿಮ ಬಂಗಾಳ ಸರಕಾರ ಕೇಂದ್ರ ಸಶಸ್ತ್ರ ಮೀಸಲು ಪಡೆಯನ್ನು ನಂದಿಗ್ರಾಮಕ್ಕೆ ಕಳುಹಿಸಬೇಕೆಂದು ಕೇಂದ್ರ ಸರಕಾರವನ್ನು ಕೇಳಿ ಕೊಂಡಿತ್ತು. ಆದರೆ CRPF ತುಕಡಿ ನಂದಿಗ್ರಾಮವನ್ನು ಪ್ರವೇಶಿಸುವ ಮುಂಚೆಯೇ, ನವೆಂಬರ್ ೭ರಂದು ಸಿ.ಪಿ.ಎಂ. ಕಾರ್ಯಕರ್ತರು ಶಸ್ತ್ರಸಜ್ಜಿತರಾಗಿ ನಂದಿ ಗ್ರಾಮ ಪ್ರದೇಶಕ್ಕೆ ಮುತ್ತಿಗೆ ಹಾಕಿದರು. ನಾಲ್ಕು ದಿನಗಳ ನಂತರ 'ನಂದಿಗ್ರಾಮ ಮುಕ್ತವಾಗಿದೆ' ಎಂದು ಸಿ.ಪಿ.ಎಂ. ಘೋಷಿಸಿತು. ಈ ದಾಳಿ ನಡೆಯುವಾಗ ಪೊಲೀಸರು ಮಧ್ಯಪ್ರವೇಶಿಸಿ ಸಿ.ಪಿ.ಎಂ. ಕಾರ್ಯಕರ್ತರನ್ನು ತಡೆಯುವ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಇದು ಸರಕಾರ ಸಿ.ಪಿ.ಎಂ.ನ ನೇರ ಪ್ರವೇಶಕ್ಕೆ ಮೌನ ಸಮ್ಮತಿ ಹಾಗೂ ಸಹಕಾರ ನೀಡಿದ್ದನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಮಾರ್ಚ್ ತಿಂಗಳಿನಲ್ಲಿ ನಡೆದ ಹಿಂಸೆಗಿಂತ ದುಪ್ಪಟ್ಟು ಹಿಂಸೆ ನವೆಂಬರ್‌ನಲ್ಲಿ ನಡೆದಿದೆಯೆಂದು ಮೇಧಾ ಪಾಟ್ಕರ್ ನೇತೃತ್ವದ ನಾಗರಿಕ ಸಮಿತಿಯ ಆರಂಭಿಕ ವರದಿ ಹೇಳುತ್ತದೆ. ಮಾರ್ಚ್ ಹಾಗೂ ನವೆಂಬರ್ ತಿಂಗಳುಗಳಲ್ಲಿ ನಡೆದ ಹಿಂಸೆಗೆ ಮತ್ತೊಂದು ಸಾಮ್ಯತೆ ಇದೆ: ಸುದ್ದಿ ಮಾಧ್ಯಮದವರನ್ನು ಹಾಗೂ ಮೇಧಾ ಪಾಟ್ಕರರಂತಹ ಹೋರಾಟಗಾರರನ್ನು ನಂದಿಗ್ರಾಮಕ್ಕೆ ಹೋಗದಂತೆ ಬಲಾತ್ಕಾರಯುತವಾಗಿ ತಡೆಯ ಲಾಯಿತು. ಇಷ್ಟು ಸಾಲದೆಂಬಂತೆ ಪಶ್ಚಿಮ ಬಂಗಾಳದ ಮುಖ್ಯಮಂತ್ರಿ ಬುದ್ಧದೇವ್ ಭಟ್ಟಾಚಾರ್ಯ 'ನಂದಿಗ್ರಾಮದಲ್ಲಿ ಪ್ರತಿಭಟನೆ ನಡೆಸುತ್ತಿದ್ದವರಿಗೆ ಅವರ ಭಾಷೆಯಲ್ಲೇ ಉತ್ತರ ಕೊಟ್ಟಿದ್ದೇವೆ' ಎಂದು ಸಾರ್ವಜನಿಕವಾಗಿ ಹೇಳಿದರು. ನವೆಂಬರಿನಲ್ಲಿ ನಡೆದ ಹಿಂಸೆಯನ್ನು, ಪಶ್ಚಿಮ ಬಂಗಾಳದ ರಾಜ್ಯಪಾಲ ಗೋಪಾಲ ಕೃಷ್ಣ ಗಾಂಧಿ, ಎಡರಂಗದ ಸರಕಾರದ ಪಾಲುದಾರ ಪಕ್ಷಗಳಾದ ಸಿ.ಪಿ.ಐ., ಆರ್.ಎಸ್.ಪಿ. ಮತ್ತು ಫಾರ್ವರ್ಡ್ ಬ್ಲಾಕ್‌ಗಳು, ಸಿ.ಪಿ.ಎಂ.ನ ಹಿತೈಷಿಗಳಾಗಿದ್ದ-ವಿದ್ವಾಂಸರು, ಕಲಾವಿದರು ಮತ್ತು ಬುದ್ಧಿಜೀವಿಗಳೂ ಮುಲಾಜಿಲ್ಲದೆ ಖಂಡಿಸಿದರು. ಖ್ಯಾತ ಅರ್ಥಶಾಸ್ತ್ರಜ್ಞ, ಸಿ.ಪಿ.ಎಂ. ಪಕ್ಷದ ವಯೋವೃದ್ಧ ಸದಸ್ಯ, ಪಶ್ಚಿಮ ಬಂಗಾಳದ ಹಣಕಾಸು ಸಚಿವರಾಗಿ ಸರಕಾರಕ್ಕೆ ಲೋಕಮರ್ಯಾದೆ ಸಿಕ್ಕುವಂತೆ ದುಡಿದ ಅಶೋಕ್ ಮಿತ್ರ '೧೯೭೭ರಲ್ಲಿ ಜ್ಯೋತಿ ಬಸು ವಿನೊಂದಿಗೆ ಪ್ರಮಾಣವಚನ ಸ್ವೀಕರಿಸಿದ ನಾಲ್ಕು ಜನರಲ್ಲಿ ಈಗ ನಾನೊಬ್ಬನೆ ಬದುಕುಳಿದಿರುವುದು... ಈ ಹಿಂಸೆಯ ಬಗ್ಗೆ ಈಗ ನಾನು ಮಾತನಾಡದಿದ್ದರೆ, ಮಿಕ್ಕುಳಿದ ಜೀವನ ಪೂರ್ತಿ ಪಾಪಪ್ರಜ್ಞೆಯಲ್ಲಿ ನರಳಬೇಕಾದೀತು' ಎಂದು ಹೇಳುವಷ್ಟರ ಮಟ್ಟಿಗೆ ಪರಿಸ್ಥಿತಿ ತಲುಪಿದೆ. ಕೊನೆಗೆ, ಬುದ್ಧದೇವ್ ತಮ್ಮ ಸಾರ್ವಜನಿಕ ಹೇಳಿಕೆ ಬಗ್ಗೆ ಅಧಿಕೃತವಾಗಿ ಕ್ಷಮೆ ಯಾಚಿಸಿದರು ಎನ್ನುವುದೇನೋ ಸರಿ; ಆದರೆ ಆ ಕ್ಷಮಾಯಾಚನೆಯ ಬೆನ್ನಿಗೆ ಅವರು ಹೇಳಿದ್ದು 'ಜನ ಬೇಡವೆಂದರೆ ನಾವು ಒತ್ತಾಯ ಮಾಡುವುದಿಲ್ಲ. ಆದರೆ ನಮ್ಮ ರಾಜ್ಯದ ಯುವಕರು ಕೈಗಾರಿಕಾ ಅಭಿವೃದ್ಧಿಗಾಗಿ ತಹತಹಿಸುತ್ತಿದ್ದಾರೆ; ನಮ್ಮ ಮೇಲೆ ಅವರ ಆಕಾಂಕ್ಷೆಗಳನ್ನು ಪೂರೈಸುವ ಹೊಣೆ ಇದೆ.

With Best Compliments from

**Kaviraj**

**FRIENDLY**

**PRESSURE COOKER**
**PRESSURE PAN**



**SURAJ METAL INDUSTRIES**

Plot No. 99, 8th Main, 3rd Phase
Peenya Industrial Area, Bangalore - 560 058
e-mail : smi_kaviraj@yahoo.com
Phone : 41171175, 41172144
Fax : 51171175



-: With Best Compliments From :-



# HITECH
## PACKAGING INDUSTRIES

Mfrs. of Paper Corrugated Boxes,
Boards, Rolls Printed, Mono Cartons
and All kinds of Packaging Materials.

Shed No. 22, S. M. Road, 1st Cross
Jalahalli Cross Circle, Near Bharathi Theatre
Bangalore - 560 057
Phone : Fact. : 28399712, 51178473
Mobile : 98450 15760



ಶುಭಾಶಯಗಳೊಂದಿಗೆ



# ತನು ಮನು ಪ್ರಕಾಶನ

ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು

ಎಚ್.ಐ.ಜಿ-1267, 'ಕಾವ್ಯಲೋಕ', 1ನೇ ತಿರುವು
2ನೇ ಹಂತ, ಶ್ರೀರಾಮಪುರ ಬಡಾವಣೆ, ಮೈಸೂರು - 570 023
ದೂರವಾಣಿ : 2363001



With Best Compliments From




**TYPE FOUNDRY**

**ಡಿ. ಎಂ. ಎಂ. ಟೈಪ್ ಫೌಂಡ್ರಿ**

# 8/1, P. S. Lane, 3rd Cross, Cottonpet
Bangalore - 560 053, Phone : 22879688

Available under one roof

Complete solution for Offset Printers, Mini Offset Printers, Machinery, Cutting Machine, Perforation Machine, Spiral & Die Punching Power Pinning, Lamination, Master Heater, Rubber Suckers, Paste-up Materials, Chemicals, Rubber Blanket, Cleaning Wipers, Cutting Machine Blades, Gears, Rubber Sponge, Punching Materials etc.

...ವೃದ್ಧಿಯ ಪಥದಲ್ಲಿ ನಾವು ನಿಶ್ಚಿತವಾಗಿಯೂ ಮುಂದೆ ...ುತ್ತೇವೆ.'

ನಂದಿಗ್ರಾಮದಲ್ಲಿ ಇಡೀ ವರ್ಷ ನಡೆದ ವಿದ್ಯಮಾನಗಳ ...ತಾಗಿ ಸಿ.ಪಿ.ಎಂ. ಪಕ್ಷದ ದೃಷ್ಟಿಕೋನವನ್ನು ನಾವು ಪಕ್ಷದ ...ಖವಾಣಿಯಾದ 'ಪೀಪಲ್ಸ್ ಡೆಮಾಕ್ರಸಿ'ಯಲ್ಲಿನ ವರದಿ-...ಷಣೆಗಳಿಂದ ತಿಳಿದುಕೊಳ್ಳಬಹುದು. ಈ ಪತ್ರಿಕೆಯ ...೨೭ರ ಸಂಚಿಕೆಗಳಲ್ಲಿ, ಬಹುತೇಕ ಪ್ರತಿವಾರವೂ, ...ದಿಗ್ರಾಮದ ಕುರಿತಾಗಿ ಪ್ರಕಟಿತವಾಗಿರುವ ಪಕ್ಷದ ...ುವುಗಳು ಸಂಕ್ಷಿಪ್ತವಾಗಿ ಹೀಗಿವೆ :

ನಂದಿಗ್ರಾಮದಲ್ಲಿ ಜನರನ್ನು ಸರಕಾರದ ವಿರುದ್ಧ ಎತ್ತಿಕಟ್ಟಿರುವ 'ಭೂಮಿ ಉಚ್ಛ್ಚಾಡ್ ಪ್ರತಿರೋಧಿ ಸಮಿತಿ' ಸಿ.ಪಿ.ಎಂ.ನ ಕಡು ವಿರೋಧಿಗಳಾದ ತೃಣಮೂಲ ಕಾಂಗ್ರೆಸ್, ಎಸ್.ಯು.ಸಿ.ಐ., ಜಮಾತ್ - ಉಲ್ - ಇಸ್ಲಾಮ್ ಹಾಗೂ ನಕ್ಸಲ್‌ವಾದಿ ತುಂಡುಗುಂಪುಗಳ ಅವಕಾಶವಾದಿ ರಾಜಕೀಯ ಒಕ್ಕೂಟವಾಗಿದೆ. ಈ ಒಕ್ಕೂಟಕ್ಕೆ ನಂದಿಗ್ರಾಮದ ಜನರ ಬದುಕಿನ ಕಾಳಜಿ ಇಲ್ಲ; ಸಿ.ಪಿ.ಎಂ.ನ ವಿರುದ್ಧ ಹಿಂಸಾತ್ಮಕವಾದ ದುಷ್ಕೃತ್ಯಗಳನ್ನು ನಡೆಸಲು ಈ ಕೂಟವು ನಂದಿಗ್ರಾಮದ ಜನರನ್ನು ದಾಳ ಮಾಡಿಕೊಂಡಿದೆ. ಹಾಗಾಗಿ ಇದು ಸರಕಾರ ಹಾಗೂ ಜನರ ಮಧ್ಯೆ ನಡೆಯುತ್ತಿರುವ ಸಂಘರ್ಷವಲ್ಲ, ಭಯೋತ್ಪಾದಕತೆಯ ಮೂಲಕ ಎಡರಂಗದ ಸರಕಾರವನ್ನು ಅಸ್ಥಿರಗೊಳಿಸುವ ರಾಜಕೀಯ ಷಡ್ಯಂತ್ರ.

ಜನವರಿ ತಿಂಗಳಿನಿಂದಲೂ ನಂದಿಗ್ರಾಮ ಪ್ರದೇಶದಲ್ಲಿ ಸಿ.ಪಿ.ಎಂ. ಬೆಂಬಲಿಗರ ಮೇಲೆ ವ್ಯವಸ್ಥಿತವಾದ ಹಿಂಸೆ ನಡೆಯುತ್ತಿದೆ. ಈ ಹಿಂಸೆಯ ಫಲವಾಗಿ ಎರಡು ಸಾವಿರಕ್ಕೂ ಮಿಕ್ಕಿದ ಸಿ.ಪಿ.ಎಂ. ಬೆಂಬಲಿಗರು ತಮ್ಮ ಊರುಗಳಿಂದ ಹೊರಗಟ್ಟಲ್ಪಟ್ಟು, ನಿರಾಶ್ರಿತರ ಶಿಬಿರಗಳಲ್ಲಿ ವಾಸಿಸುತ್ತಿದ್ದಾರೆ. ಅಕ್ರಮ ಶಸ್ತ್ರಾಸ್ತ್ರಗಳಿಂದ ಸಜ್ಜಿತರಾಗಿರುವ ಭೂ.ಉ.ಪ್ರ.ಸ.ಯ ಕಾರ್ಯಕರ್ತರು, ಮಾವೋವಾದಿಗಳ ಗೆರಿಲ್ಲ ಮಾದರಿಯಲ್ಲಿ, ಸಂವಿಧಾನಬದ್ಧ ಆಡಳಿತಕ್ಕೆ ಅವಕಾಶಕೊಡದ ಹಾಗೆ ನಂದಿಗ್ರಾಮ ಪ್ರದೇಶವನ್ನು 'ಮುಕ್ತ ಪ್ರದೇಶ'ವನ್ನಾಗಿ ಮಾಡಿಕೊಂಡಿದ್ದಾರೆ. ತಮ್ಮ ನಿಲುವುಗಳನ್ನು ವಿರೋಧಿಸುವವರನ್ನು ಇವರು ಕೊಲೆ ಮಾಡಲೂ ಹೇಸುತ್ತಿಲ್ಲ– ಹನ್ನೊಂದು ತಿಂಗಳಲ್ಲಿ ೨೭ ಜನ ಸಿ.ಪಿ.ಎಂ. ಬೆಂಬಲಿಗರನ್ನು ಕೊಂದಿದ್ದಾರೆ. ಅಸಹನೀಯವಾದ ಈ ದಬ್ಬಾಳಿಕೆಯ ವಿರುದ್ಧ, ಭೂ.ಉ.ಪ್ರ.ಸ.ಯ ನಿಲುವಿನ ಜೊತೆ ಸಹಮತವಿಲ್ಲದ ನಂದಿಗ್ರಾಮದ ಸಾವಿರಾರು ಜನ ಒಗ್ಗಟ್ಟಿನಿಂದ ತಿರುಗಿಬಿದ್ದು, ನಂದಿಗ್ರಾಮವನ್ನು 'ಸ್ವತಂತ್ರಗೊಳಿಸಿದ್ದಾರೆ'.

ಜನರಿಗೆ ಒಪ್ಪಿತವಲ್ಲದ ಯೋಜನೆಗಳನ್ನು ಸರಕಾರ ಅವರ ಮೇಲೆ ಹೇರುವುದಿಲ್ಲ, ಆದರೆ, ರಾಜ್ಯದ ಅಭಿವೃದ್ಧಿಗೆ ಈಗ ಕೈಗಾರಿಕೀಕರಣ ತುಂಬ ತುರ್ತಾಗಿದೆ. ಭೂಸುಧಾರಣೆಯನ್ನು ಅತ್ಯಂತ ಯಶಸ್ವಿಯಾಗಿ ಜಾರಿ ಮಾಡಿ, ಗ್ರಾಮೀಣ ಜೀವನದಲ್ಲಿ ಗುಣಾತ್ಮಕವಾದ ಬದಲಾವಣೆಯನ್ನು ತಂದದ್ದೇ ಪಶ್ಚಿಮ ಬಂಗಾಳದ ಎಡರಂಗದ ಸರಕಾರ. ಆದರೆ, ಇಂದು, ರಾಜ್ಯ ಕೃಷಿಯಾಧಾರಿತ ಬೆಳವಣಿಗೆಯ ಗರಿಷ್ಠ ಮಟ್ಟ ತಲುಪಿದೆ; ಹೆಚ್ಚಿನ ಆರ್ಥಿಕ ಪ್ರಗತಿಗೆ ನಾವು ಅನಿವಾರ್ಯವಾಗಿ ಕೈಗಾರಿಕೆಗಳನ್ನು ಬೆಳೆಸಬೇಕಾಗಿದೆ. ರಾಜ್ಯದಲ್ಲಿ ಲಭ್ಯವಿರುವ ಒಟ್ಟು ಭೂಪ್ರದೇಶದಲ್ಲಿ ಶೇಕಡ ೭೦ರಷ್ಟು ಕೃಷಿ ಭೂಮಿ ಇರುವುದರಿಂದ, ಕೃಷಿ ಭೂಮಿಯ ಒಂದಿಷ್ಟು ಭಾಗವನ್ನು ಕೈಗಾರಿಕೆಗಳಿಗೆ ಬಳಸುವುದು ಅನಿವಾರ್ಯವಾಗುತ್ತದೆ. (ಬುದ್ಧದೇವ ಭಟ್ಟಾಚಾರ್ಯ ಅವರು ಸುಮಿತ್ ಸರ್ಕಾರರ ಟೀಕೆಗೆ ಉತ್ತರವಾಗಿ ಬರೆದ ಪತ್ರ: ಪೀಪಲ್ಸ್ ಡೆಮಾಕ್ರಸಿ, ಜನವರಿ ೨೭, ೨೦೦೭ ಹಾಗೂ ಇದೇ ಸಂಚಿಕೆಯಲ್ಲಿ ನಿಲೋತ್ಪಲ್ ಬಸು ಬರೆದಿರುವ ಬರಹದ ಒಟ್ಟು ಇಂಗಿತ.)

೧೯೬೦-೭೦ರ ದಶಕದಲ್ಲಿ ಕಾಂಗ್ರೆಸ್ ಹಾಗೂ ನಕ್ಸಲೀಯರು ಭಾರತದ ...ಹುಪಕ್ಷೀಯ ವ್ಯವಸ್ಥೆಯನ್ನು ಒಪ್ಪಿಕೊಂಡಿದ್ದಾಗ್ಯೂ, ರಾಜಕೀಯ ಮಾಡುತ್ತಿರುವ ...ಮ್ಯುನಿಸ್ಟ್ ಪಕ್ಷಗಳ ಮೇಲೆ ಹಿಂಸಾಚಾರ ನಡೆಸಿದರು. ನಂತರದಲ್ಲಿ ಗುರ್ಖಾ...ಂಡ್ ಚಳುವಳಿ ಕಾಲಕ್ಕೆ ಸಿ.ಪಿ.ಎಂ.ಅನ್ನು ಹಣಿಯಲು ಕಾಂಗ್ರೆಸ್ ಕುತಂತ್ರ




ಸಿನಿಮಾ ನಟರು, ರಾಜಕಾರಣಿ -ಗಳೆಲ್ಲ ಜೈಲಿಗೆ ಆಗಾಗ ಬಂದು ಹೋಗ್ತಿರೋದ್ರಿಂದ ಸುಧಾರಣೆ ಮಾಡಬೇಕಾದ್ದು ಬಿಡಿ...?!

ನೀತಿ ಅನುಸರಿಸಿತು. ನಂತರದ ಕಾಲದಲ್ಲಿ ಸಿ.ಪಿ.ಎಂ.ಅನ್ನು ವಿರೋಧಿಸುವ ಎಂಥ ಶಕ್ತಿಗಳ ಜೊತೆಗೂ ಕೈಜೋಡಿಸಿ ಹಿಂಸಾತ್ಮಕ ಪರಿಣಾಮ ಉಂಟುಮಾಡಲು ಹೇಸದ ಮಮತಾ ಬ್ಯಾನರ್ಜಿ ಮತ್ತು ನಕ್ಸಲರ ತುಂಡು ಬಣಗಳ ರಾಜಕೀಯವೂ ವಾಸ್ತವಿಕ ವಾದದ್ದು. ಈ ಹಿನ್ನೆಲೆಯಲ್ಲಿ, ಮೊದಲನೇ ಅಂಶದಲ್ಲಿ ಇರುವ ಅತಿಶಯೋಕ್ತಿಯನ್ನು ನಿರಾಕರಿಸಿದರೂ ಸಿ.ಪಿ.ಎಂ.ನ ಆರೋಪದಲ್ಲಿ ಸತ್ಯಾಂಶ ಇದೆ.

ಮೂರನೆಯದು, ಸಿ.ಪಿ.ಎಂ. ಪಕ್ಷದ 'ಅಭಿವೃದ್ಧಿ ಸಿದ್ಧಾಂತ'. ಇದು ಶೇಕಡ ನೂರು ತರ್ಕಬದ್ಧ ಅರ್ಥ ಮೀಮಾಂಸೆ; ಸಾಮಾಜಿಕ ಸಹಮತವಿದ್ದರೆ ಇಚ್ಛಿತ ಪರಿಣಾಮವನ್ನು ತೋರಿಸಿ ತನ್ನ ತರ್ಕವನ್ನು ಸಾಬೀತು ಪಡಿಸಲೂಬಹುದು. ಆದರೆ ಜನ ತಮ್ಮ ನಿತ್ಯ ಬದುಕಿನ ಜಂಜಾಟದಿಂದ ಕಟ್ಟಿಕೊಂಡ ಭದ್ರತೆಯ ದಾರಿಗಳನ್ನು ಸುಲಭದಲ್ಲಿ ಬಿಟ್ಟುಕೊಡುವವರಲ್ಲ – ದೇವರೇ ಪ್ರತ್ಯಕ್ಷವಾಗಿ ಹೇಳಿದರೂ ಸಹ! ಅಂಥಾದ್ದರಲ್ಲಿ ಸಿ.ಪಿ.ಎಂ. ಪಕ್ಷ ಅಷ್ಟು ತರಾತುರಿಯಲ್ಲಿ ತನ್ನ 'ಅಭಿವೃದ್ಧಿ ಸಿದ್ಧಾಂತ'ವನ್ನು ಜನ ಬೇಷರತ್ತಾಗಿ ಒಪ್ಪಿಕೊಳ್ಳಬೇಕು ಎಂದು ತಾಕೀತು ಮಾಡುತ್ತಿದೆ. ಆದರೆ ಈ ಮಾದರಿಯ 'ಅಭಿವೃದ್ಧಿ ಸಿದ್ಧಾಂತ'ದ ಪರಿಣಾಮವಾಗಿ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಆರು ಕೋಟಿ ಜನ ತಮ್ಮ ಬದುಕುವ ಹಕ್ಕನ್ನೇ ಕಳೆದುಕೊಂಡು ಅಕ್ಷರಶಃ ಬೀದಿಪಾಲಾಗಿದ್ದಾರೆ ಎನ್ನುವ ವಾಸ್ತವಿಕತೆಯನ್ನು, ೮೦ರ ದಶಕದ ನಂತರದ ತನ್ನ ರಾಜಕೀಯದ ಅರಿವಿಗೆ ಸಿ.ಪಿ.ಎಂ. ತಂದುಕೊಂಡಿಲ್ಲ. 'ನರ್ಮದಾ ಬಚಾವ್ ಆಂದೋಲನ' ಎತ್ತಿತೋರಿಸಿದ ಭಾರತದ 'ಅಭಿವೃದ್ಧಿ ಕಲ್ಪನೆ'ಯ ಕಟುವಾಸ್ತವಗಳ ಬಗ್ಗೆ ಸಿ.ಪಿ.ಎಂ. ತೋರಿದ ರಾಜಕೀಯ ಉಪೇಕ್ಷೆಯೂ ಭಾರತದ ಎಡಪಂಥೀಯ ರಾಜಕಾರಣದ ಲೋಕ ವಾಙ್ಮಯವನ್ನು ಅರ್ಥಹೀನ ಸ್ಥಿತಿಗೆ ತಂದು ನಿಲ್ಲಿಸಿದೆ. ಭಾರತದ ಉಳಿದ ರಾಜಕೀಯ ಪಕ್ಷಗಳು ಹಾಗೂ ಪ್ರಭುತ್ವ ವ್ಯವಸ್ಥೆ ನರ್ಮದಾ ಕಣಿವೆಯ ಆದಿವಾಸಿಗಳ ಬಗ್ಗೆ ತೋರಿದ ಅಸಡ್ಡೆಗೂ ಎಡಪಕ್ಷಗಳ ಧೋರಣೆಗೂ ಏನೂ ವ್ಯತ್ಯಾಸವೇ ಇಲ್ಲದಂತಾಗಿದೆ. 'ಅಭಿವೃದ್ಧಿ' ಎನ್ನುವುದು ಒಂದು ಸಾಪೇಕ್ಷವಾದ ಪರಿಕಲ್ಪನೆ. ಇದರ ಬೀಜಗಳು ಎಲ್ಲಿಂದ ಬಂದಿವೆ? ಫಸಲನ್ನು ಉಣ್ಣುವವರು ಯಾರು, ಕೊಳೆಯನ್ನು ಅನುಭವಿಸುವವರು ಯಾರು? ಈ ಪ್ರಶ್ನೆಗಳನ್ನು ಅಧಿಕಾರಸ್ಥರು ಮುಖ್ಯವೆಂದು ಪರಿಗಣಿಸದಿದ್ದರೂ, 'ಅಭಿವೃದ್ಧಿ ಯೋಜನೆ'ಗಳಿಂದ ತಮ್ಮ ಬದುಕುವ ಹಕ್ಕಿಗೆ ಸಂಚಕಾರ ಬಂದಿದೆ ಎಂದು ಅರಿತ ಜನ ಕೇಳುತ್ತಿರುವುದು ಸಹಜವೇ ಆಗಿದೆ.

ಜನಸಮುದಾಯ ತಳಮಟ್ಟದಲ್ಲಿ ತಮಗೆ ಒಳಿತಾಗುವ ಅಭಿವೃದ್ಧಿ ಪರಿಕಲ್ಪನೆಗಳನ್ನು ಕಟ್ಟಿಕೊಳ್ಳಲು ಸಾಧ್ಯವಾಗಬೇಕು ಎಂಬ ಮಹದಾಶಯದಿಂದ ಜ್ಯೋತಿ ಬಸು ನಾಯಕತ್ವದ ಎಡರಂಗ ಸರಕಾರ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಜಾರಿಗೆ ತಂದಿತು. ಯೋಜನೆಗಳ ಕುರಿತ ನಿರ್ಧಾರ ಮತ್ತು ಒಪ್ಪಿತ ಯೋಜನೆಗಳ ಅನುಷ್ಠಾನದ ಅಧಿಕಾರವನ್ನು ಪಂಚಾಯತ್ ವ್ಯವಸ್ಥೆಗೆ ಕೊಡುವ ಮೂಲಕ ಅಧಿಕಾರ ವಿಕೇಂದ್ರೀಕರಣದ ಕಲ್ಪನೆ ವಾಸ್ತವಿಕವಾಗುತ್ತದೆ ಎನ್ನುವ ರಾಜಕೀಯ ತತ್ವವನ್ನು ಆಗಿನ ಎಡರಂಗದ ಸರಕಾರ ಭಾರತದ ರಾಜಕೀಯದ ಕೇಂದ್ರಕ್ಕೆ ತಂದು ನೆಟ್ಟಿತು. ಭಾರತದ ಸಮಾಜದಲ್ಲಿ ಬೇರುಬಿಟ್ಟಿರುವ ಹಲವು ಬಗೆಯ ಶ್ರೇಣೀಕರಣಗಳನ್ನು ಮೀರಿ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಬೆಳೆಸುವುದಕ್ಕೆ ತೋರಿಸಬೇಕಾದ ಇಚ್ಛಾಶಕ್ತಿಯನ್ನೂ ಎಡರಂಗದ ಸರಕಾರ ತೋರಿಸಿತು.

ಈ ಬಗೆಯ ರಾಜಕೀಯ ಸಂಕಲ್ಪವನ್ನು ಹೊಂದಿದ್ದ ಪಕ್ಷ ಸಹಜವಾಗಿಯೇ 'ನರ್ಮದಾ ಬಚಾವ್ ಆಂದೋಲನ'ವೂ ಸೇರಿದ ಹಾಗೆ ಉಳ್ಳವರ ಹಿತಾಸಕ್ತಿಯನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಮೇಲಿನಿಂದ ಜಾರಿಯಾಗುವ ಅಭಿವೃದ್ಧಿ ಯೋಜನೆಗಳನ್ನು ವಿರೋಧಿಸುವ ಸಾಮೂಹಿಕ ಹೋರಾಟಗಳ ಸಹಭಾಗಿಯಾಗಬೇಕಿತ್ತು. ಆದರೆ ಅದು ಹಾಗಾಗಲಿಲ್ಲ. ಈಗ, ಯಾವ ರೀತಿಯಿಂದ ನೋಡಿದರೂ ಬಡವರಿಂದ ಕಿತ್ತುಕೊಂಡು ಉಳ್ಳವರಿಗೆ ಒಪ್ಪಿಸುವ SEZ ತರಹದ ಅಭಿವೃದ್ಧಿ ಮಾದರಿಯನ್ನು, ಆಕ್ರಮಣಕಾರಿಯಾಗಿ ಜಾರಿಮಾಡುವ ರಾಜಕೀಯವನ್ನು ಸಿ.ಪಿ.ಎಂ. [illegible] ಕೊಳ್ಳುತ್ತಿದೆ. ಸಿ.ಪಿ.ಎಂ. [illegible] SEZ ಕಾಯ್ದೆಯನ್ನು ಕೆಲವು [illegible]

ವೇದೋಪನಿಷತ್ತುಗಳ ಮಹಾಪಾತ್ರಗಳು :
1. ಇಂದ್ರ, 2. ದಧೀಚಿ-ನಾಭಾಗ, 3. ದತ್ತಾತ್ರೇಯ,
4. ಭರದ್ವಾಜ, 5. ನಚಿಕೇತ, 6. ವರುಣ-ವಾಯು 7. ಅಗ್ನಿ
8. ಸತ್ಯಕಾಮ ಜಾಬಾಲ, 9 ಕಶ್ಯಪ, 10. ಭೃಗು.

ರಾಮಾಯಣದ ಮಹಾಪಾತ್ರಗಳು :
1. ಸೀತೆ, 2. ಶ್ರೀರಾಮ, 3. ಶ್ರೀರಾಮ (2), 4. ಲಕ್ಷ್ಮಣ
5. ದಶರಥ, 6. ಹನುಮಂತ, 7. ವಾಲಿ-ಸುಗ್ರೀವ.
8. ರಾವಣ, 9. ವಿಭೀಷಣ, 10. ವಾಲ್ಮೀಕಿ.

ಮಹಾಪೂಜ್ಯ ಮಹರ್ಷಿಗಳು :
1. ನಾರದ, 2. ಮಾರ್ಕಂಡೇಯ, 3. ಪರಶುರಾಮ
4. ದೂರ್ವಾಸ, 5. ಅಗಸ್ತ್ಯ 6. ಗೌತಮ, 7. ವಿಶ್ವಾಮಿತ್ರ
8. ವೇದವ್ಯಾಸ, 9. ವಸಿಷ್ಠ, 10. ಅತ್ರಿ.

ಮಹಾಭಾರತದ ಮಹಾಪಾತ್ರಗಳು :
1. ಕುಂತಿ, 2. ಕರ್ಣ, 3. ಧರ್ಮರಾಯ, 4. ಭೀಮ, 5. ಅರ್ಜುನ,
6. ದ್ರೌಪದಿ, 7. ಕೃಷ್ಣ, 8. ಭೀಷ್ಮ, 9. ದ್ರೋಣ, 10. ವಿದುರ.

ಮಹಾಪುರಾಣಗಳ ಮಹಾಪಾತ್ರಗಳು :
1. ಗಣೇಶ. 2. ಶ್ರೀನಿವಾಸ, 3. ಶಿವ, 4. ಪಾರ್ವತಿ. 5. ಸಾವಿತ್ರಿ,
6. ಪ್ರಹ್ಲಾದ, 7. ಹರಿಶ್ಚಂದ್ರ, 8. ಧ್ರುವ, 9. ಯಾಜ್ಞವಲ್ಕ್ಯ, 10. ಬಲಿ.






ಭಾರತ ಸಂಸ್ಕೃತಿ ಪ್ರಕಾಶನ
ನಂ. 37/8, ಜಿ4, ಲೀಸಾ ಅಪಾರ್ಟ್‌ಮೆಂಟ್ಸ್
4ನೇ ಕ್ರಾಸ್, ಲಾಲ್‌ಬಾಗ್ ರಸ್ತೆ
ಬೆಂಗಳೂರು-27, © 227 8231, 6765381

With Best Compliments From









SRI VINAYAKA PACKS
Manufacturers of Corrugated Boxes & Export Cartons
AN ISO 9001: 2000 CERTIFIED FIRM

No. C-330(A), 3rd Main,Opp. 9th Cross
Peenya Industrial Estate, Bangalore-560 058
Phone : 23720132. Telefax : 28376391
E-mail : svpacks@vsnl.net

ಗಳನ್ನು ಮಾಡಬೇಕು ಎಂದು ಒತ್ತಾಯಿಸುತ್ತಿರುವುದು ನಿಜ; ಒಂದು ವೇಳೆ ಅ ತಿದ್ದುಪಡಿಗಳಾದರೂ, ಸದರಿ ಯೋಜನೆಯ ಯಜಮಾನಿಕೆಯ ಸ್ವರೂಪವೇ ಬದಲಾಗುವುದಿಲ್ಲ ಆದರೂ, ಸಿ.ಪಿ.ಎಂ.ನ ಪಶ್ಚಿಮ ಬಂಗಾಳದ ಘಟಕವು ತನ್ನ ಸಕ ಸಂಘಟನಾತ್ಮಕ ಶಕ್ತಿಯನ್ನು ಈ ತೆರನಾದ 'ಅಭಿವೃದ್ಧಿ ಯೋಜನೆ'ಗಳ ಪ್ರಚಾರ ಮತ್ತ ಅನುಷ್ಠಾನಕ್ಕೆ ಪಣವಾಗಿಟ್ಟಿದೆ.

ಮಾರ್ಚ್ ಹಾಗೂ ನವೆಂಬರ್ ತಿಂಗಳುಗಳಲ್ಲಿ ನಂದಿಗ್ರಾಮದಲ್ಲಿ ಸಿ.ಪಿ.ಎಂ ಪಕ್ಷದ ಕಾರ್ಯಕರ್ತರು ನಡೆಸಿದ ಹಿಂಸಾಚಾರ ತಕ್ಷಣದ ಘಟನಾವಳಿಗಳ ತೋರಿಸಿದ ಉದ್ರಿಕ್ತ ಪ್ರತಿಕ್ರಿಯೆಯಲ್ಲ; ತನ್ನ 'ಅಭಿವೃದ್ಧಿ ಸಿದ್ಧಾಂತ'ಕ್ಕೆ ತೋರು ಭಿನ್ನಮತವನ್ನು ಬಲಪ್ರಯೋಗದಿಂದ ಅಡಗಿಸುವ ತಣ್ಣಗಿನ ರಾಜಕೀಯ ವರಸ ಮೇಧಾ ಪಾಟ್ಕರಂಥವರ ಮೇಲೆ ನಡೆಸಿದ ದೈಹಿಕ ಹಲ್ಲೆ, ಹಿಂಸೆಯನ್ನು ಖಂಡಿಸಿ ಬುದ್ಧಿಜೀವಿಗಳ ಬಗ್ಗೆ ತೋರುತ್ತಿರುವ ಅಸಹನೆ ಹಾಗೂ ತನ್ನ ನಿಲುವೇ ಸರಿ ಎಂದ ವಾದ ಮಂಡಿಸುವ ವೈಖರಿ, ಇವುಗಳೆಲ್ಲ ಈ ನಮೂನೆಯ ರಾಜಕೀಯ ತಂತ್ರಗಾರಿಕೆಯ ವಿಶಿಷ್ಟ ಲಕ್ಷಣಗಳು. ಸಿ.ಪಿ.ಎಂ.ನ ರಾಜಕೀಯ ಇಚ್ಛಾಶಕ್ತಿಯ ಆಗಿರುವ ಈ ಗುಣಾತ್ಮಕ ಬದಲಾವಣೆಯೇ ಅದರ ಹಿತೈಷಿಗಳಲ್ಲಿ ಆಘಾತಕಾ ಆತಂಕವನ್ನುಂಟುಮಾಡಿದೆ; ಪ್ರಫುಲ್ಲ ಬಿದ್ವಾಯಿಯ ಮಾತುಗಳು ಈ ಭಯವನ ಯಥಾವತ್ತಾಗಿ ಪ್ರಕಟಿಸಿವೆ. ಇಂತಹ ಪ್ರತಿಕ್ರಿಯೆಗಳನ್ನು ಸಿ.ಪಿ.ಎಂ. ಆತ್ಮವಿಮರ್ಶೆಯ ಒರೆಗಲ್ಲುಗಳನ್ನಾಗಿಸಿಕೊಳ್ಳಬಹುದು ಎಂಬ ನಂಬಿಕೆ ಸುಳ್ಳಾಗುವಂತಿದೆ; ನಂದಿಗ್ರಾಮ ಹಿಂಸೆಯನ್ನು ಖಂಡಿಸುವವರನ್ನು 'ಸಂಕಷ್ಟದ ಗಳಿಗೆಯಲ್ಲಿ ಬಣ ತೊರೆಯು ಚಾಳಿಯವರು', 'ರಾಜಕೀಯ ಸಂಕಷ್ಟಗಳನ್ನು ಅರಿಯದ ನೈತಿಕ ಪ್ರವಾದಿಗಳು' ಎಂ ಭಾಷೆಯಲ್ಲಿ ಸಿ.ಪಿ.ಎಂ.ನ ಬೌದ್ಧಿಕ ವಲಯ ಟೀಕಿಸುತ್ತಿದೆ. ಹಾಗೆಯೇ, ನಂದಿಗ್ರಾಮ ವಿದ್ಯಮಾನಗಳ ಕುರಿತಾಗಿ ನೋಮ್ ಚೋಮ್‌ಸ್ಕಿ, ತಾರೀಖ್ ಅಲಿ, ವಾಲ್ಡೆನ್ ಬೆಲೊ ಮೈಖೆಲ್ ಆಲ್ಬರ್ಟ್, ರಾಬರ್ಟ್ ಶಲೋಮ್ ಮುಂತಾದ ಪಶ್ಚಿಮದ ಚಿಂತಕ ಮನವಿಯನ್ನೂ ಇಲ್ಲಿ ಗಮನಿಸಬೇಕು. ಅವರ ಪತ್ರದ ಸಾರಾಂಶ: ''ಪಶ್ಚಿಮ ಬಂಗಾಳದಿಂದ ಬರುತ್ತಿರುವ ಸುದ್ದಿಗಳು ಆ ರಾಜ್ಯದ ಬಗ್ಗೆ ನಮಗಿದ್ದ ಆಶಾವಾದವನ ಹಿಮ್ಮೆಟ್ಟಿಸುವಂತಿವೆ. ಸಮಾನ ಮೌಲ್ಯಗಳನ್ನುಳ್ಳ ಜನರ ನಡುವೆ ತುಂಬಲಾರದಂತ ಕಂದರ ಉಂಟಾಗಿದೆ ಎಂಬ ಸಂಗತಿಯಿಂದ ನಮ್ಮ ವ್ಯಾಕುಲತೆ ಹೆಚ್ಚಿದೆ. ಎರಡು ಗುಂಪುಗಳ ವಾದವನ್ನು ಕೇಳಿಸಿಕೊಂಡು, ಅಲ್ಲಿನ ಪರಿಸ್ಥಿತಿಯನ್ನು ಅರ್ಥೈಸಿಕೊಳ್ಳಲ ನಾವು ಪ್ರಯತ್ನಿಸುತ್ತಿದ್ದೇವೆ; ಆದರೆ, ವಾಸ್ತವಿಕ ದೂರದಿಂದಾಗಿ ಖಚಿತವಾದ ನಿಲುವ ತಳೆಯುವುದಕ್ಕೆ ನಮಗೆ ಸಾಧ್ಯವಾಗುತ್ತಿಲ್ಲ. ಪಶ್ಚಿಮ ಬಂಗಾಳದ ಜನ, ಭಿನ್ನಾಭಿಪ್ರಾಯ ಗಳನ್ನೇ ಮುಂದುಮಾಡಿಕೊಂಡು ಭೂಸುಧಾರಣೆ, ಪಂಚಾಯತ್ ರಾಜ್‌ನಂತ ರಾಜ್ಯದ ಸಾಧನೆಯನ್ನು ಮಣ್ಣುಗೂಡಿಸಲಾರರು ಎಂದೇ ನಾವು ನಂಬಿಕೊಂಡಿದ್ದೇವೆ ನಿರ್ಗತಿಕರಾದ ರೈತರಿಗೆ ನಮ್ಮ ಸಂಪೂರ್ಣ ಬೆಂಬಲವಿದೆ. ರಾಸಾಯನಿಕ ಸಂಕೀರ್ಣ ಯೋಜನೆಯನ್ನು ಕೈಬಿಟ್ಟಿರುವುದಾಗಿಯೂ, ಹಿಂಸಾಕಾಂಡದಲ್ಲಿ ನಿರ್ಗತಿಕರಾದವರಿ ಯಾವ ಭೇದವನ್ನೂ ಎಣಿಸದೆ ಪುನರ್ವಸತಿ ಕಲ್ಪಿಸುವುದಾಗಿಯೂ, ಶಾಂತಿ ಸಂಧಾನದ ಮೂಲಕ ನೆಮ್ಮದಿಯ ವಾತಾವರಣ ನಿರ್ಮಿಸುವುದಾಗಿಯೂ ರಾಜ್ಯ ಸರಕಾ ಘೋಷಿಸಿದೆ ಎಂಬ ಸುದ್ದಿ ಕೇಳಿದ್ದೇವೆ. ಇಂತಹ ಶಾಂತಿಯ ವಾತಾವರಣ ನಿರ್ಮಾಣ ವಾಗಬೇಕು ಎನ್ನುವುದೇ ನಮ್ಮ ಇಚ್ಛೆಯಾಗಿದೆ. ಇರಾಕನ್ನು ನಿರ್ನಾಮ ಮಾಡಿ ಇರಾನಿನತ್ತ ನುಗ್ಗಲು ಜಗತ್ತಿನ ಯಜಮಾನರು ಸಜ್ಜಾಗುತ್ತಿರುವ ಅಸಮತೋಲ ಸ್ಥಿತಿಯಲ್ಲಿ, ಉದ್ರಿಕ್ತ ಹಣಾಹಣಿಯಿಂದ ಎಡಪಂಥೀಯರ ಐಕ್ಯತೆ ಹೋಳಾಗುವುದು ಒಳ್ಳೆಯದಲ್ಲ.'' ('ದಿ ಹಿಂದು', ಗುರುವಾರ, ೨೨ ನವೆಂಬರ್, ೨೦೦೭). ಇದನ್ನು ತಮ್ಮ ವಿರೋಧಿಗಳ ಸಮ್ಮುಖ ತಮಗೆ ನೀಡಿರುವ 'ಕಾಂಡಕ್ಟ್ ಸರ್ಟಿಫಿಕೇಟ್' ಎಂದು ಸಿ.ಪಿ.ಎಂ. ಭಾವಿಸುವುದು ಬೇಡ. ಪಕ್ಷದ ನಾಯಕರು, ಪಶ್ಚಾತ್ತಾಪವಿಲ್ಲದ ಮಾಡಿಕೊಳ್ಳುತ್ತಿರುವ ಸಮರ್ಥನೆಗಳನ್ನು ನೋಡಿದರೆ, ಈ ಪತ್ರದ ಎಚ್ಚರ, ದುಗುಡ ಆತಂಕಗಳು ಪಕ್ಷವನ್ನು ತಟ್ಟಿದಂತೆ ಕಾಣುವುದಿಲ್ಲ.

ನಂದಿಗ್ರಾಮದಲ್ಲಿ ಬ್ರೆಕ್ಟ್‌ನ 'ಕುಯಾನ್-ಬುಲಾಕ್' ಪದ್ಯದ ಪ್ರತಿಮೆ ತಲೆ ಕೆಳಗಾಗಿ ನಿಂತಿದೆ.

ಡಾ|| ಕೆ. ಫಣಿರಾಜ್
ಸಿ-೧ (ಎ), ಕೈಲಾಸ ಮನೆಗಳು
ಮಣಿಪಾಲ - ೫೭೬ ೧೦೪

# ವಿಶೇಷ ಆರ್ಥಿಕ ವಲಯಗಳು (ಎಸ್‌ಇಜೆಡ್) : ಜನರ ಮೇಲೆ ಎಸಗಿದ ಸುಧಾರಣಾವಾದಿ ವಂಚನೆ

ಒಂದೊಂದು ಎಸ್‌ಇಜೆಡ್‌ಗೂ ಒಬ್ಬೊಬ್ಬ ವಿಕಸನ ಕಮೀಷನರ್ ಮುಖ್ಯಸ್ಥನಾಗಿರುತ್ತಾನೆ. ಈತ ವಸ್ತುತಃ ಆ ವಲಯದ ಆಡಳಿತಾಧಿಕಾರಿ. ಈ ವಲಯಗಳ ಮೇಲಿನ ಆಡಳಿತದಲ್ಲಿ ಸ್ಥಳೀಯ ಅಥವಾ ರಾಜ್ಯ ಸರಕಾರಗಳಿಗೆ ಯಾವ ಪಾತ್ರವೂ ಇಲ್ಲ. ಎಲ್ಲ ಎಸ್‌ಇಜೆಡ್‌ಗಳನ್ನೂ ಅವುಗಳಲ್ಲಿನ ಎಲ್ಲ ಘಟಕಗಳನ್ನೂ ಸಾರ್ವಜನಿಕ ಬಳಕೆ ಸೇವಾ ಸಂಸ್ಥೆಗಳೆಂದು ಘೋಷಿಸಲಾಗಿದೆ. ಕೈಗಾರಿಕಾ ವಿವಾದ ಕಾಯಿದೆ ಮತ್ತಿತರ ಕಾರ್ಮಿಕ ನಿಯಮಗಳು ಇಲ್ಲಿ ಅನ್ವಯವಾಗವು. ಅದೇ ರೀತಿ ಬ್ಯಾಂಕ್ ನಿಯಮಗಳೂ ಅನ್ವಯವಾಗುವುದಿಲ್ಲ. ಹೀಗೆ ಎಸ್‌ಇಜೆಡ್‌ಗಳು ವಾಸ್ತವವಾಗಿ ಸುಂಕ ಮುಕ್ತ ಪರಾವೃತ ಪ್ರದೇಶಗಳು. ವ್ಯಾಪಾರ ನಿರ್ವಹಣೆ, ಸುಂಕಗಳು, ತೆರಿಗೆಗಳು, ನೀತಿ ನಿಯಮಗಳು, ಆಡಳಿತ – ಇವೆಲ್ಲವುಗಳಿಗೆ ಸಂಬಂಧಿಸಿಯೂ ಅವುಗಳನ್ನು ವಿದೇಶೀ ಭೂಭಾಗಗಳೆಂದೇ ಪರಿಗಣಿಸಲಾಗುತ್ತಿದೆ.

ಡಾ|| ಡಿ. ನರಸಿಂಹ ರೆಡ್ಡಿ

ಇತ್ತೀಚೆಗೆ ದೇಶದಾದ್ಯಂತ ವಿಶೇಷ ಆರ್ಥಿಕ ವಲಯ (ಎಸ್‌ಇಜೆಡ್)ಗಳ ವಿರುದ್ಧ ವ್ಯಾಪಕ ಪ್ರತಿಭಟನೆಗಳು ಜರುಗುತ್ತಿವೆ. ವಿಪರ್ಯಾಸವೆಂದರೆ ಒಂದು ರಾಜ್ಯದಲ್ಲಿ ಎಸ್‌ಇಜೆಡ್‌ಗಳ ವಿರುದ್ಧ ಜನರನ್ನು ...ತ ನೆರೆಯಿಸುತ್ತಿರುವ ರಾಜಕೀಯ ಪಕ್ಷಗಳೇ ...ದು ವೇಳೆ ಇತರ ರಾಜ್ಯಗಳಲ್ಲಿ ಎಸ್‌ಇಜೆಡ್‌ಗಳಿಗೆ ಪ್ರೋತ್ಸಾಹ ನೀಡುತ್ತಿರುವ ಆಡಳಿತಾಂಗ ಪಕ್ಷಗಳಾಗಿವೆ. ಪ್ರತಿಯೊಂದು ರಾಜಕೀಯ ಪಕ್ಷವೂ ತಾನು ಆಡಳಿತದಲ್ಲಿರುವ ಕ್ಷೇತ್ರಗಳಲ್ಲಿ ಎಸ್‌ಇಜೆಡ್‌ಗಳನ್ನು ...ತ್ರಿಸುತ್ತಿರುವಂತೆಯೂ, ತಾನು ಬೇರೊಂದು ಕ್ಷೇತ್ರ...ಲ್ಲಿದ್ದರೆ ಅವನ್ನು ದ್ವೇಷಿಸುವಂತೆಯೂ ಕಂಡು ...ರುತ್ತಿದೆ. ಈ ಪ್ರಕ್ರಿಯೆಯಲ್ಲಿ ಪ್ರಬಲ ಕಾರ್ಪೊರೇಟ್ (ಬೃಹತ್ ಕಂಪನಿ) ಹಾಗೂ ರಿಯಲ್ ಎಸ್ಟೇಟ್ (ಭೂವ್ಯವಹಾರ) ವಶೀಲಿಗಾರ ಗುಂಪುಗಳು ಬಹುವೇಳೆ ಎಷ್ಟು ಸಾಧ್ಯವೋ ಅಷ್ಟೂ ಭೂಮಿಯನ್ನು ಹಾಗೂ ಲಾಭದಾಯಕ ತೆರಿಗೆ ವಿನಾಯಿತಿಗಳನ್ನು ಕಬಳಿಸುವ ತಮ್ಮ ಹಂಚಿಕೆಗಳನ್ನು ಯಾವ ಭಯಭೀತಿಯೂ ಇಲ್ಲದೆ ಈಡೇರಿಸಿಕೊಳ್ಳುತ್ತಿವೆ. ೧೯೯೧ರಲ್ಲಿ ಕಾಂಗ್ರೆಸ್ ಪಕ್ಷವೇ ಆರ್ಥಿಕ ಸುಧಾರಣೆಗಳ ಕಾರ್ಯಕ್ರಮ ಜಾರಿಗೆ ತರುವುದಕ್ಕೆ ಕಾರಣವಾಗಿದ್ದರೂ, ಎನ್‌ಡಿಎ ಆಡಳಿತ ಕಾಲದಲ್ಲೇ ವ್ಯಾಪಾರೀವರ್ಗದ ಹೆಚ್ಚಿನ ಲಾಭಕೋರ ಹಂಚಿಕೆಗಳು ಹೆಚ್ಚು ಸಂಶಯಾತ್ಮಕ ತಿರುವು ಪಡೆದುದು. 'ಭಾರತ ಪ್ರಕಾಶಿಸುತ್ತಿದೆ' ಎಂಬ ಘೋಷಣೆಗೆ ಉತ್ತೇಜಕವಾಗಿ ಶೀಘ್ರತರ ಬೆಳವಣಿಗೆ ಸಾಧಿಸಲು ವಿಶಾಲ ಸುಧಾರಣೆಗಳ ಹೆಸರಿನಲ್ಲಿ ಇದು ಜರುಗಿತು. ೨೦೦೦ರ ಏಪ್ರಿಲ್‌ನಲ್ಲಿ ಆಗ ಎನ್‌ಡಿಎ ಸರಕಾರದಲ್ಲಿ ಕೇಂದ್ರ ವಾಣಿಜ್ಯ ಸಚಿವರಾಗಿದ್ದ ಮುರಸೋಲಿ ಮಾರನ್‌ರವರು ವಿಶೇಷ ಆರ್ಥಿಕ ವಲಯ (ಎಸ್‌ಇಜೆಡ್) ರಚಿಸುವ ನೀತಿಯನ್ನು ಪ್ರಕಟಿಸಿದರು. ಜಾಗತಿಕ ಮಟ್ಟದ ಅಧಿರಚನೆ ರಚಿಸುವುದು, ಯೋಜನೆಗಳಿಗೆ ಯಾವುದೇ ರೀತಿಯ ತೊಂದರೆಗಳೂ ಇಲ್ಲದೆ ಪರವಾನಗಿ ನೀಡುವುದು, ತೆರಿಗೆಗಳ ವಿಷಯದಲ್ಲಿ ಪ್ರೋತ್ಸಾಹಕರ ನೀತಿ ಅನುಸರಿಸುವುದು, ತನ್ಮೂಲಕ ವಿದೇಶೀ ಬಂಡವಾಳ ಹೂಡಿಕೆಯನ್ನು ಆಕರ್ಷಿಸುವುದು ಈ ನೀತಿಯ ಗುರಿಯಾಗಿದ್ದಿತು. ಇದನ್ನು ವಿದೇಶಾಂಗ ವಾಣಿಜ್ಯ ನೀತಿಯ ಒಂದು ಭಾಗವನ್ನಾಗಿ ಪ್ರಕಟಿಸಿ, ಗುರುತಿಸಿದ ವಲಯಗಳಲ್ಲಿ ಬಂಡವಾಳ ಹೂಡಿಕೆದಾರರಿಗೆ ಹಣಕಾಸು ರಿಯಾಯಿತಿಗಳನ್ನು ವಿಸ್ತರಿಸಲಾಯಿತು. ಯುಪಿಎ ಸರಕಾರ ರಚಿತವಾದ ಮೇಲೂ ಅದರ ಮೇಲೆ ಕಾರ್ಪೊರೇಟ್ ಸಂಸ್ಥೆಗಳ ಒತ್ತಡವು ಎನ್‌ಡಿಎ ಸರಕಾರದ ಮೇಲೆ ಹಾಕಿದ್ದ ಒತ್ತಡಕ್ಕಿಂತ ಕಡಿಮೆಯೇನೂ ಆಗಲಿಲ್ಲ. ಈ ಒತ್ತಡಕ್ಕೆ ಮಣಿದು ಯುಪಿಎ ಸರಕಾರವು ೨೦೦೫ರ ಮೇ ತಿಂಗಳಿನಲ್ಲಿ ಎಸ್‌ಇಜೆಡ್ ಕುರಿತ ಶಾಸನವೊಂದನ್ನು ಅಂಗೀಕರಿಸಿತು. ಅದಕ್ಕೆ ಸಂಬಂಧಿಸಿದ ನಿಯಮಗಳನ್ನು ಪ್ರಕಟಿಸಿದ ಮೇಲೆ ಈ ಶಾಸನವು ೨೦೦೬ರ ಫೆಬ್ರವರಿಯಿಂದ ಆಚರಣೆಗೆ ಬಂದಿತು. ಈಚೆಗಿನವರೆಗೆ ೩೪೧ ಎಸ್‌ಇಜೆಡ್‌ಗಳಿಗೆ ವಿಧ್ಯುಕ್ತ ಅನುಮೋದನೆ ನೀಡಲಾಗಿದೆ. ಇವುಗಳಲ್ಲಿ ೧೪೧ ಎಸ್‌ಇಜೆಡ್‌ಗಳನ್ನು ಅಧಿಕೃತವಾಗಿ ಘೋಷಿಸಲಾಗಿದೆ. ಇವುಗಳ ಜೊತೆಗೆ ೧೭೧ ಎಸ್‌ಇಜೆಡ್‌ಗಳಿಗೆ ತತ್ತ್ವತಃ ಅನುಮೋದನೆ ನೀಡಲಾಗಿದ್ದು ಅವು ಅಧಿಕೃತ ಘೋಷಣೆಗಾಗಿ ಕಾಯುತ್ತಿವೆ.

**ಅಭೂತಪೂರ್ವ ತೆರಿಗೆ ವಿನಾಯಿತಿಗಳು**

ಈ ವಲಯಗಳಲ್ಲಿ ತೊಡಗುವ ವಿಶೇಷ ನಿರ್ಮಾಣ ಘಟಕಗಳಿಗೂ ಅಭಿವರ್ಧಕರಿಗೂ ಭಾರಿ ಪ್ರಮಾಣದಲ್ಲಿ ಹಣಕಾಸು ಮತ್ತಿತರ ರಿಯಾಯಿತಿಗಳನ್ನು ನೀಡುತ್ತಿರುವ ಕಾರಣ ಎಸ್‌ಇಜೆಡ್‌ಗಳಲ್ಲಿ ಹಠಾತ್ ಉತ್ಕರ್ಷನೆ ಉಂಟಾಗಿದೆ. ವಿದೇಶೀ ಹಾಗೂ ಭಾರತೀಯ ಹೂಡಿಕೆದಾರರಿಗೆ ನೀಡುತ್ತಿರುವ ಉತ್ತೇಜನೆ ಹಾಗೂ ಸೌಲಭ್ಯಗಳಲ್ಲಿ ಈ ಕೆಳಗಿನವೂ ಕೆಲವು ಸೇರಿವೆ.

೧. ಎಸ್‌ಇಜೆಡ್ ಘಟಕಗಳ ಬೆಳವಣಿಗೆ, ಕಾರ್ಯಾಚರಣೆ ಹಾಗೂ ನಿರ್ವಹಣೆಗಾಗಿ ಪದಾರ್ಥಗಳನ್ನು ಸುಂಕರಹಿತವಾಗಿ ದೇಶದಲ್ಲೇ ಪಡೆದುಕೊಳ್ಳಬಹುದು ಇಲ್ಲವೇ ಆಮದು ಮಾಡಿಕೊಳ್ಳಬಹುದು. (ಅಂದರೆ ಆಮದು ಸುಂಕದಿಂದ ವಿನಾಯಿತಿಯಷ್ಟೆ ಅಲ್ಲ, ದೇಶದೊಳಗೇ ಕೊಂಡ ವಸ್ತುಗಳಿಗೆ ಎಕ್ಸೈಸ್ ಮತ್ತಿತರ ತೆರಿಗೆಗಳಿಂದಲೂ ಮುಕ್ತಿ ಎಂದರ್ಥ).

೨. ಮೊದಲ ಐದು ವರ್ಷಗಳಲ್ಲಿ ರಫ್ತಿನಿಂದ ಲಭಿಸಿದ ಆದಾಯಕ್ಕೆ ಶೇ.೧೦೦ರಷ್ಟು, ತದನಂತರದ ಐದು ವರ್ಷಗಳಲ್ಲಿ ಶೇ.೫೦ರಷ್ಟು ಆದಾಯ ತೆರಿಗೆ ವಿನಾಯಿತಿ.

೩. ವರಮಾನ ತೆರಿಗೆ ಕಾಯಿದೆಯಡಿ ಕನಿಷ್ಠ ಪರ್ಯಾಯ ತೆರಿಗೆಯಿಂದ ವಿನಾಯಿತಿ

೪. ಕೇಂದ್ರ ಮಾರಾಟ ತೆರಿಗೆಯಿಂದ ಮುಕ್ತಿ

೫. ಸೇವಾ ತೆರಿಗೆಯಿಂದ ಮುಕ್ತಿ

೬. ರಾಜ್ಯ ಮಾರಾಟ ತೆರಿಗೆ ಮತ್ತಿತರ ವಸೂಲಿಗಳಿಂದ ಮುಕ್ತಿ



# ಕಾವ್ಯಾಲಯ ಪ್ರಕಾಶಕರು

**ಜಯನಗರ, ಮೈಸೂರು - 570 014**

ದೂರವಾಣಿ : 2567042, ಮೊಬೈಲ್ : 98807 05977 e-mail : ckkkavyalaya@yahoo.com

*ಪೂಜ್ಯ ಶ್ರೀ ಶ್ರೀ ಶ್ರೀ ಗಣಪತಿ ಸಚ್ಚಿದಾನಂದ ಸ್ವಾಮೀಜಿ ಅವರು ಬರೆದ ವಿಶಿಷ್ಟ ಕೃತಿಗಳು*

೧) ಶ್ರೀ ಸುಬ್ರಹ್ಮಣ್ಯಸ್ವಾಮಿ ಚರಿತ್ರೆ ಮತ್ತು ಪುಣ್ಯಕ್ಷೇತ್ರಗಳ ಪರಿಚಯ ರೂ. ೨೦೦.೦೦

೨) ಶ್ರೀ ಆಂಜನೇಯ ಚರಿತ್ರೆ - ಭಾಗ ೧ ಮತ್ತು ೨ (ಸೆಟ್) ರೂ. ೪೧೦.೦೦

*ಮತ್ತೂರು ಕೃಷ್ಣಮೂರ್ತಿ ಬರೆದ*

ಧರ್ಮರಾಜ ಯುಧಿಷ್ಠಿರ ರೂ. ೩೦೦.೦೦

*ವೆಂಕಟರಾಮು ಶರ್ಮ ಬರೆದ*

ದೇವಿ ದಿವ್ಯ ದರ್ಶನ ರೂ. ೮೦.೦೦

*ಯಡತೊರೆ ಸುಬ್ರಾಯ ಶರ್ಮ ಬರೆದ*

ಶ್ರೀ ಮದ್ರಾಮಾಯಣ ಅಂತರಾರ್ಥ (ಉತ್ತಮ ಪ್ರತಿ, ೮೦೦ ಪುಟಗಳು) ರೂ. ೫೦೦.೦೦

ಇವಲ್ಲದೆ

ಕಗ್ಗ, ಮರುಳ ಮುನಿಯ, ಗೀತಾ ತಾತ್ಪರ್ಯ, ಹಸುರು ಹೊನ್ನು, ಶಿಲ್ಪಶ್ರೀ, ಅಶ್ವತ್ಥಾಮನ್, ಕಾಲೇಜುರಂಗ, ಕರುಣಾಳು ಬಾ ಬೆಳಕೆ, ಛತ್ರಪತಿ ಶಿವಾಜಿ, ಸದೋದಿತ ಪರಬ್ರಹ್ಮ, ಅಮೇರಿಕ ಮತ್ತು ಅಮೇರಿಕನ್ನರು, ದಾಸ ಸಾಹಿತ್ಯ, ಕೋತಿಯ ಕೈ

ಇನ್ನೂ ಹಲವಾರು ಶ್ರೇಷ್ಠ ಕೃತಿಗಳು ಲಭ್ಯ.

Estd: 15.04.1979 Phone: 26611141/22956419/22956420

# SIR M. VISVESVARAYA CO-OPERTIVE BANK LIMITED

Corporate Office, # 109, Shankaramutt Road, Shankarapuram, Bangalore - 4, E-Mail: visweshwaraiah@dataone.in

**CREDIT FACILITIES AVAILABLE FOR MEMBERS/CUSTOMERS**

1. **IMMOVABLE PROPERTY LOAN** - For Construction, Purchase of Property, Purchase of Site, (including cost of registration and stamp duty) Re-payment of Debts, Higher Education and Marriage at attractive rate of interest
2. **BUSINESS LOANS/INDUSTRIAL LOAN** - Term loan facility for purchase of equipments/ machineries, CC facility for working capital.
3. **VEHICLE LOAN/HPS-Two & Three Wheelers** - 75% and **Four wheelers** - 90%
4. **GOLD LOAN** - upto 75% on valuation (upto Rs.5 lakhs) with increased rate per gram.
5. **EDUCATIONAL LOAN** - (for higher studies in India & Abroad) - Upto Rs.8 lakhs
6. **GOVT. SECURITY LOAN / NSC** - 75% on the face value

All the above loans are available at very competitive rate of interest and no hidden cost.

For any facilities/services please contact the following Branches:

Kumarapark West-22956401/402, Shankaramutt Road - 22956403/404/405
Rajajinagar-22956406/407/408, J.P.Nagar - 22956409/410, BSK III Stage - 22295411/412
Vijayanagar-22956413/414, Kengeri Satellite Town - 22956415, Mathikere - 22956416
BTM Layout - 22956417/418, G.M.Office - 22428246.

*OFFICE BEARERS*

| | | | |
|---|---|---|---|
| **Sri.K.N.Venkatanarayana** | **Dr.R.V.Jayathirtha** | **Sri.H.K.Srinivas** | **Sri.H.K.Chandrasekhar** |
| President | Vice-President | Chief Executive Officer | General Manager |

ಇವುಗಳ ಜೊತೆಗೆ ರಾಜ್ಯ ಸರಕಾರಗಳು ಎಸ್‌ಇಜೆಡ್‌ಗಳಿಗೆ ನೀರು ಹಾಗೂ ವಿದ್ಯುಚ್ಛಕ್ತಿಯನ್ನು ಭಾರಿ ರಿಯಾಯಿತಿ ದರಗಳಲ್ಲಿ ಒದಗಿಸಬೇಕು. ಎಸ್‌ಇಜೆಡ್‌ಗಳು ತಮ್ಮವೇ ಸ್ವಂತ ಒಡೆತನದ ವಿದ್ಯುತ್ ಸ್ಥಾವರಗಳನ್ನೂ ಪಡೆದುಕೊಂಡಿರಬಹುದು. ಸರಕಾರಗಳು ಈ ವಲಯಗಳಿಗೇ ಸಮರ್ಪಿತವಾದ ವಿಮಾನ ನಿಲ್ದಾಣಗಳು, ಅವುಗಳನ್ನು ತಲುಪಲು ವಿಶೇಷ ಮಾರ್ಗಗಳು, ರೈಲು ಜಾಲಬಂಧಗಳು, ಶುಷ್ಕ ರೇವು ಪಟ್ಟಣ ಹಾಗೂ ಬಂದರುಗಳು ಇತ್ಯಾದಿ ಅಧಿರಚನೆಗಳಲ್ಲಿ ಸಾಕಷ್ಟು ಹಣ ತೊಡಗಿಸಬೇಕು.

ಅಲ್ಲದೆ ರಾಜ್ಯಗಳು ಎಸ್‌ಇಜೆಡ್‌ಗಳಿಗೆ ಭೂಮಿಯನ್ನು ರಿಯಾಯಿತಿ ದರಗಳಲ್ಲಿ ಒದಗಿಸಬೇಕು. ಸರಕಾರೀ ಒಡೆತನದ ಭೂಮಿಗಳಿರದಿದ್ದಲ್ಲಿ ಸರಕಾರಗಳು ''ಸಾರ್ವಜನಿಕ ಹಿತದೃಷ್ಟಿಯಿಂದ'' ಇಲ್ಲವೇ ''ಪರಮಸ್ವಾಮ್ಯ'' ಹೆಸರಿನಲ್ಲಿ ೧೮೯೪ರ ಭೂಮಿ ಗಳಿಕೆ ಕಾಯಿದೆಯಡಿ ಖಾಸಗಿ ಭೂಮಿಗಳನ್ನು ಸ್ವಾಧೀನ ಪಡಿಸಿಕೊಳ್ಳತಕ್ಕದ್ದು.

ಒಂದೊಂದು ಎಸ್‌ಇಜೆಡ್‌ಗೂ ಒಬ್ಬೊಬ್ಬ ವಿಕಸನ ಕಮಿಷನರ್ ಮುಖ್ಯಸ್ಥನಾಗಿ ಇರುತ್ತಾನೆ. ಈತ ವಸ್ತುತಃ ಆ ವಲಯದ ಆಡಳಿತಾಧಿಕಾರಿ. ಈ ವಲಯಗಳ ಮೇಲಿನ ಆಡಳಿತದಲ್ಲಿ ಸ್ಥಳೀಯ ಅಥವಾ ರಾಜ್ಯ ಸರಕಾರಗಳಿಗೆ ಯಾವ ಪಾತ್ರವೂ ಇಲ್ಲ. ಎಲ್ಲ ಎಸ್‌ಇಜೆಡ್‌ಗಳನ್ನೂ ಅವುಗಳಲ್ಲಿನ ಎಲ್ಲ ಘಟಕಗಳನ್ನೂ ಸಾರ್ವಜನಿಕ ಬಳಕೆ ಸೇವಾ ಸಂಸ್ಥೆಗಳೆಂದು ಘೋಷಿಸಲಾಗಿದೆ. ಕೈಗಾರಿಕಾ ವಿವಾದ ಕಾಯಿದೆ ಮತ್ತಿತರ ಕಾರ್ಮಿಕ ನಿಯಮಗಳು ಇಲ್ಲಿ ಅನ್ವಯವಾಗವು. ಅದೇ ರೀತಿ ಬ್ಯಾಂಕ್ ನಿಯಮಗಳೂ ಅನ್ವಯವಾಗುವುದಿಲ್ಲ. ಹೀಗೆ ಎಸ್‌ಇಜೆಡ್‌ಗಳು ವಾಸ್ತವವಾಗಿ ಸುಂಕ ಮುಕ್ತಪರಾವೃತ ಪ್ರದೇಶಗಳು. ವ್ಯಾಪಾರ ನಿರ್ವಹಣೆ, ಸುಂಕಗಳು, ತೆರಿಗೆಗಳು, ನೀತಿ ನಿಯಮಗಳು, ಆಡಳಿತ – ಇವೆಲ್ಲವುಗಳಿಗೆ ಸಂಬಂಧಿಸಿಯೂ ಅವುಗಳನ್ನು ವಿದೇಶೀ ಭೂಭಾಗಗಳೆಂದೇ ಪರಿಗಣಿಸಲಾಗುತ್ತಿದೆ.

## ಚೀನೀ ಮಾದರಿ

ಸ್ಪಷ್ಟವಾಗಿಯೇ ಎಸ್‌ಇಜೆಡ್‌ಗಳು ಶೀಘ್ರ ಕೈಗಾರಿಕೀಕರಣಕ್ಕಾಗಿ ವಿದೇಶೀ ಬಂಡವಾಳ ಹೂಡಿಕೆಯನ್ನು ಆಕರ್ಷಿಸುವ ಚೀನೀ ಮಾದರಿಯನ್ನು ಆಧರಿಸಿವೆ. ಆದರೆ ಚೀನೀ ಸಂದರ್ಭವೇ ಬೇರೆ. ಅವರ ಮನೋಧರ್ಮವೇ ಭಿನ್ನ. ಅವು ಭಾರತಕ್ಕೆ ಎಷ್ಟು ಮಾತ್ರವೂ ಅನುಸರಣಯೋಗ್ಯವಲ್ಲ. ಚೀನವು ೧೯೭೮ರಲ್ಲಿ ಮಾರುಕಟ್ಟೆ ಸಮಾಜವಾದದತ್ತ ಸುಧಾರಣಾ ಮಾರ್ಗ ಹಿಡಿದ ಮೇಲೆ ವಿದೇಶೀ ಬಂಡವಾಳ ಹೂಡಿಕೆಯನ್ನು ಆಕರ್ಷಿಸುವ ಗುರಿಯನ್ನು ತನ್ನ ಮುಂದಿಟ್ಟುಕೊಂಡಿತು. ಆ ಕಾಲದಲ್ಲಿ ಚೀನಾದಲ್ಲಿದ್ದ ಸಮಾಜವಾದೀ ಆಡಳಿತ ವ್ಯವಸ್ಥೆಯಲ್ಲಿ ಸ್ಪಷ್ಟವಾಗಿ ನಿರೂಪಿತವಾದ ಕಾರ್ಮಿಕ ಕಾನೂನುಗಳಿರಲಿಲ್ಲ. ವ್ಯಾಪಾರ ಉದಾರೀಕರಣ, ಕಾಂಟ್ರಾಕ್ಟ್ ಹಾಗೂ ಲಾಭ ನಿಯಂತ್ರಣ ಕಾನೂನುಗಳಿರಲಿಲ್ಲ. ಇಂತಹ ಹಳೆಯ ಕಾಲದ ಹಿಂದುಳಿದ ಪರಿಸ್ಥಿತಿಯಲ್ಲಿ ವಿದೇಶೀ ಬಂಡವಾಳ ಹೂಡಿಕೆದಾರರು ಚೀನವನ್ನು ಪ್ರವೇಶಿಸಲು ಹಿಂದುಮುಂದು ನೋಡುತ್ತಿದ್ದರು. ಖಾಸಗಿ ಬಂಡವಾಳ ಹೂಡಿಕೆಗೆ ಯಾವ ರೀತಿಯ ಶಾಸನಯುತ ಅಡಚಣೆಗಳೂ ಇರುವುದಿಲ್ಲವೆಂಬುದನ್ನು ಖಚಿತ ಪಡಿಸಲು ಮತ್ತು ಚೀನವನ್ನು ಆಕರ್ಷಕ ಬಂಡವಾಳ ಹೂಡಿಕೆಯ ಗುರಿ ಕ್ಷೇತ್ರವನ್ನಾಗಿ ಮಾಡಲು ಚೀನವು ಕರಾವಳಿ ಪ್ರದೇಶದಲ್ಲಿ ಆರು ಪ್ರಧಾನ ಎಸ್‌ಇಜೆಡ್‌ಗಳನ್ನು ರಚಿಸಿತು. ವಿದೇಶೀ ಬಂಡವಾಳ ಹೂಡಿಕೆಗಾಗಿ ಭೂಮಿ, ಅಧಿರಚನೆ, ತೆರಿಗೆ ರಿಯಾಯಿತಿ ಮತ್ತಿತರ ಸೌಲಭ್ಯಗಳನ್ನು ಒದಗಿಸಿತು. ಆದರೆ ಭಾರತದಲ್ಲಿ ಮಾಡಿರುವಂತೆ ಚೀನಾದಲ್ಲಿ ಭೂಮಿಯನ್ನು ಖಾಸಗಿ ಹೂಡಿಕೆದಾರರಿಗೆ ವರ್ಗಾಯಿಸಲಿಲ್ಲ. ಭೂಮಿ ಮೇಲಿನ ಸ್ವಾಮ್ಯವನ್ನು ರಾಜ್ಯವೇ




ಬೆಂಗಳೂರು ಸೆಂಟ್ರಲ್ ಕಾಲೇಜು ಆವರಣದಲ್ಲಿರುವ ಸೆನೆಟ್ ಹಾಲ್‌ನಲ್ಲಿ ತಾ ೩೦-೧೨-೨೦೦೭ ರಂದು 'ಕೋಮುವಾದ ಮತ್ತು ಭಯೋತ್ಪಾದನೆಗಳ ವಿರುದ್ಧ ಹೋರಾಟ' - ಎಂಬ ವಿಷಯದ ಮೇಲೆ ವಿಚಾರ ಸಂಕಿರಣ ಜರುಗಿತು. ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ ಮತ್ತು 'ಹೊಸತು' ಪತ್ರಿಕೆಯ ಆಶ್ರಯದಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಪ್ರೊ|| ಕೆ. ಎನ್. ಪಣಿಕ್ಕರ್, ಪ್ರೊ|| ಸುಪ್ರಿಯ ರಾಯ್ ಚೌಧರಿ, ಪ್ರೊ|| ಲಿಂಗದೇವರು ಹಳೆಮನೆ ಮತ್ತು ಪ್ರಫುಲ್ ಬಿದ್ವಾಯ್ ಉಪನ್ಯಾಸಕರಾಗಿ ಭಾಗವಹಿಸಿದ್ದರು. ಶ್ರೋತೃಗಳು ಮತ್ತು ಭಾಷಣಕಾರರ ಮಧ್ಯೆ ಸಂವಾದ ಏರ್ಪಡಿಸಲಾಗಿತ್ತು. ಎಂ.ಎಸ್.ಕೆ. ಸ್ಮರಣ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಕೋ. ಚೆನ್ನಬಸಪ್ಪ ವಿಚಾರ ಸಂಕಿರಣದ ಅಧ್ಯಕ್ಷತೆ ವಹಿಸಿದ್ದರು. ಶ್ರೀ. ಕೆ. ಎಸ್. ಪಾರ್ಥಸಾರಥಿ ಪ್ರಾಸ್ತಾವಿಕ ನುಡಿಗಳನ್ನಾಡಿದರು. ಶ್ರೀಮತಿ ಸುರೇಖಾ ಶೆಟ್ಟಿ ವಂದನಾರ್ಪಣೆ ಮಾಡಿದರು.

ಉಳಿಸಿಕೊಂಡಿದ್ದಿತು. ಹೀಗೆ ಚೀನಾ ರಾಜ್ಯ ನಿಯಂತ್ರಣಕ್ಕೆ ಸಂಬಂಧಿಸಿ ಇದ್ದ ಅಸ್ಪಷ್ಟತೆಯನ್ನು ಹೋಗಲಾಡಿಸಿತು. ಭಾರಿ ವಿದೇಶೀ ಬಂಡವಾಳ ಹೂಡಿಕೆಯನ್ನು ಆಕರ್ಷಿಸಿತು. ಆರಂಭದಲ್ಲಿ ಈ ವಿದೇಶೀ ಬಂಡವಾಳ ಹೂಡಿಕೆ ಬಹುಮಟ್ಟಿಗೆ ಹಾಂಗ್‌ಕಾಂಗ್‌ನಲ್ಲಿದ್ದ ಚೀನೀ ಜನಾಂಗದವರಿಂದ ಆಯಿತು. ಆದರೆ ಆಂತರಿಕ ಪ್ರದೇಶಗಳಿಂದ ಚೀನಾ ಪ್ರತಿಭಟನೆಯನ್ನು ಎದುರಿಸಬೇಕಾಗಿ ಬಂದಿತು. ಕರಾವಳಿ ಪ್ರದೇಶಗಳಲ್ಲಿನ ಎಸ್‌ಇಜೆಡ್‌ಗಳಲ್ಲಿದ್ದ ರಿಯಾಯಿತಿಗಳು ಈ ಆಂತರಿಕ ಪ್ರದೇಶಗಳಲ್ಲಿರದಿದ್ದ ಕಾರಣ ಅವು ಹೆಚ್ಚು ಬಂಡವಾಳ ಹೂಡಿಕೆಯನ್ನು ಆಕರ್ಷಿಸಲು ಅಸಮರ್ಥವಾದವು. ಇದರ ಫಲವಾಗಿ ಚೀನಾ ಎಸ್‌ಇಜೆಡ್‌ಗಳಲ್ಲಿ ಆಚರಣೆಗೆ ತಂದಿದ್ದ ರಿಯಾಯಿತಿಗಳನ್ನು ಪುನರ್‌ವಿಮರ್ಶಿಸಬೇಕಾಯಿತು.

ಚೀನೀ ಪರಿಸ್ಥಿತಿಯೇ ಬೇರೆ. ಸುಧಾರಣಾ ನಂತರದ ಭಾರತದಲ್ಲಿ ವಿದೇಶೀ ಅಥವಾ ಸ್ವದೇಶೀ ಬಂಡವಾಳ ಹೂಡಿಕೆಗೆ ಸಂಬಂಧಿಸಿ ಯಾವ ರೀತಿಯ ನಿರ್ಬಂಧಗಳೂ ಇಲ್ಲ. ಬದಲಾಗಿ ಅನೇಕ ಹಣಕಾಸು ಉತ್ತೇಜಕಗಳನ್ನು ನೀಡಲಾಗಿದೆ. ಕಾರ್ಮಿಕ ಕಾನೂನುಗಳನ್ನು ಸಡಿಲಗೊಳಿಸಲಾಗಿದೆ. ಸಮಾಚಾರ ತಂತ್ರಜ್ಞಾನ (ಐಟಿ)ದಂಥ ಕ್ಷೇತ್ರಗಳಲ್ಲಿ ಬಂಡವಾಳ ಹೂಡಿಕೆಗೆ ರಿಯಾಯಿತಿಗಳನ್ನು ನೀಡಲಾಗಿದೆ. ತೀರ ಈಚೆಗೆ, ೨೦೦೦ದಷ್ಟು ಈಚೆಗೆ, ಎಸ್‌ಇಜೆಡ್ ನೀತಿಯನ್ನು ಜಾರಿಗೆ ತಂದಿರುವುದು ಸ್ಪಷ್ಟವಾಗಿಯೇ ಭಾರತದ ಜನರ ಮೇಲೆ ಎಸಗಿದ ಪೂರ್ವ ನಿಯೋಜಿತ ವಂಚನೆಯಾಗಿದೆ. ಕಾರ್ಪೊರೇಟ್ ವಿಭಾಗ ಹಾಗೂ ಆಡಳಿತಾರೂಢ ರಾಜಕೀಯ ಪಕ್ಷಗಳ ನಡುವಿನ ಮೈತ್ರೀ ಕೂಟದ ಮೋಸಕೃತ್ಯವಾಗಿದೆ. ಮುಕ್ತ ವ್ಯಾಪಾರ ಹಾಗೂ ಉದಾರೀಕರಣದ ಉತ್ಸಾಹೀ ಬೆಂಬಲಿಗರಲ್ಲೊಬ್ಬರಾದ ಪ್ರೊ|| ಜಗದೀಶ ಭಗವತಿಯವರು ಭಾರತದಲ್ಲಿನ ಎಸ್‌ಇಜೆಡ್‌ಗಳ ಬಗೆಗೆ ಭಾರಿ ಟೀಕೆ ಮಾಡಿದ್ದಾರೆ. ಉದಾರೀಕರಣದಲ್ಲಿ ಭಾರತವು ಚೀನಾದಿಂದ ಏನೂ ಪಾಠ ಕಲಿಯಬೇಕಾಗಿಲ್ಲವೆಂದು ಅವರು ಭಾವಿಸುತ್ತಾರೆ. ಚೀನವು ಎಸ್‌ಇಜೆಡ್‌ಗಳ ಮೂಲಕ ಮುಕ್ತತೆಯನ್ನು ಪ್ರವೇಶಿಸಿದಲ್ಲಿ ಭಾರತವು ಮುಕ್ತತೆಯಿಂದ ಎಸ್‌ಇಜೆಡ್ ಪ್ರವೇಶಿಸುತ್ತಿದೆ, ಎಂಬುದೇ ಅವರ ಟೀಕೆಗೆ ಕಾರಣವಾಗಿದೆ. ''ಎಸ್‌ಇಜೆಡ್‌ಗಳು ಹೆಚ್ಚು ಮುಕ್ತತೆಗೆ ಏರಲು ನೆರವಾಗುವ ಒಂದು ರೀತಿಯ ಸಾರುವೆಕಟ್ಟುಗಳಿದ್ದಂತೆ. ಆದರೆ ನಮ್ಮಲ್ಲಾಗಲೇ ನಿರ್ಮಿತ ಕಟ್ಟಡವೇ ಇರುವಾಗ ಸಾರುವೆಕಟ್ಟೆ ಏಕೆ ಬೇಕು ?... ಹಾಗಾಗಿ ಇದೊಂದು ಹಿಂದಕ್ಕಿಟ್ಟ ಹೆಜ್ಜೆಯಾಗಿದೆ.'' ರಾಜಕಾರಣಿಗಳೂ ಅಧಿಕಾರಶಾಹಿಗಳೂ ಎಸ್‌ಇಜೆಡ್‌ಗಳ ಹೆಸರಿನಲ್ಲಿ ಪ್ರತಿಫಲಾಕಾಂಕ್ಷಿಗಳಾಗಿ ಭೂಮಿ ಕಬಳಿಸುತ್ತಿದ್ದಾರೆ ಎಂದೂ ಅವರು ಭಾವಿಸುತ್ತಾರೆ.

೧೮೯೪ರ ಭೂಮಿ ಗಳಿಕೆ ಕಾಯಿದೆಯ ಮೊರೆ ಹೊಕ್ಕು 'ಸಾರ್ವಜನಿಕ ಹಿತ'ದ ಹೆಸರಿನಲ್ಲಿ ಎಸ್‌ಇಜೆಡ್‌ಗಳಿಗಾಗಿ ಭೂಸ್ವಾಧೀನಮಾಡಿಕೊಳ್ಳುತ್ತಿರುವುದು ಆ ಕಾಯಿದೆಯ ಅಂತಸ್ಸಾರದ ನಿರ್ಲಜ್ಜ ಉಲ್ಲಂಘನೆಯಾಗಿದೆ. ಇದರಲ್ಲಿ ರಸ್ತೆಗಳಂಥ, ಶಾಲೆಗಳಂಥ 'ಸಾರ್ವಜನಿಕ ಉದ್ದೇಶ'ವೇನೂ ಇಲ್ಲ. ಎಸ್‌ಇಜೆಡ್‌ಗಳಲ್ಲಿ ಭೂಮಿಯನ್ನು ಬಂಡವಾಳ ಹೂಡಿಕೆದಾರರ ಲಾಭಕ್ಕಾಗಿ ಪಡೆದುಕೊಳ್ಳಲಾಗುತ್ತಿದೆ. ಕೃಷಿ

ಸಮುದಾಯದ ಜೀವನಾಧಾರವನ್ನೇ ಕಸಿದುಕೊಂಡು ಇದನ್ನು ಸಾಧಿಸಲಾಗುತ್ತಿದೆ. ಕೃಷಿಕರು ತಾವು ಸಲ್ಲಿಸಿದ ಭೂಮಿಗೆ ಪ್ರತಿಯಾಗಿ ಎಷ್ಟು ಮಾತ್ರವೂ ಔಚಿತ್ಯವೆನ್ನುವಷ್ಟು ಪರಿಹಾರವನ್ನು ಪಡೆಯುತ್ತಿಲ್ಲ ಅಥವಾ ಸ್ಥಿರ ಜೀವನೋಪಾಯಕ್ಕಾಗಿ ಪರ್ಯಾಯ ಆಕರಗಳನ್ನೂ ಪಡೆಯುತ್ತಿಲ್ಲ. ಪಶ್ಚಿಮ ಬಂಗಾಳದಲ್ಲಿ ನಂದೀಗ್ರಾಮ ಹಾಗೂ ಸಿಂಗೂರ್, ಒರಿಸ್ಸಾದಲ್ಲಿ ಕಳಿಂಗನಗರ, ಹರಿಯಾಣದಲ್ಲಿ ಝಜ್ಜಾರ್, ಮಹಾರಾಷ್ಟ್ರದಲ್ಲಿ ರಾಯಘಡ ಮತ್ತು ಇತರ ಇನ್ನೂ ಅನೇಕ ಪ್ರದೇಶಗಳಲ್ಲಿ ಜರುಗಿದಂತೆ ಕೃಷಿಕರ ಅಥವಾ ಆದಿವಾಸಿಗಳ ಪ್ರತಿಭಟನೆಗಳನ್ನು ಮೃಗೀಯವಾಗಿ ಹತ್ತಿಕ್ಕಿರುವುದು ಸುಧಾರಣಾಕಾಂಕ್ಷಿ ಆಡಳಿತಾಂಗದ ಸರ್ವಾಧಿಕಾರಿ ದಬ್ಬಾಳಿಕೆಗೆ ಸ್ಪಷ್ಟ ಸೂಚನೆಯಾಗಿದೆ.

ಎಸ್‌ಇಜೆಡ್‌ನ ಪ್ರೋತ್ಸಾಹಕರಲ್ಲಿ ಅನೇಕರು ಮುಚ್ಚುಮರೆಯಿಲ್ಲದ ಎಸ್ಟೇಟ್ ಏಜಂಟರುಗಳಾಗಿದ್ದಾರೆಂಬುದು ಹೆಚ್ಚು ಹೆಚ್ಚಾಗಿ ಸ್ಪಷ್ಟವಾಗುತ್ತಿದೆ. ಎಸ್‌ಇಜೆಡ್‌ಗಳಲ್ಲಿ ಭೂಬಳಕೆ ವಿಧಿ ಕಟ್ಟಳೆಗಳೂ ರಿಯಲ್ ಎಸ್ಟೇಟ್‌ದಾರರ ಹಿತಗಳ ಪರವಾಗಿಯೇ ಇವೆ. ಉದಾಹರಣೆಗೆ, ಏಕ - ಉತ್ಪನ್ನ ಎಸ್‌ಇಜೆಡ್‌ಗಳ ಪ್ರಸಂಗದಲ್ಲಿ ಒಟ್ಟು ಭೂಮಿಯಲ್ಲಿ ಉತ್ಪಾದನೆಗೆ ಬಳಸಲಾಗುತ್ತಿರುವ ಭೂಮಿಯ ಪ್ರಮಾಣ ಶೇ. ೩೫ ಅಷ್ಟೆ ಆಗಿದ್ದಲ್ಲಿ, ಬಹು - ಉತ್ಪನ್ನ ಎಸ್‌ಇಜೆಡ್‌ಗಳಲ್ಲಿ ಇದು ಕೇವಲ ಶೇ.೨೫ (ಈ ಪ್ರಮಾಣದಲ್ಲಿ ಈಚೆಗೆ ಸ್ವಲ್ಪ ಬದಲಾವಣೆ ಮಾಡಲಾಗಿದೆಯೆನ್ನಿ). ಅಂದರೆ ಉತ್ಪಾದನೆ ಬಿಟ್ಟು ಉಳಿದ ಭೂಮಿಯನ್ನೆಲ್ಲ ಗೋಲ್ಫ್ ಆಟದ ಮೈದಾನಗಳು, ರೆಸಾರ್ಟ್‌ಗಳು, ಹೋಟಲುಗಳು, ಕಾರ್ಪೊರೇಟ್ ಆಸ್ಪತ್ರೆಗಳು ಇತ್ಯಾದಿ ನಾನಾ ರೀತಿಯ ರಿಯಲ್ ಎಸ್ಟೇಟ್ ಉದ್ದೇಶಗಳಿಗಾಗಿ ವಿಕಾಸಗೊಳಿಸಲಾಗುತ್ತಿದೆ ಎಂದರ್ಥ ವಾಗುತ್ತದೆ. ನಂದಿಗ್ರಾಮದಲ್ಲಿನ ಬೆಳವಣಿಗೆಗಳ ಬಗೆಗೆ ವ್ಯಾಖ್ಯಾನಿಸುತ್ತ ಹೆಸರಾಂತ ಇತಿಹಾಸತಜ್ಞ ಸುಮಿತ್ ಸರ್ಕಾರ್‌ರವರು ''ಎಸ್‌ಇಜೆಡ್ ನೀತಿಯು ಆಧುನಿಕ ಭಾರತದ ಇತಿಹಾಸದಲ್ಲೇ ಅತ್ಯಂತ ಭಾರಿ ಭೂ ಕಬಳಿಕೆ ಚಳವಳಿಯಾಗಿದೆ'' ಎಂದು ಹೇಳಿದ್ದಾರೆ. ಈ ಭಾರಿ ಸಿರಿವಂತ ಕಾರ್ಪೊರೇಟ್ ವಿಭಾಗದವರು ಬಡ ರೈತಾಪಿ ಜನರ ಭೂಮಿಯನ್ನು ಕಬಳಿಸುತ್ತಿದ್ದಾರೆ.


**ಸಮಸ್ತ ಪುಸ್ತಕಪ್ರೇಮಿಗಳಿಗೆ ಹೊಸ ವರ್ಷದ ಶುಭಾಶಯಗಳು**

**ವಿಶ್ವಕವಿ, ವರಕವಿ, ಜ್ಞಾನಪೀಠ ಪ್ರಶಸ್ತಿ ವಿಜೇತ ಡಾ॥ ದ. ರಾ. ಬೇಂದ್ರೆಯವರ ಕೃತಿಗಳು**

| | | | |
|---|---|---|---|
| 1. ನಾಕುತಂತಿ | 60.00 | 10. ನೂರು ಮರ ನೂರು ಸ್ವರ ಒಂದೊಂದು ಅತಿ ಮಧುರ (ಜನಪ್ರಿಯ ಗೀತೆಗಳ ಸಂಕಲನ) | 140.00 |
| 2. ಗರಿ | 75.00 | 11. ಕುಣಿಯೋಣ ಬಾ | 15.00 |
| 3. ನಾದಲೀಲೆ | 45.00 | 12. ಉತ್ತರಾಯಣ | 60.00 |
| 4. ಸಖೀಗೀತ | 60.00 | 13. ಚತುರೋಕ್ತಿ ಮತ್ತು ಇತರ ಕವನಗಳು | 40.00 |
| 5. ಶ್ರೀಮಾತಾ | 50.00 | 14. ಸಂಚಯ | 60.00 |
| 6. ಮುಗಿಲ ಮಲ್ಲಿಗೆ | 60.00 | 15. ಯಕ್ಷ ಯಕ್ಷಿ | 60.00 |
| 7. ಶತಮಾನ | 130.00 | | |
| 8. ಕಾವ್ಯ ವೈಖರಿ | 45.00 | | |
| 9. ಮರ್ಯಾದೆ | 60.00 | | |

**ಡಿಸೆಂಬರ್ 2007ರಲ್ಲಿ ಬಿಡುಗಡೆ ಆಗಿರುವ ನಮ್ಮ ಪ್ರಕಾಶನದ ಹೊಸ ಪುಸ್ತಕಗಳು**

| | | | |
|---|---|---|---|
| 1. ಭನ್ನ ಮಸ್ತಾ (ಜ್ಞಾನಪೀಠ ಪುರಸ್ಕೃತ ಲೇಖಕಿಯರ ಕೃತಿ) | 120.00 | 5. ಮಕ್ಕಳಿಗಾಗಿ ವಿವಿಧ ದೇಶಗಳ ಜಾನಪದ ಕಥೆಗಳು | 40.00 |
| 2. ಸುಣ್ಣ ಬಳಿದ ಸಮಾಧಿಗಳು | 100.00 | 6. ಜೋಕ್ಸ್ - ಸಾಗರ | 175.00 |
| 3. ಹಳದಿಹೂ/ಮೂರನೇ ಸಾಕ್ಷೀದಾರ (ಓರ್ವ ಲೇಖಕರ ಎರಡು ಕಾದಂಬರಿಗಳು) | 90.00 | 7. ನಲ್ಲನಲ್ಲೆಯರ ಕಿಸ್ ಜೋಕ್ಸ್ | 60.00 |
| 4. ಎಚ್ಚರದ ಕನಸು | 50.00 | 8. ಬದುಕು-ಭರವಸೆ | 75.00 |
| | | 9. ಯಕ್ಷಗಾನ ಬಯಲಾಟ | 175.00 |
| | | 10. ಜನಸಂಸ್ಕೃತಿ ಶೋಧ | 75.00 |

ಸಮಗ್ರ ಕಾವ್ಯ ಆರು ಬೃಹತ್ ಸಂಪುಟಗಳಲ್ಲಿ (3372 ಪುಟಗಳು) ಬೆಲೆ : ರೂ. 2100.00

ಔದುಂಬರ ಗಾಥೆ ಭಾಗ-7 ಬೆಲೆ : ರೂ.300.00
ಔದುಂಬರ ಗಾಥೆ ಭಾಗ-8 ಬೆಲೆ : ರೂ.200.00

**ರವೀಂದ್ರ ಪುಸ್ತಕಾಲಯ**

ಪ್ರಕಾಶಕರು, ಸಗಟು ಪುಸ್ತಕ ವ್ಯಾಪಾರಿಗಳು

ಚಾಮರಾಜಪೇಟೆ, ಸಾಗರ – 577401 (ಶಿವಮೊಗ್ಗ ಜಿಲ್ಲೆ) ✆ 08183-228616


## ಆದಾಯ ನಷ್ಟ – ಬುಡಮೇಲಾದ ಆದ್ಯತೆಗಳು

ಎಸ್‌ಇಜೆಡ್‌ಗಳಿಂದಾಗಿ ಆಗುತ್ತಿರುವ ವರಮಾನ ನಷ್ಟಗಳನ್ನು ತಪ್ಪಾಗಿ ಅಂದಾಜು ಮಾಡಲಾಗಿದೆ ಎಂದು ಹೇಳಲಾಗುತ್ತದೆ. ಆದರೆ ಉದಾರೀಕರಣದ ಅತ್ಯಂತ ಭಾರಿ ಪ್ರತಿಪಾದಕ ಸಂಸ್ಥೆ 'ಅಂತಾರಾಷ್ಟ್ರೀಯ ಧನ ನಿಧಿ' (ಐಎಂಎಫ್) ಸಂಸ್ಥೆ ಕೂಡ, ತೆರಿಗೆ ಆದಾಯದಲ್ಲಿ ತುಂಬಲಾಗದ ನಷ್ಟ ಆಗುವ ಕಾರಣದಿಂದಾಗಿ ಎಸ್‌ಇಜೆಡ್ ನೀತಿಯನ್ನು ಕಟುವಾಗಿ ಟೀಕಿಸಿದೆ. ಭಾರತ ಸರಕಾರದ ಹಣಕಾಸು ಸಚಿವಾಲಯವೂ ಎಸ್‌ಇಜೆಡ್ ನೀತಿಯನ್ನು ಟೀಕಿಸಿದೆ. ಈ ನೀತಿಯ ತೆರಿಗೆ ರಿಯಾಯಿತಿಗಳಿಂದಾಗಿ ೨೦೦೯-೧೦ರ ಹೊತ್ತಿಗೆ ಸರಕಾರಕ್ಕೆ ಆಗುವ ವರಮಾನ ನಷ್ಟ ರೂ. ೯೦,೦೦೦ ಕೋಟಿಯಿಂದ ರೂ.೧.೭ಲಕ್ಷ ಕೋಟಿ ಆಗಬಹುದೆಂದು ಅದು ಅಂದಾಜು ಮಾಡಿದೆ. ಈ ವರಮಾನ ನಷ್ಟ ಹಾಗಿರಲಿ, ರಾಜ್ಯ ಸರಕಾರಗಳು ಈ ಎಸ್‌ಇಜೆಡ್ ಘಟಕಗಳಿಗಾಗಿ ಅಧಿರಚನೆಯ ಅಗತ್ಯಗಳನ್ನೂ ತಾವೇ ಪೂರೈಸಿಕೊಡುವುದಾಗಿ ವಚನಬದ್ಧವಾಗಿವೆ. ಹೀಗೆ ಒಂದು ಕಡೆ ವರಮಾನ ನಷ್ಟ ಆಗುತ್ತಿದ್ದಲ್ಲಿ ಇನ್ನೊಂದು ಕಡೆ ಕಾರ್ಪೊರೇಟ್ ವಿಭಾಗದ ಸೌಲಭ್ಯವರ್ಧನೆಗಾಗಿ ಹೆಚ್ಚು ಹೆಚ್ಚು ಸಾರ್ವಜನಿಕ ಸಂಪನ್ಮೂಲಗಳನ್ನು ಖರ್ಚು ಮಾಡಲಾಗುತ್ತಿದೆ. ಇದರ ಫಲವಾಗಿ ಕೃಷಿಯಂಥ ಅತ್ಯಗತ್ಯ ವಿಭಾಗಗಳಲ್ಲಿ ಹಣ ಹೂಡಿಕೆಗೆ ರಾಜ್ಯಗಳ ಬಳಿ ಸಂಪನ್ಮೂಲಗಳೇ ಇಲ್ಲದಿರುವುದರಲ್ಲಿ ಆಶ್ಚರ್ಯವೇನಿಲ್ಲ! ಇಷ್ಟೊಂದು ಭಾರಿ ಪ್ರಮಾಣದಲ್ಲಿ ವಿನಾಯಿತಿಗಳನ್ನೂ ಉತ್ತೇಜಕಗಳನ್ನೂ ನೀಡುತ್ತಿರುವುದರಿಂದಾಗಿ, ಎಸ್‌ಇಜೆಡ್‌ಗಳಲ್ಲಿ ಹಾಕಲಾಗುವ ಬಂಡವಾಳದಲ್ಲಿ ಹೆಚ್ಚಿನ ಭಾಗವು ಈಗಿರುವ ಘಟಕಗಳಲ್ಲಿನ ಬಂಡವಾಳವನ್ನೇ ಬೇರೆಡೆ ತೊಡಗಿಸಿದಂತಹುದು ಆಗುವುದೇ ಹೊರತು ಹೊಸ ಬಂಡವಾಳ ಹೂಡಿಕೆಯೇನೂ ಆಗುವುದಿಲ್ಲ ಎಂಬ ಅಂಜಿಕೆ ಇದೆ. ಇದು ಈಗಾಗಲೇ ಕೆಲವು ಐಟಿ (ಸಮಾಚಾರ ತಂತ್ರಜ್ಞಾನ), ಉಡುಪು ಹಾಗೂ ವಜ್ರ ಸಂಸ್ಕರಣ ಸಂಸ್ಥೆಗಳ ಪ್ರಸಂಗಗಳಲ್ಲಿ ಎದ್ದು ಕಾಣುತ್ತಿದೆ.

## ಪ್ರಾದೇಶಿಕ ಅಸಮಾನತೆಗಳ ವಿಸ್ತರಣೆ

ಎಸ್‌ಇಜೆಡ್ ನೀತಿಯು ಪ್ರಾದೇಶಿಕ ಅಸಮಾನತೆಗಳ ಮೇಲೆ ಉಂಟು ಮಾಡುತ್ತಿರುವ ಪ್ರಭಾವದ ಬಗೆಗೆ ಭಾರತದ ರಿಸರ್ವ್ ಬ್ಯಾಂಕ್ ಅತೀವ ಕಾಳಜಿ ವ್ಯಕ್ತ ಪಡಿಸಿದೆ. ಏಕೆಂದರೆ ಹೆಚ್ಚಿನ ಎಸ್‌ಇಜೆಡ್‌ಗಳು ಆಗಲೇ ವಿಕಸಿತವಾದ ಪ್ರದೇಶಗಳಲ್ಲೇ ಸ್ಥಾಪಿತವಾಗುತ್ತಿವೆ. ಇದುವರೆವಿಗೂ ಪ್ರಕಟಿಸಲಾಗಿರುವ ೧೪೧ ಎಸ್‌ಇಜೆಡ್‌ಗಳಲ್ಲಿ ೧೦೬ ಎಸ್‌ಇಜೆಡ್‌ಗಳು ಐದು ರಾಜ್ಯಗಳಲ್ಲಷ್ಟೆ.. ಆಂಧ್ರ ಪ್ರದೇಶ (೪೨), ಮಹಾರಾಷ್ಟ್ರ (೧೯), ತಮಿಳುನಾಡು (೧೮), ಕರ್ನಾಟಕ (೧೬) ಹಾಗೂ ಗುಜರಾತ್ (೧೧)ಗಳಲ್ಲಷ್ಟೆ – ಇವೆ. ಬಿಹಾರ್, ಅಸ್ಸಾಂ ಅಥವಾ ಇತರ ಯಾವುದೇ ಈಶಾನ್ಯ ರಾಜ್ಯದಲ್ಲೂ ಎಸ್‌ಇಜೆಡ್‌ಗಳು ಇಲ್ಲವೇ ಇಲ್ಲ. ರಾಜಸ್ಥಾನ ಹಾಗೂ ಒರಿಸ್ಸಾದಲ್ಲಿ ಒಂದೊಂದು ಇದೆ. ಉತ್ತರ ಪ್ರದೇಶದ ಆರು ಎಸ್‌ಇಜೆಡ್‌ಗಳೂ ವಾಸ್ತವವಾಗಿ ದಿಲ್ಲಿಯ ಸುತ್ತಮುತ್ತ, ನೋಯ್ಡ ಹಾಗೂ ಗಾಜಿಯಾಬಾದ್‌ಗಳಲ್ಲಿವೆ. ಭಾರತ ಸರಕಾರದ ವಾಣಿಜ್ಯ ರಾಜ್ಯ ಸಚಿವ ಜೈರಾಮ್ ರಮೇಶ್‌ರವರೂ ತಮ್ಮ ಅಂಜಿಕೆಯನ್ನು ಈ ಮಾತುಗಳಲ್ಲಿ ವ್ಯಕ್ತಪಡಿಸಿದ್ದಾರೆ: ''...ಎಸ್‌ಇಜೆಡ್‌ಗಳು ಡಿಜಿಟಲ್ ಡಿವೈಡ್ (ಅಂಕಾತ್ಮಕವಿಭಜನೆ)ಯನ್ನು ಹೆಚ್ಚಿಸುತ್ತಿವೆಯೆಂದೇ ಕಂಡುಬರುತ್ತದೆ... ಈಗ ಪ್ರಕಟಿಸಲಾಗಿರುವ ೧೪೨ ಎಸ್‌ಇಜೆಡ್‌ಗಳಲ್ಲಿ ೮೬ ಎಸ್‌ಇಜೆಡ್‌ಗಳು ಐಟಿ ಹಾಗೂ ಐಟಿಇಎಸ್‌ಗಳಲ್ಲೇ ಇವೆ. ಈ ೮೬ರಲ್ಲೂ ಹೆಚ್ಚಿನವು ಮುಂದುವರಿದವೆಂದು ಬಣ್ಣಿಸಲಾಗುವ ರಾಜ್ಯಗಳಲ್ಲೇ ಆಂಧ್ರ ಪ್ರದೇಶದಲ್ಲಿ ೨೬, ತಮಿಳುನಾಡಿನಲ್ಲಿ ೧೪, ಕರ್ನಾಟಕದಲ್ಲಿ ೧೪, ಮಹಾರಾಷ್ಟ್ರದಲ್ಲಿ ೧೦– ಇವೆ. ಅಂದರೆ ಒಟ್ಟಿನಲ್ಲಿ ಶೇ.೮೦ರಷ್ಟು ಎಸ್‌ಇಜೆಡ್‌ಗಳು ಈ ನಾಲ್ಕು ರಾಜ್ಯಗಳಲ್ಲೇ ಇವೆ.'' ಬಂಡವಾಳ ಹೂಡಿಕೆಗೆ ಉತ್ತೇಜಕಗಳ ಮುಖ್ಯ ಗುರಿಗಳಲ್ಲೊಂದು ಶ್ರಮತೀವ್ರತೆಯ ಕೈಗಾರಿಕೀಕರಣಕ್ಕೆ ಪ್ರೋತ್ಸಾಹ ನೀಡುವುದಾಗಿವೆ. ೧೪೧ ಅನುಮೋದಿತ ಎಸ್‌ಇಜೆಡ್‌ಗಳು ೫ ದಶಲಕ್ಷದಷ್ಟು ಪ್ರತ್ಯಕ್ಷ ಹಾಗೂ ಪರೋಕ್ಷ ಉದ್ಯೋಗಗಳನ್ನು ಸೃಷ್ಟಿಸುವುವೆಂದು ಯೋಜನೆ ತಿಳಿಸುತ್ತದೆ. ಆದರೆ ಇದುವರೆವಿಗೂ ಕೇವಲ ೦.೧೮ ದಶಲಕ್ಷ ಅಂಥ ಉದ್ಯೋಗಗಳು ಸೃಷ್ಟಿತವಾಗಿವೆ. ಅದೂ ಬೆರಳೆಣಿಕೆಯಷ್ಟು ರಾಜ್ಯಗಳಲ್ಲಿ. ೨೦೦೦ದ ಏಪ್ರಿಲ್‌ನಲ್ಲಿ ಎಸ್‌ಇಜೆಡ್ ನೀತಿಯನ್ನು ಪ್ರಕಟಿಸಲಾದುದಕ್ಕೆ ಮುನ್ನ ತಾವು ಉತ್ಪಾದಿಸಿದ ಉತ್ಪನ್ನಗಳಲ್ಲಿ ಇಂತಿಷ್ಟು ರಫ್ತು ಮಾಡಿ ದೇಶಕ್ಕೆ ಹೆಚ್ಚಿನ ವಿದೇಶೀ ವಿನಿಮಯ ಒದಗಿಸಿಕೊಡುವಂಥ ಏಳು ರಫ್ತು – ಉತ್ತೇಜಕ ವಲಯ (ಇಪಿಜೆಡ್)ಗಳು ಇದ್ದವು. ಇವನ್ನೆಲ್ಲ ಯೂನಿಯನ್ ಸರಕಾರವೇ ಸ್ಥಾಪಿಸಿದ್ದಿತು. ಇವುಗಳಲ್ಲಿ ೮೭೯ ಘಟಕಗಳಿದ್ದವು. ಅವು ೧.೬೯ ಲಕ್ಷ ಕಾರ್ಮಿಕರಿಗೆ ಕೆಲಸ ಒದಗಿಸಿದ್ದವು. ಈ ಎಲ್ಲ

ಟಕಗಳೂ ವಿಶಿಷ್ಟ ರಫ್ತು - ಜವಾಬ್ದಾರಿಗಳನ್ನು ಪಡೆದಿದ್ದವು. ಈಗ ಇವನ್ನೂ ಸ್‌ಇಜೆಡ್‌ಗಳ ಕೆಳಗೆ ತರಲಾಗಿದೆ. ಈಗ ಹಳೆಯ ಅಥವಾ ಹೊಸ ಎಸ್‌ಇಜೆಡ್‌ಗಳಿಗೆ ಫ್ತು ಉತ್ತೇಜಕ ಜವಾಬ್ದಾರಿಗಳೇನೂ ಇಲ್ಲವೇ ಇಲ್ಲ.

**ರಾಜ್ಯಗಳ ನಡುವೆ ಪ್ರಕಟಿತ ಎಸ್‌ಇಜೆಡ್‌ಗಳ ಹಂಚಿಕೆ**
(೨೦೦೭ರ ನವೆಂಬರ್ ೨೯ರಲ್ಲಿ ಇದ್ದಂತೆ)

| ರಾಜ್ಯ | ಪ್ರಕಟಿತ ಎಸ್‌ಇಜೆಡ್‌ಗಳ ಸಂಖ್ಯೆ |
|---|---|
| ೧. ಆಂಧ್ರಪ್ರದೇಶ | ೪೨ |
| ೨. ಚಂದೀಘಡ | ೧ |
| ೩. ಗೋವಾ | ೨ |
| ೪. ಗುಜರಾತ್ | ೧೧ |
| ೫. ಹರಿಯಾಣ | ೮ |
| ೬. ಜಾರ್ಖಂಡ್ | ೧ |
| ೭. ಕರ್ನಾಟಕ | ೧೬ |
| ೮. ಕೇರಳ | ೮ |
| ೯. ಮಧ್ಯ ಪ್ರದೇಶ | ೩ |
| ೧೦. ಮಹಾರಾಷ್ಟ್ರ | ೧೯ |
| ೧೧. ಒರಿಸ್ಸಾ | ೧ |
| ೧೨. ಪಂಜಾಬ್ | ೨ |
| ೧೩. ರಾಜಾಸ್ಥಾನ | ೧ |
| ೧೪. ತಮಿಳುನಾಡು | ೧೮ |
| ೧೫. ಉತ್ತರ ಪ್ರದೇಶ | ೬ |
| ೧೬. ಪಶ್ಚಿಮ ಬಂಗಾಳ | ೨ |
| **ಒಟ್ಟು** | ೧೪೧ |

ಕರ: ವಾಣಿಜ್ಯ ಹಾಗೂ ಕೈಗಾರಿಕಾ ಸಚಿವಾಲಯ, ವಾಣಿಜ್ಯ ಇಲಾಖೆ, ನವದೆಹಲಿ

ಭಾರತವು ಕೈಗಾರಿಕೀಕರಣದಲ್ಲಿ ಹಿಂದೆಬಿದ್ದಿದೆ ಹಾಗೂ ಅದು ಜಗತ್ತಿನಲ್ಲೇ ತ್ಯಂತ ಕಡಿಮೆ ನಗರೀಕೃತ ದೇಶಗಳಲ್ಲೊಂದಾಗಿದೆ ಎಂಬುದು ನಿಜ. ಸ್ವಾತಂತ್ರ್ಯ ಂದು ಆರು ದಶಕಗಳ ನಂತರವೂ ಇಂದು ರಾಷ್ಟ್ರೀಯ ಆದಾಯ (ಜೆಡಿಪಿ)ದಲ್ಲಿ ಗಾರಿಕೆಯ ಪಾಲು ಸುಮಾರು ಶೇ.೨೦ ಅಷ್ಟೆ ಆಗಿದೆ. ಇದನ್ನು ಕನಿಷ್ಠ ಪಕ್ಷ ಶೇ.೩೦ಕ್ಕೆ ರಿಸಬೇಕಾದುದು ಅತ್ಯಗತ್ಯ. ಕಳೆದ ಅರ್ಧ ಶತಮಾನದಲ್ಲಿ ದೇಶದ ಒಟ್ಟು ನಸಂಖ್ಯೆಯಲ್ಲಿ ಪಟ್ಟಣಗಳಲ್ಲಿನ ಜನಸಂಖ್ಯೆಯ ಪಾಲು ಶೇ.೧೦ರಷ್ಟು ಅಷ್ಟೆ– ೀ.೧೮ರಿಂದ ಶೇ.೨೮ಕ್ಕೆ ಏರಿದೆ. – ಇದು ಜಗತ್ತಿನಲ್ಲೇ ಅತ್ಯಂತ ಕಡಿಮೆ ನಗರೀಕರಣ ಟ್ಟವಾಗಿದೆ. ಕಳೆದ ಐವತ್ತು ವರ್ಷಗಳಲ್ಲಿ ಏನು ಜರುಗಿತೋ ಅದೇ ಮುಂದಿನ ೧೫ ರ್ಷಗಳಲ್ಲೂ ಸಂಭವಿಸುವ ಸಾಧ್ಯತೆ ಇದೆ– ನಗರೀಕರಣವು ಸುಮಾರು ಶೇ.೪೦ರ ಟ್ಟ ತಲುಪಬಹುದು. ಇವೆಲ್ಲವುಗಳ ಫಲವಾಗಿ ಭೂಮಿಯನ್ನು ಸ್ವಾಧೀನಪಡಿಸಿ ೊಳ್ಳುವ ಒತ್ತಡ ಹೆಚ್ಚಲಿರುವುದು. ಭೂಮಿ ಹಾಗೂ ಕೃಷಿಯ ಮೇಲೆ ಅವಲಂಬಿತವಾದ ಜನವಿಭಾಗವನ್ನು ನ್ಯಾಯೋಚಿತವಾದ ಹಾಗೂ ನೀತಿಸಮ್ಮತವಾದ ರೀತಿಯಲ್ಲಿ ಸ್ಥಳಾಂತರಣಗೊಳಿಸಲು ಸುಯೋಜಿತ ಕಾರ್ಯ ವ್ಯೂಹವೊಂದನ್ನು ರಚಿಸುವುದು ಇಂದಿನ ಅಗತ್ಯವಿದೆ. ಆದರೆ ಆಶ್ಚರ್ಯಕರವೆಂದರೆ ಭವಿಷ್ಯತ್ತಿಗೆ ಸಂಬಂಧಿಸಿ ಅಂತಹ ಯಾವುದೇ ಕಾರ್ಯವ್ಯೂಹ ಸಂಪೂರ್ಣವಾಗಿ ಇಲ್ಲವೇ ಇಲ್ಲ. ಬದಲು ಇಂದು ಅನುಸರಿಸುತ್ತಿರುವ ನೀತಿಗಳು ಸಮಸ್ಯೆಯನ್ನು ಉಲ್ಬಣಗೊಳಿಸುತ್ತಿವೆಯಷ್ಟೆ.

ಉದಾಹರಣೆಗೆ, ಭಾರತ ಸರಕಾರದ ಇಂದಿನ ನಿಲುವಿನ ಪ್ರಕಾರ ದೇಶದ ಒಟ್ಟು ಭೂ ವಿಸ್ತೀರ್ಣದಲ್ಲಿ (೨೯,೭೩,೧೯೦ ಚ.ಕಿ.ಮೀ.) ಕೃಷಿ ಭೂಮಿಯ ವಿಸ್ತೀರ್ಣ ಸುಮಾರು ೧೬,೨೦,೩೮೮ ಚ.ಕಿ.ಮೀ. (ಶೇ.೫೪.೫) ಆಗಿವೆ. ಅನುಮತಿಯ ವಿವಿಧ ಘಟ್ಟಗಳಲ್ಲಿ ಎಲ್ಲ ಎಸ್‌ಇಜಡ್‌ಗಳಲ್ಲಿ ತೊಡಗಿಸಿದ ಭೂಮಿಯ ಪ್ರಮಾಣ ಕೇವಲ ೧೯೪೫ ಚ.ಕಿ.ಮೀ. ಆಗಿದೆ. ಇದು ಒಟ್ಟು ಕೃಷಿ ಭೂಮಿಯ ಶೇ.೦.೧೨ ಅಷ್ಟೆ ಆಗುತ್ತದೆ. ಹಾಗಾಗಿ ಯಾವುದೇ ರೀತಿಯ ಭಾರಿ ಪ್ರಮಾಣದ ಸ್ಥಳಾಂತರಣ ಅಥವಾ ಒಡೆತನ ಹರಣ ಜರುಗಿಲ್ಲ ಎಂದು ವಾದಿಸಲಾಗುತ್ತಿದೆ. ಇದರ ಪರಿಣಾಮವಾಗಿಯೇ ಭೂಸ್ವಾಧೀನತೆಗೆ ಹಾಗೂ ಪುನರ್ ವಸತೀಕರಣಕ್ಕೆ ಸಂಬಂಧಿಸಿ ನ್ಯಾಯೋಚಿತ ಹಾಗೂ ಕ್ರಮಬದ್ಧ ನೀತಿ ರೂಪಿಸಲು ಯಾವುದೇ ಯತ್ನ ಮಾಡಲಾಗಿಲ್ಲ. ಸಮಷ್ಟಿ ಮಟ್ಟದಲ್ಲಿ ತೊಡಗಿದ ಭೂಮಿ ಪ್ರಮಾಣ ಲವಲೇಶವಾಗಿರಬಹುದು. ಆದರೆ ಸೂಕ್ಷ್ಮ ಮಟ್ಟದಲ್ಲಿ ಯಾವುದೇ ಸ್ಥಳದಲ್ಲಿ ಕೆಲವು ಸಾವಿರ ಹೆಕ್ಟೇರುಗಳಷ್ಟು ಭೂಸ್ವಾಧೀನ ಮಾಡಿಕೊಳ್ಳುವುದೂ ಅನೇಕ ಹಳ್ಳಿಗಳನ್ನೂ ಸಾವಿರಾರು ಜನರನ್ನೂ ಸ್ಥಳಾಂತರಿಸುತ್ತದೆ ಎಂಬುದನ್ನು ನಿರ್ಲಕ್ಷಿಸಲಾಗುತ್ತಿದೆ. ವಂಚನೆಯಿಂದ ಕೂಡಿದ ಎಸ್‌ಇಜೆಡ್ ನೀತಿಯಿಂದಾಗಿ ವಿಶಾಲ ಗಮನ ಸೆಳೆದ ಸ್ಥಳಾಂತರ ಸಮಸ್ಯೆಯು ಎಸ್‌ಇಜೆಡ್‌ಗಳೊಂದಿಗೇ ಕೊನೆಗಾಣುವುದಿಲ್ಲ ಎಂಬುದನ್ನು ಮನಗಂಡಿಲ್ಲ. ಕೈಗಾರಿಕೀಕರಣ ಹಾಗೂ ನಗರೀಕರಣಗಳು (ಇದರಲ್ಲಿ ಸಣ್ಣ ಪಟ್ಟಣಗಳ ಬೆಳವಣಿಗೆಯೂ ಸೇರಿದೆ) ಉತ್ಕರ್ಷಿತ ರೀತಿಯಲ್ಲಿ ಜರುಗುತ್ತಿರುವುದರಿಂದಾಗಿ ಭೂಮಿ ಮೇಲಿನ ಒತ್ತಡ ಹೆಚ್ಚುತ್ತಲೇ ಹೋಗುವುದು. ಸರಕಾರವಾಗಲೀ ಖಾಸಗಿ ವಿಭಾಗದವರಾಗಲೀ ಕೃಷಿ ಭೂಮಿಯನ್ನು ಕೃಷ್ಯೇತರ ಬಳಕೆಗಾಗಿ ಸ್ವಾಧೀನಪಡಿಸಿಕೊಳ್ಳುವ ಪ್ರಕ್ರಿಯೆಯು ನ್ಯಾಯಯುತ ನೀತಿಗಳ ಮೇಲೆ ಆಧರಿತವಾಗಿರಬೇಕು. ಇದರಲ್ಲಿ ಬಂಡವಾಳೀಕರಣವೂ ಸೇರಿರುತ್ತದೆ. ಅಂದರೆ ಭೂಮಿಯನ್ನು ವಶಪಡಿಸಿಕೊಂಡು ಅಲ್ಲಿ ಸ್ಥಾಪಿಸಿದ ಕೈಗಾರಿಕಾ ಸಂಸ್ಥೆಗಳಲ್ಲಿ ಹಿಂದಿನ ಭೂ ಒಡೆಯರಿಗೂ ಬಂಡವಾಳದ ಸೂಕ್ತ ಪಾಲು ಸಲ್ಲಬೇಕು, ಎಂದರ್ಥ. ರಾಜ್ಯವು ಇಂಥ ಕಾರ್ಯವ್ಯೂಹವನ್ನು ವಿಕಾಸಗೊಳಿಸಲು ವಿಫಲವಾದಲ್ಲಿ ಮತ್ತು ಯೋಗ್ಯ ಪರ್ಯಾಯ ಜೀವನೋಪಾಯಗಳನ್ನು ಖಚಿತ ಗೊಳಿಸಿ ಕೊಡದಿದ್ದಲ್ಲಿ ಅದಕ್ಕೆ ಪ್ರತ್ಯುತ್ತರವೆಂದರೆ ಜನರ ಯೋಗ್ಯಜೀವನ ಮೂಲಭೂತ ಹಕ್ಕುಗಳನ್ನು ಉಲ್ಲಂಘಿಸುತ್ತಿರುವುದರ ವಿರುದ್ಧ ಹೆಚ್ಚು ಹೆಚ್ಚು ಪ್ರತಿಭಟನೆ ಹಾಗೂ ಪ್ರತಿರೋಧ.

**ಡಾ॥ ಡಿ. ನರಸಿಂಹ ರೆಡ್ಡಿ**
ಅರ್ಥಶಾಸ್ತ್ರಪ್ರಾಧ್ಯಾಪಕರು (ನಿವೃತ್ತ), ಹೈದರಾಬಾದ್ ವಿಶ್ವವಿದ್ಯಾಲಯ, ಹೈದರಾಬಾದ್
ಕನ್ನಡಕ್ಕೆ: **ಕೆ. ಎಲ್. ಗೋಪಾಲಕೃಷ್ಣರಾವ್**
೨೬೧, ೨ನೇ ಅಡ್ಡರಸ್ತೆ, ಸಿ. ಟಿ. ಬೆಡ್, ಬನಶಂಕರಿ ೨ನೇ ಹಂತ, ೩ನೇ ಬ್ಲಾಕ್
ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

ಸ್ಥಾಪನೆ: 1964
ದೂರವಾಣಿ : 23341972, 23494343, 23233021, 23286918

# ದಿ ಜನತಾ ಕೊ-ಆಪರೇಟಿವ್ ಬ್ಯಾಂಕ್ ಲಿ., ಮಲ್ಲೇಶ್ವರಂ, ಬೆಂಗಳೂರು - 560 055

**ಶಾಖೆಗಳು : ಮಲ್ಲೇಶ್ವರಂ ಪಶ್ಚಿಮ, ಪಶ್ಚಿಮ ಕಾರ್ಡ್ ರಸ್ತೆ, ಗೋವಿಂದರಾಜನಗರ, ಅಮರಜ್ಯೋತಿನಗರ.**

**ಠೇವಣಿಗಳ ಮೇಲಿನ ಬಡ್ಡಿದರ 01-09-07ರಿಂದ**

| | ಸಾಮಾನ್ಯವರ್ಗ | ಹಿರಿಯನಾಗರಿಕರಿಗೆ |
|---|---|---|
| 30 ದಿನಗಳಿಂದ 90 ದಿನಗಳವರೆಗೆ | 5.00% | 5.50% |
| 91 ದಿನಗಳಿಂದ 180 ದಿನಗಳವರೆಗೆ | 6.00% | 6.50% |
| 181 ದಿನಗಳಿಂದ 1 ವರ್ಷದವರೆಗೆ | 7.00% | 7.50% |
| 1 ವರ್ಷದ ಮೇಲ್ಪಟ್ಟು 3 ವರ್ಷಗಳವರೆಗೆ | 10.00% | 10.50% |
| 3 ವರ್ಷದ ಮೇಲ್ಪಟ್ಟು | 9.00% | 9.50% |
| ಉಳಿತಾಯ ಖಾತೆ | 3.50% | |

| ಬ್ಯಾಂಕಿನ ಹಣಕಾಸಿನ ಪರಿಸ್ಥಿತಿ (ರೂ. ಲಕ್ಷಗಳಲ್ಲಿ) | 30.09.07ರಲ್ಲಿದ್ದಂತೆ |
|---|---|
| ಪಾವತಿಯಾದ ಷೇರು ಬಂಡವಾಳ | 618 |
| ನಿಧಿಗಳು | 1305 |
| ಠೇವಣಿಗಳು | 11236 |
| ಸಾಲ ಮತ್ತು ಮುಂಗಡಗಳು | 9598 |
| ದುಡಿಯುವ ಬಂಡವಾಳ | 13730 |

ಬ್ಯಾಂಕು ದಿನಾಂಕ 03-04-2006ರಿಂದ ಚಿನ್ನಾಭರಣಗಳ ಮೇಲೆ ಪ್ರತಿ ಗ್ರಾಂ.ಗೆ ರೂ. 500/-ರಂತೆ ಸಾಲ ನೀಡುತ್ತಲಿದೆ – ಬಡ್ಡಿ ದರ ಶೇಕಡ 11ರಂತೆ. * ಬ್ಯಾಂಕಿನ ಎಲ್ಲಾ ಶಾಖೆಗಳು ಗಣಕೀಕೃತಗೊಂಡಿದ್ದು, ಭದ್ರತಾ ಕಪಾಟುಗಳ ಸೌಲಭ್ಯವಿರುತ್ತದೆ.

ಹಾರ್ದಿಕ ಶುಭಾಶಯಗಳು

## ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆ

'ಎಸ್.ಜೆ.ಎಂ. ಟವರ್ಸ್', ಶೇಷಾದ್ರಿ ರಸ್ತೆ, ಗಾಂಧಿನಗರ, ಬೆಂಗಳೂರು - 560 009

ಈ ಸಂಸ್ಥೆಯು 1905ರಲ್ಲಿ ಸ್ಥಾಪನೆಯಾಗಿ ಇಲ್ಲಿಯವರೆಗೆ ನೂರು ವರ್ಷಗಳ ಸೇವೆ ಸಲ್ಲಿಸಿ ಶತಮಾನೋತ್ಸವವನ್ನು ಆಚರಿಸಿಕೊಂಡಿದೆ. ಇದರ ಮುಖ್ಯ ಉದ್ದೇಶ ವೀರಶೈವ ಸಮಾಜದ ಬಡ ಹಾಗೂ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಉಚಿತ ವಿದ್ಯಾರ್ಥಿ ನಿಲಯಗಳನ್ನು ನಡೆಸುವುದು ಮತ್ತು ಉಚಿತ ಹಾಗೂ ಸಾಲ ರೂಪದ ವಿದ್ಯಾರ್ಥಿ ವೇತನಗಳನ್ನು ನೀಡಿ ಅವರುಗಳ ವಿದ್ಯಾಭ್ಯಾಸಕ್ಕೆ ಉತ್ತೇಜನ ನೀಡುವುದಾಗಿದೆ. ಈ ಸಂಸ್ಥೆ ವಿಜಯನಗರದಲ್ಲಿ ನಿರ್ಮಿಸಿರುವ ಬೃಹತ್ ವಿದ್ಯಾರ್ಥಿ ನಿಲಯದಲ್ಲಿ 650 ವಿದ್ಯಾರ್ಥಿಗಳು ಹಾಗೂ 200 ಹೆಣ್ಣು ಮಕ್ಕಳಿಗೆ ಗಾಂಧಿನಗರದಲ್ಲಿ ಉಚಿತ ಅಶನ-ವಸತಿ ಕಲ್ಪಿಸಲಾಗಿದೆ.

### ಸಂಸ್ಥೆಯ ಕಾರ್ಯಕಾರಿ ಸಮಿತಿಯ ಪದಾಧಿಕಾರಿಗಳು ಮತ್ತು ನಿರ್ದೇಶಕರುಗಳು

| | | | |
|---|---|---|---|
| 1. ಶ್ರೀ ಬಿ. ಎಸ್. ಪರಮಶಿವಯ್ಯ | ಅಧ್ಯಕ್ಷರು | 11. ಶ್ರೀ ಎಂ. ಜಯದೇವ್ | ನಿರ್ದೇಶಕರು |
| 2. ಶ್ರೀ ಎಲ್. ರಾಜಪ್ಪ | ಉಪಾಧ್ಯಕ್ಷರು | 12. ಶ್ರೀ ಹೆಚ್. ಯೋಗೀಶ್ | ನಿರ್ದೇಶಕರು |
| 3. ಶ್ರೀ ಎಂ. ಶಿವಣ್ಣ | ಕಾರ್ಯದರ್ಶಿ | 13. ಶ್ರೀ ಶಿವಪ್ರಸಾದ್ | ನಿರ್ದೇಶಕರು |
| 4. ಶ್ರೀ ಎಲ್. ಎಸ್. ರೇಣುಕ | ಸಹ ಕಾರ್ಯದರ್ಶಿ | 14. ಶ್ರೀ ಹೆಚ್. ಎಸ್. ಶಿವಲಿಂಗಯ್ಯ | ನಿರ್ದೇಶಕರು |
| 5. ಶ್ರೀ ಎಂ. ಎಸ್. ನಟರಾಜ್ | ಖಜಾಂಚಿ | 15. ಶ್ರೀ ಟಿ. ಎಸ್. ಗಂಗಾಧರ್ | ನಿರ್ದೇಶಕರು |
| 6. ಶ್ರೀಮತಿ ಚಂದ್ರಾವತಿ ಬಿ. ಟಿ. ಉಮೇಶ್ | ನಿರ್ದೇಶಕರು | 16. ಶ್ರೀ ಟಿ. ಎಸ್. ರಾಜಶೇಖರ್ | ನಿರ್ದೇಶಕರು |
| 7. ಶ್ರೀ ಎಲ್. ಎಸ್. ಕುಮಾರಸ್ವಾಮಿ | ನಿರ್ದೇಶಕರು | 17. ಶ್ರೀ ವಿಶ್ವನಾಥಯ್ಯ | ನಿರ್ದೇಶಕರು |
| 8. ಶ್ರೀಮತಿ ಎಸ್. ಸಿ. ಉಮಾಕಾಂತ | ನಿರ್ದೇಶಕರು | 18. ಶ್ರೀ ಜಿ. ನಂಜುಂಡಯ್ಯ | ನಿರ್ದೇಶಕರು |
| 9. ಶ್ರೀ ಆರ್. ಜಿ. ಶಿವಕುಮಾರ್ | ನಿರ್ದೇಶಕರು | 19. ಶ್ರೀ ಬಿ. ಆರ್. ಶಿವಣ್ಣ | ನಿರ್ದೇಶಕರು |
| 10. ಶ್ರೀ ಪರಮಶಿವಯ್ಯ | ನಿರ್ದೇಶಕರು | 20. ಡಾ|| ಮಲ್ಲಿಕಾರ್ಜುನ್ | ನಿರ್ದೇಶಕರು |

ಎ. ವೈ. ಕಾಂತರಾಜ್
ಸಹ ಆಡಳಿತಾಧಿಕಾರಿಗಳು

ಬಿ. ಸೋಮಶೇಖರಯ್ಯ
ಆಡಳಿತಾಧಿಕಾರಿಗಳು

## MOST USEFUL & HIGH QUALITY ATLASES FOR STUDENTS & GENERAL READERS

Besides maps, this provides important facts about a country, like its land and people, its position within a continent, and its economy in a nutshell, useful information on currency, per capita income and form of government along with up-to-date data on area and population has been given. Very useful to all school students.




Rs. 120




Rs. 120

A complete guide to India - its Geography, States, Roads & Tourist Places. As you go Places. As you go through its pages, you will feel like travelling across the length and breadth of the country. All the city roads, places of tourist interest, in fact, the entire landscape are shown clearly and distinctly. A traveller's companion.



## DREAMLAND PUBLICATIONS

J-128, KIRTI NAGAR, NEW DELHI - 110 015 © 011-25106050
Fax : 011-25438283 e-mail : dreamland@vsnl.com
Visit us at : www.dreamlandpublications.com

ಅಪ್ರಜ್ಞೆಯಲ್ಲಿ ಹುಟ್ಟುವ ಕಾವ್ಯ ಮತ್ತು ಗ್ನಾಪೂರ್ವಕ ಎಚ್ಚರದಿಂದ ಕಟ್ಟಿದ ಕಾವ್ಯಕ್ಕೆ ಎಚ್ಚಿನ ಂತರ ಇರುತ್ತದೆ. ವೀಚಿಯವರದು ನಿರಂತರ ಚ್ಚರದಿಂದ ಕಟ್ಟಿರುವ ಕಾವ್ಯ. ಇವರ ಬವುಪಾಲು ವಿತೆಗಳು ತಾಳ್ಮೆ ಮತ್ತು ಗಮನ ಬೇಡುವ ಕವಿತೆಗಳು. ತ್ತೆ ಮತ್ತೆ ಓದುಗ ಆತ್ಮೀಯತೆಯಿಂದ ತೊಡಗಿಸಿ ಳ್ಳದಿದ್ದರೆ ಇವು ಬಡಪಟ್ಟಿಗೆ ಬಿಚ್ಚಿಕೊಳ್ಳುವುದಿಲ್ಲ.



# ವೀಚಿ ಕಾವ್ಯ
## ಕೆಲವು ನೋಟಗಳು

ರಾಮಲಿಂಗಪ್ಪ ಟಿ. ಬೇಗೂರು

ವೆಂಪು ವಯ್ಚಾರಿಕತೆ, ಅಡಿಗರ ಸಂಕೀರ್ಣತೆ, ಮಕೂರಿನ ಸ್ತಳೀಯ ಸಂಸ್ಕೃತಿ, ಅನುಬಾವ, ದ್ಯಾತ್ಮಿಕತೆ ಎಲ್ಲವೂ ವೀಚಿಯಲ್ಲಿ ಸಂಗಮಿಸಿವೆ.

ಕವಿಯೊಬ್ಬನ ಆತ್ಮಚರಿತ್ರೆಯು ಕೌಟುಂಬಿಕವೂ ದು ಹಾಗೇ ಅದು ನಾಡು ನುಡಿ ಸಂಸ್ಕೃತಿಯ ನಿಯೇಚರೂ ಹೌದು. ಕವಿಯೊಬ್ಬನ ಆತ್ಮಚರಿತ್ರೆ ತನ್ನ ಸುತ್ತಣ ಪರಿವಾರದ ಜೊತೆ ಮಾತ್ರ ರುವುದಿಲ್ಲ, ತನ್ನ ಸುತ್ತಣ ಪರಿಸರದ ಜೊತೆ ಯುತ್ತಿರುತ್ತದೆ. ಇಂತ ಆತ್ಮಚರಿತ್ರೆಯ ರೂಪಕಾತ್ಮಕ ವನಾತ್ಮಕ ತುಣುಕುಗಳಂತೆ ವೀಚಿ ಕವಿತೆಗಳು ಇವೆ. ನ, ಮನೆ, ಹೊರಗು ಹೀಗೆ ಮೂರು ಮುಖ್ಯ ಮಿಕೆಗಳು ಇವರ ಕಾವ್ಯದಲ್ಲಿ ಬೆರೆತಿವೆ. ಸುಕಿನಿಂದ ಬೆಳಕಿಗೆ-೬೩, ನಮ್ಮಮ್ಮ-೪೩೩, ವರ್ತಮಾನ-೮೦, ಬಂದಿತು ಹಗಲು-೩೫೧ ಇಂತ ವು ಕವಿತೆಗಳನ್ನು ಒಟ್ಟಿಗೆ ಇಟ್ಟು ನೋಡಿದರೆ ಇದು ಯುತ್ತದೆ.

ತಮ್ಮ ಅನುಬವಗಳನ್ನು ಹೇಳಲು ವೀಚಿ ಮೆಗಳ ಆಶ್ರಯ ಪಡೆಯುವುದರಿಂದ ಅನುಬವದ ವ್ಯಕ್ತಿ ಇವರಲ್ಲಿ ಅಮೂರ್ತವಾಗುವ ಸಾದ್ಯತೆ ಹೆಚ್ಚು. ಬಿನ್ನ ಅರ್ತ ಸಾದ್ಯತೆಗಳಿಗೆ ಕವಿತೆ ತೆರೆದುಕೊಳ್ಳುವ ಅವಕಾಶ ಮತ್ತು ಅಮೂರ್ತವಾಗುವ ಅಪಾಯಗಳು ಎರಡೂ ಇವರ ಕಾವ್ಯಕ್ಕಿದೆ. ವಯಕ್ತಿಕ ಕಶ್ಟ, ನಶ್ಟ–ನೋವು, ನಲಿವುಗಳನ್ನು ಪ್ರತಿಮೆ, ರೂಪಕಗಳ ಜೊತೆಗೆ ಕವಿತೆ ಮಾಡುವಾಗ ನಿಜವಾದ ನೋವು ನಲಿವುಗಳನ್ನು ಬಿಚ್ಚಿಡುವ ಯತ್ನವೇ ಬಚ್ಚಿಡುವ ಯತ್ನವೂ ಆಗುವ ಸಾದ್ಯತೆ ಇರುತ್ತದೆ. ಬಾವನೆಗಳನ್ನು ಬುದ್ದಿ ಆಳುವುದರಿಂದ ಹೀಗಾಗುತ್ತದೆ. ಇದರಿಂದ ಕವಿತೆಯಲ್ಲಿ ಪ್ರಾಮಾಣಿಕತೆ ಮತ್ತು ಅಪ್ರಾಮಾಣಿಕತೆಗಳ ದೊಡ್ಡ ಸಂಗರ್ಶವೇ ಏರ್ಪಡುತ್ತದೆ. ವೀಚಿಯವರಲ್ಲಿ ಈ ಸಂಗರ್ಷವಿದೆ.

'ಬಿಲ್ ಕ್ಲಿಂಟನ್ನು ನಮ್ ಬಾವ, ಬಿನ್ ಲಾಡೆನ್ನು ನಮ್ ಮಾವ, ನಮ್ಮಪ್ಪ ಲಾಲು ಮುಟ್ಟಿದ್ರೆ ಡೀಲು' ಅಂತ ಜೋಗಿ ಚಿತ್ರದ್ದು ಒಂದು ಸಿನೆಮಾ ಹಾಡು ಇದೆಯಲ್ಲ, ಈ ತರ ನಮ್ ಜನ ಕೆಲವರು ದೊಡ್ಡೋರನ್ನ ಮಾತ್ರ ಅಪ್ಪಾಜಿ, ಅಮ್ಮ, ಮಾವ ಅಂತೆಲ್ಲ ಕರೀತಾರೆ. ಇಂತ ಜನ ತಮ್ಮ ಸಂಬಂದ ಕಲ್ಪಿಸಿಕೊಳ್ಳೋದೆ ಲಾಬ ಇರೋ ಕಡೆ. ನಮ್ ಬಸವಣ್ಣನಂತೋರು ನೋಡಿ ಈ ತರ ಅಲ್ಲ. ಮಾದಾರ ಚೆನ್ನಯ್ಯನ ಮಗ ನಾನು ಅಂತ ಹೇಳಿಕೊಳ್ತಾರೆ. ವೀಚಿ ಕೂಡ ಈ ಸಾಲಿಗೆ ಸೇರ್ರೋರೆ. ವೀಚಿ :

*ತುಮಕೂರು ತೌರಿನ ನೆರಳು ತಂಗಾಳಿ – ತಾಯಿ*
*ತುಮಕೂರು ನೆಲದ ನಿರು ನೇಗಿಲು – ತಂದೆ*
*ಪಶು ಪಕ್ಶಿ ಗಿಡ ಮರಾದಿಗಳು – ಬಂದು ಬಳಗ*
*ಸೂರ್ಯ ಚಂದ್ರರ ಬೆಳಕೆ ದಾರಿ ದೀಪ* (– ೪೫೧)

ಎನ್ನುತ್ತಾರೆ. ಈ ರೀತಿಯ ಲೋಕ ಸಂಬಂದ, ಕುಟುಂಬ ನಿರಸನ ಮುಪ್ಪಿನಲ್ಲಿ ಒದಗುವ ಸಂಸಾರದ ಸ್ತಿತಿಯಲ್ಲ. ಕವಿಗೆ ನಿಜವಾಗಿಯೂ ಕುಟುಂಬ ನಿರಸನ, ವಿಶ್ವಕುಟುಂಬ ವ್ಯಕ್ತಿತ್ವ ನಿತ್ಯವೂ ಇರುತ್ತದೆ. ಇಂತ ಕಡೆ ಕವಿತೆ ಎಶ್ಟು ಚೆನ್ನಾಗಿ ಬರೆಯಲ್ಪಟ್ಟಿದೆ ಎನ್ನುವುದಕ್ಕಿಂತ ಕವಿತೆಯಲ್ಲಿನ ನಿಲುವು ಮತ್ತು ಅದು ನಮಗೆ ಒಡ್ಡುವ ಮೌಲ್ಯಲೋಕ ಮುಕ್ಯ ಅನ್ನಿಸುತ್ತದೆ. ಆತ್ಮತಲ್ಲಣಗಳು ಕವಿತೆಯಾದಾಗ ಇಂತ ಸಾಲುಗಳು ಉಟ್ಟುತ್ತವೆ. ಪೊಲಿಟಿಕಲಿ ಕರೆಕ್ಟಾದ ಪಿಲಾಸಪಿ ಉಟ್ಟುತ್ತದೆ. ಕಾಲದ ತಲ್ಲಣಗಳು ಇವರಲ್ಲಿ ಕವಿತೆಯಾಗುವುದು ಕಡಿಮೆ. ಆದರೂ ಅವು ಕವಿತೆಯಾದಾಗ ಆತ್ಮತಲ್ಲಣಗಳೇ ಅಲ್ಲೂ ಮತ್ತೆ ಕಾಣಿಸುತ್ತವೆ. ಇಡೀ ಸಮಗ್ರ ಸಂಕಲನದಲ್ಲಿ ಕಾಲದ ತಲ್ಲಣಗಳನ್ನು, ಸಂಸ್ಕೃತಿಯ ವರ್ತಮಾನದ ತಲ್ಲಣಗಳನ್ನು ಹಿಡಿಯುವ ಕ್ರಿಯೆ ಆತ್ಮತಲ್ಲಣದ ಮೂಲಕವೇ ನಡೆಯುತ್ತದೆ. ಹೀಗಾಗಿ ವೀಚಿಯುವರ ಕಾವ್ಯ ಆತ್ಮತಲ್ಲಣದ ಕಾವ್ಯ ಎಂದರೆ ತಪ್ಪಾಗಲಾರದು.

ಇವರ ಬಹುಪಾಲು ಕವಿತೆಗಳಲ್ಲಿ ಆದ್ಯಾತ್ಮಿಕತೆಯಿರಲಿ, ಪಿಲಾಸಪಿ ಇರಲಿ, ಬಾವತೀವ್ರತೆ ಇರಲಿ ಎಲ್ಲವೂ ವ್ಯಕ್ತವಾಗುವುದು ಸ್ತಳೀಯ ಪ್ರಕ್ರುತಿ ಮತ್ತು ಸ್ತಳೀಯ ಸಂಸ್ಕೃತಿಯ ಮೂಲಕವೆ. ಆತ್ಮತಲ್ಲಣಗಳು ಇವರಲ್ಲಿ ಸ್ತಳೀಯ ಪ್ರಕ್ರುತಿ ಮತ್ತು ಸಂಸ್ಕೃತಿಯ ಗುರುತುಗಳ ಮೂಲಕವೇ ಅಬಿವ್ಯಕ್ತವಾಗುತ್ತವೆ. ಇಂತ ಅಪಾರವಾದ ಉಲ್ಲೇಕ, ದ್ರುಶ್ಟಾಂತ, ಸಾದ್ರುಶ್ಯ ಮತ್ತು ಪ್ರತಿಮಾತ್ಮಕ ಬಳಕೆಗಳು ಇವರ ಕಾವ್ಯದಲ್ಲಿವೆ. ಜಗತ್ತನ್ನು ಯಾವನೇ ಕವಿ ಮುಕಾಮುಕಿ ಆಗುವುದು ಸ್ತಳೀಯತೆಯ ಮೂಲಕವೇ ಅಲ್ಲವೆ? (ನೋಡಿ : ಯೋಗ ಯೋಗಿನಿ ಸೊಲ್ಲು)

ಸಮಾಜದ ಉನ್ನತೀಕರಣ, ವ್ಯಕ್ತಿತ್ವದ ಉನ್ನತೀಕರಣ ಯಾವುದೇ ಕಾವ್ಯದ ಆತ್ಯಂತಿಕ ಉದ್ದೇಶವಾಗಿರುತ್ತದೆ. ಬದುಕು ಇನ್ನಶ್ಟು ಮತ್ತಶ್ಟು ಉತ್ತಮವಾಗಬೇಕೆಂಬ ಹಂಬಲವೇ ಕಾವ್ಯದ ಕಾಳಜಿ. ವರ್ತಮಾನದಲ್ಲಿ ಬದುಕು ಚರಿತ್ರೆಗಿಂತ ಸ್ವಲ್ಪ ಮುಂದೆ ಬಂದಿದ್ದರೆ ಬವಿಷ್ಯದಲ್ಲಿ ಅದು ಇನ್ನಶ್ಟು ಮುಂದೆ ಒಗಲಿ ಎಂಬುದೇ ಕಾವ್ಯದ ಆಶಯವಾಗಿರುತ್ತದೆ. ನಮ್ಮ ಇಡೀ ಕಾವ್ಯ ಪರಂಪರೆಯನ್ನು ನೋಡಿದರೆ ಕಾವ್ಯದ ಮುಕ್ಯ ಉದ್ದೇಶ ಅತವಾ ಗುರಿಗಳಲ್ಲಿ ಇಂತ ಲೋಕಕಲ್ಯಾಣವೂ ಒಂದು. ವೀಚಿ ಕೂಡ ಇದಕ್ಕೆ ವರತಲ್ಲ. ಇವರು ಯಾವ ಸಾಮಗ್ರಿಯನ್ನೇ ಕಾವ್ಯ ಮಾಡಲಿ ಅಲ್ಲೆಲ್ಲ ಲೋಕಪಿಕಾರದ – ವ್ಯಕ್ತಿತ್ವ ವಿಕೃತಿಯ

ತಮ್ಮ ಅನುಬವಗಳನ್ನು ಹೇಳಲು ವೀಚಿ ಪ್ರತಿಮೆಗಳ ಆಶ್ರಯ ಪಡೆಯುವುದರಿಂದ ಅನುಬವದ ಅಭಿವ್ಯಕ್ತಿ ಇವರಲ್ಲಿ ಅಮೂರ್ತವಾಗುವ ಸಾದ್ಯತೆ ಹೆಚ್ಚು. ಬಿನ್ನ ಅರ್ತಸಾದ್ಯತೆಗಳಿಗೆ ಕವಿತೆ ತೆರೆದುಕೊಳ್ಳುವ ಅವಕಾಶ ಮತ್ತು ಅಮೂರ್ತವಾಗುವ ಅಪಾಯಗಳು ಎರಡೂ ಇವರ ಕಾವ್ಯಕ್ಕಿದೆ. ವಯಕ್ತಿಕ ಕಶ್ಟ, ನಶ್ಟ – ನೋವು, ನಲಿವುಗಳನ್ನು ಪ್ರತಿಮೆ, ರೂಪಕಗಳ ಜೊತೆಗೆ ಕವಿತೆ ಮಾಡುವಾಗ ನಿಜವಾದ ನೋವು ನಲಿವುಗಳನ್ನು ಬಿಚ್ಚಿಡುವ ಯತ್ನವೇ ಬಚ್ಚಿಡುವ ಯತ್ನವೂ ಆಗುವ ಸಾದ್ಯತೆ ಇರುತ್ತದೆ. ಬಾವನೆಗಳನ್ನು ಬುದ್ದಿ ಆಳುವುದರಿಂದ ಹೀಗಾಗುತ್ತದೆ.

## ಮನೆ ಮನೆಗೆ ಒಳ್ಳೆಯ ಸಾಹಿತ್ಯ




ಬರಲಿದೆ



ರೂ. 60.00



ರೂ. 18.00




ಅಚ್ಚಿನಲ್ಲಿದೆ



ಬರಲಿದೆ



ರೂ. 200.00



ರೂ. 70.00



ರೂ. 70.00



ರೂ. 450.00



ರೂ. 75.00




ರೂ. 150.00



ರೂ. 65.00




ರೂ. 85.00



ರೂ. 45.00



ರೂ. 120.00

## ನಿಮ್ಮ ಅಭಿರುಚಿಗೆ ಉತ್ತಮ ಸಾಹಿತ್ಯ



**V.P.P** ಮೂಲಕ ಪುಸ್ತಕ ತರಿಸಿಕೊಳ್ಳುವವರು ಸಂಪರ್ಕಿಸಿ

# ಅಭಿರುಚಿ ಪ್ರಕಾಶನ

ನಂ. ೩೮೬, ೧೪ನೆಯ ಮುಖ್ಯ ರಸ್ತೆ, ೩ನೆಯ ಅಡ್ಡರಸ್ತೆ, ಸರಸ್ವತೀಪುರ, ಮೈಸೂರು - ೯.
ದೂರವಾಣಿ: ೯೪೪೪೮೬ ೦೮೯೨೬. E-mail: abhiruchiprakashana@yahoo.co.in

ಬಗೆಗೆ ಗಾಡವಾದ ವಿಷಾದ, ದುಃಖ, ಆತಂಕ, ತಲ್ಲಣಗಳನ್ನು ವ್ಯಕ್ತಮಾಡುತ್ತಾರೆ. ಲೋಕ ಇನ್ನಷ್ಟು ಉತ್ತಮಗೊಳ್ಳಬೇಕು ಎಂಬ ಲೋಕಕಲ್ಯಾಣ ಕಾಳಜಿ ಇವರ ಎಲ್ಲ ಕವಿತೆಗಳಲ್ಲೂ ಕಾಣುವ ಒಂದು ಸ್ಥಾಯಿ ಕಾಳಜಿಯಾಗಿದೆ. ಕೆಲವು ಕವಿತೆಗಳಲ್ಲಿ ಈ ಕಾಳಜಿ ದಿಟ್ಟಾಗಿಯೂ, ಕೆಲವೆಡೆ ಬಾಶಣ ರೂಪಿಯಾಗಿಯೂ, ಉಪದೇಶಾತ್ಮಕವಾಗಿಯೂ ವ್ಯಕ್ತವಾಗಿದೆ.

ನಮ್ಮ ಆದುನಿಕ ಲೇಕಕರಲ್ಲಿ ಸ್ವಾತಂತ್ರ ಹೋರಾಟದ ಕಾಲ ಮತ್ತು ತಮ್ಮ ಪ್ರಜಾಪ್ರಬುತ್ವೀಯ ವರ್ತಮಾನಗಳನ್ನು ಹೋಲಿಸಿ ನೋಡುವ ಕ್ರಮವೊಂದಿದೆ. ಹೀಗೆ ಸದ್ಯದ ಬೂತ ವರ್ತಮಾನಗಳನ್ನು ತೌಲನಿಕವಾಗಿ ನೋಡುವಾಗ ಸ್ವಾತಂತ್ರ ಹೋರಾಟ ಕಾಲದ ಶ್ರಮ, ಕನಸು, ಬಲಿದಾನಗಳೆಲ್ಲ ವ್ಯರ್ತವಾಗುತ್ತಿರುವ ಹತಾಶೆಯೊಂದು ಇಂತಲ್ಲಿ ಸಾಮಾನ್ಯವಾಗಿ ಮೂಡುತ್ತದೆ. ನಿರೀಕ್ಶೆ ಮತ್ತು ಆಕಾಂಕ್ಶೆಗಳಿಗೆ ತಕ್ಕಂತೆ ನಾವು ಯಾವ ಮಟ್ಟವನ್ನು ತಲುಪಬೇಕಾಗಿತ್ತೋ ಆ ಮಟ್ಟವನ್ನು ತಲುಪಲಾಗಿಲ್ಲ ಎಂಬ ಸಾತ್ವಿಕ ಸಿಟ್ಟು ಈ ಕ್ರಮದಲ್ಲಿ ಸಾಮಾನ್ಯವಾಗಿ ವ್ಯಕ್ತವಾಗುತ್ತದೆ. ವೀಚಿಯಲ್ಲಿ ಅಲ್ಲಲ್ಲಿ ಈ ಹತಾಶೆ ಅತವಾ ಸಾತ್ವಿಕ ಸಿಟ್ಟು ಸ್ವಲ್ಪ ಡಾಳಾಗಿಯೇ ವ್ಯಕ್ತವಾಗಿದೆ. ಹಾಳು ಕಣಜಕ್ಕೆ ಬಂದಿತು ಹೇಗೆ – ೨೫೧, ಪ್ಲಸ್ಸು ಮಯ್ನಸ್ಸು – ೪೮೯, ಜಯಪ್ರತ – ೨೨೦, ನಾವು ಮತ್ತು ದ್ವಂದ್ವಗಳು – ೨೦೪ ಮೊದಲಾದ ಕವಿತೆಗಳಲ್ಲಿ ಇದು ಎದ್ದು ಕಾಣುತ್ತದೆ. ಚರಿತ್ರೆಯಿಂದ, ಪುರಾಣದಿಂದ, ಸಾಹಿತ್ಯ ಪರಂಪರೆಯಿಂದ ಪ್ರತಿಮೆ, ಪ್ರತೀಕಗಳನ್ನು ಸ್ವೀಕರಿಸುವ ವೀಚಿ ಅವುಗಳಿಗಿರುವ ಬಾವ – ಅರ‍್ತಕೋಶದ ನೆರವಿನಿಂದ ತಮ್ಮ ವಿಚಾರವನ್ನು ಓದುಗರಿಗೆ ಇನ್ನಷ್ಟು ಪರಿಣಾಮಕಾರಿಯಾಗಿ ತಲುಪಿಸಲು ಯತ್ನಿಸುತ್ತಾರೆ. ಈ ಪ್ರತೀಕ ಪ್ರತಿಮೆಗಳನ್ನು ವರ್ತಮಾನದ ವ್ಯಾಕ್ಯಾನಕ್ಕೆ ಬಳಸುತ್ತಾರೆ.

ಉತಾರು – ೨೬೯, ಆಪಾಸುಗೆಡು – ೩೭೬, ಯಕ್ಕಾಸ – ೧೨೦, ಎಬ್ಬುಬ್ಬು – ೩೪೯, ಸನಗೆತ್ತು – ೧೧೭, ಸಾಲುಗೋಡೆ – ೧೦೫, ಕುರಿತೇಟು – ೧೧೦, ಕೀಡರ – ೩೫೧, ಮಸುವು – ೧೫೬, ಮಡುಬಾಯಿ – ೪೧೫ ಹೀಗೆ ಅನೇಕ ಗ್ರಾಮೀಣ ನುಡಿಗಳನ್ನು ಆಯ್ದು ಬಳಸುವ ವೀಚಿ ಜನನುಡಿ ಮತ್ತು ಕಾವ್ಯದ ಮಾನಕ ನುಡಿಗಳನ್ನು ಬ್ಲೆಂಡು ಮಾಡುವ ಕಾರ್ಯವನ್ನು ತಮ್ಮ ಕಾವ್ಯ ಕ್ರುಶಿಯುದ್ದಕ್ಕೂ ಮಾಡಿದ್ದಾರೆ. ಬಾಷೆಯಲ್ಲಿ ಬಳಕೆಯಿಂದ ಕಣ್ಮರೆಯಾಗಬವುದಾದ ವಿಶಿಶ್ಟ ಪದಗಳನ್ನು ಕಾವ್ಯದಲ್ಲಿ ಬಳಸುವ ಮೂಲಕ ಅವುಗಳಿಗೆ ಮರುಜೀವ ಕೊಡುವ ಕೆಲಸ ಇವರಲ್ಲಿ ಯತೇಚ್ಚವಾಗಿ ನಡೆದಿದೆ. ನೆತ್ತಿ ಮೇಲಿನ ಬಂಪು ಆರು – ೩೮೧, ನೀರು ಸಯಿತ ಗುಂಜಿಕೊ – ೯೬, ಕುಂಡಿಗೆ ಅಚ್ಚಿಕೊಂಡ ಪುನುಗು – ೧೨೦, ಎಳು ಕೆರೆ ನೀರು ಕುಡಿ, ತಿನ್ನುವುದು ಇಟ್ಟಲ್ಲ ಕುಡಿಯುವುದು ನೀರಲ್ಲ, ಅಪ್ಪಂತವರು ಇಂತ ನುಡಿಗಟ್ಟುಗಳನ್ನು, ಗಾದೆಗಳನ್ನು ತಮ್ಮ ಕಾವ್ಯದಲ್ಲಿ ಬಳಸಿಕೊಳ್ಳುವ ವೀಚಿ ಕೆಲವೊಮ್ಮೆ ಜನರ ಕೆಲವು ಸಾಮಾನ್ಯ ವರ‍್ತನೆಗಳನ್ನು ದ್ರುಶ್ಟಾಂತವಾಗಿ ಬಳಸುತ್ತಾರೆ. ನೋಡಿ:

*ಗುಬ್ಬಿ ಕೆರೆ ಏರಿ ಮೇಲೆ ಕಂಬಳಿ ಕಿತ್ತುಕೊಂಡದ್ದಕ್ಕೆ*
*ಕಡಬದೇರಿಯ ಮೇಲೆ ಒಗಿ ಮೀಸೆ ತಿರುವಿದ*
*(ನಂದಿನಿ – ೧೩೩)*
*ಗಡ್ಡಕ್ಕೆ ಉರಿಹೊತ್ತಿದಾಗ ಬಾವಿ ತೆಗೆವ ಬಾವ*
*(ಅಳುವಿನ ಇಮ್ಮೇಳದಲ್ಲಿ – ೬೬)*
*ದಿಬ್ಬೂರ ಬಸವ ಹೆಬ್ಬೂರ ಹಸುವನ್ನೇರಿ*
*ಗಬ್ಬ ಕಟ್ಟಿದ ರೀತಿ (ಇದ್ದುದಿದ್ದೆಯಿತ್ತು – ೪೨೮)*

ಇಂತ ವರ‍್ತನೆಗಳನ್ನು ದ್ರುಶ್ಟಾಂತವಾಗಿ ಬಳಸುತ್ತ ವೀಚಿ ತಮ್ಮ ಕಾವ್ಯದ ಬಾವಕೋಶವನ್ನು ಓದುಗರಿಗೆ ತಲುಪಿಸಲು ಇವನ್ನು ಸಪೋರ‍್ಟೀವಾಗಿ ಬಳಸುತ್ತಾರೆ. ನಡಿಯಾಗಲಿ, ನುಡಿಗಟ್ಟಾಗಲಿ ದ್ರುಶ್ಟಾಂತವಾಗಲಿ ಕತನ – ಗಟನಾವಳಿ, ಪ್ರತಿಮೆಯಾಗಲಿ ಎಲ್ಲವೂ ಜನನಡಾವಳಿಯಿಂದ ಕಾವ್ಯಲೋಕಕ್ಕೆ ಇವರಲ್ಲಿ ಪ್ರವೇಶ ಪಡೆಯುತ್ತವೆ. ಮುಕ್ಯವಾಗಿ ಇವರ ಕಾವ್ಯ ನವೀನ ಪದಕೂಟ, ದ್ರುಶ್ಟಾಂತಗಳನ್ನು ಸ್ರುಶ್ಟಿಸುವುದು ಕಡಿಮೆ. ಬವುತೇಕ ಇರುವ ಲೋಕ ಸಾಮಗ್ರಿಯ ಆಯ್ಕೆ ಮತ್ತು ಜೋಡಣೆಯಲ್ಲಿ ಇವರ ಕಾವ್ಯ ತನ್ನ ನೆಲೆಯನ್ನು ಕಂಡುಕೊಳ್ಳುತ್ತದೆ. (ನೋಡಿ : ಅಪವಾದಕ್ಕೆ ಉಪ್ಪಿನ ಆನೆಯನ್ನು ನೀರಿಗೆ ಇಳಿಸುವ ಆಟ – ೨೬೦)

ಇವರ ಕೆಲವು ಆರಂಬಿಕ ಕವಿತೆಗಳಲ್ಲಿ ಸರಪದಗಳ ಬಳಕ ಮತ್ತೆ ಮತ್ತೆ ಬರುತ್ತದೆ. 'ಜೇರೆ ಹೆಣ್ಣ ನುಸರಿಸಲೆಶ್ಟೆಲ್ಲ ಮುತುವರ‍್ಜಿ' – ೧೪೯, 'ಜೂರು ಪಾರೊಳ್ಳಿತೊಂದೊಗ್ಗರಣೆಗೆಟುಕದಿದೆ' – ೮೪, 'ಬಾಳ ದಡರಬ್ಬುರಬ್ಬಪ್ಪಳಿಸುತ್ತಿರಲಿ' – ೯೧ ಇಂತ ಕೆಲವು ಪದಗಳ ಬಳಕೆ ಕವಿತೆಯ ಸರಾಗವಾದ ಓದಿಗೆ ತೊಂದರೆ ಕೊಡುತ್ತದೆ. ಪದಗಳನ್ನು ಬಿಡಿಸಿ ಬರೆಯುವುದಕ್ಕಿಂತ ಕಾವ್ಯದಲ್ಲಿ ಜೋಡಿಸಿ ಬರೆಯಬೇಕು ಎಂಬ ಕಾವ್ಯಬಾಶಾ ಕಲ್ಪನೆ ಇವರಲ್ಲಿ ಮೊದಮೊದಲು ಕೆಲಸ ಮಾಡಿದೆ. ಆದರೆ ಆನಂತರದ ಸಂಕಲನಗಳಲ್ಲಿ ಇದರಿಂದ ವೀಚಿ ಹೊರಬರಲು ಯತ್ನಿಸಿದ್ದಾರೆ.

*ತಲ್ಲಣದ ಚಲ್ಲಣವ ತೊಟ್ಟ ಬಾವ*
*(ವಿಶವರ‍್ತಮಾನ – ೮೦)*
*ಪೂರ‍್ಣ ಪ್ರಗ್ನೆಯ ಪಾಟವಿರದೆ ಗದ್ದುಗೆಯಾಟ*
*ಇದೆ ನಾವು ಬಡಿಸಿಕೊಂಡಿರುವ ಗೂಟ*
*(ಅವಲೋಕನ – ೮೪)*

ಹೀಗೆ ಇವರ ಆರಂಬದ ಕವಿತೆಗಳಲ್ಲಿ ನಾದ, ಪ್ರಾಸಗಳು ಬಹುವಾಗಿ ಯಜಮಾನಿಕೆ ನಡೆಸಿವೆ. ತಲ್ಲಣದ ಚಲ್ಲಣ, ಆಟ, ಗೂಟ ಇಂತ ಪ್ರಯೋಗಗಳು ಕವಿಯ ನಾದ ಪ್ರಾಸಗಳ ವ್ಯಾಮೋಹದಿಂದ ಹುಟ್ಟಿವೆ.

*ನೆನಪಿನ ಸವಿಗೊಂಬೆ ಚಿಗುರಿ ಹಣ್ಣು ಹೂವ ಮಂಕರಿ*
*ಕಣ್ಣ ಮುಂದೆ ಗಂಡಿನ ಸಿರಿ ಹೆಣ್ಣಿನ ಪರಿ*
*ತನುಮನಗಳ ವಯ್ಯರಿ*
*ಬಾನ ತೋರಿ ನೆಲ ತಡಕಿಸಿ ಕಣ್ಣೆಯಲ್ಲಿ*
*ಕಾಣದಾಗಿಬಿಡುವ ಬರ‍್ಜರಿ (ಅವಳಿ ಜವಳಿ – ೧೧೮)*

ಈ ಮಂಕರಿ ವಯ್ಯರಿ ಬರ‍್ಜರಿ ಪ್ರಾಸಗಳು ನಿಜಕ್ಕೂ ಅಗ್ಗಿ. ನಾದ ಪ್ರಾಸಗಳನ್ನು ಕವಿತೆ ಬಿಟ್ಟುಕೊಡಬೇಕು ಎಂಬುದೇನೂ ನನ್ನ ಬಾದವಲ್ಲ. ಕವಿತೆಯಲ್ಲಿ ಇವು ಸಹಜವಾಗಿ ಬರಬೇಕೇ ವಿನಾ ನಾದಕ್ಕಾಗಿ ನಾದ ಪ್ರಾಸಕ್ಕಾಗಿ ಪ್ರಾಸ ಎಂಬಂತೆ ಬರಬಾರದು. ಇವರ ಮೊದಲ ಸಂಕಲನಕ್ಕೂ ಮೂರನೆ ಸಂಕಲನಕ್ಕೂ ಸುಮಾರು ಮುವ್ವತ್ತು ವರ‍್ಶಗಳ ಅಂತರ ಇದೆ, ಅಲ್ಲೂ ನಾದ ಪ್ರಾಸಗಳ ವ್ಯಾಮೋಹ ಇವರನ್ನು ಬಿಟ್ಟಂತೆ ಕಾಣುವುದಿಲ್ಲ.

*ಅವಳ ಹ್ರುದಯ ವರ್ಯ್‌ಶಾಲ ನಾನು ಹೊದ್ದ ಶಲ್ಯ*
*(ಪನ್ನ ಹಾಡು – ೧೦೯)*

ಈ ವರ್ಯ್‌ಶಾಲ ಶಲ್ಯ ಇಂತ ಪ್ರಾಸಗಳು ಕೆಲವೊಮ್ಮೆ ಕವಿತೆಯನ್ನು ಹದಗೆಡಿಸುತ್ತವೆ. ಇವರ ಹಲವಾರು ಕವಿತೆಗಳಲ್ಲಿ ನವೋದಯದ ಗೇಯತೆ, ನವ್ಯದ ಗಪದ್ಯತೆಗಳೆರಡೂ ಇವರನ್ನು ನಿರಂತರವಾಗಿ ಕಾಡಿವೆ. ಒಂದೇ ಕಡೆ ಇವೆರಡರ ಮಿಕ್ಸ್ಚರು ಇರುವುದನ್ನೂ ಕೆಲವು ಕವಿತೆಗಳಲ್ಲಿ ಕಾಣಬಹುದು. ಇವರ ಹಲವಾರು ಕವಿತೆಗಳು ಒಮ್ಮೆಗೆ ಬರೆದ ಕವಿತೆಗಳಂತೆ ಕಾಣುವುದಿಲ್ಲ. ಯಾವಾಗಲೋ ಕಯ್ಯಿ, ಮತ್ಯಾವಾಗಲೋ ಇನ್ಯಾವಾಗಲೋ ತಲೆ ಕೆತ್ತಿದ ಬಡಗಿಯ ಕಾಶ್ಟ ಮೂರ‍್ತಿಗಳಂತೆ ಇವೆ. ಕುಸುರಿ ಕೆಲಸ ಇವರ ಕವಿತೆಗಳಲ್ಲಿ ಎದ್ದು ಕಾಣುತ್ತದೆ. ಇವರ ಅನೇಕ ಕವಿತೆಗಳು ಸಹಜ ಸಂಬವಿ ಅನ್ನಿಸುವುದಿಲ್ಲ. ನಿರಂತರ ಶ್ರಮ ಮತ್ತು ಕಸುಬುದಾರಿಕೆಯ ಉತ್ಪನ್ನಗಳಂತೆ ಅವು ಕಾಣುತ್ತವೆ. ಇವರಲ್ಲೊಬ್ಬ ಹಟಕ್ಕೆ ಬಿದ್ದ ಕವಿ ಇದ್ದಾನೆ. ಆತ ಬರೆಯಲೇಬೇಕೆಂದು ಹಟ ತೊಟ್ಟು ಪ್ರಾಕ್ಟೀಸು ಮಾಡುತ್ತಿದ್ದಾನೆ. ಹೀಗಾಗಿ ಇವರ ಬಹುಪಾಲು ಕವಿತೆಗಳು ಒಳ್ಳೆಯ ಕವಿತೆಯನ್ನು ಬರೆಯಬೇಕೆಂಬ ಅದಮ್ಯ ಬಯಕೆಯಿಂದ ಹುಡುಕಾಟಕ್ಕೆ ತೊಡಗಿರುವ ಯತ್ನಗಳಂತೆ ಇವೆ. ಒಟ್ಟಾರೆ ವೀಚಿ ಒಬ್ಬ ಶ್ರಮಜೀವಿ ಕವಿ. ಹಟದಿಂದ ಉತ್ತಮ ಕಾವ್ಯ ಕಟ್ಟಲಾಗದು ಎಂಬುದಕ್ಕೆ ವೀಚಿ ಉತ್ತಮ ಉದಾಹರಣೆ.

ಇವರ ಕೆಲವು ಕವಿತೆಗಳಲ್ಲಿ ಗದ್ಯಾತ್ಮಕ ಲಯದ ನಡುವೆ ದುತ್ತನೆ ದ್ವಿತೀಯ ಚರಣದ ಅಂತ್ಯ ಪ್ರಾಸವುಳ್ಳ ಚವಪದಿಗಳು ಪ್ರತ್ಯಕ್ಷವಾಗುತ್ತವೆ. ಕೆಲವು ಕವಿತೆಗಳು ಗದ್ಯ ಲಯದಲ್ಲಿ ಆರಂಬವಾಗಿ ಚವಪದಿಗಳಲ್ಲಿ





## 'ಹೊಸತು' ಓದುಗರಿಗೆ ಹೊಸ ವರ್ಷದ ಶುಭಾಶಯಗಳು

ಜೀವನದ ಎಲ್ಲ ಕ್ಷೇತ್ರಗಳ ಆಗುಹೋಗುಗಳನ್ನು ಗಂಭೀರ ವಿಶ್ಲೇಷಣೆಗೆ ಒಳಪಡಿಸುವ
ತಿಂಗಳ ಪತ್ರಿಕೆ

**ಹೊಸತು**



ಪ್ರಧಾನ ಸಂಪಾದಕ
ಡಾ|| ಜಿ. ರಾಮಕೃಷ್ಣ

ಡೆಮಿ ¼
ಪುಟಗಳು 64

ಸಾಮಾಜಿಕ, ಸೈದ್ಧಾಂತಿಕ, ಸಾಂಸ್ಕೃತಿಕ
ಕ್ಷೇತ್ರಕ್ಕೆ ನವಕರ್ನಾಟಕ ಪ್ರಕಾಶನದ
ಹೆಮ್ಮೆಯ ಕೊಡುಗೆ

ಮೂರು ವರ್ಷದ ಚಂದಾ ನೀಡಿದವರಿಗೆ
ನವಕರ್ನಾಟಕ ಪ್ರಕಾಶನದ ಪುಸ್ತಕಗಳ
ಮೇಲೆ 20% ರಿಯಾಯಿತಿ




**ಬಿಡಿ ಪ್ರತಿ ರೂ. 12 * ವಾರ್ಷಿಕ ಚಂದಾ ರೂ. 125 * ಮೂರು ವರ್ಷಕ್ಕೆ ರೂ. 300**

ನಿಮ್ಮ ಚಂದಾ ಹಣವನ್ನು 'ಹೊಸತು' ಹೆಸರಿಗೆ ಎಂ.ಓ. ಅಥವಾ ಡಿ.ಡಿ. ಮಾಡಿ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ

**ಹೊಸತು**
ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂ. ಪೆ. ಸಂಖ್ಯೆ 5159, ಬೆಂಗಳೂರು-1












Academic's

**Best Sellers**

## 21ST CENTURY CHILDREN ENCYCLOPEDIA

### —— Set of 4 books ——

These special books are a treasure chest of knowledge. A dream come true for every child, helping him/her navigate through a world of strange phenomena. Science, geography, history, literature, great personalities and much more.










*Our distributors for Karnataka :*

**M/s Navakarnataka Publications Pvt. Ltd.,** Bangalore - 560 001, Ph : 22203580/81/82



ಯುಕ್ತಾಯವಾಗುತ್ತವೆ. ಚವ್‌ಪದಿ ಚವ್‌ಕಟ್ಟಿನ ಲಯದ ಬಗ್ಗೆ ಇವರಿಗೆ ಅಪಾರವಾದ ಪ್ರೀತಿಯಿದೆ. (ನೋಡಿ ೩೭, ೧೫೧, ೪೫೮, ೪೪೭ ಇತ್ಯಾದಿ.) ಅಷ್ಟೇ ಅಲ್ಲ ವೀಚಿ ಹಲವು ರೀತಿಯ ಪ್ರಯೋಗಗಳನ್ನು ಮಾಡಿದ್ದಾರೆ. ಇವರ ಸಮಗ್ರ ಕಾವ್ಯದಲ್ಲಿ ಬಾವಗೀತೆ, ಚುಕ್ಕಳ ಕವಿತೆ, ನವ್ಯಕವಿತೆ, ಗಪದ್ಯಗಳು, ಅನುಬಾವ – ತತ್ವಗೀತೆಗಳಿಗೆಲ್ಲ ಸ್ಯಾಂಪಲುಗಳು ಸಿಗುತ್ತವೆ.

ಕವಿತೆ ಓದುಗನೊಳಗೆ ಬೆಳೆಯಬೇಕಾದರೆ, ಅದು ಓದುಗನ ಜೊತೆ ಯಾನಿಸಬೇಕಾದರೆ ಸುಲಬವಾಗಿ ನಿಲ್ದಾಣಗಳು ಸಿಕ್ಕಬೇಕು. ಎಲ್ಲೆಲ್ಲಿ ನಿಲ್ಲಿಸಿಕೊಂಡು ಓದಬೇಕೋ ಅಲ್ಲಲ್ಲಿ ನಿಲ್ಲಿಸಿಕೊಂಡು ಓದಲಿಕ್ಕೆ ಸುಲಬವಾಗಿ ಸಾದ್ಯವಾದರೆ ಮಾತ್ರ ಕವಿತೆಯ ಇಡೀ ಮೈಯ್ಯನ್ನು ಅನುಬವಿಸಲು ಸಾದ್ಯ. ಜೊತೆ ಸಾಗಲು, ಬೆಸೆಸಲು, ಗುದ್ದಾಡಲು ಸಾದ್ಯ. ನಿಲುಗಡೆಗಳೇ ಸಿಗದೆ ಹೋದರೆ ಕವಿತೆಯಲ್ಲಿ ಮವ್‌ನ, ಆತ್ಮಯಾನ ಸಾದ್ಯವಾಗದೇ ಹೋದರೆ ಇದು ಸಾದ್ಯವಿಲ್ಲ. ಇವರ ಬಹುಪಾಲು ಕವಿತೆಗಳಲ್ಲಿ ಓದುಗ ಪದಗಳೊಂದಿಗೆ ಗುದ್ದಾಡಬೇಕಾಗುತ್ತದೆ. ನಿರ್ದಿಶ್ಟ ನಿಲ್ದಾಣಗಳು ಬಹಳಶ್ಟು ಕವಿತೆಗಳಲ್ಲಿ ಸಿಗುವುದಿಲ್ಲ. ಅರ್ತದ, ಬಾವದ, ಪದಸಮೂಹದ ನಿಲುಗಡೆಗಳು ಸ್ಪಶ್ಟವಾಗಿ ಇಲ್ಲ. ಹೀಗಾದಾಗ ಆಯಾಯ ವರ್ತಮಾನಗಳ ಓದುಗ ತನ್ನದೇ ಅರ್‍ತ, ಬಾವ, ಪ್ರತಿಕ್ರಿಯೆ, ಪ್ರತಿಹುಟ್ಟು, ಸಹಯೋಗಗಳಲ್ಲಿ ತಂಗಲಾರ. ಈ ಕಾರಣಕ್ಕಾಗಿಯೇ ಒಂದು ಓದಿಗೆ ಇವರ ಕವಿತೆಗಳು ತೆಕ್ಕೆಗೆ ಸಿಗುವುದಿಲ್ಲ. ಮುಕ್ಯವಾಗಿ ಅಡಿಗ, ನರಸಿಂಹಸ್ವಾಮಿ, ಕುವೆಂಪು ಈ ಎಲ್ಲರ ಲಕ್ಶಣಗಳಿದ್ದರೂ ಕೂಡ ಯಾಕೆ ಇವರ ಕಾವ್ಯಕ್ಕೆ ಅವರಶ್ಟು ಮನ್ನಣೆ ಸಿಕ್ಕಿಲ್ಲ. ಇದಕ್ಕೆ ಹಲವು ಕಾರಣಗಳಿರಬಹುದು. ಆದರೆ ಒಂದು ಮುಕ್ಯ ಕಾರಣ ಮಾತ್ರ ಇದೇ. ಇವರ ಬಹುಪಾಲು ಕವಿತೆಗಳಲ್ಲಿ ಓದಿಗೆ – ಸುಲಬಕ್ಕೆ ನಿಲ್ದಾಣಗಳು ಸಿಕ್ಕದಿರುವುದು.

ಯಾವನ ವಿಮರ್‍ಶೆಯೂ ಆತ್ಯಂತಿಕವಲ್ಲ. ಹಾಗೇ ವಿಮರ್‍ಶೆ ಎಂಬುದು ಜಡ್ಜ್‌ಮೆಂಟ್ ಅಂತು ಅಲ್ಲವೇ ಅಲ್ಲ. ಅದ್ಯಾಕೋ ಕೊನೆಗೆ ಒಂದು ಮಾತು ಹೇಳಬೇಕೇನಿಸುತ್ತದೆ. ಸಾಹಿತ್ಯ ಪರಂಪರೆಯನ್ನು ಲೆಕ್ಕಕ್ಕೆ ಹಿಡಿದು ಯಾರಾದರೂ ನನಗೆ ಇಪ್ಪತ್ತು ಜನ ಕವಿಗಳನ್ನು ಪಟ್ಟಿ ಮಾಡಿ ಕೊಡು ಎಂದು. ಕೇಳಿದರೆ, ಅಲ್ಲಿ ವೀಚಿ ಇರುವುದಿಲ್ಲ. ಇದನ್ನು ಪಟ್ಟಿ ವಿಮರ್‍ಶೆ ಎಂದು ಬೇಕಾದರೆ ನೀವು ಕರೆಯಿರಿ (ಜರಿಯಿರಿ). ಸಾಹಿತ್ಯ ಚರಿತ್ರೆಯಲ್ಲಿ ವೀಚಿ ಕಂಡಿತಾ ಸ್ತಾನ ಪಡೆಯುತ್ತಾರೆ. ಆದರೆ ಇವರು ಪರಂಪರೆಯ ನಿರ್‍ಮಾಪಕರೆಂಬಶ್ಟು ಶಕ್ತ ಕವಿಯಲ್ಲ. ಇಷ್ಟಕ್ಕೂ ಎಲ್ಲಾ ವಿಮರ್ಶೆಯ ನಿರ್ಣಯಗಳೂ ತಾತ್ಕಾಲಿಕ ತಾನೇ.

(ಸೂ : ಇಲ್ಲಿ ಬಳಸಿರುವ ಪುಟಸಂಕ್ಯೆ ವೀಚಿಯವರ ಕಾವ್ಯ ಸಂಕಲನ 'ವೀಚಿ ಸಮಗ್ರ ಕಾವ್ಯ – ೨೦೦೨' ವೀಚಿ ಸಾಹಿತ್ಯ ಪ್ರತಿಶ್ಟಾನ, ತುಮಕೂರು ಈ ಪುಸ್ತಕವನ್ನು ಆದರಿಸಿದೆ.)

**ಸೂಚನೆ**

ಡಾ|| ಡಿ. ಎನ್. ಶಂಕರಭಟ್ಟರ 'ಹೊಸಬರಹ'ದಂತೆ ಈ ಲೇಖನವನ್ನು ಬರೆಯಲಾಗಿದೆ. ಷ, ಅರ್ಕಾವತ್ತು, ವಿಸರ್ಗ, ಮಹಾಪ್ರಾಣಗಳು ಇವುಗಳಿಲ್ಲದೆ, ಈ ಬರವಣಿಗೆ ಮಾಡಲಾಗಿದೆ. ಕನ್ನಡವನ್ನು ಮಾತಾಡುವಂತೆಯೇ ಬರೆಯಬೇಕು ಮತ್ತು ಬರೆಯುವ ರೀತಿ – ಉಚ್ಚಾರ ರೀತಿ ಒಂದೇ ಆಗಿರಬೇಕು ಎಂಬುದು ಈ ಬರೆವಣಿಗೆಯ ಹಿಂದಿನ ಮುಖ್ಯ ಉದ್ದೇಶ. – *ಲೇಖಕ*

(ಈ ರೀತಿಯ ಕನ್ನಡ ಲಿಪಿ ನಮಗೆ ಅಗತ್ಯವೇ ಎಂಬುದನ್ನು 'ಹೊಸತು' ಓದುಗರು ಚರ್ಚಿಸಬೇಕೆಂದು ವಿನಂತಿ.

– ಸಂ.)

ರಾಮಲಿಂಗಪ್ಪ ಟಿ. ಬೇಗೂರು
ಕನ್ನಡ ಉಪನ್ಯಾಸಕ, ಬಾಲಕರ ಸರ್ಕಾರಿ ಕಾಲೇಜು
ಚಿಂತಾಮಣಿ – ಚಿಕ್ಕಬಳ್ಳಾಪುರ ಜಿಲ್ಲೆ – ೫೬೩೧೨೫

# ತರ್ಕ ಮೀರುವ ಹೊತ್ತು



**ಈ** ನಿಮಿತ್ತ ಕಾಯದೊಳಗೆ
ಭಾವತೀವ್ರ ಮನ ಹೊತ್ತ ಜೀವ
ಗರ್ಭಗುಡಿ ಹೊಕ್ಕು ಗಂಟೆಗಳುರುಳಿವೆ
ಹೊರಗೆ ಅವಿಶ್ರಾಂತ ಕಾದವರವೆ
ಕುತೂಹಲದಿ ವಿಶಾಲ ಅರಳಿವೆ.

ಒಳಗೇನು ನಡೆದಿದೆ ?
ಪ್ರಾರ್ಥನೆಯೋ ? ಆರಾಧನೆಯೋ ?
ಪೂಜೆಯೋ ? ಪ್ರೇಮವೋ ?
ಕೊಂಚವೂ ಸದ್ದಿಲ್ಲವಲ್ಲ ?
ಒಳಗಿನ ಸುದ್ದಿಯಿಲ್ಲ
ತವಕ ತುಂದಿಲ
ಹೊರಗಿನವರಿಗೆ ಶಾಂತಿ ಇಲ್ಲ
ಪಿಸುನುಡಿಗಳ ಗುಟ್ಟಿನ ಗದ್ದಲ.

ಒಂದು ಸಹಜ ಕ್ರಿಯೆ
ನೂರಾರು ಕ್ಷುದ್ರ ಪ್ರತಿಕ್ರಿಯೆ !

ಗರ್ಭಗುಡಿಗೆ ಕಿಟಕಿಯಿಲ್ಲ
ಇರುವೊಂದು ತಲೆಮೊಟ್ಟುವ ಬಾಗಿಲಿಗೆ
ಒಳಗಿಂದ ಜಡಿದಿದೆ ತಾಪಾಳ
ಹೊರಗಿನವರೆದೆಯಲಿ ತೀರದ ತಳಮಳ
ಕಾಲ ಸರಿದಂತೆ
ವಿನಾಕಾರಣ ಕಳವಳ.

ಒಳಗೇನು ನಡೆದಿದೆಯೋ ಶಿವ ಶಿವಾ
ಆಲಿಂಗನವೋ ? ಚುಂಬನವೋ ?
ಹರನೊಂದಿಗೇ ಅಪಚಾರವೋ ?
ಶಾಂತಂ ಪಾಪಂ ಇದೆಂಥ ವಿಭ್ರಮೆ !

ಇನ್ನು ಕಾಯಲಾಗದಯ್ಯೋ
ಒಡೆದೇ ಬಿಡಿ ಬಾಗಿಲು
ಇಳಿಸುವ ಜೀವ ತನ್ಮಯತೆಯ ತೆವಲು
ಅಕಟಕಟಾ ಇದೆಂಥಾ ಕಲಿಗಾಲ
ಸೃಷ್ಟಿಕರ್ತನಿಗೂ ಭ್ರಮೆಯೆ ?
ಇದವನೇ ಆಡುತಿಹ ಲೀಲೆಯೆ ?

ತಡೆಯದೇ ಬಾಗಿಲು ಮುರಿದು
ಗರ್ಭಗುಡಿಗೆ ನುಗ್ಗಿತ್ತು ಕುರಿಹಿಂಡು
ಒಳಗೆ ಕಾಲಿಟ್ಟ ಘಳಿಗೆ
ಆವೇಶ ಉನ್ಮಾದ ಎಲ್ಲ ನಿಶ್ಯಬ್ದ
ತಟ್ಟಲು ಕಾದಿದ್ದ ಚಪ್ಪಾಳೆ
ಗಹಗಹಿಸಬೇಕಿದ್ದ ವಿಕೃತ ನಗೆ

ಚುಚ್ಚಬೇಕೆಂದಿದ್ದ ಮಾತಿನ ಹಗೆ
ಅವರವರಲ್ಲೇ ಸ್ತಬ್ಧ.

ಒಳಗೆ ಜೀವವೂ ಇಲ್ಲ ! ದೇವನೂ ಇಲ್ಲ !
ಕಾಯ ಶಾಶ್ವತವಲ್ಲ, ಮೂರ್ತಕ್ಕೆ ಚಲನೆಯಿಲ್ಲ.
ಆತ್ಮಕ್ಕೆ ಸಾವಿಲ್ಲ ಅಮೂರ್ತಕ್ಕೆಣೆಯಿಲ್ಲ.
ಸತ್ಯದೆದುರಿಗೆ ಮಿಥ್ಯಕ್ಕೆ ಜಯವಿಲ್ಲ.

ತರ್ಕವ ಮೀರುತ್ತದೆ ಮೌನದಿ ಮಾಯೆ
ಕುತರ್ಕ ವಿತರ್ಕ ಕುಬ್ಜ ಮನದ ಛಾಯೆ !



ರೂಪ ಹಾಸನ
'ಪ್ರೇರಣಾ', ಸೆಂಟ್ ಜೋಸೆಫ್ ಶಾಲೆ ಹತ್ತಿರ,
ಉತ್ತರ ಬಡಾವಣೆ, ಹಾಸನ - ೫೭೩೨೦೧



# ಕೆ.ಪಿ.ಸಿ.ಎಲ್ : ಕರ್ನಾಟಕವನ್ನು ಶಕ್ತಿಯುತಗೊಳಿಸುತ್ತಿದೆ

ವಿದ್ಯುತ್ ಕ್ಷೇತ್ರದ ಬಹಳಷ್ಟು ಉದ್ದಿಮೆಗಳು ಸುಧಾರಣೆಗಳ ಒತ್ತಡಗಳಿಗೆ ಪ್ರತಿಕ್ರಿಯಿಸುತ್ತಿರುವ ಕಾಲದಲ್ಲಿ ಕೆ.ಪಿ.ಸಿ.ಎಲ್. ನಿಜಕ್ಕೂ ಮುಂಚೂಣಿಯಾಗಿ ಸ್ಪಂದಿಸಿದೆ. ಕಠಿಣ ಸುಧಾರಣೆಗಳಿಂದಾಗಿ ಈ ಕ್ಷೇತ್ರದ ಮೇಲಿರುವ ಒತ್ತಡಗಳ ನಡುವೆಯೂ ಸಹ, ಕೆ.ಪಿ.ಸಿ.ಎಲ್. ಪರಿಸ್ಥಿತಿಗೆ ಹೊಂದಿಕೊಳ್ಳುವ ನೂತನ ಉಪಕ್ರಮಗಳ ಮೂಲಕ ತನ್ನ ಕಾರ್ಯಾಚರಣೆಯನ್ನು ಬದಲಿಸಿಕೊಂಡು, ಮುನ್ನುಗ್ಗಿ ಇಂದು ಇತರ ಉಪಯುಕ್ತತೆಗಳಿಗೆ ಮಾದರಿಯಾಗಿ ನಿಂತಿದೆ. ಕೆ.ಪಿ.ಸಿ.ಎಲ್.ನ ನವೀನ ತಂತ್ರಜ್ಞಾನ ಮತ್ತು ಹೊಸ ಯೋಜನೆಗಳಿಗೆ ಹಣಹೂಡಿಕೆ, ಪರಿಣಾಮಕಾರಿ ಹಣಕಾಸು, ಗುತ್ತಿಗೆ, ಕಲ್ಲಿದ್ದಲು, ಬೂದಿ ಹಾಗೂ ಪರಿಸರ ಸಂರಕ್ಷಣೆ ವ್ಯವಸ್ಥಾಪನೆ, ಇವೆಲ್ಲಕ್ಕೂ ಮಿಗಿಲಾಗಿ ಯೋಜನಾಭಿವೃದ್ಧಿ, ಚಾಲನೆ, ಪಾಲನೆ ಮತ್ತು ಇತರ ಉಪಯುಕ್ತತೆಗಳಿಗೆ ಸಲಹಾ ಸೇವೆ ಇವೆಲ್ಲವು ರಾಷ್ಟ್ರದ ವಿದ್ಯುತ್ ಕ್ಷೇತ್ರದ ವರ್ಚಸ್ಸಿಗೆ ಕೊಡುಗೆಗಳಾಗಿವೆ.

1970ರಲ್ಲಿ 746 ಮೆಗಾವಾಟ್ (ಮೆ.ವಾ.) ಸಾಮರ್ಥ್ಯದೊಂದಿಗೆ ರಚಿತಗೊಂಡು ಕೆ.ಪಿ.ಸಿ.ಎಲ್. ಇಂದು ಒಟ್ಟಾರೆ 4995 ಮೆ.ವಾ. ಹೊಂದಿದ್ದು, ಪ್ರಸುತ ನಿರ್ಮಾಣ ಹಂತದಲ್ಲಿರುವ ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಸ್ಥಾವರದ ಮೊದಲ ಹಂತ ಮತ್ತು ನಾಗಝರಿ ಘಟಕಗಳ ನವೀಕರಣ ಸೇರಿದಂತೆ ನೂತನ ಯೋಜನೆಗಳಾದ ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಸ್ಥಾವರದ ಎರಡನೇ ಹಂತ, ಬಿಡದಿ, ವಾರಾಹಿ ಜಲವಿದ್ಯುತ್ ಯೋಜನೆ ಹಂತ – 2 ಮತ್ತು ರಾಯಚೂರು ಶಾಖೋತ್ಪನ್ನ ವಿದ್ಯುತ್ ಸ್ಥಾವರ (ಘಟಕ – 8) ಯೋಜನೆಗಳಿಂದ ಮುಂದಿನ 5 ವರ್ಷಗಳಲ್ಲಿ ಸುಮಾರು 3000 ಮೆ.ವಾ.ಗಳಿಗೂ ಹೆಚ್ಚಿನ ವಿದ್ಯುತ್ ಸಾಮರ್ಥ್ಯವನ್ನು ವಿದ್ಯುತ್ ಜಾಲಕ್ಕೆ ಸೇರಿಸಿ ಕರ್ನಾಟಕವನ್ನು ಶಕ್ತಿಯುತಗೊಳಿಸುತ್ತಿದೆ.

## ಕರ್ನಾಟಕ ವಿದ್ಯುತ್ ನಿಗಮ ನಿಯಮಿತ

82, ಶಕ್ತಿಭವನ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು - 560 001
ದೂರವಾಣಿ : 2225 6568, ಫ್ಯಾಕ್ಸ್ : 2225 2144
ಇಮೇಲ್ : CCCM@KARNATAKAPOWER.COM
ವೆಬ್‌ಸೈಟ್ : www.karnatakapower.com

*With Best Compliments From*



# KANTHI PROPERTIES

Suraj Brigades, # 13/1, 60 ft. Road, 'G' Block,
Sahakaranagar, Bangalore - 560 092
☎: 23621822, 23621866



ಸ್ವಲ್ಪ ಆಲ್ಕೋಹಾಲ್ ಕುಡಿದರೆ ಹೃದಯಕ್ಕೆ ಒಳ್ಳೆಯದಂತೆ ಎಂದು ಅನೇಕರು ನಂಬುತ್ತಾರೆ. ೫೦ ವರ್ಷ ವಯಸ್ಸಿನ ನಂತರ, ಅರ್ಧ ಡ್ರಿಂಕ್ ಆಲ್ಕೋಹಾಲ್ (೧೫ ಮಿಲಿ ಬ್ರಾಂದಿ) ಹೃದಯಕ್ಕೆ ರಕ್ತ ಸಂಚಾರವನ್ನು ಉತ್ತಮಪಡಿಸಿ, ಹೃದಯಾಘಾತವಾಗುವುದನ್ನು ಸ್ವಲ್ಪ ಮಟ್ಟಿಗೆ ತಡೆಗಟ್ಟುತ್ತದೆ ಎಂಬ ಕೆಲವು ವೈದ್ಯ ಸಂಶೋಧನಾ ವರದಿಗಳನ್ನು, ಆಲ್ಕೋಹಾಲ್ ಲಾಬಿ ದುರುಪಯೋಗ ಮಾಡಿಕೊಳ್ಳುತ್ತಿದೆ. ಚಿಕ್ಕವಯಸ್ಸಿನಿಂದಲೇ ಆಲ್ಕೋಹಾಲ್ ಸೇವನೆ ಹೃದಯಕ್ಕೆ ಅಪಾಯಕಾರಿ ಎಂಬುದು ಸಾಕ್ಷ್ಯಾಧಾರಗಳಿಂದ ಶ್ರುತಪಟ್ಟಿದೆ ಎಂಬುದನ್ನು ಎಲ್ಲರೂ ಗಮನಿಸಬೇಕು. ಆಲ್ಕೋಹಾಲ್ ಹೃದಯಕ್ಕೆ ಒಳ್ಳೆಯದು ಎಂಬ ಪ್ರಚಾರಕ್ಕೆ ಮರುಳಾಗಬೇಡಿ.

# ಆಲ್ಕೋಹಾಲ್ ಮತ್ತು ನಿಮ್ಮ ಆರೋಗ್ಯ

ಇಡೀ ಪ್ರಪಂಚದಲ್ಲಿ ಅತಿ ಹೆಚ್ಚು ಆಲ್ಕೋಹಾಲ್ ...ತ್ಪಾದಿಸುವ ರಾಷ್ಟ್ರಗಳಲ್ಲಿ ಭಾರತಕ್ಕೆ ಎರಡನೇ ಸ್ಥಾನ. ...ಲ್ಕೋಹಾಲ್ ಪಾನೀಯಗಳ ಸೇವನೆ, ವರ್ಷೇ ...ರ್ಷೇ ಹೆಚ್ಚುತ್ತಿದೆ. ಹರೆಯದವರು, ಪ್ರೌಢ ...ಯಸ್ಕರು, ಎಲ್ಲ ವರ್ಗದ ಜನ ಆಲ್ಕೋಹಾಲ್ ...ವಿಸಲು ಮುಂದಾಗುತ್ತಿದ್ದಾರೆ. ಬಡವರ ಮದ್ಯ ...ರಾಯಿಯನ್ನು ಇತ್ತೀಚೆಗೆ ಸರ್ಕಾರ ನಿಷೇಧಿಸಿದ್ದರೂ, ...ರ್, ಬ್ರಾಂದಿ, ವಿಸ್ಕಿ, ರಮ್ಮನ್ನು ಸೇವಿಸುವವರ ಸಂಖ್ಯೆ ...ತ್ತುತ್ತಿದೆ. ಬೀರ್ ಪಬ್‌ಗಳು, ಬಾರ್‌ಗಳು, ವೈನ್ ...ಪ್‌ಗಳು ಎಲ್ಲೆಂದರೆ ಅಲ್ಲಿ ತಲೆಯೆತ್ತುತ್ತಿವೆ. ...೦೦೨ರಲ್ಲಿ ಬೆಂಗಳೂರು ನಿಮ್ಹಾನ್ಸ್ ಸಂಸ್ಥೆಯು ...ಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆ, ...ರವಾಡ, ಬೀದರ್ ಹಾಗೂ ಉತ್ತರ ಕನ್ನಡ ...ಲ್ಲೆಗಳಲ್ಲಿ ಸರ್ವೇಕ್ಷಣೆ ಮಾಡಿದಾಗ, ಹಿಂದಿನ ಒಂದು ...ಗಳ ಅವಧಿಯಲ್ಲಿ ಶೇಕಡ ೨೮ರಷ್ಟು ಗಂಡಸರು ...ತ್ತು ಶೇಕಡ ೧ರಷ್ಟು ಹೆಂಗಸರು ಮದ್ಯಪಾನ ...ಾಡುವವರಾಗಿದ್ದರು ಎಂದು ತಿಳಿದುಬಂತು. ...ಗರಪ್ರದೇಶದ ಕಾಲೇಜುಗಳಲ್ಲಿ ಶೇಕಡ ೪೦ರಿಂದ ...ರಷ್ಟು ವಿದ್ಯಾರ್ಥಿಗಳು ಆಗಿಂದಾಗ್ಗೆ ಆಲ್ಕೋಹಾಲ್ ...ನೀಯಗಳನ್ನು ಸೇವಿಸುತ್ತಾರೆಂದು ತಿಳಿದುಬರುತ್ತದೆ.

**ಡಾ॥ ಸಿ. ಆರ್. ಚಂದ್ರಶೇಖರ್**

**ಆಲ್ಕೋಹಾಲ್ ಸೇವನೆ ಮಾಡಲು, ಜನ ಕೊಡುವ ಕಾರಣಗಳೇನು ?**

* ಖುಷಿಗಾಗಿ
* ಜನರೊಂದಿಗೆ ಬೆರೆಯಲು, ಸಾಮಾಜಿಕ ಪ್ರತಿಷ್ಠೆಗಾಗಿ
* ದುಃಖ, ನೋವು, ಅವಮಾನ, ನಿರಾಶೆಗಳನ್ನು ಮರೆಯಲು
* ಶಾರೀರಿಕ ನೋವು, ಆಯಾಸ ಪರಿಹಾರ ಮಾಡಿಕೊಳ್ಳಲು
* ನಿದ್ರೆಮಾಡಲು
* ಹಸಿವನ್ನು ಹೆಚ್ಚಿಸಲು (ಊಟಕ್ಕೆ ಮೊದಲು ಆಲ್ಕೋಹಾಲ್ ಸೇವನೆ)
* ಚರ್ಮದ ಬಣ್ಣ ಕೆಂಪಾಗಲು, ಸ್ನಾಯುಗಳು ದಪ್ಪವಾಗಲು
* ಭಯವನ್ನು ತಗ್ಗಿಸಿ, ಧೈರ್ಯವಾಗಿರಲು
* ಮನಸ್ಸಿಗೆ ಸ್ಫೂರ್ತಿ ಬರಲು
* ಆರೋಗ್ಯವೃದ್ಧಿಗಾಗಿ. ಕೆಮ್ಮು, ಶೀತ ಕಡಿಮೆ ಮಾಡಲು. ಮೈ ಉಷ್ಣತೆಯನ್ನು ಹೆಚ್ಚಿಸಲು. ಮೂತ್ರಪಿಂಡದಲ್ಲಿ ಕಲ್ಲುಗಳು ಉಂಟಾಗದಿರಲು
* ಲೈಂಗಿಕ ಆಸೆ/ಶಕ್ತಿ ಹೆಚ್ಚಿಸಲು ಇತ್ಯಾದಿ.

ಆಲ್ಕೋಹಾಲ್ ಭ್ರಮೆಯನ್ನುಂಟುಮಾಡುವ ವಸ್ತು. ಆದರಿಂದ ಯಾವ ಒಳ್ಳೆಯ ಪರಿಣಾಮವೂ ಇಲ್ಲ. ಇರುವುದು ದುಷ್ಪರಿಣಾಮಗಳು ಮಾತ್ರ.

**ಆಲ್ಕೋಹಾಲ್ ಸೇವನೆಯ ಪರಿ :** ಹಲವು ರೀತಿಯಲ್ಲಿ ಜನ ಆಲ್ಕೋಹಾಲ್ ಪಾನೀಯಗಳನ್ನು ಸೇವಿಸುತ್ತಾರೆ.

**೧. ಸಾಮಾಜಿಕ ಸೇವನೆ**

ವಾರದ ಕೊನೆಯಲ್ಲಿ, ಭಾನುವಾರ, ರಜಾ ದಿನಗಳಲ್ಲಿ ಪಾರ್ಟಿಗಳಲ್ಲಿ, ಸಮಾರಂಭಗಳಲ್ಲಿ, ಪಿಕ್‌ನಿಕ್‌ಗಳಲ್ಲಿ ಸಂತೋಷಕ್ಕಾಗಿ, ಸಮಯ ಕಳೆಯಲು, ವ್ಯವಹಾರಗಳನ್ನು ಕುದುರಿಸುವ ಸಲುವಾಗಿ, ಅತಿಥಿಗಳನ್ನು ಸತ್ಕರಿಸುವ ಸಲುವಾಗಿ ಕುಡಿಯುವುದು, ವಿಶೇಷ ಸಂದರ್ಭಗಳಲ್ಲಿ ಸೇವಿಸುವುದು.

**೨. ಸಮಸ್ಯಾತ್ಮಕ ಸೇವನೆ**

ಸೇವನೆಯ ಪ್ರಮಾಣ ಹೆಚ್ಚಾಗಿ, ಪದೇ ಪದೇ ಸೇವಿಸುವುದು, ನೆಪಗಳನ್ನು ಒಡ್ಡಿ ಅತಿ ಹೆಚ್ಚಾಗಿ ಸೇವಿಸಿ – ಅನೇಕ ಸಮಸ್ಯೆಗಳುಂಟಾಗುವುವು. ಆರೋಗ್ಯ ಸಮಸ್ಯೆಗಳು, ಹಣಕಾಸಿನ ಸಮಸ್ಯೆಗಳು, ನಶೆ ಏರಿ ಜಗಳ/ಆಕ್ರಮಣಶೀಲತೆಯನ್ನು ತೋರಿಸುವುದು, ಅಪಘಾತ ಮಾಡುವುದು, ಗಾಯಗೊಳ್ಳುವುದು, ಕುಡಿದ ಅಮಲಿನಲ್ಲಿ ವಾಹನ ಚಲಾಯಿಸಿ ದಂಡ ತೆರುವುದು, ಅಪರಾಧ ಮಾಡುವುದು, ಸಾಮಾಜಿಕ ಸನ್ನಿವೇಶಗಳಲ್ಲಿ ಅನುಚಿತವಾಗಿ ನಡೆದುಕೊಳ್ಳುವುದು, ಲೈಂಗಿಕ ಅಪಚಾರ/ಅತ್ಯಾಚಾರ ಮಾಡುವುದು, ಕೋರ್ಟಿನಲ್ಲಿ ಶಿಕ್ಷೆ ಪಡೆಯುವುದು, ಮನೆಯವರು, ಬಂಧು-ಮಿತ್ರರು, ಮೇಲಧಿಕಾರಿಗಳು ವಿರೋಧಿಸಿದರೂ, ಕುಡಿಯುವುದನ್ನು ಮುಂದುವರೆಸುವುದು.

**೩. ಅತಿ ಸೇವನೆ**

ಕುಡಿಯಲು ಶುರುಮಾಡಿದರೆ, ನಶೆ ಏರುವ ತನಕ, ಪ್ರಜ್ಞಾಹೀನನಾಗುವ ತನಕ, ಜೇಬು ಖಾಲಿಯಾಗಿ ಇನ್ನಷ್ಟು

ಕೊಳ್ಳಲು ಆಗದ ತನಕ ಕುಡಿಯುವುದು. ಆಮೇಲೆ ನಿರ್ದಿಷ್ಟ ಅವಧಿಯವರೆಗೆ ಕುಡಿಯದೇ ಇರುವುದು. ಕುಡಿಯಲು ಶುರುಮಾಡಿದರೆ, ಕುಡಿತದ ಮೇಲೆ ಹತೋಟಿ ತಪ್ಪುವುದು.

**೪. ಸೇವನೆಯ ದಾಸ**

ಪ್ರತಿದಿನ ಆಲ್ಕೋಹಾಲ್ ಸೇವನೆ ಮಾಡಲೇಬೇಕು. ಸೇವನೆಯ ಪ್ರಮಾಣವನ್ನು ಹೆಚ್ಚಿಸುತ್ತಲೇ ಹೋಗುವುದು. ಒಂದು ದಿನ ಸೇವನೆ ಮಾಡದಿದ್ದರೆ ಕೈಕಾಲು ನಡುಕ, ನಿದ್ರಾಹೀನತೆ, ಚಡಪಡಿಕೆ, ಸಂಕಟ, ಏನನ್ನೋ ಕಳೆದುಕೊಂಡಂತೆ ಹಿಂಸೆಯನ್ನು ಅನುಭವಿಸುವುದು, ಆಲ್ಕೋಹಾಲ್‌ಗಾಗಿ ತಪತಪಿಸುವುದು, ಅಪರಾಧ ಮಾಡಿಯಾದರೂ ಆಲ್ಕೋಹಾಲ್ ಕೊಳ್ಳಲು ಹಣ ಸಂಪಾದಿಸುವುದು, ಬೇಡ ಎಂದವರ ಮೇಲೆ ಸಿಟ್ಟಾಗುವುದು, ಕ್ರೌರ್ಯವನ್ನು ಪ್ರದರ್ಶಿಸುವುದು, ಕೆಲಸ ಕರ್ತವ್ಯಗಳನ್ನು ನಿರ್ಲಕ್ಷಿಸಿ, ಮದ್ಯಪಾನದಲ್ಲಿ ತಲ್ಲೀನನಾಗುವುದು, ಅನಾರೋಗ್ಯಕ್ಕೆ ಒಳಗಾಗಿ, ವೈದ್ಯರು ಕುಡಿಯಬೇಡ ಅಪಾಯವೆಂದರೂ ಅದನ್ನು ಲೆಕ್ಕಿಸದೇ ಕುಡಿಯುವುದು, ಸಾಮಾಜಿಕವಾಗಿ ನೈತಿಕವಾಗಿ ಹೀನಮಟ್ಟವನ್ನು ತಲುಪುವುದು.

ಸಾಮಾನ್ಯವಾಗಿ ಬಹುತೇಕ ಜನ ಹರೆಯದಲ್ಲಿ, ಪ್ರೌಢ ವಯಸ್ಸಿನಲ್ಲಿ ಸಾಮಾಜಿಕ ಸೇವನೆ ಶುರುಮಾಡಿ, ಕ್ರಮೇಣ ಸಮಸ್ಯಾತ್ಮಕ ಕುಡಿತ ಮತ್ತು ಕುಡಿತದ ಚಟಕ್ಕೆ ತುತ್ತಾಗುತ್ತಾರೆ. ಈ ಅವಧಿ ಒಬ್ಬರಿಂದ ಇನ್ನೊಬ್ಬರಿಗೆ ಭಿನ್ನ. ಸಾಧಾರಣವಾಗಿ ಶೇಕಡ ೨೦ರಷ್ಟು ಮದ್ಯಪಾನಿಗಳು, ಕುಡಿತದ ಚಟಕ್ಕೆ ಬೀಳುತ್ತಾರೆ.

ಒಂದು ಡ್ರಿಂಕ್ ಅಥವಾ ಎರಡು ಡ್ರಿಂಕ್ಸ್ ತೆಗೆದುಕೊಂಡಾಗ (ಒಂದು ಡ್ರಿಂಕ್ ಎಂದರೆ ಒಂದು ಮಗ್ ಬೀರ್ ಅಥವಾ ೩೦ ಮಿಲಿ ಬ್ರಾಂದಿ/ವಿಸ್ಕಿ) ರಕ್ತದಲ್ಲಿ ಆಲ್ಕೋಹಾಲ್ ಪ್ರಮಾಣ ೮೦ ಮಿ. ಗ್ರಾಂ ಒಳಗಿರುತ್ತದೆ. ಇದಕ್ಕಿಂತ ಹೆಚ್ಚು ಡ್ರಿಂಕ್ಸ್ ತೆಗೆದುಕೊಂಡಾಗ, ಖಾಲಿಹೊಟ್ಟೆಯಲ್ಲಿ ಕುಡಿದಾಗ, ಸೋಡ ಬೆರೆಸಿ ಕುಡಿದಾಗ, ನಿಧಾನವಾಗಿ ಕುಡಿಯದೆ ಗಟಗಟನೇ ಕುಡಿದಾಗ ರಕ್ತದಲ್ಲಿ ಆಲ್ಕೋಹಾಲ್ ಪ್ರಮಾಣ ವೇಗವಾಗಿ ಏರಿ, ವ್ಯಕ್ತಿ ಅಮಲು ಸ್ಥಿತಿಗೆ ಹೋಗುತ್ತಾನೆ. ಸಮಸ್ಯೆಗಳಿಗೆ ತುತ್ತಾಗುತ್ತಾನೆ. ತನ್ನ ನಡೆನುಡಿಗಳ ಮೇಲೆ ಹತೋಟಿ ಕಳೆದುಕೊಳ್ಳುತ್ತಾನೆ. ದಿನಕ್ಕೆ ೨ ಡ್ರಿಂಕ್ಸ್‌ಗಳಿಗಿಂತಲೂ ಹೆಚ್ಚಿನ ಆಲ್ಕೋಹಾಲನ್ನು ವ್ಯಕ್ತಿ ಒಂದೆರಡು ವರ್ಷಗಳು ಅಥವಾ ಅದಕ್ಕೂ ಹೆಚ್ಚಿನ ಕಾಲ ಸೇವಿಸಿದರೆ ದೇಹದ ಅನೇಕ ಅಂಗಾಂಗಗಳು ರೋಗಗ್ರಸ್ತವಾಗುತ್ತವೆ.

**ಜೀರ್ಣಾಂಗಗಳು**

**ಜಠರದ ಉರಿತ, ಹುಣ್ಣು (ಗ್ಯಾಸ್ಟ್ರೈಟಿಸ್ ಮತ್ತು ಅಲ್ಸರ್)** : ರೋಗಲಕ್ಷಣಗಳು – ಹಸಿವು ತಗ್ಗುತ್ತದೆ, ಅಜೀರ್ಣ. ಎದೆ/ಹೊಟ್ಟೆ ಉರಿ, ತೇಗು, ವಾಕರಿಕೆ, ವಾಂತಿ, ಭೇದಿ, ಕಕ್ಕಸಿನಲ್ಲಿ ಕಂದುಬಣ್ಣದ ರಕ್ತಸ್ರಾವ, ಹೊಟ್ಟೆ ಉಬ್ಬರ ಇತ್ಯಾದಿ.

**ಲಿವರ್ : ಫ್ಯಾಟಿ ಲಿವರ್** : ಹಸಿವಿಲ್ಲ, ವಾಂತಿ , ಜಾಂಡೀಸ್

ರಕ್ತದಲ್ಲಿ SGPT, SGOT, ಆಲ್ಕಲೈನ್ ಫಾಸ್ಪಟೇಸ್, ಬಿಲಿರುಬಿನ್ ಹೆಚ್ಚುತ್ತದೆ. ಸಿರೋಸಿಸ್ : ಹೊಟ್ಟೆಯಲ್ಲಿ ನೀರು ತುಂಬಿಕೊಳ್ಳುತ್ತದೆ. ಆಯಾಸ, ಏದುಸಿರು, ಹಸಿವಿಲ್ಲ, ತೂಕವಿಳಿತ, ವಾಕರಿಕೆ, ವಾಂತಿ, ಹೊಟ್ಟೆನೋವು, ಜಾಂಡೀಸ್, ಜ್ವರ, ಮಲದಲ್ಲಿ ರಕ್ತ , ಪುರುಷರಲ್ಲಿ ಸ್ತನಗಳು ದಪ್ಪಗಾಗುವುದು.

| ವ್ಯಕ್ತಿಯ ಮನಸ್ಸು ಮತ್ತು ನಡವಳಿಕೆಗಳ ಮೇಲೆ, ಆಲ್ಕೋಹಾಲ್ ಪರಿಣಾಮಗಳು | |
|---|---|
| ಪ್ರತಿ ೧೦೦ ಮಿಲಿ ರಕ್ತದಲ್ಲಿ ಆಲ್ಕೋಹಾಲ್ | ಪರಿಣಾಮ |
| < ೮೦ ಮಿ.ಗ್ರಾಂ | ಖುಷಿ, ಹಿತಾನುಭವ, ಹೆಚ್ಚು ಸರಾಗವಾಗಿ ಮಾತು, ಸಣ್ಣದಾಗಿ ಕೈಕಾಲು ನಡುಕ, ಏಕಾಗ್ರತೆ ಮತ್ತು ಆತ್ಮವಿಶ್ವಾಸ ಹೆಚ್ಚುತ್ತದೆ. |
| > ೮೦ ಮಿ. ಗ್ರಾಂ | ಗದ್ದಲ ಮಾಡುವುದು, ಭಾವೋದ್ವೇಗ, ತಪ್ಪು ನಿರ್ಧಾರ ಮಾಡುವುದು, ವಾಹನ ಚಾಲನೆ ಮಾಡಲಾಗದಿರುವುದು. |
| ೧೦೦ರಿಂದ ೨೦೦ ಮಿ.ಗ್ರಾಂ | ದೃಷ್ಟಿ ಮಂದವಾಗುವುದು, ನೇರವಾಗಿ ದೃಢವಾಗಿ ಹೆಜ್ಜೆ ಹಾಕಲಾಗದಿರುವುದು, ತೊದಲುವಿಕೆ, ಕೈಗಳನ್ನು ಸಮರ್ಪಕವಾಗಿ ಬಳಸಲು ಆಗದಿರುವುದು, ಜಗಳ-ಆಕ್ರಮಣಶೀಲತೆ, ಜೋರುದನಿಯಲ್ಲಿ ಮಾತು. |
| ೨೦೦ರಿಂದ ೩೦೦ ಮಿ.ಗ್ರಾಂ | ತಾನಾಡಿದ ಮಾಡಿದ ಮಾತುಗಳು, ತಾನು ತೋರಿದ ಪ್ರತಿಕ್ರಿಯೆಗಳ ಬಗ್ಗೆ ನೆನಪಿಲ್ಲದಿರುವುದು. |
| ೩೫೦ ಮಿ. ಗ್ರಾಂ | ಪ್ರಜ್ಞಾಹೀನತೆ, ಕೋಮ |
| ೪೦೦ ಮಿ. ಗ್ರಾಂ | ಸಾವು |

**ಪೌಷ್ಟಿಕಾಂಶಗಳ ಕೊರತೆ** : ವ್ಯಕ್ತಿ ಪುಷ್ಟಿಯಾದ ಆಹಾರವನ್ನು ಸೇವಿಸಿದರೂ ವಿಟಮಿನ್, ಥೈಯಮಿನ್, ನಿಯಾಸಿನ್ ಕೊರತೆಯುಂಟಾಗುತ್ತದೆ. ಅನೀಮಿಯಾ (ರಕ್ತಕೊರೆ) ಆಲ್ಕೋಹಾಲ್ ಸೇವನೆ ಮಾಡುವವರಲ್ಲಿ ಸಾಮಾನ್ಯ.

**ಹೃದಯದ ತೊಂದರೆಗಳು** : ಕುಡಿಯದವರಿಗೆ ಹೋಲಿಸಿದರೆ, ಕುಡಿಯುವವರಲ್ಲಿ ಹೃದಯಾಘಾತವಾಗುವ ಸಂಭವ ಹೆಚ್ಚು. ಹಾಗೆಯೇ ಹೃದಯದ ಸ್ನಾಯುಗಳು ದುರ್ಬಲವಾಗುತ್ತವೆ.

**ಆಲ್ಕೋಹಾಲ್ ಹೃದಯಕ್ಕೆ ಒಳ್ಳೆಯದೆ ?**

ಸ್ವಲ್ಪ ಆಲ್ಕೋಹಾಲ್ ಕುಡಿದರೆ ಹೃದಯಕ್ಕೆ ಒಳ್ಳೆಯದಂತೆ ಎಂದು ಅನೇಕರು ನಂಬುತ್ತಾರೆ. ೫೦ ವರ್ಷ ವಯಸ್ಸಿನ ನಂತರ, ಅರ್ಧ ಡ್ರಿಂಕ್ ಆಲ್ಕೋಹಾಲ್ (೧೫ ಮಿಲಿ ಬ್ರಾಂದಿ) ಹೃದಯಕ್ಕೆ ರಕ್ತಸಂಚಾರವನ್ನು ಉತ್ತಮಪಡಿಸಿ, ಹೃದಯಾಘಾತವಾಗುವುದನ್ನು ಸ್ವಲ್ಪ ಮಟ್ಟಿಗೆ ತಡೆಗಟ್ಟುತ್ತದೆ ಎಂಬ ಕೆಲವು ವೈದ್ಯ ಸಂಶೋಧನಾ ವರದಿಗಳನ್ನು, ಆಲ್ಕೋಹಾಲ್ ಲಾಬಿ ದುರುಪಯೋಗಮಾಡಿ ಕೊಳ್ಳುತ್ತಿದೆ. ಚಿಕ್ಕವಯಸ್ಸಿನಿಂದಲೇ ಆಲ್ಕೋಹಾಲ್ ಸೇವನೆ ಹೃದಯಕ್ಕೆ ಅಪಾಯಕಾರಿ ಎಂಬುದು ಸಾಕ್ಷ್ಯಾಧಾರಗಳಿಂದ ಶ್ರುತಪಟ್ಟಿದೆ ಎಂಬುದನ್ನು ಎಲ್ಲರೂ ಗಮನಿಸಬೇಕು. ಆಲ್ಕೋಹಾಲ್ ಹೃದಯಕ್ಕೆ ಒಳ್ಳೆಯದು ಎಂಬ ಪ್ರಚಾರಕ್ಕೆ ಮರುಳಾಗಬೇಡಿ.

ಸಿಹಿಮೂತ್ರರೋಗಿಗಳು ಆಲ್ಕೋಹಾಲ್ ಸೇವನೆ ಮಾಡಿದರೆ, ಹೃದಯಾಘಾತದ ಸಂಭವನೀಯತೆ ಜೊತೆಗೆ ರಕ್ತದಲ್ಲಿ ಗ್ಲೂಕೋಸ್ ಪ್ರಮಾಣ ಏರುಪೇರಾಗುವ ಸಂಭವವೂ ಹೆಚ್ಚುತ್ತದೆ. ಹೀಗಾಗಿ ಡಯಾಬಿಟಿಸ್ ರೋಗಿಗಳು ಆಲ್ಕೋಹಾಲಿನಿಂದ ದೂರವಿದ್ದಷ್ಟೂ ಕ್ಷೇಮ.

**ಅಧಿಕ ರಕ್ತ ಒತ್ತಡ** : ಶೇಕಡ ೫೦ರಷ್ಟು ಆಲ್ಕೋಹಾಲ್ ಚಟ ಉಳ್ಳವರಿಗೆ ಬಿಪಿಯೂ ಹೆಚ್ಚಿರುತ್ತದೆ.

**ಮಿದುಳು ಮತ್ತು ನರಮಂಡಲ**

ಆಲ್ಕೋಹಾಲ್ ಮಿದುಳು ಮತ್ತು ನರಮಂಡಲಕ್ಕೆ ದೀರ್ಘಾವಧಿಯಲ್ಲಿ ಹಾನಿಯನ್ನುಂಟುಮಾಡುತ್ತದೆ. ಪರಿಧಿಯ ನರ ತಂತುಗಳು ಸವೆದುಹೋಗಿ ಕೈಕಾಲು ಜೋಮು ಬೆರಳುಗಳನ್ನು ಸೂಜಿಯಲ್ಲಿ ಚುಚ್ಚಿದ ಅನುಭವವಾಗುತ್ತದೆ (Neuropathy). ಏಕಾಗ್ರತೆಯ ಕೊರತೆ, ನೆನಪು ಕಡಿಮೆಯಾಗುವುದು, ಚಿಂತನಾಶಕ್ತಿ ಕುಗ್ಗುವುದು, ಬೌದ್ಧಿಕ ಸಾಮರ್ಥ್ಯ ಹಾಳಾಗುವುದು ಸಾಮಾನ್ಯ. ಡೆಮೆನ್ಷಿಯ ಕೂಡ ಕಾಣಿಸಿಕೊಳ್ಳಬಹುದು (ಮರೆವಿನ ರೋಗ).

**ಬುದ್ಧಿ ಭ್ರಮಣೆ** : ಆಲ್ಕೋಹಾಲ್ ಚಟ ಉಳ್ಳವರು, ಒಂದು ದಿನ ಆಲ್ಕೋ ಸೇವಿಸದಿದ್ದರೆ, 'ಡೆಲಿರಿಯಾಟ್ರಮನ್ಸ್' ಎಂಬ ಬುದ್ಧಿಭ್ರಮಣೆಗೆ ಒಳಗಾಗುತ್ತಾರೆ. ಭಯ, ಭ್ರಮೆಗಳು, ಚಡಪಡಿಕೆ, ಹಿಂಸಾಚಾರ, ಅರೆ ಪ್ರಜ್ಞಾಸ್ಥಿತಿ, ಫಿಟ್ಸ್, ಕೈಕಾಲುಗಳ ನಡುಕ ಈ ಕಾಯಿಲೆಯ ಪ್ರಮುಖ ಲಕ್ಷಣಗಳು.

**ಸಂಶಯ ಪೀಡಿತ** : ಆಲ್ಕೋಹಾಲ್ ಸೇವಿಸುವ ವ್ಯಕ್ತಿ ಸಂಶಯ ಪೀಡಿತನಾಗುತ್ತಾನೆ. ಮುಖ್ಯವಾಗಿ ತನ್ನ ಹೆಂಡತಿಯ ಶೀಲ, ಗುಣ, ನಡೆವಳಿಕೆಯನ್ನು ಅನುಮಾನಿಸುತ್ತಾನೆ. ಆಕೆಗೆ ಚಿತ್ರಹಿಂಸೆ ನೀಡುತ್ತಾನೆ. ಬಂಧು ಮಿತ್ರರನ್ನು, ಸಹೋದ್ಯೋಗಿಗಳನ್ನು, ನೆರೆಹೊರೆಯವರನ್ನು 'ನನ್ನ ವಿರುದ್ಧ ಸಂಚುಮಾಡುತ್ತಾರೆ. ನನ್ನನ್ನು ಹಾಳುಮಾಡಲು ಪ್ರಯತ್ನಿಸುತ್ತಾರೆ' ಇತ್ಯಾದಿ ಸಂಶಯ ದೃಷ್ಟಿಯಿಂದ ಕಾಣುತ್ತಾನೆ.

ಕಾರ್ಸ ಕಾಫಾ ಚಿತ್ತವಿಕಲತೆ, ವರ್ನಿಕೆಯ ಎನ್‌ಸೆಫಲೋಪತಿಯಂತಹ ನರ ಮತ್ತು ಮಾನಸಿಕ ಕಾಯಿಲೆಗಳೂ ಕಾಣಿಸಿಕೊಳ್ಳುತ್ತವೆ.

**ಮರೆವು** : ಆಲ್ಕೋಹಾಲ್ ಸೇವನೆ ಮಾಡುವವರಲ್ಲಿ

ತಿಸಾಮಾನ್ಯ ತಮ್ಮ ಮಾತು ನಡವಳಿಕೆ, ಪ್ರತಿಕ್ರಿಯೆ, ತಾವು ಮಾಡಿದ ವಹಾರಗಳನ್ನು ಮರೆತುಬಿಡುತ್ತಾರೆ. ರೋಗನಿರೋಧಕ ಶಕ್ತಿ ಕುಗ್ಗುತ್ತದೆ. ಮೂಳೆಮಜ್ಜೆಯಲ್ಲಿ ಬಿಳಿರಕ್ತಕಣಗಳ ಉತ್ಪತ್ತಿ ಕಡಿಮೆಯಾಗುತ್ತದೆ. ಹೀಗಾಗಿ ಈ ಕ್ತಿಗಳು ನ್ಯುಮೋನಿಯಾ, ಕ್ಷಯ, ಎಚ್‌ಐವಿ ಸೋಂಕಿಗೆ ಬೇಗ ಒಳಗಾಗುತ್ತಾರೆ.

**ಲೈಂಗಿಕ ಶಕ್ತಿ**: ಆಲ್ಕೋಹಾಲ್ ಲೈಂಗಿಕ ಆಸೆಯನ್ನು ಹೆಚ್ಚಿಸುತ್ತದೆ. ಆದರೆ ಲೈಂಗಿಕ ಯೆ ಮಾಡುವ ಶಕ್ತಿಯನ್ನು ನಾಶಮಾಡುತ್ತದೆ. ಶಿಶ್ನ ಉದ್ರೇಕವಾಗುವುದಿಲ್ಲ ಅಥವಾ ಉದ್ರೇಕ ಬೇಗ ಇಳಿದುಹೋಗುತ್ತದೆ. ವಿವೇಚನೆ ಇಲ್ಲದೆ, ಆಲ್ಕೋಹಾಲ್ ಅಮಲಿನಲ್ಲಿ ವ್ಯಕ್ತಿ ಅಪರಿಚಿತರೊಡನೆ ಅಥವಾ ವೇಶ್ಯೆಯರೊಡನೆ ಲೈಂಗಿಕ ಸಂಪರ್ಕ ಮಾಡುವುದರಿಂದ, ಲೈಂಗಿಕ ರೋಗಗಳು ಅಂಟಿಕೊಳ್ಳುವ ಸಂಭವ ಹೆಚ್ಚಾಗುತ್ತದೆ. ಈ ರೋಗಗಳನ್ನು ಅವರು ತಮ್ಮ ಹೆಂಡತಿ ಮತ್ತು ಇತರರಿಗೂ ವರ್ಗಾಯಿಸುತ್ತಾರೆ.

ಸ್ನಾಯುಗಳು, ಮೂಳೆಗಳು ಸವೆತಕ್ಕೆ ಒಳಗಾಗುತ್ತವೆ. ಆಯಾಸ, ನೋವು ಮೂಳೆಮುರಿತ ಸಾಮಾನ್ಯ.

ಹೀಗಾಗಿ, ಆಲ್ಕೋಹಾಲ್ ಸೇವಿಸುವ ವ್ಯಕ್ತಿ ಕ್ರಮೇಣ ಅನೇಕ ರೋಗರುಜಿನಗಳ ಡಾಗುತ್ತಾನೆ. ಅಕಾಲಿಕ ಮರಣಕ್ಕೆ ತುತ್ತಾಗುತ್ತಾನೆ.

**ಮಾಜದಲ್ಲಿ ಆಲ್ಕೋಹಾಲ್ ಮಾಡುವ ದುಷ್ಪರಿಣಾಮಗಳು**

ಜನಸಂಖ್ಯೆಯ ಶೇಕಡ ೧೦ರಷ್ಟು ಜನ ಆಲ್ಕೋಹಾಲ್ ಸಂಬಂಧಿತ ರೋಗರುಜಿನಗಳಿಂದ ಬಳಲುತ್ತಿದ್ದಾರೆ.

ಜಿಲ್ಲಾ ಆಸ್ಪತ್ರೆಗಳಿಗೆ ದಾಖಲಾಗುವ ಶೇಕಡ ೫೪ರಷ್ಟು ಗಂಡಸರಲ್ಲಿ ಶೇಕಡ ೧೬ರಷ್ಟು ಹೆಂಗಸರಲ್ಲಿ ಆಲ್ಕೋಹಾಲ್ ಸೇವನೆಯ ಅಭ್ಯಾಸವಿದೆ. ಹೀಗಾಗಿ ಶೇಕಡ ೨೩ರಷ್ಟು ಒಳರೋಗಿಗಳು ಆಲ್ಕೋಹಾಲ್ ಸಂಬಂಧಿತ ಕಾಯಿಲೆಗಳಿಂದ ಬಳಲುತ್ತಾರೆ.

ಶೇಕಡ ೩೦ ಸಾವುಗಳಲ್ಲಿ ಆಲ್ಕೋಹಾಲ್ ನೇರವಾಗಿ ಅಥವಾ ಪರೋಕ್ಷವಾಗಿ ಕಾರಣವಾಗಿರುತ್ತದೆ.

ಅಪಘಾತಕ್ಕೆ ಈಡಾದ ೪೦೦೦ ಪುರುಷರಲ್ಲಿ ಶೇಕಡ ೨೦ರಷ್ಟು ಜನ ಆಲ್ಕೋಹಾಲ್ ಅಮಲಿನಲ್ಲಿದ್ದರು.

ಶೇಕಡ ೫೦ರಷ್ಟು ಪೆಟ್ಟು ಗಾಯಗಳು ಆಲ್ಕೋಹಾಲ್ ಸೇವನೆಗೆ ಸಂಬಂಧಿಸಿದವು.

ಆತ್ಮಹತ್ಯೆ ಮಾಡಿಕೊಂಡು ಸತ್ತವರಲ್ಲಿ ಶೇಕಡ ೧೪ ಗಂಡಸರು ಮದ್ಯವ್ಯಸನಿಗಳಾಗಿದ್ದರು.

ಉದ್ಯೋಗ ಸ್ಥಳಗಳಲ್ಲಿ ನಡೆಯುವ ಅಪಘಾತಗಳಲ್ಲಿ ಶೇಕಡ ೨೦ರಿಂದ ೨೫ ಪ್ರಕರಣಗಳಲ್ಲಿ, ಆಲ್ಕೋಹಾಲ್ ಸೇವನೆ ಅಪಘಾತಕ್ಕೆ ಕಾರಣವಾಗಿತ್ತು.

೨೦೦೦ನೇ ಇಸವಿಯಲ್ಲಿ, ನಿಮ್ಹಾನ್ಸ್‌ನ ಡಾ|| ವಿವೇಕ್ ಬೆನೆಗಲ್ ಮತ್ತು ಂಡದವರು ಮಾಡಿದ ಒಂದು ಅಧ್ಯಯನದಿಂದ, ಆಲ್ಕೋಹಾಲ್ ಸೇವನೆಯಿಂದ ಕ್ತಿ ಮತ್ತು ಸಮಾಜಕ್ಕೆ ಎಷ್ಟು ಖರ್ಚು ಬರುತ್ತದೆ ಎಂಬುದು ಪ್ರಕಟವಾಗಿದೆ. ಪ್ರತಿ ವ್ಯಕ್ತಿಗೆ, ತಿ ತಿಂಗಳು ಆಸ್ಪತ್ರೆ, ಔಷಧಿ, ಸಾಲದ ಬಡ್ಡಿ ಇತರ ಖರ್ಚುಗಳಿಂದ ೧೧,೦೦೦ ರ್ಚಾದರೆ, ಸಮಾಜಕ್ಕೆ ಆತನಿಂದಾಗಿ ರೂ. ೧೮,೮೦೦ ಖರ್ಚಾಗುತ್ತದೆ.

ಕರ್ನಾಟಕದಲ್ಲಿರುವ ೫ ಲಕ್ಷ ಆಲ್ಕೋಹಾಲ್ ಚಟದವರಿಂದ ರ್ಕಾರಕ್ಕೆ ಬರುವ ಆದಾಯ (ಎಕ್ಸೈಜ್ ಡ್ಯೂಟಿ)(ವರ್ಷಕ್ಕೆ) ರೂ. ೮೬೦ ಕೋಟಿ. ದರೆ ಆಲ್ಕೋಹಾಲ್ ಸಂಬಂಧಿತ ಸಮಸ್ಯೆಗಳಿಂದಾಗಿ

| | |
|---|---|
| ಗಲುವ ಖರ್ಚು | ರೂ. ೧೮೪೦ ಕೋಟಿ |
| ಜ್ಯಕ್ಕೆ ನಿವ್ವಳ ನಷ್ಟ | ರೂ. ೯೮೦ ಕೋಟಿ |

**ಲ್ಕೋಹಾಲ್ ಚಟಕ್ಕೆ ಚಿಕಿತ್ಸೆ**

ಆಲ್ಕೋಹಾಲ್ ಚಟವನ್ನು ಒಂದು ಮಾನಸಿಕ ಕಾಯಿಲೆ ಎಂದು ರಿಗಣಿಸಲಾಗಿದೆ. ಆಲ್ಕೋಹಾಲ್ ಇಲ್ಲದೆ ಆ ವ್ಯಕ್ತಿ, ತೀವ್ರ ದೈಹಿಕ ಮತ್ತು ಮಾನಸಿಕ ಂಸೆಯನ್ನು ಅನುಭವಿಸುತ್ತಾನೆ. ಆಲ್ಕೋಹಾಲ್‌ಗಾಗಿ ಏನನ್ನಾದರೂ ಮಾಡಲು ದ್ಧನಾಗುತ್ತಾನೆ. ಈ ಚಟದಿಂದ ಹೊರಬರಲು ನಾಲ್ಕು ಹಂತದ ಚಿಕಿತ್ಸೆ ಇವೆ.

೧. **ಶಮನದ ಮೊದಲ ಹಂತದಲ್ಲಿ**: ಆಲ್ಕೋಹಾಲ್ ಸೇವನೆಯನ್ನು ಥಟ್ಟನೆ ಲ್ಲಿಸಬೇಕು. ಆಗ ಕಾಣಿಸಿಕೊಳ್ಳುವ ಹಿಂದೆಗೆತದ ರೋಗಲಕ್ಷಣಗಳನ್ನು ಶಮನಕಾರಿ

**ಕರ್ನಾಟಕದಲ್ಲಿ ದೊರೆಯುವ ಮದ್ಯಪಾನೀಯಗಳು ಮತ್ತು ಅವುಗಳಲ್ಲಿರುವ ಮದ್ಯ ಪ್ರಮಾಣ**

೧. ಬೀರ್ (ಸ್ಟಾಂಡರ್ಡ್) ಶೇಕಡ ೪, ಸ್ಪೆಷಲ್ ಶೇಕಡ ೫ರಿಂದ ೧೫ ಮದ್ಯಸಾರ
೨. ಸಾರಾಯಿ ಶೇಕಡ ೩೫ ಸಾರ
೩. ವಿಸ್ಕಿ, ಬ್ರಾಂದಿ, ರಮ್, ಜಿನ್ ಶೇಕಡ ೪೩ ಮದ್ಯಸಾರ
೪. ಕಳ್ಳಭಟ್ಟಿ ಅಥವಾ ಅನಧಿಕೃತ ಪಾನೀಯಗಳು: ಮದ್ಯಸಾರದ ಪ್ರಮಾಣ ಭಿನ್ನ.

ಔಷಧಿಗಳಿಂದ ನಿವಾರಿಸಬೇಕು. ರೋಗಿಗೆ 'ಬಿ' ವಿಟಮಿನ್ನನ್ನೂ ಇಂಜೆಕ್ಷನ್ ಮೂಲಕ ಕೊಡಬೇಕು. ಈ ಹಂತ ಒಂದು ವಾರದವರೆಗೆ ವಿಸ್ತರಿಸುತ್ತದೆ. ರೋಗಿ ಹೊರರೋಗಿ ಯಾಗಿ ಅಥವಾ ಆಸ್ಪತ್ರೆಗೆ ಸೇರಿ ಒಳರೋಗಿಯಾಗಿ ಚಿಕಿತ್ಸೆ ಪಡೆಯಬಹುದು.

* ಎರಡನೇ ಹಂತದ ಚಿಕಿತ್ಸೆಯಲ್ಲಿ ರೋಗಿ ಆಲ್ಕೋಹಾಲ್ ಚಟವನ್ನು ಬೆಳೆಸಿಕೊಳ್ಳಲು ಒತ್ತಾಸೆ ನೀಡಿದ ವೈಯಕ್ತಿಕ, ಕೌಟುಂಬಿಕ, ಆರ್ಥಿಕ, ಔದ್ಯೋಗಿಕ ಹಾಗೂ ಸಾಮಾಜಿಕ ಕಾರಣಗಳನ್ನು ಪತ್ತೆಮಾಡಿ ಅವುಗಳನ್ನು ನಿವಾರಿಸುವುದು ಅಥವಾ ಅವುಗಳನ್ನು ಹೇಗೆ ನಿಭಾಯಿಸಬೇಕೆಂದು ವ್ಯಕ್ತಿ ಮತ್ತು ಮನೆಯವರಿಗೆ ಹೇಳಿಕೊಡುವುದು. ವ್ಯಕ್ತಿಯಲ್ಲಿ ಇರಬಹುದಾದ ಮಾನಸಿಕ ಕಾಯಿಲೆ (ವಿಶೇಷವಾಗಿ ಖಿನ್ನತೆ) ಹಾಗೂ ದೈಹಿಕ ಕಾಯಿಲೆಗಳಿಗೆ ಚಿಕಿತ್ಸೆ ನೀಡುವುದು.

* ಮೂರನೇ ಹಂತದಲ್ಲಿ, ವ್ಯಕ್ತಿ ಮತ್ತು ಮನೆಯವರಿಗೆ, ಚಟದ ಪುನರಾವರ್ತನೆ ಆಗದಂತೆ ಏನು ಮಾಡಬೇಕೆಂಬ ಮಾಹಿತಿ. ಆಲ್ಕೋಹಾಲ್ ಸೇವಿಸಲು ಪ್ರೇರಣೆ ನೀಡುವ ಎಲ್ಲ ಜನ/ಸನ್ನಿವೇಶಗಳನ್ನು ನಿವಾರಿಸಲು ಸಲಹೆ. ವ್ಯಕ್ತಿಗೆ ಸಮಸ್ಯೆಗಳು, ನಕಾರಾತ್ಮಕ ಭಾವನೆಗಳನ್ನು ನಿಭಾಯಿಸಲು ಕೌಶಲಗಳ ಕಲಿಕೆ.

* ನಾಲ್ಕನೇ ಹಂತದಲ್ಲಿ, ವ್ಯಕ್ತಿ ಉಪಯುಕ್ತವಾಗಿ ಜೀವಿಸಲು ಅವಕಾಶಗಳನ್ನು ಮನೆಯವರು ಕಲ್ಪಿಸಿಕೊಡುವುದು. ಉದ್ಯೋಗದ ಪುನರ್ವಸತಿ. ಸಮಾಜದಲ್ಲಿ ಗೌರವದಿಂದ ಬಾಳಲು ಪ್ರೇರಣೆ.

ಆಲ್ಕೋಹಾಲ್ ಸೇವನೆ ಮತ್ತೆ ಪ್ರಾರಂಭವಾಗದಂತೆ ನೆರವಾಗಬಲ್ಲ, 'ಡೈಸಲ್ಫುರಾಮ್' ಮಾತ್ರೆಯನ್ನು ಅಥವಾ ನಾಲ್‌ಟ್ರೆಕ್ಸೋನ್ ಮಾತ್ರೆ ಅಥವಾ ಅಕಾಮಾಪ್ರೊಸೇಟ್ ಅಥವಾ ಫ್ಲೂಯಾಕ್ಸಟಿನ್ ಮಾತ್ರೆಯನ್ನು ಆರು ತಿಂಗಳಿನಿಂದ ಒಂದು ವರ್ಷದವರೆಗೆ ನೀಡುವುದು. ಜೀವನಶೈಲಿಯನ್ನೇ ಬದಲಿಸಿ ಕೊಳ್ಳುವುದು. ವ್ಯಕ್ತಿ ಸ್ವಇಚ್ಛೆಯಿಂದ ಬಂದು, ಚಿಕಿತ್ಸೆಯಲ್ಲಿ ಭಾಗಿಯಾದರೆ, ಆಲ್ಕೋಹಾಲ್ ಚಟದಿಂದ ಮುಕ್ತಿಪಡೆಯುವ ಸಾಧ್ಯತೆ ಹೆಚ್ಚುತ್ತದೆ. ಆತನಿಗೆ ಇಚ್ಛೆ ಇಲ್ಲದೆ, ಮನೆಯವರ ಬಲವಂತಕ್ಕೋ, ಇತರರ ಬಲವಂತಕ್ಕೋ ಬಂದರೆ, ಚಿಕಿತ್ಸೆ ಯಶಸ್ವಿಯಾಗದಿರಬಹುದು. ಸಾಧಾರಣವಾಗಿ, ಚಿಕಿತ್ಸೆಯು ಶೇಕಡ ೫೦ರಿಂದ ೬೦ರಷ್ಟು ಜನರಲ್ಲಿ ಯಶಸ್ವಿಯಾಗುತ್ತದೆ. ಉಳಿದವರಲ್ಲಿ ಚಟದ ಮರುಕಳಿಕೆ ಸಾಮಾನ್ಯ. ಮತ್ತೆ ಚಿಕಿತ್ಸೆ ಪ್ರಾರಂಭಿಸಬೇಕು.

ವ್ಯಕ್ತಿಗೆ ಗೊತ್ತಿಲ್ಲದಂತೆ, ಕೊಡುವ ಔಷಧಿ/ವಸ್ತು/ಚಿಕಿತ್ಸೆ ಯಾವುದೂ ಇಲ್ಲ. ಮನೆಯವರು, ಬಂಧು – ಮಿತ್ರ ಸಹೋದ್ಯೋಗಿಗಳು ಒಟ್ಟಾಗಿ, ಒತ್ತಾಯ ಮಾಡಿ ಚಿಕಿತ್ಸೆಗೆ ಒಪ್ಪಲು ರೋಗಿಯ ಮನ ಒಲಿಸಬೇಕು.

**ನಿವಾರಣೆ**: ವ್ಯಕ್ತಿಗೆ ಮತ್ತು ಸಮಾಜಕ್ಕೆ ಇಷ್ಟೊಂದು ಹಾನಿಯನ್ನುಂಟುಮಾಡುವ, ಆರೋಗ್ಯ ಮತ್ತು ನೆಮ್ಮದಿಗೆ ಮಾರಕವಾದ ಮದ್ಯಪಾನೀಯಗಳನ್ನು ಸೇವಿಸಬೇಕೆ? ಅವು ನೀಡುವ ತಾತ್ಕಾಲಿಕ ಖುಷಿ, ನಶೆ ಮತ್ತು ಅನುಭವಕ್ಕಾಗಿ, ನಮ್ಮ ಆರೋಗ್ಯವನ್ನು ಬಲಿಕೊಡಬೇಕೇ ಯೋಚಿಸಿ. ನಮ್ಮ ಹರೆಯದವರಿಗೆ ಈ ವಿಚಾರದಲ್ಲಿ ಎಚ್ಚರದಿಂದಿರಲು ಹೇಳಿ.

**ಡಾ|| ಸಿ. ಆರ್. ಚಂದ್ರಶೇಖರ್**
ನಂ. ೩೪, ೨ನೇ ಅಡ್ಡರಸ್ತೆ, ಸಿಂಡಿಕೇಟ್ ಬ್ಯಾಂಕ್ ಕಾಲೋನಿ, ಅರಕೆರೆ
ಬನ್ನೇರುಘಟ್ಟ ರಸ್ತೆ, ಬೆಂಗಳೂರು - ೫೬೦ ೦೭೬

# ನವಕರ್ನಾಟಕ ಪ್ರಕಾಶನದ ಕೆಲವು ಪ್ರಶಸ್ತಿ ಪುರಸ್ಕೃತ ಕೃತಿಗಳು

ಕಂದಾ ಓದುವೆಯಾ – ಭಾಗ 1 (ಸಚಿತ್ರ 5ನೇ ಮುದ್ರಣ) — ಬಿ. ಕೆ. ತಿರುಮಲಮ್ಮ — 20.00
(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1995)

ಬೆಳ್ಳಕ್ಕಿ ಮತ್ತು ಬುಲ್‌ಬುಲ್ (ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ಮಕ್ಕಳ ಸಾಹಿತ್ಯ ಪ್ರಶಸ್ತಿ' 2003) — ಗಣೇಶ ಪಿ. ನಾಡೋರ — 30.00

ಕುಂಭಕರ್ಣನ ನಿದ್ದೆ (3ನೇ ಮುದ್ರಣ) — ಎನ್. ಶ್ರೀನಿವಾಸ ಉಡುಪ — 20.00
(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1996-97, ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ಶಿಶುಸಾಹಿತ್ಯ ಬಹುಮಾನ' 1996 )

ಶಬ್ದಲೋಕ (7ನೇ ಮುದ್ರಣ) (ಎನ್.ಸಿ.ಇ.ಆರ್.ಟಿ. ಪ್ರಶಸ್ತಿ 1996) — ಗಾಯತ್ರಿ ಮೂರ್ತಿ — 25.00

ವಿಶ್ವವಿಖ್ಯಾತ ಸಂಶೋಧಕರು – ಸಾಧನೆಗಳು (9ನೇ ಮುದ್ರಣ)
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1991-92) — ಸೂರ್ಯಕಾಂತ — 40.00

ಪ್ರತಿಬಿಂಬ (ಮಕ್ಕಳಿಗಾಗಿ ಮನೋರಂಜಕ ವೈಜ್ಞಾನಿಕ ಚಟುವಟಿಕೆಗಳು) — ಪ್ರೊ॥ ಡಿ. ಆರ್. ಬಳೂರಗಿ — 35.00
(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 2000)

ಸೃಜನಶೀಲ ಸಂಶೋಧಕ ಚಿಂತಕ – ಲೂಯಿ ಪಾಶ್ಚರ್ (4ನೇ ಮುದ್ರಣ)
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1996) — ತುಮಕೂರು ನಾಗಭೂಷಣ — 40.00

ತೆಂಗು. ಸಸ್ಯ-ಸಂರಕ್ಷಣೆ (3ನೇ ಮುದ್ರಣ) (ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಪ್ರಶಸ್ತಿ) — ಬಿ. ಮಹಂತೇಶ್ — 50.00

ಬಳ್ಳಿ ತರಕಾರಿಗಳು (6ನೇ ಮುದ್ರಣ) — ಡಾ॥ ಪಿ. ನಾರಾಯಣಸ್ವಾಮಿ, ಡಾ॥ ಎಲ್. ವಸಂತ — 25.00
(ಧಾರವಾಡ ಕೃಷಿ ವಿ.ವಿ. ಕನ್ನಡ ಸಂಘದ ಪಂಚವಾರ್ಷಿಕ 'ಕೃಷಿ ಸಾಹಿತ್ಯ ಶ್ರೀ' ಪ್ರಶಸ್ತಿ 1994-99)

ಗಿಡಮೂಲಿಕೆಗಳಿಂದ ಸೌಂದರ್ಯ ಸಾಧನಗಳು (7ನೇ ಮುದ್ರಣ) — ಡಾ॥ ಎಲ್. ವಸಂತ — 25.00
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸಕ್ಕಾಗಿ ಪ್ರಶಸ್ತಿ' 1994)

ಶ್ರೀಸಾಮಾನ್ಯ ಮತ್ತು ವೈದ್ಯ (2ನೇ ಮುದ್ರಣ) — ಡಾ॥ ಸ. ಜ. ನಾಗಲೋಟಿಮಠ — 28.00
(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998, ಕನ್ನಡ ವೈದ್ಯಸಾಹಿತ್ಯ ಪರಿಷತ್ತಿನ 'ಕುವೆಂಪು ಪ್ರಶಸ್ತಿ' 1998)

ಆಪ್ತ ಸಲಹೆ ಸಮಾಧಾನ (5ನೇ ಮುದ್ರಣ) — ಡಾ॥ ಸಿ. ಆರ್. ಚಂದ್ರಶೇಖರ್ — 45.00
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1996)

ಮಡದಿ ಮತ್ತೊಬ್ಬ ಚೆಲುವಗೆ (ಈ ವರ್ತನೆಗಳು ನಿಮ್ಮಲ್ಲಿ ಎಷ್ಟಿವೆ ? ಭಾಗ - 2, 2ನೇ ಮು.) — ಡಾ॥ ಮೀನಗುಂಡಿ ಸುಬ್ರಮಣ್ಯ — 50.00
(ಡಾ॥ ಪಿ. ಎಸ್. ಶಂಕರ ಪ್ರತಿಷ್ಠಾನದ 'ವಿಶೇಷ ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2002)

ಮಾನಸಿಕ ಸಮಸ್ಯೆಗಳಿಗೆ 'ಮನಸ್ಸು' ಇಲ್ಲದ ಮಾರ್ಗ (6ನೇ ಮುದ್ರಣ) — ಡಾ॥ ಮೀನಗುಂಡಿ ಸುಬ್ರಮಣ್ಯ — 160.00
(ವರ್ಧಮಾನ ಪ್ರಶಸ್ತಿ 1993)

ಲೈಂಗಿಕ ಆರೋಗ್ಯ (4ನೇ ಮುದ್ರಣ) — ಡಾ॥ ಪದ್ಮಿನಿ ಪ್ರಸಾದ್ — 70.00
(ಡಾ॥ ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2003-04)

ನೀವು ಬಳಸುವ ಔಷಧಗಳು (4ನೇ ಮುದ್ರಣ)
(ಡಾ॥ ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2000) — ಡಾ॥ ಸಿ. ಆರ್. ಚಂದ್ರಶೇಖರ್ — 80.00

ವೈದ್ಯಲೋಕದ ಕೌತುಕಗಳು (4ನೇ ಮುದ್ರಣ) — ಡಾ॥ ಎಚ್. ಡಿ. ಚಂದ್ರಪ್ಪಗೌಡ — 80.00
(ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ 1993)

ಹಿತ-ಅಹಿತ. ವೃತ್ತಿ ಜೀವನದ 25 ವರ್ಷಗಳು — ಡಾ॥ ಸಿ. ಆರ್. ಚಂದ್ರಶೇಖರ್ — 125.00
(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ॥ ಹಾ.ಮಾ.ನಾ. ಪ್ರಶಸ್ತಿ' 2002)

ನನಗೆ 'ಬೈ-ಪಾಸ್' ಆಯಿತು (ಸ್ವಾನುಭವದ ಕಥನ) — ಡಾ॥ ಎಚ್. ಡಿ. ಚಂದ್ರಪ್ಪ ಗೌಡ — 65.00
(ಡಾ॥ ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2002)

ಮನೋರೋಗ ಗೆಲ್ಲಬಹುದೇ ? (2ನೇ ಮುದ್ರಣ) — ಸ್ನೇಹಾ — 75.00
(ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಶಸ್ತಿ 1996; ಕರ್ನಾಟಕ ಲೇಖಕಿಯರ ಪರಿಷತ್ತಿನ ಪ್ರಶಸ್ತಿ 1996)

ಭಾಷೆಯ ಬೆಳಕು (2ನೇ ಮುದ್ರಣ) (ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 2003) — ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ — 70.00

ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ (4 ಸಂಪುಟಗಳ ಸೆಟ್. 3ನೇ ಮುದ್ರಣ)
(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1998-99) — (ಪ್ರ. ಸಂ.: ಎಂ. ಎ. ಸೇತುರಾವ್,
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1998-99). — ಕೆ. ಎಲ್. ಗೋಪಾಲಕೃಷ್ಣ ರಾವ್) — 1800.00

ಫಲಜ್ಯೋತಿಷ ನಂಬುವಿರಾ ? (2ನೇ ಮುದ್ರಣ)
(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ॥ ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 2001) — ಡಾ॥ ಎಸ್. ಬಾಲಚಂದ್ರರಾವ್ — 40.00

ಸಂಪ್ರದಾಯ, ವಿಜ್ಞಾನ ಮತ್ತು ಸಮಾಜ (6ನೇ ಮುದ್ರಣ)
(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ॥ ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1988-89) — ಡಾ॥ ಎಸ್. ಬಾಲಚಂದ್ರರಾವ್ — 35.00

ವೈಜ್ಞಾನಿಕ ಮನೋಧರ್ಮ (7ನೇ ಮುದ್ರಣ) — ಜಿ. ಟಿ. ನಾರಾಯಣರಾವ್ — 80.00
(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪುರಸ್ಕಾರ 1990, ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ॥ ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1992)

ಭಗವದ್ಗೀತೆ. ಒಂದು ವೈಚಾರಿಕ ಒಳನೋಟ (2ನೇ ಮುದ್ರಣ)
(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ॥ ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1997) — ಪ್ರೊ॥ ಜಿ. ವಿ. ವೀರಭದ್ರಪ್ಪ — 50.00

| | | |
|---|---|---|
| ಇದು ಮುಗಿಯದ ಕಥೆ (3ನೇ ಮುದ್ರಣ) | ದೇವಿಪ್ರಸಾದ್ ಚಟ್ಟೋಪಾಧ್ಯಾಯ | |
| **(ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998)** | *(ಅನು : ಜಿ. ಕುಮಾರಪ್ಪ)* | 60.00 |
| ಪ್ರಾಚೀನ ಭಾರತದಲ್ಲಿ ಭೌತಿಕವಾದ (2ನೇ ಮುದ್ರಣ) | ದೇವಿಪ್ರಸಾದ್ ಚಟ್ಟೋಪಾಧ್ಯಾಯ | |
| **(ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1989)** | *(ಅನು : ಬಿ.ವಿ.ಕಕ್ಕಿಲ್ಲಾಯ)* | 80.00 |
| ಭಾರತೀಯ ದರ್ಶನಗಳು (2ನೇ ಮುದ್ರಣ) | ದೇವಿಪ್ರಸಾದ್ ಚಟ್ಟೋಪಾಧ್ಯಾಯ | |
| **(ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1994)** | *(ಅನು : ಬಿ.ವಿ.ಕಕ್ಕಿಲ್ಲಾಯ)* | 80.00 |
| ಲೋಕಾಯತ (ಚಾರ್ವಾಕ ದರ್ಶನ. 2ನೇ ಮುದ್ರಣ) **(ಉಗ್ರಾಣ ಪ್ರಶಸ್ತಿ 1999)** | ಗೌರೀಶ ಕಾಯ್ಕಿಣಿ | 45.00 |
| ಕರ್ನಾಟಕ ಏಕೀಕರಣ ಇತಿಹಾಸ (2ನೇ ಮುದ್ರಣ) | | |
| **(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1997)** | ಡಾ|| ಎಚ್. ಎಸ್. ಗೋಪಾಲ ರಾವ್ | 200.00 |
| ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು (ರಾಷ್ಟ್ರೀಯ ಚಳುವಳಿಯ ಸಮಗ್ರ ಪರಿಚಯ ; 4ನೇ ಮುದ್ರಣ) | | |
| **(ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪುರಸ್ಕಾರ 1991)** | ಎನ್. ಪಿ. ಶಂಕರನಾರಾಯಣ ರಾವ್ | 180.00 |
| ಪ್ರಾಚೀನ ಭಾರತ (4ನೇ ಮುದ್ರಣ) | ಪ್ರೊ|| ಆರ್. ಎಸ್. ಶರ್ಮ | |
| **(ಉತ್ತಮ ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998)** | *(ಅನು : ಎನ್. ಪಿ. ಶಂಕರನಾರಾಯಣ ರಾವ್)* | 180.00 |
| **(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1998)** | | |
| ಅಲಿಸಯ್ಯ ಮಲೆಯ ಕವಿ (ಕುವೆಂಪು ಸಾಹಿತ್ಯ : ವಸ್ತು 'ಗತಿ'ತತ್ವದ ಅಧ್ಯಯನ) | ವಿ. ಚಂದ್ರಶೇಖರ ನಂಗಲಿ | 70.00 |
| **(ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ಉತ್ತಮ ವಿಮರ್ಶಾ ಗ್ರಂಥ' ಪ್ರಶಸ್ತಿ 2005)** | | |
| ಕಲಾವಿದ ಹೆಬ್ಬಾರರ ರೇಖಾಲಾವಣ್ಯ | | |
| **(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1999)** | ವ್ಯಾಸರಾಯ ಬಲ್ಲಾಳ | 80.00 |
| ಮಲಯಾಳದ 10 ಕಥೆಗಾರ್ತಿಯರು (ಪರಿಚಯ-ಪ್ರಾಸ್ತಾವಿಕ-ಸಂದರ್ಶನ-ಕಥೆ) | ಸಂ: ಡಾ|| ಶ್ರೀದೇವಿ ಕೆ. ನಾಯರ್ | |
| **(ಕನ್ನಡ ಸಾಹಿತ್ಯ ಪರಿಷತ್ತಿನ 'ಮಲ್ಲಿಕಾ ದತ್ತಿ ಬಹುಮಾನ' 2004)** | *(ಅನು: ಪ್ರೊ|| ಪಾರ್ವತಿ ಜಿ. ಐತಾಳ್)* | 95.00 |
| ಬೇಡಿ ಕಳಚಿತು ದೇಶ ಒಡೆಯಿತು (ಭಾರತ ಸ್ವಾತಂತ್ರ್ಯ ಸಂಗ್ರಾಮ ಕುರಿತ ರೋಮಾಂಚನಕಾರಿ ಬೃಹತ್ ಕಾದಂಬರಿ) | | |
| **(ಉಗ್ರಾಣ ಪ್ರಶಸ್ತಿ 2003)** | ಕೋ. ಚೆನ್ನಬಸಪ್ಪ | 600.00 |
| ಮಯ್ಯಾದಾಸನ ವಾಡೆ | ಭೀಷ್ಮ ಸಾಹನಿ | 160.00 |
| **(ಕನ್ನಡ ಸಾಹಿತ್ಯ ಪರಿಷತ್ತಿನ 'ಶ್ರೀ ಆರ್. ಎನ್. ಹಬ್ಬು' ದತ್ತಿನಿಧಿ ಪ್ರಶಸ್ತಿ 2003)** | *(ಅನು: ದು. ನಿಂ ಬೆಳಗಲಿ)* | |
| ತಮಸ್ (3ನೇ ಮುದ್ರಣ) **(ಮೂಲ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1975)** | ಭೀಷ್ಮ ಸಾಹನಿ | 110.00 |
| ಅಲೀಮಾ ಅಕ್ಷರ ಕಲಿತದ್ದು | | |
| **(ಮುಸ್ಲಿಂ ಲೇಖಕರ ಸಂಘ ಮತ್ತು ಬ್ಲಡ್ ಬಯೋಮ್ ಬ್ಯಾಂಕಿಂಗ್ ಟ್ರಸ್ಟ್ ಪ್ರಶಸ್ತಿ 2001)** | ಫಕ್ರುದ್ದೀನ್ ಇರುವೈಲ್ | 55.00 |
| ಬಹಿಷ್ಕೃತ – ಒಂದು ನೆನಪು | ಡಾ|| ನರೇಂದ್ರ ಜಾಧವ್ | |
| **(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 2005)** | *(ಅನು : ಸುಮಾ ದ್ವಾರಕಾನಾಥ್)* | 150.00 |
| ಅಕ್ರಮ ಸಂತಾನ (2ನೇ ಮುದ್ರಣ) | ಶರಣಕುಮಾರ ಲಿಂಬಾಳೆ | |
| **(ಅನುವಾದಕ್ಕಾಗಿ 'ಉಮಾಪತಿ ಚುಕ್ಕಿ ಪ್ರತಿಷ್ಠಾನದ ಪ್ರಶಸ್ತಿ' 1993)** | *(ಅನು : ದು. ನಿಂ ಬೆಳಗಲಿ)* | 50.00 |
| ಉಚಲ್ಯಾ (4ನೇ ಮು.) **(ಮೂಲ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1980)** | ಲಕ್ಷ್ಮಣ ಗಾಯಕವಾಡ | 50.00 |
| | *(ಅನು : ಚಂದ್ರಕಾಂತ ಪೋಕಳೆ)* | |
| ಮುಂಬೈ ಡೈರಿ **(ಕನ್ನಡ ಸಾಹಿತ್ಯ ಪರಿಷತ್ತಿನ 'ಅಂತರರಾಷ್ಟ್ರೀಯ ಮಹಿಳಾ ವರ್ಷ ಪ್ರಶಸ್ತಿ' 2002)** | ಉಮಾ ರಾವ್ | 60.00 |
| ಬದುಕು ಬದಲಿಸಬಹುದು (3ನೇ ಮು.) **(ಕರ್ನಾಟಕ ಸಂಘ 'ಶಿವಮೊಗ್ಗದ ಡಾ|| ಹಾ.ಮಾ.ನಾ. ಪ್ರಶಸ್ತಿ' 2005)** | ನೇಮಿಚಂದ್ರ | 110.00 |
| ಪೆರುವಿನ ಪವಿತ್ರ ಕಣಿವೆಯಲ್ಲಿ (2ನೇ ಮುದ್ರಣ) **(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ 2004)** | ನೇಮಿಚಂದ್ರ | 120.00 |
| ಅಂಡಮಾನ್ ಕನಸು (2ನೇ ಮು.) **(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ 2002)** | ಡಾ|| ರಹಮತ್ ತರೀಕೆರೆ | 60.00 |
| ಭಾನುವಾರವೆಂದರೆ **(ಪೆರ್ಲ ಕೃಷ್ಣಭಟ್ಟ ಕಾವ್ಯ ಪ್ರಶಸ್ತಿ 1996)** | ಸುಕನ್ಯಾ ಕಳಸ | 20.00 |
| ಹೊಕ್ಕಳಲ್ಲಿ ಹೂವಿದೆ (2ನೇ ಮುದ್ರಣ) | ರಂಜಾನ್ ದರ್ಗಾ | 25.00 |
| **(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1996)** | | |
| The Bhagavadgita – A Rational Enquiry | *Prof. B. V. Veerabhadrappa* | 90.00 |
| (Karnataka Sahitya Academy Award 2004) | *(Tr. by D. K. Seetharama Shastry)* | |
| Phoenix & Four Other Mime Plays (2nd Print) | *Chi. Srinivasaraju* | 40.00 |
| (Karnataka Sahitya Academy Award 2005) | *(Translated by S. Sugata)* | |

'ಹೊಸತು'
ಮೂರು ವರ್ಷದ
ಚಂದಾದಾರರಿಗೆ
ನವಕರ್ನಾಟಕ ಪ್ರಕಟಣೆಗಳ
ಮೇಲೆ ಶೇ. ೨೦ರ ವಿಶೇಷ
ರಿಯಾಯಿತಿ


**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ 5159, ಬೆಂಗಳೂರು - 560 001

ದೂರವಾಣಿ : 22203580,81,82, 30578020,21,22 ಫ್ಯಾಕ್ಸ್ : 30578023

e-mail: navakarnataka@dataone.in www.navakarnatakabooks.com

—ಶಾಖೆಗಳು—

ಬೆಂಗಳೂರು © 080-22251382 ○ ಮೈಸೂರು © 0821-2424094

ಮಂಗಳೂರು © 0824-2441016 ○ ಗುಲ್ಬರ್ಗಾ © 08472-224302

Estd : 1927 Phone : 26679041, 26506279 Fax : 26672928

# THE GRAIN MERCHANTS' CO-OPERATIVE BANK LTD.

NO. 2, Pampamahakavi Road, Chamarajpet, Bangalore - 560 018

## INTEREST RATES ON DEPOSITS

| | |
|---|---|
| 60 Days to 180 Days | 6 % |
| 181 Days to 1 Year | 7 % |
| Above 1 Year upto 2 Years | 8 % |
| Above 2 Years upto 3 Years | 9 % |
| Above 3 Years upto 5 Years | 10 % |
| Senior Citizen (above 60 Years ) | 0.5 % (Extra) |

Savings Bank Account 3.5 %

### BOARD OF MANAGEMENT

1. Sri N. Venkateshaiah *President*
2. Smt. T. S. Parvathi *Vice President*
3. Sri P. C. Mohan *Director*
4. Sri M. Sathyanarayana Swamy *Director*
5. Sri N. R. Chandran *Director*
6. Sri B. S. Venkatesh *Director*
7. Sri R. P. M. Srinivasalu *Director*
8. Sri M. V. Muralidhar *Director*
9. Sri C. P. Subbaraju Setty *Director*
10. Sri C. R. Murali *Director*
11. Sri S. Babu *Director*
12. Sri A. R. Ranganath *Director*
13. Sri K. M. Srinivasa Murthy *Director*
14. Sri M. M. Harish *Director*
15. Sri R. N. Vijayanand *Director*

Sri G. S. Nagaraj *Incharge Secretary*

No. 62, Old Taragupet
Bangalore - 560 053
Phone : 22877141, 22284297

*Branches*

No. 149, APMC Yard, 5th Main
Yeshwanthapur, Bangalore - 22
Phone : 23375264, 23370902



# ಶ್ರೀ ತ್ಯಾಗರಾಜ ಕೋ-ಆಪರೇಟಿವ್ ಬ್ಯಾಂಕ್ ಲಿಮಿಟೆಡ್

ಪ್ರಧಾನ ಕಛೇರಿ : ನಂ. 5, 9ನೇ ಅಡ್ಡ ರಸ್ತೆ, ಎಸ್. ಆರ್. ಕಾಲೋನಿ
ಬೆಂಗಳೂರು - 560 019. ದೂರವಾಣಿ : 22958150/22958151

:: ಶಾಖೆಗಳು ::

1. **ಬನಶಂಕರಿ 1ನೇ ಹಂತದ ಶಾಖೆ :** ನಂ. 15 ಶ್ರೀನಿವಾಸ ನಗರ, ಬನಶಂಕರಿ 1ನೇ ಹಂತ, ಬೆಂಗಳೂರು - 560 050. ✆ 22958162, 22958163
2. **ಬನಶಂಕರಿ 3ನೇ ಹಂತದ ಶಾಖೆ :** ನಂ. 40. ಕತ್ತರಿಗುಪ್ಪೆ ಮುಖ್ಯರಸ್ತೆ, ಬನಶಂಕರಿ 3ನೇ ಹಂತ, ಬೆಂಗಳೂರು - 560 085. ✆ 22958158, 22958159
3. **ಬನಶಂಕರಿ 2ನೇ ಹಂತದ ಶಾಖೆ :** ನಂ. 3346/ಎ-228, ಕೆ. ಆರ್. ರಸ್ತೆ, ಬನಶಂಕರಿ 2ನೇ ಹಂತ, ಬೆಂಗಳೂರು - 560 070. ✆ 22958164, 22958165
4. **ಜೆ.ಪಿ. ನಗರ 1ನೇ ಹಂತದ ಶಾಖೆ :** ನಂ. 50/2, ಕನಕಪುರ ಮುಖ್ಯರಸ್ತೆ, ಜೆ. ಪಿ. ನಗರ 1ನೇ ಹಂತ, ಬೆಂಗಳೂರು - 560 078. ✆ 22958160, 22958161
5. **ಮೈಸೂರು ರೋಡ್ ಶಾಖೆ :** ನಂ. 19/1, 1ನೇ ಮಹಡಿ, 'ಎ' ಅಡ್ಡರಸ್ತೆ, ಮೈಸೂರು ರಸ್ತೆ, ಬ್ಯಾಟರಾಯನಪುರ, ಬೆಂಗಳೂರು - 560 026. ✆ 22958166, 22958167
6. **ಕಾಮಾಕ್ಷಿಪಾಳ್ಯ ಶಾಖೆ :** ನಂ. 61/1, ಗೊರವನಹಳ್ಳಿ, ಯಶವಂತಪುರ ಹೋಬಳಿ, ಮಾಗಡಿ ಮುಖ್ಯರಸ್ತೆ, ಕಾಮಾಕ್ಷಿಪಾಳ್ಯ, ಬೆಂಗಳೂರು - 560 079. ✆ 22958168, 22958169

### ನಿರ್ದೇಶಕ ಮಂಡಳಿ ಸದಸ್ಯರು

ಪಿ. ವಿ. ಶಶಿಕುಮಾರ್
**ಅಧ್ಯಕ್ಷರು**

ಸುಂದರೇಗೌಡ
**ಉಪಾಧ್ಯಕ್ಷರು**

ನಿರ್ದೇಶಕರು

| | | |
|---|---|---|
| ಸಿ. ಚನ್ನಯ್ಯ | ಎಸ್. ವಿ. ಶಿವರಾಂ | ವಿ. ಸಿದ್ಧಯ್ಯ |
| ವಿ. ಎನ್. ವೀರನಾಗಪ್ಪ | ಎಂ. ಎನ್. ಕಂಬೇಗೌಡ | ಎಸ್. ಸತ್ಯನಾರಾಯಣ ಗುಪ್ತ |
| ಡಿ. ಪ್ರಸನ್ನಕುಮಾರ್ | ಕು॥ ಎಂ. ಎಸ್. ನಾಗರತ್ನ | ಡಿ. ಪ್ರಸನ್ನಕುಮಾರ್ |
| ಪಿ. ಕೆ. ಗಿರೀಶ್ | ಎಸ್. ಎಸ್. ಉಮಾಶಂಕರ್ | |

ಮೋಹನ್ ಎನ್. ಹರಡೇಕರ್
ಪ್ರಧಾನ ವ್ಯವಸ್ಥಾಪಕರು

### ಬ್ಯಾಂಕಿನ ಪ್ರಗತಿಯ ಪಕ್ಷಿನೋಟ ದಿನಾಂಕ : 31-10-2007ಕ್ಕೆ

| | ರೂ. ಲಕ್ಷಗಳಲ್ಲಿ |
|---|---|
| 1. ಪಾವತಿಯಾದ ಷೇರು ಬಂಡವಾಳ | 622.92 |
| 2. ಆಪದ್ಧನ ಮತ್ತು ಇತರೇ ನಿಧಿಗಳು | 3789.76 |
| 3. ಠೇವಣಿಗಳು | 14153.79 |
| 4. ದುಡಿಯುವ ಬಂಡವಾಳ | 19232.40 |
| 5. ಸಾಲ ಮತ್ತು ಮುಂಗಡಗಳು | 8362.41 |
| 6. ಹೂಡಿಕೆಗಳು | 9772.96 |

ಸದಸ್ಯರಿಗೆ ಸೇಫ್ ಡಿಪಾಸಿಟ್ ಲಾಕರುಗಳು, ಠೇವಣಿಗೆ ವಿಮೆ, ಠೇವಣಿಗಳ ಮೇಲೆ ವಾಣಿಜ್ಯ ಬ್ಯಾಂಕುಗಳಿಗಿಂತ ಅಧಿಕ ಬಡ್ಡಿ ಚೆಕ್ ಕ್ಲಿಯರಿಂಗ್, ಪೇ ಆರ್ಡರ್, ಬೇರೆ ಊರುಗಳಿಗೆ ಡಿ.ಡಿ. ಸೌಲಭ್ಯ (ಐ.ಸಿ.ಐ.ಸಿ.ಐ. ಬ್ಯಾಂಕ್ ಮುಖಾಂತರ), ಚಿನ್ನಾಭರಣಗಳ ಮೇಲೆ ಮತ್ತು ಇನ್ನಿತರ ಸಾಲ ಮುಂತಾದ ಎಲ್ಲಾ ತರಹದ ಬ್ಯಾಂಕಿಂಗ್ ಸೌಲಭ್ಯಗಳಿರುತ್ತವೆ

ಇತ್ತೀಚಿನ ಕೆಲವರ್ಷಗಳಲ್ಲಿ ಇತಿಹಾಸ, ಸಾಹಿತ್ಯ ಹಾಗೂ ಸಾಂಸ್ಕೃತಿಕ ವಿಚಾರಗಳಿಗೆ ಸಂಬಂಧಿ ದಂತೆ ಅಂತರ ಶಿಸ್ತೀಯ, ಬಹುಸಂಸ್ಕೃತಿಯ, ಹೊಸ ದೃಷ್ಟಿಕೋನದ ಅಧ್ಯಯನಗಳು ಕನ್ನಡದಲ್ಲಿ ರುತ್ತಿರುವುದನ್ನು ಕಾಣಬಹುದಾಗಿದೆ. ಕೇವಲ ಲಿಖಿತವಾಗಿರುವ ಆಧಾರಗಳಿಂದ ರಚಿತ ಗಿರುವ ಏಕಮುಖದ ಇತಿಹಾಸಕ್ಕಿಂತ ಮೌಖಿಕವಾಗಿರುವ, ಜನಪದಗಳಲ್ಲಿ ವ್ಯಕ್ತವಾಗಿರುವ ಧಾರಗಳಿಂದ ಇತಿಹಾಸ ರಚಿತವಾಗುತ್ತಿರುವುದು; ಒಂದೇ ಬಲಪಂಥೀಯ ದೃಷ್ಟಿಕೋನದಿಂದ ಹಿತ್ಯ ಹಾಗೂ ಸಾಹಿತ್ಯ ಚರಿತ್ರೆಯನ್ನು ಗ್ರಹಿಸುವ ಕ್ರಮ; ಹಾಗೆಯೇ ಚರಿತ್ರೆಯಲ್ಲಿ ಪ್ರಧಾನ ಥವಾ ಯಾಜಮಾನ್ಯ ರಾಜಕಾರಣದ ಸಂಸ್ಕೃತಿಯಲ್ಲಿ ಕರಗಿಹೋಗಿರುವ ಅಸಂಖ್ಯಾತ ಸಾಹಿತ್ಯ, ಂಸ್ಕೃತಿಕ ಹಾಗೂ ರಾಜಕೀಯ ವ್ಯಕ್ತಿಗಳ ಬಗ್ಗೆ ಹೊಸ ಚರಿತ್ರೆಯನ್ನು ಕಟ್ಟುವುದರ ಮೂಲಕ ಯಾ ಸಮುದಾಯಗಳನ್ನು ಎಚ್ಚರಗೊಳಿಸುವುದು. ಹಾಗಾಗಿ ಕನ್ನಡ ಸಾಹಿತ್ಯದ ಸಂಶೋಧನೆ ಗೂ ವಿಮರ್ಶೆಯಲ್ಲಿ ಅಂತರಶಿಸ್ತೀಯ, ಬಹುಶಿಸ್ತೀಯ, ಬಹುಸಂಸ್ಕೃತಿಯ, ತೌಲನಿಕವಾದ, ಶ್ಲೇಷಣಾತ್ಮಕವಾದ, ಸಂಶೋಧನೆ, ವಿಮರ್ಶೆಗಳು ಬರುತ್ತಿವೆ. ಈಗಾಗಲೇ ಆಗಿಹೋಗಿರುವ ಕ್ತಿ, ವಿಚಾರ, ಸಾಹಿತ್ಯ ಇತ್ಯಾದಿಗಳ ಬಗ್ಗೆ ಸರಳೀಕರಿಸಿ ಇಲ್ಲವೆ ನಿರ್ಲಕ್ಷ್ಯದ ದೃಷ್ಟಿ ಇಟ್ಟುಕೊಂಡು ರೆದಿರುವುದನ್ನು ವರ್ತಮಾನದ ಸಂದರ್ಭದಲ್ಲಿ ವಿವರವಾಗಿ ಮುಖಾಮುಖಿಯಾಗಿಸುವುದು. ಆ ಮೂಲಕ ಹೊಸ ಚರಿತ್ರೆಯನ್ನು ಮತ್ತು ಮಸುಕಾಗಿದ್ದ ಮತ್ತೊಂದು ಸಂಸ್ಕೃತಿಯನ್ನು ಕಟ್ಟಿಕೊಡುವುದು ಂಥ ಅಧ್ಯಯನಗಳ ಉದ್ದೇಶವಾಗಿರುತ್ತದೆ. ಇಂಥ ಒಂದು ವಿಶೇಷವಾದ ಇತ್ತೀಚಿನ ಅಧ್ಯಯನ : ಡಾ|| ಶಿವಾನಂದ ಕೆಳಗಿನಮನಿಯವರ 'ಮಾದಾರ ಚನ್ನಯ್ಯ : ಬಹುಮುಖಿ ಅಧ್ಯಯನ'ವಾಗಿದೆ. ವಿಜಿ ಪಬ್ಲಿಕೇಷನ್ಸ್, ಬೆಂಗಳೂರು - ೨೦೦೬). **ಇದು ೨೦೦೬-೦೭ನೇ ಸಾಲಿನ ಸಂಶೋಧನೆಯ ಭಾಗದಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಪಾತ್ರವಾಗಿದೆ.**

ಗೋಪಾಲಕೃಷ್ಣ ಅಡಿಗರ ನವ್ಯಕಾವ್ಯ ಒಂದು ಅಧ್ಯಯನ, ವಿಗಡ ಚರಿತೆಯ ಬೆಡಗು, ಸಾಹಿತ್ಯ ಂಸ್ಕೃತಿ ಮುಖಾಮುಖಿ, ಸುವರ್ಣ ನಗರಿ ಸುಣಕಲ್ಲಬಿದರಿ ಇತ್ಯಾದಿ ಕೃತಿಗಳಿಂದ ಗಮನ ಸೆಳೆದಿರುವ ಡಾ|| ಶಿವಾನಂದ ಕೆಳಗಿನಮನಿಯವರು ತರುಣ ವಿದ್ವಾಂಸರಲ್ಲಿ ಒಬ್ಬರಾಗಿದ್ದಾರೆ. ಸಾಹಿತ್ಯ, ಸಂಸ್ಕೃತಿಯ ಗೆಗಿನ ಅಧ್ಯಯನ, ಸಂಶೋಧನೆ, ವಿಮರ್ಶೆಯನ್ನು ಗಂಭೀರವಾಗಿ ತೆಗೆದುಕೊಂಡಿರುವವರು.

ಹನ್ನೆರಡನೇ ಶತಮಾನ ಶರಣ ಚಳುವಳಿ ಹಾಗೂ ವಚನಗಳ ದೃಷ್ಟಿಯಿಂದ ತುಂಬಾ ಮಹತ್ವದ ನ ಪಡೆದಿದೆ. ಬಹುಶಃ ಜಗತ್ತಿನಲ್ಲಿಯೇ ವಿರಳವೆನ್ನಬಹುದಾದ ಶರಣರ ಸಾಮಾಜಿಕ - ರ್ಮಿಕ ಚಳುವಳಿ ಮತ್ತದರ ಫಲಶ್ರುತಿಯಾದ ವಚನ ಸಾಹಿತ್ಯ ಭಾರತೀಯ ಸಾಹಿತ್ಯದಲ್ಲಿಯೇ ರಳವೆನ್ನಬಹುದಾಗಿದೆ. ಅಲ್ಲಮ, ಬಸವಣ್ಣ, ಅಕ್ಕ, ಸಿದ್ಧರಾಮ, ಮಾದಾರ ಚನ್ನಯ್ಯ, ಹಡಪದ ಪ್ಪಣ್ಣ, ಮಡಿವಾಳ ಮಾಚಯ್ಯ ಮುಂತಾದ ನೂರಾರು ಶರಣರಿಂದ ಸಾಮೂಹಿಕ ಕ್ರಾಂತಿಯ

ಮಾದಾರ ಚನ್ನಯ್ಯನನ್ನು ಕುರಿತು ಗಂಭೀರವಾದ, ಬಹುಮುಖಿ ಅಧ್ಯಯನ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಇದೇ ಮೊದಲು ಎನ್ನಬಹುದು. ಕುಲಕ್ಕೆ ತಿಲಕ ಮಾದಾರ ಚನ್ನಯ್ಯ (ಚಂದ್ರಶೇಖರ ವಸ್ತ್ರದ) ಎಂಬೊಂದು ಜೀವನ ಕಥನವನ್ನು ಬಿಟ್ಟರೆ ಉಳಿದವುಗಳೆಲ್ಲ ಚನ್ನಯ್ಯನನ್ನು ಕುರಿತು ಆಂಶಿಕ ಅಧ್ಯಯನ, ವಿಮರ್ಶೆಗಳಾಗಿವೆ. ಶಾಸನಗಳಲ್ಲಿ ಶಿವಶರಣರು (ಡಾ|| ಎಂ. ಎಂ. ಕಲಬುರ್ಗಿ), ದಲಿತವರ್ಗದ ಶಿವಶರಣರು ಒಂದು ಅಧ್ಯಯನ (ಮ.ನ. ಜವರಯ್ಯ), ಬಸವಪೂರ್ವ ಯುಗದ ಶಿವಶರಣರು, ವಚನಕಾರ ಮಾದಾರ ಚನ್ನಯ್ಯ (ಶಾಂತರಸ), ಅಯ್ಯಗಳಯ್ಯನು ನಮ್ಮ ಮಾದರ ಚನ್ನಯ್ಯ (ಡಾ|| ಸಿ. ಕೆ. ನಾವಲಗಿ), ಮಾದಾರ ಚನ್ನಯ್ಯ ಒಬ್ಬನೇ ಇಬ್ಬರೇ (ಡಾ|| ಎಸ್. ವಿದ್ಯಾಶಂಕರ), ಹರಿಹರ ಚಿತ್ರಿಸಿದ ದಲಿತ ಶರಣರು (ಪ್ರೊ|| ಎಸ್. ಎಸ್. ಹಿರೇಮಠ) ಇತ್ಯಾದಿಗಳು. ಆದರೆ ಇಲ್ಲಿನ ಕೆಲವು ಲೇಖನಗಳು ಚನ್ನಯ್ಯ ಬಸವಣ್ಣನ ಸಮಕಾಲೀನ ಎಂದು ಚಿತ್ರಿಸುತ್ತವಲ್ಲದೆ ಬಸವಣ್ಣನಿಂದಲೇ ಮಾದಾರ ಚನ್ನಯ್ಯ ಪ್ರೇರಣೆ ಪಡೆದ ಎಂದೂ ತಿಳಿಸುತ್ತವೆ.

# ಮಾದಾರ ಚನ್ನಯ್ಯ: ಬಹುಮುಖಿ ಅಧ್ಯಯನ – ಒಂದು ಅವಲೋಕನ

**ಡಾ|| ಬಿ. ಜಿ. ಚನ್ನೇಶ್ ಹೊನ್ನಾಳಿ**

ರೀತಿಯಲ್ಲಿ ಪ್ರಜ್ವಲಿಸಿದ ವೀರಶೈವ ಧರ್ಮ ಇಂದು ಕೇವಲ ಒಂದು 'ಜಾತಿ'ಯ ಮಟ್ಟದಲ್ಲಿರುವುದು ಗೂ ಕೇವಲ ಮೇಲ್ವರ್ಗದ ಶರಣರನ್ನೇ ಪ್ರಧಾನ ನೆಲೆಯಲ್ಲಿಟ್ಟು ಅಧ್ಯಯನಗಳಾಗುತ್ತಿರುವುದು ೋಚನೀಯವೆನಿಸಿದೆ. ದಲಿತರನ್ನು ಹಾಗೂ ಅವರ ಬದುಕು ಸಾಧನೆಗಳನ್ನು ನಿರ್ಲಕ್ಷಿಸುತ್ತ ಬರುತ್ತಿ ವುದು ಕೇವಲ ಶರಣರಿಗಷ್ಟೇ ಅಲ್ಲ, ಭಾರತೀಯ ಸಂದರ್ಭದಲ್ಲೂ ಈ ರೀತಿಯಾಗುತ್ತಿದೆ. ಬಸವಣ್ಣ, ಕ್ಕ, ಸಿದ್ಧರಾಮರ ಅಶ್ವತ್ಥ ನೆರಳಲ್ಲಿ ಮಾದಾರ ಚನ್ನಯ್ಯ, ಮಡಿವಾಳ ಮಾಚಯ್ಯ, ಹರಳಯ್ಯ, ಡೋಹಾರ ಕ್ಕಯ್ಯರಂಥ ದಲಿತರ ಚರಿತ್ರೆಗಳು ಕರಗಿಹೋಗಿವೆ. ಇದು ಶರಣರಿಗಷ್ಟೇ ಅಲ್ಲ; ಈಗಾಗಲೇ ಹೇಳಿದಂತೆ ಲ್ಲಾ ರಂಗಗಳಲ್ಲೂ ದಲಿತರ ಚರಿತ್ರೆಗಳು ಸ್ಪಷ್ಟವಾಗಿ ಮೂಡಿಯೇ ಇಲ್ಲ. ಮಾದಾರ ಚನ್ನಯ್ಯ, ಡೇಕಲ್ಲ ಬಸವಣ್ಣ, ಮಲೆಮಾದೇಶ್ವರ, ಮಂಟೇಸ್ವಾಮಿ, ಕನಕದಾಸ, ಅಂಬೇಡ್ಕರ್, ಬಾಬು ಗಜೀವನರಾಮ್ ಇಂಥ ನೂರಾರು ನಾಯಕರು, ನಿರ್ಲಕ್ಷ್ಯಕ್ಕೊಳಗಾದವರು ನಮಗೆ ಸಿಗುತ್ತಾರೆ.

ಇದಕ್ಕೆ ಎರಡು ಕಾರಣಗಳನ್ನು ನಾವು ಕಂಡುಕೊಳ್ಳಬಹುದಾಗಿದೆ. ಒಂದು : ಇದುವರೆಗಿನ ಈ ರಹದ ಇತಿಹಾಸ, ಚರಿತ್ರೆ, ಸಂಸ್ಕೃತಿಯ ಕಥನಗಳನ್ನು ಬರೆದವರೆಲ್ಲಾ ಚ್ಚಾಗಿ ಅಕ್ಷರಗಳನ್ನು ಹಿಡಿದಿಟ್ಟುಕೊಂಡ ಮೇಲ್ವರ್ಗದವರು. ಎರಡು : ಯಾವ ಸಮಾಜ ಸಮುದಾಯಗಳಲ್ಲಿ ಬಹುಸಂಖ್ಯಾತರಿರುತ್ತಾರೋ ಅವರ ಒಲವು ನಿಲುವುಗಳೇ ಒಪ್ಪಿತ ಅಭಿಪ್ರಾಯಗಳಂತೆ ಆಗುತ್ತಿರು ವುದರಿಂದ ಸಾಮಾನ್ಯವಾಗಿ ಆ ವರ್ಗದವರೇ ವಿಜೃಂಭಿಸಿ ಉಳಿದವರು ನಿರ್ಲಕ್ಷ್ಯಕ್ಕೊಳಗಾಗುವುದು. ಇದಕ್ಕೆ ಪರಿಹಾರಗಳೆಂದರೆ, ಒಂದು : ನಿರ್ಲಕ್ಷಿತ ವರ್ಗದ ದಲಿತರೇ ಅಕ್ಷರಗಳ ವಾರಸುದಾರರಾಗಿ ತಮ್ಮವರ ಚರಿತ್ರೆಯ ಸಂಸ್ಕೃತಿಯನ್ನು ತಾವೇ ಕಟ್ಟಿಕೊಳ್ಳುವುದು. ಇನ್ನೊಂದು : ಬದಲಾಗುತ್ತಿರುವ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಸಂದರ್ಭದಲ್ಲಿ ನಿರ್ಲಕ್ಷ್ಯಕ್ಕೊಳಗಾದವರು ಪ್ರಧಾನ ನೆಲೆಗಳಿಗೆ ಬರುತ್ತಿರುವುದು. 'ಮಾದಾರ ಚನ್ನಯ್ಯ : ಬಹುಮುಖಿ ಅಧ್ಯಯನ' ದಲಿತವರ್ಗದವರನ್ನು ಕುರಿತು ದಲಿತರೇ ಬರೆದ ಒಂದು ಬಹುಮುಖಿ ಅಧ್ಯಯನದ ಕಥನವಾಗಿರುವುದರಿಂದ ದಲಿತ ಚರಿತ್ರೆಗೆ ಮತ್ತೊಂದು ಕೃತಿ ಸೇರ್ಪಡೆಯಾದಂತಿದೆ. ಅಲ್ಲದೆ ಎಸ್. ಎಸ್. ಹಿರೇಮಠರು ಮುನ್ನುಡಿ ಯಲ್ಲಿ ಹೇಳುವಂತೆ, "ದಲಿತವಾದಿ

ಕಣ್ಣೋಟದಿಂದ ನೋಡಿದಾಗ ಮಾತ್ರ ದಲಿತರ ಬಗೆಗಿನ ಸತ್ಯಗಳು ಹೊರಬರುತ್ತವೆ'' ಎಂಬ ಮಾತು ಅಕ್ಷರಶಃ ಸತ್ಯವಾಗಿದೆ.

ಮಾದಾರ ಚನ್ನಯ್ಯನನ್ನು ಕುರಿತು ಈ ರೀತಿಯ ಗಂಭೀರವಾದ, ಬಹುಮುಖಿ ಅಧ್ಯಯನ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಇದೇ ಮೊದಲು ಎನ್ನಬಹುದು. ಕುಲಕ್ಕೆ ತಿಲಕ ಮಾದಾರ ಚನ್ನಯ್ಯ (ಚಂದ್ರಶೇಖರ ವಸ್ತ್ರದ) ಎಂಬೊಂದು ಜೀವನ ಕಥನವನ್ನು ಬಿಟ್ಟರೆ ಉಳಿದವುಗಳೆಲ್ಲ ಚನ್ನಯ್ಯನನ್ನು ಕುರಿತು ಆಂಶಿಕ ಅಧ್ಯಯನ, ವಿಮರ್ಶೆಗಳಾಗಿವೆ. ಶಾಸನಗಳಲ್ಲಿ ಶಿವಶರಣರು (ಡಾ|| ಎಂ. ಎಂ. ಕಲಬುರ್ಗಿ), ದಲಿತ ವರ್ಗದ ಶಿವಶರಣರು : ಒಂದು ಅಧ್ಯಯನ (ಮ. ನ. ಜವರಯ್ಯ), ಬಸವಪೂರ್ವ ಯುಗದ ಶಿವಶರಣರು : ವಚನಕಾರ ಮಾದಾರ ಚನ್ನಯ್ಯ (ಶಾಂತರಸ), ಅಯ್ಯಗಳಯ್ಯನು ನಮ್ಮ ಮಾದರ ಚನ್ನಯ್ಯ (ಡಾ|| ಸಿ. ಕೆ. ನಾವಲಗಿ), ಮಾದಾರ ಚನ್ನಯ್ಯ ಒಬ್ಬನೇ ಇಬ್ಬರೇ (ಡಾ|| ಎಸ್. ವಿದ್ಯಾಶಂಕರ), ಹರಿಹರ ಚಿತ್ರಿಸಿದ ದಲಿತ ಶರಣರು (ಪ್ರೊ|| ಎಸ್. ಎಸ್. ಹಿರೇಮಠ) ಇತ್ಯಾದಿ ಗಳು. ಆದರೆ ಇಲ್ಲಿನ ಕೆಲವು ಲೇಖನಗಳು ಚನ್ನಯ್ಯ ಬಸವಣ್ಣನ ಸಮಕಾಲೀನ ಎಂದು ಚಿತ್ರಿಸುತ್ತವಲ್ಲದೆ ಬಸವಣ್ಣನಿಂದಲೇ ಮಾದಾರ ಚನ್ನಯ್ಯ ಪ್ರೇರಣೆ ಪಡೆದ ಎಂದೂ ತಿಳಿಸುತ್ತವೆ. ಇಂಥ ಅಭಿಪ್ರಾಯಗಳನ್ನು ತಿರಸ್ಕರಿಸುತ್ತಾ ಚನ್ನಯ್ಯನ ಬಗ್ಗೆ ಸಂಪೂರ್ಣ ಮಾಹಿತಿ ನೀಡಿ, ವಿಮರ್ಶಾತ್ಮಕವಾಗಿ ಅಧ್ಯಯನ ನಡೆಸಿರುವ ಶಿವಾನಂದ ಕೆಳಗಿನಮನಿ ಅವರ ಈ ಕೃತಿ ಮುಂದಿನ ಬರವಣಿಗೆಗಳಿಗೆ ಆಕರವಾಗಿದೆ.

ಮಾದಾರ ಚನ್ನಯ್ಯನ ಕುಲ ಮತ್ತು ಪ್ರಾಚೀನತೆ, ಶರಣರು ಹಾಗೂ ಹರಿಹರ ಕಂಡ ಚನ್ನಯ್ಯ, ಶೂನ್ಯ ಸಂಪಾದನೆಯಲ್ಲಿ ನೆಲೆ ಕಾಣದ ಜಾನಪದರು, ವಿದ್ವಾಂಸರು ಕಂಡ ಚನ್ನಯ್ಯ, ಆಧುನಿಕ ಲೋಕ ದೊಳಗಿನ ಆದಿ ಕಲ್ಯಾಣದ ಬೆಳಕು ಇತ್ಯಾದಿ ಹತ್ತು ಅಧ್ಯಾಯಗಳನ್ನು ಮಾಡಿಕೊಂಡು ಅಭ್ಯಸಿಸಿದ್ದಾರೆ. ಅನುಬಂಧದಲ್ಲಿ ಅವನ ವಚನಗಳು ಹಾಗೂ ಹರಿಹರನ ಚನ್ನಯ್ಯನ ರಗಳೆಯನ್ನು ನೀಡಿದ್ದಾರೆ. ಮೊದಲ ಮೂರು ಅಧ್ಯಾಯಗಳಲ್ಲಿ ಅವನ ಕುಲ, ಪ್ರಾಚೀನತೆ, ಕಾಲ, ಪರಿಸರ, ಜೀವನ ವ್ಯಕ್ತಿತ್ವಗಳ ಬಗ್ಗೆ ವಿವರವಾಗಿಯೇ ದಾಖಲೆಗಳ ಸಮೇತ ವಿಷಯ ಮಂಡಿಸಿರುವ ಲೇಖಕರು ಮುಂದಿನ ಅಧ್ಯಾಯಗಳಲ್ಲಿ ವಿಮರ್ಶಾತ್ಮಕವಾಗಿಯೇ ಬರೆದಿದ್ದಾರೆ. ಶೂನ್ಯ ಸಂಪಾದನೆಯಲ್ಲಿ ನೆಲೆ ಕಾಣದ ಮಾದಾರ ಚನ್ನಯ್ಯ ಹಾಗೂ ವಿದ್ವಾಂಸರು ಕಂಡ ಚನ್ನಯ್ಯ ಎಂಬ ಅಧ್ಯಾಯಗಳು ಬಹುಚರ್ಚಿತವಾಗಿವೆ. ಕೊನೆಯ ಆಧುನಿಕ ಲೋಕದೊಳಗಿನ ಆದಿಕಲ್ಯಾಣದ ಬೆಳಕು ಅಧ್ಯಾಯವು ಚನ್ನಯ್ಯನಂತೆ ನಿರ್ಲಕ್ಷ್ಯ ಕ್ಕೊಳಗಾದ ಕೊಡೇಕಲ್ಲ ಬಸವಣ್ಣ, ಮಲೆಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ಕನಕದಾಸ ಮೊದಲಾದವರು ಸಮುದಾಯಗಳ – ಕುಲಗಳ ಸಾಂಸ್ಕೃತಿಕ ನಾಯಕರಾಗಿ ಮಿಂಚಿದ್ದನ್ನು ವಿವರಿಸುತ್ತವೆ.

ಮಾದಾರ ಚನ್ನಯ್ಯನಿಗೆ ನಿಜವಾಗಿಯೂ ಸಾಹಿತ್ಯ ಚರಿತ್ರೆಯಲ್ಲಿ ತುಂಬಾ ಅನ್ಯಾಯವಾಗಿದೆ. ಬಸವಣ್ಣ, ಅಲ್ಲಮ, ಅಕ್ಕ, ಸಿದ್ಧರಾಮರ ಪ್ರಭಾವಳಿಯಲ್ಲಿ ಚನ್ನಯ್ಯನ ಹೆಸರು ಮಸುಕಾಗಿದೆ. ಈಗಲೂ ಸಹ ಎಲ್ಲವೂ ಬಸವಣ್ಣನಿಂದಲೇ ನಡೆಯಿತೆಂಬ ಕುರುಡು ಅಭಿಪ್ರಾಯವಿದೆ. ಚನ್ನಯ್ಯನಂಥ ಮಾದಿಗರಿಗೆ ಶರಣರು ಸಮಾನತೆಯನ್ನು ತಂದುಕೊಟ್ಟರು ಎಂಬೊಂದು ಉಲ್ಲೇಖವನ್ನು ಬಿಟ್ಟರೆ ವಾಸ್ತವವಾಗಿ ಚರಿತ್ರೆಯಲ್ಲಿ ಇಂಥ ಶರಣರಿಗೆ ಸ್ಥಾನ ಸಿಕ್ಕಿರುವುದಿಲ್ಲ. ಕಾವ್ಯ, ಪುರಾಣಗಳು ಚನ್ನಯ್ಯನಿಗೆ ಸ್ಥಾನ ನೀಡಿಲ್ಲವಷ್ಟೇ ಅಲ್ಲ, ಶಿವಗಣ ಪ್ರಸಾದಿ ಹಾಗೂ ಹಲಗೆ ಮಾರಯ್ಯನಂಥ ಶೂನ್ಯ ಸಂಪಾದನೆಕಾರರ ಶೂನ್ಯ ಸಂಪಾದನೆಯಲ್ಲಿ ಚನ್ನಯ್ಯನ ಪ್ರಸ್ತಾಪ ಬಂದಿರುವುದಿಲ್ಲ. ಇವೆಲ್ಲ ಉದ್ದೇಶಪೂರ್ವಕವಾಗಿ ನಡೆದಿರಲೂಬಹುದು. ಮೇಲ್ಜಾತಿಯ ಶರಣರೆಲ್ಲ ಕೆಳಜಾತಿಯ ಶರಣರನ್ನು ಉದ್ಧಾರ ಮಾಡಿದರೆಂಬಂತೆ ಇಲ್ಲೆಲ್ಲ ಚಿತ್ರಿಸಲಾಗಿದೆ. ಹರಿಹರ ಒಬ್ಬನನ್ನು ಬಿಟ್ಟರೆ ಭೀಮಕವಿ, ರಾಘವಾಂಕ, ಚಾಮರಸ, ಷಡಕ್ಷರ, ವಿರೂಪಾಕ್ಷ ಪಂಡಿತ ಮತ್ತಿತರ ವೀರಶೈವ ಕವಿಗಳಾರೂ ದಲಿತ ವರ್ಗದ ವಚನಕಾರರನ್ನು ತಮ್ಮ ಕಾವ್ಯದ ನಾಯಕರನ್ನಾಗಿ ಮಾಡಿಕೊಂಡಿರುವುದಿಲ್ಲ. ಚನ್ನಯ್ಯನ ವಚನಗಳು ಬೇರೊಬ್ಬರ ಹೆಸರಿನಲ್ಲಿ ಅಚ್ಚಾಗಿರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಇಂಥ ಅನೇಕ ಅಂಶಗಳ ಬಗ್ಗೆ ಲೇಖಕರು ತಮ್ಮ ಕೃತಿಯಲ್ಲಿ ಹೊಸ ಬೆಳಕು ಚೆಲ್ಲುತ್ತಾ ಹೋಗಿದ್ದಾರೆ.

ಲೇಖಕರು ತಮ್ಮ ಸಂಶೋಧನೆಯ ಅಧ್ಯಯನದಲ್ಲಿ ಕಂಡುಕೊಂಡ ಕೆಲವು ಹೊಳಹುಗಳನ್ನು ಈ ರೀತಿ ಪಟ್ಟಿ ಮಾಡಬಹುದಾಗಿದೆ : ''ಮೂಲತಃ ಶಾಕ್ತರು, ಯೋನಿಪೂಜಕರಾಗಿರುವ ಮಾದಿಗರು ಈ ನೆಲದ ಮೊದಲ ಕೃಷಿಕರು. ಮಾದಿಗರ ಕುಲಸ್ಥಾಪಕನಾದ ಚನ್ನಯ್ಯ ವೀರಶೈವ ಮತಸ್ಥಾಪಕರಲ್ಲಿ ಒಬ್ಬನಾಗಿದ್ದಾನೆ. ಜೇಡರ ದಾಸಿಮಯ್ಯನಿಗಿಂತ ಹಿಂದಿನವನಾದ ಚನ್ನಯ್ಯ ಆದ್ಯವಚನಕಾರ ಹಾಗೂ ಶ್ರೇಷ್ಠನಾದ ಐತಿಹಾಸಿಕ ವ್ಯಕ್ತಿ. ಇವನ ಬಗ್ಗೆ ವೀರಶೈವ ಮತದ ಬಹುತೇಕ ಕೃತಿಗಳಲ್ಲಿ ತಿಳಿಸುವ ವಿವರ-ಮಾಹಿತಿಗಳು ಸ್ಪಷ್ಟವಾಗಿಲ್ಲ ಹಾಗೂ ಅಪ್ರಜ್ಞೆಯಿಂದ ಕೂಡಿವೆ. ಚನ್ನಯ್ಯರು ಇಬ್ಬರಲ್ಲ ಒಬ್ಬನೇ. ಮಾದಾರ ಚನ್ನಯ್ಯ, ಕೊಂಡಗುಳಿ ಕೇಶಿರಾಜ, ಜೇಡರ ದಾಸಿಮಯ್ಯ, ತೆಲುಗು ಬೊಮ್ಮಣ್ಣ, ಶಂಕರ ದಾಸಿಮಯ್ಯ ಇವರೆಲ್ಲ ಬಸವಣ್ಣ ಹಾಗೂ ಇತರರಿಗಿಂತ ಮೊದಲೇ ವಚನ ಚಳುವಳಿಯ ಆಂದೋಲನಕಾರರಾಗಿ ಪ್ರಸಿದ್ಧರಾಗಿದ್ದರು. ಹನ್ನೆರಡನೇ ಶತಮಾನದ ಸಾಮಾಜಿಕಾಂದೋಲನ ನಡೆದದ್ದೆ ಚನ್ನಯ್ಯ ಮತ್ತಿತರ ಇಂಥ ಕಾಯಕ ಜೀವಿಗಳ ಚಳುವಳಿಯಿಂದ. ಅವನ ವಚನಗಳು ಸಹ ಸಾಮಾಜಿಕ ನೆಲೆಯಲ್ಲಿ ವರ್ಣಾಶ್ರಮ ಪದ್ಧತಿ ಹಾಗೂ ಜಾತಿ ವ್ಯವಸ್ಥೆಯನ್ನು ಬಲವಾಗಿ ಅಲ್ಲಗಳೆಯುತ್ತವೆ. ಈತ ಹತ್ತಕ್ಕಿಂತ ಹೆಚ್ಚು ಬೆಡಗಿನ ವಚನಗಳನ್ನು ಬರೆದಿರುವ ಸಾಧ್ಯತೆಯಿದೆ. ಚನ್ನಯ್ಯ, ಮಂಟೇಸ್ವಾಮಿ, ಮಲೆಮಾದೇಶ್ವರ, ಮೈಲಾರಲಿಂಗ, ಅಲ್ಲಮಪ್ರಭು, ಕುಮಾರರಾಮ, ಕನಕದಾಸ ಮೊದಲಾದ ಕೆಳ ಸಮುದಾಯ ಹಾಗೂ ಅಸ್ಪೃಶ್ಯ ನೆಲೆಯಿಂದ ಬಂದವರು ಪ್ರಭುಸತ್ತೆ ಮತ್ತು ಪುರೋಹಿತ ಸತ್ತೆಯ ಜೊತೆ ಸಂಘರ್ಷ ಮಾಡಿ ಸಾಂಸ್ಕೃತಿಕ ನಾಯಕರಾದರು.'' ಲೇಖಕರ ಈ ನಿಲುವುಗಳು ಹೇಗೆ ಇದ್ದರೂ ಒಂದು ಆರೋಗ್ಯಪೂರ್ಣ ಚರ್ಚೆಗೆ ದಾರಿ ಮಾಡಿಕೊಟ್ಟಿರುವುದಂತೂ ಸತ್ಯ.

ಹೀಗೆ ಚನ್ನಯ್ಯನಿಗೆ ಇತಿಹಾಸ, ಸಾಹಿತ್ಯ, ಚರಿತ್ರೆಗಳಲ್ಲಿ ಆದ ಅನ್ಯಾಯವನ್ನು ಸಂಪೂರ್ಣವಾಗಿ ತೊಳೆದಿದ್ದಾರೆ. ಲೇಖಕರು, ಬಹುಶಃ ಇದುವರೆಗೆ ಚನ್ನಯ್ಯನ ಬಗ್ಗೆ ಬಂದಿರುವ ಅಧ್ಯಯನಗಳಲ್ಲೇ ಹೊಸ ನೋಟಗಳಿಂದ ಕೂಡಿರುವ ಈ ಕೃತಿ ಕನ್ನಡ ಸಾಹಿತ್ಯಲೋಕ ಹೆಮ್ಮೆಪಡುವಂತಾಗಿದೆ. ಬಸವಣ್ಣನಿಗಿಂತ ನೂರು ವರ್ಷ ಹಿಂದಿನವನಾಗಿ, ಅವನಿಗೇ ಪ್ರೇರಣೆಯಾಗಿ, ಪ್ರಗತಿಪರವಾದ ಸಾಮಾಜಿಕ-ಧಾರ್ಮಿಕ ಚಳುವಳಿಯನ್ನು ಕಟ್ಟಿಕೊಟ್ಟ ಮಾದಾರ ಚನ್ನಯ್ಯ ವಚನ ಚಳುವಳಿ ಹಾಗೂ ಸಾಹಿತ್ಯ ಎರಡಕ್ಕೂ ಗೌರವ ತಂದುಕೊಟ್ಟವನಾಗಿದ್ದಾನೆ.

**ಡಾ|| ಬಿ. ಜಿ. ಚನ್ನೇಶ್ ಹೊನ್ನಾಳಿ**
ಕನ್ನಡ ವಿಭಾಗದ ಮುಖ್ಯಸ್ಥರು, ಸ.ಪ್ರ.ದ. ಕಾಲೇಜು, ಹಿರೇಕೆರೂರ - ೫೮೧ ೧೧೧, ಹಾವೇರಿ ಜಿಲ್ಲೆ

## ಸಂಪೂರ್ಣ ನಿಯಂತ್ರಣದಲ್ಲಿ

ಸಂಪೂರ್ಣ ನಿಯಂತ್ರಣದಲ್ಲಿ ನಿಯಂತ್ರಣವನ್ನು
ಸೋಗುಹಾಕುತ್ತಾ,
ಅಧಿಕಾರದ ಘನತೆಯಲ್ಲಿ ಬೀಗುವ ನಾವು
ಮೋಸಗಾರರು.
ಅಥವಾ ಬಹುಶಃ ಚಿತ್ರಗಾರನೊಬ್ಬನ ಕೈಯಲ್ಲಿ
ಆಡಿನ ಕೂದಲಿನ ಬ್ರಷ್ಷು
ನಾವೇನೆಂಬುದರ ಬಗ್ಗೆ ನಮ್ಮ ಬಳಿ ಅತ್ಯಂತ ಸಣ್ಣ
ಸುಳಿವು ಕೂಡ ಇಲ್ಲ

ಮೂಲ : ಜಲಾಲುದ್ದೀನ್ ರೂಮಿ
ಅನು : ಅಂಕುರ್ ಬೆಟಗೇರಿ
ನಂ. ೨೦೨, ಹರ್ಷ ಅಪಾರ್ಟ್‌ಮೆಂಟ್ಸ್, ಸ್ನೇಹ ಕಾಲೋನಿ, ಚಿಕ್ಕಲಸಂದ್ರ, ಬೆಂಗಳೂರು - ೬೧



# OUR ADVERTISERS

# OUR ADVERTISERS






**ನವಕರ್ನಾಟಕ ಪ್ರಕಾಶನದ ಹೊಸ ಪ್ರಕಟಣೆಗಳು**
**೨೦೦೮ ಮಾರ್ಚ್ ತಿಂಗಳಲ್ಲಿ ಲೋಕಾರ್ಪಣೆ**



ಲೇಖಕರು :
ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ



ಲೇಖಕರು :
ಶಾಂತಾರಾಮ ಸೋಮಯಾಜಿ



ಲೇಖಕರು :
ಕ್ಷೀರಸಾಗರ




ಲೇಖಕರು :
ಡಿ. ರಘುನಾಥರಾವ್




ಲೇಖಕರು :
ಡಾ|| ರಹಮತ್ ತರೀಕೆರೆ

# ಇದೀಗ ಪ್ರಕಟವಾಗಿದೆ

## ನವಕರ್ನಾಟಕದ ಅಪೂರ್ವ ಕೊಡುಗೆ




ಡೆಮಿ 1/4 ಆಕಾರದ 320 ಪುಟಗಳು



**ಪ್ರತಿಯೊಂದು ಮನೆ, ಶಾಲಾ – ಕಾಲೇಜು ಗ್ರಂಥಾಲಯದಲ್ಲಿ ಇರಲೇಬೇಕಾದ ಉಪಯುಕ್ತ ಕೃತಿ**

ಮುಖಬೆಲೆ ರೂ. 400
'ಹೊಸತು' ಪತ್ರಿಕೆಯ
ಮೂರು ವರ್ಷದ ಚಂದಾದಾರರಿಗೆ
ರೂ. 320 ಮಾತ್ರ
(ಅಂಚೆ ವೆಚ್ಚ ರೂ. 20 ಪ್ರತ್ಯೇಕ)

ಪ್ರಾರಂಭದಿಂದ ಇಲ್ಲಿಯವರೆಗೆ ಸಾಹಿತ್ಯ, ಶಾಂತಿ, ಭೌತ ವಿಜ್ಞಾನ, ರಸಾಯನ ವಿಜ್ಞಾನ, ವೈದ್ಯ ವಿಜ್ಞಾನ, ಮತ್ತು ಅರ್ಥಶಾಸ್ತ್ರ ಕ್ಷೇತ್ರಗಳಿಗಾಗಿ ಪ್ರಶಸ್ತಿ ಪಡೆದ 774 ಮಂದಿ ಗಣ್ಯರ ಚಿತ್ರಗಳ ಸಹಿತ ಅವರ ಬದುಕು ಸಾಧನೆಗಳ ಸಮಗ್ರ ಮಾಹಿತಿ ಕೋಶ

*ಅಂಚೆ ವೆಚ್ಚ ರೂ. 20 ಸೇರಿಸಿ ಒಟ್ಟು ರೂ. 340ರ ಡಿ.ಡಿ. ಅಥವಾ ಎಂ.ಒ. ಕೆಳಕಂಡ ವಿಳಾಸಕ್ಕೆ ಕಳಿಸಿ*



## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001. ಫ್ಯಾಕ್ಸ್: 30578023
ಫೋನ್ : 30578022, 22203580 e-mail : navakarnataka@dataone.in web : www.navakarnatakabooks.com

**ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 :: ಮೈಸೂರು ✆ 2424094 :: ಗುಲ್ಬರ್ಗಾ ✆ 224302**



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly /January 2008 Rs. 30
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.


"ಅಮ್ಮನೋ ಅಥವಾ
ಕಾಲೇಜು ಹುಡುಗಿಯೋ?"






ಹೊಸ ಸಂತೂರ್, ಅರಿಶಿಣ ಹಾಗೂ
ಚಂದನದ ಪೋಷಣೆಯುಕ್ತ.




ಹೊಸ ಸಂತೂರ್ ವೈಟ್, ಚಂದನ ಹಾಗೂ
ಬಾದಾಮಿ ಹಾಲಿನ ಮ್ಯಾಶ್ಚರೈಸಿಂಗ್ ಗುಣಯುಕ್ತ.

ಈಗ ಎಲ್ಲರೂ ಪಡೆಯಬಲ್ಲರು ನೋಡುವವರನ್ನು ಚಕಿತಗೊಳಿಸುವಂತಹ ತ್ವಚೆ. ಪ್ರಸ್ತುತವಿದೆ ಸಂತೂರ್, ಎರಡು ಆಕರ್ಷಕ ಹೊಸ ರೂಪಗಳಲ್ಲಿ. ನಿಮ್ಮ ತ್ವಚೆಯನ್ನು ವರ್ಷಾನುವರ್ಷ ತಾರುಣ್ಯಪೂರ್ಣವಾಗಿ ಇರಿಸುವ ರಹಸ್ಯವನ್ನು ಕಂಡುಕೊಳ್ಳಿ ಮತ್ತು ಎಲ್ಲರೂ ಉದ್ಗರಿಸಲಿ, ನಿಜವಾದ ಸ್ಟಾರ್ ಎಂದರೆ ಈ ಸಂತೂರ್ ಮಮ್ಮಿ.



ಸಂತೂರ್